ಸಂಪುಟ [illegible]  ಸಂಚಿಕೆ ೬

# ಶಿವಾನುಭವ



: ಸಂಪಾದಕರು :
ಫ. ಗು. ಹಳಕಟ್ಟಿ,
ಬಿ. ಎ. ಎಲ್ ಎಲ್. ಬಿ.

ವಾ. ವ. ೫-೧೨-೦] ವಿಜಾಪೂರ [ ಜೂನ ೧೯೫೫

# ವಿಷಯಾನುಕ್ರಮಣಿಕೆ





---

# ಶಿವಾನುಭವ

ಸಂಪುಟ ೨೯ | ಜೂನ ೧೯೫೫ | ಸಂಚಿಕೆ ೬.

## ಸ್ಫುಟವಿಷಯಗಳು

**ಸಂಸ್ಥೆಗಳ ಸ್ಥಾಪನೆ:-** ಸಂಸ್ಥೆಗಳ ನಿರ್ಮಾಣಕ್ಕೋಸ್ಕರ (೧) ಅವುಗಳ ನಿಶ್ಚಿತ ಉದ್ದೇಶ ಮತ್ತು (೨) ಅವುಗಳು ಮಾಡತಕ್ಕ ಕಾರ್ಯಗಳು ಇವುಗಳನ್ನು ನಿಶ್ಚಯಿಸಿಕೊಂಡು ಕಾರ್ಯಾರಂಭಮಾಡುವದು ಅವಶ್ಯವೆಂಬುದು ಸ್ಪಷ್ಟವೇ ಇದೆ. ಇಂಥ ಕಾರ್ಯಕ್ಕೋಸ್ಕರ ಕೆಲವು ಉತ್ಸಾಹೀ ಜನರು ಮೊದಲು ಒಂದು ಉದ್ದೇಶಪತ್ರಿಕೆಯನ್ನು ಹೊರಡಿಸುವದುಂಟು. ಮುಂದೆ ಅವರು ಕೆಲವು ಮಿತ್ರರನ್ನು ಕೂಡಿಕೊಂಡು ಕೆಲವೊಂದು ಸ್ಥಳದಲ್ಲಿ ಒಬ್ಬಾನೊಬ್ಬ ಮಹನೀಯರ ಮನಸ್ಸನ್ನು ಒಲಿಸಿ ಅವರ ಅಧ್ಯಕ್ಷತೆಯ ಕೆಳಗೆ ಒಂದು ಸಾರ್ವಜನಿಕ ಸಭೆಯನ್ನು ಕರೆಯುತ್ತಾರೆ. ಅಲ್ಲಿ ಅವರ ಭಾಷಣಗಳನ್ನು ಏರ್ಪಡಿಸಿ ಸಂಘದ ಸ್ಥಾಪನೆಯ ಬಗ್ಗೆ ಕೆಲವು ನಿರ್ಣಯಗಳನ್ನು ಮಾಡಿ ಸಂಘದ ಘಟನೆಗೋಸ್ಕರ ಒಂದು ಕಮೀಟಿಯನ್ನು ಸಹ ನೇಮಿಸುವದುಂಟು. ಈ ಕಮೀಟಿಯವರು ಕೆಲವು ನಿಯಮಾವಳಿಗಳನ್ನು ಮಾಡಿ ಅವುಗಳ ವಿಚಾರಕ್ಕೋಸ್ಕರ ಒಂದು ಸಾರ್ವಜನಿಕ ಸಭೆಯನ್ನು ಕರೆದು ಅವುಗಳನ್ನು ಅಂಗೀಕರಿಸುವದುಂಟು. ಹೀಗೆ ಎರಡು-ಮೂರು ಸಭೆಗಳಾಗುವಷ್ಟರಲ್ಲಿ ಮೊದಲನೆಯ ಸಭೆಗೆ ೫೦-೬೦ ಜನರು ಬಂದಿದ್ದರೆ, ಮುಂದಿನ ಸಭೆಗಳಲ್ಲಿ ಈ ಜನರು ಕರಗುತ್ತ ಕಡೆಯ ಸಭೆಗೆ ಐದಾರು ಜನರು ಮಾತ್ರ ಉಳಿಯುವರು. ಇಷ್ಟರಲ್ಲಿ ಕಾರ್ಯಾರಂಭ ಮಾಡಿದವರು ಕೆಲವೊಬ್ಬ ಪತ್ರಿಕಾಕಾರರ ಮನವೊಲಿಸಿ ಉದ್ದುದ್ದ ಲೇಖಗಳನ್ನು ಅವರ ಪತ್ರಿಕೆಯಲ್ಲಿ ಪ್ರಸಿದ್ಧಿಸುವದುಂಟು. ಇಲ್ಲಿಗೆ ಕಾರ್ಯಗಳು ಮುಗಿದು

ಹೋಗುವವು. ಈ ಪ್ರಕಾರ ವೀರಶೈವರಲ್ಲಿ ಸಾರ್ವಜನಿಕ ಕಾರ್ಯಗಳು ನಡೆಯುತ್ತಾ ಬಂದಿವೆ. ಇದರಿಂದ ಸಮಾಜದಲ್ಲಿ ಕಾರ್ಯಗಳಾವವೂ ದುಗ್ಗೋಚರವಾಗುವದಿಲ್ಲ.

ಮೊದಲು ಹುರುಪಿನಿಂದ ಕಾರ್ಯಾರಂಭಮಾಡಿದವರು ಈ ಸ್ಥಿತಿಯುಂಟಾಗಲು ಅವರು ಸಮಾಜದಲ್ಲಿ ಅಜ್ಞಾನವು ತುಂಬಿಹೋಗಿದೆ, ಅದಕ್ಕೆ ಏನೂ ತಿಳಿಯುವದಿಲ್ಲ, ಎಂದು ಅದನ್ನು ಹೀಯಾಳಿಸುತ್ತ ಕಾಲಕಳೆಯುವರು.

ಆದರೆ ಒಂದು ಸಂಸ್ಥೆಯನ್ನು ಕಟ್ಟುವ ಪದ್ಧತಿಯು ಇದಾಗಿರುವದಿಲ್ಲ. ಮಾತುಗಳಿಂದ ಯಾವ ಸಂಸ್ಥೆಯೂ ಉಂಟಾಗಲಾರದು. ಅದಕ್ಕೆ ಶ್ರಮವಹಿಸಿ ಸತತವಾಗಿ ದುಡಿಯಬೇಕು. ಜನರಲ್ಲಿಯ ಉದಾಸೀನತೆಯನ್ನು ತೊಲಗಿಸಲು ಕಷ್ಟಪಡಬೇಕು. ಕಾರ್ಯಾರಂಭವನ್ನು ಮಾಡುವವರು ತಮ್ಮ ಸ್ವಾರ್ಥತೆಯನ್ನು ಮೊದಲು ತೊಲಗಿಸಬೇಕು. ತಮ್ಮ ಹೆಸರನ್ನು ಸಹ ಮುಂದೆ ತರಕೂಡದು. ಅವರು ತಾವು ಕೈಕೊಂಡ ಕಾರ್ಯದ ಉಪಯುಕ್ತತೆಯನ್ನು ಜನರಿಗೆ ತಿಳಿಸಿ ಹೇಳಿ ಅವರು ಆರಂಭದಲ್ಲಿ ಕೊಟ್ಟ ಸಹಾಯದಲ್ಲಿಯೇ ತೃಪ್ತರಾಗಿ ಆದಷ್ಟು ಕಾರ್ಯ ಮಾಡುತ್ತಲೇ ಹೋಗಬೇಕು. ಹೇಗೆ ಹನಿಹನಿಯಾಗಿ ಬಿದ್ದ ನೀರು ವಿಶಾಲ ಕ್ಷೇತ್ರದಲ್ಲಿ ಮೊದಲು ಸಣ್ಣ ಧಾರೆಯಾಗಿ ಹರಿಯುತ್ತ ಹೋಗಿ ಮುಂದೆ ಅದು ಬರಬರುತ್ತ ಅನೇಕ ಸಣ್ಣ ದೊಡ್ಡ ಪ್ರವಾಹಗಳನ್ನು ಕೂಡಿಸಿಕೊಂಡು ಮಹಾನದಿಯಾಗಿ ಮುಂದೆ ತೋರುವಂತೆ ಸಂಸ್ಥೆಗಳ ಪ್ರಗತಿಯಾಗಿರುತ್ತದೆ. ಇದಕ್ಕೆ ಬೇಕಾಗುವ ಸಹನಶೀಲತೆ, ಸತತೋದ್ಯೋಗ, ಉತ್ಸಾಹ, ಉಚ್ಚಧ್ಯೇಯ ಇವು ಯಾರಲ್ಲಿಲ್ಲವೋ ಅವರು ಸಾರ್ವಜನಿಕ ಕಾರ್ಯಗಳನ್ನು ಕೈಕೊಂಡದ್ದಾದರೆ ಅವರಿಗೆ ಅಂತ್ಯದಲ್ಲಿ ಹಾನಿಯೇ ಹೊರ್ತು ಬೇರೊಂದಿಲ್ಲ.

ಕಾರ್ಯ ಮಾಡಬೇಕೆಂದು ಕೆಲ ಧನವಂತರು ಮುಂದಾಗಿ ಪ್ರಯತ್ನಿಸುತ್ತಿರುವದುಂಟು. ಅವರಿಂದಲೂ ಸಮಾಜ ಹಿತ ಕಾರ್ಯವಾಗಲಾರದು. ಅವರು ಧನವಂತರಾದ್ದರಿಂದ ಕೆಲವೊಂದು ಕಟ್ಟಡವನ್ನು ಜನರ ಕಣ್ಣಿಗೆ ಬೀಳುವಂತೆ ಕಟ್ಟಿ ಅದಕ್ಕೆ ಒಂದು ದೊಡ್ಡ ಹೆಸರಿಟ್ಟು ಅದರ ಅಡಿಗಲ್ಲಿನಲ್ಲಿ ತಮ್ಮ ಹೆಸರನ್ನು ಹಾಕಿಸಿಕೊಂಡು ತೃಪ್ತಿಪಡುವರು. ಇಲ್ಲಿಗೆ ಅವರ ಸಾರ್ವಜನಿಕ ಕಾರ್ಯವು ಮುಕ್ತಾಯವಾಗುವದು. ಸಿರಿವಂತ ಮಠಾಧಿಕಾರಿಗಳಿದ್ದರೆ ಅವರು ಅದರಲ್ಲಿ ಒಂದು ಗದ್ದಿಗೆಯನ್ನು ಮಾಡಿ ಜಾತ್ರೆ

ಯನ್ನು ಪ್ರಾರಂಭಿಸುವರು. ಈ ಪ್ರಕಾರ ವೀರಶೈವ ಸಮಾಜದಲ್ಲಿ ಸಾರ್ವ ಜನಿಕ ಕಾರ್ಯಗಳು ನಡೆಯುತ್ತ ಬಂದಿವೆ. ಇದರಿಂದ ಹೋದ ೫೦ ವರ್ಷ ಗಳಲ್ಲಿ ಅದರಲ್ಲಿ ಪ್ರಗತಿಯಾದದ್ದು ಎಷ್ಟು ಮಾತ್ರವೂ ಕಂಡುಬರುವದಿಲ್ಲ.

**ಶಿವಶರಣರ ಕಾಲಕ್ಕಿನ ಪರಿಸ್ಥಿತಿ:—** ಈಗ ನಾವು ಕಾಣುವ ಸಮಾಜದ ಪರಿಸ್ಥಿತಿಯು ಬಸವಣ್ಣ, ಚನ್ನಬಸವಣ್ಣನವರ ಆರಂಭಕಾಲ ದಲ್ಲಿಯೂ ಇದ್ದಿತೆಂದು ಕಂಡುಬರುತ್ತದೆ. ಅಂಥ ಕಾಲದಲ್ಲಿ ೭೭೦ ಅಮರ ಗಣಂಗಳು ಎಲ್ಲಕಡೆಗೂ ಉದಯವಾಗಿ ವಚನ ವಾಙ್ಮಯವನ್ನು ಪ್ರಸಾರ ಗೊಳಿಸಿದರು. ಇದರಿಂದ ಸಮಾಜದಲ್ಲಿ ಒಂದು ಅದ್ಭುತ ಕ್ರಾಂತಿಯುಂಟಾ ಯಿತು. ಚನ್ನಬಸವಣ್ಣನು ಇಂಥ ಸಮಾಜೋದ್ಧಾರಕರಲ್ಲಿ ಮೊದಲಿಗನವ ನಾಗಿದ್ದಾನೆ ಅವನು ತನ್ನ ಒಂದು ವಚನದಲ್ಲಿ ದೇಶದಲ್ಲಿ ಉಂಟಾಗಿದ್ದ ಹೀನ ಪರಿಸ್ಥಿತಿಯನ್ನು ವರ್ಣಿಸಿರುವದನ್ನು ನಾವು ಕೆಳಗೆ ಕೊಟ್ಟಿದ್ದೇವೆ. ಅದು ಹೇಗೆಂದರೆ:— " ಪುರಾತರ ವಚನಂಗಳೆಲ್ಲವ ಓದಿಯಾರು. ಓದಿಯೂ ನಂಬುಗೆ ಇಲ್ಲದಾದಾರು. ನೂರಕೊಬ್ಬರಲ್ಲದೆ ನಂಬರು. ನಮ್ಮ ಪುರಾತ ನರ ವಚನಂಗಳನೆಲ್ಲವ ಜರಿದಾರು. ತಮ್ಮ ಕವಿತ್ವಂಗಳ ಮೆರೆದಾರು. ನಮ್ಮ ಪುರಾತನರ ವಚನಂಗಳಿಂದೊದವಿದ ಜ್ಞಾನವೆಂಬುದನರಿಯರು. ನಮ್ಮ ಪುರಾತನರು ತಮ್ಮಂತೆಯಾಗಬೇಕೆಂದಿರಿಸಿದರೆಂಬುದನರಿಯರು. ತಾಯಿಂದ ಮಕ್ಕಳಾದರೆಂಬುದನರಿಯರು, ಊರೆಲ್ಲಕ್ಕೆ ಹುಟ್ಟಿದವರ ಹಾಗೆ ನುಡಿದಾರು. ನಮ್ಮ ಪುರಾತನರ ವಚನಂಗಳೇ ತಾಯಿತಂದೆ ಎಂಬುದನ ರಿಯರು. ನಮ್ಮ ಆದ್ಯರ ವಚನಂಗಳು ಗುರುಲಿಂಗ ಜಂಗಮವ ತೋರಿ ಸಿಹವು. ನಮ್ಮ ಆದ್ಯರ ವಚನಂಗಳು ಮದಮತ್ಸರ ಅರಿಷಡ್ವರ್ಗ ಸಪ್ತ ವ್ಯಸನ ಪಂಚೇಂದ್ರಿಯ ದಶವಾಯುಗಳಿಚ್ಛೆಗೆ ಹರಿವ ಮನವ ಸ್ವಸ್ಥವಾಗಿ ರಿಸಿದವು. ಇಂತಹ ನಮ್ಮ ಆದ್ಯರ ವಚನ ಭಾಂಡಾರವಂ ನಮ್ಮ ಪ್ರಭು ದೇವರು ಮುಖ್ಯವಾದೇಳುನೂರೆಪ್ಪತ್ತಮರಗಣಂಗಳು ಅಸಂಖ್ಯಾತ ಪುರಾತ ನರು ಪ್ರಮಥಗಣಂಗಳು ಕೇಳಿ ಹೇಳಿ ಕೊಂಡಾಡಿದ ಕಾರಣ ನಮ್ಮ ಕೂಡಲಚನ್ನಸಂಗಯ್ಯನಲ್ಲಿ ಸುಖವ ಸೂರೆಗೊಂಡರು, ಸ್ವಯಲಿಂಗವಾದರು." ಎಂದು ಚನ್ನಬಸವಣ್ಣನು ತನ್ನ ವಚನದಲ್ಲಿ ನುಡಿದಿದ್ದಾನೆ.

ಈ ಪ್ರಕಾರ ಬಸವ, ಚನ್ನಬಸವ, ಅಲ್ಲಮಪ್ರಭು ಮೊದಲಾದ ಮಹ ತ್ವಿಕರು ಸಮಾಜದಲ್ಲಿ ಒಂದುಕಾಲದಲ್ಲಿ ಜನಿಸಿ ಒಂದು ಅದ್ಭುತ ಕ್ರಾಂತಿ

ಯನ್ನು ಮಾಡಿದರು. ಇದರಿಂದ ಶಿವಶರಣರ ಉಕ್ತಿಗಳು ನಾಡಿನಲ್ಲೆಲ್ಲ ಪಸರಿಸಿದವು. ಅವುಗಳ ಮೂಲಕ ದೇಶದಲ್ಲಿ ಸುವಿಚಾರ, ಭಕ್ತಿಭಾವಗಳು ನೆಲೆಗೊಂಡವು. ಹಳ್ಳಿಪಳ್ಳಿಗಳಲ್ಲಿ ಸಣ್ಣವರಲ್ಲಿ ದೊಡ್ಡವರಲ್ಲಿ ಷಟ್‌ಸ್ಥಲ ವಿಚಾರಗಳು ಉಂಟಾದವು. ಬಸವ, ಚನ್ನಬಸವಣ್ಣನವರ ಆರಂಭಕಾಲದಲ್ಲಿ ಇದ್ದಂಥ ಪರಿಸ್ಥಿತಿಯು ಈಗಲೂ ಉಂಟಾಗಿದೆ. ಇದನ್ನು ಸರಿಪಡಿಸಬೇಕಾದರೆ ಶರಣರ ವಾಙ್ಮಯವನ್ನು ಮೊದಲಿನಂತೆ ಎಲ್ಲ ಕಡೆಗೂ ಪ್ರಸಾರಗೊಳಿಸುವದೊಂದೇ ಮುಖ್ಯ ಮಾರ್ಗವಾಗಿದೆ.

**ಗೋಮಾಂತಕ ಯಾವದು?:—** ಗೋಮಾಂತಕ ಸೀಮೆಯು ತಮ್ಮದೆಂದು ಮಹಾರಾಷ್ಟ್ರಿಗರು ತಮ್ಮ ಹಕ್ಕನ್ನು ಮುಂದುಮಾಡುತ್ತಲಿದ್ದಾರೆ. ಇದು ವಿಹಿತವಾಗಲಾರದು. ಗೋಮಾಂತಕರು ಮಾತನಾಡುವ ಭಾಷೆಯು ಕೊಂಕಣಿಯಾಗಿದ್ದರೂ ಹೇಗೆ ತುಳು, ಕೊಡಗು ಭಾಷೆಗಳನ್ನಾಡುವವರು ಕರ್ನಾಟಕ ದೇಶವನ್ನು ಅನುಸರಿಸುತ್ತ ಬಂದರೋ ಹಾಗೆಯೇ ಕೊಂಕಣಿ ಭಾಷೆಯನ್ನಾಡುವವರೂ ಅನುಸರಿಸುತ್ತ ಬಂದಿದ್ದಾರೆ. ಇದಕ್ಕೆ ಕೆಲವು ಐತಿಹಾಸಿಕ ಕಾರಣಗಳೂ ಉಂಟು. ಕನ್ನಡಿಗರಾದ ಕದಂಬ ರಾಜರು ೧೨ನೇ ಶತಮಾನದಲ್ಲಿ ಬನವಾಸಿ, ಹಾನಗಲ್ಲು, ಹಲಸಿಗೆಯಲ್ಲಿ ಆಳಿದಂತೆ ಗೋವೆಯಲ್ಲಿಯೂ ಆಳಿದರು. ಇದಲ್ಲದೆ ಅದು ಈ ಕಾಲದಲ್ಲಿ ಶಿವಶರಣರ ಸಂಸ್ಕೃತಿಯುಳ್ಳದಾಗಿತ್ತು. ಶೂನ್ಯ ಸಿಂಹಾಸನವನ್ನಾರೂಢ ಮಾಡಿದ ಅನಾದಿ ಗಣನಾಥನ ಚರಿತ್ರೆಯಲ್ಲಿ "ಅಲ್ಲಮಪ್ರಭು ಸ್ವಾಮಿಗಳು ತಮ್ಮ ಗುಹೇಶ್ವರ ಲಿಂಗದಭಿಧಾನದಿಂ ಕೊಂಕಣ ದೇಶದ ಲವಣ ಸಮುದ್ರ ತೀರದ ತಟಿಯಲ್ಲಿ ರಚಿಸಿದ ಗೋಹೆ ಎಂಬ ಪುರದಿ ಇರುವ ಗೋಹೇಶ್ವರಲಿಂಗದಾಲಯಕ್ಕೆ" ಚಿತ್ತೈಸಿದರೆಂದು ಹೇಳಿದೆ. ಹೀಗೆ ಗೋವೆಯು ಅಲ್ಲಮಪ್ರಭುಗಳಿಂದ ನಿರ್ಮಿತವಾಗಿ ಅವರೂ ಅವರ ತರುವಾಯ ಜಗದ್ಗುರುಗಳಾಗಿ ಅಧಿಕಾರಕ್ಕೆ ಬಂದ ಅನಾದಿಗಣನಾಥನೂ ಅಲ್ಲಿ ಇರುತ್ತಿದ್ದರು. ಮುಂದೆ ಈ "ಗೋಹೆ" ಗ್ರಾಮವು ವಿಜಯನಗರ ರಾಜರ ವಶದಲ್ಲಿ ಬಂದಿತು. ಆಮೇಲೆ ಸ್ವಾದಿಯ ರಾಜರೂ ಅವರ ತರುವಾಯ ಪೋರ್ತುಗೀಜರೂ ಈ ಪ್ರಾಂತವನ್ನು ಆಳುತ್ತ ಬಂದರು. ಹೀಗೆ ಗೋಮಾಂತಕವು ಕರ್ನಾಟಕ ಸಂಸ್ಕೃತಿಯುಳ್ಳ ನಾಡಾಗಿದೆ. ಮಧ್ಯದಲ್ಲಿ ಪೋರ್ತುಗೀಜರ ಉಪಟಳವನ್ನು ಅಲ್ಲಿಯ ಜನರು ಸಹಿಸಲಾರದೆ ಅವರು ಕಾರವಾರ ಮಂಗಳೂರು ಜಿಲ್ಹೆಗಳನ್ನು ಪ್ರವೇಶಿಸಿ

ವಾಸಮಾಡಹತ್ತಿದರು. ಈಗಲೂ ಅವರ ವಂಶಜರು ಅಲ್ಲಿಯೇ ಇದ್ದಾರೆ. ಇದರಿಂದ ಕಾರವಾರ, ಮಂಗಳೂರು ಜಿಲ್ಲೆಗಳಲ್ಲಿ ಕರ್ನಾಟಕ ಸಂಸ್ಕೃತಿಯು ಈ ವರೆಗೂ ಅಬಾಧಿತವಾಗಿ ನಡೆದುಬಂದಿದೆ. ಆದರೆ ಈ ಸ್ಥಿತಿಯು ಪೋರ್ತುಗೀಜರ ಆಕ್ರಮಣದ ಮೂಲಕ ಗೋವಾಪ್ರಾಂತದಲ್ಲಿ ಉಳಿದಿರುವದಿಲ್ಲ. ಹೀಗಿದ್ದರೂ ಗೋವೆಯು ಕರ್ನಾಟಕದ ವ್ಯಾಪಾರದ ಮೇಲೆ ಅಭಿವೃದ್ಧಿ ಸ್ಥಿತಿಯನ್ನು ಹೊಂದುತ್ತ ಬಂದಿದೆ. ಅದಕ್ಕೂ ಮಹಾರಾಷ್ಟ್ರಕ್ಕೂ ಏನೂ ಸಂಬಂಧವಿಲ್ಲ. ಗೋವೆಯು ಒಂದು ಮಹತ್ವದ ಬಂದರ ಸ್ಥಳವಾಗಿದೆ. ಮುಂಬಯಿಕರ್ನಾಟಳ ಬಳ್ಳಾರಿ ಹೈದ್ರಾಬಾದು ಪ್ರದೇಶಗಳಿಗೆ ಇದು ಸಂಬಂಧವುಳ್ಳದಾಗಿದೆ. ಈ ಪ್ರಾಂತದ ಅಭಿವೃದ್ಧಿಯು ಕರ್ನಾಟಕದ ಮೇಲೆ ಅವಲಂಬಿಸಿದೆ. ಅದು ಭಾರತದಲ್ಲಿ ವಿಲೀನ ಹೊಂದಿದ ಬಳಿಕ ಅದು ಜಿಲ್ಲೆಯಾಗಿ ಪರಿಗಣಿಸಲ್ಪಟ್ಟು ಅದನ್ನು ಕರ್ನಾಟಕ ಪ್ರಾಂತಕ್ಕೆ ಜೋಡಿಸುವದರಿಂದಲೇ ಅದು ಊರ್ಜಿತ ಸ್ಥಿತಿಯನ್ನು ಹೊಂದುವದು ಶಕ್ಯವಿದೆ.

**ಬಂಡವಲುವಾದ ಮತ್ತು ಸಮಾಜವಾದ**:– ಬಹುಜನರು ಶಿವಶರಣರ ತತ್ವಗಳು ಸಮಾಜವಾದವನ್ನು ಅನುಸರಿಸುತ್ತವೆಂದು ಸಭೆಗಳಲ್ಲಿ ಮತ್ತು ಲೇಖಗಳಲ್ಲಿ ವಿವರಿಸುವದುಂಟು. ಆದರೆ ಶಿವಶರಣರ ಮಾರ್ಗವು ತೀರ ಬೇರೆಯಾಗಿರುತ್ತದೆ. ಸಮಾಜವಾದ ಅಥವಾ ಕೊಮ್ಯುನಿಜಮದಲ್ಲಿ ವ್ಯಕ್ತಿಸ್ವಾತಂತ್ರ್ಯವಿಲ್ಲ. ತಾನು ದುಡಿದದ್ದು ಅಥವಾ ಗಳಿಸಿದ್ದು ಅವನದಿರದೆ ಸರಕಾರದ್ದಿದೆ ಎಂದು ಹೇಳುವದೇ ಅದರ ಮುಖ್ಯ ಅಭಿಪ್ರಾಯವಿದೆ. ಆದರೆ ಶಿವಶರಣರಲ್ಲಿ ಹೀಗೆ ಇರದೆ ಅವರು ಗಳಿಸಿದ್ದು ಅವರದೇ ಇರುತ್ತದೆ. ಆದರೆ ಅದನ್ನು ಅವರು ಸರ್ವಾರ್ಪಣ ಭಾವದಿಂದ ವಿನಿಯೋಗಿಸತಕ್ಕದ್ದು, ಎಂಬ ಅಭಿಪ್ರಾಯವು ಅವರಲ್ಲಿ ಇದೆ. ಮನುಷ್ಯನು ಮಾಡುವ ಕ್ರಿಯೆಗಳ ಫಲವನ್ನು ಮಾಡಿದವನೇ ಅನುಭೋಗಿಸತಕ್ಕದ್ದು, ಅದರ ಲಾಭವನ್ನು ಇತರರು ಭೋಗಿಸಲಾರರು, ಎಂಬ ತತ್ವವು ಶಿವಶರಣರಲ್ಲಿರುತ್ತದೆ. ಸನಾತನಿಗಳಾದರೂ ಇದೇ ತತ್ವವನ್ನು ಅಂಗೀಕರಿಸುತ್ತಾರೆ. ಆದರೆ ಇದಕ್ಕೆ ಅಪವಾದವಾಗಿ ಪುರುಷನು ಮಾಡಿದ್ದರ ಪರಿಣಾಮಗಳನ್ನು ಅವನ ಸ್ತ್ರೀಯಳು ಉಪಭೋಗಿಸುವಳು. ಅಂದರೆ ತನ್ನ ಗಂಡನು ಮಾಡಿದ್ದರಲ್ಲಿ ಅವಳು ಪಾಲುಗಾರ್ತಿಯಾಗಿರುತ್ತಾಳೆಂದು ಅವರ ಅಭಿಪ್ರಾಯವಿದೆ. ಆದರೆ ಶಿವಶರಣರಲ್ಲಿ ಸ್ತ್ರೀಯಳು ಮಾಡಿದ್ದನ್ನು ಸ್ತ್ರೀಯಳೇ ಉಪಭೋಗಿಸುತ್ತಾಳೆ. ಗಂಡನು ಮಾಡಿದ್ದನ್ನು ಅವನೇ ಉಪಭೋಗಿಸುತ್ತಾನೆ. ಆದಕ್ಕೆ

ಸ್ತ್ರೀಯಾಳ ಸಂಬಂಧವಿಲ್ಲ. ವ್ಯಕ್ತಿಸ್ವಾತಂತ್ರ್ಯವನ್ನು ಹಿಂದೂ ಧರ್ಮಶಾಸ್ತ್ರವು ಪುರಸ್ಕರಿಸುತ್ತದೆ. ಶಿವಶರಣರಾದರೂ ಇದೇ ಮಾರ್ಗವನ್ನು ಅನುಸರಿಸುತ್ತಾರೆ. ಆದ್ದರಿಂದ ಶಿವಶರಣರು ಮಾಡಿದ ಕ್ರಿಯೆಗಳ ಉಪಯೋಗವನ್ನು ಅವನ ಹೊರತು ಇತರರು, ಅವರು ಸರಕಾರವಿರಲಿ ಅಥವಾ ಬೇರೆ ವ್ಯಕ್ತಿಗಳಿರಲಿ, ಯಾರೂ ಉಪಯೋಗಿಸಲಾರರು. ಈ ವಿಚಾರಗಳು ಕೊಮ್ಯುನಿಜಮದ ತತ್ವಕ್ಕೆ ವಿರುದ್ಧವಿರುತ್ತವೆ. ಶಿವಶರಣರ ತತ್ವಗಳು ಬಂಡವಲವಾದಕ್ಕೂ ಹೊಂದುವದಿಲ್ಲ. ಬಂಡವಲುವಾದಿಗಳು ಹಣವನ್ನು ತಾವು ಬೇಕಾದಷ್ಟು ಸಂಪಾದಿಸಿಕೊಂಡು ಅದರ ಉಪಭೋಗವನ್ನು ತಾವೇ ಮಾಡುವವರಾಗಿದ್ದಾರೆ. ಆದರೆ ಶಿವಶರಣರು ಇದನ್ನು ವಿರೋಧಿಸುತ್ತಾರೆ. ಅವರು ತಮ್ಮ ಗರಜುಗಳು ಎಷ್ಟು ಇವೆಯೋ ಅಷ್ಟೇ ದೊರಕಿಸತಕ್ಕದ್ದು, ಹೆಚ್ಚಿಗೆ ದೊರಕಿಸಲಾಗದು, ಎಂದು ಅವರ ಉಕ್ತಿಗಳಿವೆ. ಆದ್ದರಿಂದ ಅವರು ಬಂಡವಲುಗಾರರನ್ನು ಪುರಸ್ಕರಿಸುವದಿಲ್ಲ. ಆದರೆ ಅವರು ಕಾಯಕ, ದಾಸೋಹ ಮತ್ತು ಅರ್ಪಣ ಈ ತತ್ವಗಳನ್ನು ಪುರಸ್ಕರಿಸುತ್ತಾರೆ. ಇವುಗಳನ್ನು ಅನುಲಕ್ಷಿಸಿಯೇ ಅವರು ತಮ್ಮ ಕಾರ್ಯಗಳನ್ನು ಮಾಡತಕ್ಕದ್ದು. ಸ್ವಂತದ ದುಡಿಕೆಯಿಂದಲೇ ಶರಣನು ಸಂಪಾದಿಸತಕ್ಕದ್ದು. ಇದರಿಂದ ಬಂಡವಲುವಾದಕ್ಕೆ ನಿಯಂತ್ರಣವು ಉಂಟಾಗುತ್ತದೆ. ದುಡಿದದ್ದನ್ನು ದಾಸೋಹಕ್ಕೆ ಅಂದರೆ ಉಪಯುಕ್ತವಾದ ಆತ್ಮೋದ್ಧಾರ ಕಾರ್ಯಗಳಿಗೆ ವಿನಿಯೋಗಿಸತಕ್ಕದ್ದು. ಮತ್ತು ಅವನು ಅರ್ಪಣ ಭಾವದಿಂದ ಈ ಕ್ರಿಯೆಗಳನ್ನೆಲ್ಲ ಮಾಡತಕ್ಕದ್ದು. ಅಂದರೆ ಅವನು ಪ್ರಸಾದರೂಪವಾಗಿ ತನ್ನ ಕ್ರಿಯೆಗಳನ್ನು ಅನುಭವಿಸತಕ್ಕದ್ದು. ಇಂಥ ವಿಚಾರಗಳು ಸಮಾಜವಾದಿಗಳಲ್ಲಿಲ್ಲ. ಬಂಡುವಲುವಾದಿಗಳಲ್ಲಂತೂ ಇಲ್ಲವೇ ಇಲ್ಲ. ಶಿವಶರಣನು ತಮ್ಮ ಕ್ರಿಯೆಗಳನ್ನು ಶಿವಾನುಭವಿಗಳಾಗಿ ನಿರ್ವಹಿಸಬೇಕೆಂದು ವಚನಕಾರರ ಉಕ್ತಿಗಳಿವೆ. ಅಂದರೆ ಕಾಯಕ, ದಾಸೋಹಭಾವ, ಅರ್ಪಣ ಇವುಗಳನ್ನೆಲ್ಲ ಸಮನ್ವಯಿಸತಕ್ಕದ್ದು. ಹೀಗೆ ಮಾಡಿದಲ್ಲಿ ಅದು ಪ್ರಸಾದವೆನಿಸಿಕೊಳ್ಳುವದು. ಈ ತೆರದ ವಿಚಾರಗಳು ವಚನಶಾಸ್ತ್ರದಲ್ಲಿ ಪದೇ ಪದೇ ಬರುತ್ತವೆ.

**ಹರಭಕ್ತ ಹರಳಯ್ಯ ಎಂಬ ಚಿಕ್ಕ ಏಕಾಂಕ ನಾಟಕ:—**

(ಈ ಸ್ಫುಟವನ್ನು ಶ್ರೀಯುತ ಲಿಂಗಣ್ಣಾ ಬಾಣದ ಶಾಲಾ ಶಿಕ್ಷಕರು, ಮು.— ಇವರು ಬರೆದಿರುವರು.) ಈ ಏಕಾಂಕವನ್ನು ಜಮಖಂಡಿ ತಾಲೂಕಿನ ಗ್ರಾಮದ ಕ.ಗಂ.ಮ. ಶಾಲಾ ಬಾಲಕರು ಜಿಲ್ಲಾ ಪ್ರಾ. ಶಾ. ನಾಟಕ ಮಹೋತ್ಸವದಲ್ಲಿ

ಭಾಗವಹಿಸಿ, ಉತ್ತಮರೀತಿಯಾಗಿ ಮಾಡಿ ತೋರಿಸಿ ಪ್ರಥಮ ಬಹುಮಾನವನ್ನು ಸ್ಪರ್ಧೆಯಲ್ಲಿ ಪಡೆದಿರುವರು. ಇದು ಸಂತೋಷಕರವಾದದ್ದು. ಶರಣ ಸಾಹಿತ್ಯವು ಅಮೋಘವಾದದ್ದು. ಅದರಲ್ಲಿ ಕನ್ನಡದ ಕೆಚ್ಚು ಹುದುಗಿದೆ. ಅದನ್ನು ಅರಗಿಸಿಕೊಂಡಂತೆಲ್ಲ ಸಿಹಿಯಾದ ರಸವು ಅದರಲ್ಲುಂಟು. ಶರಣರು ಕೇವಲ ಧಾರ್ಮಿಕ ಪುರುಷರಲ್ಲ. ಅವರು ಐತಿಹಾಸಿಕ ಪುರುಷರೆಂಬುದು ರಾ॥ ಬ॥ ಪಿ. ಜಿ. ಹಳಕಟ್ಟಿಯವರು ಬರೆದ ಶಿವಶರಣರ ಚರಿತ್ರೆಗಳು ಎಂಬ ನಾಲ್ಕು ಭಾಗ ಪುಸ್ತಕಗಳಿಂದ ಗೊತ್ತಾಗುತ್ತದೆ.

ನಾನು ಶರಣರ ಸಾಹಿತ್ಯವನ್ನು ನನ್ನ ಅಲ್ಪಬುದ್ಧಿಗೆ ಹೊಳೆದಷ್ಟು ಓದಿದೆ. ಆಗಿನಿಂದಲೂ ಅದಾವುದೋ ಒಂದು ರೀತಿಯಾಗಿ ಅದರ ಸೇವೆಗೈಯಬೇಕು, ಶರಣರ ನುಡಿ ಪ್ರಚಾರಗೊಳಿಸಬೇಕು ಎಂದು ಮನ ಹಾತೊರೆಯುತ್ತಿತ್ತು. ಹೀಗೆ ಕೆಲವು ದಿವಸಗಳು ಗತಿಸಲಾಗಿ ಒಂದು ನಿರ್ಧಾರಕ್ಕೆ ಬಂದೆನು—

ಸಾಮಾನ್ಯಜನತೆಗೂ ಕೂಡ ಯಾವದಾದರೊಂದು ವಿಷಯವು ಸುಸ್ಪಷ್ಟವಾಗಿ ತಿಳಿಯಬೇಕಾದರೆ ನಟನೆಯಿಂದ (ನಾಟಕದಿಂದ) ಎಂದು ತಿಳಿದು ಆ ರೀತಿ ಪ್ರಯತ್ನಿಸಬೇಕೆಂದು ನಿರ್ಧರಿಸಿದೆ. ಆಗ ಕೆಲವು ಪ್ರಶ್ನೆಗಳು ನನ್ನ ಮನದಲ್ಲಿ ಉದ್ಭವಿಸಿದವು. ನಾಟಕ ರಚನೆಗಾಗಿ ಯಾವ ಘಟನೆಯನ್ನು ಆಯ್ದುಕೊಳ್ಳಬೇಕು? ಅದನ್ನು ಹೇಗೆ ಚಿತ್ರಿಸಿಕೊಳ್ಳಬೇಕು, ಇವೇ ಮೊದಲಾದ ಪ್ರಶ್ನೆಗಳು ಉದ್ಭವಿಸಿದವು. ಈಗಿನ ನಮ್ಮ ಸರಕಾರವು ಅಸ್ಪೃಶ್ಯತೆ ನಿವಾರಣೆಯ ಬಗ್ಗೆ ಕೈಕೊಂಡ ಕಾರ್ಯಕ್ಕೆ ಸಹಕಾರಿಯಾಗಬೇಕು, ಅಂದರೆ ಎಂಟುನೂರು ವರ್ಷಗಳ ಹಿಂದೆ ಅಸ್ಪೃಶ್ಯರ ಸಂಗಡ ಮಹಾನ್‌ಭಕ್ತಿಭಂಡಾರಿ ಬಸವಣ್ಣನವರು ವರ್ತಿಸಿದ ವಿನಯದ ಚಿತ್ರವನ್ನು ಚಿತ್ರಿಸಬೇಕೆಂದು ಬಗೆದೆನು. ಅಂತ್ಯಜರಾದ ಹರಳಯ್ಯ ಹಾಗೂ ಅವನ ಹೆಂಡತಿ ಕಲ್ಯಾಣಮ್ಮನ ಪೂಜ್ಯ ವಿನಮ್ರತೆಯ ಭಕ್ತಿಭಾವ, ಒಬ್ಬ ಉಚ್ಚ ಅಧಿಕಾರಿ ಹಾಗೂ ಅಂತ್ಯಜ ಇವರ ನಡುವಿನ ಆತ್ಮೀಯ ಭಾವನೆ ಇವೇ ಮುಖ್ಯ ಘಟನೆಯನ್ನಾಗಿ ಇಟ್ಟುಕೊಂಡೆನು. ಈ ಏಕಾಂಕವು ಶಾಲಾ ಮಗುಗಳಿಗೆ ಉಪಯೋಗವಾಗಬೇಕು, ಅವರಲ್ಲಿ ಸದ್ಭಾವನೆಗಳು ಅದರಿಂದ ಉಗಮಿಸಬೇಕು, ಅವರಲ್ಲಿ ಭೇದಭಾವ ಪುಕ್ಕಳ ಮನಸ್ಸಿನಿಂದ ಕಡೆಗಾಗಬೇಕು, ಎಂದು ನಿರ್ಧರಿಸಿ ಸರಳ ಭಾಷೆಯಲ್ಲಿ ಚಿಕ್ಕಮಕ್ಕಳಿಗೆ ಯೋಗ್ಯ

ವಾಗುವಂತೆ ಒಂದು ಚಿಕ್ಕ ಏಕಾಂಕವನ್ನು ಅಂದರೆ ಸುಮಾರು ಒಂದು ತಾಸಿನ ಏಕಾಂಕವನ್ನು ಬರೆದೆನು.

ಆದರೆ ಈ ಏಕಾಂಕವು ಇಷ್ಟೊಂದು ಯಶಸ್ವಿಯಾದೀತೆಂದು ನಾನು ನೆನೆಸಿರಲಿಲ್ಲ.

ಪ್ರಕಟವಾದ ತರುವಾಯ ಲಚ್ಯಾಣ ಟ್ರೇನಿಂಗ್ ಕಾಲೇಜದಲ್ಲಿ ನನ ಸ್ನೇಹಿತರೊಳಗೊಂಡು ರಂಗಭೂಮಿಗೆ ಅದನ್ನು ತಂದುದಾಯಿತು. ಎರಡನೆಯ ಪ್ರಯೋಗವನ್ನು ಬೀಳಗಿಪೇಠೆಯ ಜಾತವುಟ್ಟಿಯ ಬಾಲಕರಿಂದ ರಂಗ ಭೂಮಿಗೆ ತರಲಾಯಿತು. ಈ ಎರಡೂ ಪ್ರಯೋಗಗಳು ಒಳ್ಳೇ ಯಶಸ್ವಿ ಯಾದವು. ಅಂತೆಯೇ ಮೂರನೇ ಪ್ರಯೋಗವನ್ನು ಬನಹಟ್ಟಿಯ ಕ. ಗಂ. ಮ. ಶಾ. ಬಾಲಕರಿಂದ ಗ್ರೂಪ್ ಸಮ್ಮೇಲನದಲ್ಲಿ ಆಡಿಸಲಾಯಿತು. ಆಗ ನಮ್ಮ ಶಿಕ್ಷಣಾಧಿಕಾರಿಗಳೂ ಕೆಲವು ಸದ್ಗೃಹಸ್ಥರೂ ಆನಂದಪಟ್ಟು ಇನ್ನೊಂದು ದೃಶ್ಯವನ್ನು ಬೆಳೆಸಿದಲ್ಲಿ ಹೆಚ್ಚು ಸುಂದರವೆಂದು ಅಭಿಪ್ರಾಯ ಪಟ್ಟರು. ಆದರಿಂದ ಒಂದು ದೃಶ್ಯವನ್ನು ಹೆಚ್ಚಿಗೆ ಬೆಳೆಸಿ ಬರೆದೆನು. ಮುಂದೆ ಪ್ರಾ. ಶಾ. ನಾ. ಮ. ತಾಲೂಕಾ ಸ್ಪರ್ಧೆಗೆ ಒಯ್ಯಲಾಯಿತು. ಅಲ್ಲಿ ಅದಕ್ಕೆ ೧ನೇ ನಂಬರು ಬಂದಮೇಲೆ ಜಿಲ್ಹಾ ಸ್ಪರ್ಧೆಗೆ ಒಯ್ಯಲಾಯಿತು. ಅಲ್ಲಿಯೂ ಮೊದಲನೇ ಬಹುಮಾನವನ್ನು ಪಡೆಯಿತು.

ನಾನು ಈ ಮೊದಲು ಅರಿಕೆಮಾಡಿಕೊಂಡಂತೆ ನನ್ನ ಮೊದಲಿನ ಕೃತಿಗೆ ಜನತೆಯೆಲ್ಲ ಆದರಿಸಿ ಆನಂದಪಟ್ಟದ್ದಕ್ಕಾಗಿ ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುವೆ. ಇದನ್ನು ಮೊದಲು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧ ಪಡಿಸಿದ್ದಕ್ಕಾಗಿ ಅದರ ಸಂಪಾದಕರಿಗೂ ನನ್ನ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುವೆ.

ಇನ್ನು ಈ ನಾಟಕಕ್ಕೆ ಸಹಾಯಕರಾದ ನನ್ನ ಸಹೋದ್ಯೋಗಿಗಳಿಗೂ ನಮ್ಮ ಶಾಲೆಯ ಗುರುಗಳಿಗೂ ನಮ್ಮ ಶಾಲೆಯ ಮುಖ್ಯ ಗುರುಗಳಿಗೂ ನಾನು ಚಿರಋಣಿ. ಅಲ್ಲದೆ ಬನಹಟ್ಟಿಯ ನಾಗರಿಕರೆಲ್ಲರೂ ಅನೇಕ ರೀತಿಯಾಗಿ ಸಹಾಯ ಸಲ್ಲಿಸಿದ್ದಕ್ಕಾಗಿ ಅವರಿಗೂ ನಾನು ಅಭಿನಂದನೆ ಸಲ್ಲಿಸುವೆ. ಈ ನಾಟಕದಲ್ಲಿ ಭಾಗವಹಿಸಿ ಉತ್ತಮವಾಗಿ ನಟಿಸಿದ ಬಾಲಕರಿಗೂ ನನ್ನ ವಂದನೆಗಳು.

---

# ಪ್ರಾಣಲಿಂಗ

[ ಲೇಖಕರು:- ಶ್ರೀಯುತ ಸಿ. ಶಾ. ಮಹಾಂತಣ್ಣವರ ]

(1)

ಸರ್ವ ಪ್ರಾಣಿಗಳ ಇಂದ್ರಿಯಗಳಲ್ಲಿ ನೇತ್ರೇಂದ್ರಿಯವು ಶ್ರೇಷ್ಠವಾದದ್ದು. ನೇತ್ರದಿಂದಲೇ ಸರ್ವ ಜಗತ್ತು ನೋಡಲ್ಪಡುವದು. ನೇತ್ರದ ಸಹಾಯದಿಂದ ಸರ್ವ ಪ್ರಾಣಿಗಳ ಗಮನಾಗಮನವು ಶಕ್ಯವು. ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಬೇಕಾದಾಗ ಮನ ಮೊದಲಾದ ಕರಣೇಂದ್ರಿಯಗಳ ಸಹಕಾರದೊಡನೆಯೂ ಕರ್ಮೇಂದ್ರಿಯ ಜ್ಞಾನೇಂದ್ರಿಯಗಳ ಕ್ರಿಯಾಜ್ಞಾನಗಳೊಡನೆಯೂ ತನ್ನ ಪ್ರಾಣರಕ್ಷಣೆಗಾಗಿ ಎಡಬಲ ಮುಂದೆ ಹಿಂದೆ ನೋಡಲೇಬೇಕಾಗುವದು. ಶಿಲ್ಪಿಗಳು ಕಲ್ಲೊಳಗೆ ಅನೇಕ ಪ್ರತಿಮೆಗಳನ್ನು ಕಟೆದದ್ದನ್ನೂ ಬಡಿಗರು ಅಂಥ ಪ್ರತಿಮೆಗಳನ್ನು ಕಟ್ಟಿಗೆಗಳಲ್ಲಿ, ಪತ್ತಾರರು ಬೆಳ್ಳಿ ಬಂಗಾರ ತಾಮ್ರ ಹಿತ್ತಾಳಿಗಳಲ್ಲಿ, ಚಿತ್ರಗಾರರು ಕಾಗದಗಳಲ್ಲಿ ಒಡಮೂಡಿಸಿದ್ದನ್ನೂ ಆಯಾ ಪ್ರತಿಮೆಗಳಲ್ಲಿ ತಮ್ಮ ಕೌಶಲ್ಯತನದಿಂದ ಕಳೆಯುಳ್ಳವುಗಳನ್ನು ಮಾಡಿದ್ದನ್ನೂ ಮನದಂದರೆ ಕಣ್ಣಿನ ಶ್ರೇಷ್ಠತೆಯು ಕಾಣಬರುವದು. ಒಬ್ಬ ರಾಜನ ಪ್ರತಿಮೆಯನ್ನಾಗಲಿ ಚಿತ್ರವನ್ನಾಗಲಿ ತಯಾರಿಸಿದ್ದನ್ನು ಮನಮುಟ್ಟಿ ನೋಡಿದರೆ, ಆ ರಾಜನ ಸರ್ವಾವಯವಗಳೂ ಸರ್ವ ಲಕ್ಷಣಗಳೂ ಅವಗತವಾಗುವವು. ಪ್ರಾಣವಿರದಿದ್ದರೂ ಆ ಪ್ರತಿಮೆಯಲ್ಲಿ ಪ್ರಾಣಕಳೆಯು ತುಂಬಿದಂತೆ ಭಾಸವಾಗುವದು. ಇಷ್ಟು ಪೂರ್ಣ ಲಕ್ಷಣವನ್ನು ತರಲಿಕ್ಕೆ ಮಾಡಿದವನ ಮನೋಭಾವ ಪ್ರಾಣಿಗಳಲ್ಲಿ ಆ ಪ್ರತಿಮೆಯ ಸ್ವರೂಪವು ಬಿಂಬಿಸಿರಲೇಬೇಕು. ಆ ಬಿಂಬರೂಪವು ಭಾವದಿಂದ ಮನಕ್ಕೂ ಮನದಿಂದ ಕಣ್ಣಿಗೂ ಕಣ್ಣಿನಿಂದ ಕೈಕ್ಕೂ ಬಂದು ಆ ಪ್ರತಿಮೆಯು ಪೂರ್ಣ ಕಳೆಯುಳ್ಳದ್ದಾಗುವದು. ಇದರಂತೆ ದಿನಾಲು ಇಷ್ಟಲಿಂಗಾನುಸಂಧಾನದಿಂದ ಉಂಟಾಗುವ ನೋಟ ಕೂಟಗಳಿಂದ ನೋಡುವವನ ಪ್ರಾಣವು ನೋಟ ಕೂಟ ಸಮರಸೈಕ್ಯದಿಂದಲೂ ಭಕ್ತ್ಯಾತಿಶಯದಿಂದಲೂ ಇಷ್ಟಲಿಂಗದಲ್ಲಿ ಉಂಟಾಗಿ, ಆ ಇಷ್ಟಲಿಂಗವೇ ಪ್ರಾಣಲಿಂಗವಾಗಿ ಬಹಿರಾಂತರಂಗಗಳಲ್ಲಿ ಬೆಳಗುನದು. ಇದನ್ನರಿತ ಶ್ರೀ ಪ್ರಭುದೇವರು ತಮ್ಮ ಮಂತ್ರಗೋಪ್ಯದಲ್ಲಿ—

ಅಂಗಕಳೆ ಲಿಂಗದಲಿ ಲಿಂಗಕಳೆ ಅಂಗದಲಿ। ಅಂಗ ಲಿಂಗವೆಂಬ ಉಭಯವಳಿದು ॥ ಮಂಗಳ ಮಹಾಜ್ಞಾನದ ಬೆಳಗಿನೊಳಗೆ। ಕಂಗಳೇ ಪ್ರಾಣವಾಗಿರುತಿರ್ದೆನು ” ಎಂದು ಉದ್ಘೋಷಿಸಿದ್ದಾರೆ.

ಇದನ್ನು ಮನಗಂಡ ಮತ್ತೊಬ್ಬ ಶರಣನು “ ಸದ್ಗುರು ಸ್ವಾಮಿ ಅನುಗ್ರಹಿಸಿ ಕೊಟ್ಟುದೇ ಇಷ್ಟಲಿಂಗ, ಆ ಲಿಂಗವೇ ಪ್ರಾಣವ ಭೇದಿಸಿ ಪ್ರಾಣಲಿಂಗವಾಯಿತ್ತು. ಭಾವವ ಭೇದಿಸಿ ಭಾವಲಿಂಗವಾಯಿತ್ತು. ಈ ತ್ರಿವಿಧವು ಒಂದೇ ಲಿಂಗ ಕಾಣಾ ಅಪ್ರಮಾಣ ಕೂಡಲಸಂಗಮದೇವಾ ಎಂದು ಸ್ಪಷ್ಟಗೊಳಿಸಿರುವನು.

ಇದರಂತೆ ಮಹಾದೇವಿಯಕ್ಕನಾದರೂ “ ಪ್ರಾಣ ಲಿಂಗವೆಂದರಿದ ಬಳಿಕ ಪ್ರಾಣದಾಶೆ ಹಿಂಗಿತ್ತು. ಲಿಂಗ ಸೋಂಕು ಸಂಗಿಗೆ ಕಂಗಳೇ ಕರುವಾಗಿದ್ದವಯ್ಯ. ಚನ್ನಮಲ್ಲಿಕಾರ್ಜುನಯ್ಯ ಹಿಂಗದೆ ಅನಿಮಿಷನಾದ ಶರಣಂಗೆ ” ಎಂದು ಅರುಹಿದ್ದಾರೆ.

ಇದೇ ಅನುಭವವನ್ನು ಶ್ರೀ ಬಸವಣ್ಣನವರು “ಅಂಗೈಯೊಳಗಣ ಲಿಂಗವ ನೋಡುತ್ತ, ಕಂಗಳು ಕಡೆಗೋಡಿಯೊರೆಯುತ್ತ ಸುರಿಯುತ್ತ ಎಂದಿಪ್ಪೆನೋ ? ಕೂಟವೇ ಪ್ರಾಣವಾಗಿ ಎಂದಿಪ್ಪೆನೋ ? ಎನ್ನ ಅಂಗ ವಿಕಾರದ ಸಂಗವಳಿದು ಕೂಡಲಸಂಗಯ್ಯಾ ಲಿಂಗ ಲಿಂಗವೆನ್ನುತ್ತ ? ಎಂದು ಉಸುರಿದ್ದಾರೆ.

ಈ ಎಲ್ಲ ಅನುಭವಿಗಳ ವಚನಗಳಿಂದ ಸಾಧಕರು ಪ್ರಾಣಲಿಂಗವು ದೇಹದೊಳಗಿನ ಯಾವದೊಂದು ಸ್ಥಾನದಲ್ಲಿರಬಹುದೆಂಬದಾಗಿ ತಪ್ಪು ತಿಳಿಯಬಾರದೆಂದು ಶ್ರೀ ಪ್ರಭುದೇವರು “ ಪ್ರಣವ ಮಂತ್ರವ ಕರ್ಣದಲ್ಲಿ ಹೇಳಿ, ಶ್ರೀ ಗುರು ಶಿಷ್ಯನ ಅಂಗದ ಮೇಲೆ ಲಿಂಗ ಪ್ರತಿಷ್ಠೆಯ ಮಾಡಿದ ಬಳಿಕ ಪ್ರಾಣದಲ್ಲಿ ಲಿಂಗವಿಪ್ಪುದೆಂಬ ವ್ರತಗೇಡಿಗಳ ಮಾತು ಕೇಳಲಾಗದು. ಒಳಗಿಪ್ಪನೇ ಲಿಂಗದೇವನು ಮಲಮೂತ್ರದ ಹೇಸಿಕೆಯ ಮಾಂಸದ ನಡುವೆ ? ಅಲ್ಲಿ ಪ್ರಾಣವಿಪ್ಪುದಲ್ಲದೆ ಲಿಂಗವಿಪ್ಪುದೇ ? ಆ ಪ್ರಾಣನ ತಂದು ಇಷ್ಟಲಿಂಗದಲ್ಲಿರಿಸಿ ನೆರೆಯಬಲ್ಲಡೆ ಆತನೇ ಪ್ರಾಣಲಿಂಗ ಸಂಬಂಧಿಯೆಂಬೆ ಅಲ್ಲದವರ ಮೆಚ್ಚುವನೇ ನಮ್ಮ ಗುಹೇಶ್ವರ ಲಿಂಗವು? ಎಂದು ಸೂಚಿಸಿದ್ದಾರೆ.

ಶ್ರೀ ಸರ್ಪಭೂಷಣ ಶಿವಯೋಗಿಗಳಾದರೂ "ಶರಣದೊಳಗೆ ಕಾಣಿಸದು ಪರವಸ್ತು, ಇದನರಿಯದೆ ಅರಿವುರುಳುಗಳೊಳಗಿರಿಸಿ ತೊಳಲಿ ಬಳಲುವರು ॥ಪ॥ ಕಾಷ್ಠದೊಳಗಣ ಶಿಖಿಯು ಕಾಷ್ಠದಿಂ ಪೊರಮಟ್ಟು ಕಾಷ್ಠದಿಂದುಜ್ವಲಿಸಿ ಕಾಷ್ಠವನೆ ಸುಟ್ಟು ತಾ ಬೆಳಗುವಂತೆ ॥ ಶ್ರೇಷ್ಠ ಚಿತ್ಕಳೆಯು ಪೊರಮಟ್ಟು ನಿಟ್ಟೊರಸಿ ಜಡಭಾವವನ್ನು ಕಳೆಯಲ್ಕಿದುವೆ ಪ್ರಾಣಲಿಂಗವೆ ತಾನಾಗಿ" ಎಂದು ಎಚ್ಚರಿಸಿದ್ದಾರೆ.

ಗುರುಕೊಟ್ಟ ಲಿಂಗವನು ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಭಯಭಕ್ತಿಯಿಂದ ಅನುದಿನ ಪೂಜಿಸುತ್ತ ಸತ್ಕಾಯಕದಿಂದಾರ್ಜಿಸಿದ ಧನವ ಗುರುಲಿಂಗ ಜಂಗಮಾರ್ಪಿತ ಮಾಡಿ, ಶೇಷ ಪ್ರಸಾದವನು ತೀರ್ಥ ಪ್ರಸಾದದೊಡನೆ ಸೇವಿಸುತ್ತ ಭಕ್ತಸ್ಥಲಾದಿವಿಡಿದು ಭಕ್ತನ ಭಕ್ತ, ಭಕ್ತನ ಮಾಹೇಶ, ಭಕ್ತನ ಪ್ರಸಾದಿ, ಭಕ್ತನ ಪ್ರಾಣಲಿಂಗಿ, ಭಕ್ತನ ಶರಣ, ಭಕ್ತನ ಐಕ್ಯಸ್ಥಲಾರುಗಳ ಅರಿದು ಆಚರಿಸುತ್ತ, ಶರಣರ ಸಂಗದೊಳಗಿರ್ದು ಅವರ ಒಕ್ಕುಮಿಕ್ಕುದನು ಹಾರೈಸುತ್ತ ದಶವಿಧ ಪಾದೋದಕ, ಏಕಾದಶ ಪ್ರಸಾದಗಳನು ಆಯಾ ಲಿಂಗಂಗಳಿಗೆ ಅಭಿಷೇಕಾರ್ಪಣಂಗಳಂ ಗೈಯುತ್ತ ನಿರ್ವಿಷಯಿಯಾಗಿ, ಕರದೊಳಗಿನ ಇಷ್ಟಲಿಂಗದೊಳಗೆ ಪ್ರಾಣಲಿಂಗವೂ ಭಾವಲಿಂಗವೂ ಬೆರೆತಿರುವ ಸಂಗತಿಯನ್ನು ತನ್ನ ಲಿಂಗಾರ್ಚನೆಯ ಸಾಧನದಿಂದ ಅರಿಯುತ್ತ ತನ್ನ ಪ್ರಾಣವೇ ಲಿಂಗ, ಲಿಂಗವೇ ಪ್ರಾಣವಾಗಿರುತಿರ್ದ ಭಕ್ತನ ಸ್ಥಿತಿಯನ್ನು ಕಣ್ದೆರೆದು ನೋಡಿದ ಶ್ರೀ ಮಹಾದೇವಿಯಕ್ಕನವರು—

"ನಾಳ ಮರೆಯ ನೂಲು ಸಡಲಿದೊಡೆ ನಾಡೇ ನಾಚುವುದಯ್ಯ. ಗಂಡು ಹೆಣ್ಣೆಂಬ ಜಾತಿಯ ಪ್ರಾಣದೊಡೆಯ ಜಗದೊಳಗೆ ಮುಳುಗುತ್ತ ತೆರಹಿಲ್ಲದಿರಲು ದೇವರ ಮುಂದೆ ನಾಚಲೆಡೆಯುಂಟೇ ? ಚನ್ನಮಲ್ಲಿಕಾರ್ಜುನಂಗೆ ಜಗವೆಲ್ಲ ಕಣ್ಣಾಗಿ ನೋಡುತ್ತಿರಲು ಮುಚ್ಚಿ ಮರಸುವದ್ಕು ಹೇಳಯ್ಯ " ಹಾಗು—

"ನೆಜ್ಜೆಯುಪ್ಪರಿಸಿ, ಶಿವಲಿಂಗ ನೀನೆನ್ನ ಕರಸ್ಥಲಕ್ಕೆ ಬರೆ ಪ್ರಜ್ವಲಿಸಿ ತೊಳತೊಳಗಿದೆ. ಬೆಳಗುತ್ತಿಹ ಕಾಂತಿಯಲಿ ಜಜ್ಝರಿಸಿ ತನ್ನ ಮನ ದೃಷ್ಟಿ ನಟ್ಟು ಲಿಂಗದಲಿ ಜಜ್ಝರಿಸಿ, ಸುರಿವ ಶಿವ ಸುಖದ ರತಿಯೊಳೋಲಾ

ಡುತ್ತ ಸಜ್ಜನ ಸದ್ಭಕ್ತಿ ರತಿಯೊಡನೆ ಕೂಡಿ ಆಡಿ, ಲಜ್ಜೆಗೆಟ್ಟು ನಿಮ್ಮ ನೆರೆವೆ ಚನ್ನಮಲ್ಲಿಕಾರ್ಜುನಾ" ಮತ್ತು—

"ಅಯ್ಯಾ ದೂರದಲಿರ್ದಿಹೆ ಎಂದು ಬಾಯಾರಿ ಬಳಲುತಿರ್ದೆನಯ್ಯ ನಾನು. ಅಯ್ಯಾ ಸಾರಿ ಬಂದು ನೀನೆನ್ನ ಕರಸ್ಥಲದಲ್ಲಿ ಮೂರ್ತಿಗೊಂಡರೆ ಇನ್ನಾ ರತಿ ಎಲ್ಲವೂ ಲಿಂಗ; ಆಲಿ ನಿಮ್ಮಲ್ಲಿ ನಟ್ಟವು ನೋಡಯ್ಯ. ನಿಮ್ಮನೆನ್ನ ಕರಸ್ಥಲದಲ್ಲಿ ನೋಡಿ ನೋಡಿ ಕಂಗಳೇ ಪ್ರಾಣವಾಗಿರ್ದೆನಯ್ಯ " ಎಂಬದಾಗಿ ಹಾಡಿಕೊಂಡಿದ್ದಾರೆ. ವೀರಶೈವ ದೀಕ್ಷಾಬದ್ಧನಾದ ಭಕ್ತನು—

ಮುಂದು ಜಾವದಲೆದ್ದು ಲಿಂಗದಂಘ್ರಿಯ ಮುಟ್ಟಿ, ಸುಪ್ರಭಾತ ಸಮಯದಲ್ಲಿ ಸದ್ಭಕ್ತರ ಮುಖವ ನೋಡುವದು, ಹುಟ್ಟಿದುದಕ್ಕೆ ಇದೇ ಸಫಲ ನೋಡಾ. ಸತ್ಯ ವಚನವಿಂತೆಂದುದು, ಇಲ್ಲದವರ ಕಂಡರೆ ಸಾನೊಲ್ಲೆ ಗುಹೇಶ್ವರಾ "

ಬಳಿಕ ತನ್ನ ಅಂಗಕ್ಕೆ ಸಲ್ಲುವ ಹಲ್ಲುಕಡ್ಡಿ ಮೊದಲ್ಗೊಂಡು ಬೆಲ್ಲರಿಳೆ ಎಲೆಯ ವರೆಗೆ ಲಿಂಗಕ್ಕೆ ಕೊಟ್ಟಲ್ಲದೆ ಕೊಳ್ಳೆನೆಂಬ ಭಾಷೆ ಮುಂದುಗೊಂಡು, ಇಷ್ಟಲಿಂಗಾರ್ಚನೆಯ ಮೊದಲು ಮನೆ ಮಡಿಕೆ ಮೊದಲ್ಗೊಂಡು ಕೂಸು ಮೊದಲಾಗಿ ಮುದುಕ ಕಡೆಯಾಗಿ, ನಿಜ ನಿರ್ಮಲತ್ವಂಗೈದಿರಲು ಶಿವಪೂಜಾ ಕೋಣೆಯಲ್ಲಿ ಲಿಂಗ ಪೂಜಾ ಸಾಹಿತ್ಯಗಳೂ ಷಟ್‌ಸ್ಥಲ ಬ್ರಹ್ಮಿಗಳ ತಸಬೀರುಗಳೂ ಮಾತ್ರ ಇರುತ್ತಿರಲು, ತನ್ನ ಹೃದಯ ಮಂದಿರದ ಶಾಂತಿಯಂತೆ ಆ ಶಿವಪೂಜೆಯ ಕೋಣೆಯೂ ಶಾಂತಮಯವಾಗಿ ಕಂಗೊಳಿಸುತ್ತಿರಲು, ಗುರು ಕೊಟ್ಟ ಲಿಂಗವನು ಆತನ ಆಜ್ಞೆಯಂತೆ ಮೂಲಮಂತ್ರದಿಂದ ಶಿವಪೂಜಾ ಸಾಮಗ್ರಿಗಳನ್ನು ಶುದ್ಧೀಕರಿಸಿ ಅಷ್ಟವಿಧಾರ್ಚನೆಯಿಂದ ಪೂಜಿಸಿ ಆ ಪೂಜೆಯನಿಳುಹಿ, ಆ ಇಷ್ಟಲಿಂಗವೇ ಪ್ರಾಣಲಿಂಗವೆಂದರಿದು ಪುನಃ ಮಜ್ಜನಕ್ಕೆರೆದು ಇಷ್ಟಲಿಂಗದಂತೆ ಪುನಃ ಪೂಜೆಯಂಗೈದು ಆರಾಧಿಸುವವನಾಗಿರಲು—

"ಘನತರ ಇಷ್ಟಲಿಂಗದಲ್ಲಿ ಅನಿಮಿಷ ದೃಷ್ಟಿಯು ಬಲಿದು, ಮನ ಕರಗಿ ತನು ಉಬ್ಬಿ, ಹೃದಯಕಮಲ ಪಸರಿಸಿ, ಸರ್ವಾಂಗವು ಗುಡಿಗಟ್ಟಿ, ಕಂಗಳಲ್ಲಿ ಪರಿಣಾಮಜಲ ಉಕ್ಕಿ ಹೊರಸೂಸಿ ಪರಮಶಾಂತಿ

ಯಂತೆ, ಚಿತ್ರದ ರೂಹಿನಂತೆ, ಪರಬ್ರಹ್ಮಲಿಂಗದಲ್ಲಿ ಬೆರೆದು ಪರವಶಗೊಂಡಿರ್ಪ ಮಹಾಶರಣರ ತೋರಿಸಿ ಎನ್ನ ಬದುಕಿಸಯ್ಯಾ ಅಖಂಡೇಶ್ವರಾ."

ಪ್ರಾಣಲಿಂಗದ ಪೂಜೆಯಲ್ಲಿ ಆಸಕ್ತನಾದ ಶರಣನ ಈ ಸ್ಥಿತಿಯು — "ಪ್ರಾಣ, ಲಿಂಗವ ನುಂಗಿತೋ? ಲಿಂಗ, ಪ್ರಾಣವ ನುಂಗಿತೋ? ಎಂದರಿಯನಯ್ಯಾ? ಭಾವವು ಲಿಂಗದಲ್ಲಿ ತುಂಬಿಕೊಂಡಿತೋ? ಲಿಂಗವು ಭಾವದಲ್ಲಿ ತುಂಬಿಕೊಂಡಿತೋ? ಎಂದರಿಯನಯ್ಯಾ; ಮನವು ಲಿಂಗದಲ್ಲಿ ಮುಳುಗಿತೋ? ಲಿಂಗವು ಮನದಲ್ಲಿ ಮುಳುಗಿತೋ? ಎಂದು ಅರಿಯನಯ್ಯಾ"

ಈ ಮಟ್ಟಕ್ಕೆ ಬರಬೇಕಾದರೆ ಕೆಳಗಿನ ಅನುವುಗಳನ್ನು ಅನುಸರಿಸಬೇಕಾಗುವದು. "ಅಂಗದ ಮೇಲೆ ಸಾಕಾರವಿಡಿದು ಮಂತ್ರಾಹ್ವಾನಗಳಿಂದ ಅಷ್ಟವಿಧಾರ್ಚನೆ, ಷೋಡಶೋಪಚಾರಗಳಲ್ಲಿ ವ್ಯಾಪಿಸಿಕೊಂಡಿಪ್ಪುದೀಗ ಇಷ್ಟಲಿಂಗ. ಆ ಇಷ್ಟಲಿಂಗಕ್ಕೆ ಆಶ್ರಯವಾಗಿ ಚತುರ್ದಶ ಇಂದ್ರಿಯಂಗಳಲ್ಲಿ ತನ್ಮುಖವಾಗಿ, ಸರ್ವೇಂದ್ರಿಯಂಗಳಿಗೆ ಚೈತನ್ಯವಾಗಿ ಪ್ರಾಣದಲ್ಲಿ ಪರಿಪೂರ್ಣವಾಗಿಪ್ಪುದೀಗ ಪ್ರಾಣಲಿಂಗ. ಆ ಪ್ರಾಣಲಿಂಗಕ್ಕೆ ಆದಿಯಾಗಿ ಭವಭ್ರಮೆಗಳು ನಷ್ಟವಾಗಿ ಅನುಭಾವದಲ್ಲಿ ಅನುವಾಗಿ ಭಾವ, ಸದ್ಭಾವ, ನಿರ್ಭಾವಂಗಳಲ್ಲಿ ಭರಿತವಾಗಿ, ಭಾವಬ್ರಹ್ಮವೆಂಬ ಭೇದವಿಲ್ಲದೆ ಸನ್ನಿಹಿತ ಭಾವದಿಂದ ಇಪ್ಪುದೀಗ ಭಾವಲಿಂಗ. ಇಂತೀ ಮೂರುಲಿಂಗದ ಮೂಲ, ಆರು ಲಿಂಗದ ಅಂತ್ಯವನೊಳಕೊಂಡು, ಮಾರ್ಗಕ್ರಿ. ನಿಷ್ಕ್ರಿಯೆವಾಗಿ ಧ್ಯಾನ ನಷ್ಟವಾಗಿ, ಮಂತ್ರಗೋಪ್ಯವಾಗಿ ಜ್ಞಾನಶೂನ್ಯವಾಗಿ, ಭಾವದಿಗಂಬರವಾಗಿ, ಘನಕ್ಕೆ ಘನವಾದ ಪರಬ್ರಹ್ಮವು ತಾನೇ ಸೌರಾಷ್ಟ್ರಸೋಮೇಶ್ವರಾ.

"ನಳಿನಾಸನದಲ್ಲಿ ಕುಳ್ಳಿರ್ದು, ಅತ್ತಿತ್ತ ಕಳವಳಿಸದೆ, ತುಳುಕುವ ಇಂದ್ರಿಯಂಗಳಂ ಬಂಧಿಸಿ ಇನ್ನುಳಿದ ಕರಣಂಗಳ ಬಲಿದು ಒಬ್ಬುಳಿಗೊಳಿಸಿ, ಉನ್ಮನಿಯ ಮಂಟಪದಲ್ಲಿ ನಿರಂತರ ಬೆಳಗುವ ಪ್ರಾಣಲಿಂಗದಲ್ಲಿ ಮನ ಪವನಾಗ್ನಿಗಳೊಂದಾಗೆ, ಸಾಸಿರ ಕಿರಣ ಸಹಿತವೊಡದು ಮೂಡಿದ ಪ್ರಭಾಕರನಂತೆ, ಮಹಾ ಬೆಳಗಿನ ಪ್ರಭಾಮಂಟಪದಿಂದೆ ಥಳಥಳಿಸಿ ಬೆಳಗುವ ಪ್ರಾಣಲಿಂಗವನ್ನು ಕಂಗಳ ತುಂಬ ನೋಡಿ, ಮನ ತುಂಬಿ

ಸಂತೋಷಿಸಿ, ಸರ್ವಾಂಗ ಗುಡಿಕಟ್ಟಿ ಪರಮಪರಿಣಾಮವೇ ತಲೆದೋರಿ ಮಹಾಪರಿಣಾಮದೊಳಗೋಲಾಡ ಬಲ್ಲುದೇ ಪ್ರಾಣಲಿಂಗ ಸಂಬಂಧ ನೋಡಾ ಅಖಂಡೇಶ್ವರಾ. "

ಎಷ್ಟೋ ಮುನಸಿಪಾಲ್ಟಿ ಮತ್ತು ಪಂಚಾಯತಿ ಕಮೀಟಿ ಇದ್ದ ಗ್ರಾಮಗಳಲ್ಲಿ ಇಲೆಕ್ಟ್ರಿಕ್ ದೀಪದ ವ್ಯವಸ್ಥೆಯು ಇರುವದಿಲ್ಲ. ಅಂಥ ಊರುಗಳ ಪ್ರತಿಯೊಂದು ಕುಣಿಯಲ್ಲಿ ಕಂದೀಲಿನ ಕಂಬಗಳನ್ನು ನಡಿಸಿ, ಆ ಕಂದೀಲಿನಲ್ಲಿ ಸಣ್ಣ ಲ್ಯಾಂಪವನ್ನಿಟ್ಟಿರುತ್ತಾರಷ್ಟೇ; ಸಣ್ಣ ಲ್ಯಾಂಪಿನ ಗ್ಲಾಸಿನ ಮಧ್ಯದಲ್ಲಿ ಬರ್ನರ, ಬತ್ತಿ ಎಣ್ಣೆಗಳ ಸಹಾಯದಿಂದ ದೀಪವು ಉರಿಯುತ್ತಿದ್ದು, ಆ ದೀಪದ ಪ್ರಕಾಶವು ಸಣ್ಣ ಲ್ಯಾಂಪಿನ ಗ್ಲಾಸಿನ ಅವಕಾಶದಲ್ಲಿಯೂ, ಅದೇ ಪ್ರಕಾಶವು ಸಣ್ಣ ಲ್ಯಾಂಪಿನ ಗ್ಲಾಸ ಕನ್ನಡಿಯಿಂದ ಹೊರಬಿದ್ದು ಕಂದೀಲಿನ ಒಳಮಗ್ಗಲು ಹಾಗು ಸಣ್ಣ ಲ್ಯಾಂಪದ ಹೊರಮಗ್ಗಲು ಇರುವ ಅವಕಾಶವನ್ನು ವ್ಯಾಪಿಸಿ ಕಂದೀಲಿನ ಕನ್ನಡಿಗಳೊಳಗಿಂದ ಕಿರಣಗಳು ಹೊರಬಿದ್ದು, ಸುತ್ತಲಿರುವ ಎಲ್ಲ ಪ್ರದೇಶವನ್ನು ವ್ಯಾಪಿಸುತ್ತವೆ. ಈ ಕಂದೀಲಿನ ಬೆಳಕಿನಿಂದ ಹೊರಗಿನ ಪ್ರದೇಶವು ರಾತ್ರಿಯಲ್ಲಿ ಬೆಳಗುತ್ತದೆ. ಇದರಂತೆ ತನ್ನ ಶಿಷ್ಯನಲ್ಲಿರುವ ಬಿಂದುಸ್ವರೂಪವಾದ ಇಷ್ಟಲಿಂಗವನ್ನು ಕಲೆ, ಭಾವ, ಮನ ದೃಷ್ಟಿಗಳ ಮಾರ್ಗದಿಂದ ಬಹಿಷ್ಕರಿಸಿ ಶಿಷ್ಯನ ಕರಕಮಲದಲ್ಲಿ ಗುರುವು ಇಟ್ಟಿರುವನು. ಆ ಶಿಷ್ಯನು ಇಷ್ಟಲಿಂಗದ ದೃಷ್ಟಿಯಿಂದಲೂ ಭಕ್ತಿಭಾವದಿಂದಲೂ ಲಿಂಗ ಪೂಜಾ ಸಮಯದಲ್ಲಿ ನೋಡಿ ನೋಡಿ ನೋಟವೇ ಕೂಟವಾಗಿ, ಆ ಲಿಂಗ ರೂಪದ ಚಿತ್ ಕಲೆಯು ದೃಷ್ಟಿಯಿಂದ ಮನದಲ್ಲಿ ಕೂಟವಾಗಿ ಅಚ್ಚೊತ್ತಿದಂತಾದ್ದೇ ಪ್ರಾಣಲಿಂಗವು. ಮೇಲೆ ಹೇಳಿದ ಕಂದಿಲಿನ ಕನ್ನಡಿಗಳಿಗೆಲ್ಲ ಹೊರಮಗ್ಗಲು ದಪ್ಪಾದ ದಪ್ಪಾದ ಕಾಡಿಗೆಯಂಥ ಪದಾರ್ಥವನ್ನು ಸವರಿದರೆ ಕಂದೀಲಿನ ಪ್ರಕಾಶವು ಹೊರಗೆ ಬಾರದೆ ಸಣ್ಣ ಲ್ಯಾಂಪಿಗೂ ಕಂದೀಲಿನ ಕನ್ನಡಿಗೂ ನಡುವಿರುವ ಅವಕಾಶವನ್ನು ಮಾತ್ರ ಬೆಳಗುವದು. ಆಗ ಶಿವಪೂಜೆಗೆ ಭಕ್ತನ ಚಿತ್ ಪ್ರಕಾಶವು ಇಷ್ಟಲಿಂಗವನು ಅನುಮಿಷ ದೃಷ್ಟಿಯಿಂದ ನೋಡುತ್ತಿದ್ದರೂ ಆತನ ಮನ ಪ್ರಾಣಗಳು ಒಂದಾಗಿ ಪ್ರಾಣವೇ ಪ್ರಾಣಲಿಂಗವಾಗಿ ಒಳಗೂ ಹೊರಗೂ ಬೆಳಗುವವು. ಆಗ ಚಿತ್‌ಕರಣಗಳು ಬಹಿರಂಗದ ಬೆಳಗನ್ನು ತಿಳಿಯಲಾರವು. ನೇತ್ರೇಂದ್ರಿಯವು ಬಹಿರ್ಮುಖವಾಗದು. ಇದುವೇ ಇಷ್ಟಲಿಂಗದೊಳಗಿನ ಪ್ರಾಣಲಿಂಗದ ಪೂಜೆಯು. ಈ ಸ್ಥಿತಿ

ಯಲ್ಲಿ ಶಿವಯೋಗವೂ ಶಿವಯೋಗ ಸಮಾಧಿಯೂ ಅಂಗ ಲಿಂಗಗಳ ಏಕಾಗ್ರತೆಯೂ ನಿಜಲಿಂಗ ಸ್ಥಿತಿಯೂ ಉಂಟಾಗುವದು. ಇದುವೇ ಪ್ರಾಣಲಿಂಗ ಪೂಜೆಯು. ಇದುವೇ ಚಿತ್‌ಕಲಾ ಸ್ವರೂಪವು. ಇಂಥ ಸ್ಥಿತಿಯನು ಅನುಭವಿಸಿದ ಮಹಾತ್ಮರು. ತಮ್ಮ ಅನುಭವದ ಅನುವನ್ನು ಹೇಗೆ ತೋರ್ಪಡಿಸಿದ್ದಾರೆಂಬ ವಚನಗಳ ನಿಚಯದ ಕಡೆಗೆ ಹೊರಳುವಾ.

॥ಪದ॥ "ಬೆರೆಯಬಾರದೆ ತಿಳಿದು ಬೆರೆಯಬಾರದೆ। ಮರೆದು ಬಾಹ್ಯ ವನ್ನು ತನ್ನಖಂಡ ತೇಜದೊಡನೆ ॥ಪಲ್ಲವಿ॥

ತಿಳಿವೆನಿಸುವ ಸುರಭಿಗೂಡಿ ನಳನಳಿಸುವ ವಿಕಚ ಹೃದಯ। ನಳಿನದ ಮಲ ಕರ್ಣಿಕೆಯೊಳು ಬೆಳಗುವಿಷ್ಟಲಿಂಗದೊಡನೆ ॥೧॥

ಪರಿವ ಗಂಗೆ ಯಮುನೆಯೆರಡು ಬೆರೆದ ಸಂಗಮಸ್ಥಳದೊಳಿರುವ ಗಗನ ಗಿರಿಯ ತುದಿಯೊಳುರಿವ ಪ್ರಾಣಲಿಂಗದೊಡನೆ ॥೨॥

"ಕೈಯಲ್ಲಿ ಕುಂತು ಹಿಡಿದು, ಕಣ್ಣಿನಲ್ಲಿ ನೋಡಿ, ಆತ್ಮನಲ್ಲಿ ಅರಿದು ತನ್ನ ತಾನೆ ತಿಳಿದು ಕೈಯ್ಯಲಿದ್ದುದೇನು ? ಕಣ್ಣಿನಲ್ಲಿ ನೋಡಿದುದೇನು ? ಆತ್ಮದಲ್ಲಿ ಅರಿದುದೇನು ? ಇಂತೀ ತ್ರಿವಿಧ ಗುಣವ ತಿಳಿಯಬೇಕಣ್ಣಾ. ಕೈಯ್ಯಲಿದ್ದುದು ಕಡಹ ಲಿಂಗವೋ ? ಕಣ್ಣಿನಲ್ಲಿ ನೋಡಿದುದು ಬಣ್ಣದ ಲಿಂಗವೋ ? ಆತ್ಮನಲ್ಲಿ ಅರಿದುದು ಬಯಲ ಲಿಂಗವೋ ? ಕೈಗೂ ಕಣ್ಣಿಗೂ ಭಿನ್ನವಾಯಿತ್ತು. ಲಿಂಗಪ್ರಾಣಿ, ಪ್ರಾಣಲಿಂಗಿಗಳ ಇನ್ನಾರನೂ ಕಾಣೆ. ಭಾವಿಸಲಿಲ್ಲ ಭ್ರಮೆಗೊಳಗಾಯಿತ್ತು. ಆದಿಯ ಶರಣರೆಲ್ಲಾ ಹೋದರಲ್ಲಾ ಹೊಲಬುಗೆಟ್ಟು. ನಾದಕ್ಕೊಳಗಾಯಿತ್ತು ಆತ್ಮನ ಕಳೆಯ ನೆಳ್ದುದರಿನ್ನಾರನೂ ಕಾಣೆ. ಕಳಾತೀತ ಪರಂಜ್ಯೋತಿ ಪ್ರಕಾಶ ನೀನೇ ನಿಷ್ಕಳಂಕ ಮಲ್ಲಿಕಾರ್ಜುನಾ.

ಅರ್ಥ:— ಹಸ್ತದೊಳು ಇಷ್ಟಲಿಂಗವನು ಕುರುಹಿಟ್ಟು ಪಿಡಿದು ಸುಜ್ಞಾನ ದೃಷ್ಟಿಯಲ್ಲಿ ಪ್ರಾಣಲಿಂಗವ ನಿರೀಕ್ಷಿಸಿ, ಆತ್ಮನಲ್ಲಿ ಭಾವಲಿಂಗದ ಸಂಬಂಧವನು ತಿಳಿದು, ತಮ್ಮ ಜ್ಞಾನದಿಂದ ತಾವೇ ಅರಿದು, ನಾವು ತ್ರಿವಿಧಲಿಂಗ ಸಂಬಂಧಿಗಳೆಂದು ಹೇಳುತ್ತಿಹರು. ಕೈಯ್ಯಲ್ಲಿರುವದು ಇಷ್ಟ ಲಿಂಗವೆಂದು, ಜ್ಞಾನದೃಷ್ಟಿಯಿಂದ ನೋಡಿದುದು ಪ್ರಾಣಲಿಂಗವೆಂದು ಆತ್ಮನಲ್ಲಿ ತಿಳಿದುದು ಭಾವಲಿಂಗವೆಂದು, ಈ ತ್ರಿವಿಧ ಲಿಂಗ ಒಂದೇ ಎಂಬ

ಸಮರಸಭಾವನರಿಯಬೇಕು. ಎಲೇ ಹಿರಿಯರುಗಳಿರಾ ! ಕೈಯಲ್ಲಿರು ವದು ಪಂಚ ಸೂತ್ರ ಪ್ರಮಾಣದಿಂದ ಕಟೆದು, ತಿದ್ದಿ ತೀರ್ಚಿ ಒಪ್ಪ ವಿಟ್ಟುದು ಲಿಂಗವೆಂದಲ್ಲಿ ಅಹುದು ಎಂಬರು. ಸುಜ್ಞಾನ ದೃಷ್ಟಿಯಲಿ ನಿರೀಕ್ಷಿಸಿದುದು ಸಕಾರ ನಿರಾಕಾರದೊಡನೆ ಕೂಡಿದ ಮಂತ್ರಮೂರ್ತಿ ಯಾದ ಪ್ರಾಣಲಿಂಗವು ಎಂದಲ್ಲಿ ಅಹುದು ಎಂಬರು. ಆತ್ಮನಿಂದ ತಿಳಿ ದಂಥ ನಿರಾಕಾರವಾದುದು ಭಾವಲಿಂಗವೆಂಬಲ್ಲಿ ಅಹುದು ಎಂಬರು. ಕೈಯ ಲ್ಲಿಪ್ಪ ಇಷ್ಟಲಿಂಗಕ್ಕೂ ಸುಜ್ಞಾನದಿಂದ ನೋಡಿದ ಪ್ರಾಣಲಿಂಗಕ್ಕೂ ಆತ್ಮ ನಲ್ಲಿ ತಿಳಿದ ಭಾವಲಿಂಗಕ್ಕೂ ಬೇರಾಯಿತ್ತು. ಪ್ರಾಣಲಿಂಗದಲ್ಲಿ ಪ್ರಾಣವು ಕೂಡಿ ಪ್ರಾಣ, ಪ್ರಾಣಲಿಂಗ ಸಮರಸವುಳ್ಳವರ ಒಬ್ಬರನೂ ಕಾಣೆನು. ತ್ರಿವಿಧ ಲಿಂಗವು ಒಂದೇ ಎಂಬ ಸಮರಸ ಭಾವದಿಂದ ಭಾವಿಸಲಿಲ್ಲ. ಭಿನ್ನಭಾವಿಗಳು ಭಿನ್ನಭಾವ ಭ್ರಾಂತಿಗೆ ಈಡಾದರು. ಜ್ಞಾನಿಗಳೆನಿಸಿ ಕೊಂಬ ಶರಣರೆಲ್ಲರು ಸತ್ಪಥ ಮಾರ್ಗಕ್ಕೆ ವಿಲಕ್ಷಣರಾಗಿ ಭಿನ್ನಭಾವಿಗ ಳಾಗಿ ಹೋದರಲ್ಲಾ ? ಇವರೆಲ್ಲರು ಪ್ರಾಣನ ಪ್ರಪಂಚಿಗೆ ಒಳಗಾದರು. ಆತ್ಮನಲ್ಲಿ ಬೆಳಗುವ ಮಹಾಲಿಂಗವೇ ಇಷ್ಟ ಪ್ರಾಣ ಭಾವಲಿಂಗವಾಗಿಪ್ಪ ದೆಂದರಿದು ತ್ರಿವಿಧ ಭಕ್ತಿವಿಡಿದು ಆಚರಿಸಿ ಮಹಾಲಿಂಗದಲ್ಲಿ ಕೂಡುವ ರೊಬ್ಬರನೂ ಕಾಣೆ. ಪರಂಜ್ಯೋತಿ ಪ್ರಕಾಶವನುಳ್ಳ ಮಹಾಲಿಂಗವೇ ನೀನು ಪ್ರಾಣನ ವರ್ತನೆಯಿಲ್ಲದ ಚಿತ್ಪ್ರಾಣನಲ್ಲಿ ಪ್ರಾಣಲಿಂಗವಾಗಿಪ್ಪೆ. ದೇಹದ ವರ್ತನೆಯಿಲ್ಲದ ಆಚಾರಲಿಂಗದಲ್ಲಿ ಇಷ್ಟಲಿಂಗವಾಗಿಪ್ಪೆ. ಆತ್ಮನ ವರ್ತನೆ ಇಲ್ಲದ ಚಿದಾತ್ಮನಲ್ಲಿ ಭಾವಲಿಂಗವಾಗಿಪ್ಪೆ ಎಂದರಿದು ಆಚರಿ ಸುತ್ತಿರ್ದನೆಂಬರ್ಥ.

" ಉದಗದ ಬಾವಿಯಲ್ಲಿ ಒಂದು ರಸದ ಗರಿ ಹುಟ್ಟಿ 'ಹೊಸ ಮಾಣಿಕ್ಯವ ನುಂಗಿತ್ತು ಕಂಡೆ. ನುಂಗುವಾಗ ಒಂದು, ಗುಟುಕಿಸುವಾಗ ಎರಡು, ಸ್ವಸ್ಥಾನದಲ್ಲಿ ನಿಂದಾಗ ಮೂರು ಅಂತರಂಗವ ತಿಳಿದು ಕಳೆಯ ಬಲ್ಲಡೆ, ನಿಷ್ಕಳಂಕ ಮಲ್ಲಿಕಾರ್ಜುನ ಲಿಂಗವ ಬಲ್ಲವ."

ಅರ್ಥ:- ಚಿತ್ತದ ಭಾವದಲ್ಲಿ ಒಂದು ಶಿವಾಪೇಕ್ಷೆಯೆಂಬ ಅದ್ರಿ ಯುಂಟಾಗಿ ನೂತನವಾದ ಮಹಾ ಪ್ರಕಾಶವನುಳ್ಳ ಮಹಾಲಿಂಗವನೇ ತ್ರಿವಿಧಾಂಗದಲ್ಲಿ ತ್ರಿವಿಧ ಲಿಂಗವಾಗಿ ಗ್ರಹಿಸಿಕೊಂಡಿಪ್ಪನು. ದೀಕ್ಷಾ ತ್ರಯಂಗಳಲ್ಲಿ ಗ್ರಹಿಸುವಾಗ ಒಂದನೆಯದಾದ ಇಷ್ಟಲಿಂಗವು ಅಂಗದಲ್ಲಿ

ಸಂಬಂಧವಾಗಿಪ್ಪುದು. ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ಮಾಡಿ ಜ್ಞಾನದಿಂದ ಗ್ರಹಿಸುವಾಗ ಎರಡನೇದಾದ ಪ್ರಾಣಲಿಂಗವು ಮನದಲ್ಲಿ ಸಂಬಂಧವಾಗಿಪ್ಪುದು. ನಿರ್ಗುಣ ಪೂಜಾ ಕ್ರಿಯೆಗಳನ್ನು ಕೈಕೊಂಡು ಆತ್ಮನಲ್ಲಿ ನೆಲೆಗೊಂಬಾಗ ಮೂರನೇದಾದ ಭಾವಲಿಂಗವಾಗಿ ಸಂಬಂಧ ವಾಗಿರ್ಪುದು. ತ್ರಿವಿಧ ಲಿಂಗದ ಸಂಬಂಧದ ಒಪ್ಪವನರಿದು, ತನುತ್ರಯಂಗಳ ವರ್ತನೆಯು ನಷ್ಟವ ಮಾಡಬಲ್ಲೊಡೆ ತ್ರಿವಿಧಲಿಂಗವನೊಳಕೊಂಡು ತೋರುವ ಮಹಾಲಿಂಗವೇ ತಾನೆಂದು ತಿಳಿಯಬಲ್ಲನೆಂಬರ್ಥ.

ಇಂತು ತ್ರಿವಿಧಾಂಗವ ವ್ಯಾಪಿಸಿದ ತ್ರಿವಿಧ ಲಿಂಗಗಳ ಇರವು ಅರಿವು ಗಳುಳ್ಳವರಾಗಿ ಅವುಗಳೊಳು ಬೆರದು ತ್ರಿಲಿಂಗಗಳೊಂದಾದ ಮಹಾಲಿಂಗವೇ ತಾನಾದ ಶಿವಶರಣನ ಇರವು.

"ಕರಸ್ಥಲದ ಜ್ಯೋತಿಯದು, ಕರುವಿಟ್ಟಿರಕವದು, ಅದರ ನೆಲೆಯ ತಿಳಿ ದರೆ ನಿಜಾನಂದವಿದು. ಹೊಲಬದೋರದಿಹ ನಿಸ್ಸೀಮನ ಹೊಲಬನರಿದು ಕೂಡಿದಾತನೇ ಮೃಡನು ಕಾಣಾ ರಾಮನಾಥಾ" ಎಂಬಂತೆ ಮೃಡನಾದ ಮೈಲಾರಲಿಂಗ ಶ್ರೀ ಬಸವಲಿಂಗ ಶಿವಯೋಗಿಯು ಇಷ್ಟಲಿಂಗವನ್ನು ನಿಷ್ಠೆ ಯಿಂದ ಪೂಜಿಸಿ, ಇಷ್ಟದೊಳು ಪ್ರಾಣಲಿಂಗ ಭಾವಲಿಂಗಗಳ ಇರವನ್ನು ಸ್ಪಷ್ಟಗೊಳಿಸಿದ ತ್ರಿಪದಿಗಳನ್ನು ತ್ರಿಕರಣಪೂರ್ವಕವಾಗಿ ಅರಿತು ಆನಂದಿ ಸಲೆಂದು ಅವುಗಳನ್ನಷ್ಟು ಶಿವಾನುಭಾವಿಗಳ ಮುಂದೃಷ್ಟಿಯೊಳು ಮೂಡಿಸುವೆ.

ತನುವಿಷ್ಟಲಿಂಗವು । ಮನ ಪ್ರಾಣಲಿಂಗವಾ। ತ್ಮನೆ ಭಾವಲಿಂಗ ॥
ದನುವ ಬೋಧಿಸಿದ ಚಿದ್ಘನ ಗುರುವೆ ಕೃಪೆಯಾಗು ॥೧॥

ರೂಪಕವೆ ಇಷ್ಟ ಚಿ। ದ್ರೂಪಕವೆ ಪ್ರಾಣ ನಿ। ರ್ಲೇಪಕವೆ ಭಾವ॥
ವ್ಯಾಪಕ ತ್ರೈಲಿಂಗವ ನಿ। ರೂಪಿಸಿದ ಗುರುವೆ ಕೃಪೆಯಾಗು ॥೨॥

ತೋರ ತನು ಇಷ್ಟ ಗಂ। ಭೀರ ತನು ಪ್ರಾಣ ಸ। ತ್ಕಾರಣ ತನು ಭಾವ॥
ಧೀರ ತ್ರೈವಿಧ ಲಿಂಗ । ಪೂರೈಸಿದ ಗುರುವೆ ಕೃಪೆಯಾಗು ॥೩॥

ಮನವಿಷ್ಟಲಿಂಗ ಸ। ನ್ಮನ ಪ್ರಾಣಲಿಂಗವು । ನ್ಮನ ಭಾವಲಿಂಗ ॥
ಮನತ್ರಯ ಲಿಂಗವ ನೀನೆನ।ಗನುಗೊಳಿಸಿದ ಗುರುವೇ ಕೃಪೆಯಾಗು ॥೪॥

ಆತ್ಮನೆ ಯಿಷ್ಟಂತ । ರಾತ್ಮನೆ ಪ್ರಾಣ ಪರ । ಮಾತ್ಮನೆ ಭಾವ ।।
ಸ್ವಾತ್ಮ ತ್ರಿಲಿಂಗವ ಬೋ । ಧಾತ್ಮ ಶ್ರೀ ಗುರುವೆ ಕೃಪೆಯಾಗು ।।೫।।

ಲಿಂಗವೆ ಇಷ್ಟಂತ । ರಂಗವೆ ಪ್ರಾಣೋತ್ತ । ಮಾಂಗವೇ ಭಾವ ।।
ಲಿಂಗ ತ್ರೈವಿಧವ ನೀ। ಕಂಗೊಳಿಸಿದ ಗುರುವೇ ಕೃಪೆಯಾಗು ।।೬।।

ಜೀವ ವಿಶ್ವನು ಇಷ್ಟ । ಜೀವ ತೈಜಸ ಪ್ರಾಣ । ಜೀವನೆ ಪ್ರಾಜ್ಞ ।।
ಭಾವವಿದೆಂದ । ದೇವ ಶ್ರೀ ಗುರುವೇ ಕೃಪೆಯಾಗು ।।೭।।

ಭಾವವೆ ಯಿಷ್ಟಾನು । ಭಾವವೇ ಪ್ರಾಣ ನಿ। ರ್ಭಾವವೇ ತೃಪ್ತಿ ।।
ಭಾವ ತ್ರೈಲಿಂಗವ ನೀ । ನಾವರಿಸಿದ ಗುರುವೇ ಕೃಪೆಯಾಗು ।।೮।।

ಅಡಿಯಿಷ್ಟಲಿಂಗ ಕೇ । ಳ್ನಡು ಪ್ರಾಣಲಿಂಗ ಮೇ। ಲ್ಮುಡಿ ಭಾವಲಿಂಗ।।
ವಿಡಿದು ತ್ರೈವಿಧ ಲಿಂಗ ನಿ। ನ್ನೊಡಲೆಂದ ಗುರುವೇ ಕೃಪೆಯಾಗು ।।೯।।

ಅಂಗವೆ ಇಷ್ಟ ಪ್ರ। ತ್ಯಂಗವೆ ಪ್ರಾಣವು । ಪಾಂಗವೇ ಭಾವ ।।
ಲಿಂಗ ತ್ರೈವಿಧವಪ್ಪ । ಸಂಗಿಸಿದ ಗುರುವೇ ಕೃಪೆಯಾಗು ।।೧೦।।

ಎಡದಿಷ್ಟ ಲಿಂಗ ಬಲ । ಗಡೆ ಪ್ರಾಣಲಿಂಗ ನಡು । ವೆಡೆ ಭಾವಲಿಂಗ।।
ದೊಡಲೆಂದು ಪೇಳ್ದ ಯೆ।ನ್ನೊಡೆಯ ಶ್ರೀ ಗುರುವೇ ಕೃಪೆಯಾಗು।।೧೧।।

ಕಯ್ಮ ಅಭಿಮಾನವೆ ಯಿಷ್ಟ। ಬಾಯ ವಚನವೆ ಪ್ರಾಣ । ಮಿಯ್ಯುಗವೆ ಭಾವಲಿಂ ।
ಗಯ್ಯನೆಂದೊರೆದ ಮು। ತ್ತಯ್ಯ ಶ್ರೀ ಗುರುವೇ ಕೃಪೆಯಾಗು ।।೧೨।।

ನಡೆಯಿಷ್ಟಲಿಂಗ । ಮಾನ್ನುಡಿ ಪ್ರಾಣಲಿಂಗ ನಡೆ। ನುಡಿಗಳೊಂದಾ।।
ದಡೆ ಭಾವಲಿಂಗವೆಂ । ದೊಡನುಸುರ್ದ ಗುರುವೇ ಕೃಪೆಯಾಗು ।।೧೩।।

ನಿಲುವು ನಿಂತುದು ಇಷ್ಟ।ಕುಳಿತುಕೊಂಡುದೆ ಪ್ರಾಣ।ಮಲಗಿಕೊಂಡಿಹದೆ।
ಸಲೆ ಬಾವ ಲಿಂಗವೆಂ। ದುಲಿದ ಶ್ರೀ ಗುರುವೆ ಕೃಪೆಯಾಗು ।।೧೪।

ತನುವಿನ ಜಾಗ್ರವೆ ಇಷ್ಟ! ಕನಸು ಕಾಂಬುದೆ ಪ್ರಾಣ। ತನುಮನ ಸುಷುಪ್ತಿ।
ಘನ ಭಾವಲಿಂಗವೆಂ । ದನುಪಮ ಗುರುವೇ ಕೃಪೆಯಾಗು ।।೧೫।।

"ವಾಗ್ಬ್ರಹ್ಮಿಗಳೆಲ್ಲರು ಪಡುವ ಪಾಟವ ನೋಡಿ ನಮ್ಮ ಭಕ್ತರು ತ್ಯಾಗಾಂಗದಲ್ಲಿ ಇಷ್ಟ ಪ್ರಾಣ ಭಾವಕ್ಕೆ ಬಾಹ್ಯ ಪದಾರ್ಥರೂಪವ ಈ ಕ್ಷಣ ಜ್ಞಾನ ಸ್ಪರ್ಶನದಿಂದ ಅರ್ಪಿಸಿ ದೇಹಪ್ರಸಾದಿಯಾಗಿ, ಚರಶೇಷದಲ್ಲಿ ಇಷ್ಟಲಿಂಗ ಪೂಜಕರಾಗಿ ಅನಿಷ್ಟವ ಪರಿಹರಿಸಿದರು. ಭೋಗಾಂಗದಲ್ಲಿ ಇಷ್ಟ ಪ್ರಾಣ ಭಾವಲಿಂಗಕ್ಕೆ ದೇಹ ಪದಾರ್ಥ ರೂಪವ ರೂಪು ರುಚಿ ತೃಪ್ತಿಯಿಂದ ಅರ್ಪಿಸಿ ಪ್ರಾಣ ಪ್ರಸಾದಿಯಾಗಿ, ಲಿಂಗಶೇಷದಲ್ಲಿ ಪ್ರಾಣಲಿಂಗ ನೈಷ್ಠಿಕರಾಗಿ, ವಾಯುಗುಣ ವಿಕಾರವ ಕೆಡಿಸಿದರು. ಯೋಗಾಂಗದಲ್ಲಿ ಇಷ್ಟ ಪ್ರಾಣ ಭಾವಕ್ಕೆ ವಾಯು ಪದಾರ್ಥ ರೂಪವ ಸ್ಥೂಲ ಸೂಕ್ಷ್ಮ ಕಾರಣದಿಂದ ಅರ್ಪಿಸಿ ಮಹಾ ಪ್ರಸಾದಿಯಾಗಿ ಗುರುಶೇಷದಲ್ಲಿ ಮನೋಗುಣ ವಿಕಾರವ ಪರಿಹರಿಸಿದರು ಗುಹೇಶ್ವರ ಲಿಂಗದಲ್ಲಿ."

ಈ ಪ್ರಕಾರ ಇಷ್ಟ ಪ್ರಾಣಲಿಂಗಗಳ ಮಹತ್ವ ಮನದಂದು ಇವುಗಳ ಕ್ರಿಯಾಚರಣೆಗಳಿಂದುಂಟಾದ ಸೌಲಭ್ಯವನ್ನು ಶ್ರೀ ಪ್ರಭುದೇವರು ನುಡಿದ ಕಡೆನುಡಿಯ ಆಲಿಸಿ, ನಡೆನುಡಿಗಳೊಂದು ಮಾಡುವದು ಪ್ರತಿಯೊಬ್ಬ ಕ್ರಿಯಸ್ಥನ ಕರ್ತವ್ಯವೆಂದು ಭಾವಿಸುವೆ.

---

# ಭಕ್ತಿಯೋಗ

[ ಲೇಖಕರು:- ಶ್ರೀಯುತ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ. ]

ಈ ಹಿಂದೆ ಶಿವಾನುಭವದಲ್ಲಿ ಐದು ಲೇಖಗಳನ್ನು ಈ ಭಕ್ತಿಯೋಗ ಅಥವಾ ಭಕ್ತಸ್ಥಲದ ಬಗೆಗೆ ಪ್ರಕಟಿಸಲಾಗಿದೆ. ಭಗವಂತನ ಬಗ್ಗೆ ಬಹು ಅನನ್ಯವಾದ ಹೆಚ್ಚಿನ ಪ್ರೇಮವೇ ಭಕ್ತಿ ಎನಿಸುವದು. ಭಕ್ತನು ಪರಮಾತ್ಮನಿಗಾಗಿ ಸರ್ವ ಕರ್ಮ ಹಾಗೂ ಸರ್ವಸ್ವ ತ್ಯಾಗಮಾಡಿ ಕಡೆಗೆ ಪ್ರಸಂಗ ಬಂದರೆ ಸ್ವತ್ಯಾಗ ಸಹ ಮಾಡಿ ಅಂದರೆ ಸರ್ವಸಮರ್ಪಣ ಮಾಡಿ ಭಗವಂತನನ್ನು ನವವಿಧ ಭಕ್ತಿಯಿಂದ ಪಂಚ ಮಹಾ ಭಾವಗಳಿಂದ ಷೋಡಶೋಪಚಾರಗಳಿಂದ ಪೂಜಿಸಿ ತ್ರಿಕರಣಪೂರ್ವಕ ಅವನನ್ನು ಸದಾ ಪ್ರೀತಿಸುವದೇ ಹೆಚ್ಚಿನ ಭಕ್ತಿಯು ಲಕ್ಷಣವೆನಿಸಿದೆ. ಈ ಪ್ರಕಾರ ಪರಮಾತ್ಮನನ್ನು ನಾವು ಯಾಕೆ ಪ್ರೀತಿಸಿ ಭಕ್ತಿಯಿಂದ ಪೂಜಿಸಬೇಕೆಂಬ ಪ್ರಶ್ನೆಯು ಸ್ವಾಭಾವಿಕವಾಗಿ ಉದ್ಭವಿಸುವದು. ಅದೇ ವಿಷಯವನ್ನು ಈ ಲೇಖದಲ್ಲಿ ವಿವರಿಸುವೆನು.

ಈ ಲೋಕದಲ್ಲಿ ಎರಡು ತರದ ಸುಖಗಳುಂಟು. ಒಂದನೇದು ಇಂದ್ರಿಯ ಅಥವಾ ವಿಷಯ ಸುಖ. ಎರಡನೇದು ಭಗವಂತನೇ ನಮ್ಮ ಗೊತ್ತುಗುರಿ. ದೇವರ ಹೊರತು ಈ ಲೋಕದಲ್ಲಿ ಯಾವದೂ ಶಾಶ್ವತದ ಹೆಚ್ಚಿನದಲ್ಲ. ಇದಕ್ಕೆ ಪಾರಮಾರ್ಥ ಸುಖ ಅಥವಾ ಇಂದ್ರಿಯಾತೀತ ಆತ್ಮಾನಂದ ಸುಖವೆನ್ನುವರು. ಕ್ರಮವಾಗಿ ಇವುಗಳಿಗೆ ಜನರು ಬೆನ್ನುಹತ್ತಿ, ಅವುಗಳಿಗೆ ಆಶೆ ಮಾಡಿ, ಅವುಗಳನ್ನು ಪಡೆಯಬೇಕೆಂದು ಪ್ರಭುವಿನನ್ನು ಪ್ರೀತಿಸುವರು. ಇಂದ್ರಿಯ ಸುಖವನ್ನು ಭಾರತೀಯರ ಹೊರತು ಉಳಿದೆಲ್ಲ ದೇಶದವರು ಹೆಚ್ಚಾಗಿ ಬಯಸುವದುಂಟು. ಇದಕ್ಕೆ ವಿರೋಧವಾಗಿ ನಮ್ಮವರು ಈ ಅಸ್ಥಿರವಾದ ಅಲ್ಪವಾದ ವಿಷಯಸುಖವನ್ನು ಕಡೆಗಣಿಸಿ ಆತ್ಮಾನಂದದ ಸುಖವನ್ನು ಅಂದರೆ ದೇವನನ್ನೇ ಹೆಚ್ಚಾಗಿ ಬಯಸುವರು. ಅದಕ್ಕಾಗಿ ಪರದೇಶದವರು ಶರೀರಕ್ಕೆ ಆತ್ಮವೆನ್ನುವರು. ಆದರೆ ಭಾರತೀಯರು ಆತ್ಮವಂದು ಬೇರೆ. ಅದಕ್ಕೊಂದು ಶರೀರವೆಂಬ ಕುದುರೆ ಇರುವದೆಂದು ನಂಬುವರು. ಅವರು ಈ ದೇಹೇಂದ್ರಿಯಗಳಿಗೆ ಮತ್ತು ಅವುಗಳ ಸುಖಗಳಿಗೆ

ಮಹತ್ವ ಕೊಟ್ಟಿದ್ದಾರೆ. ಆದರೆ ನಮ್ಮವರು ಆತ್ಮಕ್ಕೆ ಮಹತ್ವ ಕೊಟ್ಟು ಶರೀರ ಹಾಗೂ ಇಂದ್ರಿಯ ಸುಖಗಳನ್ನು ಕಡೆಗಣಿಸಿದ್ದಾರೆ. ಅವರು ಎಷ್ಟು ಇಂದ್ರಿಯ ಸುಖಗಳನ್ನು ಭೋಗಿಸುವರೋ ಅಷ್ಟು ಹೆಚ್ಚಿನವರೆಂದು ನಂಬು ವರು. ನಮ್ಮವರು ಎಷ್ಟು ಇಂದ್ರಿಯಸುಖಗಳನ್ನು ತ್ಯಾಗಮಾಡಿ ಆತ್ಮಾ ನಂದ ಪಡೆಯುವರೋ ಅಷ್ಟು ಹೆಚ್ಚಿನವರೆಂದು ನಂಬುವರು. ಅವರು ತಮ್ಮ ಸ್ವಂತ ಇಂದ್ರಿಯಗಳಿಂದ ಸುಖ ಪಡೆಯಬೇಕೆನ್ನುವರು. ನಮ್ಮ ವರು ಪರರ ಇಂದ್ರಿಯಗಳ ಮುಖಾಂತರ ಸುಖ ಪಡೆಯಬೇಕೆನ್ನುವರು. ಅವರು ಇಂದ್ರಿಯಗಳಿಂದಲೇ ಸುಖ ಹೊಂದುವರು. ನಮ್ಮವರು ಇಂದ್ರಿಯಗಳಿಲ್ಲದೆ ಸುಖಪಡಬೇಕೆನ್ನುವರು. ಅವರು ಪ್ರಾಣವನ್ನು ಬಿಟ್ಟನು, ಸತ್ತನು ಎನ್ನುವರು. ನಮ್ಮವರು ದೇಹ, ಶರೀರ, ಈ ವಸ್ತ್ರವನ್ನು ಬಿಟ್ಟು ಹೋದನೆಂದು ಅನ್ನುವರು. ಅವರು ಈ ತರದ ಶರೀರ ಸುಖ, ಇಂದ್ರಿಯ ಸುಖಗಳನ್ನು ಹೆಚ್ಚೆಚ್ಚಾಗಿ ಪಡೆಯಬೇಕೆಂದು ದೇವನನ್ನು ಪ್ರೀತಿಸುವರು. ಯಾಕಂದರೆ ಆ ಎಲ್ಲ ಇಂದ್ರಿಯ ಸುಖಗಳನ್ನ ಪರಮಾತ್ಮನ ಪ್ರೀತಿ ಭಕ್ತಿ ಮಾಡಿದರೆ ಅವನು ತಮಗೆ ಕೊಡುವನೆಂದು ನಂಬಿದ್ದಾರೆ. ನಮ್ಮವರು ಕ್ಷಣಿಕವಾದ ಇಂದ್ರಿಯ ಸುಖವನ್ನು ತೊರೆದು ದೇವನನ್ನೇ ಪಡೆದು ದೇವ ರಾಗಬೇಕೆಂದು ದೇವರಲ್ಲಿ ಅನನ್ಯವಾದ ನಿಷ್ಕಾಮವಾದ ಪರಭಕ್ತಿಯನ್ನು ಮಾಡುವರು. ಈ ಎರಡು ಕಾರಣಗಳ ಮೂಲಕ ಮಾನವನು ದೇವರನ್ನು ಭಕ್ತಿಯಿಂದ ಪೂಜಿಸುತ್ತಿರುವನು. ನಾವು ಇಂದ್ರಿಯ ಸುಖವನ್ನು ಅಥವಾ ಶರೀರ ಸುಖವನ್ನೇ ಒಯಸಿದರೆ ಮೂಢರಾಗುವೆವು. ಅನಾಗರಿಕರಾಗುವೆವು. ನಾವು ದೇವರ ಕಡೆಗೆ, ಪಾರಮಾರ್ಥ ಸುಖದ ಕಡೆಗೆ ಹೋದರೆ ನಮ್ಮ ಶಾರೀ ರಿಕ ಬಲವು ಸೂಕ್ಷ್ಮವಾಗುತ್ತ ಹೋಗಿ ದೈಹಿಕವಾಗಿ ನಾವು ನಿರ್ಬಲರಾ ಗುವೆವು. ಆದರೆ ದಿವ್ಯ ಭಕ್ತಿಮಾತ್ರ ಹೆಚ್ಚಾಗಿ ಜ್ಞಾನೋದಯವಾಗಿ ಅತೀವ ಸುಖಿಗಳಾಗುವೆವು. ಇಂಥವರನ್ನು ಶರೀರಬಲವುಳ್ಳ ಅನಾಗರೀಕ ಜನಾಂಗವು ಜಯಿಸಿ ಆಳುವದು ಹೆಚ್ಚು. ಇದೇ ರೀತಿ ನೀತಿಗಳು ನಮ್ಮ ಜೀವಿತದ ಉದ್ದೇಶಗಳಲ್ಲ. ಅವರಂತೆ ನಾವೂ ಮೂಢರಾಗಿ ಶರೀರಸುಖಕ್ಕೆ ಎಳಸಿ ದರೆ ಭಕ್ತರಾಗುವದು ಶಕ್ಯವಿಲ್ಲ. ಭಕ್ತರಾಗಬೇಕೆನ್ನುವವರು ಇದನ್ನು ದಾಟಿ ಮುಂದೆ ಹೋಗಬೇಕು. ದಿವ್ಯ ಭಕ್ತಿ ನಮ್ಮಲ್ಲಿ ವಿಶೇಷ ಬೆಳೆದರೆ ನಮ್ಮನ್ನು ಜಯಿಸುವವರು ಯಾರು ? ನಮ್ಮನ್ನು ಆಳುವವರು ಯಾರು ? ಇದೆಲ್ಲ

ಶರೀರದ ಮೇಲೆ ಇವರ ಆಟ ನಡೆಯಬಹುದು ಹೊರತು ಮನ, ಬುದ್ಧಿ, ಆತ್ಮಗಳ ಮೇಲೆ ಯಾರ ಸ್ವಾಮಿತ್ವವು ನಡೆಯಲಾರದು. ದಿವ್ಯ ಪರ ಭಕ್ತರು ಹೆಚ್ಚಾದರೆ ಅವರ ಇಷ್ಟದಂತೆ ಎಲ್ಲ ಮಹಾರಾಜರು ಕೂಡ ನಡೆಯ ಬೇಕಾಗುವದು. ಇಂಥವರ ಆಟವೇನೂ ಭಕ್ತರ ಮೇಲೆ ನಡೆಯುವದಿಲ್ಲ. ಹಿಂದಕ್ಕೆ ಇದರಂತೆ ಅನೇಕ ಚರಿತ್ರೆಗಳು ಆಗಿರುವವು. ಈಗ ಸಹ ಆಗಿ ರುವವು. ದೇವಭಕ್ತರೇ ಜನಾಂಗಕ್ಕೆ ರಾಷ್ಟ್ರಕ್ಕೆ ನಿಜವಾದ ಮಾರ್ಗದ ರ್ಶಕರಾಗಿ ಹೋಗಿದ್ದಾರೆ. ಈಗಲೂ ಇದ್ದಾರೆ. ವಿದ್ಯಾರಣ್ಯ, ಬಸವೇ ಶ್ವರ, ರಾಮದಾಸ, ವಶಿಷ್ಠ, ವಾಲ್ಮೀಕಿ, ಗಾಂಧಿ ಮೊದಲಾದವರು ಪರ ಭಕ್ತರಿದ್ದರೂ ರಾಜರಿಗೆ ರಾಜ್ಯಕ್ಕೆ ಆಧಾರಸ್ಥಂಬಗಳಿದ್ದರು. ಅದಕ್ಕೆ ನಾವು ಇಂದ್ರಿಯ ಸುಖಕ್ಕೆ ಎಳಸದೆ ದಿವ್ಯ ಪರ ಭಕ್ತರಾಗುವದೇ ಶ್ರೇಯಸ್ಕರವು. ಇಂದ್ರಿಯ ಸುಖದಲ್ಲಿ ಮುಳಿಗಿದವರೆಂದೂ ಭಕ್ತರಾಗಲಾರರು. ಇಂಥವರೆಂದೂ ಪರಮಾತ್ಮನನ್ನು ಎಂದೂ ಸರಿಯಾಗಿ ಪ್ರೀತಿಸಲಾರರು.

ಇದರಂತೆ ಸ್ವರ್ಗವನ್ನು ಬಯಸುವವರು ಹಣೆಯ ಬರಹವೂ ಕೂಡ ಇರುವದು. ಅಲ್ಲಿ ಅತಿ ಇಂದ್ರಿಯ ಸುಖವೇ ಇರುವದು ಹೊರತು ಹೆಚ್ಚಿನ ದೇನೂ ಇರುವದಿಲ್ಲ. ಇದರ ಸಲುವಾಗಿ ಇವರು ದೇವರನ್ನು ಪೂಜಿಸು ವರು. ದಾನ ಧರ್ಮ ಮೊದಲಾದ ಪುಣ್ಯಕೆಲಸಗಳನ್ನೇ ಸ್ವರ್ಗಕಾಶಿಸಿ ಮಾಡುವರು. ಇವರು ಕೂಡ ದೇವರ ನಿಜವಾದ ಭಕ್ತರಾಗಲಾರರು. ದೇವರ ಭಕ್ತನು ಸ್ವರ್ಗವನ್ನೇ ಬಯಸುವದಿಲ್ಲ. ಇದೆಲ್ಲ ಅವನಿಗೆ ಮಕ್ಕಳ ಆಟದಂತೆ ಆಗಿಬಿಡುವದು. ಭಕ್ತರಿಗೆ ಬೇಕಾದುದು ಬರೇ ದೇವರೊಂದೇ ಹೊರತು ಬೇರೆ ಏನನ್ನೂ ಬೇಡುವದಿಲ್ಲ. ದೇವರೇ ಮಾನವನು ಹೊಂದ ತಕ್ಕ ಅತ್ಯುತ್ತಮವಾದ ಗುರಿ. ಅವನ ಭಕ್ತಿಯಲ್ಲಿ ಬಹು ಆನಂದ ಸುಖ ಶಾಂತಿಯನ್ನು ಪಡೆಯುವೆವು. ಅವನ ದರ್ಶನ ಸ್ಪರ್ಶನ ಸಂಭಾಷಣೆ ಯಿಂದಂತೂ ಅಳತೆ ಮಾಪು ಲೆಕ್ಕಗಳಿರದಷ್ಟು ಆನಂದ, ಸುಖ, ಶಾಂತಿ ಗಳನ್ನು ಪಡೆಯುವದರಲ್ಲಿ ಏನೂ ಆಶ್ಚರ್ಯವೇ ಇಲ್ಲ. ದೇವರಿಗಿಂತ ಹೆಚ್ಚಿನದೇನೂ; ಜಗದಲ್ಲಿ ಇಲ್ಲ. ಯಾಕಂದರೆ ಅವನೇ ಪರಿಪೂರ್ಣನು; ಆನಂದಪೂರ್ಣನು; ಜ್ಞಾನಪೂರ್ಣನು; ಸುಖಪೂರ್ಣನು; ಶಾಂತಿಪೂರ್ಣನು. ಇವನೇ ಸತ್ಯ ಪೂರ್ಣ ಸನಾತನನು. ಸರ್ವಾಂತರ್ಯಾಮಿ ಆದ್ಯಂತ ರಹಿತನು. ಪೂರ್ಣ ಪ್ರಕಾಶಮಾನನು. ಏಕಮೇವಾ ದ್ವಿತಿಯನು.

ಇಂಥ ಪರಮಾತ್ಮನನ್ನು ಅನನ್ಯವಾದ ಭಕ್ತಿಯಿಂದ ಪ್ರೀತಿಸುವದೇ ಭಕ್ತಸ್ಥಲ ಅಥವಾ ಭಕ್ತಿಯೋಗವೆನ್ನುವರು. ವಿಷಯಗಳ ಮೇಲಿನ ಪ್ರೀತಿಗೆ ಎಂದೂ ಪ್ರೇಮವೆನ್ನಲಾಗದು. ವಿಷಯ ಇಂದ್ರಿಯಾಸಕ್ತಿ ಹೆಂಡರು ಮಕ್ಕಳ ಮೇಲೆ ಮಾಡುವ ಮಮತೆಗೆ ಪ್ರೇಮವೆಂದು ಬಹು ಜನರು ತಪ್ಪು ತಿಳಕೊಂಡಿದ್ದಾರೆ. ಇವುಗಳಿಗೆ ಪ್ರೇಮವೆಂದರೆ ಈಶ್ವರನ ನಿಂದೆ ಮಾಡಿದಂತೆ ಆಗುವದು. ದೇವರ ಮೇಲೆ ಮಾಡುವ ಪ್ರೇಮಕ್ಕೇ ಮಾತ್ರ ಪ್ರೇಮವೆನ್ನಬಹುದು. ಅದಕ್ಕಾಗಿಯೇ ಪ್ರೇಮವೇ ದೇವರು. ಆ ದೇವನೇ ಪ್ರೇಮವು, ಎಂದು ಗಾದೆಯಾಗಿದೆ.God is Love Love is Godಎಂದು ಇಂಗ್ಲೀಷದಲ್ಲಿ ಇರುವದು.God and Love are one and thesameಅದಕ್ಕೆ ವಸ್ತು ವಡವೆ ಇಂದ್ರಿಯ ಹೆಂಡರು ಮಕ್ಕಳು ಚಯನಿ ಚಟ ಕಾಮಿನಿಕಾಂಚನ ವಿಷಯ ಮೊದಲಾದವುಗಳ ಮೇಲೆ ಮಾಡುವ ಮಮತೆಗೆ ಪ್ರೇಮವೆಂದು ಅನ್ನಲಾಗದು. ಯಾಕಂದರೆ ಇವೆಲ್ಲ ಸ್ವಾರ್ಥದಿಂದ ತುಂಬಿಕೊಂಡಿವೆ. ಸ್ವಾರ್ಥದಲ್ಲಿ ಪ್ರೇಮವೆಂಬುದು ಇಲ್ಲ. ಅಲ್ಲದೆ ಅದು ಸಕಾಮವಾಗಿರುವದು. ಸಕಾಮವಾದರೆ ಪ್ರೇಮಕ್ಕೆ ಸ್ಥಾನವೇ ಇಲ್ಲ. ಅದರಂತೆ ಪರಮಾತ್ಮನೂ ಕೂಡ ನಿಷ್ಕಾಮನಿದ್ದಾನೆ. ಅದಕ್ಕಾಗಿ ಪ್ರೇಮ ಮತ್ತು ದೇವರಲ್ಲಿ ಭೇದವಿಲ್ಲೆಂದು ಹೇಳುವರು. ದೇವರಲ್ಲಿ ಇರುವ ಯಾವತ್ತೂ ಗುಣಗಳು ಕೂಡ ಪ್ರೇಮದಲ್ಲಿ ಇರುವವು. ಭಕ್ತನು ದೇವರ ಹೊರತು ಏನನ್ನೂ ಪ್ರೀತಿಸುವದಿಲ್ಲ. ಬೇಡುವದಿಲ್ಲ. ಬಯಸುವದಿಲ್ಲ. ಭಕ್ತಿ–ಪ್ರೇಮ–ದೇವ ಇವು ಒಂದೇ ಅರ್ಥದ ಒಂದೇ ಗುರಿಯ ಶಬ್ದಗಳು. ಇವುಗಳಿಂದಲೇ ಇಂದ್ರಿಯಾತೀತ ಸುಖ ಆನಂದಗಳನ್ನು ಪಡೆಯಲಿಕ್ಕೆ ಮಾತ್ರ ಬರುವದು. ಒಳ್ಳೇ ನಿಸ್ವಾರ್ಥವಾದುದೇ ಪ್ರೇಮವು. ಅದೇ ಭಕ್ತಿ, ಅದೇದೇವ; ಇದೇ ಶಾಶ್ವತವಾದ ಪ್ರೀತಿಯು. ಅಸ್ಥಿರವಾದ ಸತಿ, ಸುತ, ಬಂಧು, ತಾಯಿ, ತಂದೆ, ಗೆಳೆಯ, ನೆಂಟರು, ಇಷ್ಟರು ದೊದಲಾದವರು ಒಬ್ಬರಿಗೊಬ್ಬರು ಮಾಡುವ ಪ್ರೀತಿಯೂ ಕೂಡ ಅಸ್ಥಿರ, ಅಲ್ಪ ಅಶಾಶ್ವಿತವೇ ಇರುವದು. ಇದೆಲ್ಲ ಸ್ವಾರ್ಥದಿಂದ ಕೂಡಿರುವದು. ಇವರೆಲ್ಲರೂ ಒಬ್ಬರನ್ನೊಬ್ಬರು ಪ್ರೀತಿಸುವದು ಒಂದು ಆಶೆಗಾಗಿ. ಒಂದು ಲಾಭಕ್ಕಾಗಿ, ಒಂದು ಬಯಕೆಗಾಗಿ. ಇದು ಪೂರ್ತಿಯಾಗದಿದ್ದರೆ, ಆ ಮೊದಲಿನ ಪ್ರೀತಿ ಇಲ್ಲದಾಗುವದು. ಅದರ ಸ್ಥಾನದಲ್ಲಿ ದ್ವೇಷವು, ತಲೆದೋರುವದು ಇಂಥ ಸ್ವಾರ್ಥದಿಂದ ತುಂಬಿದ ಪ್ರೀತಿಗೆ ಪ್ರೇಮವೆಂದು ಅನ್ನುವದು ಶಕ್ಯವಿಲ್ಲ. ದೇವನ ಹೊರತು ನಮಗೆ ಪ್ರೇಮ ಮಾಡುವ ವಸ್ತು ಈ ಜಗ

ದಲ್ಲಿಯೇ ಇಲ್ಲ. ಸದ್ಗುರು, ದೇವ ಇವರೂ ಕೂಡ ಒಂದೇ ಸರಿ. ಭಕ್ತ ಜ್ಞಾನಿ ಶರಣ ಜೀವನ್ಮುಕ್ತರೆಲ್ಲರೂ ಕೂಡ ದೇವರೇ ಸರಿ. ಇವರನ್ನು ಪ್ರೀತಿಸುವದೂ ಕೂಡ ಪ್ರೇಮವೆನಿಸುವದು. ಇದೇ ನಿಜವಾದ ಭಕ್ತಿ ಎನಿಸುವದು. ಅದಕ್ಕೆ ಮೊದಲು ಹೇಳಿದಂತೆ ದೇವರ ಮೇಲಿನ ಅನನ್ಯ ವಾದ ಪ್ರೇಮವೇ ಭಕ್ತಿ ಎಂದು ಹೇಳಿದ್ದು ಈಗ ವಾಚಕರ ಗಮನಕ್ಕೆ ಬಂದಿರಲು ಸಾಕು. ನಾವು ಯಾರನ್ನೇ ಪ್ರೀತಿಸಲಿ, ಏನನ್ನೇ ಪ್ರೀತಿ ಸಲಿ, ಅದೆಲ್ಲ ಒಳ್ಳೇ ನಿಷ್ಕಾಮವಾದುದಾಗಿದ್ದರೆ ಒಳ್ಳೇ ಅನನ್ಯವಾಗಿ ದ್ದರೆ ಒಳ್ಳೇ ದಿವ್ಯವಾಗಿದ್ದರೆ ಅದೆಲ್ಲ ದೇವರ ಮೇಲೆ ಮಾಡುವ ದಿವ್ಯ ಪರಮ ಪರತರ ಭಕ್ತಿಯಾಗುವದು. ಈ ಪ್ರೀತಿ, ಐಹಿಕ ವಿಷಯ ರಹಿತ, ಇಂದ್ರಿಯ ಸುಖ ರಹಿತವಾಗಿದ್ದರೆ ಮಾತ್ರ ದೇವತ್ವ ಬರುವದು. ಪ್ರಾಪಂಚಿಕವಾದ ಪ್ರೀತಿಯಲ್ಲಿ ಬರೀ ಕಪಟತನದಿಂದ ಕೂಡಿರುತ್ತದೆ. ನಿರ್ವಿ ಷಯವಾದ ಪ್ರೀತಿಯು ಮಾತ್ರ ಸತ್ಯವಾದುದೂ ಕಾಪಟ್ಯರಹಿತವಾದುದೂ ಇರುತ್ತದೆ. ಇದಕ್ಕೆ ಭಕ್ತಿ ಎಂದು ಅನ್ನುವರು.

ಹೆಂಡತಿ ಗಂಡನನ್ನು ಪ್ರೀತಿಸುವಳು ಆದರೆ ಗಂಡನಿಗೆ ಬಹುದಿನ ರೋಗಹತ್ತಿ ಕುರೂಪಿಯಾದರೆ ತೀವ್ರ ಸಾಯಲೊಲ್ಲನೇಕೆ ಎಂದು ಸುಡಿ ಯುವಳು. ತಂದೆ ಮಗನನ್ನು ಪ್ರೀತಿಸುವನು ಏನಾದರೂ ಗಳಿಸಲಾರದಂತೆ ಆದರೆ ತೊರೆದುಬಿಡುವನು. ಅದರಂತೆ ಎಲ್ಲರ ಹಣೆಯುಬರಹವು ಸಹ ಇದ ರಂತೇ ಆಗುವದು. ಅದಕ್ಕೆ ಈ ಪ್ರೀತಿಗೆ ಪ್ರೇಮವೆಂದು ಅನ್ನಲಾಗದು. ಇದಕ್ಕೆ ಬಯಕೆ ವಾಸನಾ, ಆಶೆ, ಮಮತೆ, ಮೋಹ, ತಿಂಡಿ. ರತಿ, ಅನುರಕ್ತ, ಚಟ ಎಂದು ಅನ್ನುವರು. ಇವೆಲ್ಲ ಕ್ಷಣಭಂಗುರವಾದವುಗಳು. ಇಲ್ಲಿ ದೇವತ್ವವಿಲ್ಲ. ಇದೆಲ್ಲ ಪ್ರೇಮವಲ್ಲ. ದೇವರ ಮೇಲೆ ನಿಷ್ಕಾಮ ಪ್ರೀತಿ ಪಡೆಯುವದು ಬಹು ಕಷ್ಟದಾಯಕವಾಗಿರುವದು. ಈ ಕ್ಷಣಭಂ ಗುರವಾದ ವಿಷಯಸುಖಕ್ಕೆ ಬಲವಾದ ಪೆಟ್ಟುಬಿದ್ದರೆ ಆಗ ಮಾತ್ರ ದೇವನ ನೆನಪಾಗುವದು. ಯೌವ್ವನ ಧನಸಂಪತ್ತಿ, ಅಧಿಕಾರ, ಸತಿ, ಸುತ, ರೂಪ, ಆರೋಗ್ಯ ಮೊದಲಾದವುಗಳಿಂದ ಮಾನವನು ಸರಿಯಾಗಿ ಕೂಡಿ ಕೊಂಡಿದ್ದರೆ ದೇವರ ಬಗ್ಗೆ ಎಳ್ಳ ಮೊನೆಯಷ್ಟು ಕೂಡ ನೆನಪಾಗುವದಿಲ್ಲ. ಅದಕ್ಕಾಗಿ ಸಿರಿ ಸಂಪತ್ತುಗಳಿಂದ ಕೂಡಿದ ಮಾನವನಿಂದ ದೇವರು ಬಹು ದೂರ ಇರುವನೆಂದು ಜ್ಞಾನಿಗಳು ಹೇಳುವದು ನಿಜವದೆ. ಇಂಥ ಮದಾಂಧ ರಲ್ಲಿ ಅಹಂಕಾರ ಮಮಕಾರಗಳು ಹೇರಳವಾಗಿ ತುಂಬಿಕೊಂಡಿರುವದರಿಂದ

ದೇವರೆಂದರೆ ಅವರ ತಲೆ ಎಳುವದು. "ಹಾವ ತಿಂದವರ ನುಡಿಸಬಹುದು; ಗರಹೊಡೆದವರ ನುಡಿಸಬಹುದು; ಸಿರಿಗರಹೊಡೆದವರ ನುಡಿಸಲು ಬಾರದು ನೋಡಯ್ಯ, ಬಡತನವೆಂಬ ಮಂತ್ರವಾದಿ ಹೊಗಲು ಒಡನೆ ನುಡಿವರಯ್ಯ ಕೂಡಲಸಂಗಮದೇವಾ." ಎಂದು ಬಸವ ಮಹಾತ್ಮನು ಹಾಡಿದ್ದು ನಿಜವದೆ. ಅದಕ್ಕೆ ಮಾನವನಿಗೆ ದುಃಖಗಳೇ ಬರದಿದ್ದರೆ ಅವರಿಗೆ ದೇವಭಕ್ತಿಯ ನೆನಪೇ ಆಗುವದಿಲ್ಲ. ಇಂಥವರಿಗೆ ಕಷ್ಟದ ಮೇಲೆ ಕಷ್ಟ; ದುಃಖದ ಮೇಲೆ ದುಃಖ; ಸಂಕಟದ ಮೇಲೆ ಸಂಕಟ; ತ್ರಾಸಿನ ಮೇಲೆ ತ್ರಾಸುಗಳು ಬಂದು ಹೊಡತ ಕೊಡಹತ್ತಿದರೆ ತೀರಿತು. ಆಗ ದೇವರನ್ನು ಹುಡುಕಹತ್ತುವರು. ಆಗ ಅವರಲ್ಲಿ ಭಕ್ತಿಯ ಬೀಜವಂಕುರಿಸಹತ್ತುವದು. ಆವರೆ ಇದು ನಿಜವಾದ ಭಕ್ತಿಯಲ್ಲ. "ಸಂಕಟ ಬಂದಾಗ ಶಂಕರಲಿಂಗಾ" ಎಂದಂತೆ ಆಗುವದು. ಇದು ಅಷ್ಟು ಫಲದಾಯಕವಲ್ಲ. ಆದರೂ ಯಾವ ಪರಿಯಿಂದಾಗಲಿ ದೇವನ ಭಕ್ತಿ ಮಾಡಿದರೂ ಬಹು ಶ್ರೇಯಸ್ಕರವೇ ಸರಿ. ಇದೇ ಮುಂದೆ ಬರಬರುತ್ತ ದಿವ್ಯ ಭಕ್ತಿಯಾಗಿ ಪರಿಣಮಿಸಿ ಮಹಾ ಭಕ್ತಶ್ರೇಷ್ಠರಾಗುವದರಲ್ಲಿ ಏನೂ ಸಂದೇಹವಿಲ್ಲ. ಇದಕ್ಕೆ ಪುರಾಣ, ಇತಿಹಾಸಗಳಲ್ಲಿ ಅನೇಕ ಉದಾಹರಣೆಗಳು ಸಿಗುವವು. ಬಹು ನೀಚರೂ ದುರುಳ ದುರ್ಜನರೂ ಕೂಡ ಮಹಾ ಮಹಾ ಭಕ್ತರಾಗಿದ್ದಾರೆ. ರತ್ನಾಕರ, ಕಣ್ಣಪ್ಪ, ನನ್ನಯ್ಯ ಮೊದಲಾದವರಿದ್ದಾರೆ. ಗೀತೆಯಲ್ಲಿಯೂ ಕೂಡ "ನಾಲ್ಕು ಪ್ರಕಾರದ ಜನಗಳು ತನ್ನ ಭಜಿಸುವರೆಂದು ಭಗವಂತನು ಹೇಳಿದ್ದಾನೆ. (೧) ಆರ್ತನನು ಎಂದರೆ ರೋಗಾದಿಗಳಿಂದ ಪೀಡಿತರಾಗಿ ಬಳಲಿ ಬೆಂಡಾದವರು. (೨) ಅರ್ಥಾರ್ಥಿ ಎಂದರೆ ಧನಾದಿಗಳನ್ನು ಬಯಸುವವರು. (೩) ಜಿಜ್ಞಾಸು ಎಂದರೆ ಜ್ಞಾನವನ್ನು ದೇವನನ್ನು ಪಡೆಯಬೇಕೆಂಬ ಬಯಕೆಯುಳ್ಳವರು. (೪) ಜ್ಞಾನಿಯು ಅಂದರೆ ದೇವರನ್ನು ಕಂಡವರು, ಸದಾ ದೇವರಲ್ಲಿಯೇ ಲೀನವಾಗಿರುವರು. ಇವರಲ್ಲಿ ಜ್ಞಾನಿಯೇ ಹೆಚ್ಚಿನವನು. ಯಾಕಂದರೆ ಇವನು ಸದಾ ನನ್ನಲ್ಲಿ ಮನಸ್ಸನ್ನು ಇರಿಸಿ ಧ್ಯಾನಿಸುವನು. ತನ್ನ ಸರ್ವ ಇಂದ್ರಿಯಗಳಿಂದಲೂ ಪರಮಾತ್ಮನ ಧ್ಯಾನ ಮಾಡುವನು. ವಚನದಲ್ಲಿ ನಿಮ್ಮ ನಾಮಾಮೃತ ತುಂಬಿ ನಯನದಲ್ಲಿ ನಿಮ್ಮ ಮೂರುತಿ ತುಂಬಿ. ಕರ್ಣದಲ್ಲಿ ನಿಮ್ಮ ಕೀರುತಿ ತುಂಬಿ. ನಾಸಿಕದಲ್ಲಿ ನಿಮ್ಮ ನಾತು ತುಂಬಿ. ಚರ್ಮದಲ್ಲಿ ನಿಮ್ಮ ಸ್ಪರ್ಶ ತುಂಬಿ ರೋಮ ರೋಮದಲ್ಲಿ ನಿಮ್ಮ ಧ್ಯಾನವು ತುಂಬಿ ನರನಾಡಿಗಳಲ್ಲಿ ನಿಮ್ಮ

ಭಕ್ತಿಯೇ ಪ್ರವಹಿಸಿ ಮನಸಿನಲ್ಲಿ ನಿಮ್ಮ ನೆನಹು ತುಂಬಿ ಬುದ್ಧಿಯಲ್ಲಿ ನಿಮ್ಮ ವಿದ್ಯವೆ ತುಂಬಿ ಚಿತ್ತದಲ್ಲಿ ನಿಮ್ಮ ಚಿನ್ಮಯ ಹೊಳಪು ತುಂಬಿ ಅಹಂಕಾರದಲ್ಲಿ ನಿಮ್ಮ ಪರಿಪೂರ್ಣತೆ ತುಂಬಿ ತಾನು ಸರ್ವರಲ್ಲಿ ತುಂಬಿ ಸರ್ವವೂ ತನ್ನಲ್ಲಿ ತುಂಬಿ, ತಾನೂ ಸರ್ವವೂ ಒಂದೇ ಒಂದಾಗುವ ದಾದಕಾರಣ ಎಲ್ಲರಲ್ಲಿ ಜ್ಞಾನಿ ಹೆಚ್ಚಿನವನಾಗಿರುವನೆಂದು ಹೇಳಲಾಗಿದೆ. ದುಃಖಿಯು ತನ್ನ ದುಃಖಗಳನ್ನೆಲ್ಲ ಬಾಹ್ಯ ಪ್ರಯತ್ನದಿಂದಾಗಲಿ ಬಾಹ್ಯ ಔಷಧೋಪಚಾರದಿಂದಾಗಲಿ ನಿವಾರಿಸಿಕೊಳ್ಳಲಿಕ್ಕೆ ಪ್ರಯತ್ನ ಮಾಡಿ ನಿರಾಶನಾದಾಗ ಮಾತ್ರ ತನ್ನ ದುಃಖಗಳನ್ನು ದೇವನಿಂದ ಬಗೆಹರಿಯ ಬಹುದೆಂದು ಬಗೆದು ದೇವನ ಪೂಜೆ, ಧ್ಯಾನ, ಭಕ್ತಿ ಮೊದಲಾದ ಸೇವೆಗಳನ್ನು ಭಯಭೀತಿಯಿಂದ ಸುರು ಮಾಡುವನು. ಅಲ್ಪ ಸ್ವಲ್ಪ ಅದೆಲ್ಲ ಗುಣವಾಗುತ್ತ ನಡೆದರೆ ತೀರಿತು. ಭಕ್ತಿ ಹೆಚ್ಚಾಗಿ ದೇವನ ಮೇಲೆ ನಂಬಿಗೆ, ನಿಷ್ಠೆ, ಭಕ್ತಿ, ಪ್ರೀತಿಗಳು ಸ್ವಾಭಾವಿಕವಾಗಿ ಹೆಚ್ಚಾಗುತ್ತಲೇ ಹೋಗುವವು. ಹೀಗೆ ಆತನ ಭಕ್ತಿಯು ಕೊನೆಗೆ ದಿವ್ಯ ಪರಭಕ್ತಿಯಾಗಿ ಪರಿಣಮಿಸಿ ಭಕ್ತನಾಗುವನು. ಅದಕ್ಕೆ ದೇವನ ಭಕ್ತಿಯನ್ನು ಯಾವ ಆಶಾವಾಸನೆ ಬಯಕೆಗಾಗಿ ಸಕಾಮವಾಗಿ ಪ್ರಾರಂಭಿಸಿದರೂ ಒಳಿತೇ ಸರಿ. ಅದೇ ಮುಂದೆ ನಿಷ್ಕಾಮ ಪರಭಕ್ತಿಯಾಗುತ್ತ ಹೋಗಿ ಕಡೆಗೆ ದಿವ್ಯ ಭಕ್ತನಾಗುವನು. ಹೇಗೆ ಮಾಡಿದರೂ ಭಕ್ತಿಯು ಹೆಚ್ಚಿನದೇ ಸರಿ. ಭಕ್ತಿ ಇರದವನಿಗೆ ಪರಮಾತ್ಮನು ಅನೇಕ ಬಗೆಯ ದುಃಖ, ಕಷ್ಟಗಳನ್ನು ತಂದು ಅವನ ಕಣ್ಣುಗಳನ್ನು ತನ್ನ ಕಡೆಗೆ ಹೊರಳುವಂತೆ ಮಾಡುವನು. ಅದಕ್ಕೆ ದುಃಖ ಕಷ್ಟಗಳಿಗೆ ಹಳಿಯಲೇಬಾರದು. ಇವೇ ನಮ್ಮ ಗುರುಗಳೆಂದು ತಿಳಿಯಬೇಕು. ಅದಕ್ಕೆ ದುಃಖ ಬಂದಾಗ ನಮ್ಮ ಸತಿ ಪುತ್ರ ಮೊದಲಾದವರು ಕೈಬಿಡುವರು. ಆದರೆ ದೇವನು ಯಾವ ಪ್ರಸಂಗದಲ್ಲಿ ಎಂದೂ ಕೈ ಬಿಡುವದಿಲ್ಲ. ಅದಕ್ಕಾಗಿ ಸತಿ ಸುತ ಬಂಧು ಬಾಂಧವರ ಪ್ರೀತಿ ನಿಜವಲ್ಲೆಂದು ತೋರಿಸಲು ಮಾನವನಿಗೆ ದುಃಖ ಕಷ್ಟಗಳನ್ನು ಕೊಟ್ಟು ಮಾಯೆಯಿಂದ ಕಣ್ಣನ್ನು ಹೊರಳಿಸಲು ಯತ್ನಿಸುವನು. ಆದರೂ ಮಾಯೆಯಿಂದ ಬದ್ಧರಾದ ಜೀವಿಗಳು ಪುನಃ ಪುನಃ ಅದರಲ್ಲಿಯೇ ಸುತ್ತಿ ಸುತ್ತಿ ಬಿದ್ದು ಹೊರಳಾಡುತ್ತ ಹಾಳಾಗಿ ಹೋಗುತ್ತಿರುವರು. ಇಂಥ ಮಹಾ ಮಾಯೆಯನ್ನು ಗೆದಿಯಲಿಕ್ಕೆ ಭಕ್ತಿಯೇ ಬಹು ಹಿರಿದಾದ ಅಸ್ತ್ರವು.

ಇದನ್ನು ಹಿಡಿದು ಕಾದಾಡಿದರೆ ಎಂಥ ದುಃಖ ಕಷ್ಟಗಳನ್ನಾದರೂ ಆನಂದ ದಿಂದ ಕಾಣುವನು. ಅದಕ್ಕಾಗಿಯೇ ಭಕ್ತನೇ ಶ್ರೇಷ್ಠನೆಂದು ಹೇಳುವರು.

ವಿಷಯದಲ್ಲಿ ವಿಷಕ್ಕೆ ಸಂಬಂಧಿಸಿದ ಯಾವತ್ತೂ ವ್ಯಕ್ತಿ, ವಸ್ತು ಒಡವೆಗಳೆಲ್ಲ ಮಿತಿ, ಅಳತೆ ಮಾತುಗಳಿಂದ ಬದ್ಧವಾಗಿರುವವು. ಅಲ್ಲದೆ ಅವೆಲ್ಲ ಪ್ರತಿಕ್ಷಣದಲ್ಲಿ ರೂಪಾಂತರ ಹೊಂದುತ್ತಿರುವವಲ್ಲದೆ ಸತ್ತು ಕಣ್ಮರೆ ಸಹ ಆಗಿಬಿಡುವವು. ಇಂಥವುಗಳ ಮೇಲೆ ನಿಜವಾದ ಪ್ರೀತಿ ಇಡಲಿಕ್ಕೆ ಶಕ್ಯವಿಲ್ಲ. ಪರಮಾತ್ಮನೊಬ್ಬನೇ ಅಪರಿಮಿತ ಶಾಶ್ವತನಿರುವನು. ಅದರಂತೆ ಪ್ರೀತಿಯೂ ಕೂಡ ಅಪರಿಮಿತ ಶಾಶ್ವತವಾದದ್ದೇ ಇರುವದು. ಅದಕ್ಕೆ ಅಪರಿಮಿತವಾದದ್ದು ಅಪರಿಮಿತವನ್ನು ಅರಿಯಬಲ್ಲದು. ಪ್ರೀತಿಸಬಲ್ಲದು. ದೇವರಲ್ಲಿಯೇ ನಿಜವಾದ ಪ್ರೀತಿ ಇರುವದಲ್ಲದೆ ಮತ್ತೆಲ್ಲಿಯೂ ಇರುವ ದಿಲ್ಲ. ಪ್ರಾಪಂಚಿಕ ವಸ್ತು ಒಡವೆ ಹೆಂಡರು ಮಕ್ಕಳಮೇಲೆ ಮಾಡುವ ಪ್ರೀತಿಯು ಪಶುವರ್ಗದ ಪ್ರೀತಿಯೇ ಸರಿ. ಇದಕ್ಕೆ ಪ್ರೇಮವೆಂದು ಕರೆ ದರೆ ಈಶ್ವರನ ನಿಂದೆ ಮಾಡಿದಂತೆಯಾಗುವದು. ಎಲ್ಲಿ ಸ್ವಾರ್ಥವು ಎಳ್ಳು ಕಾಳಿನಷ್ಟು ಕೂಡ ಇರುವದಿಲ್ಲವೋ ಅದೊಂದೇ ನಿಜವಾದ ಪ್ರೀತಿ ಪ್ರೇಮ್ಮ ಹೊರತು ಬೇರೆ ಇಲ್ಲ. ಚಿಕ್ಕ ಬಾಲಕನ ಪ್ರೇಮದ ವಸ್ತು ಆಟಿಗೆಗಳು. ಹಾಗು ಬಾಲಕನು ಬೆಳೆದಂತೆಲ್ಲ ಆತನ ಪ್ರೇಮದ ವಸ್ತುಗಳು ಬದಲಾ ವಣೆ ಹೊಂದುತ್ತಲೇ ಹೋಗುವವು. ಆಟಿಗೆಯಿಂದ ಹೊತ್ತಿಗೆ, ಪಾಟಿ. ಇಲ್ಲಿಂದ ಗೆಳೆಯರು ಪ್ರಾಥಮಿಕಶಾಲೆಯಿಂದ ಮಾಧ್ಯಮಿಕ ಶಾಲೆ ಹೀಗೆ ಕಾಲೇಜ ಆದಮೇಲೆ ನೌಕರಿ ಆಮೇಲೆ ಹೆಂಡಿರು ಮಕ್ಕಳು ಸಿರಿ, ಗಳಿಕೆ ಗಳಿಂದ ಶರೀರ, ಹೀಗೆ ಪ್ರೇಮದ ವಸ್ತುಗಳು ಬದಲಾವಣೆ ಹೊಂದುತ್ತ ಹೋಗಿ ಸುದೈವವಿದ್ದರೆ ಮಾತ್ರ ದೇವರ ಮೇಲೆ ಪ್ರೀತಿಯು ನೆಲಿಸು ವದು. ಇದೇ ನಿಜವಾದ ಶಾಶ್ವತವಾದ ಕಡೆಯ ಶ್ರೇಷ್ಠವಾದ ಸುಖದಾ ಯಕವಾದ ವಸ್ತುವೇ ಸರಿ. ನಮ್ಮ ಹೃದಯಕ್ಕೆ ಬೆಳಕು ಬರುವತನಕ ನಾವು ಹಾಗೇ ಸದಾ ಮುಂದೆ ಮುಂದೆ ಸಾಗುತ್ತಿರುವೆವು. ಬೆಳಕು ಬಂದಾಗ ದೇವರ ಹೊರತು ಈ ಜಗದಲ್ಲಿ ಏನೂ ಇಲ್ಲೆಂದು ಪ್ರಜ್ಞೆ ಯುಂಟಾದಾಗ ಉಳಿದುದೆಲ್ಲದರಿಂದ ಮನವನ್ನು ಹೊರಳಿಸಿ ದೇವನಲ್ಲಿ ಇರಿಸುವನು. ಆಗ ಭಕ್ತಿ ಮಾಡಹತ್ತಿ ಭಕ್ತಶ್ರೇಷ್ಠನಾಗುವನು. ಈ ಪ್ರೀತಿಯಲ್ಲಿ ಯಾವ ಬದಲಾವಣೆಯಾಗುವದಿಲ್ಲ. ಇದೇ ದೇವರೆಂದು

ಹೇಳಬೇಕು. ಇಂಥ ದೇವರನ್ನು ಪಡೆಯಲು ನಮ್ಮ ಹೃದಯವನ್ನು ತೆರೆದಿಡಬೇಕು. ಈಗ ಹೃದಯಸಿಂಹಾಸನವು ಸ್ವಾರ್ಥ ಅಹಂಕಾರ ಮಮಕಾರಗಳಿಂದ ಮುಚ್ಚಲ್ಪಟ್ಟಿದೆ. ಇವುಗಳನ್ನು ಹೊರದೂಡಿದರೆ ಪೃದಯದ ಬಾಗಿಲು ತೆರೆದು ಪರಮಾತ್ಮನಿಗೆ ಸಿಂಹಾಸನಾರೂಢವಾಗಲಿಕ್ಕೆ ಬರುವದು. ಇಲ್ಲವಾದರೆ ಇಲ್ಲ. ದೇವರ ಸಮೀಪಕ್ಕೆ ಹೋಗುವ ಮಾರ್ಗವು ಬಹು ದೂರ, ಬಹು ಕಷ್ಟದಾಯಕವಾದುದು. ಎಲ್ಲೋ ಕೆಲವರು ಅವನನ್ನು ಪಡೆಯಬಹುದು. ಅದಕ್ಕಾಗಿಯೇ ಸಾವಿರಕ್ಕೊಬ್ಬ ಭಕ್ತ, ಲಕ್ಷಕ್ಕೆ ಒಬ್ಬ ಶರಣ, ಕೋಟಿಗೊಬ್ಬ ಮುಕ್ತನೆಂದು ಹೇಳಲಾಗಿದೆ. ಹೀಗಿದ್ದ ಪಕ್ಷದಲ್ಲಿ ಯಾರೂ ನಿರಾಶರಾಗುವ ಕಾರಣವಿಲ್ಲ. ಪರಮಾತ್ಮನು ಯಾರಿಗೆ ದೈವಯೋಗವನ್ನುಂಟುಮಾಡಿ ಯೋಗ್ಯ ಸಂದರ್ಭವನ್ನು ಕೊಡುವನೋ ಯಾರಿಗೆ ಗೊತ್ತು ? ಕಾರಣ ಎಲ್ಲರೂ ಭಕ್ತರಾಗಲಿಕ್ಕೆ ಯತ್ನಿಸುವದು ಸುಖಕರವು. ಯಾಕಂದರೆ ಮಾಡಿದಷ್ಟು ಭಕ್ತಿಯ ಫಲವು ಉಡಿಯಲ್ಲಿ ಬೀಳುವದು.

---

# ವಚನ-ವಾಣಿ



ಸಿಂದಗಿಯ ಶ್ರೀಮಾನ ಜೋಗೂರ ರುದ್ರಪ್ಪನವರ ಕುಟುಂಬ ಶ್ರೀಮತಿ ಸಾವಿತ್ರೆವ್ವನವರ ಹೃದಯದಿಂದ ಹರಿದು ಬಂದ ವಚನಗಳಲ್ಲಿ ಇವು ಕೆಲವು. ಈ ಮೊದಲೇ ಶ್ರೀಮತಿಯವರ "ಆತ್ಮಾರ್ಪಣೆ" ಎಂಬ ತಾತ್ವಿಕ ಗೀತವು "ಐದು ಮುತ್ತುಗಳು" ಎಂಬದರಲ್ಲಿ ಪ್ರಸಿದ್ಧವಾಗಿದೆ ಹೃದಯಗಂಗೆಗೆ ತನ್ನದೇ ಆದ ಬೆಲೆಯಿದೆ. ]

೧. ಆಶೆಯ ಅಳಿಯಯ್ಯಾ. ಭವದ ಪಾಶೆಯ ಕಡಿಯಯ್ಯಾ. ಲೇಸಾಗಿ ಮೆರಿಸಯ್ಯಾ. ನಿನ್ನ ಸೇವೆಯಲಿ ಎನ್ನ ಮನ ಮೀಸಲಾಗಿರಿಸಯ್ಯಾ ಎನ್ನ ದೇವಾ !

೨. ಕಾಯದ ಕಳವಳವಯ್ಯಾ. ಮೋಹದ ಮಬ್ಬವಯ್ಯಾ. ಭವದ ಬಂಧನವಯ್ಯಾ. ಈ ಮೂರನೂ ಮಾಣಿಸಿ ಕೇಳಯ್ಯಾ ಎನ್ನ ದೇವಾ !

೩. ಆಪ್ತರ ಅಗಲಿದೆನಯ್ಯಾ. ಕೋಪವ ತಳಿದೆನಯ್ಯಾ. ಈ ಲೋಕದೊಳು ಕಡು ಪಾಪಿ ನಾನಯ್ಯಾ. ಕೊಡು ನಿನ್ನ ಅಡಿದಾವರೆಯಲ್ಲಿ ಎನಗೊಂದು ಸ್ಥಾನವನು ಎನ್ನ ದೇವಾ !

೪. ಹೆತ್ತವ್ವನ ಮೊಲೆ ತೊರೆದು ಎತ್ತ ಪೋದೆನಯ್ಯಾ ! ಅತ್ತೆಯ ಮನೆಯ ಅಮೃತವ ಎತ್ತಿ ಕುಡಿದೆನಯ್ಯ. ಈ ಮಾತು ಚಿತ್ತವಿಟ್ಟು ಕೇಳು ಎನ್ನ ದೇವಾ !

೫. ಸುತರ ಕಳೆದೆನಯ್ಯಾ. ವ್ಯಸನದೊಳು ಮುಳುಗಿದೆನಯ್ಯಾ. ಬಸವಳಿದು ಬಳಲಿದೆನಯ್ಯಾ. ಭವದೊಳು ಎಚ್ಚತ್ತು ನಾ ಹುಚ್ಚಾದೆನಯ್ಯಾ ದೇವಾ! ಕಡಲು ಮುಳುಗಿದರೆ ಒಡಲು ತಣ್ಣಗಾಗದಯ್ಯಾ. ಮಡುವಿನೊಳು ಧುಮುಕಿ ನಾ ಮರುಳಾದೆನಯ್ಯಾ. ಬಿಡದೆ ರಕ್ಷಿಸು ಎನ್ನ ದೇವಾ !

—ಸಾವಿತ್ರೆಯವ್ವ.

# ಷಡ್ವಿಧ ಶಕ್ತಿಗಳು.

(ಲೇಖಕರು— ಶ್ರೀಯುತ ಕಲ್ಯಾಣಪ್ಪ ಬ್ಯಾಳಿ, ಬಿ.ಎ.)

---

ವೀರಶೈವರು ಷಡ್ವಿಧ ಶಕ್ತಿಗಳನ್ನು ಮನ್ನಿಸುತ್ತಾರೆ. ಅವು ಯಾವವೆಂದರೆ ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಾಶಕ್ತಿ, ಚಿಚ್ಛಕ್ತಿ. ಶಿವನು ಈ ಆರು ವಿಧ ಶಕ್ತಿಗಳಿಂದ ಕೂಡಿಕೊಂಡಿದ್ದಾನೆ. ಅದರಂತೆ ಶಿವಾಂಶಿಕನಾದ ಅಂಗನೂ (ಜೀವನು) ಸಹ ಅಲ್ಪ ಪ್ರಮಾಣದಲ್ಲಿ ಆಯಾಯ ಶಕ್ತಿಗಳಿಂದ ಕೂಡಿಕೊಂಡಿದ್ದಾನೆ. ಪರಶಿವನ ಆಯಾಯ ಶಕ್ತಿಗಳಿಂದ ಬ್ರಹ್ಮಾಂಡದ ವ್ಯವಹಾರಗಳು ನಡೆಯುತ್ತವೆ. ಜೀವನ ಶಕ್ತಿಗಳಿಂದ ಪಿಂಡಾಂಡದ ವ್ಯವಹಾರಗಳು ನಡೆಯುತ್ತವೆ. ಬ್ರಹ್ಮಾಂಡವು ಪಿಂಡಾಂಡಗಳಿಗೆ ಪೋಷಕವಾಗಿದೆ. ಅದು ಜೀವರುಗಳಿಗೆ ಅನ್ನ, ನೀರು, ಬೆಳಕು, ಹವೆ, ನಾದ, ಛಾಸಗಳನ್ನು ದಯಪಾಲಿಸಿರತ್ತದೆ. ಬ್ರಹ್ಮಾಂಡಕ್ಕೆ ಅರ್ಥಾತ್ ಪ್ರಕೃತಿಗೆ ಇವೆಲ್ಲ ಪೋಷಕ ದ್ರವ್ಯಗಳನ್ನು ಜೀವರುಗಳಿಗೆ ಒದಗಿಸಿಕೊಡುವ ಶಕ್ತಿಯುಂಟು. ಪಿಂಡಾಂಡಿಗೆ ಅರ್ಥಾತ ಅಂಗನಿಗೆ ಆಯಾಯ ಪೋಷಕ ದ್ರವ್ಯಗಳನ್ನು ಸಂಪಾದಿಸಿಕೊಳ್ಳುವ, ಬೆಳೆಯಿಸಿಕೊಳ್ಳುವ ಹಾಗೂ ಅವುಗಳಲ್ಲಿ ಹೊಸಹೊಸ ಸಂಶೋಧನಗಳನ್ನು ಮಾಡಿಕೊಳ್ಳುವ ಶಕ್ತಿಯುಂಟು. ಶಿವನು ಶಕ್ತಿಗಳನ್ನು ಕೂಡಿಕೊಂಡು ಹೇಗೆ ಸೃಷ್ಟಿಯ ವ್ಯಾಪಾರಗಳನ್ನು ನಡೆಸಿದ್ದಾನೆಯೋ ಹಾಗೆಯೇ ಶಿವನ ಶಕ್ತಿಗಳನ್ನೇ ಅಳವಡಿಸಿಕೊಂಡ ಜೀವನು ಶಿವನ ಅನುಕರಣ ಮಾಡುತ್ತ ಕೊನೆಗೆ ತಾನೇ ಶಿವನಾಗುವ ಸಾಧನೆಯನ್ನು ಶೋಧಿಸುತ್ತ ಹೋಗುತ್ತಿರುತ್ತಾನೆ. ಈ ವಿಷಯವನ್ನು ವಿಸ್ತಾರವಾಗಿ ಪ್ರತಿಪಾದಿಸುವದೇ ಈ ಲೇಖನದ ಮುಖ್ಯೋದ್ದೇಶವಾಗಿದೆ.

ಶಿವನ ಶಕ್ತಿಗಳು ಅನಂತವಾಗಿಯೂ ಅಪಾರವಾಗಿಯೂ ಇರುತ್ತವೆ. ಜೀವನ ಶಕ್ತಿಗಳು ಅಲ್ಪವಾಗಿಯೂ ಮರ್ಯಾದಿತವಾಗಿಯೂ ಇರುತ್ತವೆ. ಜೀವನ ಶಕ್ತಿಗೆ ಹುಟ್ಟು, ಬೆಳವಣಿಗೆ, ನಷ್ಟಗಳುಂಟು. ಪರಶಿವನ ಶಕ್ತಿಗಳಿಗೆ ಚ್ಯುತಿಯಿಲ್ಲ, ವಿಕಾರವಿಲ್ಲ. ಜೀವನು ಸಾಧನೆಯಿಂದ ತನ್ನ ಶಕ್ತಿಗಳನ್ನು ಬೆಳೆಯಿಸಿಕೊಂಡು ಸಿದ್ಧವಸ್ಥೆಗೇರಿ ಕೊನೆಗೆ ಆ ಪರಶಿವನ ಶಕ್ತಿ

ಗಳನ್ನೆಲ್ಲ ಪಡೆಯಬಹುದು. ಇಲ್ಲವೆ ಬೆಳೆಯಿಸಿಕೊಂಡ ಶಕ್ತಿಗಳನ್ನು ಉಳಿಸಿಕೊಳ್ಳಲಾರದೆ ಇದ್ದ ಸ್ಥಿತಿಯಲ್ಲಿಯೇ ಉಳಿಯಬಹುದು. ಇಲ್ಲವೆ ಅಧೋಗತಿಗೂ ಹೋಗಬಹುದು. ಅದೆಲ್ಲ ಆತನ ಪ್ರಯತ್ನಸಾಧನಗಳ ಫಲವಾಗಿರುತ್ತದೆ. ಅಂತೆಯೇ "ಪ್ರಯತ್ನಾಂತೇ ಪರಮೇಶ್ವರಃ" ಎಂಬ ನಾಣ್ಣುಡಿಯು ಜಗತ್ತಿನಲ್ಲಿ ಪ್ರಚಲಿತವಾಗಿದೆ.

## ೧ ಕ್ರಿಯಾ ಶಕ್ತಿ.

ಪರಶಿವನು ಈ ಬ್ರಹ್ಮಾಂಡವನ್ನೂ ಅದರಲ್ಲಿಯ ೮೪ ಲಕ್ಷ ಜೀವರುಗಳನ್ನೂ ನಿರ್ಮಿಸಿ ಅವುಗಳಿಗೆ ಆಹಾರಾದಿಗಳನ್ನು ಸಿದ್ಧಪಡಿಸಿಟ್ಟಿದ್ದಾನೆ. ಇದೇ ಕ್ರಿಯಾ ಶಕ್ತಿಯು. ಇದಲ್ಲದೆ ಸಂತಾನ ನಿರ್ಮಾಣ ಮಾಡುವ ಕ್ರಿಯೆಯನ್ನೂ ಜೀವರುಗಳಿಗೆ ಕಲ್ಪಿಸಿಕೊಟ್ಟಿದ್ದಾನೆ. ಇದೂ ಕ್ರಿಯಾ ಶಕ್ತಿಯೇ. ಮಾನವನ ಹೊರತು ಇತರ ಪ್ರಾಣಿಗಳು ತಮ್ಮ ಆಹಾರವನ್ನು ಸಂಗ್ರಹಿಸಿಕೊಳ್ಳುವದಿಲ್ಲ. ಅವುಗಳಿಗೆ ದಿನದ ಆಹಾರವು ದಿನಕ್ಕೆ ದೊರೆಯುತ್ತದೆ. ಅದಕ್ಕಾಗಿ ದಿನಂಪ್ರತಿ ಪ್ರಯತ್ನಿಸುತ್ತವೆ. ಇದೇ ಜೀವರುಗಳ ಕ್ರಿಯಾಶಕ್ತಿ. ಪಶುಪಕ್ಷಿಗಳು ಋತುಮಾನವನ್ನನುಸರಿಸಿ ಮೈಥುನ ಮಾಡುತ್ತವೆ. ಆದರೆ ಮನುಷ್ಯನು ಮಾತ್ರ ಆಹಾರ ಸಂಗ್ರಹ ಮೈಥುನ ಕ್ರಿಯೆಗಳಲ್ಲಿ ಸೃಷ್ಟಿಯ ನೇಮವನ್ನು ಮೀರಿಹೋಗುತ್ತಾನೆ. ಆತನು ಸ್ವಾರ್ಥದಿಂದ ತನಗೆ ಬೇಕಾದ್ದಕ್ಕಿಂತಲೂ ಅಧಿಕವಾಗಿ ಆಹಾರ ದ್ರವ್ಯಗಳನ್ನು ಸಂಗ್ರಹಿಸಿಟ್ಟುಕೊಳ್ಳುತ್ತಾನೆ. ಆದ್ದರಿಂದ ಕೆಲವು ಕಡೆಗೆ "ಕಕ್ಕಸ ಒಡುತಿದೆ ಬೊಕ್ಕಸ ಕಣಜ" ಇನ್ನೊಂದೆಡೆಗೆ "ಭುಗಿಲ್ ಭುಗಿಲೆನಿಸುತಿದೆ ತುತ್ತಿನ ಚೀಲ" ಎಂಬ ಪರಿಸ್ಥಿತಿಯಾಗಿದೆ. ಹೊಟ್ಟೆ ಬಟ್ಟೆ ವಸತಿ ಸುಖಗಳ ಸಲುವಾಗಿ ಜೀವಾತ್ಮನ ಹೋರಾಟವೇ ಕ್ರಿಯಾ ಶಕ್ತಿಯೆನಿಸಿದೆ. ಅದಕ್ಕಾಗಿ ಒಕ್ಕಲುತನ, ವ್ಯಾಪಾರ, ಉದ್ಯೋಗ, ಕಲಾಕೌಶಲ್ಯ, ಶಾಸ್ತ್ರೀಯ ಶೋಧಗಳು ಇತ್ಯಾದಿ ಕ್ರಿಯೆಗಳು ಮಾನವನಿಂದ ನಿರ್ಮಿತವಾಗಿವೆ. ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಶರಣರು ನಿತ್ಯ ಶುದ್ಧ ಕಾಯಕದಿಂದ ದಿನದ ಆಹಾರವನ್ನು ದಿನಕ್ಕೆ ಪಡೆಯುತ್ತಿದ್ದರು. ಇದೇ ಶ್ರೇಷ್ಠವಾದ ಕ್ರಿಯಾ ಶಕ್ತಿಯು. ಅದಕ್ಕಾಗಿಯೇ ಕ್ರೈಸ್ತನು "ದಿನದ ರೊಟ್ಟಿಯನ್ನು ದಿನಕ್ಕೆ ಕೊಡೆಂದು" ದೇವರನ್ನು ಪ್ರಾರ್ಥಿಸಿರುವುದಲ್ಲದೆ ಬೆಳ್ಳಿ ಬಂಗಾರ ತಾಮ್ರ ಕಾಳುಕಡಿ ಯಾವುದನ್ನೂ ಕೂಡಿಟ್ಟು

ಕೊಳ್ಳಬಾರದೆಂದು ಜನಗಳಿಗೆ ಎಚ್ಚರಿಕೆ ಕೊಟ್ಟಿದ್ದಾನೆ. ಪಶುಪಕ್ಷ್ಯಾದಿಗಳು ತಮ್ಮ ಒಡಲಿಗಾಗಿ ಆಹಾರವನ್ನು ಸಂಗ್ರಹಿಸಿಡುವದಿಲ್ಲೆಂದು ದೃಷ್ಟಾಂತ ಕೊಟ್ಟಿದ್ದಾನೆ. ಅದರಂತೆ ಶಿವಶರಣರು ಕೂಡ ಇಂದಿನದು ನಾಳಿಗೆ ತಂಗುಳೆಂದೂ ಅಂಬಲಿ ಕಂಬಳಿ ರಾಶಿ ಮಿಕ್ಕಿದ್ದೆಲ್ಲ ಜಾಸ್ತಿ ಎಂದು ಸಾರಿದ್ದಾರೆ. ಪ್ರತಿನಿತ್ಯ ಶುದ್ಧ ಕಾಯಕದಿಂದ ಧನಧಾನ್ಯಗಳಿಸಿ ಮೊದಲು ಗುರುಲಿಂಗಜಂಗಮಕ್ಕರ್ಪಿಸಿ ಮಿಕ್ಕಪ್ರಸಾದವನ್ನು ಸೇವಿಸುವದೇ ಪರಸುಖದ ಮಾರ್ಗವೆಂದು ಬೋಧಿಸಿದ್ದಾರೆ. ದೇವರ ದಾಸಿಮಯ್ಯನವರು ಅಪ್ಪಣೆ ಕೊಡಿಸಿರುವದೇನಂದರೆ "ಇಂದಿಗೆಂತು ನಾಳಿಗೆಂತು ಎಂದು ಚಿಂತಿಸಲೇಕೆ ? ತಂದಿಕ್ಕುವ ಶಿವಂಗೆ ಬಡತನವೇ ರಾಮನಾಥಾ" ಈ ಹಾದಿಯನ್ನು ಮೀರಿದರೆ ಅಶಾಂತಿ, ರಕ್ತಪಾತ, ಯುದ್ಧ, ಕೊಲೆಸುಲಿಗೆ ದರೋಡೆ ಮುಂತಾದವುಗಳು ಸಂಭವಿಸುತ್ತವಾದ್ದರಿಂದ ಆಹಾರ ಸಂಗ್ರಹವಾಗಲಿ, ತನಗೆ ಬೇಕಾದ್ದಕ್ಕಿಂತ ಹೆಚ್ಚು ಭೂಮಿಸೀಮಿಯನ್ನಿಟ್ಟುಕೊಳ್ಳುವದಾಗಲಿ ಕಳ್ಳಪೇಟೆಯನ್ನು ಸಾಗಿಸುವುದಾಗಲಿ ಪರದೇಶದಲ್ಲಿ ವಸಹಾತು ಮಾಡುವದಾಗಲಿ ಪರದೇಶಿ ಪೇಟೆಗಳನ್ನು ಆಕ್ರಮಿಸುವದಾಗಲಿ ಜಗತ್ತಿನಲ್ಲಿ ಸುಖಶಾಂತಿಯ ಮಾರ್ಗವಲ್ಲ. ಅದರಂತೆ ಅತಿ ಸಂತಾನಗಳನ್ನು ಪಡೆದು ಮಕ್ಕಳನ್ನು ಸುಖಕ್ಕೆ ಎರವುಮಾಡುವದೂ ಕ್ರಿಯಾಶಕ್ತಿಗೆ ಬಾಧಕವಾಗಿವೆ. ಶಿವಶರಣರು ಉಂಡುಉಪವಾಸಿಗಳು ಬಳಸಿಬ್ರಹ್ಮಚಾರಿಗಳು. ಜಗತ್ತಿನ ಎಲ್ಲ ಜೀವನ ಹೋರಾಟ ಕ್ರಿಯಗಳಿಗಿಂತ ಶಿವಶರಣರ ಕಾಯಕವೇ ಶ್ರೇಷ್ಠವಾದ ಕ್ರಿಯಾಶಕ್ತಿಯೆಂದು ನಾವು ಭಾವಿಸಿದರೆ ಎಳ್ಳಷ್ಟು ತಪ್ಪಾಗದು.

## ೨. ಜ್ಞಾನಶಕ್ತಿ.

ಪರಶಿವನು ಬ್ರಹ್ಮಾಂಡವನ್ನು ನಿರ್ಮಿಸುವಾಗ ತನ್ನ ಚಾತುರ್ಯವನ್ನು ವ್ಯಕ್ತಪಡಿಸಿದ್ದಾನೆ. ಮತ್ತು ಭಿನ್ನ ಭಿನ್ನ ಪ್ರಾಣಿಗಳಿಗೆ ಒಂದು ವಿಶಿಷ್ಟತರದ ಬುದ್ಧಿಯನ್ನು ದಯಪಾಲಿಸಿದ್ದಾನೆ. ಅದೇ ಜ್ಞಾನಶಕ್ತಿಯು. ಶಿವನು ನೆಲಕ್ಕಿಂತ ೩ ಪಟ್ಟು ಹೆಚ್ಚು ನೀರನ್ನು ಪೃಥ್ವಿಯ ಮೇಲಿರಿಸಿದ್ದರೂ ಆ ನೀರು ನೆಲವನ್ನಾಕ್ರಮಿಸದಂತೆ ಜಾಣ್ಮೆಯನ್ನೂ ತೋರಿಸಿದ್ದಾನೆ. ಸಮುದ್ರದಲ್ಲಿ ಒಡವಾಗ್ನಿಯನ್ನಿರಿಸಿದ್ದರೂ ಆ ಅಗ್ನಿಯಿಂದ ನೀರು ಅಂತು ಹೋಗದಂತೆ ಜಾಣತನವನ್ನೂ ತೋರಿಸಿರುವನು. ತರತರದ ತರುಲತೆ, ತರತರದ ಬಣ್ಣದ ಹೂ ಕಾಯಿಗಳು ತರತರದ ಪಶುಪಕ್ಷಿಗಳು, ದಿನ್ನೆ,

ಪರ್ವತ, ಹೊಳೆ ಮುಂತಾದ್ದನ್ನು ಹುಟ್ಟಿಸಿದುದು ಜಾಣ್ಮೆಯಲ್ಲವೇ ? ಸೃಷ್ಟಿನಿರ್ಮಾಣಕ್ಕೆ ಗಂಡುಹೆಣ್ಣಿನ ಜೋಡಿಯನ್ನು ಮಾಡಿದುದು ಚಾತುರ್ಯವಲ್ಲವೇ ? ಈ ದೇಹ, ಇಂದ್ರಿಯಗಳು, ಎಲವು, ರಕ್ತ, ಮಾಂಸ, ಮಜ್ಜೆ, ನರಗಳುಳ್ಳ ಶರೀರ ಮುಂತಾದವುಗಳನ್ನು ನಿರ್ಮಿಸುವಾಗ ವ್ಯಕ್ತಪಡಿಸಿದ್ದುದು ಜಾಣತನವಲ್ಲವೇ ? ಕೆಲವು ಹಣ್ಣುಗಳಲ್ಲಿ ಸಿಹಿ ರಸವನ್ನು ಕೆಲವು ಹಣ್ಣುಗಳಲ್ಲಿ ಹುಳಿ ರಸವನ್ನಿರಿಸಿದ್ದುದು ಆತನ ಬುದ್ಧಿ ವೈಶಿಷ್ಟ್ಯವೇ ಸರಿ. ಅಂತರದಲ್ಲಿಯೇ ಅನಂತಕೋಟಿ ನಕ್ಷತ್ರ ಗ್ರಹಗಳನ್ನು ನಿರ್ಮಿಸಿ ಅವು ಗುರುತ್ವಾಕರ್ಷಣ ಶಕ್ತಿಯಿಂದ ಅಂತರಿಕ್ಷದಲ್ಲಿ ತಿರುಗುವಂತೆ ಮಾಡಿರುವದು ಅವನ ಜ್ಞಾನಶಕ್ತಿಯಲ್ಲದೆ ಮತ್ತೇನು ? ಗೀಜಗ ಪಕ್ಷಿಗಳು ತಮ್ಮ ಬುದ್ಧಿಶಕ್ತಿಯಿಂದ ವಿಚಿತ್ರವಾದ ಗೂಡುಗಳನ್ನು ಕಟ್ಟಬಲ್ಲವು. ಮೀನಗಳು ಜಲಾಶಯದಲ್ಲಿ ಈಸಾಡಬಲ್ಲವು, ಪಕ್ಷಿಗಳು ಆಕಾಶದಲ್ಲಿ ಹಾರಾಡಬಲ್ಲವು. ಈಶ್ವರನು ಅವುಗಳಿಗೆ ದಯಪಾಲಿಸಿದ ವಿಶಿಷ್ಟ ಬುದ್ಧಿಗೆ ನಾವು ಜ್ಞಾನಶಕ್ತಿಯೆಂದೆನ್ನುತ್ತೇವೆ. ಪರಶಿವನ ಸೃಷ್ಟಿಯಲ್ಲಿ ಕಂಡು ಬರುವ ಅನೇಕ ವಿಷಯಗಳನ್ನು ನೋಡಿ, ಸಂಶೋಧಿಸಿ, ವಿಚಾರಿಸಿ ಪ್ರಯೋಗ ಮಾಡಿ ಮಾನವನು ಅನೇಕ ಶಾಸ್ತ್ರಗಳನ್ನು ಕಾಲಕಾಲಕ್ಕೆ ಬರೆದಿಟ್ಟಿದ್ದಾನೆ. ಇದು ಜೀವನ ಜ್ಞಾನ ಶಕ್ತಿಯೆನಿಸಿದೆ. ಆ ಜ್ಞಾನ ಶಕ್ತಿಗೆ ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಚಗಳು ಸಾಧನಗಳಾಗಿವೆ. ಅಂತೆಯೇ ಅವಕ್ಕೆ ಪಂಚಜ್ಞಾನೇಂದ್ರಿಯಗಳೆಂದು ಕರೆದಿದ್ದಾರೆ. ಜೀವಾತ್ಮನು ಪರಮಾತ್ಮನ ಜ್ಞಾನಭಾಂಡಾರದ ಬೀಗಮುದ್ರೆಯನ್ನೊಡೆದು ಕಾಲಕಾಲಕ್ಕೆ ಆ ಜ್ಞಾನರಾಶಿಯನ್ನು ಅಪಹರಿಸಿ ಲೋಕದ ಮಾನವರಿಗೆ ಹಂಚುತ್ತಬಂದಿದ್ದಾನೆ. ಆ ಜ್ಞಾನವೇ ವಿದ್ಯೆಯೆನಿಸಿದೆ.

ಆ ವಿದ್ಯೆಯು ಪರಾ ವಿದ್ಯೆ ಅಪರಾ ವಿದ್ಯೆಯೆಂದು ಎರಡು ತೆರನಾಗಿದೆ. ವಿಜ್ಞಾನಿಗಳು ಅಪರಾ ವಿದ್ಯೆ ಅರ್ಥಾತ್ ಲೌಕಿಕವಿದ್ಯೆಯ ಬೆನ್ನು ಹತ್ತಿ ಕಾಲಕಾಲಕ್ಕೆ ಅವುಗಳಲ್ಲಿ ಸಂಶೋಧನೆ ಮಾಡಿ ಅನೇಕ ಶಾಸ್ತ್ರೀಯ ಗ್ರಂಥಗಳನ್ನು ಬರೆದಿದ್ದಾರೆ. ಆದರೆ ಶಿವಶರಣಾದಿಗಳು ಲೌಕಿಕ ವಿದ್ಯೆಯ ಸಂಪಾದನೆಗಾಗಿ ಹೊರಡಲಿಲ್ಲ. ಶಿವನ ಸಂಶೋಧನಕ್ಕೆ ಅನುಕೂಲವಾದ ಪರಾವಿದ್ಯೆ ಅರ್ಥಾತ್ ಪಾರಮಾರ್ಥಿಕ ವಿದ್ಯೆಯ ಬೆನ್ನುಹತ್ತಿದರು. ಪರಮಾತ್ಮನೊಬ್ಬನು ಸಿಕ್ಕರೆ ಎಲ್ಲ ವಿದ್ಯೆಗಳು ತಾವಾಗಿಯೇ ಹಸ್ತಗತವಾಗುವವೆಂಬುದು ಅವರಿಗೆ ಗೊತ್ತು. ಆದ್ದರಿಂದ ಪರಾ

ವಿದ್ಯೆಯು ಜಗತ್ತಿನ ಸುಖಶಾಂತಿಯ ನೆಲವೀಡಾಗಿದೆ. ಆದರೆ ಅಪರಾ ವಿದ್ಯೆಯು ಸ್ವಾರ್ಥ ಅಶಾಂತಿ ಕ್ಷೋಭೆಗಳ ಉಗಮವಾಗಿದೆ. ಆದ್ದರಿಂದ ಜಾಣರು ಪರಾವಿದ್ಯೆಯನ್ನನುಸರಿಸಿ ಲೌಕಿಕ ಪಾರಮಾರ್ಥಗಳೆರಡನ್ನೂ ಗೆದ್ದು ಶಿವನೊಲ್ಮೆಗೆ ಪಾತ್ರರಾಗುವರು

## ೩ ಇಚ್ಛಾಶಕ್ತಿ.

ಜಗತ್ತಿನ ಎಲ್ಲ ವ್ಯವಹಾರಗಳು ಈಶ್ವರನ ಇಚ್ಛಾಶಕ್ತಿಯಿಂದಲೇ ನಡೆಯುವವು. God's will be done. ಅಂದರೆ ದೇವರಿಚ್ಛೆಯೇ ಕೊನೆಗೆ ಫಲಿಸುವದು. ಈಶ್ವರನ ಇಚ್ಛೆಯಿಂದಲೇ ಸೂರ್ಯನು ಪೂರ್ವಕ್ಕೆ ಉದಿಸಿ ಪಶ್ಚಿಮದಲ್ಲಿ ಮುಳುಗುತ್ತಾನೆ; ಆತನ ಇಚ್ಛೆಯಿಂದಲೇ ಸೂರ್ಯನು ಬೆಳಗುವದೂ ರಾತ್ರಿ ಚಂದ್ರನಕ್ಷತ್ರಗಳು ಪ್ರಕಾಶಿಸುವದೂ ಶಿವನಿಚ್ಛೆಯೇ. ಈಶ್ವರನ ಇಚ್ಛೆಯಿಂದಲೇ ಯುದ್ಧ, ಬರಗಾಲ, ರೋಗ, ವಿಪ್ಲವ, ಕ್ರಾಂತಿಗಳು ಪ್ರಾದುರ್ಭವಿಸಿ ಕಾರ್ಯರಂಗಕ್ಕಿಳಿಯುತ್ತವೆ. ಯುದ್ಧರೋಗಾದಿಗಳು ಹುಟ್ಟುವದಾಗಲಿ, ಅವು ನಾಶವಾಗುವದಾಗಲಿ, ಈಶ್ವರನ ಇಚ್ಛೆಯಿಂದಲ್ಲದೆ ಜೀವನು ಅವುಗಳ ವಿರುದ್ಧ ಹೋರಾಡಿದರೆ ಗಾಳಿಗುದ್ದಿ ಮೈಯನ್ನು ನೋಯಿಸಿಕೊಂಡಂತೆಯೇ ಸರಿ. ಮಾನವನಿಗೆ ಸಿರಿಸಂಪತ್ತುಗಳಾಗಲಿ, ಅಧಿಕಾರ ಗೌರವಗಳಾಗಲಿ, ದಾರಿದ್ರ್ಯದುಃಖಗಳಾಗಲಿ ಬರುತ್ತಿರುವದು ಈಶ್ವರನ ಇಚ್ಛೆಯಿಂದಲೇ ಹೇಳಬೇಕಾಗುತ್ತದೆ. ಅಂತೆಯೇ "ಈಶ್ವರೇಚ್ಛಾಬಲೀಯಸೀ" ಎಂದು ಹೇಳಿದ್ದಾರೆ. ಶ್ರೀ ಅರವಿಂದಾಶ್ರಮದ ಮಾತಾಜಿಯವರು, "ಮಾನವನ ಸಂಕಲ್ಪವಾವುದೂ ಭಗವಂತನ ಸಂಕಲ್ಪವನ್ನು ಎದುರಿಸಿ ಕೊನೆಗೆ ಗೆಲ್ಲಲಾರದು. ನಾವು ಬುದ್ಧಿಪುರಸ್ಸರವಾಗಿಯೂ ಅನನ್ಯವಾಗಿಯೂ ದೇವಪಕ್ಷವನ್ನೇ ಕೂಡಿಕೊಳ್ಳೋಣ, ಅಂದರೆ ವಿಜಯವು ಕಟ್ಟಕಡೆಗೆ ಖಂಡಿತ" ಎಂದುಸರಿದ್ದಾರೆ. ಅದರಂತೆಯೇ ಬಸವಣ್ಣನವರು, "ನೀನೊಲಿದರೆ ಕೊರಡುಕೊನರುವದಯ್ಯ ನೀನೊಲಿದರೆ ಬರಡು ಹಯನಹುದಯ್ಯಾ, ನೀನೊಲಿದರೆ ಸಕಲ ಪಡಿಪದಾರ್ಥಂಗಳು ಇದಿರಲ್ಲಿಪ್ಪವು ಕೂಡಲ ಸಂಗಮ ದೇವಾ." ಮತ್ತು "ಹಸನೀವ ಕಾಲಕ್ಕೆ ಸಿರಿಯು ಬೆನ್ನಲ್ಲಿಬಕ್ಕು. ಹರಿದು ಹೆದ್ದೊರೆಯು ಕೆರೆ ತುಂಬಿದಂತಯ್ಯಾ. ಅರಸು ಪರಿವಾರ ಕೈವಾರ ನೋಡಯ್ಯಾ. 'ಹೇನು ಮುನಿವ ಕಾಲಕ್ಕೆ ತುಂಬಿದ ಹರವಿಯ ಕಲ್ಲುಕೊಂಡಂತೆ ಕೂಡಲಸಂಗವ

ದೇವಾ " ಎಂದು ಅಪ್ಪಣೆ ಕೊಡಿಸಿದ್ದಾರೆ. ಕಾಳಿದಾಸ ಕವಿಯು ರಘು ವಂಶದಲ್ಲಿ ಹೇಳಿರುವುದೇನಂದರೆ, " ವಿಷಮಪ್ಯಮೃತಂ ಕ್ವಚಿದ್ಭವೇದ ಮೃತಂವಾ ವಿಷಮೀಶ್ವರೇಚ್ಛಯಾ " ಅಂದರೆ ಪರಮಾತ್ಮನ ಇಚ್ಛೆಯಿಂದ ಒಮ್ಮೊಮ್ಮೆ ವಿಷವು ಕೂಡಾ ಅಮೃತವಾಗಬಹುದು, ಅಮೃತವು ವಿಷ ವಾಗಬಹುದು. ಇವೆಲ್ಲ ಸಂಗತಿಗಳ ಮೇಲಿಂದ ವಿಚಾರಿಸಲಾಗಿ ಮನು ಷ್ಯನ ಪ್ರಯತ್ನ ಇಚ್ಛೆಗಳಂತೆ ಕಾರ್ಯಗಳು ಫಲಿಸವು. ಪರಮಾತ್ಮನ ಇಚ್ಛೆಯಂತೆಯೇ ಫಲಾಫಲಗಳು ಲಭಿಸುತ್ತವೆಂದಹಾಗಾಯಿತು. ಜೀವನ ಪ್ರಯತ್ನಕ್ಕೆ ಅನುರೂಪವಾಗಿ ಫಲಕೊಡುವದಾಗಲಿ ಬಿಡುವದಾಗಲಿ ಶಿವ ನಿಚ್ಛೆ. ಶಿವನು ಪ್ರಯತ್ನ ಮಾಡಿದವನಿಗೂ ಫಲಕೊಡಬಹುದು ಮಾಡ ದವನಿಗೂ ಕೊಡಬಹುದು. ಆದರೆ ಪ್ರಯತ್ನ ಮಾಡುವವನಿಗೆ ವಿಶೇಷತಃ ಫಲಕೊಡುವದುಂಟು. ಪ್ರಯತ್ನ ಮಾಡದವನಿಗೆ ಏನೋ ಕ್ವಚಿತ್ತಾಗಿ ಫಲಕೊಡುವದುಂಟು. ಆದರೆ ಜೀವನು ಕೇವಲ ಇಚ್ಛಿಸಿದ ಮಾತ್ರದಿಂದ ತನಗೆ ಬೇಕಾದ ವಸ್ತುಗಳು ಸಾಧಿಸವು. ಇಚ್ಛಿತವಸ್ತುಗಳು ಪ್ರಯತ್ನ ವಿಲ್ಲದೆ ದೊರೆಯಬೇಕಾದರೆ ಅದಕ್ಕೆ ಶಿವನೊಲ್ಮೆ ಬೇಕೇಬೇಕು. ನಾವು ಕನಕ, ಕಾಮಿನಿ, ವಿಷಯೋಪಭೋಗಗಳನ್ನು ಬಯಸಬಹುದು. ಆದರೆ ನಮ್ಮ ಬಯಕೆಗಳೆಲ್ಲ ಶಿವನ ಕೃಪೆಯಿದ್ದರೆ ಲಭಿಸಬಹುದು. ಇಲ್ಲವಾದರೆ ನಮಗೆ ಆಘಾತಗಳೂ ಅಪಯಶಸ್ಸುಗಳೂ ಪ್ರಾಪ್ತವಾಗಬಹುದು. ಮನು ಷ್ಯನು ತನಗೆ ಬೇಕಾದ ವಸ್ತುಗಳಿಗಾಗಿ ಪ್ರಯತ್ನಿಸಬಹುದು ಆದರೆ ಸರ್ವಥಾ ಇಚ್ಛಿಸಕೂಡದು. ಇಚ್ಛಿಸುವುದಾದರೆ ಶಿವನೊಲ್ಮೆಯೊಂದನ್ನೇ ಇಚ್ಛಿಸಬೇಕು. ತಪಸ್ಸು ಅನುಷ್ಠಾನಾದಿಗಳಿಂದ ಶಿವಶರಣರು ಯೋಗಿ ಗಳು ತಮ್ಮ ಇಚ್ಛಾಶಕ್ತಿಗಳನ್ನು ಬೆಳೆಯಿಸಿಕೊಂಡಿರುತ್ತಾರೆ. ಅವರಿಗೆ ಶಾಪಾನುಗ್ರಹ ಸಾಮರ್ಥ್ಯವಿರುತ್ತದೆ. ಅಂಥವರು ಯಾರಿಗಾದರೂ ಸಾಯೆಂದು ಶಾಪಕೊಟ್ಟರೆ ಸಾಯುವದು ಖಂಡಿತ. ಮಕ್ಕಳಾಗಲೆಂದು ಹರಸಿದರೆ ಮಕ್ಕಳು ಹುಟ್ಟಲೇಬೇಕು. ಆದರೆ ಆ ಶಕ್ತಿಯನ್ನು ಅವರು ದೇವನ ಇಚ್ಛೆಯ ವಿರುದ್ಧವಾಗಿ ಉಪಯೋಗಿಸಿಕೊಳ್ಳಲು ಹೋಗುವದಿಲ್ಲ. ಹಾಗೆ ಮಾಡಿದರೆ ಅವರ ಶಕ್ತಿಯು ಕುಗ್ಗುತ್ತದೆ. ಆದ್ದರಿಂದ ಅವರು ತಾವು ಮಾಡುವುದೆಲ್ಲವನ್ನೂ ಶಿವಾರ್ಪಣ ಬುದ್ಧಿಯಿಂದಲೇ ಮಾಡುವರು.

" ಕರ್ಮಣ್ಯೇ ವಾಧಿಕಾರಸ್ತೇ ಮಾಫಲೇಷು ಕದಾಚನ " ಎಂದು ಗೀತೆಯಲ್ಲಿ ಹೇಳಿದೆ. ಅಂದರೆ ಫಲಾಪೇಕ್ಷೆಯಿಲ್ಲದೆ ಕರ್ಮಮಾಡಬೇಕೆಂಬರ್ಥ.

ಫಲದ ಆಶೆ ಹಿಡಿದು ಕೆಲಸ ಮಾಡಿದರೆ ಒಮ್ಮೊಮ್ಮೆ ಅಪಯಶಸ್ಸು ಬರಬಹುದು. ಆಗ ಮನಸ್ಸಿಗೆ ವ್ಯಥೆಯಾಗುತ್ತದೆ. ಲಾಭಾಲಾಭ ಜಯಾಪಜಯಗಳೆಲ್ಲ ಶಿವನವೆಂದು ಶಿವಾರ್ಪಣ ಬುದ್ಧಿಯಿಂದ ಕೆಲಸ ಮಾಡಿದರೆ ದುಃಖಬಡುವ ಕಾರಣವಿಲ್ಲ. ಫಲಾಪೇಕ್ಷೆಯಿಲ್ಲದೆ ಶಿವಾರ್ಪಣ ಬುದ್ಧಿಯಿಂದ ಕಾರ್ಯಮಾಡುವದೂ ಶಿವನಿಚ್ಛೆಯೇ ಸರ್ವಾಧಾರವೆಂದು ತಿಳಿಯುವದೂ ಹೆಚ್ಚು ಶ್ರೇಯಸ್ಕರವು. ಆದರೆ "*Where there is a will there is way*" ಎಂದು ತನ್ನ ಇಚ್ಛೆಯಂತೆಯೇ ಹಾದಿ ಸಿಗುತ್ತದೆಂದು ಇಚ್ಛೆಯ ಬೆನ್ನುಹತ್ತಿದರೆ ಭಯಂಕರ ಕಷ್ಟನಷ್ಟಗಳನ್ನೂ ಅಪಮಾನ ಅಪಘಾತಗಳನ್ನೂ ಸಹಿಸಬೇಕಾಗುವದು. ಆದ್ದರಿಂದ ಜ್ಞಾಣರು ತಮ್ಮ ಇಚ್ಛೆಯನ್ನು ಹತ್ತಿಕ್ಕಿ ದೇವರಿಚ್ಛೆಯಿದ್ದಂತೆ ಆಗಲೆಂದು ಸುಗಮವಾಗಿ ತಮ್ಮ ಜೀವನ ಯಾತ್ರೆಯನ್ನು ಸಾಗಿಸುವರು.

## ೪. ಆದಿಶಕ್ತಿ

ಆದಿಶಕ್ತಿಯೆಂದರೆ ಮೂಲ ಶಕ್ತಿ ಅರ್ಥಾತ್ ಶಾರೀರಿಕ ಶಕ್ತಿ. ಈಶ್ವರನು ದುಷ್ಟ ನಿಗ್ರಹ ಶಿಷ್ಟ ಪರಿಪಾಲನೆಯ ಸಲುವಾಗಿ ಕಾಲಕಾಲಕ್ಕೆ ಭೂಲೋಕದಲ್ಲಿ ಅವತರಿಸಿ ದುಷ್ಟರನ್ನು ಸಂಹರಿಸುವನು. ಇದೇ ಆದಿಶಕ್ತಿಯು. ಅದೇ ಮೇರೆಗೆ ಸಶಕ್ತನಾದವನು ಲೋಕಕಂಟಕರಾದ ವ್ಯಕ್ತಿಗಳನ್ನು ಸದೆಬಡೆಯುವನು. ಇದು ಆದಿಶಕ್ತಿ ಅರ್ಥಾತ್ ಕ್ಷಾತ್ರಧರ್ಮ. ಜಗತ್ತಿನಲ್ಲಿ ಶಕ್ತಿಯೇ ಬಲವಾಗುತ್ತ ನಡೆದಿದೆ. ಶಕ್ತಿವಂತನೇ ಬಲವಂತನಾಗಿಬಿಟ್ಟಿದ್ದಾನೆ. ದುರ್ಬಲರು ಅವನ ದಾಸರೂ ಗುಲಾಮರೂ ಆಗುತ್ತಾರೆ ಬೆಕ್ಕು ಇಲಿಯನ್ನು ಹಿಡಿಯುತ್ತದೆ. ತೋಳವು ಕುರಿಯನ್ನು ಕೊಲ್ಲುತ್ತದೆ. ಸಿಂಹವು ಆನೆಯ ವಧೆ ಮಾಡುತ್ತದೆ. ದೊಡ್ಡ ಮೀನು ಸಣ್ಣ ಮೀನನ್ನು ನುಂಗುತ್ತದೆ. ಬಲವುಳ್ಳ ರಾಷ್ಟ್ರಗಳು ದುರ್ಬಲ ರಾಷ್ಟ್ರಗಳ ಸೊತ್ತನ್ನು ಸದೆಬಡೆಯುತ್ತವೆ. ಎಲ್ಲಿ ನೋಡಿದಲ್ಲಿ ಬಲವೇ ತಲೆಯೆತ್ತಿ ಮೆರೆಯುತ್ತಿದೆ. ಇದೇ ಆದಿಶಕ್ತಿ. ರಣಚಂಡಿಯೇ ಆದಿಶಕ್ತಿ. ದುರ್ಗಾದೇವಿ.

ಮನುಷ್ಯನು ಉಳಿದ ಎಷ್ಟೋ ಪ್ರಾಣಿಗಳಿಗಿಂತ ಶರೀರದಿಂದ ದುರ್ಬಲನಿದ್ದರೂ ಉಪಕರಣ, ಯಂತ್ರ, ಸಂಶೋಧನಾದಿಗಳಿಂದ ಅವನು ಅವೆಲ್ಲವುಗಳಿಗಿಂತಲೂ ಮಿಗಿಲೆನಿಸಿಕೊಂಡಿದ್ದಾನೆ. ಸೈನ್ಯಬಲ, ನೌಕಾಬಲ, ಆಕಾಶದಳ ಮುಂತಾದವುಗಳೆಲ್ಲ ಆದಿಶಕ್ತಿಯ ಪ್ರತೀಕವಾಗಿವೆ.

ಜಗತ್ತಿನಲ್ಲಿ ದೈವೀಶಕ್ತಿ, ಆಸುರೀಶಕ್ತಿಗಳೆಂದು ಎರಡು ವಿಧವಾದ ಶಕ್ತಿಗಳುಂಟು. ದೈವೀಶಕ್ತಿಯು ಲೋಕಕಂಟಕ ವ್ಯಕ್ತಿಗಳನ್ನು ಮರ್ದನ ಮಾಡಿ ಲೋಕಕಲ್ಯಾಣವನ್ನು ಹೆಚ್ಚಿಸುತ್ತದೆ. ಆದರೆ ಆಸುರೀಶಕ್ತಿಯು ಶಿಷ್ಟರನ್ನು ಸದೆಬಡೆದು ಲೋಕಕಂಟಕತನವನ್ನು ಅಭಿವೃದ್ಧಿಗೊಳಿಸುತ್ತದೆ. ಅಂತೆಯೇ ಗೀತೆಯಲ್ಲಿ ಹೀಗೆ ಹೇಳಿದೆ. ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀಮತಾ" ಅಂದರೆ ದೈವೀಶಕ್ತಿಯನ್ನನುಸರಿಸಿದರೆ ಮೋಕ್ಷ ವಾಗುತ್ತದೆ. ಆಸುರೀಶಕ್ತಿಯು ಬೆನ್ನುಹತ್ತಿದರೆ ಅಧೋಗತಿಯು ಪ್ರಾಪ್ತಿ ಸುತ್ತದೆ. "ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ" ಎಂಬ ಮಾತಾದರೂ ಇದೇ ತತ್ವವನ್ನೇ ಹೇಳುತ್ತದೆ. ಆಸುರೀಶಕ್ತಿಯು ಪರಾಕಾಷ್ಠೆಗೆ ಮುಟ್ಟಿ ಜಗತ್ತು ಕ್ಷೋಭೆಗೊಳ್ಳುತಿರುವಾಗ ಜಗತ್ತಿನಲ್ಲಿ ದೈವೀಶಕ್ತಿಯು ಹುಟ್ಟಿ ಅದನ್ನು ನಾಶ ಮಾಡುತ್ತದೆ. ರಾಮ, ಕೃಷ್ಣ, ಬುದ್ಧ, ಕ್ರೈಸ್ತ, ಮುಹಮ್ಮದ, ಬಸವೇಶ್ವರ, ಗಾಂಧಿ ಮೊದಲಾದ ಶಕ್ತಿಗಳು ದೈವೀಶಕ್ತಿಗಳು. ಅಂತೆಯೇ ಈ ವರೆಗೂ ಅವರನ್ನು ಜನರು ದೇವರೆಂದು ತಿಳಿದು ಆರಾಧಿಸುತ್ತಾರೆ. ರಾವಣ, ದುರ್ಯೋಧನ, ಹಿರಣ್ಯಕಶಿಪು, ಕುಂಭಕರ್ಣ, ಶುಂಭ, ನಿಶುಂಭ ಮೊದಲಾದ ಶಕ್ತಿಗಳು ಆಸುರೀಶಕ್ತಿಗಳು. ಇವು ಮೊದಲು ಬೇಕಾದಷ್ಟು ಪ್ರಬಲವಾಗಿ ಮೆರೆದರೂ ಕೊನೆಗೆ ಆ ಶಕ್ತಿಗಳಿಗೆ ಅಳಿಗಾಲವು ಕಟ್ಟಿಟ್ಟದ್ದೇ. ನಮ್ಮವರು ಆದಿಶಕ್ತಿಯನ್ನೇ ಗಣಾಚಾರವೆಂದು ಬೇರೆ ಹೆಸರಿನಿಂದ ಕರೆದಿದ್ದಾರೆ. ಗುರುಲಿಂಗಜಂಗಮ ದ್ರೋಹಿಗಳ ಮರ್ದನ ಮಾಡುವದಾಗಲಿ ಭವಿಗಳ ಮನಸ್ಸನ್ನು ಪರಿವರ್ತಿಸಿ ಭಕ್ತರನ್ನಾಗಿ ಮಾಡುವ ಶಕ್ತಿಯಾಗಲಿ ಗಣಾಚಾರವೆಂದೇ ಕರೆಯಲ್ಪಟ್ಟದೆ.

## ೫. ಪರಾಶಕ್ತಿ.

ಪರಾಶಕ್ತಿಯೆಂದರೆ ನಾದಶಕ್ತಿಯು. ನಾದಸ್ವರೂಪಿಯಾದ ಮೂಲ ಪ್ರಣವವೇ ತರಂಗವಾಗಿ ಹಬ್ಬಿ ಆಕಾಶ, ವಾಯು, ತೇಜ, ಅಪ್ಪುಗಳಾಗಿ ಬರುಬರುತ್ತ ಹೆಪ್ಪುಗಟ್ಟಿ ಪೃಥ್ವಿಯೂ ಚರಾಚರ ವಸ್ತುಗಳು ನಿರ್ಮಿತವಾಗಿವೆ. ಪೃಥ್ವಿಯ ಚರಾಚರ ವಸ್ತುಗಳ ಧ್ವನಿಯಲ್ಲೆಲ್ಲ ಆ ಮೂಲ ಪ್ರಣವವು ಅವರಿಸಿದೆ. ಕಾಗಿ ಕಾಕಾಯೆಂದು, ಗುಬ್ಬಿ ಚಿಂವು ಚಿಂವುಯೆಂದು, ಆಕಳಂಬಾಯೆಂದು, ಕೋಳಿಕುಕ್ಕೂಯೆಂದು, ಕೋಗಿಲೆ ಕುಹುಕುಹು ಎಂದು, ಮೋಡ ಗುಡುಗುಡುಯೆಂದು, ಹೊಳೆಯು ಜುಳು

ಜುಳುಯೆಂದು ಧ್ವನಿಗೈಯುವದೆಲ್ಲ ಮೂಲ ಪ್ರಣವದ ದ್ಯೋತಕವೇ ಆಗಿದೆ. ಆ ಪ್ರಣವ ಪಂಚಾಕ್ಷರಿ ಮಂತ್ರವೂ ಕೂಡ ನಾದವೇ ಸಂಗಾಯನ, ತಾಳ, ಮೃದಂಗ, ಝಾಂಗುಟಿ, ವೀಣಾರವಾದಿಗಳೆಲ್ಲ ಪ್ರಣವದ ಪ್ರತೀಕಗಳೇ ಮೌನವಾದ ನಿಸರ್ಗ ಸೌಂದರ್ಯವು ಕೂಡ ಮೂಕ ಗೀತೆಯೇ ಆಗಿದೆ. ಆ ಮೂಲ ನಾದವೇ ವಿಕಾಸಗೊಂಡು ಮನುಷ್ಯರಲ್ಲಿ ಭಾಷೆಯಾಗಿ ಪರಿಣಮಿಸಿದೆ. ಆ ಭಾಷೆಯು ಮೂಲದಲ್ಲಿ ಪ್ರಣವದ ಸ್ವರೂಪವಿದ್ದು ದೇಶಕಾಲ ಪರಿಸ್ಥಿತಿಗನುಸರಿಸಿ ಭಿನ್ನ ಭಿನ್ನ ಭಾಷೆಗಳಾಗಿ ಪರಿಣಮಿಸಿದೆ. ಆಯಾಯ ಭಾಷೆಗಳಿಂದ ಸಕಲಶಾಸ್ತ್ರಗಳೂ ಪುರಾಣೇತಿಹಾಸಗಳೂ ಉಂಟಾದವು. ಆ ಮಾತೇ ಜ್ಯೋತಿರ್ಲಿಂಗವಾಗಿ ಮಾತಿನ ಮುಖಾಂತರವೇ ಶ್ರೀಗುರುವು ಶಿಷ್ಯನಿಗೆ ಪರಬೊಮ್ಮದರಿವನ್ನು ಬೋಧಿಸುತ್ತಾನೆ.

ನಾದದಲ್ಲಿ ವ್ಯಕ್ತನಾದ-ಮೂಕನಾದಗಳೆಂಬೆರಡು ತೆರನುಂಟು. ನಾವು ಕೇಳುವುದೆಲ್ಲವೂ ವ್ಯಕ್ತನಾದ. ಆದರೆ ನಮ್ಮ ಮನಸ್ಸು ಯೋಗಸಾಧನೆಯಿಂದ ಅಂತರ್ಮುಖವಾದಾಗ ಆ ಪ್ರಣವ ನಾದವು ಕೇಳಬರುತ್ತದೆಂದೂ ಆ ನಾದಲಹರಿಯಲ್ಲಿಯೇ ಮನವು ಲೋಲಾಡುವಾಗ ಪರಶಿವನ ಸಾನ್ನಿಧ್ಯದರಿವು ನಮಗಾಗುತ್ತದೆಂದೂ ಯೋಗಿಗಳು ಹೇಳುವರು. ಆ ನಾದವನ್ನೇ ವೈಜ್ಞಾನಿಕರು ರೇಡಿಯೋ, ಟೆಲಿಫೋನ್, ಟೆಲಿಗ್ರಾಫಗಳ ಮುಖಾಂತರ ಬಿತ್ತರಿಸುವದುಂಟು. ಶರಣರು ನಾದವನ್ನೆಲ್ಲ ಮಂತ್ರಮಯವಾಗಿ ಉಪಯೋಗಿಸಿಕೊಳ್ಳುವರು.

## ೬. ಚಿಚ್ಛಕ್ತಿ

ಚಿಚ್ಛಕ್ತಿಯೆಂದರೆ ಪರಿಶುದ್ಧ ಭಾವ. "ಯಥಾ ಭಾವ ಸ್ತಥಾ ಶಿವ:" ಎಂದು ಹೇಳಿದೆ. ಭಾವಶುದ್ಧಿಯನ್ನು ಮಾಡಿಕೊಳ್ಳುವದೆಂದರೆ ಚಿಚ್ಛಕ್ತಿಯನ್ನು ಪಡೆದಂತೆಯೇ. ಚಿಚ್ಛಕ್ತಿಯನ್ನು ಪಡೆಯುವದೆಂದರೆ ಪರಶಿವನನ್ನೇ ಕರತಲಾಮಲಕ ಮಾಡಿಕೊಂಡಂತೆ. ಚಿಚ್ಛಕ್ತಿಯು ಪರಶಿವನಲ್ಲಿ ಅವಿನಾ ಭಾವದಿಂದ ಕೂಡಿಕೊಂಡಿರುತ್ತದೆ. ಪರಶಿವನು ಉಂಟುಮಾಡುವ ಸೃಷ್ಟಿ ಸ್ಥಿತಿ ಲಯಗಳಿಗೆಲ್ಲ ಅದೇ ಮೂಲ ಕಾರಣ. ಉಳಿದ ಶಕ್ತಿಗಳಿಗೆಲ್ಲ ಚಿಚ್ಛಕ್ತಿಯೇ ತಾಯಿ. ಎಲ್ಲ ಶಕ್ತಿಗಳಲ್ಲಿಯೂ ಚಿಚ್ಛಕ್ತಿಯು ಅಡಗಿದೆ. ಮೂಲ ಪ್ರಣವದೊಡನೆ ಚಿಚ್ಛಕ್ತಿಯು ಕೂಡಿಕೊಂಡು ನಿಷ್ಕಳವಾದ ಮಹಾಲಿಂಗ ಉದ್ಭವಿಸಿತು.

ಈ ಚಿಚ್ಛಕ್ತಿಯು ಜೀವರುಗಳಲ್ಲಿ ಸಮರಸ ಭಕ್ತಿಯೆನಿಸಿದೆ. ಆ ಚಿಚ್ಛಕ್ತಿಯು ಭಕ್ತನಲ್ಲಿ ಶ್ರದ್ಧಾಭಕ್ತಿಯನ್ನೂ, ಮಹೇಶನಲ್ಲಿ ನಿಷ್ಠಾಭಕ್ತಿಯನ್ನೂ, ಪ್ರಸಾದಿಯಲ್ಲಿ ಅವಧಾನ ಭಕ್ತಿಯನ್ನೂ, ಪ್ರಾಣಲಿಂಗಿಯಲ್ಲಿ ಅನುಭಾವ ಭಕ್ತಿಯನ್ನೂ ಶರಣನಲ್ಲಿ ಆನಂದ ಭಕ್ತಿಯನ್ನೂ ಐಕ್ಯನಲ್ಲಿ ಸಮರಸ ಭಕ್ತಿಯನ್ನೂ ಉಂಟುಮಾಡಿದೆ. ಈ ಷಡ್ವಿಧ ಭಕ್ತಿಗಳನ್ನು ಆಚರಿಸಿಯೇ ಅಂಗನು ಲಿಂಗವಾಗುವನು. ಭಕ್ತಿಯಿಲ್ಲದೆ ಕ್ರಿಯಾ, ಜ್ಞಾನ, ಇಚ್ಛಾ, ದೇಹಶಕ್ತಿ, ಶಬ್ದಶಕ್ತಿಗಳಿಂದ ಮೋಕ್ಷವಿಲ್ಲ. ಅಂತೆಯೇ ಗೀತೆಯಲ್ಲಿ ಹೇಳಿದ್ದೇನಂದರೆ—

" ಭಕ್ತ್ಯಾತ್ವನನ್ಯಯಾಶಕ್ಯ ಅಹಮ್ಮೇವಂ ವಿಧೋಽರ್ಜುನ ।
ಜ್ಞಾತುಂ ದ್ರುಷ್ಟುಂ ಚ ತತ್ವೇನ ಪ್ರವೇಷ್ಟುಂ ಚ ಪರಂತಪ ॥ "

ಅಂದರೆ ಭಕ್ತಿಯನ್ನು ಬಿಟ್ಟು ಮತ್ತ್ಯಾತರಿಂದಲೂ ಪರಮಾತ್ಮನನ್ನು ಆಶಿಸಿ, ಅರಿದು ಬೆರೆಯಲು ಶಕ್ಯವಿಲ್ಲ. ಭಕ್ತಿಯಿಲ್ಲದ ಜ್ಞಾನವು ಕೂಡ ನಿರರ್ಥಕ. 'ಭಕ್ತಿಃ ಶಿವಪ್ರಸಾದ ಜನನೀ' ಎಂದು ಮುಗ್ಗಿ ಮಾಯಿದೇವರು ಅಪ್ಪಣೆ ಕೊಡಿಸಿದ್ದಾರೆ. ಸರ್ವ ಸೃಷ್ಟಿಯನ್ನು ನಿರ್ಮಿಸಿದ ದೇವನು ತಿಲೆಯ ಮರೆಯ ತೈಲದಂತೆ ಸೃಷ್ಟಿಯ ಮರೆಯಲ್ಲಿ ಅಡಗಿರುವನು. ಕೇವಲ ತಿಳಿದ ಮಾತ್ರಕ್ಕೆ ಅವನು ನಮಗೆ ಲಭಿಸುವದಿಲ್ಲ. ಅಂತರಂಗ ಉಕ್ಕಿ ಆತನ ಪೂಜೆ ಮಾಡಬೇಕು, ಧ್ಯಾನ ಮಾಡಬೇಕು. ಇದೇ ಭಕ್ತಿ. ಇದೇ ಚಿಚ್ಛಕ್ತಿಯು, ಅಂಗನಿಗೆ ದಯಪಾಲಿಸಿದ ಶ್ರೇಷ್ಠವಾದ ಶಕ್ತಿ.

ಭಕ್ತಂಗೆ ಕ್ರಿಯಾಶಕ್ತಿ, ಮಹೇಶಂಗೆ ಜ್ಞಾನ ಶಕ್ತಿ, ಪ್ರಸಾದಿಗೆ ಇಚ್ಛಾಶಕ್ತಿ, ಪ್ರಾಣಲಿಂಗಿಗೆ ಆದಿಶಕ್ತಿ, ಶರಣಂಗೆ ಪರಾಶಕ್ತಿ, ಐಕ್ಯಂಗೆ ಚಿಚ್ಛಕ್ತಿಗಳು ಅವಶ್ಯಕವಾಗಿರುತ್ತವೆ. ಭಕ್ತನು ಗುರುಲಿಂಗ ಜಂಗಮ ದಾಸೋಹ ಮಾಡಬೇಕಾಗಿರುವದರಿಂದ ಅವನಿಗೆ ಕಾಯಕವು ಅರ್ಥಾತ್ ಕ್ರಿಯಾಶಕ್ತಿಯೂ ಅವಶ್ಯವಾಗಿದೆ. ಮಹೇಶನು ಸಮಾಜದಲ್ಲಿ ಶಾಸ್ತ್ರ, ಪುರಾಣ, ಕೀರ್ತನ, ಶಿಕ್ಷಣ ಮೊದಲಾದ ಕೆಲಸಗಳನ್ನು ಮಾಡಬೇಕಾದ್ದರಿಂದ ಅವನಿಗೆ ಜ್ಞಾನಶಕ್ತಿಯು ಅವಶ್ಯಕ. ಪ್ರಸಾದಿಯು ಶಿವನಿಚ್ಛೆಯಿಂದಲೇ ಸರ್ವ ಕಾರ್ಯಗಳು ನಡೆಯುತ್ತವೆಂದು ಸಂಪೂರ್ಣ ನಂಬಿ ಸಕಲ ಭೋಗೋಪಭೋಗಗಳನ್ನೂ ಸುಖದುಃಖಗಳನ್ನೂ ಶಿವನಿಗೆ ಅರ್ಪಿ

ಸುವವನಾದ್ದರಿಂದ ಪ್ರಸಾದಿಗೆ ಇಚ್ಛಾಶಕ್ತಿಯು ಆವಶ್ಯಕ. ಪ್ರಾಣವೇ ಲಿಂಗವಾಗಿರುವ ಅಂಗನಿಗೆ ಅರ್ಥಾತ್ ಪ್ರಾಣಲಿಂಗಿಗೆ ಶಾರೀರಿಕ ಶಕ್ತಿಯು ಆವಶ್ಯಕವಾಗಿದೆ. ಶರೀರವೇ ಪ್ರಾಣವನ್ನು ಧಾರಣ ಮಾಡುತ್ತದೆ. ಶಾರೀರಿಕ ಶಕ್ತಿಯು ಇಲ್ಲವಾದರೆ ಪ್ರಾಣವೂ ಇರಲಾರದು. ಆದ್ದರಿಂದ ಶರೀರದೊಳಗಿನ ಯೋಗಸಾಧನವಾದ ವಾಯುವೇ ಆದಿಶಕ್ತಿಯೆನಿಸಿದೆ. ವಾಯುವು ಹೋದರೆ ಪ್ರಾಣವು ಹೋಗುವದು. ಆದ್ದರಿಂದ ಪ್ರಾಣಲಿಂಗಕೆ ಆದಿಶಕ್ತಿಯು ಆವಶ್ಯಕ. ಶರಣಂಗೆ ಮಂತ್ರಶಕ್ತಿಯುಂಟು. ಆ ನಾದವೇ ಮಂತ್ರವೆನಿಸಿದೆ. ಸ್ತೋತ್ರ ಜಪಾದಿಗಳಿಗಿಂತಲೂ ಮಂತ್ರವು ಎಷ್ಟೋ ಪಟ್ಟು ಮಿಗಿಲಾಗಿರುವದು. ಮಂತ್ರಶಕ್ತಿಯಿಂದಲೇ ಶರಣನು ತಾನು ಸತಿ ಲಿಂಗ ಪತಿಯೆಂದು ಪರಮಾತ್ಮನಿಗೆ ತೀರ ಸನಿಹದ ಸಂಬಂಧಿಯಾಗಿ ಬಿಡುವನು. ಆದ್ದರಿಂದ ಶರಣಂಗೆ ಪರಾಶಕ್ತಿಯು ಅವಶ್ಯಕ. ಚಿಚ್ಛಕ್ತಿಯೇ ಶುದ್ಧ ಭಾವವಾಗಿರುವದರಿಂದ ಶಿವಜೀವೈಕ್ಯಕ್ಕೆ ಭಾವವೇ ಅರ್ಥಾತ್ ಭಕ್ತಿಯೇ ಮೂಲ ಕಾರಣ. ಆ ಭಕ್ತಿಗೆ ನೆಲೆಗಟ್ಟಾದ ಚಿಚ್ಛಕ್ತಿಯು ಐಕ್ಯಂಗೆ ಅತ್ಯಂತ ಅವಶ್ಯಕ.

---

# ಗೀತೆಯ ಸಂದೇಶ

[ ಲೇಖಕರು:- ಶ್ರೀಮಾನ್ ವೀರಪ್ಪ ಯಗಟಿ, ಬಿ. ಎ. ಎಲ್. ಎಲ್. ಬಿ. ]

ಮಾನವನಿಗೆ ಸಂಸಾರ ಸಾಗರದಲ್ಲಿ ಆಗಾಗ್ಗೆ ಉಂಟಾಗುವ ಕಷ್ಟನಷ್ಟಗಳಲ್ಲಿ, ಎಡರು ತೊಡರುಗಳಲ್ಲಿ, ಸುಖದುಃಖಗಳಲ್ಲಿ ಅನುಸರಿಸಲು ಯೋಗ್ಯವಾದ ಮಾರ್ಗವನ್ನು ತೋರಿಸಿ ಹೃದಯಕ್ಕೆ ಧೈರ್ಯವನ್ನೂ, ಮನಸ್ಸಿಗೆ ಶಾಂತಿಯನ್ನೂ, ಆತ್ಮಕ್ಕೆ ಆನಂದವನ್ನೂ ಉಂಟುಮಾಡುವ ತತ್ವಬೋಧೆಯ ಗ್ರಂಥಗಳಲ್ಲಿ ಭಗವದ್ಗೀತೆಯು ಒಂದಾಗಿದೆ. ಜಗತ್ತಿನ ಅನೇಕ ಭಾಷೆಗಳಲ್ಲಿ ಅದರ ಪರಿವರ್ತನೆಯಾಗಿರುವದೇ ಇದಕ್ಕೆ ಸಾಕ್ಷಿ. ಗೀತೆಯಂತೆ ಬೈಬಲ್, ಕುರಾನ, ಝೆಂಡಅವೆಸ್ತಾ, ಉಪನಿಷತ್, ವಚನಸಾಹಿತ್ಯ, ಸಾಧುಸಂತರ ಅಭಂಗಗಳು ಮೋಕ್ಷಮಾರ್ಗವನ್ನು ಬೋಧಿಸುವ ಗ್ರಂಥಗಳಾಗಿವೆ. ಸಂಕಟಗಳ ಸಂಕೋಲೆಯಲ್ಲಿ ಸಿಲುಕಿ ಬಳಲುವ ಮಾನವರಿಗೆ ಇವು ಆತ್ಮಾನುಭವವನ್ನು ನೀಡಿ ಶಾಂತಿಯನ್ನುಂಟುಮಾಡುವ ಸಾಧನಗಳಾಗಿವೆ.

ಮನುಷ್ಯನನ್ನು ದುರ್ಗತಿ ಮತ್ತು ಸದ್ಗತಿಗಳಿಗೆ ಒಯ್ಯುವ ಪ್ರವೃತ್ತಿ ಮತ್ತು ನಿವೃತ್ತಿಗಳೆಂಬ ಎರಡು ಮಾರ್ಗಗಳುಂಟು. ಇಂದ್ರಿಯಗಳು ಬಯಸುವ ವಿಷಯ ಸುಖಕ್ಕೆ ಮನಸ್ಸು ಮಾಡಿದಲ್ಲಿ ಬಿರುಗಾಳಿಯ ಆಘಾತಕ್ಕೆ ಸಿಲುಕಿ ಬಂಡೆಗಲ್ಲಿಗೆ ತಾಕಿ ಪುಡಿಪುಡಿಯಾಗುವ ನೌಕೆಯಂತೆ ಮನುಷ್ಯನ ಅಧೋಗತಿಯುಂಟಾಗುವದು. ಬಹಿರ್ಮುಖವಾದ ಇಂದ್ರಿಯಗಳನ್ನು ನಿಗ್ರಹಿಸಿ ಅಂತರ್ಮುಖವಾಗಿ ಆತ್ಮದ ಕಡೆಗೆ ತಿರುಗಿದಲ್ಲಿ ನಿಜವಾದ ಶಾಂತಿ ಹಾಗು ಶ್ರೇಷ್ಠ ಗತಿಯು ದೊರಕುವದು. ಆಳವಾಗಿ ಆಲೋಚಿಸಿದಲ್ಲಿ ಜಗತ್ತಿನ ಸರ್ವ ಪ್ರಾಣಿಗಳಲ್ಲಿರುವ ಜೀವಾತ್ಮಗಳು ಒಬ್ಬ ಪರಮಾತ್ಮನ ಪರಂಜ್ಯೋತಿಯ ಕಿರಣಗಳೆಂಬದು ಅನುಭವಕ್ಕೆ ಬರುವದು. ಹಾಗಿರದಿದ್ದರೆ ಇತರ ಪ್ರಾಣಿಗಳಲ್ಲಿ ನಾವು ಪ್ರೇಮ ತೋರಿಸುವದು ಸಾಧ್ಯವಾಗದು. ಇತರರ ದುಃಖಗಳಲ್ಲಿ ನಾವು ಭಾಗಿಯಾಗುವದು ಸಹಜವಲ್ಲ. ಆತ್ಮಗಳ ಏಕತ್ವವಿರುವದರಿಂದಲೇ ಪರಸ್ಪರರಲ್ಲಿ ಪ್ರೇಮ, ಸಹಾನುಭೂತಿ, ಸಹಾಯ ವಿತರಣೆಗಳಿಗೆ ಆಸ್ಪದವಾಗಿದೆ. ಈ ಪಾರಮಾರ್ಥಿಕ ತತ್ವವನ್ನನುಸರಿಸುವವನು

ದೈವೀಪುರುಷನೆಂತಲೂ, ಶರಣನೆಂತಲೂ, ಬ್ರಹ್ಮಜ್ಞಾನಿಯೆಂತಲೂ ಗಣಿಸಲ್ಪಡುವನು. ಈತನು ಕರ್ತವ್ಯಕ್ಕಾಗಿ ಕಾರ್ಯ ಮಾಡುತ್ತ, ಸಂಸಾರದ ಜಾಲದಲ್ಲಿ ಸಿಲುಕದೆ ತಾನು ಮಾಡುವ ಕಾರ್ಯದ ಫಲವನ್ನು ಅಪೇಕ್ಷಿಸದೆ ನಿಷ್ಕಾಮಕರ್ಮದಿಂದ ತನ್ನ ಆತ್ಮದಲ್ಲಿ ತೃಪ್ತಿಯುಳ್ಳವನಾಗಿರುವನು. ಹೀಗೆ ಆತ್ಮಜ್ಞಾನವಿಲ್ಲದವನು ಸಂಸಾರದ ಬಲೆಯಲ್ಲಿ ಸಿಲುಕಿ ಇಂದ್ರಿಯಗಳ ಅಲ್ಪಾವಧಿ ಸುಖಕ್ಕೆ ಒಳಗಾಗಿ ಇತರರನ್ನು ದ್ವೇಷಿಸುವನು. ಆತ್ಮಾನುಭವವಿಲ್ಲದಿರುವದೇ ಇದಕ್ಕೆ ಕಾರಣವು.

## ಆತ್ಮಜ್ಞಾನಿಗಳೇ ಅನುಭಾವಿಗಳು.

ಆತ್ಮಜ್ಞಾನವೇ ಅನುಭಾವವೆಂದು ಹೇಳಿಸಿಕೊಳ್ಳುವದು. ಆತ್ಮಜ್ಞಾನಿಗಳೇ ಅನುಭಾವಿಗಳು (*mysties*). ಆತ್ಮಜ್ಞಾನವನ್ನು ಅವಲಂಬಿಸದ ನಾಸ್ತಿಕರು (*atheists*), ಸಂದೇಹವಾದಿಗಳು (*agnostics*), ಕ್ಷಣಿಕ ಸುಖ ಬಯಸುವ ಇಂದ್ರಿಯ ಸುಖವಾದಿಗಳು (*Hedonists*); ಜಡವಸ್ತುಗಳಿಂದ ಜೀವ ಹುಟ್ಟುವದೆಂಬ ಜಡವಾದಿಗಳು (*materialists*) ಇತರ ಪ್ರಾಣಿಗಳನ್ನು ತಮ್ಮ ಆತ್ಮದಂತೆ ಭಾವಿಸುವದಿಲ್ಲ. ಇತರ ಪ್ರಾಣಿಗಳ ಪೀಡೆಯಿಂದ ತಮ್ಮ ಸುಖ ಸಾಧಿಸುತ್ತಾರೆ. ತನ್ನಂತೆ ಎಲ್ಲ ಪ್ರಾಣಿಗಳನ್ನು ಕಾಣುವವನಿಗೆ ಜಗತ್ತೇ ತಾನು ತಾನೇ ಜಗತ್ತು ಎಂಬ ಭಾವನೆಯುಂಟಾಗುವದು. ಇಂಥವನಿಗೆ ವೈರಿಗಳೆಲ್ಲಿಂದ ಉಂಟಾಗಬೇಕು ? ದ್ವೇಷದಿಂದ ದ್ವೇಷವೂ, ಪ್ರೇಮದಿಂದ ಪ್ರೇಮವೂ ಪರಿಣಮಿಸುವವು. ಭೇದಭಾವನೆಯಿಂದ ಭಯ, ದ್ವೇಷ, ಅಹಂಕಾರ, ದರ್ಪ, ಕಾಮ, ಕ್ರೋಧ, ಪರವಸ್ತುಗಳ ಅಪಹರಣಗಳು ಸಂಭವಿಸುವವು. ಐಕ್ಯ ಭಾವನೆಯಿಂದ ನಿರ್ಭಯ, ಪ್ರೇಮ, ನಿರಹಂಕಾರ, ವಿನಯ, ನಿಷ್ಕಾಮ, ಶಾಂತಿ, ದಾನ ಗುಣಗಳು ಅಂಕುರಿಸುವವು. ಇಂಥವನಿಗೆ ಎಲ್ಲರಿಂದ ಪ್ರೇಮವೇ ಪ್ರತಿಫಲವಾಗಿ ದೊರಕುವದು.

ವ್ಯವಹಾರದಲ್ಲಿ ಮನುಷ್ಯನಿಗೆ ಕೆಲವು ಬಿಕ್ಕಟ್ಟಿನ ಸಮಸ್ಯೆಗಳು ಎದರಾಗುವವು. ಅಂತಹ ಸಂದರ್ಭಗಳಲ್ಲಿ ಅವನು ಹೇಗೆ ವರ್ತಿಸಬೇಕೆಂಬ ವಿಚಾರದ ಗೊಂದಲದಲ್ಲಿ ಬೀಳುವನು. ಅವನು ಚಂಚಲ ಬುದ್ಧಿಯುವನಿದ್ದರಂತೂ ಯೋಗ್ಯಮಾರ್ಗವನ್ನವಲಂಬಿಸದೆ ಕರ್ತವ್ಯವಿಮುಖನಾಗುತ್ತಾನೆ. ಅರ್ಜುನನಿಗಾದರೂ ಇಂತಹ ಪರಿಸ್ಥಿತಿಯು ಸಂಭವಿಸಿತು. ಬಂಧುಗಳಾದ ಕೌರವರು ರಾಜ್ಯಸಂಪತ್ತನ್ನು ತಾವೇ ಭೋಗಿಸುತ್ತ ಪಾಂಡವರಿಗೆ ಒಂದು

ಅಡಿಯಷ್ಟು ಭೂಮಿಯನ್ನಾದರೂ ಕೊಡುವದಿಲ್ಲವೆಂದು ಪಣತೊಟ್ಟಿರಲು ಯುದ್ಧಮಾಡಿ ರಾಜ್ಯ ಪಡೆಯುದ ಹೊರತು ಗತ್ಯಂತರವಿರಲಿಲ್ಲ. ಎರಡೂ ಪಕ್ಷಗಳ ಸೇನೆಗಳು ಸಿದ್ಧವಾಗಿ ಕುರುಕ್ಷೇತ್ರದಲ್ಲಿ ತಮ್ಮ ಬಾಹುಬಲದಿಂದ ಗೆಲವು ಸೋಲುಗಳನ್ನು ನಿರ್ಧರಿಸಿಕೊಳ್ಳಲು ಇಚ್ಛಿಸಿದರು. ಅರ್ಜುನನು ತನಗೆ ಎದುರಾಗಿ ನಿಂತ ಕೌರವಸೇನೆಯಲ್ಲಿ ಬಂಧುಗಳನ್ನು, ಮಿತ್ರರನ್ನು, ಗುರುಗಳನ್ನು ನೋಡಿ ಅವರನ್ನು ಕೊಲ್ಲುವದು ಹೇಗೆ ? ಪಾಪವೇ ತನಗೆ ತಲ್ಪುವದೆಂಬ ಕನಿಕರ ಹೃದಯವುಳ್ಳವನಾಗಿ ಬಿಲ್ಲು ಬಾಣಗಳನ್ನು ನೆಲಕ್ಕಿಳುಹಿದನು.

ಆಗ ಪಾಂಡವರ ಬಂಧುವೂ, ಹಿತೈಷಿಯೂ, ಮಿತ್ರನೂ ಆದ ಶ್ರೀ ಕೃಷ್ಣನು ಅರ್ಜುನನ ಹೃದಯ ದೌರ್ಬಲ್ಯವನ್ನು ಹೋಗಲಾಡಿಸಲು ಗೀತೆಯಲ್ಲಿ ಅಡಕವಾದ ತತ್ವಗಳನ್ನು ಅರ್ಜುನನಿಗೆ ಬೋಧಿಸುತ್ತಾನೆ. ಕೃಷ್ಣನು ಯದುವಂಶದಲ್ಲಿ ಮಾನವರೂಪದಲ್ಲಿ ಜನಿಸಿದಾಗ್ಯೂ ಆತನು ವಿಷ್ಣುವಿನ ಅವತಾರವೆಂದು ಹಿಂದುಗಳ ಭಾವನೆ. ಅರ್ಜುನನನ್ನು ಯುದ್ಧಕ್ಕೆ ಹುರಿದುಂಬಿಸಲು ಕೃಷ್ಣನು ತನ್ನಲ್ಲಿಯೇ ಎಲ್ಲ ಜಗತ್ತು ಉಂಟೆಂಬದನ್ನು ವ್ಯಕ್ತಮಾಡಲು ತನ್ನ ವಿಶ್ವರೂಪವನ್ನು ತೋರಿಸಿದ್ದಾನೆ. ಪ್ರಾಣಘಾತವು ಪಾಪಕರವೆಂಬುದು ಸರ್ವಸಮ್ಮತವಾದ ತತ್ವವು. ಆದರೆ ಕೃಷ್ಣನು ಈ ತತ್ವಕ್ಕೆ ಒಂದು ಅಪವಾದವಿರುವದೆಂಬದನ್ನು ತೋರಿಸಿದ್ದಾನೆ. ಯಾವನು ದುಷ್ಟನಾಗಿರುವನೋ ಯಾವನು ಪರಪೀಡನೆಯಿಂದ ಆತ್ಮಸಂತೋಷವನ್ನು ಹೊಂದುತ್ತಾನೋ ಅಂಥವನನ್ನು ಕೊಲ್ಲುವದು ಕ್ಷತ್ರಿಯನಿಗೆ ಪಾಪವಲ್ಲವೆಂದು ಹೇಳಿದ್ದಾನೆ. ಬಂಧುಗಳನ್ನಾಗಲಿ, ಗುರುಗಳನ್ನಾಗಲಿ ಕೊಂದಾಗ್ಯೂ ಅವರ ದೇಹ ನಾಶವಾಗುವದಲ್ಲದೆ ಆತ್ಮ ನಾಶವಾಗುವದಿಲ್ಲ. ಯಾಕೆಂದರೆ ಆತ್ಮವು ಅಮರವಾಗಿದೆ, ದೇಹಗಳು ನಾಶಕ್ಕೊಳಗಾಗಿವೆ. "ಅಂತವಂತ ಇಮೆ ದೇಹಾ ನಿತ್ಯಸ್ಯೋಕ್ತಾ ಶರೀರಿಣಃ॥" ಎಂತಲೂ "ನಜಾಯತೆ ಮ್ರಿಯತೆವಾ ಕದಾಚಿತ್ ಅಜೋ ನಿತ್ಯಃ ಶಾಶ್ವತೋಯಂ ಪುರಾಣೋ। ನಹನ್ಯತೆ ಹನ್ಯಮಾನೆ ಶರೀರೆ" ಆತ್ಮವು ಎಂದೂ ಹುಟ್ಟುವದೂ ಇಲ್ಲ, ಸಾಯುವದೂ ಇಲ್ಲ. ಅದು ಶಾಶ್ವತವಾದದ್ದು; ದೇಹ ನಾಶವಾದರೂ ಅದು ನಾಶವಾಗುವದಿಲ್ಲ." ಎಂದು ಆತ್ಮದ ಅಮರತ್ವವನ್ನು ಅರ್ಜುನನಿಗೆ ತಿಳುಹಿ ತಾನು ಯಾರನ್ನು ಕೊಲ್ಲುವನೋ ಅವರ ದೇಹಗಳು ಮಾತ್ರ ನಾಶವಾಗುವವಲ್ಲದೆ ಆತ್ಮಗಳು

ನಾಶವಾಗುವದಿಲ್ಲವೆಂತಲೂ ಜನನ, ಜರಾಮರಣಗಳು ದೇಹಕ್ಕೆ ಮಾತ್ರ ಸಂಬಂಧಿಸಿದ್ದು ಆತ್ಮಕ್ಕೆ ಸಂಬಂಧಿಸಿಲ್ಲವೆಂತಲೂ ಹೇಳಿ ಕೃಷ್ಣನು ಅರ್ಜುನನ ದೌರ್ಬಲ್ಯವನ್ನು ಹೋಗಲಾಡಿಸುತ್ತಾನೆ.

ಆಮೇಲೆ ಕೃಷ್ಣನು ಅರ್ಜುನನಿಗೆ ಕೇಳುತ್ತ ಹೋದ ಪ್ರಶ್ನೆಗಳಿಗೆ ಉತ್ತರ ಹೇಳುತ್ತ ಹೋಗಿ ಮಾನವನು ಜಗತ್ತಿನಲ್ಲಿ ಅನುಸರಿಸಬೇಕಾದ ವೃತ್ತಿ, ಪಾಲಿಸಬೇಕಾದ ಧರ್ಮ, ನೀತಿ ದೇಹಯಾತ್ರೆಗಾಗಿ ಆಚರಿಸತಕ್ಕ ಕರ್ಮ ಮಾರ್ಗ, ಸ್ಥಿತಪ್ರಜ್ಞನಾಗಿ ಶಾಂತಿಯನ್ನು ಹೊಂದುವ ರೀತಿ. ಇಂದ್ರಿಯ ನಿಗ್ರಹದಿಂದ ಆತ್ಮಜ್ಞಾನ. ಆನಂತರ ಬ್ರಹ್ಮಜ್ಞಾನ ಸಂಪಾದಿಸುವ ಮಾರ್ಗ ವನ್ನೂ ಬೋಧಿಸುತ್ತಾನೆ.

ಇಂದ್ರಿಯಗಳು ಬಯಸುವ ವಿಷಯ ಸುಖಗಳಿಗೆ ಒಳಗಾಗದಿರುವದು, ಸಂಸಾರದ ಮೋಹದಲ್ಲಿ ಸಿಲುಕದಿರುವದು ನಿಷ್ಕಾಮ ಬುದ್ಧಿಯಿಂದ ಅಂದರೆ ಫಲಾಪೇಕ್ಷೆಯಿಲ್ಲದೆ ಕರ್ಮ ಮಾಡುವದು ಮತ್ತು ಜಯಾಪಜಯ ಗಳಲ್ಲಿ ಸಮಭಾವನೆಯಿಂದಿರುವದು ಗೀತಾ ಬೋಧೆಯ ಗುಟ್ಟಾಗಿರುವದು. ವಿಷಯ ಸುಖಗಳನ್ನು ಬಯಸಿದಾಗ ಅವುಗಳನ್ನು ಭೋಗಿಸುವ ಆಸಕ್ತಿ ಯುಂಟಾಗುವದು. ಆಸಕ್ತಿಯಿಂದ ಭೋಗಿಸುವ ಇಚ್ಛೆಯುಂಟಾಗುವದು. ಇಚ್ಛೆಯು ಸಾಧಿಸದಿದ್ದಾಗ ಕೋಪವುಂಟಾಗುವದು. ಕೋಪದಿಂದ ಮೋಹವೂ, ಮೋಹದಿಂದ ಭ್ರಾಂತಿಯೂ ಭ್ರಾಂತಿಯಿಂದ ಬುದ್ಧಿನಾಶವೂ, ಬುದ್ಧಿನಾಶದಿಂದ ಮಾನವನ ನಾಶವೂ ಉಂಟಾಗುವದು. ಈ ಪರಂಪರೆ ಯನ್ನು ತಪ್ಪಿಸಲು ವಿಷಯ ಸುಖದ ಬಯಕೆಯನ್ನೇ ಮೊದಲಿಗೆ ತೊಲಗಿ ಬಿಡಬೇಕು. ಇಂಥವನಿಗೇ ಶಾಂತಿಯು ಲಭಿಸುವದು. ಮನುಷ್ಯನು ಯಾವು ದರಿಂದ ಪ್ರೇರಿತನಾಗಿ ತನ್ನ ಇಚ್ಛೆಯ ವಿರೋಧವಾಗಿ ಪಾಪಮಾಡುತ್ತಾ ನೆಂದು ಅರ್ಜುನನು ಕೃಷ್ಣನಿಗೆ ಪ್ರಶ್ನೆಮಾಡುತ್ತಾನೆ. ಅದಕ್ಕೆ ಕೃಷ್ಣನು ಕಾಮವೆಂಬ ವೈರಿಯು ಇಂದ್ರಿಯ, ಮನಸ್ಸು, ಬುದ್ಧಿಗಳಲ್ಲಿ ಮನೆಮಾಡಿ ಕೊಂಡು ಜ್ಞಾನವನ್ನು ಮರೆಮಾಡಿ ಆತ್ಮವನ್ನು ಮೋಹಗೊಳಿಸುವದು. ಆದುದರಿಂದ ಪಾಪಕ್ಕೂ, ಜ್ಞಾನಹಾನಿಗೂ ಕಾರಣವಾದ ಇಂದ್ರಿಯಗಳನ್ನು ಮೊದಲು ನಿಗ್ರಹಿಸು, ಎಂದು ಕೃಷ್ಣನು ಹೇಳಿದ್ದಾನೆ.

ಗೀತೆಯ ನಾಲ್ಕನೆಯ ಅಧ್ಯಾಯದಲ್ಲಿ ಕೃಷ್ಣನು ತನ್ನ ಅವತಾರದ ಉದ್ದೇಶವನ್ನು ಕುರಿತು ತಾನು ಪ್ರತಿ ಯುಗದಲ್ಲಿಯೂ ಶಿಷ್ಟರ ಪಾಲನೆ

ಗಾಗಿ ಮತ್ತು ದುಷ್ಟರ ನಾಶಕ್ಕಾಗಿ ಜನ್ಮತಾಳುವೆನೆಂದು ಹೇಳಿದ್ದಾನೆ. ನಾಲ್ಕು ವರ್ಣಗಳು ಗುಣಕರ್ಮ ಭೇದದಿಂದ ತನ್ನಿಂದಲೇ ನಿರ್ಮಿತವಾಗಿ ರುವವೆಂದು ಈ ಅಧ್ಯಾಯದಲ್ಲಿ ಕೃಷ್ಣನ ಉಕ್ತಿ ಇದೆ. ಇದರಿಂದ ನಾಲ್ಕು ವರ್ಣಗಳು ದೇವನಿರ್ಮಿತವೆಂದು ಭಾಸವಾಗುವದು. ಆದರ ಸದ್ಯದ ವರ್ಣ ವಿಭಾಗದ ಸ್ಥಿತಿಯನ್ನು ಪರಿಶೀಲಿಸಿದರೆ ಈ ಉಕ್ತಿಯ ತಥ್ಯವು ಉಳಿಯು ವದಿಲ್ಲ. ಈಗ ಶೂದ್ರನು ಸೇವಾವೃತ್ತಿಯನ್ನು ತೊರೆದು ಮೇಲಿನ ವರ್ಣ ದವರು ಮಾಡುವ ಉದ್ಯೋಗ ಕೈಕೊಂಡಿದ್ದಾನೆ. ಹಾಗೆಯೇ ಮೇಲಿನ ವರ್ಣದವರು ವೇದಾಧ್ಯಯನ, ಯುದ್ಧ, ಕೃಷಿ, ವ್ಯಾಪಾರಗಳನ್ನು ಬಿಟ್ಟು ಉಳಿದ ವರ್ಣಗಳು ಅನುಸರಿಸುವ ಉದ್ಯೋಗದಲ್ಲಿ ತೊಡಗಿದ್ದಾರೆ. ಅಂದ ಬಳಿಕ ವರ್ಣಭೇದವು ದೇವನಿರ್ಮಿತವಿರದೆ ಮನುಷ್ಯ ಕಲ್ಪಿತವೆಂಬುದು ಗೊತ್ತಾಗುವದು. ಗೀತೆಯ ಕಾಲವು ಸುಮಾರು ಮೂರು ಸಾವಿರ ವರ್ಷ ಗಳ ಪೂರ್ವದ ಕಾಲವು. ಆಗ ಪ್ರಚಲಿತವಿದ್ದ ಸಾಮಾಜಿಕ ಸ್ಥಿತಿಯನ್ನೇ ಗೀತೆಯು ಪ್ರತಿಧ್ವನಿಗೊಳಿಸಿದೆ.

ಎಲ್ಲ ಯಜ್ಞಗಳಿಗಿಂತ ಜ್ಞಾನಯಜ್ಞವು ಶ್ರೇಷ್ಠವೆಂತಲೂ, ಯಾವನು ಎಲ್ಲ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ನನ್ನಲ್ಲಿ ಭಕ್ತಿಯಿಂದ ಅರ್ಪಿಸುವ ಬುದ್ಧಿಯಿಂದ ಮಾಡುತ್ತಾನೋ ಅವನು ನನ್ನನ್ನು ಹೊಂದುವನೆಂದು ಕೃಷ್ಣನು ಹೇಳಿದ್ದಾನೆ. ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವೇ ಉತ್ತಮ ವೆಂದು ಹೇಳಲಾಗಿದೆ. ಯೋಗಿಗಳು ಆತ್ಮಶುದ್ಧಿಗಾಗಿ ಫಲಾಪೇಕ್ಷೆಯಿಲ್ಲದೆ ದೇಹ, ಮನಸ್ಸು, ಬುದ್ಧಿ, ಮತ್ತು ಇಂದ್ರಿಯಗಳಿಂದ ಕರ್ಮಮಾಡುತ್ತಾರೆ. ನಿಷ್ಕಾಮಕರ್ಮಿಯು ಶಾಶ್ವತ ಶಾಂತಿಯನ್ನೂ, ಫಲಾಸಕ್ತನಾದವನು ಅಶಾಂತಿ ಯನ್ನೂ ಹೊಂದುವರು.

ತನ್ನ ಆತ್ಮವೂ ಎಲ್ಲ ಜೀವಜಂತುಗಳ ಆತ್ಮವೂ ಒಂದೇ ಎಂದು ಭಾವಿಸುವ ಜ್ಞಾನಿಯು, ಬ್ರಾಹ್ಮಣ, ಅಂತ್ಯಜ, ಪಶು ಮೊದಲಾದ ಜೀವಿ ಗಳನ್ನು ಸಮವಾಗಿ ಕಾಣುತ್ತಾನೆ. ಅಜ್ಞಾನಿಯು ಭೇದಬುದ್ಧಿಯಿಂದ ಕಾಣು ತ್ತಾನೆ. ಇದರಿಂದ ಚಾತುರ್ವರ್ಣ ತಾರತಮ್ಯವು ಉದ್ಯೋಗದ ಮೂಲಕ ಉಂಟಾದದ್ದೆಂಬದು ಹಾಗು ಮೇಲು, ಕೀಳು ಎಂಬ ಭಾವನೆಯಿಂದ ಉಂಟಾದುದಲ್ಲವೆಂಬದು ಸ್ಪಷ್ಟವಾಗುತ್ತದೆ. (ಅ. ೫ ಶ್ಲೋ ೧೮) ಯಾವನು ಅಂತರಾತ್ಮದ ಜ್ಯೋತಿಯನ್ನು ಕಾಣುವನೋ, ಯಾವನು ಆತ್ಮತೃಪ್ತನೋ, ಯಾವನು ಆತ್ಮದಲ್ಲಿ ಸಂತೋಷಪಡುವನೋ ಅಂತಹ ಯೋಗಿಯು ಬ್ರಹ್ಮ

ನಾಗಿ ಬ್ರಹ್ಮನಿರ್ವಾಣವನ್ನು ಹೊಂದುತ್ತಾನೆ. ಈ ತತ್ವದ ಮೂಲಕ ಗೀತೆಯು ಅದ್ವೈತವನ್ನು ಪ್ರತಿಪಾದಿಸಿರುವದು. ಯಾವ ಮುನಿಯು ಇಂದ್ರಿಯ, ಮನಸ್ಸು, ಬುದ್ಧಿಗಳನ್ನು ವಶಪಡಿಸಿಕೊಂಡು ಆಶಾ, ಭಯ, ಕ್ರೋಧಗಳನ್ನು ತೊಲಗಿ ವರ್ತಿಸುತ್ತಾನೋ ಅವನು ಸದ್ಯೋನ್ಮುಕ್ತನು. ಇಂಥವನಿಗೆ ಶರಣನೆಂದು ವೀರಶೈವವು ಹೇಳುತ್ತದೆ. ಶರಣನು ದೇಹದ ವ್ಯಾಪಾರವನ್ನು ಸಹ ತೊಲಗಿ ಸಮಾಧಿಸ್ಥನಾಗಲು ಕೇವಲ ಬ್ರಹ್ಮರೂಪ ವನ್ನು ಹೊಂದುತ್ತಾನೆ. ಆಗ ಅವನಿಗೆ ಐಕ್ಯನೆಂಬ ಹೆಸರು. ಇದಕ್ಕೆ ಕೇವಲಾದ್ವೈತ ಅಥವಾ ಶಿವಾದ್ವೈತವೆಂದು ಹೆಸರುಂಟಾಗಿದೆ.

ಯೋಗಸಾಧಕನು ಏಕಾಂತಸ್ಥಳದಲ್ಲಿ ಕುಳಿತು ದೇಹವನ್ನು ಸ್ಥಿರ ಗೊಳಿಸಿ, ಆಸನದಲ್ಲಿ ಕುಳಿತು ಏಕಾಗ್ರಚಿತ್ತನಾಗಬೇಕು; ಆಹಾರ ವಿಹಾರ ಗಳಲ್ಲಿ, ನಿದ್ರೆ, ಕರ್ಮಗಳಲ್ಲಿ ಮಿತವುಳ್ಳವನಿರಬೇಕು; ಇಂದ್ರಿಯಗಳನ್ನು ಮನಸ್ಸಿನಿಂದ ಗೆಲ್ಲಬೇಕು; ಆಶೆಗಳ ಬೇರನ್ನೇ ಕಿತ್ತೊಗೆಯಬೇಕು. ಲಾಭ ಹಾನಿಗಳಲ್ಲಿ ಸಮವಾಗಿರಬೇಕು. ಹಲವೆಡೆಗಳಲ್ಲಿ ಹರಿದಾಡುವ ಮನಸ್ಸನ್ನು ಆತ್ಮದ ಅಧೀನದಲ್ಲಿರಿಸಬೇಕು. ಇಂಥ ಯೋಗಿಯು ಸುಖದುಃಖಗಳ ಸ್ಪರ್ಶ ವಿಲ್ಲದೆ ಬ್ರಹ್ಮಾನುಸಂಧಾನದಿಂದ ಬ್ರಹ್ಮಾನಂದವನ್ನು ಅನುಭವಿಸುತ್ತಾನೆ. ಮನಸ್ಸು ಚಂಚಲವಾಗಿದ್ದು ಅದನ್ನು ಸತತವಾದ ಅಭ್ಯಾಸದಿಂದ ಮತ್ತು ವೈರಾಗ್ಯದಿಂದ ಗೆಲ್ಲಬಹುದು. ಸತ್ವ, ರಜ ಮತ್ತು ತಮೋಗುಣಗಳಿಂದ ಕೂಡಿದ ನನ್ನ ಮಾಯೆಯಿಂದ ಮೋಹಿತರಾದ ಜೀವಿಗಳು ನನ್ನನ್ನು ಅರಿ ಯರು. ದುಃಖಿತರು, ಜಿಜ್ಞಾಸುಗಳು, ಅರ್ಥಸಾಧಕರು ಮತ್ತು ಜ್ಞಾನಿಗಳು ನನ್ನನ್ನು ಅರ್ಚಿಸುತ್ತಾರೆ. ಇವರಲ್ಲಿ ಜ್ಞಾನಿಗಳು ನನಗೆ ಅತ್ಯಂತ ಪ್ರಿಯರು. ಯಾವನು ನಿತ್ಯವೂ ಏಕಮನಸ್ಸಿನಿಂದ ನನ್ನನ್ನು ಸ್ಮರಿಸುತ್ತಾನೋ ಅವನು ನನ್ನನ್ನು ಹೊಂದುವನು. ನಾನು ಎಲ್ಲ ವಸ್ತುಗಳಲ್ಲಿಯೂ ಹುದುಗಿರು ವೆನು. ಸೃಷ್ಟಿಯ ಕಾಲಕ್ಕೆ ಪ್ರಕೃತಿಯ (*Nature*) ಮೂಲಕ ನಾನು ಎಲ್ಲ ಸಚರಾಚರ ವಸ್ತುಗಳನ್ನು ಹುಟ್ಟಿಸುವೆ. ಪ್ರಳಯ ಕಾಲಕ್ಕೆ ಅವುಗ ಳನ್ನೆಲ್ಲ ನನ್ನಲ್ಲಿ ಅಡಗಿಸಿಕೊಳ್ಳುವೆ. ಅನ್ಯದೇವತೆಗಳನ್ನು ಶ್ರದ್ಧೆಯಿಂದ ಪೂಜಿಸುವವರು ಸಹ ನನ್ನನ್ನೇ ಪೂಜಿಸುತ್ತಾರೆಂದು ಕೃಷ್ಣನ ವಚನವಿದೆ. ಇದರಿಂದ ಗೀತೆಯಲ್ಲಿ ಏಕೇಶ್ವರ ವಾದವು ಪ್ರತಿಪಾದಿತವಾದದ್ದು ಕಂಡು ಬರುತ್ತದೆ. ಯಾರು ನನ್ನನ್ನು ಆಶ್ರಯಿಸುವರೋ ಅಂಥವರು ಸ್ತ್ರೀಯರೇ ಇರಲಿ, ಶೂದ್ರರೇ ಇರಲಿ, ಪಾಪಿಗಳೇ ಇರಲಿ, ಶ್ರೇಷ್ಠ ಸ್ಥಾನ ಹೊಂದುವ

ರೆಂದು ಕೃಷ್ಣನ ವಚನವು (ಅ. ೯. ಶ್ಲೋ. ೩೨) ಇದರಿಂದ ದೇವರಲ್ಲಿ ವರ್ಣ ಭೇದಭಾವವಿರದೆ ಆತನನ್ನು ಒಲಿಸಲು ಭಕ್ತಿಯೊಂದೇ ಒರೆಗಲ್ಲು ಎಂಬದು ಸ್ಪಷ್ಟವಾಗಿದೆ.

ಹದಿಮೂರನೆಯ ಅಧ್ಯಾಯದಲ್ಲಿ ಕೃಷ್ಣನು ದೇಹವೇ ಕ್ಷೇತ್ರವೆಂತಲೂ, ಅದನ್ನು ಅರಿತುಕೊಳ್ಳುವವನೇ ಕ್ಷೇತ್ರಜ್ಞನೆಂತಲೂ, ನಿತ್ಯವಾದ ಅಧ್ಯಾತ್ಮಾನುಭವವೇ ಜ್ಞಾನವೆಂತಲೂ, ಜ್ಞೇಯವು ಪರಬ್ರಹ್ಮವೆಂತಲೂ ಹೇಳಿದ್ದಾನೆ. ಪರಬ್ರಹ್ಮನು ನಿರಾಕಾರನೂ, ನಿರ್ಗುಣನೂ, ಸರ್ವಜ್ಞನೂ, ಸರ್ವವ್ಯಾಪಿಯೂ, ಸರ್ವಸೃಷ್ಟಿಕರ್ತನೂ ಆಗಿದ್ದಾನೆ. ಪ್ರಕೃತಿ, ಪುರುಷರು ಅನಾದಿಕಾಲದಿಂದ ಇರುವರು. ಕಾರಣ ಮತ್ತು ಕಾರ್ಯಗಳಿಗೆ ಪ್ರಕೃತಿಯು ಮೂಲವು, ಸುಖದುಃಖಭೋಗಗಳಿಗೆ ಪುರುಷನು ಕಾರಣನು. ಪ್ರಕೃತಿಯಲ್ಲಿ ಮನೆಮಾಡಿಕೊಂಡಿರುವ ಪುರುಷನು ಪ್ರಕೃತಿಯಿಂದ ಹುಟ್ಟಿದ ಗುಣಗಳನ್ನು ಭೋಗಿಸುತ್ತಾನೆ. ಈ ಗುಣಗಳಲ್ಲಿ ಆಸಕ್ತನಾಗುವ ಮೂಲಕ ಪುರುಷನು ಕೀಳು ಮತ್ತು ಮೇಲು ಜನ್ಮಗಳನ್ನು ತಾಳುತ್ತಾನೆ. ಪ್ರಕೃತಿಗುಣಗಳಿಂದ ಲಿಪ್ತನಾಗದೆ ಸರ್ವಗತನಾದ ಪರಮಾತ್ಮನನ್ನು ಅರಿತವನಿಗೆ ಪುನರ್ಜನ್ಮವಿಲ್ಲ. ಸೂಕ್ಷ್ಮವಾದ ಆಕಾಶವು ಸರ್ವವ್ಯಾಪಿಯಾದಾಗ್ಯೂ ಹೇಗೆ ಯಾವ ವಸ್ತುವಿನಿಂದಲೂ ಲಿಪ್ತವಾಗುವದಿಲ್ಲವೋ ಹಾಗೆಯೇ ಆತ್ಮವು ದೇಹದಲ್ಲೆಲ್ಲ ವ್ಯಾಪಿಸಿದ್ದರೂ ದೇಹಗುಣಗಳಿಂದ ಲಿಪ್ತವಾಗಿರುವದಿಲ್ಲ. ಯಾರು ಕ್ಷೇತ್ರ, ಕ್ಷೇತ್ರಜ್ಞರ ಭೇದವನ್ನು, ಪ್ರಕೃತಿಯಿಂದ ಬಿಡುಗಡೆ ಹೊಂದುವದನ್ನು ಜ್ಞಾನದೃಷ್ಟಿಯಿಂದ ತಿಳಿದುಕೊಳ್ಳುವರೋ ಅವರು ಶ್ರೇಷ್ಠ ಪದವನ್ನು ಹೊಂದುವರು.

ಸತ್ವ, ರಜ, ತಮೋ ಗುಣಗಳು ಪ್ರಕೃತಿಯಿಂದ ಹುಟ್ಟುವವು. ಸತ್ವವು ಆನಂದದಲ್ಲಿ, ರಜಸ್ಸು ಕರ್ಮದಲ್ಲಿ ಆಸಕ್ತಿಯನ್ನುಂಟುಮಾಡುವವು. ತಮಸ್ಸು ಜ್ಞಾನವನ್ನು ಮರೆಮಾಡಿ ಪ್ರಮಾದವನ್ನುಂಟುಮಾಡುವದು. ಜೀವಾತ್ಮವು ಈ ಮೂರುಗುಣಗಳಿಂದ ಮುಕ್ತನಾದಾಗ ಹುಟ್ಟು ಸಾವುಗಳಿಲ್ಲದೆ ಅಮರನಾಗುತ್ತಾನೆ. ಅಹಂಕಾರ, ಮೋಹಗಳಿಲ್ಲದವರು, ತ್ಯಾಗಿಗಳು, ಆತ್ಮತೃಪ್ತರು, ನಿಷ್ಕಾಮಿಗಳು, ಸುಖದುಃಖಗಳಿಂದ ನಿರ್ಲಿಪ್ತರು ನಿತ್ಯಪದವಿಯನ್ನು ಹೊಂದುತ್ತಾರೆ. ನನ್ನ ಅಂಶವೇ ಜಗತ್ತಿನಲ್ಲಿ ಜೀವವಾಗಿರುವದು. ಸೂರ್ಯ, ಚಂದ್ರ, ಅಗ್ನಿಗಳಲ್ಲಿರುವ ಪ್ರಕಾಶವು ನನ್ನದೇ ಆಗಿರುವದು. ಯಾವನಲ್ಲಿ ಅಹಿಂಸೆ, ಸತ್ಯ, ಕ್ಷಮಾ, ಶಾಂತಿ, ದಾನ, ವಿನಯ, ಸದಾಚಾರಗಳಿರುವವೋ ಅವನು ದೈವೀ

ಗುಣಗಳಿಂದ ಶೋಭಿಸುವನು. ಯಾವನಲ್ಲಿ ಅಹಂಕಾರ, ದರ್ಪ, ಕ್ರೋಧ, ಪರಪೀಡೆ, ದುಷ್ಕೃತನಗಳಿರುವವೋ ಅವನು ರಾಕ್ಷಸೀ ಗುಣಗಳಿಂದ ತಿರಸ್ಕಾರಕ್ಕೆ ಆಸ್ಪದನಾಗುವನು. ಇವನು ಜಗತ್ತಿನಲ್ಲಿ ದೇವನಿಲ್ಲವೆಂತಲೂ, ಎಲ್ಲವೂ ತಾನಾಗಿ ಸೃಷ್ಟಿಯಾಗಿರುವದೆಂತಲೂ ಹೇಳಿ ಸ್ವೇಚ್ಛಾಚಾರಿಯಾಗುವನು. ಇಂಥವರು ಲೋಕ ವಿರೋಧಿಗಳಾಗಿ ಜಗತ್ತಿನ ಹಿತವನ್ನು ಕೆಡಿಸುವರು. ಕಾಮ, ಕ್ರೋಧ, ಲೋಭ ಗುಣಗಳು ನರಕಕ್ಕೆ ಕಾರಣಗಳು. ಇವುಗಳನ್ನು ಆಶ್ರಯಿಸಿದವರು ಜನನ ಮರಣ ಚಕ್ರದಲ್ಲಿ ಹೊರಳುತ್ತ ದೇವರ ಸಾನ್ನಿಧ್ಯಹೊಂದಲಾರರು.

ಶುದ್ಧವಾದ ಆಚರಣೆಯು ಮೂರು ವಿಧವಾಗಿ ದೇವಪೂಜೆ, ಸತ್ಯವರ್ತನೆ, ಅಹಿಂಸಾ, ಬ್ರಹ್ಮಚರ್ಯ, ವ್ರತ ಪಾಲಿಸುವದು ದೇಹದಿಂದ ಆಚರಿಸುವ ತಪಸ್ಸು. ವಿನಯಯುಕ್ತ ಮತ್ತು ಸತ್ಯ, ಪ್ರಿಯ, ಹಿತಸಹಿತವಾದ ಮಾತು, ಶಾಸ್ತ್ರಾಭ್ಯಾಸಮಾಡುವದು ಮಾತಿನಿಂದ ಆಚರಿಸುವ ತಪಸ್ಸಾಗಿದೆ. ಪ್ರಸನ್ನ ಮನಸ್ಸು, ಸೌಮ್ಯತನ, ಮೌನ, ಆತ್ಮನಿಗ್ರಹ, ಭಾವಶುದ್ಧಿಯುಳ್ಳವನಾಗಿರುವದು ಮನಸ್ಸಿನಿಂದ ಆಚರಿಸುವ ತಪಸ್ಸಾಗಿದೆ. ಯಾವ ಪ್ರತಿಫಲದ ಅಪೇಕ್ಷೆಯಿಲ್ಲದೆ ಯೋಗ್ಯನಾದವನಿಗೆ ದೇಶ, ಕಾಲ ಪರಿಸ್ಥಿತಿಗನುಸರಿಸಿ ಕೊಡುವ ದಾನವು ಸಾತ್ವಿಕ ಸ್ವರೂಪದ್ದಾಗಿದೆ. ಸುಖವು ಮೂರು ವಿಧವಾಗಿದೆ. ಯಾವದು ಮೊದಲಿಗೆ ವಿಷಪ್ರಾಯವಾಗಿದ್ದು ಕೊನೆಯಲ್ಲಿ ಅಮೃತದಂತೆ ಪ್ರಿಯವಾಗಿರುವದೋ ಆ ಸುಖವು ಆತ್ಮಜ್ಞಾನದ ಫಲವಾಗಿ ಸಾತ್ವಿಕ ಸುಖವಾಗಿದೆ. ವಿಷಯಗಳ ಮತ್ತು ಇಂದ್ರಿಯಗಳ ಸಂಪರ್ಕದಿಂದ ಯಾವದು ಮೊದಲಿಗೆ ಅಮೃತದಂತೆ ಪ್ರಿಯವಾದದ್ದೋ ಮತ್ತು ಪರಿಣಾಮದಲ್ಲಿ ವಿಷರೂಪವಾಗುವದೋ ಅದು ರಾಜಸ ಸುಖವು. ಯಾವದು ಮೊದಲಿಗೆ ಹಾಗು ಕಡೆಗೆ ನಿದ್ರೆ, ಆಲಸ್ಯ, ಪ್ರಮಾದಗಳಿಂದ ಆತ್ಮಮೋಹಕ್ಕೆ ಕಾರಣವಾಗುವದೋ ಅದು ತಾಮಸೀ ಸುಖವು. ಯಾವನು ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ, ಪರಪೀಡೆಗಳನ್ನು ತೊರೆದು ನಿಷ್ಕಾಮಿಯಾಗಿಯೂ ಶಾಂತನಾಗಿಯೂ ಇರುವನೋ ಅವನು ಬ್ರಹ್ಮನಾಗಲು ಯೋಗ್ಯನು. ಇವನು ಎಲ್ಲ ಪ್ರಾಣಿಗಳಲ್ಲಿರುವ ಜೀವಾತ್ಮವು ಬ್ರಹ್ಮನ ಅಂಶವೆಂದೇ ಭಾವಿಸುವನು. ಇವನು ನಿರ್ಭೀತನಾಗಿದ್ದು ಶಾಶ್ವತ ಶಾಂತಿಯನ್ನು ಹೊಂದುವನು.

ಡಾಕ್ಟರ ಭಂಡಾರಕರರು ಗೀತೆಯ ಕಾಲವು ಕ್ರಿಸ್ತ ಪೂರ್ವ ನಾಲ್ಕು ನೂರು ವರ್ಷಗಳಿಂದೂ, ಲೋ. ತಿಲಕರು ಕ್ರಿ.ಪೂ. ೧೪೦೦ ವರ್ಷಗಳಿಂದೂ ಬೆರಿಡೇಲ ಕೀಥರು ಕ್ರಿ. ಶ. ೨೦೦ನೆಯ ವರ್ಷಗಳಿಂದೂ ಅಭಿಪ್ರಾಯಪಟ್ಟಿದ್ದಾರೆ. ಹೀಗೆ ಭಿನ್ನಾಭಿಪ್ರಾಯಗಳಿದ್ದರೂ ಗೀತೆಯಲ್ಲಿ ಸಾಂಖ್ಯ,ಯೋಗ, ಅದ್ವೈತ ದರ್ಶನಗಳ ಸಮನ್ವಯವು ಕಂಡುಬರುವದರಿಂದ ಗೀತೆಯ ಕಾಲವು ಈ ದರ್ಶನಗಳ ಹಾಗು ಉಪನಿಷತ್ತುಗಳ ಕಾಲದ ನಂತರದ್ದು ಎಂದು ಸ್ಪಷ್ಟವಾಗುವದು. ಗೀತೆಯಲ್ಲಿ ಮಾನವನು ಆಚರಿಸತಕ್ಕ ಉತ್ತಮವಾದ ರೀತಿ, ಪಾಲಿಸತಕ್ಕ ಉಜ್ವಲ ನೀತಿ ಹಾಗು ಮೋಕ್ಷ ಹೊಂದಲು ಅನುಸರಿಸತಕ್ಕ ಶ್ರೇಷ್ಠವಾದ ತತ್ವಗಳು ಸಮಾವೇಶವಾಗಿರುವದರಿಂದ ಗೀತೆಯು ಜಗತ್ತಿನ ತತ್ವವೇತ್ತರ ಮಾನ್ಯತೆಗೆ ಪಾತ್ರವಾಗಿದೆ. ಗೀತೆಯು ಅನೇಕ ಭಾಷೆಗಳಲ್ಲಿ ಪರಿವರ್ತನೆಯಾಗಿರುವದು. ಇದಕ್ಕೆ ದೃಷ್ಟಾಂತವು ಸಂಸಾರದ ತೊಡಕಿನಲ್ಲಿ ಸಿಲುಕಿ ಸಂಕಟಪಡುವ ಹಾಗು ಬಿಕ್ಕಟ್ಟಿನ ಸಮಸ್ಯೆಗಳಿಂದ ಎದುರಿಸಲ್ಪಟ್ಟು ಹಿಂದುಮುಂದುಗಾಣದ ಮಾನವನು ಗೀತೆಯಬೋಧೆಯಿಂದ ಶಾಂತಿ ಸುಖಗಳನ್ನು ಪಡೆಯಲು ಶಕ್ತನಾಗುವನು.

# ಬಸವಣ್ಣನವರು



ಬಸವಣ್ಣ ನಮ್ಮ ನಾಡಿನ ಕಣ್ಣ
ಜಗಕೆಲ್ಲ ನೀನಣ್ಣ ಜೇನುಹಣ್ಣ
ಸರ್ವರಲಿ ಸಮತೆಯನು
ಕಂಡಪನು ನೀನಣ್ಣ
ಅದಕಾಗಿ ಹಿರಿಯರಲಿ
ನೀ ಹಿರಿಯನಣ್ಣ
ಶೈವ ಧರ್ಮವನು
ಧೃಡಪಡಿಸಿದವನಣ್ಣ
ದಯವ ಕಂಡವನು
ಧರ್ಮದಲಿ ನೀನಣ್ಣ
ಲಿಂಗಕ್ಕೆ ಕುಲವಿಲ್ಲ
ವೆಂದವನು ನೀನಣ್ಣ
ಅಂತೆ ನೀ ಜಗಕಿತ್ತ
ತತ್ವ ಹೊನ್ನ
ಮತಭ್ರಾಂತಿ ಶೃಂಖಲೆಯ
ಹರಿದ ಕ್ರಾಂತಿಕಾರನಣ್ಣ
ಹಳೆಯದನು ಹರಿದೊಗೆದು
ಹೊಸ ರಾಜ್ಯ ಕಟ್ಟಿದವ
ಬಿಜ್ಜಳನ ಮಂತ್ರಿ ನೀ
ಜನಪ್ರೀಯನಣ್ಣ
ಅಹಿಂಸೆಯೆಂಬುವೀ ಹಿರಿ
ತತ್ವ ನಿನ್ನಲ್ಲಿ ಹುಟ್ಟಿತಣ್ಣ
ಅದರಿಂದೆ ಶಾಂತಿಯೆಂಬ
ತತ್ವವನಿಂದು ಜಗವರಿಯಿತಣ್ಣ
ನಿನ್ನ ವಾದವೆ ಗಾಂಧಿ

ವಾದವಾಯಿತಣ್ಣ
ಗಾಂಧಿವಾದವೆ ಜಗ-
ಕಿಂದು ಬೆಳಕಾಯಿತಣ್ಣ
ವರುಷಗಳಳಿದಂತಿತತ್ವ
ಗಳಳಿಯುವದು ರೂಢಿಯಣ್ಣ
ನೂರೆಂಟು ವರುಷಗಳಳಿದರೂ
ಅಳಿಯದಿಹ ನಿನ್ನ ತತ್ವಗಳೆಂಥವಣ್ಣ
ತಾಯಿ ಗರ್ಭದಿ ಹುಟ್ಟಿ
ಮಗುವು ಬರುವಂತೆ
ಜ್ಞಾನವೆಂಬುವದೆಲ್ಲ
ನಿನ್ನಲ್ಲಿ ಹುಟ್ಟಿತಣ್ಣ.

—ನಿಂ. ಬ. ಸಾವಳಗಿ, ಬಿ. ಎ.
ಹಿಪ್ಪರಗಿ (ಜಮಖಂಡಿ)

............

# ಆಧ್ಯಾತ್ಮಕ ವಚನಗಳು.

( ಲೇಖಕ:— ರೇವಣಸಿದ್ಧಪ್ಪ ಶೀಲವಂತ. )



೧. ಭಕ್ತಿ ಮಾಡುವದು ತ್ರಿಕಾಲಪೂಜೆಯಿಂದಲ್ಲ ನೋಡಯ್ಯಾ । ದೇವನೊಲಿಸುವದು ವ್ರತ, ನೇಮದಿಂದಲ್ಲ ನೋಡಯ್ಯಾ । ಭಕ್ತಿಯಿಂದ ನಿಷ್ಕಾಮಯುತನಾಗಿ " ಶಿವ ಶಿವ " ನೆಂದು ಭಜಿಸಲ್ಕೆ ಸಮಸ್ತಪಾಪಂಗಳು ಲಯವಾಗುವವು ನೋಡಯ್ಯಾ ॥ ಇಂಥ ಭಕ್ತಿಯಿಂದ ಭಜಿಸಿ ಐಕ್ಯಸ್ಥಲ ದಲ್ಲಿ ವಿರಾಜಿಸುತ್ತಿರುವ ಧಾರವಾಡದ ಶ್ರೀ ಮೃತ್ಯುಂಜಯ ಮಹಾಸ್ವಾಮಿ ಗಳವರನ್ನು ಕಂಡು ಧನ್ಯನಾದೆ ನೋಡಯ್ಯಾ ಕೋಟೆಕಲ್ಲ ಶ್ರೀ ಹೊಳೆ ಹುಚ್ಚೇಶ್ವರಾ ॥

೨. ಹುಟ್ಟಿಸಿ ಶ್ರೀ ಗುರುವು ರೇವಣಸಿದ್ಧನೆಂಬ ನಾಮವನಿಟ್ಟರು ನೋಡಾ । ಹಾಕಿದರು ಮಾಯದ ಮಿಸುನಿ ತೊಟ್ಟಿಲಲ್ಲಿ, ಯಶವಕೋರಿ ತೂಗಿಹೋಗಿದರು ನೋಡಾ । ಕಿರುಚಿದೆನುಬಹು ರೋದನದಿಂದ, ಅನಾಥ ನೆಂದು ಆಲಿಸಿ ಶ್ರೀ ಗುರು ಮತ್ತೆವೋಡಿಬಂದ ನೋಡಾ । ಎತ್ತಿ, ತಟ್ಟಿ, ಮುದ್ದಾಡಿ ಸಲುಹುತಿಹನು ಅನೇಕಪರಿಯಿಂದ ನೋಡಾ । ಕೋಟೆಕಲ್ಲ ಶ್ರೀ ಹೊಳೆಹುಚ್ಚೇಶ್ವರಾ, ನೀವೆನಗಾಗಿ ಎಷ್ಟು ಕಷ್ಟಪಡುವಿರಯ್ಯಾ. ॥

೩. ವಿಶ್ವಪ್ರಪಂಚವೇ ಎನ್ನ ಬಂಧು ಬಳಗ ನೋಡಯ್ಯಾ । ವಿಶ್ವ ಕುಲವೇ ಎನ್ನ ಕುಲ ನೋಡಯ್ಯಾ । ವಿಶ್ವಶಾಂತಿಯೇ ಎನ್ನ ಶಾಂತಿ ನೋಡಯ್ಯಾ । ದೇವಾ ನಿರ್ಮ್ಮಾಣಿಯಾಗಿಯೂ ಇದರಲ್ಲಿ ಭಿನ್ನರಿಸಲಾರೆ ನಯ್ಯಾ । ಕೋಟೆಕಲ್ಲ ಶ್ರೀ ಹೊಳೆಹುಚ್ಚೇಶ್ವರ. ॥

೪. ವಿಶ್ವದೊಳು ನಾ ಪುಟ್ಟಲಾರದ ಮನೆಯೊಂದಿಲ್ಲ ನೋಡಯ್ಯಾ । ವಿಶ್ವದೊಳು ನಾ ಪುಟ್ಟಲಾರದ ಜೀವರಾಶಿಯಲ್ಲೊಂದೂ ಉಳಿದಿಲ್ಲ ನೋಡಯ್ಯಾ । ದೇವಾ ಎಲ್ಲವೂ ನೀವಾಗಿರ್ದ ಬಳಿಕ ಅನ್ಯ ಭಾವಿಸಲಾರೆ ನಯ್ಯಾ । ಕೋಟೆಕಲ್ಲ ಶ್ರೀ ಹೊಳೆಹುಚ್ಚೇಶ್ವರಾ. ॥

---

ಮುಂದನರಿಯೆ ಹಿಂದನು ನಾನರಿಯೆ । ಒಂದೆ ಎಂಬ ಭಾವವನರಿಯೆನು । ಸಂದಿಲ್ಲದೆ ನಿಮಗಾನಮಾಡಿದೆನೆಂಬುದ ಮುನ್ನವೆ ಮುನ್ನವೆ ನಾನರಿಯೆ ॥೪॥

ಅಂಗದಲರತಾಚಾರ ವಿಚಾರದ । ಹಂಗುಹರಿದು ಮಾಟದ ಕೂಟದ ಮನ । ದಂಗ ಶಂಕ ನಿಶ್ಶಂಕವಾಗಿ ಪರವಶನಾಗಿರುತಿದ್ದೆನು ॥೫॥

ನಾ ನೀನೆಂಬಭಿಮಾನವರತ ಬಳಿ । ಕಾನೇ ನೀನಾಗಿರುತಿಹೆನು । ನೀನೇ ಮಾಟವು ನೀನೇ ಕೂಟವು ನಾ ನೀನೆಂಬೆಡೆಯೇನಿಲ್ಲ ॥೬॥

ನಿರಹಂಭಾವದೊಳಗೆ ದಾಸೋಹದ । ನಿರಹಂಕೃತಿ ನಿಷ್ಪತಿಯಾಗಿ । ಎರಡರಿಯದೆ ನಿಜ ಪರಮಾನಂದದೊಳಿಪ್ಪೆನು ಕೂಡಲಸಂಗಯ್ಯ ॥೭॥

**ಗದ್ಯ**:– ಇಂತೀ ಪ್ರಕಾರದಿಂ ನೂರೊಂದು ಸ್ಥಲದೊಳಗೆ ಹದಿನೈದನೆಯದಾದ ಶ್ರೀ ಸಹಜ ಮಾಟಸ್ಥಲದ ವಿಚಾರವು ಅನುವಿನಿಂ ಮುಗಿಯಲಾಯಿತು.

ಇಂತೆಂಬಲ್ಲಿಗೆ ಶ್ರೀಮದೇಕೋತ್ತರ ಶತಸ್ಥಲಂಗಳಲ್ಲಿ ಪಿಂಡಾದಿ ಸಹಜ ಮಾಟಾಂತ್ಯವಾದ ಪದಿನೈದು ಶ್ರೀ ಸದ್ಭಕ್ತನ ಸ್ಥಲಂಗಳಾಗಿ ಒಂದನೆಯಂಗ ಸ್ಥಲವು ಮುಗಿದುದು.

ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

---

# ೨. ಮಹೇಶ್ವರ ಸ್ಥಲ

ಸೂತ್ರ:— ಇಂತು ಪಿಂಡಾದಿ ಸಹಜ ಮಾಟಾಂತ್ಯದ ಭಕ್ತಸ್ಥಲದಲ್ಲಿ ಆಚರಿಸುತ್ತ ಮಾಡಿ ಮಾಟವ ಮರೆದು, ಕೂಡಿ ಕೂಟವ ಮರೆದು, ಸಹಜದಲ್ಲೈಕ್ಯವಾದ ಮಹಂತನು, ಮುಂದೆ ನೈಷ್ಠಿಕಾ ಮುಖದಿಂದಲಾ ಚರಿಸಿ ಬೆರಸುವ ಭೇದವೆಂತಿರ್ದುದೆಂದೊಡೆ, ಮುಂದೆ ಮಹೇಶ್ವರ ಸ್ಥಲ ವಾದುದು.

॥ಪದ॥ ರಾಗ ಭೂಪಾಳಿ

ಲೋಕದಂತಪ್ಪನಲ್ಲ ಲೋಕದ ನಡೆನುಡಿಯ। ಲೋಕದ ಬಯಕೆಯ ಬಳಸುವನಲ್ಲ ಕಾಕು ಸಟೆ। ಯ ಕುಳಾಕುಳಿಯ ಕಳೆದು ಶಿವನಾಲೋಕಿಸಿ ಅಜಾತನಾಗಿಪ್ಪ ಸುಯ್ಯಾನಿ ಮುಗುಧಾ ॥ಪಲ್ಲವ॥

ಹಿಡಿದುದ ಬಿಡನು ಬಿಟ್ಟು ರಚ್ಚೆಯ ಬಳಸಿ ಹುಂದ। ನೆಡೆಗೆ ಬೇಸ ರವೋಗಿ ಬಳಲುವನಲ್ಲ ನುಡಿದಂತೆ। ನಡೆವ ನಡೆಯೊಳು ನುಡಿಯ ಪೂರೈಸಿ ನುಡಿಗೆಡೆಗೊಡದ ಬೆಂಗಾಣ ಬಾರದ ಕಲಿ ॥೧॥

ದುರಿತ ಪಂಚೇಂದ್ರಿಯಗಳ ಬಳಿವಿಡಿದು ಭೂತ। ಶರೀರದೊಳು ಬಿಳ್ದು ಬೆಂಬೀಳುವವನಲ್ಲದುರು। ಬರದ ಕಾಮದ ಕತ್ತಲೆಯ ಕಳೆದುಳಿದ ಕಲಿ ಪಿರಿ ದಪ್ಪ ಮಾಯೆಯ ಗೆಲಿದ ನಿರೋಧವಿಲ್ಲದೆ ॥೨॥

ಜಳ ತಾಗಿ ಕಳೆ ಕಾದು ನಿಲವೆಲ್ಲ ಬೆಂದು ಅಸ್ತಿ। ಗಳು ಕಾಹೇರಿ ತೊಳಲಿ ಬಳಲುವನಲ್ಲ। ನಲಿದು ಗುರು ಶರಣೆಂಬ ಸಾವಾಮೃತವನು ಸಲೆ ದಣಿಯಲುಂಡು ಸುಖಿಯಾಗಿಹನು ॥೩॥

ಕೊಲಬಾರದ ಹಗೆಯ ಗೆಲುವ ಕಲಿಯಂತರಂಗ। ದೊಳಗೆ ಹೊಳೆದು ಬಗೆದು ಬಗೆಯೊಳೊತ್ತುತ್ತ। ಕಳಚಿ ಕಣ್ದೆರೆದು ಶಿವಜ್ಞಾನ ರೂಪನುವಾಗಿ ನಿಲಿಸಿ ಮನವ ಲಿಂಗದಲಿ ಆತ್ತಿತ್ತ ಸೂಸದೆ ॥೪॥

ನಡೆವುದು ಲಿಂಗಾಧಾರ ನುಡಿವುದು ಲಿಂಗದವಸರ। ಅದರಿ ಗುರು ಶರಣೆಂಬ ಹಡಗ ಸಂಸ್ಕೃತಿಯ। ಕಡಲ ದಾಂಟಿಯೆ ಕೂಡಲಸಂಗನಲ್ಲಿ ಎಡೆ ವಿಡದಾನಂದ ಲೀಲೆಯೊಳಾಡುತ್ತಿಹನು. ॥೫॥

———

## ೨. ಲಿಂಗನಿಷ್ಠಾ ಸ್ಥಲ

**ಸೂತ್ರ:—** ಇಂತು ಮಹೇಶ್ವರ ಸ್ಥಲದಲ್ಲಿ ಛಲ ನಿಯಮ ವ್ರತದಿಂದ ಕೃತನಿಶ್ಚಯನಾದ ವೀರಮಾಹೇಶ್ವರನು ತನ್ನಂಗದ ಮೇಲಣ ಲಿಂಗದ ನೈಷ್ಠೆಯಂತಿರ್ದುದೆಂದಡೆ ಮುಂದೆ ಲಿಂಗನಿಷ್ಠಾ ಸ್ಥಲವಾದುದು.

॥ಪದ॥ ರಾಗ ಮಧು ಮಾಧವಿ

ಮನ ಭಾವ ಕರಣದೊಳಹೊರಗೆ ತೆರಹಿಲ್ಲದಿಹ। ಘನಲಿಂಗ ಸಂಗದಿಂ ಸುಖಿಯಾದೆನು ॥ಪಲ್ಲವ॥

ಪರತತ್ವ ಲಿಂಗ ಕೈಸಾರಲಾ ಲಿಂಗದೊಳು ತೆರಹಿಲ್ಲದಿಹ ಭಾವ ದೃಷ್ಟಿ ನಟ್ಟು। ಹರುಷ ಹರವರಿದು ಮನಬೆರಸಿ ಪುಳುಕಗಳೊಗೆದು ಕರಗಿ ಸುರಿವಾಶ್ರುಜಲ ಮೇರೆದಪ್ಪಿ ॥೧॥

ನೆರೆ ನೆಗೆದು ಕಂಠದೊಳು ಗದುಗದುಕೆ ಮೂಡೆ ತನು ಹೊರೆ ಏರಿ ಸರ್ವಾಂಗ ಕರಗಿ ಕೊರಗಿ। ನೆರವ ಭರಂದುರವಣೆಯು ತವಕದಿಂ ಲಿಂಗದೊಳು ಪರವಶಭ[illegible]ಲ್ಲೀಯ್ಯವಾದುದು ॥೨॥

ಸೀವಲ್ಲದೆನಗೆ ಮತ್ತೇನು ತೋರದು ನಿಷ್ಠಾ ಧ್ಯಾನದಿಂದಿರುಳು ಹಗಲೆಂದರಿಯೆನು ಮಾನ। ಸ ವಚನ ಕಾಯದೊಳು ಸಂದಳಿದುಳಿದು ನಿಮಗಾನೊಲಿದು ಎನ್ನನೊಚ್ಚತಗೊಟ್ಟೆನು ॥೩॥

ನಚ್ಚಿ ಮನಮುಚ್ಚಿ ಒಚ್ಚತಮೋಗಿ ಲಿಂಗದೊಳು ಬೆಚ್ಚಂತೆ ಪ್ರಾಣಪದ ಸಂಗವಾಗಿ। ಬೆಚ್ಚಿ ಬೇರಿಲ್ಲದಿಹ ಬೆಳಗೆನ್ನನೊಳಕೊಂಡು ಸಚ್ಚಿದಾನಂದದಿಂ ಮೈಮರೆದೆನು ॥೪॥

ಲಿಂಗ ಭಾವವೆ ಭಾವಲಿಂಗ ಪ್ರಾಣವೆ ಪ್ರಾಣ। ಲಿಂಗವಂಗದೊಳಂಗ ಬೇರಿಲ್ಲದೆ॥ ಲಿಂಗಸಂಗವೆ ಸಂಗ ಸ್ವಯವಾಗಿ ಕೂಡಲ। ಸಂಗ ನಿಮ್ಮೊಳು ಕೂಡಿ ಸುಖಿಯಾದೆ ॥೫॥

———

## ೩. ಪೂರ್ವಾಶ್ರಯ ನಿರಸನ ಸ್ಥಲ

**ಸೂತ್ರ:—** ಇಂತು ಲಿಂಗದಲ್ಲಿ ನೈಷ್ಠೆ ಕರಿಗೊಂಡು ನಿಬ್ಬೆರಗಾದ ಶ್ರೀ ವೀರ ಮಾಹೇಶ್ವರನು ಆ ಲಿಂಗದಲ್ಲಿ ಲೋಲುಪ್ತನಾಗಿ ತನ್ನ ಪೂರ್ವಜಾತ ಜೀವಭಾವ ಲೌಕಿಕವೆಂಬ ನಾನಾ ಪ್ರಪಂಚಿನ ಪೂರ್ವಾಶ್ರಯವಂ

ಮಿಥ್ಯೆಯಂದರಿದು ನಿರಸನವಂ ಮಾಡುತ್ತಿರಲು, ಮುಂದೆ ಪೂರ್ವಾಶ್ರಯ ನಿರಸನಸ್ಥಲವಾದುದು.

||ಪದ|| ರಾಗ ಭರಾಳಿ

ಆವಾಶ್ರಯದಲ್ಲಿ ಜನಿತನಾದಡೇನು.। ಪೂರ್ವವಳಿದು ಪುನರ್ಜಾತನಾದ ಶರಣನು ||ಪ||

ಭೂತಾದಿಗಳೈದು ಗೂಡಿದಾ ತನುಗುಣದ ಭ್ರಾಂತನಳಿದು ಗುರು ಕರುಣಿಸಿ ಪೂರ್ವ ಕರ್ಮದಾ। ಪಾತಕ ಲಿಪಿಯ ತೊಡೆದು ಪುನರ್ಜಾತ ನೆನಿಸಲು, ಆತನೆ ಸರ್ವಾಂಗ ಶುದ್ಧ ಲಿಂಗದೇಹಿ ||೧||

ಕುಲಸೂತಕ ಛಲಸೂತಕ ಮನಸೂತಕ ಹಲವು ಕರ್ಮಜಾಡ್ಯ ಜನ್ಮಭಾವ ಸೂತಕಾ। ಹೊಲೆ ಹೊದ್ದಲಿಕಾಗದೆಂಬ ನೆಲೆಯರಿದು, ತಿಳಿದ ಪೂರ್ವ ಭಾವವಳಿದುಳಿದ ನಿತ್ಯನು ||೨||

ಕ್ಷೀರದಿಂದಲಾದ ತುಪ್ಪ ಕ್ಷೀರವಪ್ಪುದೆ ನೀರೊಳಾದ ಮುತ್ತು ಮರಳಿ ಉದಕವಪ್ಪುದೆ। ಮೀರಿ ಪೂರ್ವ ಕರ್ಮವನ್ನು ಹರಿದ ಭಕ್ತಗೆ ಬೇರೆ ಮತ್ತೆ ಜನ್ಮವುಂಟೆ ಲಿಂಗವಲ್ಲದೆ ||೩||

ಲಿಂಗದಿಂದಂಗ ಭಾವ ಚಿನ್ಹವಳಿದು, ಜಂಗಮ ಪ್ರಸಾದದಿಂದಲಂತ ರಂಗದಾ। ಭಂಗದಿಂದ ವೊಳಗು ಹೊರಗು ಶುದ್ಧವಾದ ಲಿಂಗದೇಹಿಯಾದ ಮಹಿಮಗಿಲ್ಲ ಸೂತಕ ||೪||

ಬಂದ ಬಟ್ಟೆಯುಳಿದು, ಲಿಂಗ ಸುಖದ ಪಥದಲಿ। ಮುಂದನರಿದು ಭಾವಶುದ್ಧವಾಗಿ ಚರಿಸುತಾ ।। ಸಂದು ಶಂಕೆಯುಳಿದು ನಿಜದೊಳೊಂದಿ ಬೆರಸಿದಾ। ನಂದಮಯನು ಸಂಗನಿಮ್ಮ ಶರಣನನುಪಮಾ ||೫||

---

## ೪. ವಾಗದ್ವೈತ ನಿರಸನಸ್ಥಲ

**ಸೂತ್ರ:**— ಇಂತು ಪೂರ್ವಾಶ್ರಯ ನಿರಸನವಂ ಮಾಡಿದ ವೀರ ಮಾಹೇಶ್ವರನು ಲಿಂಗವನರಿದು, ಅರಿದೆನೆಂಬ ಸುಖವನಿದಿರಿಟ್ಟು ನುಡಿದು ತೋರಿದೊಡೆ ಭಿನ್ನವಾದುದೆಂದು ವಾಗ್ವೃತ್ತಿಯ ನಿರಸನವಂ ಮಾಡುತ್ತಿರಲು, ಮುಂದೆ ವಾಗದ್ವೈತ ನಿರಸನಸ್ಥಲವಾದುದು.

॥ಪದ॥ ರಾಗ. ರಾತುಕ್ರಿ

ನುಡಿಯಲಾಗದಿನ್ನು-ನುಡಿಯಲಾಗದಿನ್ನು-ನುಡಿಯಲಾಗದಿನ್ನು ಜಡ ಮರ್ತ್ಯರೊಡನೆ ||ಪಲ್ಲವ॥

ಗಗನಾಕಾರ ಮಂಟಪದೊಳಗೆ ಹೊಗಲುಪಾಯವಿಲ್ಲೆಂದುದು ಘನ। ಕಂಗಳ ಲಿಂಗ ಕರಸ್ಥಳ ಜಂಗಮ ಬಂದ। ಸಂಬಂಧವನರಿಯರಾಗಿ ॥೧॥

ಆದಿಲಿಂಗವೆಂಬುದು ಬೇರಿಲ್ಲ ಕಾಣಿರೊ ಮಂಗಡದೆಗೆದು ನೀವು ನುಡಿ ವಿರಿ ಭೋ, ಮಂಗಡದೆಗೆದು ನುಡಿವರಿಗೊಂದೆ ಲೋಕವಿತ್ತು ಮುಂದಿರ್ದ ಘನವ ನೀವರಿಯರಿ ಭೋ ॥೨॥

ತಲೆಯೊಳಗೆ ನಾಲಗೆಯ ಹಡದೆವೆಂದು ಹಲವು ಪರಿಯಲಿ ನೀವು ಗಳ ಹಿದಿರಿ ಭೋ। ಅನ್ನಪಾನದ ಹಂಗು ಬೆನ್ನಿಂದ ಬಿಡದು ಇನ್ನು ಸಂಸಾರಿ ನಿನ ಗನುಭಾವವ್ಯೆ ॥೩॥

ವಿದ್ಯೆಬುದ್ಧಿ ಪರ ಸಂಬಂಧದ ಮೇಲೆ ಹೊದ್ದುವದಹಂಕಾರ ಘನವಾಗಿ ವಿದ್ಯದಿ ತಾವು ಬಲ್ಲಿದರೆಂಬರು ಸತ್ತರು ಹಿರಿಯರು ಹಿರಿಯರು ಹಲ ಬರು ॥೪।

ಕಂಗಳ ಲಿಂಗ ಕರಸ್ಥಲ ಜಂಗಮ : ಇಂತೆಂದುದು ಲಿಂಗಸಂಬಂಧವು ॥ ಇದನೊಲ್ಲೆನೆಂಬವರಾವ ಲೋಕಕ್ಕೆ ಹೋದ। ರೇನು ವಾಯ ವಾಯು ಗುಹೇಶ್ವರಾ ॥೫॥

---

## ೫. ಆಹ್ವಾನ ನಿರಸನಸ್ಥಲ.

**ಸೂತ್ರ:—** ಇಂತು ವಾಗದ್ವೈತವ ನಿವೃತ್ತಿಯಂ ಮಾಡಿ ಮನದ ಸಂಚಲವನಳಿದು, ಸರ್ವಾಂಗದಲ್ಲಿ ಲಿಂಗವು ಭರಿತವೆಂಬುದನರಿದ ವೀರ ಮಾಹೇಶ್ವರನು ಒಮ್ಮೆ ಆಹ್ವಾನಿಸಿ ಹಿಡಿದು ಒಮ್ಮೆ ವಿಸರ್ಜಿಸಿ ಬಿಡುವು ದಕ್ಕೆ ತೆರಹು ಕಾಣದೆ, ಆಹ್ವಾನ ವಿಸರ್ಜನವೆಂಬೆರಡನು ನಿರಸನವಂ ಮಾಡುತ್ತಿರಲು, ಮುಂದೆ ಆಹ್ವಾನ ನಿರಸನ ಸ್ಥಲವಾದುದು.

॥ಪದ॥ ರಾಗ ದೇಶಿ.

ಅರಿಯದ ಮುನ್ನವೆ ಅರಿತ ಅರಿವನು । ಮರೆಯದೆ ನಿನ್ನ ನೀನೆ ತಿಳಿದು ನೋಡು ಕಂಡ್ಯಾ ।ಪಲ್ಲವ॥

ಆಕಾಶವನೆಸೆವೆನೆಂದಂಬ ತೊಡಚಲು । ಏಕೋ ಗುರಿಯಾಗಿ ಮೊನೆಗೆ ಮುಳುಗಿ ನಿಂದುದು ॥ ಆಕಾರ ನಿರಾಕಾರವೆಂಬುಭಯ ನಾಮದ । ಏಕಾರ್ಥವೊಂದೇ ಎಂದು ತಿಳಿದು ನೋಡು ಕಂಡ್ಯಾ ॥೧॥

ಅಳಿಯಲು ಬೇಕೆಂದು ಬಯಲ ರಾಶಿಯ ಮಾಡಿ । ಕೋಗದೊಳಗಿರ್ದ ಬಯಲ ಗುರಿವ ಪರಿಯೆಂತೋ ॥ ಅಳಿಯಲು ಮೊಗೆಯಲು ಸುರಿಯಲಿಲ್ಲದ ಬಯಲು । ತಿಳಿದು ನೋಡು ನಿನ್ನ ನೀನೆ ತಿಳಿವಡೆ ನೀನೆ ॥೨॥

ಬಂಗಾರದ ತೊಡಿಗೆಯಾಭರಣವೆನಿಸಿತ್ತು। ಶೃಂಗಾರವ ಮಾಡೆ ಹಲವು ನಾಮವಿಡಿದುದು ॥ ಉಂಗುರ ಕಂಕಣ ಚಲುವಂದಿಗೆ ಮುಕುಟ । ಹಿಂಗದೆ ಅವನಳಿಯೆ ಮುನ್ನಿನ ಬಂಗಾರತೆ ಮೊದಲು ॥೩॥

ಮುನ್ನ ಮುನ್ನವೆ ನೀರು ಬಳಿಕಾ ನೀರು ತಾ । ಅನಿಲನಿಂದಲಿ ಬಲಿದು ವಾರಿಕಲ್ಲೆಂದೆನಿಸಿತ್ತು ॥ ನಿನ್ನ ದೇಹವಿಂದ್ರಚಾಪ ಮನಃ ಪ್ರಾಣ । ಮುನ್ನಿನಂತೆ ಸಚ್ಚಿದಾನಂದ ನೀನೆ ಕಂಡ್ಯಾ ॥೪॥

ಅಡಿಯಿಲ್ಲದ ನಡುವಿಲ್ಲದ ಮುಡಿಯಿಲ್ಲದ ಬಯಲು । ಎಡೆಯಿಲ್ಲದಿಪ್ಪುದು ತಾ ಜಗವನೊಡಗೂಡಿ ॥ ಹಿಡಿಯಲು ಬಿಡಲಿಲ್ಲದ ಬೆಡಗು ನಿಜಗುಣನ । ನುಡಿಯನೊಳಕೊಂಡು ನಿಂದ ಸಹಜ ನೀನೆ ಕಂಡ್ಯಾ ॥೫॥

---

## ೬. ಅಷ್ಟಮೂರ್ತಿ ನಿರಸನ ಸ್ಥಲ.

**ಸೂತ್ರ:—** ಇಂತು ಆಹ್ವಾನ ವಿಸರ್ಜನವೆಂಬುಭಯ ಕುಳವನು ನಿವೃತ್ತಿಯಂ ಮಾಡಿದ ವೀರ ಮಾಹೇಶ್ವರನು ಅಷ್ಟ ತನುವಿಂದಾದ ಸಕಲ ಪ್ರಪಂಚವನ್ನು ಮಿಥ್ಯೆಯೆಂದರಿದು ಅಷ್ಟ ತನುಗಳ ಮೂಲವ ನಿರಸನವಂ ಮಾಡುತ್ತಿರಲು ಮುಂದೆ ಅಷ್ಟ ತನುಮೂರ್ತಿ ನಿರಸನ ಸ್ಥಲವಾದುದು.

॥ಪದ॥ ರಾಗ ಕಾಂಬೋದಿ

ಉಪಮಿಸಬಾರದ ಮಹಾ ಘನಲಿಂಗವ ಉಪಮೆಗೆ ತಂದು ಸಕಲ ನಿಷ್ಕಲರೂಪನೆಂಬುದು ಹುಸಿ ನೋಡಾ ॥ಪಲ್ಲವ॥

ಮಹಾಘನ ನಿಜದಿಂದುದಯಿಸಿದಾದಿಯನಾದಿ ತತ್ವದಿಂದ ಮನಭಾವ ಜ್ಞಾನ। ಜನಿತವಾಗಿ ಅಕಾರ ಉಕಾರ ಮಕಾರ ಜನಿತವಾದುದು ॥೧॥

ಅಕ್ಷರ ಮೂರರೊಳೋಂಕಾರ ಉದಯವಾಗಿ ಆಕಾಶ ಭೂತನಾಮ ಶಂಕೆವಿಡಿದು। ವರ್ಣಾಶ್ರಮವನ್ನೈದಿದ ಬಿಂದು ಕಲಾರೂಪವಾದುದು ॥೨॥

ಆಕಾಶದ ಶಬ್ದದ ಪುಥನದ ಮುಖ ಸೋಂಕಿಂದ ಸ್ಪರಿಸಿ ವಾಯು ಉದಯವಾಗಿ ಗಮನ। ಗಮನಾಗಮನ ನಿರ್ಗಮನ ರೂಪವಾದುದು ॥೩॥

ವಾಯು ವಿಕಾರದ ಬದ್ಧಾಕೃತಿಯಿಂ ರೂಪು ಸಂಜ್ಞೆಯಾಗಿ ತೇಜೋಮಯವಾಗಿ ಅಗ್ನಿ ಜನಿಸಲು ದೃಷ್ಟನಷ್ಟವೆಂಬಿವಾದವು ॥೪॥

ತೇಜ ವಿಕಾರದ ಪ್ರಕೃತಿ ವಿಕೃತಿಯಿಂದುದಯಿಸಿದಪ್ಪು ತತ್ವದಿರಸ। ಮಾತ್ರ ವಿಷಯರೂಪವಾಗಿ ಜಲಬಿಂದು ಭಿನ್ನರುಚಿ ಮುಖವಾದುದು ॥೫॥

ಜಲದಿಂ ಬದ್ಧಾಕೃತಿಯ ಧರಿಸಿ ಉದಯಿಸಿದ ಪೃಥ್ವಿ ತತ್ವದಿ ಅನಂತ। ಸಚರಾಚರ ಉದಯವಾಗಿ ಉತ್ಪತ್ತಿ ಸ್ಥಿತಿಲಯ ಕಾರಣವಾದುದು ॥೬॥

ಮನದಿ ಶಸಿ ನಯನದೊಳಗೆ ರವಿ। ದೇಹದ ಸಂಕಲ್ಪದೊಳಾತುಮ ಜನಿಸಿ। ಅಷ್ಟ ತನುಗಳು ಶಿವನೆಂಬುದು ಮಿಥ್ಯ ನಿರಾಳ ನಿರಂಜನ ಕೂಡಲಸಂಗ ॥೭॥

---

## ೭. ಸರ್ವಗತ ನಿರಸನಸ್ಥಲ

**ಸೂತ್ರ:—** ಇಂತು ಅಷ್ಟತನು ಮೂರ್ತಿಗಳ ನಿರಸನವಂ ಮಾಡಿದ ವೀರ ಮಾಹೇಶ್ವರನು ಶರಣಭರಿತ ಶಿವನೆಂದರಿದು ಪ್ರತಿಷ್ಠಿಸಿ ಜಗಭರಿತ ಶಿವನೆಂಬ ಸರ್ವಗತ ಶಬ್ದನಿರಸನವಂ ಮಾಡುತ್ತಿರಲು, ಮುಂದೆ ಸರ್ವಗತ ನಿರಸನ ಸ್ಥಲವಾಹುದು.

॥ ಪದ ॥ ರಾಗ. ಆಹರಿ.

ರೂಪಾದಿ ಸರ್ವಗತ ರೂಪು ಶಿವನಲ್ಲ ನಿಜ। ರೂಪು ಜಂಗಮಲಿಂಗ ದೊಳಗಿರ್ಪನು ॥ಪ॥

ಭೂಮಿಯುಜನಂ ದೇವ ತಾವಃಸಾದಿಗಳಖಿಳ । ತಾವುಖಾದಿಯೊಳು ಶಿವನಿರುತಿರ್ಪಡೆ ॥ ಸೀಮೆನಾಮಗಳು ಕೆಲ ಸಾಮಾನ್ಯ ಜಾತಿ ಹಿರಿ । ದಾ ಮಹಾ ಪ್ರಳಯಂಗಳೇಕಾದವು ॥೧॥

ಸರ್ವಗತ ಶಿವನಹಡೆ ಸರ್ವಕೆ ಜನನ ಮರಣ । ನಿರ್ವಿಕಲ್ಪಂ ಕಲ್ಪ ಪುಣ್ಯಪಾಪಾ ॥ ಸರ್ವವೇತಕೆ ಸುಖದ ಗರ್ವಪೇಶಕೆ ದುಃಖ । ದುರ್ವ್ಯಸನ ದುರಿತಂಗಳೇಕಾದವು. ॥೨॥

ಭೇದವಿಲ್ಲದೆ ಜೀವನಾದಿಯುಲಿ ಶಿವನಿರ್ಪಡಾ । ಜೀವನೊಂದೊಂದ ಕೊಲಲೇತಕೆ ॥ ಆದಡೆಂತೆನೆ ಪರುಷ ವೇದಿಸಲು ಲೋಹ ಹೊನ್ನಾದ ತೆರ ಲಿಂಗಸಂಗಿಗಳಲಿಹನು ॥೩॥

ಬೆಳೆದ ಬೆಳಸುಗಳೊಳಗೆ ಬೆಳೆಯು ಬಿತ್ತಿದನಿಹನೆ । ಹಲವು ಚಿತ್ರವ ಬರವನವರೊಳಿಹನೆ ॥ ಅಳವಟ್ಟ ಕೆಲಸಂಗಳೊಳಗಿಹನೆ ಬಿನ್ನಾಣಿ । ತಿಳಿದು ನೋಡಲು ನಿತ್ಯ ನಿಜದೊಳಿಹನು ॥ ೪ ॥

ಎಲ್ಲ ಜೀವಂಗಳೊಳಗಿಲ್ಲ ಶಿವಸದ್ಭಕ್ತ । ರಲ್ಲಿ ಮಹೇಶ್ವರ ಪ್ರಸಾದಿಗ ಳಲಿ ॥ ತಕ್ಷಂಗ ಪ್ರಾಣಾಂಗದಲ್ಲಿ ಶರಣೈಕ್ಯ ನಿಜ । ದಲ್ಲಿ ಕೂಡಲಚನ್ನ ಸಂಗಭರಿತ. ॥ ೫ ॥

———

## ೮. ಶಿವಜಗನ್ಮಯ ಸ್ಥಲ.

**ಸೂತ್ರ**:– ಇಂತು ಸರ್ವಗತ ನಿರಸನವಂ ಮಾಡಿದ ವೀರಮಾಹೇಶ್ವರನು, ಸರ್ವ ಜಗದಲ್ಲಿ ಶಿವನಿಲ್ಲವೆಂದಡೆ, ಆ ಜಗವು ಶಿವನಿಂದ ಬೇರೆ ತೋರಲರಿಯ ದೆಂದರಿದು, ಆ ಜಗದಲ್ಲಿ ಶಿವನು ಹೊದ್ದಿಯೂ ಹೊದ್ದದೆ ಬೆರಸಿ ಬೆರ ಸದೆ ಇಹನೆಂಬ ಕೃತನಿಶ್ಚಯವನುಂಟು ಮಾಡಿ ತೋರುತ್ತಿರಲು ಮುಂದೆ ಶಿವಜಗನ್ಮಯ ಸ್ಥಲವಾದುದು.

॥ಪದ॥ ರಾಗ ಭೌಳಿ

ಜಗದೊಳಗೆ ಶಿವ ಪರಿಪೂರ್ಣ । ಬಗೆದು ನೋಡಲು ಹೊದ್ದಿ ಹೊದ್ದ ನಯ್ಯ ॥ಪಲ್ಲವ॥

ಶಿವನಿಂದವೆ ಜಗದುತ್ಪತ್ತ್ಯವು । ಶಿವನಲ್ಲದೆ ಜಗಕಾಧಾರವಿಲ್ಲ ॥ ಶಿವನಾ ಜಗದಂತರ್ಯಾಮಿಯಾಗಿಹ । ನವಿಕತವಿಲ್ಲವಿದು ಸಿದ್ಧಾಂತವು ॥೧॥

FROM—
Shivanubhawa
Office
BIJAPUR



R. N. B. 2554.



ಈ ಪತ್ರಿಕೆಯನ್ನು ಅದರ ಸಂಪಾದಕರಾದ ರಾ|| ಬ|| ಪಿ. ಜಿ. ಹಳಕಟ್ಟಿ
ಬಿ. ಎ. ಎಲ್, ಎಲ್. ಬಿ. ಇವರು ವಿಜಾಪೂರ ವಾರ್ಡ ನಂ. ೨ ಮನೆ
ನಂ. ೧೩೬೮ ರಲ್ಲಿರುವ ಹಿತಚಿಂತಕ ಪಾವರ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ
ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದ್ದರು.



# ಶಿವಾನುಭವ

| ವರ್ಷ ೧೭ | ಎಪ್ರೀಲ ೧೯೪೩. | ಸಂಚಿಕೆ ೭ |
|---|---|---|


## ಬಸವೇಶ್ವರನ ಚರಿತ್ರೆ.


(ರಾ. ಬ. ಪಿ. ಜಿ. ಹಳಕಟ್ಟಿ, ಬಿ. ಏ., ಎಲ್. ಎಲ್. ಬಿ., ವಿಜಾಪುರ.)


ಲೇಖಾಂಕ: ೧೯.

### ಯುದ್ಧಕಲೆ ತಿಳಿದ ಬಸವೇಶ್ವರನು.

ಬಸವೇಶ್ವರನು ಮಂತ್ರಿಪದಾರೂಢನಾಗಿದ್ದನೆಂಬುದನ್ನು ಯಾರೂ ಅಲ್ಲಗಳೆಯುವದಿಲ್ಲ. ಆದರೆ ಕಠಿಣ ಕಾಲದಲ್ಲಿ ಮಂತ್ರಿಯಾಗುವವನಿಗೆ ಯುದ್ಧಕಲೆಯ ಜ್ಞಾನವು ಅತ್ಯಾವಶ್ಯಕವಾದುದೆಂದು ನಾವು ಬೇರೆ ಹೇಳಬೇಕಾದುದಿಲ್ಲ. ವಿಶೇಷತರದ ಯುದ್ಧಗಳಲ್ಲಿ ರಾಜನು ಸ್ವತಃ ರಣಾಂಗಣಕ್ಕೆ ತೆರಳಬೇಕಾದ ಸಮಯದಲ್ಲಿ ಅವನಿಗೆ ಸಲಹೆ ಕೊಡುವ ಮಂತ್ರಿಯು ಹಿಂದೆ ಉಳಿಯುವ ಬಗೆ ಹೇಗೆ? ಅವನೂ ಯುದ್ಧರಂಗಕ್ಕೆ ತೆರಳಬೇಕಾಗುತ್ತದೆ. ಅವನು ಯುದ್ಧದ ದೃಶ್ಯಗಳನ್ನು ಕಾಣಬೇಕಾಗುತ್ತದೆ. ಸೈನಿಕರ ಒಡನಾಡಿಯಾಗಬೇಕಾಗುತ್ತದೆ. ಈ ಸಂಗತಿಗಳನ್ನು ನಾವು ಲಕ್ಷಿಸಿದಲ್ಲಿ ಬಸವೇಶ್ವರನಿಗೆ ಯುದ್ಧಕಲೆಯ ಜ್ಞಾನವಾಗಿತ್ತೆಂದು ಹೇಳಿದಲ್ಲಿ ಅದರಲ್ಲಿ ಆಶ್ಚರ್ಯಪಡಬೇಕಾದ ಸಂಗತಿಯು ಯಾವುದೂ ಇರುವದಿಲ್ಲ. ಅವನ ಕೈಕೆಳಗೆ ಮಧುವರಸ, ಸೊಡ್ಡಳ ಬಾಚರಸ, ಮಡಿವಾಳ ಮಾಚಿದೇವ ಇವರಲ್ಲದೆ ಅವನಿಗೆ ಕನ್ನೆಯನ್ನು ಕೊಟ್ಟ ಸಿದ್ಧಣ್ಣೊಡೆಯರು ಮತ್ತು ಬಲದೇವ ಮಂತ್ರಿಯು ಸೈನ್ಯಾಧಿಕಾರಿಗಳಾಗಿದ್ದದ್ದು ಕಂಡುಬರುತ್ತದೆ. ಇಂಥ ಪರಿಸ್ಥಿತಿಯಲ್ಲಿದ್ದ ಬಸವೇಶ್ವರನಿಗೆ ಯುದ್ಧಕಲೆಯು ತಿಳಿದಿತ್ತೆಂಬುದರಲ್ಲಿ ಏನೂ ಸಂದೇಹವಿರಲಾರದು. ಅವನ ವಚನಗಳಲ್ಲಿ ಯುದ್ಧ ಕಲೆಗೆ ಸಂಬಂಧಿಸಿದವುಗಳಷ್ಟು ವಚನಗಳು ಬೇರೆ ಯಾವ ವಚನಕಾರನಲ್ಲಿಯೂ ದೊರೆಯಲಾರವು. ಬಿಜ್ಜಳನನ್ನು

ಸುತ್ತಲೂ ವಿರೋಧಿಗಳು ಆವರಿಸಿದ್ದರು. ಅವನಷ್ಟೇ ಪ್ರಬಲರಾದ ದಂಡಾಧೀಶ್ವರರು ಚಾಲುಕ್ಯರಾಜ್ಯದಲ್ಲಿದ್ದರು. ಇವರನ್ನು ಹಿಂದಕ್ಕೊತ್ತಿ ಅವನು ಒಂದು ಮಹತ್ವದ ರಾಜ್ಯದಲ್ಲಿ ಚಕ್ರಾಧಿಪತಿಯಾದನು. ಇದರಲ್ಲಿ ಅವನಿಗೆ ಯುದ್ಧಗಳನ್ನು ಮಾಡುವ ಪ್ರಸಂಗಗಳು ಬಂದಿರಬಹುದು. ಅದರಲ್ಲಿ ಅವನು ಕಲ್ಯಾಣವನ್ನು ಸಹ ಹಾಳುಮಾಡುವ ಪ್ರಸಂಗವು ಒಮ್ಮೆ ಉಂಟಾಗಿತ್ತೆಂದು ಕೆಳಗಿನ ವಚನದಿಂದ ಕಂಡುಬರುತ್ತದೆ.

'ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲ ಮಾನವ. ಕೆಟ್ಟಿತ್ತು, ಕಲ್ಯಾಣ ಹಾಳಾಯಿತ್ತು ನೋಡಾ. ಒಬ್ಬ ಜಂಗಮದ ಅಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು ಸಂದತ್ತು ಕೂಡಲಸಂಗಮದೇವ ನಿಮ್ಮ ಕಳವಳಿಕೆಗೆ.'

ಆದ್ದರಿಂದ ಅವನ ಕೈಕೆಳಗಿದ್ದ ಬಸವೇಶ್ವರನಾದರೂ ಅವನೊಡನೆ ಯುದ್ಧರಂಗಕ್ಕೆ ಹೋಗಿರಬಹುದು. ಇಷ್ಟೇ ಅಲ್ಲ, ಸೈನಿಕರನ್ನು ಯುದ್ಧದಲ್ಲಿ ನಡಿಸಿಕೊಂಡುಹೋಗಿಯೂ ಇರಬಹುದು. ಬಿದಿರಿನ ಸಾಮ್ಯವುಳ್ಳ ಒಂದು ವಚನವನ್ನು ನಾವು ಹಿಂದೆ ಉದಹರಿಸಿ ಅದರಮೇಲಿಂದ ಬಸವೇಶ್ವರನು ಮಲೆನಾಡಿಗೆ ಹೋಗಿರಬಹುದೆಂದು ಊಹಿಸಿದ್ದೇವೆ. (ಲೇಖಾಂಕ ೧೫ ನೋಡಿರಿ.) ಬಿಜ್ಜಳನು ಅನೇಕ ವರ್ಷ ದಕ್ಷಿಣ ಪ್ರಾಂತದ ಮುಖ್ಯ ಸ್ಥಳವಾದ ಬನವಾಸಿಯಲ್ಲಿ ಇದ್ದದ್ದು ಶಿಲಾಶಾಸನಗಳಿಂದ ತಿಳಿದುಬರುತ್ತದೆ. ಬಸವೇಶ್ವರನು ಬಿಜ್ಜಳನ ಗುಮಾಸ್ತೆ ಅಥವಾ ಖಜೀನದಾರ ಅಥವಾ ಸೇನಾಪತಿ ಇದ್ದಾಗ ಅವನು ಅತ್ತಕಡೆಗೆ ಅವನೊಡನೆ ಹೋಗಿರಬಹುದು. ನಾವು ಕೆಳಗೆ ಉದಹರಿಸುವ ವಚನಗಳು ನಮ್ಮ ಮೇಲಿನ ಅಭಿಪ್ರಾಯವನ್ನು ಸಮರ್ಥಿಸುವದಲ್ಲದೆ ಬಸವೇಶ್ವರನು ತನ್ನ ಬೋಧೆಯ ಕಾರ್ಯವನ್ನು ಸೈನಿಕರಲ್ಲಿ ಸಹ ನಡಿಸುತ್ತಿದ್ದನೆಂದು ತೋರಿಬರುತ್ತದೆ. ಇದೂ ಈ ವಚನಗಳ ವೈಶಿಷ್ಟ್ಯವಾಗಿದೆ.

ಯುದ್ಧ ಮಾಡುವದು ಅನೀತಿಯೆಂತಲೂ ಧರ್ಮಬಾಹ್ಯವಾದ ಕಾರ್ಯವೆಂತಲೂ ಅನೇಕರು ಭಾವಿಸಿರಬಹುದು. ಆದರೆ ಈ ವಿಚಾರವು ವೀರಶೈವತ್ವಕ್ಕೆ ಹೊಂದಿಕೆಯಾದುದಲ್ಲ. ಧರ್ಮಕ್ಕೆ ಬಾಧೆತರುವಂಥವರನ್ನು ಶಿಕ್ಷಿಸಬೇಕೆಂದು ಶಿವಶರಣರ ಅನೇಕ ಉಕ್ತಿಗಳಿವೆ. ಒಂದುವೇಳೆ ಶಿಕ್ಷಿಸಲು ಸಾಧ್ಯವಾಗದಿದ್ದಲ್ಲಿ ಅಂಥವರಿದ್ದ ಸ್ಥಾನದಿಂದ ತೊಲಗಿ ಹೋಗಬೇಕೆಂತಲೂ ಇದೂ ಸಾಧ್ಯವಾಗದಿದ್ದರೆ ತನ್ನ ಪ್ರಾಣವನ್ನಾದರೂ

ಬಿಟ್ಟುಕೊಡಬೇಕೆಂತಲೂ ಅವರ ಅಭಿಪ್ರಾಯವಿದೆ. ಇದಕ್ಕೆ ಗಣಾಚಾರವೆಂಬ ಹೆಸರು. ಆದ್ದರಿಂದ ಬಸವೇಶ್ವರನು ದಂಡನಾಯಕನ ಸ್ಥಾನವನ್ನು ಸ್ವೀಕರಿಸಿದ್ದು ಆಶ್ಚರ್ಯಕರವಾದುದಲ್ಲ. ಮೇಲಿನಂತೆ ಅಭಿಪ್ರಾಯಪಡುವವರು ದ್ರೋಣ, ಕೃಪ, ಅಶ್ವತ್ಥಾಮ ಈ ಬ್ರಾಹ್ಮಣಯೋದ್ಧರು ಭಾರತ ಯುದ್ಧದಲ್ಲಿ ಸೇನಾಪತಿಗಳಾದದ್ದನ್ನು ಲಕ್ಷಿಸಬೇಕು.

ಪುರಾತನ ಕಾಲದಲ್ಲಿ ವೀರಶೈವರು ಈ ವಿಧವಾಗಿ ವರ್ತಿಸಿದ್ದರಿಂದಲೇ ಅವರ ಧರ್ಮವು ಕರ್ನಾಟಕದಲ್ಲಿ ಇದಿರಾಳಿಗಳ ಉಪಟಳದಿಂದ ಅಚ್ಚಳಿಯದೆ ಉಳಿಯಿತೆಂದು ಅದರ ಚರಿತ್ರೆಯು ಹೇಳುತ್ತದೆ. ಇದನ್ನು ನಾವು ಮುಂದೆ ಕ್ರಮೇಣ ವಿಸ್ತರಿಸುತ್ತ ಹೋಗುವೆವು. ಈ ವರ್ತನೆಯ ಮೂಲಕವೇ ವೀರಶೈವ ಧರ್ಮವು ಅತ್ಯಂತ ಕಠಿಣ ಕಾಲದಲ್ಲಿ ಸಹ ಕರ್ನಾಟಕದಲ್ಲೆಲ್ಲ ಪಸರಿಸಿರುತ್ತದೆ. ಮತ್ತು ಅದು ಮುಸಲ್ಮಾನ ಮೊದಲಾದ ಪರಧರ್ಮೀಯರನ್ನು ಪ್ರತಿಘಟಿಸಿರುತ್ತದೆ. ಕ್ರಿಶ್ಚನ್, ಮುಸಲ್ಮಾನ ಮತ್ತು ಸೀಖ ಧರ್ಮಗಳ ಪ್ರಸಾರದ ಇತಿಹಾಸವನ್ನು ನೋಡಿದರೆ ಇದೇ ಸಂಗತಿಯು ದೃಗ್ಗೋಚರವಾಗುತ್ತದೆ. ವೀರಶೈವ ಸಮಾಜದ ಇತಿಹಾಸವಾದರೂ ಇವುಗಳ ಇತಿಹಾಸವನ್ನೇ ಹೋಲುತ್ತದೆ. ಉಳವಿಯ ಮಹಾಯುದ್ಧದ ತರುವಾಯ ವೀರಶೈವ ಧರ್ಮಕ್ಕೆ ಅತ್ಯಂತ ಕಠಿಣ ಪ್ರಸಂಗವು ಒದಗಿತು. ಆಗ ಬಸವೇಶ್ವರ, ಚೆನ್ನಬಸವೇಶ್ವರ, ಮಡಿವಳ ಮಾಚಿದೇವ ಮತ್ತು ಕಿನ್ನರಿ ಬ್ರಹ್ಮಯ್ಯಗಳು ಹಾಕಿಕೊಟ್ಟ ಮೇಲು ಪಂಙ್ತಿಯನ್ನು ಅವರ ಮುಂದಿನ ಕಾಲದ ವೀರಶೈವರು ಅನುಸರಿಸಿದ್ದಾರೆ. ಧರ್ಮ ಸ್ಥಾಪನೆ ಮತ್ತು ಅದಕ್ಕೋಸ್ಕರ ಯುದ್ಧಕ್ಕೆ ಸಿದ್ಧತೆ ಇವುಗಳು ಪರಸ್ಪರ ವಿರೋಧವಾದವುಗಳಲ್ಲ. ಆದರೆ ಯುದ್ಧಕಾರ್ಯದಲ್ಲಿ ಧರ್ಮದ ನಿಜವಾದ ಉಚ್ಚ ಭಾವವು ಮಾತ್ರ ಇರಬೇಕು.

## ವಚನಗಳು

**ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ** ಎನ್ನುವ ಬಾಳುವೆ. ಈ ನಾಯಿತನವ ಮಾಣಿಸು ಕೂಡಲಸಂಗಯ್ಯ ನಿಮ್ಮ ಧರ್ಮ. (೨೯)

ಸೈನಿಕರು ನಾಯಿಗಳನ್ನು ಇಡುವದುಂಟು. ಮತ್ತು ತಮ್ಮ ಕತ್ತಿಗಳಿಗೆ ಜಂಗು ಹತ್ತಬಾರದೆಂದು ತುಪ್ಪವನ್ನು ಸವರುತ್ತಿರಬೇಕು. ಆಗ ಒಂದು ನಾಯಿಯು ತುಪ್ಪವನ್ನು ಸವಿಯಲಿಕ್ಕೆ ಹೋಗಿ ನಾಲಿಗೆಯನ್ನು

ಕತ್ತರಿಸಿಕೊಂಡಿತು. ಸಂಸಾರದ ಸವಿಯು ರುಚಿಕರವಾಗಿ ತೋರಿದರೂ ಅದು ಬಾಧೆಪಡಿಸುತ್ತದೆಂದು ಬಸವೇಶ್ವರನು ಸೈನಿಕರಿಗೆ ತಿಳಿಯುವ ರೀತಿಯಿಂದ ಇಲ್ಲಿ ಬೋಧಿಸುತ್ತಾನೆ.

**ಚೀಳಿಂಗೆ ಬಸುರಾಯಿತ್ತೇ ಕಡೆ. ರಣರಂಗದಲ್ಲಿ ಕಾದುವ ಓಲಿಕಾರಂಗೆ ಓಸರಿಸಿತ್ತೇ ಕಡೆ.** ಮಾಡುವ ಭಕ್ತಂಗೆ ಮನಹೀನವಾದರೆ ಅದೇ ಕಡೆ. (೧೨೭)

ಯುದ್ಧ ಕಾಲದಲ್ಲಿ ಓಲೆಯಕಾರರೇ ಬಹು ಜನ ಸೈನಿಕರಾಗಿರುತ್ತಿದ್ದರೆಂದು ತೋರುತ್ತದೆ. ಅವರು ಯುದ್ಧ ಮಾಡುವ ಕಾಲದಲ್ಲಿ ಸ್ವಲ್ಪ ಹಿಮ್ಮೆಟ್ಟಿದರೆ ಅವರ ನಾಶವೆಂದು ಬಸವೇಶ್ವರನು ಹೇಳುತ್ತಾನೆ. ಹೀಗೆ ಹೇಳಿ ಭಕ್ತರು ಮನಹೀನವಾಗಬಾರದೆಂದು ಅವನು ಅವರಿಗೆ ಬೋಧಿಸುತ್ತಾನೆ.

ಹುಲಿಯ ಹಾಲು ಹುಲಿಗಲ್ಲದೆ ಹೊಲದ ಹುಲ್ಲಿಗೆ ಉಣಬಾರದು. **ಕಲಿಯಕಾಲ ತೊಡರು ಛಲದಾಳಿಗಲ್ಲದೆ ಇಕ್ಕಬಾರದು.** ಅಳಿಮನದಾಸೆಯವರ ಮೂಗ ಹಲ್ಲುದೋರಕೊಯ್ವ. (೧೨೯)

ಇಲ್ಲಿ ಶೂರನಿಗೆ ಕೊಟ್ಟ ಕಾಲ ಸರಪಣಿಯನ್ನು ಅವನೇ ಧರಿಸಬೇಕೆಂದು ಹೇಳುತ್ತಾನೆ.

**ಅಂಕಕಳನೇರಿ ಕೈಮರೆದಿರ್ದೊಡೆ ಮಾರಾಂಕಬಂದಿರುವುದಮಾಬನೇ?** ನಿಮ್ಮ ನೆನೆವ ಮತಿಮರೆದಿರ್ದರೆ ಪಾಪ ತನುವನಂಡಲೆಯದೆ ಮಾಬುದೇ? (೧೬೪)

ಯುದ್ಧರಂಗದಲ್ಲಿ ಸೈನಿಕನು ಬಹಳ ಎಚ್ಚರವಾಗಿಯೂ ಎಡಬಿಡದೆಯೂ ಯುದ್ಧ ಮಾಡುತ್ತಿರಬೇಕೆಂದು ಬಸವೇಶ್ವರನು ಸೂಚಿಸುತ್ತಾನೆ. ಹಾಗೆಯೇ ಪರಮಾತ್ಮನ ಧ್ಯಾನವೂ ಅವನಲ್ಲಿರಬೇಕೆಂದು ಹೇಳುತ್ತಾನೆ.

**ಕಾಳುಕೋಲ ಹಿಡಿದು ಶ್ರಮವ ಮಾಡಬಹುದಲ್ಲದೆ ಕಳನೇರಿ ಕಾದುವದರಿದು ನೋಡಾ.** (೨೪೯)

ಸೈನಿಕರು ಯುದ್ಧ ಮಾಡುವದಕ್ಕೋಸ್ಕರ ಕೋಲನ್ನು ತೆಗೆದುಕೊಂಡು ಯುದ್ಧ ಕೌಶಲ್ಯವನ್ನು ಕಲಿಯುವದುಂಟು. ಈಗಿನ ಮಹಾಯುದ್ಧದಲ್ಲಿ ಇದೇ ಪ್ರಕಾರ ಸೈನಿಕರಿಗೆ ಕವಾಯಿತು ಮುಂತಾದವುಗಳನ್ನು ಕಲಿಸಿ ಅವರನ್ನು ತಯಾರಿಸುತ್ತಾರೆ. ಆದರೆ ಇಂಥವರನ್ನು

ಪ್ರತ್ಯಕ್ಷ ಯುದ್ಧ ನಡೆದಲ್ಲಿ ಒಯ್ದರೆ ಅವರಿಂದೇನು ಕಾರ್ಯವಾಗಲಾರ ದೆಂದು ಬಸವೇಶ್ವರನು ಹೇಳುತ್ತಾನೆ. ಅನುಭವವಿಲ್ಲದೆ ಯುದ್ಧ ಕೌಶ ಲ್ಯವು ಬಾರದೆಂದು ಅವನ ಅಭಿಪ್ರಾಯವು. ಹಾಗೆಯೇ ಧರ್ಮದಲ್ಲಿ ಅನುಭವವು ಬೇಕು.

**ಶಿವಾಚಾರವೆಂಬುದೊಂದು ಬಾಳಬಾಯಿಧಾರೆ. ಲಿಂಗ ಮೆಚ್ಚ** ಬೇಕು.........ನಮ್ಮ ಕೂಡಲ ಸಂಗಮದೇವಾ. (೩೯೭)

ಬಸವೇಶ್ವರನು ಧಾರ್ಮಿಕಾಚರಣೆಯು ಕತ್ತಿಯ ಬಾಯಿಯಂತೆ ಹದನಾಗಿರುತ್ತದೆಂದು ಹೇಳುತ್ತಾನೆ. ಕತ್ತಿಯನ್ನು ಹದನಮಾಡುವದು, ಅದನ್ನು ಉಪಯೋಗಿಸುವದು, ಮತ್ತು ಅದನ್ನು ಸರಿಯಾಗಿಡುವದು ಇವೆಲ್ಲಕ್ಕೂ ಆವಶ್ಯಕ ಜ್ಞಾನಬೇಕು. ಹಾಗೆಯೇ ಶಿವಾಚಾರಕ್ಕೆ ಜ್ಞಾನ ಬೇಕೆಂದು ಹೇಳುತ್ತಾನೆ.

**ಆಲುತ್ತಲು ಹರೆಯ ಹೊಯಿಸಿ ಅಂಕವಮಾಡಿದೆನೆಲ್ಲರ ಕಂಡು.** ಕಲಿತನವ ಮಾಡಿದೆನೆಲ್ಲರ ಕಂಡು. (೪೦೧)

ಯುದ್ಧಗೆಲಸಕ್ಕೆ ನಿಜವಾದ ಜ್ಞಾನವು ಬೇಕೆಂದು ಬಸವೇಶ್ವರನು ಹೇಳುತ್ತಾನೆ. ಎಲ್ಲರೂ ಯುದ್ಧಕ್ಕೆ ಹೋಗುತ್ತಾರೆಂದು ನೀವೂ ಹೋಗ ಬಾರದು. ನಗಾರಿಯ ಸಪ್ಪಳವನ್ನು ಕೇಳಿದ ಕೂಡಲೆ ಹುರುಪು ಬರುತ್ತದೆ. ಅದನ್ನು ಕೇಳಿ ಯುದ್ಧಕ್ಕೆ ಹೋಗಬಾರದೆಂದು ಅವನ ಅಭಿಪ್ರಾಯವು. ಅದಕ್ಕೆ ಜ್ಞಾನವೂ ಅನುಭವವೂ ಬೇಕೆಂದು ಅವನ ಅಭಿಪ್ರಾಯವು.

**ಓಡುವಾತ ಲೆಂಕನಲ್ಲ. ಬೇಡುವಾತಭಕ್ತನಲ್ಲ.** ಓಡಲಾಗದು ಲೆಂಕನು. (೪೦೩)

ಯುದ್ಧಕಾಲದಲ್ಲಿ ಸೈನಿಕರು ಸ್ವಲ್ಪ ಜನರಿದ್ದರೂ ಚಿಂತೆಯಿಲ್ಲ. ಅವರು ಆಗ ಹಿಂಜರಿಯಬಾರದೆಂಬ ಅಭಿಪ್ರಾಯದ ಬಸವೇಶ್ವರನ ವಚನಗಳು ಬಹಳ ಇವೆ. ವೈರಿಗಳು ಎಷ್ಟು ಜನರಿದ್ದರೂ ಅಂಜದೆ ಅವರ ಮೇಲೇರಿಹೋಗಬೇಕೆಂದು ಅವನ ಅಭಿಪ್ರಾಯವು. ಇದರಿಂದ ವೈರಿಗಳಲ್ಲಿ ಭೀತಿಯುಂಟಾಗುತ್ತದೆ. ಕಾದಾಡುವವರು ಭೀತಿಗೊಂಡು ಸ್ವಲ್ಪ ಹಿಂದಕ್ಕೆ ಸರಿದರೆ ಸಾಕು. ಅವರು ನಾಶವಾಗುವರೆಂದು ಹೇಳುತ್ತಾನೆ.

ಕಟ್ಟಿದೆ**ನೊರೆಯ.** ಬಿಟ್ಟೆ ಜನ್ನಿ**ಗೆಯರ** ಮುಟ್ಟಿ ಬಂದಿರಿದೊಡೆ ಓಸ ರಿಸುವನಲ್ಲ. ಓಡದಿರು ಓಡದಿರು......ಕೂಡಲ ಸಂಗಮದೇವಾ. (೪೦೯)

ಇಲ್ಲಿ ಬಸವೇಶ್ವರನು ಯುದ್ಧಕ್ಕೆ ಸನ್ನದ್ಧನಾದ ಸೈನಿಕನ ವೇಷವನ್ನು ವರ್ಣಿಸುತ್ತಾನೆ. ಅವನ ಕಾಲಕ್ಕೆ ಸೈನಿಕರ ಉಡುಪು ಹೇಗಿತ್ತೆಂಬುದನ್ನು ಕೆಲವುಮಟ್ಟಿಗೆ ಇಲ್ಲಿ ತಿಳಿಯಬಹುದು. ಯುದ್ಧ ಕಾಲದಲ್ಲಿ ಶತ್ರುಗಳು ಬಂದರೆ ಹಿಂಜರಿಯಬಾರದೆಂದು ಅವನು ಇಲ್ಲಿ ಹೇಳುತ್ತಾನೆ.

**ಜೊಳ್ಳು ಆಳು ನಾನಲ್ಲೆಂದು ...... ಹಾಳುಗೆಟ್ಟೋಡುವ ಆಳು ನಾನಲ್ಲಯ್ಯ ...... ಮರಣವೇ ಮಹಾನವಮಿ ಎನಗೆ.** (೪೧೦)

ಇಲ್ಲಿ ವೀರಪುರುಷನ ಶೌರ್ಯವೃತ್ತಿಯು ಹೇಗಿರಬೇಕೆಂಬುದನ್ನು ಬಸವೇಶ್ವರನು ವಿವರಿಸಿದ್ದಾನೆ. ಧಾರ್ಮಿಕ ವೃತ್ತಿಯಲ್ಲಿ ಹೀಗೆಯೇ ಇರಬೇಕೆಂದು ಅವನ ಅಭಿಪ್ರಾಯವು. ಈ ಭಾವವು ಈ ಎಲ್ಲ ವಚನಗಳಲ್ಲಿದೆ.

**ಸಿರಹರಿದರೇನು ಕರುಳು ಕುಪ್ಪಳಿಸಿದರೇನು...... ಚಿತ್ತಮನ ಬುದ್ಧಿಯೊಂದಾದ ಮಚ್ಚುಬಿಚ್ಚಿ ಬೇರಾಗದಿದ್ದರೆ ಮೆಚ್ಚುವ ನಮ್ಮ ಕೂಡಲ ಸಂಗಮದೇವಾ.** (೪೧೧)

ರಣರಂಗದಲ್ಲಿ ಸೈನಿಕನು ಕಾದುತ್ತಿರುವಾಗ ಅವನಿಗೆ ಗಾಯವಾಗಲು ಉಂಟಾದ ಅವನ ಸ್ಥಿತಿಯನ್ನು ಇಲ್ಲಿ ಬಸವೇಶ್ವರನು ವರ್ಣಿಸುತ್ತಾನೆ. ಗಾಯವಾದರೂ ಸೈನಿಕನು ಧೈರ್ಯವನ್ನು ಬಿಡಕೂಡದೆಂದು ಅವನು ಹೇಳುತ್ತಾನೆ.

**ಗರುಡಿಯ ಕಟ್ಟಿ ೬೪ ಕೋಲು ಅಭ್ಯಾಸವ ಮಾಡಿದೆನಯ್ಯ ಇರಿವ ಗಾಯ ಖಂಡೆಯ** ಭೇದವಿನ್ನು ತಿಳಿಯದು. ಪ್ರತಿಗರುಡಿಕಾರ ಬರಿದ ಪಾಡಿಂಗೆ ಒದಗಲು **ವೀರಪಟ್ಟೆಯ ಕಟ್ಟಿ ತಿಗುರಿಯನೇರಿಸಿಕೊಂಬೆ.** ಗುರುಕಳನೇರಿ **ಕಠಾರಿಯ** ಕೊಂಡಲ್ಲಿ ಹೋಯಿತ್ತಾಗಳೆ ... ಕೂಡಲ ಸಂಗಮದೇವಾ. (೪೧೪)

ಸೈನಿಕನು ಆರಂಭದಲ್ಲಿ ಪಡೆಯುವ ಯುದ್ಧ ಶಿಕ್ಷಣವನ್ನು ಕುರಿತು ಇಲ್ಲಿ ಹೇಳುತ್ತಾನೆ. ಕೋಲಭ್ಯಾಸ ಅಂದರೆ ದಾಂಡಪಟ್ಟೆಯ ತರಹಗಳು ೬೪ ಇವೆ. ಆದರೆ ಅಷ್ಟು ಕಲಿತಾಗಲೇ ಪೂರ್ಣ ಸೈನಿಕನಾಗಲಾರನು. ಅವನಿಗೆ ರಣರಂಗದ ಅನುಭವವು ಬೇಕು ಎಂದು ಹೇಳಿ ಶತ್ರುವು ತನ್ನ ಮೈಮೇಲೆ ಬಂದಾಗ್ಗೆ ಏನು ಮಾಡಬೇಕೆಂಬುದನ್ನು ಇಲ್ಲಿ ಹೇಳುತ್ತಾನೆ.

ಅಂಕ ಓಡಿದರೆ ತೆತ್ತಿಗಂಗೆ ಭಂಗವಯ್ಯಾ. **ಕಾದಿಗೆಲಿಸಯ್ಯಾ ಎನ್ನನು.** ಕ್ಷಾದಿ ಗೆಲಿಸಯ್ಯಾ. ಕೂಡಲ ಸಂಗಮದೇವಾ ಎನ್ನ ತನುಮನಧನದಲ್ಲಿ ವಂಚನೆ ಇಲ್ಲದೆ. (೪೧೫)

ಇಲ್ಲಿ ಬಸವೇಶ್ವರನು ರಣರಂಗದಲ್ಲಿ ಬಂಟನು ಯುದ್ಧ ಮಾಡಲೇ ಬೇಕು. ಹಾಗೆ ಮಾಡಿದಲ್ಲಿಯೇ ಅವನಿಗೆ ಜಯವಾಗುವದು ಎಂದು ಹೇಳುತ್ತಾನೆ.

**ಮುನ್ನೂರರುವತ್ತುದಿನ ಶ್ರವವಮಾಡಿ** ಕಳನೇರಿ ಕೈಮರೆದಂತಾಯಿತ್ತೆನ್ನ ಭಕ್ತಿ...... ಕೂಡಲ ಸಂಗಮದೇವಾ. (೪೧೮)

ಆರಂಭದ ಯುದ್ಧ ಶಿಕ್ಷಣವನ್ನು ತೆಗೆದುಗೊಂಡರೂ ಕೂಡ ಯುದ್ಧ ಕಾಲದಲ್ಲಿ ಓಡಿಹೋಗುವವರನ್ನು ಕುರಿತು ಬಸವೇಶ್ವರನು ಇಲ್ಲಿ ಹೇಳುತ್ತಾನೆ. ವೀರಶೈವ ಧರ್ಮದ ಪ್ರಕಾರ ಕೇವಲ ಜ್ಞಾನಕ್ಕೆ ಮಹತ್ವವಿಲ್ಲ. ಅನುಭವಕ್ಕೆ ಮಹತ್ವವಿದೆ. ಆದ್ದರಿಂದ ಈ ವಿಷಯವನ್ನು ಕುರಿತು ಹೇಳುವಾಗ್ಗೆ ಬಸವೇಶ್ವರನು ಯುದ್ಧಕಾಲದಲ್ಲಿ ಓಡಿಹೋಗುವ ಶಿಪಾಯರ ಉದಾಹರಣೆಯನ್ನು ಆಗಿಂದಾಗ್ಗೆ ಕೊಡುತ್ತಾನೆ.

**ಗರಿದೋರೆ ಗಂಡರೆಂ**ಬವರ ಕಾಣೆ ... ... ನಂಟುತನವೇನವನ ಬಂಟತನವೇನವನ ...... ಹುರುಳಿಲ್ಲ ಕೂಡಲ ಸಂಗಮದೇವಾ. (೪೧೯)

ಯುದ್ಧಕಾಲದಲ್ಲಿ ಬಾಣಗಳು ನೆಡಲು ಸೈನಿಕನು ಅದರ ಪರಿವೆ ಇಲ್ಲದೆ ಯುದ್ಧಮಾಡಬೇಕು. ಹೀಗೆ ಮಾಡದವನು ಯಾವ ಪ್ರಯೋಜನಕ್ಕೂ ಬರುವದಿಲ್ಲೆಂದು ಅವನು ಹೇಳುತ್ತಾನೆ.

**ಅಲಗಲಗು ಮೋಹಿಸಿದಲ್ಲದೆ** ಕಲಿತನವ ಕಾಣಬಾರದು ...... ಕೂಡಲ ಸಂಗಮದೇವರ ಭಕ್ತಿ ಅಳವಡದಯ್ಯಾ. (೪೩೦)

ಕಲಿತನವು ಯುದ್ಧಕಾಲದಲ್ಲಿಯೇ ತೋರುವದೆಂದು ಅವನು ಹೇಳುತ್ತಾನೆ.

**ಒರೆಗಟ್ಟಿ** ಇರಿಯದವರ ಲೋಕ ಮೆಚ್ಚುವದೇ? **ಉಟ್ಟಿಚಲ್ಲಣ ಕೆಯ್ಯ ಪಟ್ಟಿವಿಡಿದು ಗರುಡಿಯ ಕಟ್ಟಿ** ಶ್ರವವ ಮಾಡುವಂತೆ ತನ್ನ ತಪ್ಪಿಸಿಕೊಂಡರೆ ಶಿವ ಮೆಚ್ಚುವನೇ? (೪೩೧)

ಇಲ್ಲಿ ಬಸವೇಶ್ವರನು ಸೈನಿಕನ ಉಡುಪನ್ನು ವರ್ಣಿಸುತ್ತಾನೆ. ಸೈನಿಕನು ಹೀಗೆ ವೇಷ ಧರಿಸಿಕೊಂಡು ಗರುಡಿಯ ಮನೆಯಲ್ಲಿ ಸಾಧಕ ಮಾಡಿ ರಣರಂಗದಲ್ಲಿ ತಪ್ಪಿಸಿಕೊಂಡರೆ ಅವನು ಯೋದ್ಧನೆಂದು ಎನಿಸಿ ಕೊಳ್ಳಲಾರನೆಂದು ಹೇಳುತ್ತಾನೆ.

ಸಮಚಿತ್ತವೆಂಬ **ನೇಮದ ಹಲಿಗೆಯ** ಹಿಡಿದು ಶಿವಚಿತ್ತವೆಂಬ **ಕೂರಲಗ** ಕೊಂಡು ಶರಣಾರ್ಥಿ ಎಂಬ ಶ್ರವಗಲಿತೊಡೆ ಆಳುತನಕ್ಕೆ ದೆಸೆಯಪ್ಪೆ. (೪೩೪)

ಇಲ್ಲಿ ಬಸವೇಶ್ವರನು ರಣರಂಗದ ಉದಾಹರಣೆಯನ್ನು ಕೊಟ್ಟಿದ್ದಾನೆ.

ಕಲಿಯ **ಕೈಯ್ಯ ಕೈದು**ವಿನಂತಿರಬೇಕಯ್ಯ **ಎಲುದೋರ** ಸರಸ ಮಾಡಿದರೆ ಸೈರಿಸಬೇಕಯ್ಯ. **ರಣದಲ್ಲಿ ತಲೆಹರಿದು** ನೆಲಕ್ಕೆ ಬಿದ್ದು ಬೊಬ್ಬಿಡಲದಕ್ಕೆ ಒಲಿವ ಕೂಡಲ ಸಂಗಮದೇವಾ (೪೬೩)

ಬಸವೇಶ್ವರನು ಇದರಲ್ಲಿಯೆ ರಣರಂಗದಲ್ಲಿ ಸೈನಿಕನು ಕಾಳಗ ಮಾಡುತ್ತಿರುವದನ್ನು ವರ್ಣಿಸಿರುತ್ತಾನೆ.

**ಎಲುದೋರಿದರೆ ನರಹರಿದರೆ ಕರುಳು ಕುಪ್ಪಳಿಸಿದರೆ** ನಾ ಧೃತಿಗೆಡೆನಯ್ಯ **ಶಿರಹರಿದು ಅಟ್ಟೆ ನೆಲಕ್ಕೆ** ಬಿದ್ದರೆ ನಾಲಿಗೆ ಕೂಡಲ ಸಂಗ ಶರಣೆನಿತಿದ್ದಿತಯ್ಯ (೪೪೫)

ಇಲ್ಲಿಯೂ ಕೂಡ ಸೈನಿಕನ ಹೋರಾಟದ ದೃಶ್ಯವು ಹೇಳಲ್ಪಟ್ಟಿರದೆ.

ಹುಟ್ಟುತ್ತ ದ್ರವ್ಯವ ನರಿಯದವಂಗೆ ಐಶ್ವರ್ಯವಂತ ಮಗನಾದರೆ ಲಕ್ಷ ಸಂಖ್ಯೆಯ ಹಿರಣ್ಯವ ತಂದು ಸಂತೋಷಬಡಿಸುವಂತೆ ಕಾಳಗದ ಮುಖವಾವುದೆಂದರಿಯದ ಹಂದೆ ನೃಪಂಗೆ ಒಬ್ಬ ಕ್ಷತ್ರಿಯನಹ ಕುಮಾರ ಹುಟ್ಟಿ ಕಿಗ್ಗಡಲ ರಕ್ತದ ಹೊನಲಲ್ಲಿ ಕಡಿದು ಮುಳುಗಾಡುವ **ಕೊಳಗುಳವ** ಕಂಡು ಪರಿಣಾಮಿಸುವಂತೆ ಆನು ಪರಿಣಾಮಿಸುವೆನಯ್ಯ ಕೂಡಲಸಂಗಮದೇವಾ ನೀವು ಬಂದೆನ್ನ ಬೇಡಿದರೆ. (೪೪೭)

ಇದರಲ್ಲಿ **ಕೊಳಗುಳ** ಅಂದರೆ ರಣಾಂಗಣದ ಒಂದು ವರ್ಣನೆ ಇದೆ. ಇಲ್ಲಿ ರಕ್ತದ **ಹೊಂಡ** ಮತ್ತು ನದಿಗಳ ಉಲ್ಲೇಖಗಳಿದ್ದು ಅವು

ಗಳನ್ನು ಬಸವೇಶ್ವರನು ಕಂಡು ಹರ್ಷಯುಕ್ತನಾಗಿ ಇಲ್ಲಿ ನುಡಿದಿದ್ದಾನೆ. ಒಬ್ಬ ಶೂರ ಸೇನಾಪತಿಯು ಬಾಯೊಳಗಿಂದ ಹೊರಡತಕ್ಕ ಮಾತುಗಳು ಇವಾಗಿವೆ.

**ಅಂಕ ಕಂಡಾ ಕೋಲಿನಾಸೆ ಮತ್ತೇಕಯ್ಯ ಲೆಂಕ ಕಂಡಾ ಪ್ರಾಣದಾಸೆ ಮತ್ತೇಕಯ್ಯ ಭಕ್ತ ಕಂಡಾ ತನುಮನದಾಸೆ ಮತ್ತೇಕಯ್ಯ. (೪೪೮)**

ಶೂರನು ಪ್ರಾಣದಾಸೆಯನ್ನು ಹಿಡಿಯಕೂಡದೆಂದು ಬಸವೇಶ್ವರನು ಇಲ್ಲಿ ಹೇಳುತ್ತಾನೆ.

**ಆಟ್ಟಟಿಕೆಯ ಮಾತನಾಡಲದೇಕೋ? ಮುಟ್ಟಿಬಂದುದಕ್ಕಂಜಲದೇಕೋ? ಕಾದಿದಲ್ಲದೆ ಮಾಣೆನು. ಓಡಿದರೆ ಭಂಗ ಹಿಂಗದಾಗಿ. (೪೪೯)**

ಇಲ್ಲಿ ಬಸವೇಶ್ವರನು ಯುದ್ಧದಲ್ಲಿ ಕಾದಾಡಬೇಕು ಅಂಜಬಾರದು ಓಡಬಾರದು ಎಂದು ಹೇಳುತ್ತಾನೆ.

**ಬಲ್ಲದರೊಡನೆ ಬವರವಾದೊಡೆ ಗೆಲ್ಲಲುಂಟೆ? ಸೋಲಲುಂಟು. (೪೫೨)**

ಇದಾದರೂ ಯುದ್ಧಕಾರ್ಯಕ್ಕೆ ಸಂಬಂಧಿಸಿದ ವಚನವು.

**ವೇದದಂತುಟಲ್ಲ ಶಾಸ್ತ್ರದಂತುಟಲ್ಲ. ಗೀತಮಾತಿನಂತುಟಲ್ಲ. ಕೇಳಯ್ಯ ಮಾತಿನ ಮಾತಿನ ಕೌಳುಗೋಲ ಶ್ರಮದಲ್ಲಿ ಸತ್ತವರೊಳರೇ? ಅಯ್ಯಾ ದಿಟದಲಗಿನ ಕಾಳಗಮತ್ತದಲಿಪ್ಪುದೇ ಕೂಡಲ ಸಂಗನ ಶರಣರು ಬಂದಲ್ಲಿ (೪೫೩)**

ಇದರಲ್ಲಿ ಕೇವಲ ಶಸ್ತ್ರಾಭ್ಯಾಸ ಮತ್ತು ನಿಜವಾದ ಕಾಳಗ ಇವುಗಳಲ್ಲಿದ್ದ ಭೇದವನ್ನು ತೋರಿಸಿ ಬರೀ ಮಾತಿನಿಂದ ಪ್ರಯೋಜನವಿಲ್ಲೆಂದು ಹೇಳುತ್ತಾನೆ.

**ಬಾಲಭ್ಯಾಸವ ಮಾಡಹೋದರೆ ಎನ್ನ ಸುರಿಗಿ ಎನ್ನನಟ್ಟಿತ್ತು. ಎಂತಯ್ಯ? ಕಲಿಯೊಡನೆ ಶ್ರಮವ ಮಾಡುವೆನು. (೪೫೫)**

ಇದರಲ್ಲಿ ಗುಡಿಮನೆಯಲ್ಲಿ ಅಭ್ಯಾಸ ಮಾಡಹೋದರೆ ನನ್ನ ಕತ್ತಿಯು ನನಗೆ ನಟ್ಟಿತು ಇದು ಎಂತಹದು, ಎಂದು ಪ್ರಶ್ನೆ ಮಾಡಿ ಕೇವಲ ಬಾಹ್ಯಾಡಂಬರದ ಕ್ರಿಯೆಗಳಿಂದ ಯಾವ ಪರಿಣಾಮಗಳಾಗುತ್ತವೆಂಬದನ್ನು ಹೇಳುತ್ತಾನೆ.

ಇವುಗಳ ಮೇಲಿಂದ ಬಸವೇಶ್ವರನಿಗೆ ಶಸ್ತ್ರಾಭ್ಯಾಸದ ಮತ್ತು ಯುದ್ಧಕಲೆಯ ಜ್ಞಾನವಿದ್ದಿತೆಂಬುದು ಕಂಡುಬರುತ್ತದೆ ಈ ರೀತಿಯಾಗಿ ಅವನ ವಚನಗಳಲ್ಲಿ ಬರುವ ಉಲ್ಲೇಖಗಳು ಕೇವಲ ಆಕಸ್ಮಿಕವಾದವುಗಳಲ್ಲೆಂದು ನಮಗೆ ತೋರುತ್ತದೆ. ಅವನು ಸೈನಿಕರಲ್ಲಿ ಓಡಾಡುತ್ತಿದ್ದುದರಿಂದಲೇ ಅವರಿಗೆ ಈ ರೀತಿ ಬೋಧೆಮಾಡುತ್ತ ಮಹತ್ವದ ಧಾರ್ಮಿಕ ವಿಚಾರಗಳನ್ನು ತನ್ನ ವಚನಗಳಲ್ಲಿ ಹೊರಗೆಡಹಿದ್ದಾನೆ. ಅವನು ಒಂದೆಡೆಯಲ್ಲಿ ಏಕಾಂತವಾಗಿ ಕುಳಿತುಕೊಳ್ಳದೆ ಅನೇಕ ತರದ ಜನರಲ್ಲಿ ಸಂಚರಿಸುತ್ತ ತನ್ನ ಧರ್ಮಬೋಧೆಯನ್ನು ಮಾಡುತ್ತಾ ಹೋಗಿದ್ದಾನೆಂದು ನಮಗೆ ತೋರುತ್ತದೆ ಮೇಲಿನ ಪ್ರತಿಯೊಂದು ವಚನದಲ್ಲಿ ಕೆಲವೊಂದು ಉಚ್ಚ ಧಾರ್ಮಿಕ ತತ್ವಗಳು ಅಡಕವಾಗಿರುತ್ತವೆ. ಲೇಖವಿಸ್ತಾರದ ಭಯಕ್ಕಾಗಿ ನಾವು ಅವುಗಳನ್ನೆಲ್ಲ ಈ ಲೇಖದಲ್ಲಿ ಚರ್ಚಿಸಿಲ್ಲ. ವಾಚಕರು ಮೂಲ ವಚನಗಳನ್ನು ಪರಿಶೀಲಿಸಿದಲ್ಲಿ ನಾವು ಹೇಳಿದ್ದರ ನಿಜತ್ವವು ಅವರಿಗೆ ಕಂಡುಬರದಿರಲಾರದು. ಇದೇ ವಿಷಯವಾಗಿ ಇನ್ನೂ ಅನೇಕ ವಚನಗಳಿದ್ದು ಅವುಗಳನ್ನು ಮುಂದಿನ ಲೇಖದಲ್ಲಿ ಕೊಡುವೆವು.

(ಮುಂದೆ ಸಾಗುವದು)

---

## ನೀತಿಯ ಮಾತುಗಳು.

(ಲೇಖಕ— ಜಿ ಎಸ್. ಕನ್ನೂರ ಮು. ವಿಜಾಪುರ.)

ನಿಂದಿಸಿದರೆಂದರೆ ಯಾರನ್ನು ನಿಂದಿಸಿದರು? ಯಾವದೋ ಒಂದು ನಾಮ ಮಾತ್ರವನ್ನು! ಇಲ್ಲದವನಿಗೆ ಅಂದದ್ದನ್ನು ನಾನೇಕೆ ಹಚ್ಚಿಕೊಂಡು ಕೊರಗಲಿ?

ನಿಂದೆಯೆಂದರೆ ಹೆಚ್ಚಿಗೆ ಏನು ಮಾಡಿದರು? ಅನೇಕ ನಿಂದ್ಯ ಪದಾರ್ಥಗಳಿಂದ ಕೂಡಿದ ದೇಹವನ್ನೇ ಅವರು ನಿಂದಿಸಿದರು. ಅಲಿಪ್ತನಾದ ನನ್ನನ್ನಂತೂ ಅವರು ನಿಂದಿಸಲಾರರಷ್ಟೇ?

ನಾನು ಬಚ್ಚಿ ಇಡುವ (ಅವ) ಗುಣಗಳನ್ನೇ ಅವರು ಬಿಚ್ಚಿ ಆಡಿದರು! ಅದರಲ್ಲಿ ಸುಳ್ಳು ಏನಿದೆ?

ಕೀರ್ತಿಯಿಂದ ಗುಣಗಳ ಪ್ರತಿಫಲವು ದೊರಕುವಂತೆ ಸರ್ವತ್ರ ನಿಂದಾರೂಪ ಅಪಕೀರ್ತಿಯಿಂದ ದೋಷಗಳಿಗೆ ಪ್ರಾಯಶ್ಚಿತ್ತ ದೊರೆತಂತಾಗಿ ದೋಷದ ಹೊರೆಯು ಹಗುರಾಗುತ್ತದೆ

ನಿಂದೆಯಾಡಿ ಆ ಪುಣ್ಯಾತ್ಮರು ನನ್ನ ದೋಷಗಳನ್ನು ತೊಳೆಯುತ್ತಾರೆ. ಬೆಲೆ ತಕ್ಕೊಳ್ಳದೆ ನನ್ನಲ್ಲಿಯ ಕಿಲ್ಮಿಷವನ್ನು ಸ್ವಂತದ ನಾಲಿಗೆಯಿಂದ ಬಳಿದು ಸ್ವಚ್ಛ ಮಾಡುವವರ ಉಪಕಾರ ತೀರಿಸುವ ಬಗೆಯೇನು?

ನಿಂದಕರ ಮನೆಯು ನೆರೆಯಲ್ಲಿಯೇ ಇರಬೇಕು. ಯಾಕಂದರೆ 'ಎರಡನೆಯವರ ಕಣ್ಣೊಳಗಿನ ಸೂಕ್ಷ್ಮ ಎಸಳು ಕಾಣಿಸುತ್ತದೆ. ಆದರೆ ತನ್ನ ಕಣ್ಣೊಳಗಿನ ಬಾಸಳವು ಕಾಣುವದಿಲ್ಲ'ವೆಂಬ ನಾಣ್ಣುಡಿಯಂತೆ ನನ್ನ ದೋಷಗಳು ನನಗೇ ತಿಳಿಯುತ್ತಿರುವದಿಲ್ಲ. ಆ ಕಪ್ಪು ದೋಷಗಳನ್ನು ಬೈಲಿಗೆಳೆದು ನಿಂದಕ ಮಹಾಶಯರು ನನ್ನ ಮೇಲೆ ಉಪಕಾರ ಮಾಡುತ್ತಿರುವರು ಅವರಾಡುವ ಮಾತುಗಳಲ್ಲಿಯ ಸತ್ಯಾಂಶವನ್ನು ನಿರ್ವಿಕಾರತೆಯಿಂದ ಕಂಡುಕೊಳ್ಳುವ ಧೀರತೆಯು ನನಗೆ ಎಂದಿಗೆ ಪ್ರಾಪ್ತವಾದೀತು!

ಆದರೆ ಅನ್ಯರು ಆರೋಪಿಸಿದ ವೃಥಾ ದೋಷಗಳನ್ನು ಮೈಮೇಲೆ ಹಾಕಿಕೊಂಡು ಸಿಟ್ಟಿಗೇಳಲೇಕೆ? ಅದು ನನ್ನ ಪರೀಕ್ಷೆಯ ವೇಳೆಯಿರುತ್ತದೆ. ಅನ್ಯರು ಹಠಾತ್ತಾಗಿ ಅಂಟಿಸಿದರೂ ನನಗೆ ದೋಷಗಳು ತಗಲದಿದ್ದರೆ ನನ್ನ ವಿಜಯವಾಯಿತು.

ನನ್ನ ನಿಂದೆಯಿಂದ ಪರಸ್ಪರ ಸಂತೋಷಬಟ್ಟರೆ ನನಗೂ ಸಂತೋಷವೇ! ಯಾಕಂದರೆ ಸರ್ವತೋಪರಿ ಯತ್ನದಿಂದ ಅವರನ್ನು ಸಂತುಷ್ಟ ಮಾಡಬೇಕೆನ್ನುವ ನನ್ನ ಇಚ್ಛೆಯನ್ನು ಅವರು ನನಗೆ ಆಯಾಸ ಕೊಡದೆ ಪೂರೈಸುವರು. ನನ್ನಿಂದ ಸ್ವಪರ ಸುಧಾರಣೆಯು ಯತ್ಕಿಂಚಿತವೂ ಶ್ರಮವನ್ನು ಅಪೇಕ್ಷಿಸದೆ ನನ್ನ ಧ್ಯೇಯವನ್ನು ಅವರು ತಮ್ಮ ಪುಣ್ಯ ಖರ್ಚುಹಾಕಿ ಪೂರೈಸಿಕೊಟ್ಟರೆ ನನ್ನ ಭಾಗ್ಯಕ್ಕೆ ಎಣೆಯಿರುವದೆ?

'ಪ್ರಭೋ! ಅವರು ನಿಂದೆಯಾಡಬೇಕಾದರೆ ಅವರಿಗೆ ನನ್ನ ದ್ವೇಷಕ್ಕಿಂತಲೂ ಧನ, ಮಾನ, ವಿದ್ಯೆ ಮುಂತಾದವುಗಳಿಂದ ಅವರ ಪರಿಸ್ಥಿತಿಯು ನನ್ನಕಿಂತ ಹೀನವಿರುವದೇ ಮುಖ್ಯ ಕಾರಣವಿರುತ್ತದೆ. ಅದನ್ನು ಹಿಂಗಿಸಿ ಅವರನ್ನು ಸುಖಿಗಳಾಗಿ ಮಾಡಲಾರಿಯಾ?

---

# ಶಿವಶರಣರ ಶಿವಾನುಭವ ಮಂಟಪ.

(ಲೇಖಕ:— ಶಿವಮೂರ್ತಿ.)

---

ಕ್ರಿ. ಶ. ೧೨ನೆಯ ಶತಮಾನದಲ್ಲಿ ಇಡೀ ಜಗತ್ತನ್ನೇ ನಿಬ್ಬೆರಗುಗೊಳಿಸುವ 'ಶಿವಾನುಭವ ಮಂಟಪ'ವೆಂಬ ತೇಜೋಮಯವಾದ ಸಂಸ್ಥೆಯೊಂದು ಪ್ರಾದುರ್ಭವಿಸಿತು. ಅದು ತತ್ವಜ್ಞಾನಿಗಳ ಚಕ್ರಗೋಷ್ಠಿಯೋ, ದಿವ್ಯಜ್ಞಾನಿಗಳ ಜ್ಯೋತಿರ್ಮಂಡಲವೋ, ಸಮಾಜ ಸುಧಾರಕರ ಉಗಮಸ್ಥಾನವೋ, ಧರ್ಮಜಾಗ್ರತಿಯ ಉತ್ಕ್ರಾಂತಿ ಸದನವೋ, ಪತಿತೋದ್ಧಾರದ ಪಾವನಮಂದಿರವೋ, ಎಂಬಂತೆ ಕಂಗೊಳಿಸುತ್ತಿತ್ತು. ಆ ಶಿವಾನುಭವಮಂಟಪವೆಂಬ ವಿಶಾಲಗಗನದಲ್ಲಿ ಮಿನುಗುವ ಅಸಂಖ್ಯಾತ ಶಿವಶರಣರೆಂಬ ನಕ್ಷತ್ರಮಂಡಲದ ಮಧ್ಯದಲ್ಲಿ ಬಸವ, ಚೆನ್ನಬಸವ, ಅಲ್ಲಮಪ್ರಭು, ಅಕ್ಕಮಹಾದೇವಿ, ಸಿದ್ಧರಾಮ ಮೊದಲಾದ ಜೀವಜ್ಯೋತಿಗಳು ದೈದೀಪ್ಯಮಾನವಾಗಿ ವಿರಾಜಿಸುತ್ತಿದ್ದವು. ಈ ನಿರಾಳವಾದ ವಿಶ್ವಸಾಗರದ ಆಳದಲ್ಲಿ ಒಳಹೊಕ್ಕು ಶಿವಶರಣರು ಶೋಧಿಸಿ ತೆಗೆದ ಉಜ್ವಲ ತತ್ವಗಳೆಂಬ ರತ್ನರಾಶಿಗಳು ತ್ರಿಕಾಲಾಬಾಧಿತವಾಗಿ ರಂಜಿಸುತ್ತಿರುವವು.

ಆ ಶಿವಾನುಭವ ಮಂಟಪದಲ್ಲಿ ಎಂಥ ಅಘಟಿತ ಘಟನಾಕಾರ್ಯಗಳು ಜರಗಿದವೆಂಬುದನ್ನು ಬಲ್ಲಿರಾ? ಅದರಲ್ಲಿ ಶಿವಶರಣರು ಮಥಿಸಿ ತೆಗೆದ ಎಂಡೆಂಭತ್ತುಕೋಟಿ ವಚನಗಳು ಜಗತ್ತಿನ ಯಾವ ದೇಶದ ಇತಿಹಾಸದಲ್ಲಿ ಕಂಡುಬರುತ್ತವೆ? ಯಾವ ದೇಶದ ಇತಿಹಾಸದಲ್ಲಿ ಅಸಂಖ್ಯಾತ ದಿವ್ಯಜ್ಞಾನಿಗಳು ಏಕಕಾಲಕ್ಕೆ ಉದಿಸಿದ್ದಾರೆ? ಯಾವ ದೇಶದ ಸಾಮಾಜಿಕ ಧಾರ್ಮಿಕ ಸುಧಾರಣೆಗಳು ಶಿವಶರಣರು ಗೈದ ಸುಧಾರಣೆಗಳನ್ನು ಮೀರಿಹೋಗಿವೆ? ಶಿವಶರಣರು ಸಮಾಜಸುಧಾರಕರೂ ಧಾರ್ಮಿಕ ಸುಧಾರಕರೂ ಆಗಿದ್ದರಿಷ್ಟೇ ಅಲ್ಲ. ಒಳ್ಳೆ ಯೋಧರೂ ಆಗಿದ್ದರು. ಇಂಥ ವೈಚಿತ್ರ್ಯವು ಯಾವ ದೇಶದ ಇತಿಹಾಸದಲ್ಲುಂಟು? ಕ್ರಿಸ್ತನು ಗುರುವಾಗಿದ್ದರೆ ಆತನಿಗೆ ಅನೇಕರು ಶಿಷ್ಯರಾಗಿರಬಹುದು. ಮಹಮ್ಮದಪೈಗಂಬರರು ಗುರುಗಳಾಗಿದ್ದರೆ ಅವರ ಅನುಯಾಯಿಗಳು ಅನೇಕರಾಗಿರಬಹುದು. ಬುದ್ಧನು ಗುರುವಾಗಿದ್ದರೆ ಆತನ ಧರ್ಮಪ್ರಸಾರಕರನೇಕರಿರಬಹುದು. ಸಾಕ್ರೆಟೀಸನ ತತ್ವಗಳನ್ನು ಪ್ರಸಾರ ಮಾಡ

ಸಂ. 32 ಸಂಚಿ. 3



# ೨. ಲಿಂಗತತ್ವ.

ಹಿಂದಿನ ಸಂಚಿಕೆಯಿಂದ ಮುಂದುವರಿದುದು

(ಬರೆದವರು:— ಶ್ರೀ ಶಿವಾನಂದಸ್ವಾಮಿಗಳು ಗವಿಮಠ ತ್ರೆಗ್ಗಿಹಳ್ಳಿ (ಇಂಡಿ)



ಹಿಂದೆ ಲಿಂಗದ ಆರು ಪ್ರಕಾರಗಳ ಬಗೆಗೆ ವಿವರಣೆ ಅವುಗಳ ಬಗೆಬಗೆಯ ಅರ್ಥಗಳನ್ನು ವಿವರಿಸಿದ್ದಾಯಿತು. ಇಷ್ಟ ಪ್ರಾಣ ಭಾವಲಿಂಗಗಳ ಬಗ್ಗೆಯೂ ಅರ್ಥವಿರುವದು. ಕರಸ್ಥಲದ ಪ್ರೇಮವೇ ಅಂದರೆ ಸತ್ಕ್ರಿಯಾಚರಣೆಯೇ ಇಷ್ಟಲಿಂಗವೆನಿಸುವದು. ಅಂದರೆ ಕರ್ಮಯೋಗ ಅಥವಾ ಕಾಯಕವೇ ಇಷ್ಟಲಿಂಗವೆನಿಸುವದು. ಉರಸ್ಥಲದ ಪ್ರೇಮವೇ ಅಂದರೆ ಭಕ್ತಿಯಾಚರಣೆಯೇ ಪ್ರಾಣಲಿಂಗವೆನಿಸುವದು ಅಂದರೆ ಭಕ್ತಿಯೋಗ ಅಥವಾ ಪ್ರೇಮಯೋಗವೇ ಪ್ರಾಣಲಿಂಗವೆನಿಸುವದು. ಶಿರಸ್ಥಲದ ಅಂದರೆ ಬುದ್ಧಿಯೇ ಜ್ಞಾನಯೋಗವೇ ಭಾವಲಿಂಗವೆನಿಸುವದು ಒಟ್ಟಾಗಿ ಕರ ಉರ ಶಿರಸ್ಥಲಗಳು ಸೇರಿದಾಗ ಅಂದರೆ ಕರ್ಮ, ಭಕ್ತಿ, ಜ್ಞಾನ, ಒಟ್ಟಾಗಿ ಸೇರಿದಾಗ ಅದು ಚಿಚ್ಛಕ್ತಿಯಾಗಿ ಪರಿಣಮಿಸಿ ಪರಶಿವನಲ್ಲಿ ಬೆರೆಯುತ್ತದೆ. ಇಷ್ಟದಲ್ಲಿ ಬಿಂದು, ಪ್ರಾಣದಲ್ಲಿ ನಾದ ಭಾವದಲ್ಲಿ ಕಳೆಗಳು ಕೂಡಿಕೊಂಡಿರುವವು. ಅದಕ್ಕೆ

ಮಾಟ= ಕಳೆ; ಕೂಟ= ನಾದ; ನೋಟ = ಬಿಂದು ಇದಕ್ಕೂ ತಿಳಿಯು ವಂತೆ ಹೇಳಬೇಕೆಂದರೆ ಮಾಟ = ಕ್ರಿಯೆ (ಕಳೆ); ಕೂಟ = ನಾಮ (ನಾದ) ನೋಟ - ರೂಪು (ಬಿಂದು) ಎಂದು ಬೇರೆ ಹೆಸರುಗಳು ಉಂಟು.

ಕೆಲವರು ಕಳೆಯೆ ಅಂದರೆ ಕ್ರಿಯೆಯು ಹೆಚ್ಚೆಂದು ಭಾವಿಸಿ ಸತ್ಕ್ರಿಯಾಚರಣೆಯಲ್ಲಿ ತೊಡಗುವರು. ಕೆಲವರು ನಾದ ಹೆಚ್ಚೆಂದು ತಿಳಿದು ನಾಮವನ್ನು ಅಂದರೆ ಮಂತ್ರವನ್ನು ಸದಾ ಜಪಿಸುವರು. ಕೆಲವರು ಬಿಂದು (ರೂಪು) ಹೆಚ್ಚೆಂದು ತಿಳಿದು ಮೂರ್ತಿಯಲ್ಲಿ ಭಕ್ತಿಯನ್ನು ಇರಿಸುವರು. ಹೀಗೆ ಒಂದೊಂದನ್ನೆ ಮಾಡಿದರೆ ಅದು ಪೂರ್ಣ ಪೂಜೆಯಲ್ಲ, ಪೂರ್ಣ ಯೋಗವಲ್ಲ, ಪೂರ್ಣ ಮಾನವನಲ್ಲ ಕಾರಣ ನಮ್ಮ ವೀರಶೈವ ತತ್ವದ ಪ್ರಕಾರದ ನಾಮರೂಪ ಕ್ರಿಯೆಗಳಲ್ಲಿ ಅಂದರೆ ಭಕ್ತಿ ಜ್ಞಾನ ಕ್ರಿಯೆಗಳಲ್ಲಿ ತಕ್ಕ ಮೇಳವನ್ನಿಟ್ಟುಕೊಂಡು ಸಾಗುವರು. ಅಂದರೆ ಕರ (ಕ್ರಿಯೆ) ಉರ (ಹೃದಯ) ಭಕ್ತಿ ಶಿರ (ಬುದ್ಧಿ) ವಿಚಾರಗಳನ್ನು ಕೂಡಿಸಿ ಮೇಳದಿಂದ ನಡಿಸುವರು, ಇಷ್ಟಲಿಂಗದಲ್ಲಿ ಆಚಾರಲಿಂಗ ಗುರುಲಿಂಗ ಎಂಬವೆರಡು ಕ್ರಿಯೆಗೆ ಸಂಬಂಧಿಸಿರುವವು. ಪ್ರಾಣಲಿಂಗದಲ್ಲಿ ಶಿವಲಿಂಗ ಚರಲಿಂಗ ಎಂಬವೆರಡೂ ಹೃದಯಕ್ಕೆ ಅಂದರೆ ಭಕ್ತಿಗೆ ಸಂಬಂಧಿಸಿರುವವು. ಭಾವಲಿಂಗದಲ್ಲಿ ಪ್ರಸಾದ ಲಿಂಗ ಮಹಾಲಿಂಗ ಎಂಬವೆರಡೂ ಶಿರಕ್ಕೆ ಅಂದರೆ ಜ್ಞಾನಕ್ಕೆ ಸಂಬಂಧಿಸಿರುವವು. ಕ್ರಿಯಾ ಭಕ್ತಿ ಜ್ಞಾನಗಳಲ್ಲಿ ಸಮನ್ವಯವಿದ್ದರೆ ಪೂರ್ಣ ಯೋಗವೆಂದು ಹೇಳಿ ವೇದಾಂತಿಗಳು ಮುಗಿಸುವರು. ಆದರೆ ವೀರಶೈವರು ಇನ್ನೂ ಮುಂದೆ ಹೋಗಿದ್ದಾರೆ. ಈ ಆರೂ ಲಿಂಗದ ಆಚೆಗೆ ಅಂದರೆ ಆರು ಲಿಂಗಗಳನ್ನು ಸರಿಯಾಗಿ ಆಚರಿಸಲಿಕ್ಕೆ ಬಂದಬಳಿಕ ಅಂದರೆ ಕ್ರಿಯೆ ಭಕ್ತಿ ಜ್ಞಾನಗಳು ಸರಿಯಾಗಿ ಬಂದಬಳಿಕ ಮುಂದಿನ ಶಿವಚಕ್ರದಲ್ಲಿ ಅಂದರೆ ಸಹಸ್ರಾರದಲ್ಲಿ ಇರುವ ನಿಃಕಲಲಿಂಗವನ್ನು ಪೂಜಿಸುವರು. ಆಗ ಅನುಭವ ಶಕ್ತಿ ಬರುವದು. ಇಷ್ಟಾದರೆ ಪರಿಪೂರ್ಣ ಭಕ್ತಿಯಾಯಿತು ಪರಮಾನಂದವಾಗುವದು. ಆ ಬಳಿಕ ನಿಃಶೂನ್ಯಲಿಂಗ ನಿರಂಜನಲಿಂಗಗಳನ್ನು ಪೂಜಿಸಲಿಕ್ಕೆ ಸಹಜ ಬರುವದು. ಆಗ ಮಂತ್ರ ಅವಿರಳ ಅನಿರ್ವಚನೀಯ ಆನಂದವಾಗುವದು. ಇದೊಂದು ರೀತಿಯ ಲಿಂಗತತ್ವವಾಗಿರುವದು.

ಮೊದಲು ಇಷ್ಟಲಿಂಗವನ್ನು ಸರಿಯಾಗಿ ಪೂಜಿಸಬೇಕು. ಅಂದರೆ ನೀತಿಯು ನಡೆಯಿಂದ ಇಂದ್ರಿಯುಗಳಿಂದ ಸತ್ಕ್ರಿಯೆಯಲ್ಲಿ ವ್ಯವಹರಿಸುವದೇ

ಇಷ್ಟಲಿಂಗ ಪೂಜೆ ಎನಿಸುವದು. ನೀತಿಬದ್ಧ ನಡತೆಯು ಆಚರಣೆಯು ಇಷ್ಟ ಮಯುವಾದುದು. ಇದು ಅನಿಷ್ಟವನ್ನು ನಿವಾರಿಸುವದು. ಅದಕ್ಕೆ ಇದು ಇಷ್ಟಲಿಂಗವೆನಿಸುವದು. ಇಂಥ ಸತ್ಕ್ರಿಯಾಚರಣೆಗೆ ಮಾಟವೆನ್ನುವರು. ಇದರಿಂದ ತನುವಿನ ಯಾವತ್ತೂ ಹೊಲಸು ಹೋಗಿ ಶುದ್ಧವಾಗಲು ಅನೇಕ ನಾದಗಳು ಕೇಳಿಸುವವು ಪ್ರಾಣಾಯಾಮದಿಂದಲೂ ಈ ನಾದಗಳು ಕೇಳಿಸುವವು. ಈ ಮಾಟದಲ್ಲಿ ಅಂದರೆ ಸತ್ಕ್ರಿಯಾಚರಣೆಗಳಲ್ಲಿ ಎರಡು ಪ್ರಕಾರ ತನ್ನ ತನು ಮನ ಭಾವಗಳ ಶುದ್ಧಿಗಾಗಿ ಮಾಡುವ ಸತ್ಕ್ರಿಯೆಗಳು ಪರಹಿತಕ್ಕಾಗಿ ಮಾಡುವ ಸತ್ಕ್ರಿಯೆಗಳು ಎಂದು ಹೇಳಬಹುದು. ಇವುಗಳಲ್ಲಿಯೂ ತನುಮನಗಳು ಶುದ್ಧಿಯಾಗುವವು. "ಕಳಬೇಡ, ಕೊಲಬೇಡ ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರು ಹಳಿಯಲುಬೇಡ, ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ ಇದೇ ನಮ್ಮ ಕೂಡಲಸಂಗಮ ದೇವನೊಲಿಸುವಪರಿ" ಎಂದು ಇಷ್ಟಲಿಂಗ ಪೂಜೆಯ ಪರಿಯನ್ನು ಹೇಳಿದ್ದಾರೆ. ಇದರಂತೆ ಅನೇಕ ವಚನಗಳ ನೀತಿಯ ಬಗ್ಗೆ ಸತ್ಯ ಅಹಿಂಸೆಗಳ ಬಗ್ಗೆ ಹಾಡಿದ್ದಾರೆ. ಅವೆಲ್ಲ ಇಷ್ಟಲಿಂಗ ಪೂಜೆಯನ್ನೇ ಸಮರ್ಥಿಸುವವು.

ತನ್ನ ಎಲ್ಲಾ ಭಾವ ಬಯಲಾಗುವದು ಜ್ಞಾನ ಮಾರ್ಗದ ಲಕ್ಷಣ. ಬಯಲು ಬಯಲು ರೂಪುಗೊಳ್ಳುವದು. ಕ್ರಿಯಾಮಾರ್ಗದ ಲಕ್ಷಣವು ಇದನ್ನು ಮೇಲೆ ವಿವರಿಸಲಾಗಿದೆ. ಜ್ಞಾನಮಾರ್ಗವು ನೋಡಿ, ನೋಡಿ, ಮಂತ್ರ ಸಾಗುವದು ಇದಲ್ಲ ಇದಲ್ಲ; ಆ ಪ್ರಾಣಲಿಂಗವು ಬೇರೆ ಇರುವದು. ಎಂದು ಪಂಚಭೂತಾದಿಗಳನ್ನು ಅಲ್ಲಗಳೆದು ಬರೀ ಪ್ರಾಣಲಿಂಗವನ್ನು ಅಂದರೆ ಜ್ಞಾನ ವನ್ನು ಶೋಧಿಸಿ ಅದರ ಅನುಸಂಧಾನವನ್ನೇ ಮಾಡುವದು ಪ್ರಾಣ ಲಿಂಗ ಪೂಜೆಯೆನಿಸುವದು. ಇದಕ್ಕೆ ಕೂಟವೆಂದು ಕರೆಯುವರು. ಈ ಕೂಟವನ್ನೇ ಮಂತ್ರದ ಅನುಸಂಧಾನದಿಂದ ಕಾಣುವದು ಇದೇ ಪ್ರಾಣ ಲಿಂಗ ಪೂಜೆ ಎನಿಸುವದು. ಇಲ್ಲಿ ಅನೇಕ ಜ್ಯೋತಿಪ್ರಕಾಶಗಳು ಕಣ್ಣುಗಳ ದ್ವಾರ ಕಾಣಿಸುವವು. ಇದೆಲ್ಲ ಬಲಿತ ಸಾಧನೆಯವನಿಗೆ ಕಾಣಿಸುವುದು. ಅಂದಾಗ ಇದು ಪ್ರಾಣಲಿಂಗವೆನಿಸುವದು. ಮುತ್ತಿನಂತೆ ಮಿಂಚಿನಂತೆ ಪ್ರಕಾಶದಂತೆ ರತ್ನ ದಂತೆ ಚಂದ್ರನಂತೆ ಸೂರ್ಯನಂತೆ ಹಾಗೂ ಅವುಗಳ ಪ್ರಕಾಶದಂತೆ ಅವು ಕಾಣಿಸುವವು. ಒಳಗಿನ ಪ್ರಾಣಲಿಂಗವು ಜಾಗ್ರತವಾದಾಗ ಹೀಗೆಲ್ಲ ಆಗು ವದು. ಆಗ ಇವನಿಗೆ ದೂರದೃಷ್ಟಿ ದೂರಶ್ರವಣಗಳು ಬರುವವು.

ನೀತಿಯಿಂದ ನಡೆದು ಜ್ಯೋತಿಯನ್ನು ಪಡೆದರೂ ತೀರಲಿಲ್ಲ ಇದು ಪೂರ್ಣವಾಗಲಿಲ್ಲ ಇವುಗಳ ಆಚೆಗಿರುವ ದಿವ್ಯಾನುಭವವನ್ನು ಹೊಂದಬೇಕು ಅದೇ ಭಾವಲಿಂಗದ ಅನುಭವವು. ಭವಕ್ಕೆ ಬೀಜವಾಗಿರುವ ಭೀತಿಯೊಂದಿದೆ. ಭೀತಿಯು ಮರಣಕ್ಕೂ ಜನನಕ್ಕೂ ಕಾರಣವಾಗುವದು. ಈ ಭೀತಿಯನ್ನು ಸಂಪೂರ್ಣ ತ್ಯಾಗಮಾಡಿದರೆ ಈ ವಿಶ್ವವು ಅವನಿಗೆ ಉಸುರಿನಂತೆ ಹಗುರಾಗುವದು. ಭಯವಿರುವತನಕ ಭವದ ಬೀಜವು ಹೋಗದು. ಭಾವಲಿಂಗಾನುಸಂಧಾನದಿಂದ ಅವನು ನಿರ್ಭೀತನಾಗುವನು. ಅದಕ್ಕೆ ಭಾವವೆಲ್ಲ ಬಯಲಾಗಿ ನಿರ್ಭಾವವಾದರೆ ಅವನಿಗೆ ನಿರಂಜನ ತತ್ವವು ಅಳವಡುದು. ಆಗ ಭಾವಲಿಂಗ ಪೂಜಕನಾದನೆಂದು ತಿಳಿಯಬೇಕು. ಆಗ ಇವನು ಅಚ್ಚ ಶರಣನಾಗುವನು. ವಿಷಯವನ್ನು ತೊರೆದು ನೀತಿಯ ನೆಲೆವೀಡಾದ, ಜ್ಯೋತಿ ಪ್ರಕಾಶವನ್ನು ಕಂಡುಂಡ ಭೀತಿಯನ್ನು ತೊರೆದು ಭವದ ಬೀಜವನ್ನು ಹುರಿದ ಶರಣನಲ್ಲಿ ತಮ, ರಜ, ಸತ್ವಗಳು ಅಳಿದದ್ದರಿಂದ ಅವನಲ್ಲಿ ಓಜಸ್ಸು ಅಡೆತಡೆ ಇಲ್ಲದೆ ಸದಾ ಹೊರಹೊಮ್ಮುವದು. ಆಗ ಪ್ರಣವನಾದವು ಸದಾ ಧ್ವನಿಗೂಡುವದು ಇದರಿಂದ ಅವನು ಪ್ರಣವಸ್ವರೂಪಿ ಎನಿಸುವನು. ಇಂಥ ಕಳಾಸಂಪನ್ನವಾಗುವದೇ ಭಾವಲಿಂಗದಲ್ಲಿ ಸಮರಸವನ್ನು ಸೂಚಿಸುವದು. ಲಿಂಗಾಂಗ ಸಮರಸವು ಆಗ ಪೂರ್ತಿಗೊಳ್ಳುವದು. ನಿರಾಶೆ ನಿರ್ಭಯ ಶುಚಿಗಳನ್ನು ಸಾಧಿಸುವವೇ ವೀರಶೈವನ ಮುಖ್ಯ ಗುರಿಯಾಗಿರುವದು. ಒಟ್ಟಿನಲ್ಲಿ ನೀತಿಯಿಂದ ಜ್ಯೋತಿಯ ಪಡೆದು ಭೀತಿಯ ಕಳೆದು ಜಂಗಮನಾಗುವದೇ ಇದರ ಉದ್ದೇಶನಾಗಿರುವದು. ಇದು ಇಷ್ಟ ಪ್ರಾಣ ಭಾವ ಲಿಂಗಗಳ ಮತ್ತೊಂದು ವಿವರಣೆಯಾಗಿರುವದು.

ಹೊರಗಣ ಹೂವ ತಂದು ಸ್ಥೂಲ ತನುವಿನ ಮೇಲಿಪ್ಪ ಇಷ್ಟಲಿಂಗವ ಪೂಜೆಯ ಮಾಡಿ ತನುವ ಸಮರ್ಪಿಸಿಬೇಡಿಕೊಂಡು ಹೊನ್ನು ಹೆಣ್ಣು ಮಣ್ಣು ಮೊದಲಾದವುಗಳ ಬಿಟ್ಟದ್ದೇ ಇಷ್ಟಲಿಂಗ ಪೂಜೆ. ಬಳಿಕ ಮಾನವ ಸಮರ್ಪಿಸಿ ಉಪಾವಸ್ಥೆಯ ಮಾಡಿ ಒಳಗಣ ಅಂತಃಕರಣಂಗಳಂ ಸುಟ್ಟುದೇ ಪ್ರಾಣಲಿಂಗದ ಪೂಜೆ. ಮನೋಮಧ್ಯಮದೊಳಿಪ್ಪ ಭಾವಪುಷ್ಪವನೆ ತಂದು ಕಾರಣತನುವಿನ ಮೇಲಣ ತೃಪ್ತಿಲಿಂಗವ ಪೂಜೆಯಂ ಮಾಡಿ ಸಂತೋಷವಂ ಸಮರ್ಪಿಸಿ ಜ್ಞಾನ ಕ್ರಿಯೆಗಳಳಿದುದೇ ಭಾವಲಿಂಗ ಪೂಜೆ ಘನಲಿಂಗ ಮೋಹದ ಚನ್ನಮಲ್ಲಿಕಾರ್ಜುನಾ.

ಹಸ್ತದಲ್ಲಿ ಇಷ್ಟಲಿಂಗವನು ಕುಳ್ಳುಹಿಟ್ಟು ಪಿಡಿದು; ಸುಜ್ಞಾನ ದೃಷ್ಟಿಯಲಿ ಪ್ರಾಣಲಿಂಗವ ನಿರೀಕ್ಷಿಸಿ; ಆತ್ಮದಲ್ಲಿ ಭಾವಲಿಂಗದ ಸಂಬಂಧವನು ತಿಳಿದು ನಡೆಯಬೇಕು. ಪರಂಜ್ಯೋತಿ ಪ್ರಕಾಶವನುಳ್ಳ ಮಹಾಲಿಂಗವೇ ನಾನು ದೇಹದ ವರ್ತನೆಯಿಲ್ಲದ ಆಚಾರಲಿಂಗದಲ್ಲಿ ಇಷ್ಟಲಿಂಗವಾಗಿಪ್ಪೆ. ಪ್ರಾಣನ ವರ್ತನೆಯಿಲ್ಲದ ಚಿತ್ಪ್ರಾಣದಲ್ಲಿ ಪ್ರಾಣಲಿಂಗವಾಗಿಪ್ಪೆ. ಆತ್ಮನ ವರ್ತನೆ ಇಲ್ಲದ ಚಿದಾತ್ಮನಲ್ಲಿ ಭಾವಲಿಂಗವಾಗಿಪ್ಪೆ. ನಿಷ್ಕಳಂಕ ಮಲ್ಲಿಕಾರ್ಜುನಾ.

ಒಂದನೇದಾದ ಇಷ್ಟಲಿಂಗವು ಅಂಗದಲ್ಲಿ ಸಂಬಂಧವಾಗಿಪ್ಪುದು ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಿಂದ ಪೂಜಿಸಿ ಜ್ಞಾನದಿಂದ ಗ್ರಹಿಸುವಾಗ ಎರಡನೇದಾದ ಪ್ರಾಣಲಿಂಗವು ಮನದಲ್ಲಿ ಸಂಬಂಧವಾಗಿಪ್ಪುದು. ನಿರ್ಗುಣ ಪೂಜಾ ಕ್ರಿಯೆಗಳನ್ನು ಕೈಕೊಂಡು ಆತ್ಮನಲ್ಲಿ ನೆಲೆಗೊಂಡಾಗ ಮೂರನೇಯದಾದ ಭಾವಲಿಂಗವಾಗಿ ಸಂಬಂಧಯಾಗಿರ್ಪುದು. ತ್ರಿವಿಧ ಲಿಂಗದ ಸಂಬಂಧದ ಒಪ್ಪನಂದು ತನುತ್ರಯಂಗಗಳ ವರ್ತನೆಯು ನಷ್ಟವ ಮಾಡಬಲ್ಲೊಡೆ ತ್ರಿವಿಧಲಿಂಗವನೊಳಗೊಂಡು ತೋರುವ ಮಹಾಲಿಂಗವೇ ತಾನೆಂದು ತಿಳಿ ನಿಷ್ಕಳಂಕ ಮಲ್ಲಿಕಾರ್ಜುನ.

ತನು ಇಷ್ಟಲಿಂಗ, ಮನ ಪ್ರಾಣಲಿಂಗ, ಆತ್ಮ ಭಾವಲಿಂಗ,
ರೂಪ ಇಷ್ಟ, ಚಿದ್ರೂಪ ಪ್ರಾಣ, ನಿರ್ಲೇಪ ಭಾವ,
ತೋರತನು ಇಷ್ಟ, ಗಂಭೀರತನು ಪ್ರಾಣ, ಸತ್ಕಾರಣ ತನು ಭಾವ,
ಮನ ಇಷ್ಟಲಿಂಗ, ಸನ್ಮನ ಪ್ರಾಣಲಿಂಗ, ಉನ್ಮನ ಭಾವಲಿಂಗ,
ಆತ್ಮನೆ ಇಷ್ಟ, ಅಂತರಾತ್ಮನೆ ಪ್ರಾಣ, ಪರಮಾತ್ಮನೆ ಭಾವ,
ಲಿಂಗವೆ ಇಷ್ಟ, ಅಂತರಂಗವೆ ಪ್ರಾಣ, ಉತ್ತಮಾಂಗವೆ ಭಾವ,
ವಿಶ್ವಜೀವ ಇಷ್ಟ, ತೈಜಸಜೀವ ಪ್ರಾಣ, ಪ್ರಾಜ್ಞಜೀವ ಭಾವ,
ಭಾವವೇ ಇಷ್ಟ, ಅನುಭಾವವೇ ಪ್ರಾಣ, ನಿರ್ಭಾವವೇ ಭಾವ,
ಅಡಿ ಇಷ್ಟ, ನಡು ಪ್ರಾಣಲಿಂಗ, ಮೇಲ್ನುಡಿ ಭಾವ,
ಅಂಗವೇ ಇಷ್ಟ, ಪ್ರತ್ಯಂಗವೇ ಪ್ರಾಣ, ಉಂಪಾಗವೇ ಭಾವ.
ಎಡಗಡೆ ಇಷ್ಟ, ಬಲಗಡೆ ಪ್ರಾಣ, ನಡುವೆಡೆ ಭಾವ,
ಕೈಅಭಿಮಾನ ಇಷ್ಟ, ಬಾಯ್ವಚನ ಪ್ರಾಣ, ಮಯುಗವು ಭಾವ,
ನಡೆ ಇಷ್ಟ, ಮಾನ್ನುಡಿ ಪ್ರಾಣ, ನಡೆನುಡಿಗಳೊಂದಾದಡೆ ಭಾವ,
ಎದ್ದುನಿಂತರೆ ಇಷ್ಟ, ಕುಳಿತರೆ ಪ್ರಾಣ, ಮಲಗಿದರೆ ಭಾವ,
ಜಾಗ್ರವೆ ಇಷ್ಟ, ಸ್ವಪ್ನವೆ ಪ್ರಾಣ, ಸುಷುಪ್ತಿ ಘನಭಾವ,

ಈ ಪ್ರಕಾರ ವ್ಯೆಲಾರ ಬಸವಲಿಂಗ ಶಿವಯೋಗಿಗಳು ಹಾಡಿದ್ದನ್ನು ವಿಚಾರಿಸಿದರೆ ಈ ಇಷ್ಟ, ಪ್ರಾಣ, ಭಾವಲಿಂಗಗಳು ಸಕಲವನ್ನು ಸುತ್ತಿ ಕೊಂಡಿವೆ ಅದಕ್ಕೆ ಲಿಂಗಮಧ್ಯೆ ಜಗತ್ತ ಸರ್ವಂ ಎಂದು ಹೇಳಿದ್ದು ನಿಜವೆನಿಸುವದು ಇಲ್ಲಿ ಮೇಲೆ ಅನುಭವಿಗಳ ನುಡಿಗಳನ್ನು ವಿಚಾರಿಸಲಾಗಿ ಮೇಲೆ ಹೇಳಿದ ವಿವರಣೆಯು ಸ್ಪಷ್ಟವಾಗುವದು. ಸಕಲರೂ ಸತ್ಕ್ರಿಯೆಗೆ, ಜ್ಞಾನಕ್ಕೆ, ನಿಷ್ಕಾಮ ಸೇವೆಗೆ, ತ್ರಿವಿಧದಾಸೋಹಕ್ಕೆ ಮಹತ್ವ ಕೊಟ್ಟೀಲಿಂಗಕ್ಕೆ ಅರ್ಥ ಹೇಳಿದ್ದಾರೆ.

| | | |
|---|---|---|
| ಸತ್ ಇಷ್ಟಲಿಂಗ, | ಚಿತ್ ಪ್ರಾಣಲಿಂಗ, | ಆನಂದ ಭಾವಲಿಂಗ, |
| ತಮ ಇಷ್ಟ, | ರಜ ಪ್ರಾಣ, | ಸತ್ವ ಭಾವ, |
| ಸ್ಥೂಲ ಇಷ್ಟ, | ಸೂಕ್ಷ್ಮ ಪ್ರಾಣ, | ಕಾರಣ ಭಾವ, |
| ಮಣ್ಣು ಇಷ್ಟ, | ಹೆಣ್ಣು ಪ್ರಾಣ, | ಹೊನ್ನು ಭಾವ, |
| ಗುರು ಇಷ್ಟ | ಲಿಂಗ ಪ್ರಾಣ. | ಜಂಗಮ ಭಾವ, |
| ಕಾಯಕ ಇಷ್ಟ, | ವಾಚಕ ಪ್ರಾಣ, | ಮಾನಸಿಕ ಭಾವ, |
| ಭೋಗಾಂಗ ಇಷ್ಟ, | ತ್ಯಾಗಾಂಗ ಪ್ರಾಣ, | ಯೋಗಾಂಗ ಭಾವ, |
| ಬ್ರಹ್ಮ ಇಷ್ಟ, | ವಿಷ್ಣು ಪ್ರಾಣ, | ರುದ್ರ ಭಾವಲಿಂಗ, |

ಇವು ಕೂಡ ತ್ರಿವಿಧಲಿಂಗಗಳಾಗುವವೆಂದು ಮೇಲಿನವುಗಳ ಅರ್ಥದಿಂದ ಅನಿಸುವದು. ಇನ್ನೂ ಈ ತ್ರಿವಿಧಗಳಿದ್ದವುಗಳೆಲ್ಲ ಈ ಪ್ರಕಾರ ಇಷ್ಟ ಪ್ರಾಣ ಭಾವಗಳಲ್ಲಿ ವಿಂಗಡಿಸಲು ಬರುವದೆಂದು ಅನಿಸುವದು. ಅಂದರೆ ಈ ಇಷ್ಟ ಪ್ರಾಣ ಭಾವಲಿಂಗಗಳಿಗೆ ಒಂದು ವಿಶಿಷ್ಟ ವ್ಯಾಪಕ ಸಶಾಸ್ತ್ರೀಯವಾದ ಅರ್ಥವಿರುವದೆಂದು ಅನಿಸುವದು. ಅನುಭವದಿಂದ ವಿಚಾರದಿಂದ ಇವುಗಳ ಅರ್ಥವನ್ನು ಮಾಡಿಕೊಂಡಹಾಗೆ ಅರ್ಥ ಹೆಚ್ಚೆಚ್ಚಾಗಿ ಹೊರಡುವದು ಲಿಂಗ ಶಬ್ದವು ಅಂಥ ವ್ಯಾಪಕ, ವಿಶಾಲ, ಗೂಢ, ಗಂಭೀರ, ವಿಚಾರಪರ ಉದಾತ್ತ ಅರ್ಥಗಳಿಂದ ಕೂಡಿರುವದೆಂದು ಅನಿಸದೆ ಇರಲಾರದು.

ಆರು ಲಿಂಗಗಳಿಗೆ ಅಂದರೆ ಆಚಾರಲಿಂಗಕ್ಕೆ ಸುಗಂಧ, ಗುರುಲಿಂಗಕ್ಕೆ ಸುರುಚಿ, ಶಿವಲಿಂಗಕ್ಕೆ ಸುರೂಪ, ಚರ (ಜಂಗಮ) ಲಿಂಗಕ್ಕೆ ಸುಸ್ಪರ್ಶ ಪ್ರಸಾದ ಲಿಂಗಕ್ಕೆ ಸುಸ್ವರ, ಮಹಾಲಿಂಗಕ್ಕೆ ಸಂತೃಪ್ತಿಗಳನ್ನು ಕ್ರಮವಾಗಿ ನಾಶಿಕ, ನಾಲಿಗೆ, ನೇತ್ರ, ಚರ್ಮ, ಕಿವಿ, ಮನಗಳ ಮುಖಾಂತರ ಅರ್ಪಣ ಭಾವವನ್ನು ಮಾಡಿದರೆ ಅದೇ ಸರ್ವಾಚಾರ ಸಂಪತ್ತಿ ಸ್ಥಲವನ್ನು ಅನುಸರಿಸಿದಂತೆ ಆಯಿತು. ಈಗ ಸಕಲರೂ ಆಯಾ ಸ್ಥಾನಗಳಲ್ಲಿರುವ ಆಯಾ

ಲಿಂಗಗಳನ್ನು ಮರೆತು ಎಂದೂ ಸ್ಮರಿಸದೆ ಇವುಗಳನ್ನು ಭೋಗಿಸುವರು ಅವು ಆದ್ದರಿಂದ ಅರ್ಪಣವಾಗಲಾರವು. ಅಲ್ಲದೆ ವಿಷಯೋಪಯೋಗಗಳನ್ನು ಅವುಗಳ ಮುಖಾಂತರ ಲಿಂಗಗಳಿಗೆ ಅರ್ಪಿಸಿದರೆ ಅದೂ ಅಪರ್ಣವೆಂದೂ ಆಗಲಾರದು. ನಿರ್ವಿಷಯನಾಗಿ ಸಾದಾ ಜೀವನ ಉದಾತ್ತವಿಚಾರ ಸಾಗಿಸಿ ಸ್ವಾಭಾವಿಕ ತಾನಾಗಿ ಒಂದು ಒಳ್ಳೇ ಪದಾರ್ಥವೆಂದರೆ ಪಾರಮಾರ್ಥಕ್ಕೆ ಸಂಭಂದಿಸಿದವುಗಳನ್ನು ಮಾತ್ರ ಅರ್ಪಣಮಾಡಲಿಕ್ಕೆ ಬರುವದು. ಆಗ ಅವೇ ಸದಾಚಾರ ಸಂಪತ್ತು ಎನಿಸುವದು. ಇದರಲ್ಲಿ ವಿಷಯದ ಹುಚ್ಚು ಇರ ಬಾರದು. ಭೋಗಗಳ ಹುಚ್ಚೂ ಇರಕೂಡದು. ಸದಾ ಲಿಂಗದ ನೆನವು ಸರ್ವಇಂದ್ರಿಯಗಳಲ್ಲಿ ಆಗುತ್ತಿದ್ದರೆ ಅವು ಎಂದೂ ವಿಷಯಗಳನ್ನೇ ಬೇಡವು ವಿಷಯಗಳಿಂದ ಸ್ವಾಭಾವಿಕವಾಗಿ ಸಕಲ ಇಂದ್ರಿಯಗಳು ಹಿನ್ಮೆಟ್ಟುವವು. ಆಗ ಬರೇ ಲಿಂಗದೇವನ ಬಗ್ಗೆ ಇದ್ದ ಸುಗಂಧ, ಸುರುಚಿ, ಸುರೂಪ, ಸುಸ್ಪರ್ಶ, ಸುಸ್ವರ, ಸಂತೃಪ್ತಿಗಳನ್ನೇ ಬಯಸುವದು. ಇವೇ ಸ್ವಾಭಾವಿಕ ವಾಗಿ ಇಂದ್ರಿಯಗಳಿಗೆ ರುಚಿಸಹತ್ತುವವು. ಅಂದರೆ ಮಾತ್ರ ಸರ್ವಾಂಗಲಿಂಗಿ ಎನಿಸುವನು. ಯಾವ ಬಾಹ್ಯ ವಿಷಯಗಳ ಸಂಪರ್ಕವಿಲ್ಲದೆ. ಮನಸ್ಸಿನಲ್ಲಿ ಇರುವ ಅಂದರೆ ಸೂಕ್ಷ್ಮ ಶರೀರದ ಸೂಕ್ಷ್ಮ ಇಂದ್ರಿಯಗಳು ಅನುಭವಿಸು ತ್ತವೆ. ಆ ಅನುಭವವು ಈ ಸ್ಥೂಲ ಇಂದ್ರಿಯಗಳಿಗೂ ಕೂಡ ಆಗುವದು. ಆಗ ಸದಾಚಾರ ಸಂಪತ್ತಿಯು ಸಾಧಿಸಿದಂತೆ ಆಯಿತು, ಜಗತ್ತಿನ ಸಕಲ ಪದಾರ್ಥಗಳನ್ನು ಸಕಲ ಲಿಂಗಿಗಳಿಗೆ ಅವುಗಳ ವಿಷಯಗಳನ್ನು ಅರ್ಪಿಸಿದರೆ ಎಂದೂ ಅದು ಅಪರ್ಣವಾಗಲಾರದು. ಇದನ್ನು ತಿಳಿದು ಲಿಂಗಾರ್ಪಿತವ ಮಾಡಿರಿ. ಆಗ ಲಿಂಗ ಭೋಗೋಪಭೋಗಿಯಾದಂತೆ ಆಯಿತು.

ತನುವಿನ ಮೇಲಿನ ಲಿಂಗಕ್ಕೆ ತಾಟಿನಲ್ಲಿಯ ನೈವೇದ್ಯಕ್ಕೆ ಕೈಮಾಡಿ ಅರ್ಪಣ ಮಾಡಿ ನೀರನ್ನು ತೋರಿಸಿದರೆ ಲಿಂಗಕ್ಕೆ ಮುಟ್ಟಲಾರದು. ಕಲ್ಲ ನಾಗರ ಕಂಡರೆ ಹಾಲನೆರೆ ಎಂಬರು ದಿಟದ ನಾಗರ ಕಂಡರೆ ಕೊಲ್ಲಿ ಬಂದು ಎಂದಂತೆ ಆಗುವದು. ಆದರೆ ಇದು ಸಣ್ಣ ಬಿನ್ ಇಯತ್ತೆಯಲ್ಲಿ ಕಲಿತಂತೆ ಲಿಂಗಕ್ಕೆ ಕೈಮಾಡುವದಾಗುವದು. ಎಮ್. ಎ. ಕಲಿತಂತೆ ಲಿಂಗಕ್ಕೆ ಪ್ರತ್ಯಕ್ಷ ಕೋಳೂರ ಕೊಡಗೂಸು ಹಾಲ ಕೂಡಿಸಿದಂತೆ ಆದರೆ ಮಾತ್ರ ಲಿಂಗಭೋ ಗೋಪಭೋಗವಾಗುವದು. ಇದು ತುಟ್ಟ ತುದಿಯ ಮಾತು. ಪ್ರಸಂಗಬಂದಾಗ ವಿಷತಿಂದು ಒದುಕುವದು ಕೂಡ ಆಗಬೇಕು. ಆಗ ವಿಷಧರನಾಗುವನು. ಹೀಗಾದರೆ ಮಾತ್ರ ನಿಜವಾಗಿ ಲಿಂಗಭೋಗೋಪಯೋಗಿಯಾದಂತೆ ಸರಿ. ಇಲ್ಲವಾದರೆ ಕಡಿಮೆ ತರಗತಿಯದಾಗುವದು.

ಈ ಮೂರು ಹಾಗೂ ಆರು ಲಿಂಗಗಳನ್ನು ಸರಿಯಾಗಿ ಅನುಭವಿಸಿ ಕಂಡು ಉಳಿದು ಮುಂದಿನ ಮೂರು ಲಿಂಗಗಳನ್ನು ದರ್ಶನ ಮಾಡಿಕೊಂಡಾಗ ಈ ತರದ ಲಿಂಗಭೋಗೋಪವು ಮಾತ್ರ ಸಾಧ್ಯವಿರುವದು. ಆಗ ಕುಂಡಲಿನಿಯು ಮೇಲಮುಖ ಮಾಡಿ ಆರು ಚಕ್ರಗಳನ್ನು ಏರಿ ಸಹಸ್ರಾರದಲ್ಲಿ ಶಿವನನ್ನು ಕೂಡಿ ಸುಖಿಸಿ ಆನಂದಬಟ್ಟು ಮುಂದಿನ ಮೂರು ಚಕ್ರಗಳಲ್ಲಿ ಮೂರು ಲಿಂಗಗಳನ್ನು ಕಂಡರೆ ತಾನೇ ಪರಶಿವನಾಗುವನು. ಆತನು ಆಗ ದೇವಮಾನವನಾಗುವನು. ಇವನಿಗೆ ಮಾತ್ರ ಎಲ್ಲವೂ ಸಾಧ್ಯವಾಗುವದು. ಲಿಂಗವೇ ತಾನೇ ತಾನಾದ ಒಳಿಕ ಯಾವ ಅಂಜಿಕೆ ಎಲ್ಲಿಂದ ಬರುವದು? ಇದೇ ಲಿಂಗಾಂಗ ಸಮರಸಾನಂದೈಕ್ಯವಾಗುವದು.

ಲಿಂಗವು ಕರೆಕಂತಿಯನ್ನು ಕೂಡ್ರಿಸಿದ್ದಿರುತ್ತದೆ. ಕಣ್ಣು ಲಿಂಗಗಳಲ್ಲಿ ಬಹು ಸಂಬಂಧವಾಗುವದು. ಶಿವಯೋಗವು ಮನಸ್ಸನ್ನು ನಿಲ್ಲಿಸುವದರಲ್ಲಿ ಇದೆ. ಅದಕ್ಕಾಗಿಯೇ "ಮನಸ್ಸು ಬಹಿರ್ಮುಖವಾಗಲು ಮಾಯಾ ಪ್ರಪಂಚ ಮನಸ್ಸು ಅಂತರ್ಮುಖವಾಗಲು ಅವಿರಳ ಜ್ಞಾನಿ ಮನಸ್ಸು ಮಹದಲ್ಲಿ ನಿಂದಿರಲಾತಿ ಮುಕ್ತ'' ನೆಂದು ಶರಣರು ಹಾಡಿದ್ದಾರೆ. ಈ ಮನಸ್ಸು ಬಹು ಚಂಚಲವಾದುದು. ಮನಸ್ಸು ನಿಲ್ಲಲು ಕಣ್ಣಾಲೆಯು ನಿಲ್ಲಬೇಕು. ಕಣ್ಣಾಲೆಯು ನಿಲ್ಲಬೇಕಾದರೆ ಕರೆ ದುಂಡಗಿನ ವಸ್ತುಗಳನ್ನು ನೋಡುತ್ತ ನಿತ್ಯ ಕೆಲಹೊತ್ತು ಕೂಡ್ರಬೇಕು. ಅಂದರೆ ಪ್ರಾಣಾಯಾಮ ಮಾಡುವದರಿಂದ ಯಾವ ಲಾಭವಾಗುವದೋ ಅದೇ ಲಾಭವು ಇದರಿಂದ ಆಗುವದು. ಅದಕ್ಕೆ ವೀರಶೈವರು ಕರೆಕಂತಿಯ ದುಂಡಗಿನ ಆಕಾರದ ಇಷ್ಟಲಿಂಗವನ್ನು ಮಾಡಿದ್ದಾರೆ. ಕಣ್ಣಿಗೆ ನಮ್ಮ ಇಷ್ಟಲಿಂಗಕ್ಕೆ ಬಹು ಸಂಬಂಧವಿರುವದೆಂದು ಪ್ರಭುದೇವರು ಹೇಳಿದ್ದಾರೆ. "ನೋಟವೇ ಕೂಟ ಕೂಟವೇ ಪ್ರಾಣ, ಪ್ರಾಣವೇ ಏಕ, ಏಕವೇ ಸಮರಸ. ಸಮರಸವೇ ಲಿಂಗ. ಲಿಂಗವೇ ಪರಿಪೂರ್ಣ ಪರಶಿವ ತಾನೆ ಗುಹೇಶ್ವರ."

ಅದಕ್ಕೆ ನೇತ್ರವೇ ಪರಶಿವ, ನೇತ್ರವೇ ಲಿಂಗದ ದೇಹ, ನೇತ್ರವೇ ಲಿಂಗದ ತಾಯಿ. ನೇತ್ರವೇ ಇಷ್ಟಲಿಂಗದ ರಾಣಿವಾಸ, ನೇತ್ರಗಳೇ ಪ್ರಾಣಲಿಂಗವ ಹಿಡಿವ ಹಸ್ತಗಳು ನೇತ್ರಗಳೇ ಲಿಂಗಕ್ಕೆ ಪುಷ್ಪಗಳು. ನೇತ್ರಗಳೇ ಲಿಂಗಕ್ಕೆ ದೀಪವು. ನೇತ್ರಗಳೇ ಲಿಂಗಕ್ಕೆ ಅಭಿಷೇಕ ಮಾಡುವ ಕಲಶಂಗಳು, ನೇತ್ರವೇ ಲಿಂಗವನ್ನು ಜಯಿಸುವ ಬಾಣಗಳು, ನೇತ್ರಗಳೇ ಲಿಂಗಮೂರ್ತಿ ಇದು ಗುಹ್ಯಕ್ಕೆ ಗುಹ್ಯ ಗೌಪ್ಯಕ್ಕೆ ಗೌಪ್ಯ ರಹಸ್ಯಕ್ಕೆ ರಹಸ್ಯ. ಈ ನೇತ್ರ

ಮಹಿಮೆಯನ್ನು ಗುಹೇಶ್ವರನೇ ಬಲ್ಲನಲ್ಲದೆ ಕಣ್ಣುಗೆಟ್ಟ ಅಣ್ಣಗಳೆತ್ತಬಲ್ಲರು ನೋಡಾ. ಎಂದು ನೇತ್ರ ಲಿಂಗಗಳ ಸಂಬಂಧವನ್ನು ಬಹು ಸರಸಾಗಿ ಹೇಳಿದ್ದಾರೆ.

ಕಣ್ಣಿನ ನೀಲಬಣ್ಣದ ಭಾಗವು ಇಷ್ಟಲಿಂಗ, ಬಿಳುಪಾದ ಭಾಗ ಪ್ರಾಣ ಲಿಂಗ, ಕಪ್ಪಾದ ಭಾಗ ಭಾವಲಿಂಗ ಈ ಪ್ರಕಾರ ಕಣ್ಣಿನಲ್ಲಿ ಮೂರನ್ನು ಕಲ್ಪಿಸಿ ಈ ಇಷ್ಟಲಿಂಗವನ್ನು ನಿತ್ಯ ಕೆಲಹೊತ್ತು ನೋಡುತ್ತಿರಬೇಕು ಲಿಂಗ ದಲ್ಲಿ ಗೋಮುಖವು ಇಷ್ಟಲಿಂಗ ವರ್ತುಳವು ಪ್ರಾಣಲಿಂಗ ಗೋಳಕವು ಭಾವಲಿಂಗ ಹೀಗೆ ಭಾವಿಸಿ ಲಿಂಗವನ್ನು ನೋಡುತ್ತಿರಬೇಕು. ಈ ಲಿಂಗ ವೆಂದರೆ ಓಂಕಾರವಾಗಿದೆ. ಅಕಾರವೇ ಇಷ್ಟ, ಉಕಾರವೇ ಪ್ರಾಣ, ಮಕಾ ರವೇ ಭಾವವಾಗಿರುವದು, ಇಂದ್ರಿಯಗಳನ್ನು ತಾಕಿಕದಲ್ಲಿ ಆಸಕ್ತಿಯನ್ನು ಬಿಡುವದೇ ಇಷ್ಟಲಿಂಗ, ಲೌಕಿಕದಿಂದ ಮನಸ್ಸನ್ನು ತಿರಿಗಿಸುವದೇ ಪ್ರಾಣ ಲಿಂಗ, ತನ್ನಲ್ಲಿಯೇ ಆತ್ಮಲಿಂಗದೇವನು ಇರುವನೆಂದು ಭಾವಿಸುವದೇ ಭಾವ ಲಿಂಗವೆನಿಸುವದು. ಪ್ರವೃತ್ತಿ ಪೀಠದಲ್ಲಿ ಭಾವಲಿಂಗದ ಸಂಬಂಧವು ಪ್ರಾಣ ಲಿಂಗಕ್ಕೆ ಪ್ರಾಣಲಿಂಗದ ಸಂಬಂಧವು ಇಷ್ಟಲಿಂಗಕ್ಕೆ ಇಳಿಯುತ್ತ ಬರುವದು. ನಿವೃತ್ತಿ ರೂಪದಲ್ಲಿ ಇಷ್ಟಲಿಂಗದಿಂದ ಪ್ರಾಣಲಿಂಗಕ್ಕೆ ಪ್ರಾಣಲಿಂಗದಿಂದ ಭಾವಲಿಂಗಕ್ಕೆ ಏರುತ್ತಹೋಗುವದು. ತನುಮನ ಆತ್ಮಗಳನ್ನು ಕ್ರಮ ವಾಗಿ ಇಷ್ಟ ಪ್ರಾಣ ಭಾವಗಳಿಗೆ ಅರ್ಪಿಸಬೇಕು, ಅಂದರೆ ಲಿಂಗಾರ್ಪಣ ವೆನಿಸುವದು. ಸ್ಥೂಲತನುವಿನ ಶುದ್ಧಿಗಾಗಿ ಸತ್ಕ್ರಿಯಾಚರಣೆಗೈಯುತ್ತ ಜ್ಞಾನ ಬೋಧೆಗೊಳ್ಳುವದೇ ಇಷ್ಟಲಿಂಗ ಸೂಕ್ಷ್ಮತನು ಅಂದರೆ ಜ್ಞಾನೇಂದ್ರಿಯ ಹಾಗೂ ಮನಸ್ಸುಸಹಿತ ಶುದ್ಧಿಗಾಗಿ ಒಳ್ಳೇ ವಿಚಾರ ಒಳ್ಳೇ ನೆನಹು ಒಳ್ಳೇ ಕಲ್ಪನೆ ಒಳ್ಳೇ ಜಪ ಒಳ್ಳೇ ಧ್ಯಾನಗಳನ್ನು ಮಾಡಿ ಅನ್ಯರಿಗೆ ಕಲ್ಯಾಣ ಮಾಡುತ್ತ ಸಕಲವನ್ನು ನಿಷ್ಕಾಮವಾಗಿ ಪ್ರೀತಿಸುತ್ತ ಇರುವದೇ ಪ್ರಾಣಲಿಂಗ. ಕಾರಣ ತನವಿನ ಶುದ್ಧಿಗಾಗಿ ಅಂದೆರೆ ಆತ್ಮಜ್ಞಾನ ಕ್ಕಾಗಿ ಅಂದರೆ ಪರಶಿವನೇ ತಾನು ಪ್ರಜ್ಞೆಗಾಗಿ ಭಾವಲಿಂಗವನ್ನು ಧರಿಸ ಬೇಕು ಇಷ್ಟಲಿಂಗವು ಹಸ್ತವನ್ನು ಆಶ್ರಯಿಸುವದು. ಪ್ರಾಣಲಿಂಗವು ಮನ ಸ್ಸನ್ನು ಆಶ್ರಯಿಸುವದು. ಭಾವಲಿಂಗವು ತುಟಿಗಳಲ್ಲಿ ಆಶ್ರಯಿಸುವದು. ಇಷ್ಟಲಿಂಗವು ಸಾಕಾರ ರೂಪಉಳ್ಳದ್ದು. ಪ್ರಾಣಲಿಂಗವು ಸಾಕಾರ+ನಿರಾ ಕಾರ ರೂಪಉಳ್ಳದ್ದು ಭಾವಲಿಂಗವು ತಾನೇ ತಾನಾದ ರೂಪದ್ದು ಇರುವವು. ನೋಡುವದರಿಂದ ಇಷ್ಟಲಿಂಗ ಸಿದ್ಧಿಸುವದು. ಮನಸ್ಸಿನಲ್ಲಿ ಧ್ಯಾನಿಸುವದ

ರಿಂದ ಪ್ರಾಣಲಿಂಗ ಸಿದ್ಧಿಸುವದು ಮನ ಬುದ್ಧಿ ಚಿತ್ತ ಅಹಂಕಾರಗಳಿಗೆ ಮುಟ್ಟುವದರಿಂದ ಭಾವಲಿಂಗ ಸಿದ್ಧಿಸುವದು. ಹೊರಗೆ ಧರಿಸುವದೇ ತೋರ ಲಿಂಗ (ಇಷ್ಟ) ಒಳಗೆ ಧರಿಸುವದೇ ಪ್ರಾಣಲಿಂಗ ಹೊರಗೂ ಒಳಗೂ ಧರಿ ಸುವದೇ ಭಾವಲಿಂಗ. ತಾನು ಬೇರೆ ದೇವ ಬೇರೆ ಎಂದು ತಿಳಿಯುವದೇ ಇಷ್ಟ ಲಿಂಗ ತಾನು ದೇವರೆಂದು ತಿಳಿಯುವದೇ ಪ್ರಾಣಲಿಂಗ. ತಾನು ಹಾಗೂ ಎಲ್ಲವೂ ದೇವರೆಂದು ತಿಳಿಯುವದೇ ಭಾವಲಿಂಗ.

ಇಷ್ಟಲಿಂಗ ನೋಡುವದರಿಂದ ಕಣ್ಣು ಸ್ಥಿರವಾದರೆ ಇಷ್ಟಲಿಂಗ ಪೂಜೆ ಯಾಯಿತು. ಮನಸ್ಸು ಸ್ಥಿರವಾದರೆ ಪ್ರಾಣಲಿಂಗಪೂಜೆಯಾಯಿತು. ವ್ಯಾಪಕ ವಾದ ಪ್ರೀತಿ ಬೆಳೆದು ಸಕಲವೂ ದೇವರೆಂದು ಧೃಡನಂಬಿಗೆ ಆದರೆ ಭಾವ ಲಿಂಗ ಪೂಜೆಯಾಯಿತು. ಇಷ್ಟಲಿಂಗಕ್ಕೆ ಕಣ್ಣಿನಿಂದ ನೋಡುವದರಿಂದ ತೃಪ್ತಿಯಾಗುವದು. ತಾನಾರೆಂದು ತಿಳಿಯುವದರಿಂದ ಪ್ರಾಣಲಿಂಗಕ್ಕೆ ತೃಪ್ತಿ ಯಾಗುವದು ಪರಿಪೂರ್ಣ ವ್ಯಾಪಕನೆಂದು ಎಲ್ಲವನ್ನೂ ಮುಟ್ಟುವದರಿಂದ ತೃಪ್ತಿಯಾಗುವದು.

ಹೀಗೆ ನೋಡಿ, ತಿಳಿದು, ಮುಟ್ಟಿ ಲಿಂಗಕ್ಕೆ ತೃಪ್ತಿಬಡಿಸಿದರೆ ಲಿಂಗಾ ರ್ಪಣವಾಯಿತು. ಇಷ್ಟಲಿಂಗಕ್ಕೆ ಶರೀರವನ್ನೂ ಪ್ರಾಣಲಿಂಗಕ್ಕೆ ಮನವನ್ನೂ ಭಾವಲಿಂಗಕ್ಕೆ ಮಂತ್ರವನ್ನೂ ಅರ್ಪಿಸಬೇಕು.

ಗುಹ್ಯಭರ್ಗದಲ್ಲಿ ಇಷ್ಟದ ರೂಪ ನೇತ್ರಗಳಲ್ಲಿ ಪ್ರಾಣಲಿಂಗದ ರೂಪ ವಾಕ್ಯವೆಂಬ ತುಟಿಗಳಲ್ಲಿ ಭಾವಲಿಂಗದ ರೂಪ ಹೀಗೆ ಸಂಬಂಧವಾದರೆ ಲಿಂಗಾಂಗ ಸಂಗಮವಾಯಿತು. ಆಕಾರವಾಗಿ ತೋರುವದೇ ಇಷ್ಟ. ನಿರಾ ಕಾರವಾಗಿ ತೋರುವದೇ ಪ್ರಾಣಲಿಂಗ ಆಕಾರ ನಿರಾಕಾರದ ರೂಪದ ಓಂಕಾರ ರೂಪದಲ್ಲಿ ತೋರುವದೇ ಭಾವಲಿಂಗ. ಇಷ್ಟಲಿಂಗವು ಸಕಲವು. ಪ್ರಾಣಲಿಂಗವು ನಿಷ್ಕಲವು. ಭಾವಲಿಂಗವು ಕೋಟಿ ನಿಷ್ಕಲವು (ತಾನೇತಾ ನಾಗಿ ಇವದು.) ಇಷ್ಟಲಿಂಗವು ಸದ್ರೂಪ ಪ್ರಾಣಲಿಂಗವು ಚಿದ್ರೂಪ (ಜ್ಞಾನ ಪೂರ್ಣ) ಭಾವಲಿಂಗವು ಆನಂದ ರೂಪ (ತೃಪ್ತಿಯಾದ ಸಂತೋಷವನ್ನು ವ್ಯಕ್ತಮಾಡುವಂಥಾದ್ದು) ಸ್ಥೂಲ ದೇಹವು ಕಲ್ಮಿಷವಿದ್ದರೆ (ದುರ್ಗುಣ ದುರಾ ಚಾರ) ಇಷ್ಟಲಿಂಗವಿಲ್ಲ. ಮನಸ್ಸಿನ ಚಂಚಲತನ ಹೋಗದಿದ್ದರೆ ಪ್ರಾಣಲಿಂಗ ವಿಲ್ಲದ ಪರಮಾತ್ಮನು ತಾನೆಂಬಭಾವ ಬರದಿದ್ದರೆ ಭಾವಲಿಂಗವಿಲ್ಲ. ದೇಹ ವಿಕಾರವಿಲ್ಲದವನು ಇಷ್ಟಲಿಂಗಧಾರಿ, ಮನಸ್ಸಿನವಿಕಾರ ಇಲ್ಲದವನು ಪ್ರಾಣ ಲಿಂಗಧಾರಿ, ತಾನೇತಾನಾಗಿ ಲೌಕಿಕ ಶಬ್ದವಿಲ್ಲದವನು ಭಾವಲಿಂಗಧಾರಿ,

ಎಂದು ತಿಳಿಯಬೇಕು. ಇಷ್ಟಲಿಂಗಕ್ಕೆ ಮೂರು ಕಣ್ಣುಗಳು ಪ್ರಾಣಲಿಂಗಕ್ಕೆ ಆರು ಕಣ್ಣುಗಳು ಭಾವಲಿಂಗಕ್ಕೆ ಇಪ್ಪತ್ತೇಳು ಕಣ್ಣುಗಳು ಇರುವವು. ಮೂರು ಲಿಂಗಗಳಿಗೆ ಮುವತ್ತಾರು ಕಣ್ಣುಗಳಿರುವವು. ಇಷ್ಟಲಿಂಗ ಸಾಧಿಸಿದರೆ ಕಾಮ ವಿಕಾರವಿಲ್ಲ. ಪ್ರಾಣಲಿಂಗ ಸಾಧಿಸಿದರೆ ಯಮನ ಭಯವಿಲ್ಲ. ಭಾವಲಿಂಗ ಸಾಧಿಸಿದರೆ ಕರ್ಮದ ತಾಳಹರಿವುದು. ಇಷ್ಟದಲ್ಲಿ ಕೂಟ, ಪ್ರಾಣದಲ್ಲಿ ಸಂಗ ಭಾವದಲ್ಲಿ ಸಮರಸವಾದರೆ ಶಿವಯೋಗವಾಗುವದು. ಇಷ್ಟದಿಂದ ಕ್ರಿಯೆ ಪ್ರಾಣದಿಂದ ಭಕ್ತಿ ಭಾವದಿಂದ ಜ್ಞಾನಸಾಧನವು ಪ್ರಕಟವಾಗಿ ಪೂರ್ಣ ಯೋಗವಾಗುವದು.

---

## ಜೀವನದ ಓಟ

ಜೀವನ ಓಡುತಿದೆ ಮನುಜ
ಭೇದ ಭಾವನೆಯ ಗತಿಯಲಿ ||ಪಲ್ಲ||

ಮೃತ್ಯುಲೋಕದಲಿ ಕತ್ತಲೆಯ ಬಾಳುವೆಯಲಿ
ಮದವೆಂಬ ಬಾಗಿಲದ ಮೋಹ ಮನೆಯಮಾಡಿ ||೧||
ಅಸತ್ಯಹಂಕಾರ, ಮದ, ಶೋಕ, ಮೋಹ, ರತಿ
ಎಂಬ ಗುಣಗಳ ಕೂಡಿ ಬಹು ಹುಮ್ಮಸದಿಂದ ||೨||
ಮೂರು ಗುಣಗಳೆಂಬ ಮದಗಜವನೆ ಏರಿ
ಹಸಿವು ತೃಸೆಗಳೆಂಬ ಮಕರಗಳ ಬೆಂಬತ್ತಿ ||೩||
ಅಧರ್ಮವೆಂಬುವ ನಯನವೆರಡನೆ ಪಿಡಿದು
ಚಾಂಚಲ್ಯವೆಂಬ ಆಸನದಿ ಪವಡಿಸುವ ||೪||
ಕೋಪವೆಂಬುವ ಕೋಣ ವಾಹನವನೇ ಏರಿ
ಕಾಲವೆಂಬ ಖಡ್ಗ ಮಿಥ್ಯ ಶಂಖವ ಪಿಡಿದ ||೫||
ಪಾಪವೆಂಬುವ ಪಾದ ನರಕಪಥದಲಿಟ್ಟು
ವಿಶ್ವವೆಂಬ ಸ್ಥಳವ ನಿಜನಂಬಿನಿಂತ ||೬||
ನಿಮಿತ್ಯವಾಗಿರುವ ನರದೇಹವನ್ನೇ ಪಿಡಿದು
ಅಮಿತ್ಯಬಾಂಧವರ ಅಮರವಾಣಿಗೆ ಬೆದರಿ ||೭||
ಪ್ರಗತಿಯ ತಾಣಕೋ ಪ್ರಲಯವಿಧಾನಕೋ
ನಾನು ನನ್ನದು ಎಂಬ ಭಾವನೆ ತಾಳಿರುವ ||೮||

— ಈಶ್ವರ ಈ. ಕಳಕಣ್ಣವರ ( ಸಾ. ಭೂಷಣ )
ಇಂಟರ ಆರ್ಟ್ಸ-ಬೆಳಗಾವಿ

# ವೀರಶೈವ ಸಾಹಿತ್ಯ ಪರಿಷತ್ತು ಸಿದ್ಧವಾಗಲಿ !

(ಲೇಖಕರು:— ಶ್ರೀ ಸ್ವಾಮಿ ದಯಾನಂದ ದೇವರು ವಿರಕ್ತಮಠ ಯರನಾಳ.)

---

ಕನ್ನಡ ಸಾಹಿತ್ಯ ಪರಿಷತ್ತು, ವೈದಿಕ ಪರಿಷತ್ತು ಮೊದಲಾದ ಸಾಹಿತ್ಯ ಸಂಸ್ಥೆಗಳು ಸಿದ್ಧವಾದಂತೆ ಬಹು ಮುಖ ಸೇವಾಭಿಜನ್ಯಿತವಾಗಿ ಈಗ ವೀರಶೈವ ಸಾಹಿತ್ಯದ ಕೇಂದ್ರೀಕರಣ ಸಂಸ್ಥೆಯು ಅವಶ್ಯವಾಗಿದೆ. ಅದು ಮಹತ್ವದ ಸಾಧನವಾಗಿದೆ. ಈಗ ವೀರಶೈವ ಸಾಹಿತ್ಯವು ಅನೇಕ ಸಂಘ, ಸಂಸ್ಥೆ, ಪ್ರಕಟನಾಲಯಗಳು, ಸಾಹಿತ್ಯ ಮಂದಿರಗಳ ಮುಖಾಂತರ ನಾಡಿಗೆಲ್ಲ, ಹಂಚುವ ವ್ಯವಸ್ಥೆಯಾಗಿದೆ. ಆದರೆ ಏಕ ಮುಖೀಯ ವಿಚಾರದಲ್ಲಿ ಅದು ಅವಶ್ಯ ಹಾಗೂ ಉಪಯೋಗ ಪೂರ್ಣವಾಗಿದೆ. ಅದು ವೀರಶೈವ ಜನಾಂಗ ಅತಏವ ಜಾಗತಿಕ ನಾನಾ ಭಾಗಗಳ ಜನತೆಯು ಉಪಯೋಗಿಸುವಂತೆ ಏರ್ಪಾಟಾಗಬೇಕು !

## ವೀರಶೈವ ಸಾಹಿತ್ಯ ಎಷ್ಟು ಭಾಷೆಗಳಲ್ಲಿ ?

ವೀರಶೈವ ಸಾಹಿತ್ಯವು ಯಾವ ಯಾವ ಭಾಷೆಗಳಲ್ಲಿ ಅದೆ ಎಂದು ಕೇಳಿದರೆ ಎಣಿಸಿದರೆ ಮೂರು ಬೇಡ ನಾಲ್ಕು ಭಾಷೆಗಳಲ್ಲಿ ಸಿಗಬಹುದು. ಅನೇ ತೆಲುಗು, ಕನ್ನಡ, ಸಂಸ್ಕೃತ- ( ಇನ್ನು ಹೇಳಬೇಕಾದರೆ, ಮರಾಠಿ, ಇಂಗ್ಲೀಷ ಮಾತ್ರ ) ಈ ಭಾಷೆಗಳ ಹೊರತಾಗಿ ಮತ್ತಾವ ಭಾಷೆಯಲ್ಲಿ ವೀರಶೈವ ಸಾಹಿತ್ಯವು ಸಿಕ್ಕಲಾರದು. ವೀರಶೈವ ಕ್ರಾಂತಿಯು ಹೆಚ್ಚಾಗಿ, ಆಂಧ್ರ ಮತ್ತು ಕರ್ನಾಟಕದಲ್ಲಿ ಆದುದರಿಂದ ಅವೆರಡು ಭಾಷೆಗಳಲ್ಲಿ ನಮಗೆ ಸಾಹಿತ್ಯ ಸಿಗುವದು. ಆದರೆ ಉಳಿದ ಭಾಷೆಗಳಲ್ಲಿ ಗ್ರಂಥಗಳು ಇಲ್ಲವೇ ಇಲ್ಲವೆಂದು ಹೇಳಲು ಸಾಧ್ಯವಿಲ್ಲ. ಸಿಕ್ಕುತ್ತವೆ. ಆದರೆ ಅದರ ಹೊಣೆಗಾರಿಕೆ ಹೊತ್ತು ಹುಡುಕುವ ವಿಚಾರಗಳಿಲ್ಲ; ಅಷ್ಟೇಕೆ ! ಹೊರುವವರಿಲ್ಲವೆಂದೇ ಹೇಳಬೇಕಾದೀತು. ಆಂಧ್ರದ ಸಾಹಿತ್ಯ ಕನ್ನಡಕ್ಕೂ ಬರಬೇಕು. ಕನ್ನಡ ಸಾಹಿತ್ಯ ಆಂಧ್ರಕ್ಕೂ ಅವೆರಡರ ಸಾಹಿತ್ಯ ಮರಾಠಿ, ಹಿಂದೀ, ಇಂಗ್ಲೀಷು ಬಂಗಾಲಿ, ರಶಿಯನ್ ಮೊದಲಾದ ಪರಭಾಷೆಗಳಲ್ಲಿ ಹರಡಬೇಕು. ಸಾಹಿತ್ಯವು ಜೀವಂತವಿರಬೇಕಾದರೆ ಹೆಚ್ಚಿಗೆ ಅದು ಜೀವಂತ ಭಾಷೆಗಳಲ್ಲಿ ಪ್ರಚುರವಿದ್ದರೇನೇ ಮಾತ್ರ ಸಾಧ್ಯವಾಗುವದು. ವೀರಶೈವ ಸಾಹಿತ್ಯವು ಜನತೆಯ ರುಚಿಕರವನ್ನು

ಅವಲಂಬಿಸಿದೆ. ಅದರಷ್ಟು ಸರಳ, ನಿರರ್ಗಳವಾದ ವಿಚಾರಗಳು ಸಾಮಾನ್ಯ ಜನತೆಯು ಹೇಗೆ ಸ್ವೀಕರಿಸಿತ್ತೆಂಬುದು ೧೨ ನೆಯ ಶತಮಾನದ ವಚನ ವಾಙ್ಮಯವೇ ಕಾರಣವಾಗುವದು. ಅದಕ್ಕಾಗಿ ಅದನ್ನು ಇನ್ನಿತರ ಭಾಷೆಗಳಲ್ಲಿ ಪ್ರಬಲವಾದ ಸ್ಥಾನವನ್ನು ಸಿಕ್ಕುವಂತೆ ಮಾಡಬೇಕು. ಅದಕ್ಕಾಗಿ ಸಾಹಿತ್ಯ ಸಮ್ಮೇಳನಗಳು ಸಿದ್ಧವಾಗಬೇಕು. ವೀರಶೈವ ಸಾಹಿತ್ಯವನ್ನು ಅಭ್ಯಸಿಸಲು ಅನುಕೂಲತೆ ಹೆಚ್ಚಾಗಿ ಬೇಕು.

## ಅದರ ಮಹತ್ವದ ಪಾತ್ರಗಳು

ವೀರಶೈವ ಸಾಹಿತ್ಯ ಪರಿಷತ್ತನ್ನು ನಾವೀಗ ಸಂಘಟಿಸುವದು ಸುಲಭವಾಗಿದೆ. ಏಕೆಂದರೆ ಇಲ್ಲಿಯವರೆಗೆ ಅಖಿಲಭಾರತ ವೀರಶೈವ ಮಹಾಸಭೆಯು ತನ್ನ ಪ್ರತಿಯೊಂದು ಅಧಿವೇಶನಗಳಲ್ಲಿ ಸಾಹಿತ್ಯದ ಬಗ್ಗೆ ಅನುಕೂಲತೆಯನ್ನು ಒದಗಿಸಿತ್ತು. (ಮಹಾಸಭೆಯು ಕಾರ್ಯಕ್ರಮಗಳನ್ನು ಏನೇ ಕೈಕೊಳ್ಳಲಿ) ಅದು ಈಗ ನಮಗೆ ಬೇಕಾಗಿಲ್ಲ. ಅದಕ್ಕಾಗಿ ಸಾಹಿತ್ಯ ಸಂಸ್ಥೆಗಳ ಮುಖಾಂತರ ಬೇರೆ ಸಂಸ್ಥೆಯನ್ನು ಏರ್ಪಡಿಸಿಕೊಂಡು ಕೆಲಸ ಕೈಕೊಳ್ಳಲಿ. ಪ್ರಾಚ್ಯ ಸಾಹಿತ್ಯ ಸಂಶೋಧನೆಗಳನ್ನು ಅದು ಮಾಡಬೇಕು. ಅಳಿದು ಹೋದ ಸಾಹಿತ್ಯವನ್ನು ಮರಳಿ ಪಡೆದವರು, ಪಡೆಯುವರು ವೀರಶೈವರಲ್ಲಿ ಇಲ್ಲವೆಂದು ಯಾರೂ ಭಾವಿಸಬಾರದು. ವೀರಶೈವ ಸಾಹಿತ್ಯ, ಸಂಸ್ಕೃತಿಗಳನ್ನು ಕಾಪಾಡಿಕೊಂಡು ಬಂದ ಕೀರ್ತಿ ನಿಜವಾಗಿ ಮಠಾಧೀಶರಿಗೆ ಸೇರುತ್ತದೆ. ಇದಕ್ಕೂ ಒಂದು ಮಹತ್ವದ ಮಾತನ್ನೇ ಎತ್ತಿ ಹೇಳಬೇಕಾದ ಅಭಿಮಾನದ ಸಂಗತಿಯೇನೆಂದರೆ ಕನ್ನಡ ಭಾಷೆಯ ಉಳಿಮೆಯು ನಿಜವಾಗಿ ಮಠಾಧೀಶರಿಂದಲೇ ಎನ್ನಬೇಕು. ಮಠಗಳಲ್ಲಿ ಭಾಷೆಯನ್ನು ಕಲಿಸುವ ವ್ಯವಸ್ಥೆ ಮಾಡುವ ಪದ್ಧತಿಯನ್ನಿಟ್ಟುಕೊಂಡು ಬಂದ ಮಠಾಧೀಶರು ಕನ್ನಡವನ್ನು ಕಲಿಸಲು ಮೊದಲಾಗಿದ್ದರು ಎಂಬ ಮಾತನ್ನು ಒತ್ತಿ ಹೇಳಬೇಕಾಗುವದು. ಈ ಮಾತು ಇಲ್ಲಿ ಅಪ್ರಸ್ತುತವೆನ್ನುವದಾದರೂ, ನಾಡಿನ ಸಂಸ್ಕೃತಿ, ಭಾಷಾ ಪೋಷಣೆಗೆ ವೀರಶೈವ ಮಠಾಧೀಶರ ಕರ್ತವ್ಯವು ಉನ್ಮುಖವಾಗಿದೆ. ಆದುದರಿಂದ ವೀರಶೈವರಲ್ಲಿ ಇಂತಹವರಾರೂ ಇಲ್ಲವೆನ್ನುವದು ತಪ್ಪು. ಈಗಲಾದರೂ ಮಠಾಧೀಶರ ಹೊರತಾಗಿ ವೀರಶೈವ ಸಾಹಿತ್ಯವನ್ನು ಉಳಿಸಿದವರಲ್ಲಿ, ಅಷ್ಟೇ ಏಕೆ ಅದನ್ನು ಬೆಳಕಿಗೆ ತಂದು ಬಂಗಾರದಂತೆ ಮಾಡಿದ ಹಳಕಟ್ಟಿಯವರು, ಬಸವನಾಳರು, ಶ್ರೀ ನಂದಿಮಠರು, ಬೆಂಗಳೂರಿನ ಶ್ರೀ. ಬಿ.

ಶಿವಮೂರ್ತಿ ಶಾಸ್ತ್ರಿಗಳು, ನಾಗನೂರ ಮಠದ ಕಾಶಿನಾಥ ಶಾಸ್ತ್ರಿ, ಇಂದು ಆಂಗ್ಲ ಸಾಹಿತ್ಯದಲ್ಲಿ ವೀರಶೈವ ಸಾಹಿತ್ಯವನ್ನು ಪ್ರಕಾಶಕ್ಕೆ ತರುತ್ತಿರುವ ಕುಮಾರಸ್ವಾಮಿಗಳು ಮೊದಲಾದವರು ಪ್ರಸಿದ್ಧರಾಗಿದ್ದಾರೆ. ಹಳಕಟ್ಟಿಯು ವರ ಜೀವನ ಅದಕ್ಕೇ ಮುಡುಪಾಯಿತು. ಹೀಗೆ ಅನೇಕ ಸಾಹಿತ್ಯ ಶಿರೋಮಣಿಗಳಾದವರು ಕೇಂದ್ರ ಸಂಸ್ಥೆಯನ್ನು ಏರ್ಪಡಿಸಲು ಸಿದ್ಧರಾಗಬೇಕು. ಸಮ್ಮೇಲನಗಳನ್ನು ತೆರೆಯಲು ಮುಂದೆ ಬರಬೇಕು. ಪ್ರತಿಯೊಂದು ಭಾಷೆಯಲ್ಲಿ ವೀರಶೈವ ಸಾಹಿತ್ಯವು ವ್ಯೆಯೆತ್ತಿ ತೋರುವದಾಗುವಂತಹದೇ ಇದರ ಮಹತ್ವದ ಧ್ಯೇಯ, ಪಾತ್ರವಾಗಬೇಕು. ವೀರಶೈವ ಹಿತಾಭಿಮಾನಿಗಳು ಇತ್ತ ಹೊರಳಲಿ.

## ವೀರಶೈವ ಸಾಹಿತ್ಯವೆ ಪ್ರಮುಖವಾಗಿದೆ.

ವೈದಿಕ ಸಾಹಿತ್ಯದಷ್ಟು ಪ್ರಬಲವಾದ ಸಾಹಿತ್ಯವಿಲ್ಲೆಂದು ಹಲವರು ವಾದಿಸುತ್ತಿರಬಹುದು. ಆದರೆ ವೀರಶೈವ ಸಾಹಿತ್ಯವು ಅದರ ಮಟ್ಟಿಗೆ ಬಂದು ನಿಲ್ಲುವದು ಎಂದು ಎದೆ ತಟ್ಟಿ ಹೇಳಬಲ್ಲೆವು. ಆಗಮಗಳು, ಪುರಾಣಗಳು, ಶೃತಿಗಳಲ್ಲ ವೀರಶೈವ ಸಾಹಿತ್ಯವು ಅಡಗಿಲ್ಲವೆ ? ಅದೆಲ್ಲ ಈಗ ಹೊರಗೆ ಬರಲಿ. ಆಗಮಗಳನ್ನು ವೀರಶೈವರು ಎಷ್ಟು ಜನ ಓದುತ್ತಿದ್ದಾರೆ ? ಎಂಬುದು ವಿಚಾರಿಸತಕ್ಕ ಮಾತಾಗಿದೆ. ಸಂಸ್ಕೃತದಲ್ಲಿ ವೀರಶೈವ ಸಾಹಿತಿಗಳು ಅರ್ಪಿಸಿದ ಗ್ರಂಥಗಳಾವವು ? ಎಂಬುದನ್ನು ಹೇಳಬಲ್ಲವರಾರು. ಸಂಸ್ಕೃತದ ವೀರಶೈವ ಕವಿಗಳೆಷ್ಟು ಜನ ? ಅವರಲ್ಲಿ ಉನ್ನತಕವಿಗಳಾರು ? ಎಂದು ಕೇಳಿದರೆ ನಿರುತ್ತರವಾಗುವದು ಸಹಜ. ಅದರಂತೆ ಕನ್ನಡ ಸಾಹಿತ್ಯದಲ್ಲಿ ವೀರಶೈವ ಸಾಹಿತ್ಯವು ಎಷ್ಟರ ಮಟ್ಟಿಗೆ ನಿಂತಿದೆ ಎಂಬುದು ಗಮನಾರ್ಹವಾದ ವಿಚಾರ. ಅದರ ಹೊಳಪಿಗೆ ಕಣ್ಣು ಮುಚ್ಚಿ ತಗ್ಗಿದ ಸಾಹಿತ್ಯಗಳೆಷ್ಟಿಲ್ಲ ? (ಜೈನ ಸಾಹಿತ್ಯ ಮೊದಲಾದವು) ಅದರಂತೆ ಆಂಧ್ರದಲ್ಲಿ ವೀರಶೈವ ತೆಲಗು ಸಾಹಿತ್ಯ ಪ್ರಚುರವಿದೆ. ಅದನ್ನೆಲ್ಲ ಶೋಧಿಸಬೇಕು. ಅವು ಬಯಲಿಗೆ ಬೀಳಬೇಕು. ಒಂದೇ ಭಾಷೆಯಲ್ಲಿದ್ದರೆ ಅವು ಹೊರಗೆ ಬರಲಾರವು.

ಹೀಗೆ ಪ್ರತಿಯೊಂದು ಭಾಷೆಯಲ್ಲಿ ತಜ್ಞರಾದ ವೀರಶೈವರು ಸಾಮಾನ್ಯವಾಗಿ ಭಾರತ ತುಂಬ ಇದ್ದಾರೆನ್ನಬಹುದಾಗಿದೆ. ಹೀಗಿರಲು ಕನ್ನಡ ಸಾಹಿತ್ಯದಲ್ಲಾದ, ಆಂಧ್ರದಲ್ಲಾದ, ಸಂಸ್ಕೃತದಲ್ಲಾದ ಸಾಹಿತ್ಯವು ಸಂಪೂರ್ಣವಾಗಿ ಇನ್ನುಳಿದ ಭಾಷೆಗಳಲ್ಲಿ ಪರಿವರ್ತನ ಹೊಂದಲಿ. ಇಂತಹ ಅಮೋಘ

ಕೆಲಸಕ್ಕಾಗಿ ಚಿಕ್ಕ ಪುಟ್ಟ ಸಂಸ್ಥೆಗಳು ಏನು ಕೆಲಸ ಮಾಡುವವು ? ಅವೆಲ್ಲ ಒಂದೆಡೆ ಸೇರಿಕೊಂಡು ಕರ್ತವ್ಯವನ್ನು ಕೇಂದ್ರೀಕೃತವಾದಾಗ ಸಾಹಿತ್ಯವು ಸ್ವಭಾವತ ಸಿದ್ಧವಾಗಿ ಪ್ರತಿಯೊಂದು ಭಾಷೆಯಲ್ಲಿ ಪರಿವರ್ತನ ಹೊಂದಲು ಸಹಜವಾಗುತ್ತದೆ. ಬರೆದದ್ದೇ ಬರೆಯುವದು ಬೇಡ. ಬರೆವದ್ದನ್ನೇ ತಿರಿಯುವದು ಬೇಕು. ಅದಕ್ಕಾಗಿ ನಮಗೆ ಅನೇಕ ಸಾಧನೆಗಳು ಬೇಕು. ಕೇಂದ್ರೀಕೃತ ಸಂಸ್ಥೆಗೆ ಎಲ್ಲವೂ ಬೇಕಾಗುತ್ತವೆ. ಅವುಗಳಲ್ಲಿ ಸಂಶೋಧನೆಯು ಮಹತ್ವದ್ದಾಗಿದೆ. ವೀರಶೈವ ಸಾಹಿತ್ಯವು ಇಷ್ಟು ನಮ್ಮ ಕಣ್ಣಿಗೆ ಬಿದ್ದರೂ ಹಳಕಟ್ಟಿಯವರು ಇನ್ನೂ ಮುಕ್ಕಾಲು ಪಾಲು ಅಡಗಿಕೊಂಡು ಕುಳಿತಿದೆ ಎಂದು ಹೇಳುತ್ತಿದ್ದಾರೆ. ಇದಕ್ಕಾಗಿ ಸಂಶೋಧನೆ, ಅಭ್ಯಾಸವು ಮುಖ್ಯವಾಗಿ ಬೇಕು. ಅದಕ್ಕೆ ವಿದ್ಯಾರ್ಥಿಗಳು ಬೇಕು; ಪ್ರಾಧ್ಯಾಪಕರು ಬೇಕು. ಅಂತೆ ಅದು ಒಂದು ಯುನಿವ್ಹರ್ಸಿಟಿ ಕೂಡ ಆಗಬೇಕಲ್ಲವೆ ? ಅಭ್ಯಾಸವೆಂದ ಕೂಡಲೆ ಅದಕ್ಕೆ ಹಣ, ನೆಣಗಳು ಕೂಡಿಕೊಂಡು ಹೋದಾಗ ಗುಣದ ಸಂಗದಿಂದ ಕುಂದಣವಿಟ್ಟ ಬಂಗಾರವಾಗುತ್ತದೆ. ಅದಕ್ಕಾಗಿ ಈಗ ಪ್ರತಿಯೊಬ್ಬ ವೀರಶೈವನು ಕೈಕಟ್ಟಿಕೊಂಡು ಕೂಡ್ರಬಾರದು. ಹಣವಿದ್ದವರು ಹಣಕೊಡಬೇಕು, ಗುಣವಿದ್ದವರು ಗುಣಕೊಡಬೇಕು. (ಸಹಾನುಭೂತಿ, ಸೌಹಾರ್ದತೆ) ನೆಣವಿದ್ದವರೂ ನೆಣಕೊಡಬೇಕು. ಮಾನವನು ತನ್ನ ಕೀರ್ತಿ ಸ್ಥಿರತೆಗಾಗಿ ಎಷ್ಟು ಹೆಣಗಾಡುವನೋ ಅಷ್ಟೇ ನಿಸ್ವಾರ್ಥತೆಯಿಂದ ಧರ್ಮ ಸಂಸ್ಕೃತಿ ರಕ್ಷಣೆಗಾಗಿ ಹೋರಾಡಬೇಕಾಗುವದು. ಅದು ಮಾನವನ ಕರ್ತವ್ಯವಾಗುತ್ತದೆ.

ಈಗ ವೀರಶೈವ ಸಾಹಿತ್ಯ ಸಂಶೋಧನ ಕೇಂದ್ರವು ನನ್ನ ತಿಳಿವಳಿಕೆಯ ಮಟ್ಟಿಗೆ ಎಲ್ಲಿಯೂ ಇಲ್ಲ. ಅದಕ್ಕಾಗಿ ಸಾಹಿತ್ಯ ಜ್ಞಾನವೃದ್ಧರ ಸಹಾಯದಿಂದ ವೀರಶೈವ ಸಾಹಿತ್ಯವು ಪುಷ್ಟಿದಾಯಕವಾಗಬೇಕು. ಇನ್ನೊಂದು ವಿಷಯ; ನಿರೂಪಣೆಯೆಂದರೆ ಸುದೈವದಿಂದ ಶ್ರೀಮಾನ್ ಹಳಕಟ್ಟಿಯವರು 'ಸಂಶೋಧನ ಕೇಂದ್ರ'ವನ್ನು ತೆರೆಯಲು ಯೋಚಿಸುತ್ತಿದ್ದಾರೆ. ಅವರ ನೆರವಿನಿಂದ, ಈ ವೀರಶೈವ ಸಾಹಿತ್ಯ ಪರಿಷತ್ತು ತೆರೆಯಲೂ ಬಾರದೇಕೆ ? ಇಂತಹ ಸಮಯದಲ್ಲಿ ತರುಣ ಸಾಹಿತಿಗಳು, ಯಾವದೋ ಕವನವೋ, ಕತೆಯೋ, ಕಾದಂಬರಿಯೋ ಬರೆದರೇನೂ ಹುರುಳಿಲ್ಲ, ಅವರು ಈ ಸಾಹಿತ್ಯ ಸಂಶೋಧನ ಕೇಂದ್ರದ ಕಡೆಗೆ ಲಕ್ಷಹಾಕಿದರೆ, ಹುಟ್ಟುಗುಣವಾಗಿ ಸಾಹಿತ್ಯದೇವಿಯು ಹಸಾದ ಘೃತದಲ್ಲಿದ್ದಿದ ಹೋಳಿಗೆಯಂತೆಯಾಗುವದು.

'ವೀರಶೈವ ಸಾಹಿತ್ಯಪರಿಷತ್ತು' ತೆರೆಯಬೇಕಾದವರು ಒಮ್ಮೆಲೆ ಒಂದು ಸಣ್ಣ ಸಂಸ್ಥೆಗೆ ಏನೋ, ಎಂದು ಕರೆಯಬಾರದಾಗಿ ನಾನು ವಿನಂತಿಸುತ್ತೇನೆ. ಅಂತಹ ಸಂಸ್ಥೆ ಒಮ್ಮೆಲೆ ದೊಡ್ಡದಾಗುವದು. ಎಲ್ಲರ ಸಹಾಯ ಸಹಕಾರಗಳಿಂದ ಅಕಸ್ಮಿತ ಉಂಟಾದ ಸಂಸ್ಥೆಗೆ ಬೇರು ಕತ್ತರಿಸು ಅಣ್ಣಗಳು ತಡೆಯಬೇಕು. ಮಾಡುವ, ತೊಡುವ ಕಾರ್ಯಗಳಲ್ಲಿ ನಾವು ನಿರರ್ಗಳವಾಗಿ ನುಡಿಯಬಾರದು. ಆದಕ್ಕೆ ಹತೋಟಿಯನ್ನಿಟ್ಟುಕೊಂಡು ಕೆಲಸ ಮಾಡಬೇಕು. ಈಗ ನನ್ನ ಅಭಿಪ್ರಾಯದ ಮೇರೆಗೆ ಇಂದಿನ ಸುಪ್ರಸಿದ್ಧ ಅನುಭವಿಗಳೂ, ತಜ್ಞರೂ ಆದ ಶ್ರೀ ಪಿ. ಜಿ. ಹಳಕಟ್ಟಿ, ಡಾ. ನಂದೀಮಠ, ಡಾ॥ ಆರ್. ಸಿ. ಹಿರೇಮಠ, ಮಾಳವಾಡ, ಬಿ. ಶಿವಮೂರ್ತಿಶಾಸ್ತ್ರಿ, ಉತ್ತಂಗಿ ಚೆನ್ನಪ್ಪ. ವೈ. ನಾಗೇಶಶಾಸ್ತ್ರಿ, ಶಿರಶಿ ಗುರುಶಾಂತ ಶಾಸ್ತ್ರಿ, ಅಲ್ಲದೆ ತೆಲಗು ಸಾಹಿತ್ಯ ತಜ್ಞರನ್ನೂ, ಮರಾಠಿ ಭಾಷಾ ತಜ್ಞರನ್ನೂ ಕೂಡಿ ಈ ಸಂಸ್ಥೆಯನ್ನು ಕಟ್ಟುವರೆಂದು ನಂಬಿದ್ದೇನೆ. ಈ ಅಭಿಪ್ರಾಯವೇ ಕೊನೆಯದೇ ಆಗಬಾರದೆಂದೂ ನನ್ನ ನಂಬಿಗೆ. ನಿರ್ದಿಷ್ಟವಾಗದ ನನ್ನ ಹಂಬಲದ ಉಸಿರುಗಳು ಎಲ್ಲರ ಹೃದಯದಲ್ಲಿಯೂ ಇದ್ದರೆ ಆಗಲೇಬೇಕಲ್ಲವೆ?

# ೩. ಲಿಂಗತತ್ವದ ಉದಯ ಹಾಗೂ ವಿಕಾಸ.

ಬರೆದವರು :— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ (ಇಂಡಿ)



ಜಗತ್ತಿನಲ್ಲಿ ದ್ರಾವಿಡ ಸಂಸ್ಕೃತಿಯೇ ಮೊದಲಿನದು ವೇದನೆಗಳಿಗಿಂತಲೂ ಬಹು ಮೊದಲಿನದು ಎಂದು ಈಗೀಗ ಬಲ್ಲವರಿಗೆ ತಿಳಿಯಹತ್ತಿದೆ. ಇವರಿಗೆ ಲಿಂಗದ ಹೊರತು ಮತ್ತೊಂದು ದೇವರ ಹೆಸರೇ ಗೊತ್ತಿಲ್ಲ. ಆ ಲಿಂಗದ ಶಿವ ಶಕ್ತಿಯರ ಕುರುಹು ಎಂದು ಪೂಜಿಸುತ್ತಿದ್ದರು. ಆಗಿನ ಕಾಲದಿಂದಲೂ ಅಂಗದ ಮೇಲೆ ಲಿಂಗವನ್ನೇ ಧರಿಸುವ ಪಂಗಡವೂ ಕೂಡ ಇತ್ತು. ಶೈವ ಮೊದಲು ಆನಂತರ ವೀರಶೈವವೆಂದು ಎಲ್ಲಿಯೂ ಹೇಳಿಲ್ಲೆಂದು ಅನಿಸುವದು. ಮೊಟ್ಟ ಮೊದಲೇ ಜಗತ್ತಿನಲ್ಲಿ ಲಿಂಗಪೂಜೆಯೇ ಪ್ರಾರಂಭವಾಯಿತು. ಅದು ಕೂಡಾ ಭಾರತದ ಎಲ್ಲ ಕಡೆಗಳಲ್ಲಿ ಲಿಂಗಪೂಜೆ ಇತ್ತೆಂದು ತಿಳಿದು ಬರುವದು. ಆಗ ರಾಮ, ಕೃಷ್ಣ, ನಾರಾಯಣ ವೆಂಕಟರಮಣ ನಾರಾಯಣ ಬಸವ ಸಿದ್ಧರಾಮ ರೇವಣಸಿದ್ದ ಮರುಳಸಿದ್ದ ಏಕೋನಾಮ ಮೊದಲಾದ ಯಾವ ದೇವರ ಹೆಸರು ಕೂಡ ಇಲ್ಲ. ಬರೀ ಎಲ್ಲಿ ಬೇಕಾದಲ್ಲಿ ಸ್ಥಾವರಲಿಂಗ ನಂದಿ ಇವರ ಗುಡಿಗಳೇ ಆಗಿದ್ದವು. ಆ ಕಾಲದಲ್ಲಿ ಹನ್ನೆರಡು ಜ್ಯೋತಿರ್ಲಿಂಗಗಳು ಒಳ್ಳೇ ಪ್ರಸಿದ್ಧವಾಗಿದ್ದವು. ಸೌರಾಷ್ಟ್ರದಲ್ಲಿ ಸೋಮನಾಥ ಲಿಂಗ, ಶ್ರೀಶೈಲದಲ್ಲಿ ಮಲ್ಲಿ ಕಾರ್ಜುನ ಲಿಂಗ, ಉಜ್ಜೈನಿಯಲ್ಲಿ ಮಹಾಕಾಲ ಲಿಂಗ, ಅಮಳೇಶ್ವರದಲ್ಲಿ ಓಂಕಾರೇಶ್ವರ ಲಿಂಗ, ಪರಳಿಯಲ್ಲಿ ವೈಜನಾಥ ಲಿಂಗ, ಡಾಕಿನಿಯಲ್ಲಿ ಭೀಮಾ ಶಂಕರಲಿಂಗ; ಸೇತುಬಂಧದಲ್ಲಿ ರಾಮೇಶ್ವರಲಿಂಗ; ದಾರುಕಾವನದಲ್ಲಿ ನಾಗೇಶ ಲಿಂಗ, ಕಾಶಿಯಲ್ಲಿ ವಿಶ್ವೇಶ್ವರಲಿಂಗ, ಗೋದಾವರಿ ತೀರದಲ್ಲಿ ತ್ರಿಂಬಕೇಶ್ವರ ಲಿಂಗ, ಹಿಮಾಲಯದಲ್ಲಿ ಕೇದಾರನಾಥಲಿಂಗ, ಗೋಕರ್ಣದಲ್ಲಿ ಗೋಕ ರ್ಣೇಶ್ವರಲಿಂಗ ಹೀಗೆ ಭಾರತ ಎಲ್ಲ ಕಡೆಗೂ ಇವು ಮುಖ್ಯವಾಗಿ ವ್ಯಾಪಿ ಸಿದ್ದನ್ನು ನೋಡಿದರೆ ಹಿಂದುಸ್ಥಾನದಲ್ಲಿ ಲಿಂಗಪೂಜೆ ಬಹು ಮಹತ್ವದ ಸ್ಥಾನ ವನ್ನು ಅಲಂಕರಿಸಿತ್ತೆಂದು ಧಾರಾಳವಾಗಿ ಹೇಳಬಹುದು. ಈ ಎಲ್ಲ ಲಿಂಗ ಗಳನ್ನು ಎಂದು ಯಾರು ಸ್ಥಾಪಿಸಿದರೆಂದು ಹೇಳುವದು ಬಹು ಕಷ್ಟ ಶ್ರೀ ರಾಮಚಂದ್ರನು ರಾಮೇಶ್ವರದಲ್ಲಿ ಲಿಂಗ ಸ್ಥಾಪಿಸಿದನೆಂದು ಹೇಳುವರು. ಆದರೆ

ಲಿಂಗವನ್ನು ಸ್ಥಾಪಿಸಿದೆ ಅಲ್ಲಿ ಅವನು ಕೆಲಕಾಲ ಆ ಲಿಂಗಪೂಜೆಯನ್ನು ಮಾಡಿದ್ದಾನೆಂದು ಹೇಳಬಹುದು. ಸೇತುಬಂಧ ಮಾಡಲಿಕ್ಕೆ ಹತ್ತುವಕಾಲ ಯುದ್ಧ ಮುಗಿದು ತಿರುಗಿಬಂದು ಅಲ್ಲಿನಂತ ಕೆಲಕಾಲ ಶ್ರೀ ರಾಮಚಂದ್ರನು ಆ ಲಿಂಗವನ್ನು ಅನನ್ಯಭಕ್ತಿಯಿಂದ ಪೂಜಿಸಿರಬೇಕೆಂದು ಅನಿಸುವದು. ಉಳಿದ ಲಿಂಗಗಳ ಸ್ಥಾಪನೆಯ ಕಾಲ ಅಥವಾ ಸ್ಥಾಪಕರ ಹೆಸರುಗಳನ್ನು ಸರಿಯಾಗಿ ಹೇಳಲಿಕ್ಕೆ ಬರುವದಿಲ್ಲೆಂದಬಳಿಕ ಇದರದೂ ಕೂಡ ಹೇಳುವದು ಸಂಭವಿಸುವದಿಲ್ಲ. ರಾವಣನು ಶಿವನ ಆತ್ಮಲಿಂಗವನ್ನು ತಕ್ಕೊಂಡು ಹೋಗುವಾಗ ಮೂತ್ರದ ಒತ್ತಡ ಹೆಚ್ಚಾದಾಗ ಹುಡುಗನ ಕೈಯಲ್ಲಿ ಕೊಟ್ಟನಂತೆ ಆ ಹುಡುಗನು ಅಲ್ಲೇ ಇಟ್ಟು ಹೋದನಂತೆ ಅದೇ ಈಗಿನ ಗೋಕರ್ಣೇಶ್ವರಲಿಂಗವಾಗಿದೆ. ಎಂದು ಹೇಳುವರು. ರಾವಣನಿಗೆ ಎಷ್ಟೋ ಸಾವಿರ ವರ್ಷ ಆಯುಷ್ಯವೆಂದು ಹೇಳುವರು ಆದರೆ ಯಾರೂ ಅದನ್ನು ಎಂದು ಎಂಬ ಮಿತಿ ಹೇಳಲಾರರು. ಒಟ್ಟಿನಮೇಲೆ ಇವುಗಳ ಕಾಲವು ದ್ರಾವಿಡರ ಕಾಲದಲ್ಲಿ ಶ್ರೀರಾಮ, ಪಾಂಡವ ಕೃಷ್ಣ ಮೊದಲಾದವರಿಗಿಂತ ಪೂರ್ವದಲ್ಲಿ ಸ್ಥಾಪಿಸಲ್ಪಟ್ಟಿರುವವೆಂದು ಹೇಳಲಿಕ್ಕೆ ಅಡ್ಡಿ ಇಲ್ಲ. ವೇದಗಳಿಗಿಂತ ಪೂರ್ವದಲ್ಲಿ ಇವುಗಳನ್ನು ಸ್ಥಾಪಿಸಿರಬೇಕು. ಯಾಕಂದರೆ ವೇದದಲ್ಲಿ ಲಿಂಗದ ನಿಂದೆ ಟೀಕೆಗಳನ್ನು ಮಾಡಿದ್ದಾರೆ. ಅಗಸ್ತ್ಯ ಋಷಿಯು ರೇಣುಕಾಚಾರ್ಯರಿಂದ ಲಿಂಗದೀಕ್ಷೆಯನ್ನು ಪಡೆದು ಲಿಂಗಧಾರಿಯಾದದ್ದು ಪ್ರಸಿದ್ಧವಿದೆ. ಶಂಕರಾಚಾರ್ಯರೂ ಕೂಡ ರೇಣುಕಾಚಾರ್ಯರ ಕಡೆಯಿಂದ ಇಷ್ಟಲಿಂಗ ಉಪದೇಶ ಪಡೆದು ಶಿರಸ್ಸಿನಲ್ಲಿ ಚಂದ್ರಮೌಳೀಶ್ವರ ಎಂಬ ಲಿಂಗವನ್ನು ಧರಿಸಿದ್ದರೆಂದು ಪ್ರಸಿದ್ಧವಿದೆ. ಬಾರ್ಸಿ ಮೊದಲಾದ ಪಟ್ಟಣಗಳಲ್ಲಿರುವ ಅನಂತಶಯನ, ಪದ್ಮನಾಭ ಎಂಬ ನಾರಾಯಣನ ಮೂರ್ತಿಗಳ ಮಸ್ತಕದಲ್ಲಿ ಹಾಗೂ ಹಸ್ತದಲ್ಲಿ ಈ ಶಿವಲಿಂಗವಿರುವದು. ಕೊಲ್ಲಾಪುರದ ಮಹಾಲಕ್ಷ್ಮಿ, ಕಾಶೀ, ವಿಶಾಲಾಕ್ಷಿ ಕಂಚಿ ಕಾಮಾಕ್ಷಿ ತುಳಜಾಪೂರ ಅಂಬಾಭವಾನಿ ಕಾಶ್ಮೀರದ ಶಾರದಾದೇವಿ ಮೊದಲಾದ ಸ್ತ್ರೀ ದೇವತೆಗಳ ಶಿರಸ್ಸಿನಲ್ಲಿ ಲಿಂಗವಿರುವದು ಎಲ್ಲರಿಗೂ ಪ್ರತ್ಯಕ್ಷವಿದೆ. ಇದರಂತೆ ಅನೇಕ ವಿಗ್ರಹಗಳ ಮಸ್ತಕದಲ್ಲಿ ಅಥವಾ ಹಸ್ತದಲ್ಲಿ ಲಿಂಗವಿರುವದನ್ನು ನೋಡಿದರೆ ಆ ದೇವದೇವಿಯರು ಸಹ ಜೀವದಿಂದ ಇರುವಾಗ ಲಿಂಗಪೂಜೆಯನ್ನು ಮಾಡಿದ್ದಾರೆಂದು ಧಾರಾಳವಾಗಿ ಹೇಳಬಹುದು. ಇದರ ಮೇಲಿಂದ ಲಿಂಗಪೂಜೆಯು ಎಲ್ಲರ ಮನೆಯ ಮಾತಾಗಿತ್ತೆಂದು ಹೇಳಲಿಕ್ಕೆ ಅಡ್ಡಿ ಇಲ್ಲ. ಮಕ್ಕಾದಲ್ಲಿ ಮಕ್ಕೇಶ್ವರಲಿಂಗವನ್ನು ನಮ್ಮವರೇ ಸ್ಥಾಪಿಸಿರು

ವರು. ಮುಸಲ್ಮಾನರು ಎಲ್ಲ ಮೂರ್ತಿಗಳನ್ನು ಒಡೆದರೂ ಈ ಲಿಂಗವನ್ನು ಒಡೆಯುವದು ಶಕ್ಯವಾಗಲಿಲ್ಲೆಂದು ಹೇಳುವರು. ಇದು ಇನ್ನೂ ಅಲ್ಲಿ ಇರುವದು. ಇದರ ಸ್ಥಾಪನೆಯ ತಾರೀಖು ಹೇಳಲಿಕ್ಕೆ ಬರುವದಿಲ್ಲ. ಜಾವಾ ಸುಮಾತ್ರಾಗಳಲ್ಲಿಯೂ ಲಿಂಗಗಳಿರುವದು ಕಂಡುಬರುವದು. ವೀರಭದ್ರನು ಹನುಮಂತನಿಗೆ ಲಿಂಗಧಾರಣ ಮಾಡಿದ್ದಾನೆಂದು ಕಥೆ ಇರುವದು. ಹಿರಣ್ಯಾಕಶ್ಯಪು ಮೊದಲಾದವರು ಲಿಂಗಧಾರಿಗಳಿದ್ದರೆಂದು ತಿಳಿಯುವದು. ವಿದ್ಯಾರಣ್ಯ ಮುನಿಗಳು ವಿಜಯನಗರದಲ್ಲಿ ವಿರುಪಾಕ್ಷಲಿಂಗವನ್ನು ಸ್ಥಾಪಿಸಿದರು. ಅನೇಕ ಋಷಿಗಳು ಲಿಂಗವನ್ನೇ ಪೂಜಿಸಿದ್ದಾರೆ. ಅನೇಕ ಲಿಂಗಗಳು ಉಳಿಯ ಮುಟ್ಟದ ಲಿಂಗಗಳಿರುವವೆಂದು ಅನಿಸುವದು. ಇದೆಲ್ಲವನ್ನು ನೋಡಲಾಗಿ ಹಿಂದಿನ ಕಾಲದಲ್ಲಿ ಸ್ಥಾವರ ಲಿಂಗಗಳನ್ನು ಪೂಜಿಸುತ್ತಿದ್ದರೆಂದು ಅನಿಸುವದು. ಅನೇಕ ದೇವ ದೇವತೆಗಳ ಮಸ್ತಕದಲ್ಲಿ ಅಥವಾ ಹಸ್ತದಲ್ಲಿ ಲಿಂಗ ಧರಿಸಿದ್ದೇ ಸಾಕ್ಷಿ. ಹರಿಯೂಕೂಡ ಈ ಲಿಂಗವನ್ನು ಪೂಜಿಸಿದ್ದು ಅನೇಕ ಕಡೆಗಳಲ್ಲಿ ಕಂಡುಬರುವದು. ಇದನ್ನು ನೋಡಲಾಗಿ ಲಿಂಗತತ್ವವು ಬಹುಮುಖವಾಗಿ ಭಾರತೀಯರಲ್ಲಿ ನೆಲಿಸಿತ್ತೆಂದು ಹೇಳಬಹುದು.

ಮೊದಲು ಇದನ್ನು ಯಾವ ಆಧಾರಗಳ ಮೇಲಿಂದ ಕಂಡು ಹಿಡಿದಿರಬೇಕೆಂದು ವಿಚಾರಿಸುವದು ಒಳ್ಳೇ ಮಹತ್ವದ ವಿಷಯವಾಗಿರುವದು. ಅದನ್ನು ಶಕ್ಯವಿದ್ದಷ್ಟು ಈಗ ವಿಚಾರಿಸುವೆವು. ಬೈಲಲ್ಲಿ ಸೂರ್ಯೋದಯಕ್ಕೆ ಮೊದಲು ಹೋಗಿ ನಿಂತು ಸೂರ್ಯೋದಯವನ್ನು ನಿರೀಕ್ಷಿಸಿದರೆ, ಭೂದೇವಿಯು ಉದರದಿಂದ ಪ್ರಕಾಶವಾದ ದುಂಡಗಿನ ಕೆಂಡದಂಥ ಸೂರ್ಯನು ಹೊರಟು ಏಳುವಾಗ ನಿರೀಕ್ಷಕನಿಗೆ ಲಿಂಗೋದ್ಭವವಾಗುತ್ತಿರುದಂತೆ ಕಾಣುವದು. ಕೆಳಗಿನ ಭೂದೇವಿಯು ಶಕ್ತಿಯನ್ನೂ ಏಳುವ ಸೂರ್ಯನು ಶಿವನನ್ನೂ ಸಹಜ ಹೋಲುವದೆಂದು ಭಾವ ವಡಮೂಡುವದು. ಬಹುತರ ಆಗಿನವರು ಇಂಥ ಸೂರ್ಯೋದಯವನ್ನು ನಿರೀಕ್ಷಿಸಿ ಈ ಲಿಂಗವನ್ನು ಸಿದ್ಧಗೊಳಿಸಿ ಪೂಜಿಸಲಿಕ್ಕೆ ಹತ್ತಿರಬೇಕೆಂದು ಅನಿಸುವದು. ಶಿವನ ಸಂಕಲ್ಪದಿಂದ ಶಕ್ತಿಯು ಹೊರಗೆ ಬಂದು ಇದೆಲ್ಲ ಜಗವನ್ನು ಜೀವರಾಶಿ ಮೊದಲಾದವುಗಳನ್ನು ಹುಟ್ಟಿಸಿರುವಳು. ಶಿವನು ಸ್ವಪ್ರಕಾಶನು. ಅದರಂತೆ ಸೂರ್ಯನೂ ಸ್ವ ಪ್ರಕಾಶಳುಳ್ಳವನು. ಭೂದೇವಿಯು ಸೂರ್ಯನ ಆಧೀನದಲ್ಲಿ ತಿರುಗುವದು. ಇದರಿಂದಲೇ ಋತುಗಳಾಗುವವು. ಮಳೆ, ಬೆಳೆ, ರೋಗ-ರುಜೆ, ಗಾಳಿ,

ಬಿಸಿಲು ಮೊದಲಾದವುಗಳೆಲ್ಲ ಬರುವವು. ಸೂರ್ಯನೇ ಈ ಜಗತ್ತಿನ ಹಾಗೂ ಅನೇಕ ಗ್ರಹಗಳ ಪ್ರಾಣನಾಗಿದ್ದಾನೆ. ಅಂದರೆ ಸೂರ್ಯನು ಶಿವನ ಗುರ್ತಾದ ಪೆಂಡಿಕೆಯನ್ನೂ, ಭೂಮಿಯು ಶಕ್ತಿಯ ಗುರ್ತಾದ ಪೀಠವನ್ನು ತೋರಿಸುತ್ತಾರೆ. ಸೂರ್ಯೋದಯದ ಕಾಲಕ್ಕೆ ಪ್ರತ್ಯಕ್ಷ ಪ್ರಕಾಶಮಾನವಾದ ಲಿಂಗವೆಂದೇ ಎಲ್ಲರಿಗೂ ಭಾಸವಾಗುವದು. ಸೂರ್ಯೋದಯಕ್ಕೆ ಎಲ್ಲ ಮನುಷ್ಯ, ಪಶು, ಪಕ್ಷಿ, ವನಸ್ಪತಿ ಮೊದಲಾದವುಗಳಿಗೆ ಆನಂದವಾಗುವದು. ಸೂರ್ಯನು ಭೂಮಿಯನ್ನು ಅಗಲಿ ಮೇಲೆ ಮೇಲೆ ಏರಿದಂತೆ ಎಲ್ಲರಿಗೂ ತ್ರಾಸುಗಳು ಹೆಚ್ಚಾಗುವವು. ಪುನಃ ಸೂರ್ಯಾಸ್ತದ ಕಾಲಕ್ಕೆ ಎಲ್ಲವುಗಳಿಗೆ ಸ್ವಲ್ಪ ಆನಂದವೆನಿಸುವದು. ಪುನಃ ಮುಳಗಲು ತ್ರಾಸು ಎನಿಸುವದು. ಇದೇ ಶಿವಶಕ್ತಿಯರ ಅಗಲುವಿಕೆಯಿಂದ ಕಷ್ಟವೆಂದು ಸೂಚಿಸುವದು. ನಮ್ಮ ಮೂಲದಲ್ಲಿ ಇರುವ ಕುಂಡಲಿ ಶಕ್ತಿಯು ತಲೆಯ ಸಹಸ್ರಾರದಲ್ಲಿ ಇರುವ ಶಿವನನ್ನು ಅಗಲಿದ್ದರಿಂದ ಕಷ್ಟವಾಗಿ ಕಾಮುಕರಾಗಿ, ವಿಷಯ ಕೂಪದಲ್ಲಿ ಕೆಟ್ಟು ಹೋಗುತ್ತಿರುವರು. ಇದನ್ನೇ ಸೂರ್ಯ ಭೂಮಿಯರ ಅಗಲುವಿಕೆಯು ಸೂಚಿಸುವದು ಶಿವಜ್ಞಾನವಾದಾಗ ಪ್ರಾಣಲಿಂಗದ ಅನುಭವನಾದಾಗ ಅನೇಕ ಪ್ರಕಾರದ ಪ್ರಕಾಶಗಳು ಕಾಣುವವು. ಕೋಟಿ ಸೂರ್ಯನಂಥ ಪ್ರಕಾಶವು ಬೀಳುವದು ಅದೇ ಪ್ರಕಾಶಮಾನ ಸೂರ್ಯನು ಇದನ್ನು ಸೂಚಿಸುವನು. ಹೀಗೆಲ್ಲ ಮೊದಲಿನವರು ವಿಚಾರಿಸಿ ಈ ಲಿಂಗವನ್ನು ಶೋಧಿಸಿರಬೇಕೆಂದು ಅನಿಸುವದು.

ಪ್ರತಿಯೊಂದು ಊರಲ್ಲಿ ಪ್ರತಿಯೊಂದು ಹೊಲದಲ್ಲಿ ಪ್ರತಿಯೊಬ್ಬ ಮನುಷ್ಯನು ಮೊದಲು ರಾಶಿಯನ್ನು ಮಾಡುವಾಗ ದುಂಡಗೆ ಕಣವನ್ನು ಕಡಿಯುವನು ಅದರ ನಡುವೆ ಮೇಟಿಯನ್ನು ನಡಿಸುವನು. ಅದರ ಸುತ್ತು ತೆನೆಗಗಳನ್ನು ಹಾಕುವನು. ಇದನ್ನು ವಿಚಾರಿಸಿ ಈ ಲಿಂಗವನ್ನು ಶೋಧಿಸಿರಬೇಕೆಂದು ಸಹ ಅನಿಸುವದು. ತೆನೆಯುಳ್ಳ ಕಣವೇ ಪೀಠ. ಮೇಟಿಯೇ ಗೋಳಕ. ಶಕ್ತಿ ಮೊದಲಾದವರು ಶಿವನ ಸುತ್ತಲೇ ಲೀಲೆ ಮಾಡುತ್ತ ತಿರಗುವರು ಶಿವನು ಸಾಕ್ಷಿಭೂತನು ಅಕರ್ತಾ ಅಭೋಕ್ತಾ ಶಿವನಿಲ್ಲದೆ ಅರಕ್ಷಣ ಯಾರಿಂಗೂ ನಡೆಯುವದಿಲ್ಲ ಅದರಂತೆ ಮೇಟಿಯ ಸುತ್ತ ಹಂತಿ ತಿರಗುವದು. ಮೇಟಿ ಇಲ್ಲದೆ ಕಣವೇ ಆಗುವದಿಲ್ಲ. ಅದಕ್ಕೆ ಇದನ್ನು ಕಂಡು ವಿಚಾರಿಸಿ ಲಿಂಗವನ್ನು ರಚಿಸಿರಬೇಕೆಂದು ಅನಿಸುವದು.

ಪ್ರಥ್ವಿ ಮೊದಲಾದ ಗ್ರಹಗಳು ನಕ್ಷತ್ರ ಸೂರ್ಯ ಚಂದ್ರ ಈ ವಿಶ್ವ ಬ್ರಹ್ಮಾಂಡ ಮೊದಲಾದವುಗಳು ದುಂಡಗೆ ಇರುವವು ಅವುಗಳಿಗೆ ಆಧಾರ ವಾಗಿರುವ ಬೈಲು ಶಕ್ತಿಯನ್ನು ಅಂದರೆ ಪೀಠವನ್ನು ವಿಶ್ವ ಮೊದಲಾದ ದುಂಡಗಿನ ವಸ್ತುಗಳು ಬಯಲಮೇಲೆ ಇಟ್ಟಂತೆ ಇರುವವು ಹೀಗಾಗಿ ಇವು ಗಳನ್ನು ನಿರಿಕ್ಷಿಸಿ ಈ ಲಿಂಗವನ್ನು ಶೋಧಿಸಿರಬೇಕೆಂದು ಅನಿಸುವದು.

ಬಯಲಲ್ಲಿ ಹೋಗಿ ನಿರೀಕ್ಷಿಸಿದರೆ ಗಿಡಗಳೂ, ಪರ್ವತ ಶಿಖರಗಳೂ ಎತ್ತರ ಬೆಳೆದು ಗುಡ್ಡ ದಿನ್ನೆಗಳೂ ಹೀಗೆ ಅನೇಕ ದೃಶ್ಯಗಳನ್ನು ಈಕ್ಷಿಸಿ ದರೆ ಈ ಲಿಂಗದ ಕಲ್ಪನೆ ಬರುವದು. ಇವುಗಳನ್ನು ನೋಡಿ ಈ ಲಿಂಗ ವನ್ನು ರಚಿಸಿರಬೇಕೆಂದು ಅನಿಸುವದು.

ಜಗತ್ತಿನ ಸರ್ವಪ್ರಾಣಿಗಳು ಸರ್ವ ವನಸ್ಪತಿಗಳು ತಮ್ಮ ಜೀವನ ವನ್ನು ಸರಾಗವಾಗಿ ಕಡೆತನಕ ಮುಂದುವರಿಸಬೇಕಾದರೆ ಹೆಣ್ಣು ಗಂಡಿನ ಅವಶ್ಯಕತೆ ಇರುವದು. ಅದರಂತೆ ಈ ಸೃಷ್ಟಿ ಹುಟ್ಟಲಿಕ್ಕೂ ಬೆಳೆಯಲಿಕ್ಕೂ ಬಾಳಲಿಕ್ಕೂ ಅಳಿಯಲಿಕ್ಕೂ ಉಳಿಯಲಿಕ್ಕೂ ಶಿವ (ಗಂಡು) ಶಕ್ತಿ ಹೆಣ್ಣು ಕಾರಣವೆಂದು ತಿಳಿದೇ ಈ ಲಿಂಗದಲ್ಲಿ ಶಿವಶಕ್ತಿಯರ ಗುರುತುಗಳನ್ನು ಕಲ್ಪಿ ಸಿದ್ದಾರೆಂದು ಅನಿಸುವದು. ಹೀಗೆ ಅನೇಕ ವ್ಯಾವಹಾರಿಕ ಕಾರಣಗಳನ್ನು ವಿಚಾರಿಸಿ ಆದಿ ದ್ರಾವಿಡರು ಈ ಲಿಂಗದ ಕಲ್ಪನೆಯನ್ನು ಮಾಡಿದ್ದಾರೆ. ಪೂರ್ವದಲ್ಲಿ ಅದಕ್ಕಿಂತ ಬೇರೆ ದೇವರ ಹೆಸರು ಸಹ ಇರಲಿಲ್ಲ. ಅದಕ್ಕೆ ಶಿವಸರ್ವೋತ್ತಮನೆಂದು ಸಕಲರೂ ಸಾರುವದರ ಅರ್ಥವು ಇದೇ ಆಗಿರು ವದೆಂದು ಅನಿಸುವದು.

ಮುಂದೆ ಈ ಲಿಂಗದಲ್ಲಿ ವಿಚಾರದಿಂದ ಅನೇಕ ತತ್ವಗಳನ್ನು ಕಂಡು ಹಿಡಿದು ಅದೆಲ್ಲ ಶರಣರ ಕಾಲದಲ್ಲಿ ಪರಿಪೂರ್ಣ ತತ್ವಗಳು ಕರಗತವಾದ ವೆಂದು ಅನಿಸುವದು. ಮೊದಲು ಈ ಲಿಂಗದಲ್ಲಿ ಗೋಳಕ ಪೀಠ ಜಲ ಹರಿ ಎಂದು ಕಲ್ಪಿಸಿದ್ದರು. ಅದಕ್ಕೆ ಕ್ರಮವಾಗಿ ಶಿವ-ಶಕ್ತಿ-ಮುಕ್ತಿ ಎಂದರು. ಅದೇ ಸತ್-ಚಿತ್-ಆನಂದವಾಯಿತು. ಆದರೆ ಮುಂದೆ ಶರಣರ ಕಾಲಕ್ಕೆ ಪರಶಿವ= ಪೆಂಡಿಕೆ, ಸತ್-ಚಿತ್-ಆನಂದವೆಂಬ ಸಮಭುಜ ತ್ರಿಕೋಣ, ಸತ್ವ-ರಜ-ತಮನೆಂಬ ಮತ್ತೊಂದು ಅದರ ಕೆಳಗೆ ಇಂಥ ಸಮಭುಜ ತ್ರಿಕೋಣವೆಂದು ಕಲ್ಪಿಸಿದರು. ಇದರ ವಿವರವನ್ನು ಹಿಂದಿನ ಲೇಖದಲ್ಲಿ ಹೆಚ್ಚಾಗಿ ಮಾಡಲಾಗಿದೆ. ಅದನ್ನು ನೋಡಿಕೊಳ್ಳಿರಿ. ಈಪ್ರಕಾರ ಲಿಂಗ ದಲ್ಲಿ ಹೆಚ್ಚಿನ ತತ್ವಗಳು ಪರಿಪೂರ್ಣವಾದದು ಶರಣರ ಕಾಲದಲ್ಲಿ.

ಇದೇ ವೀರಶೈವರ ಇಷ್ಟಲಿಂಗವಾಗಿ ಅಂಗದಮೇಲೆ ಧರಿಸಲ್ಪಟ್ಟಿತು. ಶರೀರಕ್ಕೆ ಇಷ್ಟಲಿಂಗ ಮಾಡಿಕೊಂಡರೆ ಮನಸ್ಸಿಗೆ ಪ್ರಾಣಲಿಂಗ ಮಾಡಿ ಕೊಂಡು ಆತ್ಮನಿಗೆ ಭಾವಲಿಂಗವನ್ನು ಮಾಡಿಕೊಂಡರು. ಪುನಃ ಇಷ್ಟ ಲಿಂಗದಲ್ಲಿ ಆಚಾರಲಿಂಗ, ಗುರುಲಿಂಗ, ಪ್ರಾಣಲಿಂಗದಲ್ಲಿ ಶಿವಲಿಂಗ, ಚರಲಿಂಗ (ಜಂಗಮಲಿಂಗ) ಭಾವಲಿಂಗದಲ್ಲಿ ಪ್ರಸಾದಲಿಂಗ ಮಹಾಲಿಂಗಗಳೆಂದು ಆರು ಲಿಂಗಗಳನ್ನೂ ಕಲ್ಪಿಸಿದರು. ಮಾನವನು ಸಾಧನೆಯನ್ನು ಬಲಿಸುತ್ತ ಹೋದಂತೆ ಮೊದಲಿನ ಲಿಂಗವೇ ಇರುವದಿಲ್ಲ. ಹುಡುಗನು ಕಲಿತಂತೆ ಇಯತ್ತೆಗಳು ಏರುತ್ತ ಹೇಗೆ ಹೋಗುವವೋ ಅದರಂತೆ ಹೆಚ್ಚೆಚ್ಚಿನಸಾಧನೆಗಳಿಂದ ಹೆಚ್ಚೆ ಚ್ಚಿನ ಲಿಂಗಕ್ಕೆ ಏರುತ್ತ ಹೊಂದುತ್ತ ಮುಂದೆ ಮುಂದೆ ಸಾಗುವನು ಹೀಗೆ ಈ ಆರುಲಿಂಗಗಳಲ್ಲಿ ಪುನಃ ಪ್ರತಿಯೊಂದರಲ್ಲಿ ಮೂರರಂತೆ ಒಳಭೇದಗ ಳನ್ನು ಕಲ್ಪಿಸಿದ್ದಾರೆ. ಹೀಗೆ ಒಟ್ಟು ಹದಿನೆಂಟು ಲಿಂಗಗಳಾಗುವವು. ಆಚಾರ ಲಿಂಗದಲ್ಲಿ— ಗುರುಲಿಂಗ, ಶಿವಲಿಂಗ, ಜಂಗಮಲಿಂಗ ಗುರುಲಿಂಗದಲ್ಲಿ—ಆಗ ಮಲಿಂಗ, ಕಾಮಲಿಂಗ, ಆಚಾರಲಿಂಗ ಶಿವಲಿಂಗದಲ್ಲಿ.— ಅನುಗ್ರಹಲಿಂಗ, ಅರ್ಪಿತಲಿಂಗ, ತನುಗುಣಲಿಂಗ. ಜಂಗಮಲಿಂಗದಲ್ಲಿ:— ಒಲವ್ವಲಿಂಗ, ನಿರೂಪಲಿಂಗ, ಪ್ರಸಾದಲಿಂಗ, ಪಾದೋದಕಲಿಂಗ. ಪ್ರಸಾದಲಿಂಗದಲ್ಲಿ:— ನಿಷ್ಪತ್ತಿಲಿಂಗ, ಆಕಾಶಲಿಂಗ, ಪ್ರಕಾಶಲಿಂಗ. ಮಹಾಲಿಂಗದಲ್ಲಿ:—ಘಟಾ ಕಾಶಲಿಂಗ, ಬ್ರಹ್ಮಾಂಡಲಿಂಗ, ಮಹದಾಕಾಶಲಿಂಗ. ಹೀಗೆ ಪ್ರತಿಯೊಂದ ರಲ್ಲಿ ಮೂರರಂತೆ ಹತ್ತೊಂಬತ್ತು ಲಿಂಗಗಳಾಗುವವು. ಮುಂದೆ ಈ ಹತ್ತೊಂ ಭತ್ತರಲ್ಲಿ ಪುನಃ ಮೂರರಂತೆ ಲಿಂಗಗಳಾಗುವವು. ಒಟ್ಟು ಐವತ್ತೇಳು ಲಿಂಗಗಳಾಗುವವು. ಇವುಗಳಿಗೆ ಲಿಂಗಸ್ಥಲಗಳೆನ್ನುವರು. ಈ ಪ್ರಕಾರ ವೀರಶೈವರು ವಿಚಾರ ಮಾಡಿ ಮಾಡಿ ಲಿಂಗದಲ್ಲಿ ಸೂಕ್ಷ್ಮತರವಾದ ಅವಾಂತರ ಭೇದಗಳನ್ನು ಕಂಡು ಹಿಡಿದಿದ್ದಾರೆ ಆದಿ ದ್ರಾವಿಡರ ಲಿಂಗಕಲ್ಪನೆಯು ಶರ ಣರ ಕಾಲಕ್ಕೆ ಪರಿಪೂರ್ಣವಾಯಿತೆಂದು. ಧಾರಾಳವಾಗಿ ಹೇಳಬಹುದು.

(೧) ಆಚಾರಲಿಂಗದಲ್ಲಿ ಮೂರು ೧. (ಗುರುಲಿಂಗ) ಇದರಲ್ಲಿ ಪುನಃ (ಅ) ದೀಕ್ಷಾ ಗುರುಲಿಂಗ (ಬ) ಶಿಕ್ಷಾ ಗುರುಲಿಂಗ (ಕ) ಜ್ಞಾನಗುರುಲಿಂಗ ೨. (ಶಿವಲಿಂಗ) ಇದರಲ್ಲಿ ಪುನಃ (ಅ) ಕ್ರಿಯಾಲಿಂಗ (ಬ) ಚರಲಿಂಗ (ಕ) ಪರಲಿಂಗ.

(೨) ಗುರುಲಿಂಗದಲ್ಲಿ ಮೂರು. ೧. ( ಆಗಮಲಿಂಗ ) ಇದರಲ್ಲಿ ಪುನಃ (ಅ) ಕ್ರಿಯಾಗಮಲಿಂಗ. (ಬ) ಭಾವಾಗಮ ಲಿಂಗ. (ಕ) ಜ್ಞಾನಾ

ಗಮಲಿಂಗ. ೨. (ಕಾಯಲಿಂಗ) ಇದರಲ್ಲಿ ಪುನಃ (ಅ) ಸಕಾಯಲಿಂಗ (ಬ) ಅಕಾಯಲಿಂಗ (ಕ) ಪರಕೀಯಲಿಂಗ. ೩. (ಆಚಾರಲಿಂಗ) ಇದರಲ್ಲಿ ಪುನಃ (ಅ) ಧರ್ಮಾಚಾರಲಿಂಗ (ಬ) ಭಾವಾಚಾರ ಲಿಂಗ (ಕ) ಜ್ಞಾನಾಚಾರಲಿಂಗ.

(೩) ಶಿವಲಿಂಗದಲ್ಲಿ ಮೂರು. ೧. (ಅನುಗ್ರಹಲಿಂಗ) ಇದರಲ್ಲಿ ಪುನಃ (ಅ) ಕ್ರಿಯಾನುಗ್ರಹಲಿಂಗ (ಬ) ಇಂದ್ರಿಯಾನುಗ್ರಹಲಿಂಗ (ಕ) ಪ್ರಾಣಾನುಗ್ರಹಲಿಂಗ. ೨. (ಅರ್ಪಿತಲಿಂಗ) ಇದರಲ್ಲಿ ಪುನಃ (ಅ) ಕಾಯಾರ್ಪಿತ (ಬ) ಕರಣಾರ್ಪಿತ (ಕ) ಭಾವಾರ್ಪಿತ. ೩. (ತನುಗುಣಲಿಂಗ) ಇದರಲ್ಲಿ ಪುನಃ (ಅ) ಶಿಷ್ಯಲಿಂಗ (ಬ) ಶುಶ್ರೂಷಾಲಿಂಗ (ಕ) ಸೇವ್ಯಲಿಂಗ.

(೪) ಜಂಗಮಲಿಂಗದಲ್ಲಿ ನಾಲ್ಕು. ೧. (ಒಲವುಲಿಂಗ) ಇದರಲ್ಲಿ ಪುನಃ (ಅ) ಜೀವಾತ್ಮಲಿಂಗ (ಬ) ಅಂತರಾತ್ಮಲಿಂಗ (ಪರಮಾತ್ಮ ಲಿಂಗ) ೨. (ನಿರೂಪಲಿಂಗ) ಇದರಲ್ಲಿ ಪುನಃ (ಅ) ನಿರ್ದೇಹಾಗಮಲಿಂಗ (ಬ) ನಿರ್ಭಾವಾಗಮಲಿಂಗ (ಕ) ನಷ್ಟಾಗಮಲಿಂಗ ೩. (ಪ್ರಸಾದ ಲಿಂಗ) ಇದರಲ್ಲಿ ಪುನಃ (ಅ) ಆದಿ ಪ್ರಸಾದಿಲಿಂಗ (ಬ) ಅಂತ್ಯ ಪ್ರಸಾದಿಲಿಂಗ (ಕ) ಸೇವ್ಯ ಪ್ರಸಾದಿಲಿಂಗ. ೪. (ಪಾದೋದಕಲಿಂಗ) ಇದರಲ್ಲಿ ಪುನಃ (ಅ) ದೀಕ್ಷಾ ಪಾದೋದಕಲಿಂಗ (ಬ) ಶಿಕ್ಷಾ ಪಾದೋದಕಲಿಂಗ (ಕ) ಜ್ಞಾನ ಪಾದೋದಕಲಿಂಗ.

(೫) ಪ್ರಸಾದಲಿಂಗದಲ್ಲಿ ಮೂರು. ೧. (ನಿಷ್ಪತ್ತಿಲಿಂಗ) ಇದರಲ್ಲಿ ಪುನಃ (ಅ) ಕ್ರಿಯಾನಿಷ್ಪತ್ತಿಲಿಂಗ (ಬ) ಭಾವ ನಿಷ್ಪತ್ತಿಲಿಂಗ (ಕ) ಜ್ಞಾನ ನಿಷ್ಪತ್ತಿಲಿಂಗ. ೨. (ಆಕಾಶಲಿಂಗ) ಇದರಲ್ಲ ಪುನಃ (ಅ) ಪಿಂಡಾಕಾಶ ಲಿಂಗ (ಬ) ಬಿಂದ್ವಾಕಾಶಲಿಂಗ (ಕ) ಮಹದಾಕಾಶಲಿಂಗ. ೩. (ಪ್ರಕಾಶ ಲಿಂಗ) ಇದರಲ್ಲ ಪುನಃ (ಅ) ಕ್ರಿಯಾ ಪ್ರಕಾಶಲಿಂಗ (ಬ) ಭಾವ ಪ್ರಕಾಶ ಲಿಂಗ (ಕ) ಜ್ಞಾನ ಪ್ರಕಾಶಲಿಂಗ.

(೬) ಮಹಾಲಿಂಗ ಇದರಲ್ಲಿ ಮೂರು (೧) (ಘಾಟಕಾಶಲಿಂಗ) ಇದರಲ್ಲಿ ಪುನಃ ಅ) ಸ್ವೀಕೃತ ಪ್ರಸಾದಲಿಂಗ (ಬ) ನಿಂದುದೋಗರ ಪ್ರಸಾದ ಲಿಂಗ (ಕ) ಚರಾಚರನಾಸ್ತಿಲಿಂಗ (೨) (ಬ್ರಹ್ಮಾಂಡಲಿಂಗ) ಇದಸಲ್ಲಿ

ಪುನಃ (ಅ) ಬಾಂಡಲಿಂಗ (ಬ) ಬಾಜನಲಿಂಗ (ಕ) ಅಂಗಲೇಪನ ಲಿಂಗ (ಡ) (ಮಹದಾಕಾಶಲಿಂಗ) ಇದರಲ್ಲಿ ಪುನಃ (ಅ) ಸ್ವಯುಪರವಂಯುದ ಲಿಂಗ (ಬ) ಭಾವಾಬಾವ ನಷ್ಟಲಿಂಗ (ಕ) ಜ್ಞಾನಶೂನ್ಯಲಿಂಗ.

ಈ ಪ್ರಕಾರ ಲಿಂಗತತ್ವದ ಬೆಳವಣಿಗೆಯು ಶರಣರ ಕಾಲಕ್ಕೆ ಪರಿಪೂರ್ಣ ವಾಗಿ ವಿಶಾಲವಾಗಿ ಆಯಿತು. ಮೊದಲು ಶೂನ್ಯಲಿಂಗವಿತ್ತು. ನಿಶೂನ್ಯ ಅಂದರೆ ಏನೂ ಇಲ್ಲದ್ದು ಎಂದು ಅರ್ಥವಲ್ಲ; ನಿಶ್ಶೂನ್ಯ ಎಂದರೆ ಮಹಾಕಾ ರಣಲಿಂಗ ಅದರಲ್ಲೆ ಸರ್ವಶಕ್ತಿ ಸರ್ವಜ್ಞಾನ ಸರ್ವಕರ್ತೃತತ್ವ ಸರ್ವ ವ್ಯಾಪಕ ಸರ್ವಯುಕ್ತಿ, ಸರ್ವಭುಕ್ತಿ, ಸರ್ವ ಭಕ್ತಿ, ಎಲ್ಲವೂ ಕೂಡಿ ಒಂದೇ ನಿಶೂನ್ಯ ವಾಗಿರುವದು. ಇವುಗಳಲ್ಲೆ ಅತ್ಯಂತಿಕ ಸೂಕ್ಷ್ಮದ ಸೂಕ್ಷ್ಮವಾಗಿ ಈ ಮಹಾ ಲಿಂಗದಲ್ಲೆ ಕೂಡಿ ನಿಶೂನ್ಯಲಿಂಗವೆನಿಸಿರುವದು ನಿಶೂನ್ಯಲಿಂಗದಿಂದ ಶೂನ್ಯ ಲಿಂಗವಾಯಿತು ಇದು ಅದಕ್ಕಿಂತ ಅಲ್ಪಸ್ಥೂಲವೆನಿಸುವದು. ಇದೇ ಕಾರಣ ಲಿಂಗ ಈ ಶೂನ್ಯಲಿಂಗದಿಂದ ಮಹಾಲಿಂಗ ಹುಟ್ಟಿತು. ಇದೇ ಸೂಕ್ಷ್ಮಲಿಂಗ ಈ ಮಹಾಲಿಂಗದಿಂದ ಓಂಕಾರ ಪ್ರಣವ ಹುಟ್ಟಿತು. ಇದರಲ್ಲಿ ಅಕಾರ ಉಕಾರ ಮಕಾರಗಳು ಹುಟ್ಟಿದವು. ಇವುಗಳಿಂದ ನಾದ, ಬಿಂದು, ಕಳೆ ಗಳು ಕ್ರಮವಾಗಿ ಹುಟ್ಟಿದವು. ಇವುಗಳಿಂದ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳು ಹುಟ್ಟಿದವು. ಇವುಗಳಿಂದಲೇ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳಾಗುವವು. ಹೀಗೆ ಬೆಳೆದು ಬಂದು ಪುನಃ ನಿಃಶೂನ್ಯಲಿಂಗದಲ್ಲಿ ಲೀನವಾಗಿಬಿಡುವದು.

ಒಂದೇ ಎರಡು, ಎರಡೇ ಮೂರು, ಮೂರೇ ಆರು, ಆರೇ ಹದಿ ನೆಂಟು, ಹದಿನೆಂಟೇ ಐವತ್ತೇಳು ಲಿಂಗಗಳಾದರೂ ಹಿಂದಿನ ಲೇಖಗಳಲ್ಲ ವಿವರಿಸಿದ ಅರ್ಥಗಳೇ ಇರುವವು. ಈ ಸೂಕ್ಷ್ಮ ಅವಾಂತರ ಲಿಂಗಗಳಿಗೆ ಸೂಕ್ಷ್ಮ ಅವಾಂತರ ಅವೇ ಅರ್ಥಗಳಿರುವವೆಂದು ಶಾಂತಚಿತ್ತದಿಂದ ಈ ಲಿಂಗಗಳನ್ನು ಸ್ಮರಿಸುತ್ತ ಕುಳಿತರೆ ಹೊಳೆಯುವದು. ಎಲ್ಲ ಲಿಂಗಗಳು ತನು ಮನ ಆತ್ಮಗಳ ಶುದ್ಧಿಗಾಗಿಯೇ ಇರುವವು. ಅವೆಲ್ಲ ಕ್ರಿಯೆ ಭಕ್ತಿ ಜ್ಞಾನಗಳ ಸಮನ್ವಯುವನ್ನೇ ಬೋಧಿಸುವವು. ಒಳ್ಳೇ ನೀತಿಯಿಂದ ನಡೆ ಯುತ್ತ ಹೋಗಿ ಒಳ್ಳೇ ಜ್ಯೋತಿಯನ್ನು ಕಂಡು ಅನುಭವಿಸಿ ಎಲ್ಲ ಅನು ಭವಿಸಿ ಎಲ್ಲ ಭಯಭೀತಿ ಮೊದಲಾದ ಸಕಲ ಭಾವಗಳನ್ನು ಬಯಲು ಮಾಡುವದನ್ನೇ ಈ ಲಿಂಗಗಳೆಲ್ಲ ಬೋಧಿಸುವವು. ಎಲ್ಲ ಲಿಂಗಗಳು ಸ್ಥೂಲ

ಸೂಕ್ಷ್ಮ ಕಾರಣದ ಶುದ್ಧಿಗಳನ್ನು ಹೊಂದುವದನ್ನೇ ವಿವರವಾಗಿ ಹೇಳುತ್ತವೆ. ಸಕಲ ಇಂದ್ರಿಯ ಮನ ಬುದ್ಧಿ ಚಿತ್ತ ಅಹಂಕಾರ ಜ್ಞಾನ ಮೊದಲಾದವುಗಳ ಒಳ್ಳೇ ಶುದ್ಧಿಯನ್ನೇ ಈ ಎಲ್ಲ ಲಿಂಗಗಳು ಬೋಧಿಸುವವು. ಸದಾ ನಿಸ್ವಾರ್ಥ ಪರಸತ್ಕಾರ್ಯಗಳನ್ನು ನಿಷ್ಕಾಮವಾಗಿ ಶಿವಧ್ಯಾನ ಮಾಡುತ್ತ ಮಾಡಬೇಕು. ತಾನೇ ಶಿವನೆಂಬುದನ್ನು ಅನುಸಂಧಾನ ಮಾಡಬೇಕು. ಆಮೇಲೆ ಸಕಲವೂ ಶಿವನೆಂದು ಸದಾ ಅನುಸಂಧಾನ ಮಾಡಿ ಎಲ್ಲವೂ ಶಿವನೆಂಬ ಅನುಭವಪಡೆದು ಶಾಂತಿಯನ್ನು ಹೊಂದಬೇಕೆಂದು ಈ ಎಲ್ಲ ಲಿಂಗಗಳು ಬೋಧಿಸುವವು. ಸದಾ ವಿಷಯಗಳನ್ನು ತೊರೆಯುತ್ತ ವಿರಕ್ತಿಯಲ್ಲಿ ಚರಿಸುತ್ತ ತನುವಿರಕ್ತ ಮನವಿರಕ್ತ ಭಾವವಿರಕ್ತನಾಗಿ ಹೋಗುವದನ್ನೇ ಈ ಎಲ್ಲ ಲಿಂಗಗಳು ತಿಳಿಸುವವು. ವಿಷಯರಹಿತ ವಸ್ತುರಹಿತ ಅತೀಂದ್ರಿಯ ವಿಷಯಗಳನ್ನು ಅನುಭವಿಸಬೇಕು. ಮನಸ್ಸಿನಲ್ಲಿ ಇರುವ ಸಕಲ ಸೂಕ್ಷ್ಮ ಇಂದ್ರಿಯಗಳನ್ನು ಪ್ರಕಟಗೊಳಿಸಿ ಬಾಹ್ಯ ವಸ್ತುಗಳ ಸಂಗವಿಲ್ಲದೆ ಸೂಕ್ಷ್ಮ ವಿಷಯಗಳನ್ನು ಅನುಭವಿಸಿ ಇಂದ್ರಿಯಾತೀತವನ್ನು ಕಾಣುವದನ್ನೇ ಈ ಲಿಂಗಗಳು ಬೋಧಿಸುವವು. ಈ ಸರ್ವ ಲಿಂಗಗಳನ್ನು ನಿತ್ಯ ಓದಿಕೊಂಡು ಅರ್ಥವನ್ನು ವಿಚಾರಿಸಿದರೆ ಸೂಕ್ಷ್ಮ ಅರ್ಥಗಳು ಸಹಜ ಹೊಳೆಯುವವು. ಆ ಎಲ್ಲ ಅರ್ಥಗಳು ಈ ಮೂರು ಅರ್ಥಗಳಲ್ಲೇ ಸಮಾವೇಶಗೊಳ್ಳುವವು. ಹೀಗೆ ಲಿಂಗ ತತ್ವವು ಬಹು ವಿಶಾಲವ್ಯಾಪಕ ಅರ್ಥವನ್ನು ಪಡೆದಿದೆ. ವೀರಶೈವರು ಇದನ್ನರಿತು ವರ್ತಿಸಬೇಕು.

# ಆತ್ಮಾನಂದ

[ ಲೇಖಕರುಃ- ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ. ]



ಆತ್ಮ ಹಾಗೂ ದೇಹ ಇವು ಒಂದನ್ನೊಂದು ಪರಸ್ಪರ ಸಮ್ಮಂಧಿಸಿ ಕೊಂಡಿರುವದರಿಂದ ಒಂದರಿಂದೊಂದು ಪರಸ್ಪರ ದುಃಖವನ್ನನುಭವಿಸುತ್ತವೆ. ಆತ್ಮಜ್ಞಾನಿಯಾದವನಿಗೆ ಮಾತ್ರ ಇಂಥ ದುಃಖವು ದುಃಖವೆನಿಸದು. ಆತ್ಮವು ಸದಾನಂದವಾಗಿದೆ. ಆದುದರಿಂದ ಆತ್ಮಜ್ಞಾನಿಯೂ ಸದಾನಂದನಾಗಿರುತ್ತಾನೆ. ದುಃಖವು ಈ ಮಿಥ್ಯವಾದ ದೇಹಕ್ಕಿದೆ ಹೊರತು ಈ ನಿತ್ಯವಾದ ಆತ್ಮಕ್ಕಿಲ್ಲ. ಆದರೆ ಈ ದೇಹಕ್ಕೆ ಆತ್ಮವು ಜೀವನದ ಅಂತ್ಯದ ವರೆಗೆ ಕೂಡಿಕೊಂಡು ಸಾಗುವ ಸಾಧನವಾದ ಮೂಲಕ ಅಲ್ಪಜ್ಞಾನಿಯು ಇವೆರಡರ ಮರ್ಮವನ್ನರಿಯದೆ ಸರ್ವ ದುಃಖವನ್ನು ದುಃಖವೆಂದೇ ಬಗೆದು ಸುಖಿಯಾದ ಆತ್ಮಕ್ಕೂ ದುಃಖಾಗ್ನಿಯಲ್ಲಿ ಕೆಡುಹಿ ತನ್ನ ಜೀವನವನ್ನೇ ಹಾಳುಮಾಡಿಕೊಳ್ಳುವನು.

ಪಂಚೇಂದ್ರಿಯಗಳಾದ ಶಬ್ದ, ಸ್ಪರ್ಶ, ರೂಪು, ರಸ, ಗಂಧಾದಿಗಳಿಂದ ದುಃಖವಾವರಿಸುವದೂ ಕೂಡ ಕೇವಲ ಅಲ್ಪಜ್ಞಾನಿಗೆ ಮಾತ್ರ. ಆತ್ಮಜ್ಞಾನಿಯು ಇವಾವನ್ನೂ ಲೆಕ್ಕಿಸನು. ಆತನು ಶಬ್ದವನ್ನು ಕೇವಲ ಶಬ್ದವೆಂದೇ ಬಗೆಯುವನು. ಆ ಶಬ್ದದಲ್ಲಿರುವ ಶಕ್ತಿಯಾದ ಹೊಗಳಿಕೆ ತೆಗಳಿಕೆಗಳೆಂಬ ಶಕ್ತಿಯನ್ನು ಮೀರಿದ ಆತ್ಮಶಕ್ತಿಯು ಆತನಲ್ಲಿರುವದರಿಂದ ಹೊಗಳಿಕೆಗೆ ಹಿಗ್ಗದೆ, ತೆಗಳಿಕೆಗೆ ಕುಗ್ಗದೆ ತನ್ನ ನಿಜನಿಲುವಿನಲ್ಲಿ ಸ್ಥಿರವಾಗಿ ನಿಲ್ಲುವನು. ಇದರಂತೆ ಸ್ಪರ್ಶ, ರೂಪು, ರಸ, ಗಂಧಗಳಲ್ಲಿರುವ ಶಕ್ತಿಯು ಕೂಡ ಆತನ ಸನಿಹಕ್ಕೆ ಸುಳಿದರೂ ಮಿಥ್ಯವಾದ ಅವುಗಳಿಗಾಗಿ ಆತನು ಮನಸೋಲನು. ತನ್ನ ಮನವೆಂಬ ಹಕ್ಕಿಯನ್ನು ಆತ್ಮಾಕಾಶದಲ್ಲಿ ತೂರಿಬಿಟ್ಟು ಈ ಜಡದೇಹಕ್ಕಾಗುವ ಸಾವು-ನೋವುಗಳನ್ನೂ ಆತನು ಲೆಕ್ಕಿಸನು. ಇಂಥ ಜೀವಿಗಳಿಂದಲೇ ಪವಾಡಗಳ ಸಾಧ್ಯತೆಯು. ಅಂಥ ಪವಾಡಪುರುಷರು ನಮ್ಮ ದೇಶದಲ್ಲಿ ಅಸಂಖ್ಯರಾಗಿ ಹೋಗಿದ್ದಾರೆ. ಅಂಥವರ ಚರಿತೆಯನ್ನು ಕೇಳಿದ ಇಂದಿನ ಜನ ಚಕಿತರಾಗಿ, ಇಂಥ ಮುಂದುವರಿದ ವಿಶ್ವದಲ್ಲಿ ಅಸಾಧ್ಯವಾದ ಅಂಥ ಕಾರ್ಯಗಳನ್ನು ಸಾಧ್ಯಮಾಡಿಕೊಳ್ಳಲು ಹೇಗೆ ಶಕ್ಯ ? ಎಂದು ಪವಾಡ

ಗಳನ್ನು ಹಲವರೇಕೆ ಇಂದಿನ ಸುಶಿಕ್ಷಿತರೆಲ್ಲರೂ ನಂಬದವರಾಗಿದ್ದಾರೆ. ಏಕೆಂದರೆ, ಇಂದಿನ ಶಿಕ್ಷಣದಲ್ಲಿ ಆತ್ಮಜ್ಞಾನದ ಅಂಶವೂ ಕೂಡ ಇಲ್ಲ. ಇಂದಿನ ಸರಕಾರ ಹಾಗೂ ಜನತೆ ಶಿಕ್ಷಣದ ಮರ್ಮವನ್ನರಿಯದ ಕಾರಣ ಇಂದಿನ ವಿದ್ಯಾರ್ಥಿಗಳಿಗೆ ಆತ್ಮಜ್ಞಾನವೇಕೆ ಗೃಹಜ್ಞಾನವೂ ಕೂಡ ಶೂನ್ಯ. ಇಂದು ಶಿಕ್ಷಣ ಪಡೆವ ವಿದ್ಯಾರ್ಥಿಗಳಿಗಾಗಲಿ ವಿದ್ಯಾರ್ಥಿಗಳ ಪಾಲಕರಿಗಾಗಲಿ ಅಕ್ಷುಗಳಲ್ಲಿ ದೊಡ್ಡ ದೊಡ್ಡ ಆಫೀಸುಗಳೂ, ಆಸನಗಳೂ ಮುಂತಾದ ಮನೋಭಾವನೆಯ ಚಿತ್ರಗಳ ಸುಳಿದಾಟವೇ ಸುಳಿದಾಟ. ವಿದ್ಯಾರ್ಥಿಗಳ ಪಾಲಕರು ನೌಕರಿ ಎಂಬ ಪಾಯೆಯ ಮೇಲೆ ತಮ್ಮ ಮಕ್ಕಳ ವಿದ್ಯಾಗೋಡೆಯನ್ನು ಕಟ್ಟಲು ಪ್ರಾರಂಭಿಸುವರು. ಆದರೆ ವಿಶ್ವದಲ್ಲಿ ಮಿತಿಮೀರಿ ಸುರಿಯುತ್ತಿರುವ ವ್ಯಸನ, ನೋಟ, ಮುಂತಾದ ಮಳೆಗಳಿಂದ ಆ ಗೋಡೆಯು ಉರುಳುವ ಸಂಭವವಿದ್ದಲ್ಲಿ ಹಣಕ್ಕೇನು ಕೊರತೆ ? ಇಂದಿನ ಯುಗದಲ್ಲಿ ಹಣವಿದ್ದವನ ಅನ್ಯಾಯವೂ ಕೂಡ ನ್ಯಾಯವಾಗುವ ಮಟ್ಟಿಗೆ ಮುಟ್ಟಿದೆ ಇಂದಿನ ಶಿಕ್ಷಣ.

ಆತ್ಮಜ್ಞಾನಿಯು ಈ ದೇಹವನ್ನು ಆತ್ಮಪೋಷಣೆಯ ಹಾಗು ಪರೋಪಕಾರ, ಕರ್ತವ್ಯಪಾಲನೆಯ ಮತ್ತು ವಿಶ್ವೋನ್ನತಿಗೆ ಸಾಧನವಾದ ಗೃಹವೆಂದು ಬಗೆಯುವನು. ಗೃಹವನ್ನು ಶುದ್ಧವಾಗಿಡುವಂತೆ ಈ ಶರೀರವನ್ನು ಶುದ್ಧವಾಗಿರಿಸುವಲ್ಲಿ ಮಾತ್ರ ಹೆಣಗುವನು. ಮನವು ತಾಳ್ಮೆ ಸಹಿಸದುದಾಗಿರುತ್ತದೆ. ಅದರ ಜೊತೆಯಾಗಿ ಆತ್ಮವು ಸರ್ವರಲ್ಲಿಯೂ ನೆಲೆಸಿರುತ್ತದೆ. ಈ ವಿಶ್ವದ ಸರ್ವ ಅಣು ರೇಣು ತಿಲಕಾಷ್ಟಗಳೂ ಕೂಡ ಬೋಧಕ ವಸ್ತುಗಳಾಗಿವೆ. ದೇಹಕ್ಕೆ ಹಾಗು ಆತ್ಮಜ್ಞಾನಕ್ಕೆ ಸಂಬಂಧಿಸಿಕೊಡುವ ನೇತ್ರಗಳು ಹಾಗು ನೇತ್ರದಿಂದ ಮನಕ್ಕೆ ತಿಳಿಸಲು ಜ್ಞಾನತಂತುಗಳು ಇಷ್ಟೆಲ್ಲ ಏರ್ಪಾಡಿದ್ದರೂ ಕೂಡ ಆತ್ಮಜ್ಞಾನದ ಅನುಭವವಿಲ್ಲದ ಮೂಲಕ ದೇಹದ ಜೀವಿತಕ್ಕೆ ಅವಶ್ಯವಾದ ಯಾವದಾದರೊಂದು ವಸ್ತುವಾಗಲಿ, ಆಹಾರವಾಗಲಿ ಕೊರತೆಯಾದಲ್ಲಿ ಅಲ್ಪಮತಿಯು ಇನ್ನೋರ್ವರಲ್ಲಿ ಆ ವಸ್ತುವಿದ್ದಲ್ಲಿ ಅಪಹರಿಸಲು ಪ್ರಯತ್ನಿಸುವನು. ಆ ಸಮಯದಲ್ಲಿ ದೀರ್ಘವಾದ ವಿಚಾರವು ಆತನಲ್ಲಿ ಒಡಮೂಡುವವು. ಏಕೆಂದರೆ ಶರೀರಕ್ಕಾಗಿ ಹೆಣಗುವ ಆತನು ಆ ಶರೀರಕ್ಕೆ ಮುಂದೆ ಕೂಡ ಕಷ್ಟವಾಗಬಾರದೆಂಬ ಉದ್ದೇಶದಿಂದ ಮಾತ್ರ. ಆ ಕಾಲದ ದೀರ್ಘ ವಿಚಾರವನ್ನು ಮುಂದುವರಿಸಿದಲ್ಲಿ ಮುಂದೆ ಆವರಿಸುವ ಕಷ್ಟವನ್ನೂ ಕಲ್ಪಿಸಿ ಕೊಡುವಂಥ ದಿವ್ಯ ಜ್ಞಾನವು ಆತನಲ್ಲಿ ಒಡಮೂಡುತ್ತದೆ. ಆದರೆ ಅದನ್ನು

ಅರಿಯಲು ಸಹ ಮನವನ್ನು ಚಲಿಸಗೊಡದಷ್ಟು ದೇಹಕ್ಕೇ ಮೀಸಲಾಗಿರಿಸಿದ ಮನ (ದೇಹ) ವು ಶಿಕ್ಷೆಗೆ ಗುರಿಯಾಗುವದೇ ವಿನಹ ಆತ್ಮವು ಮನದ ಆ ವಿಚಿತ್ರ ನಡೆಗೆ ಮಾತ್ರ ಹಿಂದಿನಿಂದ ವ್ಯಥೆ ಪಡುತ್ತದೆ. ಹೀಗೆ ಆತ್ಮಜ್ಞಾನವು ಹಲವರಿಗೆ ಹಿಂದಿನಿಂದ ದೊರೆಯುವದು. ಇಂಥ ಉದಾಹರಣೆಗಳನ್ನು ನಾವು ವಾಲ್ಮಿಕಿ ಹಾಗು ಇನ್ನಿತರ ಮಹಾ ಮಹಾ ಮುನಿಗಳ ಪೂರ್ವಚರಿತೆಯಿಂದ ತಿಳಿದುಕೊಳ್ಳಬಹುದು.

ಆತ್ಮಜ್ಞಾನವಿಲ್ಲದ ಮಾನವನು ಮಾನವನಲ್ಲ. ಆತನೊಬ್ಬ ಮಾನವರೂಪಿ ಪಶುವೆಂದರೂ ಸರಿ. ಇಂಥ ಮಾನವರಿಂದಲೇ ಕಾರಾಗ್ರಹಗಳು ತುಂಬಿವೆ. ವಕೀಲರು ಹಾಗು ಇನ್ನಿತರ ಪ್ರಮುಖರು ವ್ಯವಸಾಯ ನಡೆಸಿದ್ದಾರೆ. ಸರಕಾರವು ಕೋಟ್ಯಾನುಕೋಟಿ ಹಣಸುರಿಯುತ್ತಿರುವದಾದರೂ ಮಾನವ ರೂಪಿ ಜನಕ್ಕಾಗಿಯೇ. ಹೀಗಾಗಲು ಕಾರಣವೇನೆಂದರೆ, ಇಂದಿನ ಶಿಕ್ಷಣ ದಲ್ಲಿ ಆತ್ಮಜ್ಞಾನದ ಅಭಾವವೇ ಕಾರಣ. ಹೀಗಾಗಿ ರಾಷ್ಟ್ರದ ಉತ್ಪನ್ನವೂ ಕುಗ್ಗಹತ್ತಿದೆ. ರಾಷ್ಟ್ರದ ನಿಜವಾದ ಸಂಪತ್ತೇ ಆತ್ಮಜ್ಞಾನ. ಅದರ ಅಭಾವ ದಿಂದ ಶರೀರಸೌಂದರ್ಯದ ನವನವೀನ ಮಾದರಿಯ ಉಡುಪುತೊಡಪು ಐಶ ಆರಾಮುಗಳಿಗೆ ಕೊರತೆಯಾಗುವ ಪ್ರಮಾಣ ಸಂಬಳವಿದ್ದಲ್ಲಿ "ಆಮರಣ ಉಪವಾಸ"ವೆಂಬ ಹಲಿಗೆಯೊಂದಿಗೆ ಆಯಾ ಆಫೀಸುಗಳೆದುರು ತಮಗೆ ಶಕ್ಯ ವಾದ ದಿನದ ಮಟ್ಟಿಗೆ ಉಪವಾಸ ಕೂಡ್ರುವವರನ್ನೂ, ಸಂಪು ಹೂಡುವವರನ್ನೂ ಕಾಣದ ಜನರಿಲ್ಲ. ಹೀಗಾಗಿ ಸರಕಾರಕ್ಕೆ ಯಾವ ದಾರಿಯೂ ತೋಚದಾಗಿದೆ.

ವಿಶ್ವದಲ್ಲಿ ಧನವಂತರನ್ನು ನಾವು ಸುಖಿಗಳೆಂದು ಭಾವಿಸುತ್ತೇವೆ. ದುಡಿದ ಪ್ರತಿಫಲದಿಂದ ಜೀವಿಸುವ ಜೀವಿಗಳಿಗೆ ದುಃಖಿಗಳೆಂದು ಭಾವಿಸು ತ್ತೇವೆ. ಇಂಥ ಸುಖಿಯು ಸುಖಿಯಲ್ಲ. ದುಃಖಿಯು ದುಃಖಿಯಲ್ಲ. ಇವೆ ರಡನ್ನೂ ಅರಿದಾತನು ಜ್ಞಾನಿಯಲ್ಲ. ಧನಿಕನು ತನ್ನ ಹಣದಲ್ಲಿ ಒಂದು ಕಾಸು ಕಡಿಮೆಯಾದರೆ ದುಃಖಿಯು. ಪರರು ದೋಚಿಕೊಳ್ಳುವರೇನೋ ಎಂಬ ಭೀತಿ. ಹೀಗೆ ಆತ್ಮಜ್ಞಾನವಿಲ್ಲದ ಆತನೂ ದುಃಖಿಯೇ. ದುಡಿದ ಪ್ರತಿಫಲ ದಿಂದ ಉಂಡುಟ್ಟು ಜೀವಿಸುವ ಜೀವಿಯು ಹೆಚ್ಚಿನ ಆಶೆಗಾಗಿ ದುಃಖಿಸಿ ಸ್ವರ್ಗಸುಖದಂಥ ಸುಖವನ್ನು ಹಾಳುಮಾಡಿಕೊಳ್ಳುವನು. ಇಂಥ ಸುಖ ದು:ಖಗಳಿಗೆ ಸುಖದು:ಖವೆಂದು ಅರಿದಾತನು ಮಾತ್ರ ಜ್ಞಾನಿಯಲ್ಲ. ಇವೆರಡ ರಲ್ಲಿಯ ಸುಖದುಃಖ ಶಾಶ್ವತವಲ್ಲ. ನಿಜವಾದ ಸುಖವು ಆತ್ಮಜ್ಞಾನದಲ್ಲಿದೆ.

ಪ್ರಪಂಚದಲ್ಲಿ ಮಾನವನು ವ್ಯರ್ಥವಾಗಿ ಬಳಲುವನು. ಆತನಿಗೆ ಬಳಲಿಕೆಯೇ ಇಲ್ಲ. ದೇಹವು ತಾನು ಮಾಡಿದ ಕೃತ್ಯದ ಪ್ರಾಯಶ್ಚಿತ್ತವನ್ನು ಅನುಭವಿಸುವದು. ಆದರೆ ಆತ್ಮವು ಇದಕ್ಕೆ ಸಮ್ಬಂಧವಾಗದೆ ಸದಾನಂದದಲ್ಲಿಯೇ ಲೀನವಾಗಿರುತ್ತದೆ.

ಒಂದಾನೊಂದು ಕಾಲಕ್ಕೆ ಹೊಳಪಿನ ಅಕ್ಷುಗಳು ತನ್ನದಲ್ಲದ ಸುಂದರ ವಸ್ತುವನ್ನು ತನ್ನದನ್ನಾಗಿ ಮಾಡಿಕೊಳ್ಳಲು ಹವಣಿಸಿದುದಕ್ಕೆ ಇಂದು ನಿಸ್ತೇಜವಾಗಿವೆ. ಅಂದು ನುಡಿದ ಬಿರುನುಡಿಯು ಪರಿಣಾಮವಾಗಿ ಇಂದು ಈ ದೇಹಕ್ಕೆ ಕಷ್ಟವೊದಗಿದೆ. ಅಂದಿನ ಬಿಂಕು ನಡೆಗೆ ಇಂದು ಈ ದೇಹಕ್ಕೆ ಶಿಥಿಲತೆಯನ್ನುಂಟುಮಾಡಿ ಬಾಗಿಸಿದೆ. ಅಂದು ಅಲ್ಲಸಲ್ಲದ ನುಡಿಗಳನ್ನಾಲಿಸಿದ ಈ ಕರ್ಣಗಳು ಇಂದು ಗೋಡೆಯಂತೆ ಯಾವುದನ್ನೂ ಕೇಳದಂತಾಗಿವೆ. ಎಂದು ಆತ್ಮಜ್ಞಾನಿಯು ಬಗೆಯುವನು. ಅವರೆ ಇದನ್ನರಿಯದೆ ಎಲ್ಲವನ್ನೂ ದುಃಖವೆಂದೇ ಬಗೆದಲ್ಲಿ ಇಂದಿನ ಅಲ್ಪಸುಖವೂ ದುಃಖಮಯವಾಗಿ ಪರಿಣಮಿಸಿ ಆತನ ಬಾಳು ಬಳ್ಳಿಯನ್ನು ನಾಶಪಡಿಸುತ್ತದೆ.

ವಿಶ್ವದಲ್ಲಿ ಯಾವ ಆಧಾರವಿಲ್ಲದೆ ಯಾವದೆ ವಸ್ತುವಾಗಲಿ, ಜೀವವಾಗಲಿ ಬಾಳಿ ಬೆಳೆಯಲು ಶಕ್ಯವಿಲ್ಲ. ಪ್ರತಿಯೊಂದರ ಬಾಳೂ ಆಧಾರದ ತಳಹದಿಯಾಗಿದ್ದುದನ್ನು ನಾವು ಕಾಣುತ್ತೇವೆ. ಇಂದು ನಾವು ದೊಡ್ಡವರಾಗಿ, ತಜ್ಞರಾಗಿರುವದು ಯಾರಿಂದ ? ಮಾತಾಪಿತೃಗಳಿಂದಲ್ಲವೆ ? ಒಂದು ಬಳ್ಳಿಯು ಚನ್ನಾಗಿ ಬೆಳೆಯಲು ಒಂದು ಕಂಬವಾಗಲಿ, ಮರವಾಗಲಿ ಅದಕ್ಕೆ ಆಸರವಾಗಿದ್ದಲ್ಲಿ ಅದು ಚನ್ನಾಗಿ ಬೆಳೆದು ಶೋಭೆಯನ್ನೀಯುತ್ತದೆ. ಅದುವೇ ಆಧಾರವಿಲ್ಲದಿರುವದಾದರೆ ಹಲವರ ಕಾಲ್ಕೆಳಗೆ ನುಗ್ಗಾಗಿ, ಇಲ್ಲವೆ ತೊಡಕಿ ಹರಿದು ಹೋಗುತ್ತದೆ. ಹೀಗೆ ಪ್ರತಿಯೊಂದು ಜೀವಿಗಳ ಜೀವನವೂ ಆಸರೆಯಲ್ಲಿಯೇ ಇವೆ. ಇವುಗಳ ಅಧಿಪತಿಯಾದ ಮಾನವನು ಸರ್ವವನ್ನೂ ಸಮದೃಷ್ಟಿ ಭಾವಗಳಿಂದ ಕಂಡು ನಡೆಯಲು ಆತ್ಮಜ್ಞಾನವು ಅತ್ಯವಶ್ಯವಾದುದು. ಇಂಥವುಗಳಿಗಾಗಿ ಆತ್ಮಜ್ಞಾನಿಯ ಚಿಂತನವಿರುವದು. ಆದರೆ ಈ ಚಿಂತನಕ್ಕೆ "ಪರೋಪಕಾರ"ವೆಂಬ ಪ್ರತ್ಯಯವು. ಪರೋಪಕಾರವೇ ಮಾನವನಿಗೆ ಸರ್ವತೋಭೂಷಣ.

ಉಪಕಾರಕ್ಕೆ ಪ್ರತ್ಯುಪಕಾರ ಖಡ್ಗಕ್ಕೆ ಪ್ರತಿಖಡ್ಗ ನುಡಿಗೆ ಪ್ರತಿನುಡಿಗಳು ಹೀಗೆ ಸರ್ವವೂ ವಿಶ್ವದಲ್ಲಿ ಪ್ರತಿಯಾಗಿ ಇರುವದರಿಂದ ಆತ್ಮಜ್ಞಾನಿ

ಗಳಾದವರಿಗೆ ವಿಶ್ವವು ಮಾನ್ಯತೆಯನ್ನು ಮಾನಮರ್ಯಾದೆಯನ್ನು ಯಥೇಚ್ಛೆಯಾಗಿ ಕೊಡುವದೇಕೆ ಪೂಜ್ಯಭಾವನೆಯಿಂದ ಪಾದೋದಕವನ್ನೂ ಸಹ ಸೇವಿಸುವದನ್ನು ನಾವು ಕಾಣುತ್ತೇವೆ. ಇಂಥ ಜೀವಿಗಳ ಜೀವನವೇ ಜೀವನ. ಇಂಥ ಮಾನವರೇ ದೇವ ಮಾನವರು.

ಮಾನವನು ನಾನು ನನ್ನದೆಂಬ ದುರಭಿಮಾನದ ಬೀಜವನ್ನು ನಾಶನಾಶಗೊಳಿಸಲು ಆತ್ಮಜ್ಞಾನವೆಂಬ ಉರಿಯನ್ನು ಉಪಯೋಗಿಸಬೇಕು. ಈ ದೇಹವೆಂಬುದೊಂದು ಗೃಹವೆಂದು ಬಗೆಯಬೇಕು. ಇನ್ನು ಅಲ್ಪಜ್ಞಾನಿಗಳು ಈ ದೇಹವೇ ತನ್ನದೆಂದು ಬಗೆದು ಈ ದೇಹಕ್ಕೆ ಏನಾದರೂ ಜಾಡ್ಯತಗಲಿದರೆ ದೇವವಿಗ್ರಹಕ್ಕೆ ಅನಂತ ಬೇಡಿಕೆಗಳನ್ನು ಬೇಡಿಕೊಳ್ಳುವರು. ಆದರೆ ಆ ದೇಹವು ತಾನು ಸೇವಿಸಿದ ಸೇವನೆಯಲ್ಲಿಯ ದೋಷಗಳಿಂದ ಅದು ದುಃಖವನ್ನನುಭವಿಸುತ್ತದೆಂಬರಿವು ಅವರಿಗಿರುವದಿಲ್ಲ.

ಇನ್ನು ಹಲವರು ಅಪಾರವಾಗಿ ಹಣ ಸಂಪಾದನೆ ಮಾಡುವರು. ಆ ಹಣದಲ್ಲಿ ಒಂದು ಕಾಸು ಕಡಿಮೆಯಾದರೆ ವ್ಯಥೆಪಡುವರು. ಆದರೆ ಆತ್ಮಜ್ಞಾನವೆಂಬ ಸಂಪತ್ತನ್ನು ಗಳಿಸಿಕೊಂಡಲ್ಲಿ ಅದು ಬೆಳವಣಿಗೆಯಾಗುತ್ತಲೇ ಸಾಗುವದು. ಇಂಥ ಜೀವಿಯ ಜೀವನವೇ ಜೀವನ. ಅವನೇ ಮಹಾಭಾಗ್ಯವಂತ. ಮಿಥ್ಯ ವಸ್ತುವಿಗಾಗಿ ನಿತ್ಯವಾದ ಆತ್ಮವನ್ನು ನಾಶಗೊಳಿಸಿಕೊಂಡವನೇ ಬಡವ. ಒಡವೆ ವಸ್ತುಗಳನ್ನು ಇನ್ನಿತರರು ಸೆಳೆದುಕೊಳ್ಳಬಹುದು. ವ್ಯಯವಾಗಬಹುದು ಆದರೆ ಆತ್ಮಜ್ಞಾನವು ಸದಾ ಬೆಳವಣಿಗೆಯಾಗುತ್ತಲೇ ಸಾಗುವದು. ಇಂಥ ಸಂಪತ್ತನ್ನು ಗಳಿಸುವದಕ್ಕೆ ಕಷ್ಟಬೇಕಿಲ್ಲ. ವಿಶ್ವವೆಂಬ ಕೈಗನ್ನಡಿಯಲ್ಲಿ ಕಾಣುತ್ತದೆ. ಆ ಕನ್ನಡಿಯನ್ನೇ ಮುಂದಿಟ್ಟುಕೊಂಡ ಮಾನವನಿಗೆ ತನ್ನ ನಿಲವು ತನಗೆ ಕಾಣದಿರ್ದರೆ ತನ್ನ ಅಕ್ಷುವಿನ ದೋಷವೆಂದೇ ತಿಳಿದುಕೊಳ್ಳಬೇಕು. ಆ ಅಕ್ಷುಗಳನ್ನು ಶುದ್ಧೀಕರಿಸಿ, ವಿಶ್ವದ ವೈಚಿತ್ರ್ಯ ಚಿತ್ರವನು ತೋರಿಸಲು ಜ್ಞಾನಯೋಗಿಗಳು ತಮ್ಮ ಜ್ಞಾನಭಾಂಡಾರವನ್ನು ಸದಾಕಾಲ ತೆರುವಿಟ್ಟಿದ್ದಾರೆ. ಇಂಥ ಸುಲಭ ಸೌಖ್ಯ ಜೀವನದಿಂದ ಜೀವಿಸುವ ಜೀವನವೇ ಜೀವನ.

# ಶರಣರ ತುಂಬಿ.

### ಪರಿಚಯಕಾರರು: — ಜ್ಞಾನೋಪಾಸಕ.

ವಿಶ್ವಸಾಹಿತ್ಯದಲ್ಲಿ ಕನ್ನಡ ಸಾಹಿತ್ಯಕ್ಕೆ ಒಂದು ಉಚ್ಚ ಸ್ಥಾನವು ದೊರಕಿದೆ ಎಂಬುದು ಕರ್ನಾಟಕ ಸಾಹಿತ್ಯ ಹೃದಯವನ್ನು ಹೊಕ್ಕವರಿಗೆ ಅರಿವಾಗಿದೆ. ಕರ್ನಾಟಕದಲ್ಲಿ ಸಾಹಿತ್ಯ ಕ್ಷೇತ್ರದ ಮೂಲಕ ಇಡೀ ಜನತೆಯ ಜೀವನದಲ್ಲಿ ಕ್ರಾಂತಿಯನ್ನೆಬ್ಬಿಸಿ, ಜನಾಂಗಕ್ಕೆ ಅನುಕೂಲ ಅವಕಾಶಗಳನ್ನು ಕಲ್ಪಿಸಿ ಸಾಹಿತ್ಯ ಪ್ರಚಾರವನ್ನೇ ಜ್ಞಾನಪ್ರಸಾರಣೆಯನ್ನಾಗಿ ಮಾಡಿ ಭಕ್ತಿಯ ಮಹಲಲ್ಲಿ ನಿಂತು ಭಗವಂತನ ಸಂದರ್ಶನ ಮಾಡಿದವರು ಶಿವಶರಣರು. ಶರಣಸಾಹಿತ್ಯದ ಸೃಷ್ಟಿಕರ್ತರೇ ಶಿವಶರಣರು. ಹನ್ನೆರಡನೆ ಶತಮಾನದಿಂದ ಈಚೆಗೆ ಬಂದ ಸಾಹಿತಿಗಳೆಲ್ಲರೂ ಒಂದಿಲ್ಲ ಒಂದು ಬಗೆಯಲ್ಲಿ ಶರಣಸಾಹಿವನ್ನು ಉಪಯೋಗಿಸಿಕೊಂಡಿದ್ದಾರೆ. ಇದರ ಫಲವಾಗಿ ಶರಣಸಾಹಿತ್ಯದ ಸೊಗಸು ಮಾತ್ರ ಅಳಿದಂತಿರಲು ಅವಕಾಶವಾಗುತ್ತಿತ್ತು. ಬರಬರುತ್ತ ಕಾಲಸ್ಥಿತಿಗತಿಯಿಂದಲೋ ಏನೋ ಶರಣಸಾಹಿತ್ಯವು ಶಿವಶರಣರ ಜೀವನ ಸಂಗತಿಯ ಭಿನ್ನಾಭಿಪ್ರಾಯಗಳಿಂದ ತನ್ನ ಸಹಜ ತತ್ವವನ್ನು ಕಳೆದುಕೊಳ್ಳುವಂತಾಯಿತು. ಇಪ್ಪತ್ತನೇ ಶತಮಾನದ ಆದಿಭಾಗದಲ್ಲಿ ಮೈಸೂರು ಕರ್ನಾಟಕದಲ್ಲಿ ಶರಣರ ವಿಚಾರ ಪ್ರಭೆಯು ಮುಚ್ಚೇರುತ್ತಿತ್ತು. ಈ ಮುಬ್ಬು ಮಡಿಯಲು ಅವಕಾಶವಾಗುವಂತೆ ಟೊಂಕ ಕಟ್ಟಿ ನಿಂತು ಸೇವಾದೀಕ್ಷಾ ಪರರಾಗಿ 'ಶರಣರ ತುಂಬಿ' ಯಾಗಿ ಕರ್ನಾಟಕದಲ್ಲಿ ಉದಯವಾದರು. ಇವರೇ ಜೀರಗೆ ಬಸವಲಿಂಗಪ್ಪನವರು. ಕಮಲಪತ್ರ ಜಲದಂತೆ ಜಗತ್ತಿಗೆ ಅಂಟಿಯೂ ಅಂಟದಂತೆ ಬಾಳಿ, ಬಾಳನ್ನು ಧಾರ್ಮಿಕ ತೈಲದಿಂದ ಪರಿಶುದ್ಧಿಸಿದರು.

ಇವರ ಪೂರ್ವಮನೆತನದವರು ಬಳ್ಳಾರಿಯವರು ಬಳ್ಳಾರಿಯಿಂದ ಬೆಂಗಳೂರಿಗೆ ಬಂದುವಾಸಿಸಿದರು. ಇವರು ಜೀರಗೆ ಮನೆತನಕ್ಕೆ ಸೇರಿದವರು. ಇವರ ಕುಲದ ಇತಿಹಾಸವು ಕಟ್ಟಿಯ ಬಸವೇಶ್ವರರ ವಚನಗಳಲ್ಲಿ ಇಂತಿದೆ.

" ಶ್ರೀ ರುದ್ರಮುನಿ ಶಿವಾಚಾರ್ಯನ ತಂದೆಯೂ, ಶ್ರೀ ಮರುಳಸಿದ್ಧೇಶ್ವರನ ಗುರುವೂ ಆದ ಶ್ರೀ ರೇಣುಕಾಚಾರ್ಯನಿಂದ ಗರ್ಭ ಶಿಶುವಾಗಿರುವಾಗಲೇ ಹಿಂಯಮನ್ನಣೆಯನ್ನು ಪಡೆದ ಕಾರಣಿಕ ಪುರುಷನೂ, ಲಕ್ಷೋಪ

ಲಕ್ಷ ಪತಿತರನ್ನು ಪಾವನರನ್ನಾಗಿ ಮಾಡಿ ಲೋಕೋದ್ಧಾರವನ್ನು ಮಾಡಿದ ಮಹಾಶಿವಯೋಗಿಯೂ, ಶ್ರೀ ಅಲ್ಲಮಪ್ರಭು ಮತ್ತು ಶ್ರೀ ಚನ್ನಬಸವೇಶ್ವರ ಇವರ ತರುವಾಯ ಶ್ರೀ ಶೂನ್ಯ ಸಿಂಹಾಸನವನ್ನು ಅಲಂಕರಿಸಿ ಪ್ರಮಥರ ವಿಶಾಲ ತತ್ವಗಳನ್ನು ವಿಶ್ವದಲ್ಲಿ ವಿಸ್ತರಿಸಿದ ವೀರಶೈವ ಧರ್ಮದ ಮೂರನೆಯ ಜಗದ್ಗುರುವೂ ಆದಂಥ ಸೊನ್ನಲಿಗೆಯ **ಶ್ರೀ ಸಿದ್ಧರಾಮೇಶ್ವರ,** ಶ್ರೀ ಬಸವಾದಿ ಪ್ರಮಥರು ಲೋಕಕಲ್ಯಾಣಕ್ಕಾಗಿ ಕನ್ನಡ ತಾಯಿನುಡಿಯಲ್ಲಿ ನಿರೂಪಿಸಿದ ಷಟ್‌ಸ್ಥಲ ಸಿದ್ಧಾಂತವೆಂಬ ಏಳನೆಯ ದರ್ಶನ ಶಾಸ್ತ್ರವನ್ನು ಸಂಸ್ಕೃತದ ಮೋಹವಿರುವ ಪಂಡಿತರ ಸಲುವಾಗಿ ಸಂಸ್ಕೃತ ಭಾಷೆಯಲ್ಲಿ ನಿರೂಪಿಸಬೇಕೆಂದು ರೇಣುಕಾಗಸ್ತ್ಯ ಸಂವಾದ ರೂಪದಲ್ಲಿ 'ಸಿದ್ಧಾಂತ ಶಿಖಾಮಣಿ' ಎಂಬ ಸಂಸ್ಕೃತದ ಮಹಕೃತಿಯನ್ನು ರಚಿಸಿದಂಥ ಶ್ರೀ ಶಿವಯೋಗಿ ಶಿವಾಚಾರ್ಯ, ತನ್ನ ಅಪ್ರತಿಮವಾದ ಪದವಿಯನ್ನೂ ನಾಡಿನ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಅಭೂತ ಪೂರ್ವವಾದ ರೀತಿಯಲ್ಲಿ ದಾನ ಮಾಡಿ ನಾಡಿನ ಇಡಿಯ ಜನಸಮುದಾಯವನ್ನೇ ಋಣಿಯಾಗಿ ಮಾಡಿದಂಥ ಬೆಳಗಾಂವಿಯ ತ್ಯಾಗವೀರ ಶ್ರೀ ಲಿಂಗಪ್ಪ ಜಾಯಪ್ಪ ಸರದೇಸಾಯಿ ಉಜ್ವಲ ಧರ್ಮಾಭಿಮಾನಿಯೂ, ಸಂಗೀತ, ನಾಟಕ, ಕಲಾಪ್ರೇಮಿಯೂ, ರಾಜಕಾರಣಪಟುವೂ, ಹಿರಿಯ ಶ್ರೀಮಂತನೂ, ಆದಂಥ ಹೊಳಲಗುಂದಿಯ ಶ್ರೀ ಪೊಂಪನಗೌಡ ಶಿವಪೂಜಾ ದುರಂಧರನೂ, ವ್ಯವಹಾರಚತುರನೂ, ಷಟ್‌ಸ್ಥಲಾನುಭವಿಯೂ, ಉದಾರಮತಿಯೂ ಆದಂಥ ತುಮಕೂರಿನ ಶ್ರೀ ದಾನಿರುದ್ರಾರ್ಯ, ಇವರೇ ಮೊದಲಾದ ಮಹಾತ್ಮರುಗಳ ಬಳಿವಿಡಿದು ಬಂದ ಪುರಾತನವಾದಂಥ ಶ್ರೀ ಶಿವಯೋಗಿ ವಂಶವು" ಜೀರಗೆ ಬಸವಲಿಂಗಪ್ಪನವರು ತಮ್ಮ ತಂದೆಗೆ ಏಕ ಮಾತ್ರ ಪುತ್ರರಾಗಿದ್ದರು. ಮೊಳೆಯಲ್ಲಿಯೇ ಬೆಳೆಯ ಗುಣವು ಕಾಣುವುದಂತೆ. ಸ್ವಧರ್ಮಾಭಿಮಾನವು ಅಚ್ಚಳಿಯದಂತೆ ಆಗಾಗ್ಗೆ ಅಂಕುರವಾಗುತ್ತಿತ್ತು.

ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗ ಮಾಡಿ ಬಿ. ಎ. ತರಗತಿಯಲ್ಲಿ ಬಹು ಚಟುವಟಿಕೆಯಿಂದ ಕೆಲಸಮಾಡುತ್ತಿದ್ದರು. ಅರಿಯುವುದೇ ಜ್ಞಾನ, ಅರಿತಂತೆ ಆಚರಿಸುವುದೇ ಕ್ರಿಯೆ ಎಂಬ ತತ್ವವನ್ನು ಇವರು ಚನ್ನಾಗಿ ಮನಗಂಡಿದ್ದರು. ವಿದ್ಯಾರ್ಥಿ ಜೀವನವು ಮುಗಿಯಿತು. ಅಧಿಕಾರದ ಅಂದಣವನ್ನು ಅಡರಿದರು. ಮೈಸೂರ ಸರಕಾರದಲ್ಲಿ ಮೊಟ್ಟ ಮೊದಲು ಸಬ್ ರಜಿಸ್ಟ್ರಾರ ಹುದ್ದೆಗೆ ಸೇರಿದರು. ಅಧಿಕಾರದ ಅವಧಿಯಲ್ಲಿ ಬಲು ಪ್ರಾಮಾಣಿಕತನದಿಂದ ನಡೆದರು. ವಚನದಲ್ಲಿ ಜಾಗ್ರತವಾದಂತೆಯೇ ಕ್ರಿಯೆಯಲ್ಲಿಯೂ

ಜಾಗ್ರತವಾಗಿ ಸತ್ಯಕ್ಕೆ ಅಂಜಿ ಧರ್ಮಕ್ಕೆ ತಲೆಬಾಗಿ ಜೀವನಪಥದಲ್ಲಿ ಹಾಯ್ದು ಹೋಗುತ್ತಿದ್ದರು. ಇವರಿದ್ದ ಹುದ್ದೆಯು ಸರ್ವಸಾಮಾನ್ಯವಾಗಿ ಲಂಚದ ಮನೆಯೇ ಸರಿಯು.

ಕಾಂಚನವೆಂಬ ನಾಯ ನೆಚ್ಚಿ ನಿಮ್ಮ ನಾನು ಮರೆದೆನಯ್ಯ
ಕಾಂಚನಕ್ಕೆ ವೇಳೆಯಲ್ಲದೆ ಲಿಂಗಕ್ಕೆ ವೇಳೆಯಿಲ್ಲ.
ಹಡಿಕೆಗೆ ಮೆಚ್ಚಿದ ಸೊಣಗನು ಅಮೃತದ ರುಚಿಯ ಬಲ್ಲುದೇ
ಕೂಡಲಸಂಗಮ ದೇವ.

ಇದು ಕಾರಣ ಇವರು ಎಂದೂ ಲಂಚಕ್ಕೆ ಯಾವ ಬಗೆಯಲ್ಲಿಯೂ ಕೈ ಹಾಕಿದವರಲ್ಲ. ಇದರಿಂದ ಇವರ ಸಹೋದ್ಯೋಗಿಗಳಿಗೆ ಜಿಗುಪ್ಸೆ ಜನಿಸಿ, ಇವರಿದ್ದರೆ ತಮಗೆ ಮಾತ್ರ ಒಂದು ಬಿಡಿಗಾಸು ಕೂಡ ಲಂಚವು ಲಭಿಸು ವದು ಕನಸೆಂದು ಅರಿತರು. ಸ್ವಾರ್ಥಕ್ಕಾಗಿ ಯಾವುದನ್ನೂ ಮಾಡಲು ಸಿದ್ಧರಾಗಿದ್ದ ಈ ಸಹೋದ್ಯೋಗಿಗಳು ಇವರನ್ನು ಇನ್ನಿತರ ಶಾಖೆಗೆ ಕಳು ಹಿಸಲು ಭಗೀರಥ ಯತ್ನಮಾಡಿದರು. ಇದೂ ಇಲ್ಲದೆ ಇವರಿಗೆ ಸಲ್ಲದ ಕಿರುಕಳವನ್ನು ಕೊಡಲಿಕ್ಕೆ ಅಪ್ರತ್ಯಕ್ಷವಾಗಿ ಆಗಾಗ್ಗೆ ಪ್ರಯತ್ನಿಸಿದರು. 'ಎಷ್ಟೋ ತೊಂದರೆ ತೊಡಕುಗಳು ಬಂದರೂ ನಾನು ಮಾತ್ರ ಪ್ರಮಾಣಿಕ ತೆಯನ್ನು ಬಿಡುವದಿಲ್ಲ.' ಎಂಬುದೇ ಇದರ ಭೀಷ್ಮಪ್ರತಿಜ್ಞೆಯು. ಹೀಗೆಯೇ ಕೆಲಸ ಮಾಡುತ್ತಿರಲು, ಈ ಸಹೋದ್ಯೋಗಿಗಳ ತರಲೆ ತೀಟೆಯು ಅಪ್ರತ್ಯ ಕ್ಷವಾಗಿ ಹೆಚ್ಚು ಹೆಚ್ಚಾಗುತ್ತಿರಲು ಅವರ ಕ್ರಿಯೆಯು ಇವರಿಗೆ ಅಸಹನೆ ಯಾಯಿತು. ಪರರಿಗೆ ತೊಂದರೆ ಕೊಡುವುದು ಮಾನವನಿಗೆ ಯೋಗ್ಯವಲ್ಲವು ಎಂದು ತಿಳಿದು ತಾನೇ ತಾವಾಗಿಯೇ ಇವರಿಂದ ಇವರು ದೂರವಾದರು. ಹೈಕೋರ್ಟ ಹೆಡ್ ಟ್ರಾನ್ಸಲೇಟರ್ ಪದವಿಯಿಂದ ನಿವೃತ್ತಿಗೊಂಡ ನಂತರ ಶರಣ ಜೀವನವನ್ನು ಪರಿಪಾಲಿಸಿ 'ಶರಣರ ತುಂಬಿ' ಯಾಗಿ ಝೇಂಕರಿಸಿ ದೈವೀಯ ಮಾನವತ್ವದ ಮಹಲನ್ನೇರಿದರು.

ತಮ್ಮ ಅಧಿಕಾರದ ಅವಧಿಯಲ್ಲಿ ಇವರು ಹಲವಾರು ಗ್ರಂಥಗಳನ್ನೂ, ಬರಹಗಳನ್ನೂ ಬರೆದರು. 'ಕವಿಯ ವ್ಯಕ್ತಿತ್ವವೇ ಶೈಲಿಯು' ಎಂಬುದು ಇವರ ಲೇಖನಗಳನ್ನು ಓದಿದವರಿಗೆ ಗೋಚರವಾಗುತ್ತದೆ. ಇವರ ಜೀವನವು ಎಷ್ಟು ಸರಳವೋ ಇವರ ಸಾಹಿತ್ಯವು ಅಷ್ಟೇ ಸರಳವಾಗಿದೆ. ಇವರಲ್ಲಿ ಅಡಗಿದ್ದ ಧರ್ಮನಿಷ್ಠೆ, ಸಾಹಿತ್ಯ ಪ್ರೇಮ, ಸರಳ ಜೀವನ, ಸಮಾಜ ಸೇವೆ,

ಸತ್ಯಾಶ್ರಯವು ಸಕಲರಿಗೂ ಮಾನವರಿಯಾಗಿದೆ. ವೀರಶೈವ ಧರ್ಮದ ಸ್ವಾತಂತ್ರ್ಯ ಹಾಗೂ ನಾವು ಗೌರವಗಳಿಗಾಗಿ ತಮ್ಮ ಇಡೀ ಬಾಳು ಬದುಕನ್ನೇ ಮುಡುಪಾಗಿಟ್ಟು ಸಮಾಜದುನ್ನತಿಗಾಗಿ ಕನ್ನಡ ದುಡಿಯನ್ನೇ ಹಿಡಿದು ಕನ್ನಡಮ್ಮನ ಉಡಿಯಲ್ಲಿಯೇ ದುಡಿದ ಕೀರ್ತಿಪುರುಷರು. ಬಸವಜಯಂತಿಯನ್ನು ಮೈಸೂರು ದೇಶದಲ್ಲಿ ಮೊಟ್ಟ ಮೊದಲು ಇವರೇ ಆಚರಣೆಗೆ ತಂದರು. ಬೆಂಗಳೂರಿನಲ್ಲಿನ ಗುಬ್ಬಿ ತೋಟದಪ್ಪನವರ ಛತ್ರಕ್ಕೆ ಇವರು ತಮ್ಮ ಅವಿಶ್ರಾಂತ ಸೇವೆಯನ್ನು ಟ್ರಸ್ಟಿಯಾಗಿ ನಿಂತು ಸಮರ್ಪಿಸಿದರು.

ತಮ್ಮ ಬಾಳಿನ ಬಲುಭಾಗವನ್ನು ವೀರಶೈವ ಗ್ರಂಥ ಪರಿಶೋಧನೆಯಲ್ಲಿಯೇ ಇವರು ಕಾಲ ಕಳೆದು, ವೀರಶೈವ ಧರ್ಮತತ್ವವನ್ನು ಕರತಲಾಮಲಕವಾಗಿ ಮಾಡಿಕೊಂಡು, ಶರಣರ ವಚನಗಳ ಸಾರ ಸುಧೆಯನ್ನು ಕನ್ನಡಿಗರ ಮುಂದಿಟ್ಟು, ಶರಣರ ಉದಾತ್ತೋನ್ನತ ತತ್ವಗಳನ್ನು ಗದ್ಯಪದ್ಯಗಳ ರೂಪವಾಗಿ ಪ್ರಸರಿಸಿದರು. ಒಟ್ಟಿನಲ್ಲಿ 'ಶರಣರ ತುಂಬಿ' ಯಾಗಿ ಜನತೆಗೆ ಸೇವೆಯನ್ನು ಸಲ್ಲಿಸಿದರು.

ವೀರಶೈವ ಮತದಲ್ಲಿ ಹಲವಾರು ಒಳಪಂಗಡಗಳಿದ್ದರೂ ಜನಗಣತಿಯ ವೇಳೆಯಲ್ಲಿ 'ಲಿಂಗಾಯತ' ಪದವನ್ನೇ ತಪ್ಪದೆ ಉಪಯೋಗಿಸಬೇಕೆಂದು ಹಸ್ತಪತ್ರಿಕೆಗಳನ್ನು ಪ್ರಕಟಿಸಿದರು. ಕೈಲಾಸವಾಸಿ ಪುಟ್ಟಣ್ಣ ಶೆಟ್ಟರವರ ಹಿರಿತನದಲ್ಲಿ ವೀರಶೈವ ಮಹಾ ಸಭೆಯು ಸೇರಿದಾಗ ವೀರಶೈವ ಮತದ ವಿಷಯವಾಗಿ ವ್ಯಾಖ್ಯಾನವೊಂದನ್ನು ಇವರು ಕೊಟ್ಟಾಗ ಇಡೀ ಸಭೆಯೇ ಸೈ ಎಂದಿತು. ಪುಟ್ಟಣ್ಣ ಶೆಟ್ಟರೂ ಸಹ ಇವರ ಸಂಗಡ ಮತಧರ್ಮ ವಿಷಯಗಳಲ್ಲಿ ಹಲವಾರು ಬಾರಿ ಸಂಭಾಷಣೆ ಮಾಡಿ ಸಂತೃಪ್ತಿಗೊಳ್ಳುತ್ತಿದ್ದರು. ಜನಜಾಗೃತಿಪರವಾದ ಶ್ರೇಷ್ಠ ಲೇಖನಗಳು ಹಲವಾರು ಪತ್ರಿಕೆಗಳಲ್ಲಿ—ಬಸವಾಜ ಪತ್ರಿಕೆ, ಧರ್ಮತರಂಗಿಣಿ, ಸುಬೋಧ ಇತ್ಯಾದಿ—ಪ್ರಕಟವಾದವು. ಕವಿಚರಿತ್ರೆಯ ರಚನೆಯ ಕಾಲದಲ್ಲಿ ವೀರಶೈವ ಕವಿಗಳ ವಿಚಾರವಾಗಿ ಇವರು ಕೀರ್ತಿಶೇಷ ನರಸಿಂಹಾಚಾರ್ಯರಿಗೆ ಶ್ರೇಷ್ಠ ಸಲಹೆಗಳನ್ನು ಕೊಟ್ಟು ಸಹಾಯಮಾಡಿದ್ದಾರೆ. ಯಾವ ಸಾಹಿತಿಯಲ್ಲಿ ಸಹಜ ಸತ್ಯಗುಣವು ಕಂಡುಬರುತ್ತದೆಯೋ ಅಂತಹವರನ್ನು ಯಾವಭೇದವಿಲ್ಲದೆಯೂ 'ಗುಣಕ್ಕೆ ಮತ್ಸರವೇ?' ಎಂಬುದನ್ನು ಅನುಸರಿಕೊಂಡು ಆಸಾಹಿಯನ್ನು ಪ್ರೇಮಿಸುತ್ತಿದ್ದರು ಎನ್ನುವುದಕ್ಕೆ ಇವರ ಗ್ರಂಥಗಳೇ ಸಾಕ್ಷಿಯಾಗಿವೆ.

ವೀರಶೈವ ಧರ್ಮದ ತತ್ವಗಳನ್ನು ಸೂಕ್ಷ್ಮವಾಗಿ ಜನತೆಯು ಅರಿತು ಕೊಳ್ಳಲು ಅನುಕೂಲವಾಗುವ ಹಾಗೆ ಹಾಸ್ಯ ರೂಪದಲ್ಲಿ ಮನೋರಂಜನೆಯನ್ನು ಕೊಡುವ ಬಗೆಯಲ್ಲಿ ಇರುವ ಗ್ರಂಥವೇ ವೀರಶೈವ ಹಾಸ್ಯ ಕಥಾವಳಿ. ಇದು ಎರಡು ಭಾಗಗಳಲ್ಲಿ ಇದೆ. ಸಂಭಾಷಣೆಯ ರೂಪದಲ್ಲಿರುವ ನಾಟಕವೇ ಚಿತ್ರಾವಳಿ. ವೀರಶೈವ ಧರ್ಮವನ್ನೂ, ವೀರಶೈವ ಸಾಹಿತ್ಯವನ್ನೂ ಪುನರುಜ್ಜೀವನ ಮಾಡಿದ ವೀರಶೈವ ಮಹರ್ಷಿಯರಾದ ಬಸವಪ್ಪ ಶಾಸ್ತ್ರಿ, ಹುಚ್ಚು ವೀರಪ್ಪಶಾಸ್ತ್ರಿ ಮತ್ತು ವೀರಸಂಗಪ್ಪ ಇವರ ಸಂಕ್ಷಿಪ್ತ ಜೀವನ ವಿಹಾರ ಚಿತ್ರಗಳನ್ನು ಕಂಡ ರೂಪದಲ್ಲಿ ಇವರು ಬರೆದ ಕೃತಿಗಳೇ ಬಸವಪ್ಪಶಾಸ್ತ್ರಿ ಸ್ತವನಂ, ಹುಚ್ಚು ವೀರಶಾಸ್ತ್ರಿ ಸ್ತವನಂ ಮತ್ತು ವೀರ ಸಂಗ ಸ್ತವನಂ. ಕನ್ನಡ ಸಾಹಿತ್ಯ ಸಂಶೋಧನೆ ಮಾಡಿ ಕನ್ನಡ ಕವಿಗಳ ಇತಿಹಾಸವನ್ನು ಕೊಟ್ಟಿರುವ ನರಸಿಂಹಾಚಾರ್ಯರ ಜೀವನವನ್ನು ಚಿತ್ರಿಸುವ ಕಂದ ಪದ್ಯದ ಕೃತಿಯೇ ನರಸಿಂಹಾಚಾರ್ಯ ಸ್ತವನಂ. ಮಕ್ಕಳಿಗೆ ಉಪಯೋಗವಾಗುವ ಹಾಗೆ ನೀತಿರಸಭರಿತವಾಗಿರುವ ರಗಳೆಗಳೇ ಸದ್ಬೋಧ ಪ್ರದೀಪಿಕೆ, ಸದ್ವಾಕ್ಯ ಕುಸುಮಾವಳಿ. ವೀರಶೈವ ಮತಸ್ಥಾಪಕನು ಬಸವೇಶ್ವರನು ಎಂಬುವದನ್ನು ಸ್ಪಷ್ಟೀಕರಿಸುವ ಪುಟ್ಟ ಪುಸ್ತಕವೇ ಬಸವೇಶ್ವರನು ವೀರಶೈವ ಮತಸ್ಥಾಪಕನು. ಜಗತ್ತಿನ ಸ್ವಭಾವ, ವೈರ, ಪ್ರೇಮ, ಸಟೆ ದಿಟಾದಿ ಇಪ್ಪತ್ತು ವಿಷಯಗಳನ್ನು ಕುರಿತು ಕಂದ ರೂಪವಾಗಿ ಸುಮಾರು ಐದು ಶತಕಗಳಷ್ಟರಲ್ಲಿ ರಚಿಸಲ್ಪಟ್ಟಿರುವ ಕೃತಿಯೇ ವಿಶ್ವದರ್ಪಣ. ಇದು ಕನ್ನಡಿಗರ ಕೈಗನ್ನಡಿ ಎನ್ನಲು ಈ ಪದ್ಯವು ನಿದರ್ಶಿಸುತ್ತದೆ.

ಜಗದೊಳ್ದಯಾರಸಂ ದಲ್ ।
ಬಗೆಯುಲ್ಕುತ್ತಮರೆನಿಸಿದ ಜನರೊಳಗನಿಶಂ।
ಸೊಗಯಿಪ ಚೆಂದೆಂಗಿನೊಳಂ ।
ಮಿಗೆ ಯೆಳೆನೀರ್ಮೆರೆವ ತೆರದಿ ಮೆರೆಯುತ್ತಿರ್ಕುಂ ॥

ಸಿದ್ಧರಾಮೇಶ್ವರರ ಸತ್ಯವಿಷಯವನ್ನು ತಿಳಿಯಲು ಅನುಕೂಲವಾಗುವಂತೆ ಸಿದ್ಧರಾಮೇಶ್ವರರ ವಚನಗಳನ್ನೂ, ಈತನ ವಿಚಾರವಾಗಿರುವ ಕವಿಗಳ ಕೃತಿಯನ್ನೂ ಸೂಕ್ಷ್ಮವಾಗಿ ವಿಮರ್ಶಿಸಿರುವ ಸಾಹಿತ್ಯದ ಕೈಗನ್ನಡಿಯೇ ಸೊನ್ನಲಾಪುರದ ಸಿದ್ಧರಾಮೇಶ್ವರನು. ಜಗತ್ತಿನಲ್ಲಿ ಸಭ್ಯ ಸಂಸಾರಿಕರು ತಮ್ಮ ಸತಿಸುತೆಯರಿಗೆ ಶ್ರೇಷ್ಠವಾದ ನೀತಿ ಬೋಧೆಯನ್ನು ಸುಲಭ ವಾಕ್ಯಗಳಿಂದ ಇಂಪಾದ ಬಗೆಯಲ್ಲಿ ಬೋಧಿಸುವುದಕ್ಕೆ ನಿರ್ಮಿತವಾದ ಕೃತಿ ನೀತಿ ಬೋಧಾಮೃತ ಸಾರ ಸಾಹಿತ್ಯವು ಜನಜೀವನದ ಪ್ರತಿಬಿಂಬವಂತೆ !

ಘನತರದಿಂ ಪೆಣ್ಣುಗಳ ತರುವುದು ।
ಪುರುಷರ ಗತಿಯಿಂ ಪರಿಕಿಸಿ ತಿಳಿವುದು ।
ಧರೆಯೊಳ್ಕನ್ನೆಯರಂ ಮಿಗೆ ಕೊಡುವುದು ॥

ವೀರಶೈವ ಧರ್ಮದ ಪ್ರಾಚೀನತ್ವವನ್ನೂ, ಶ್ರೇಷ್ಠತ್ವವನ್ನೂ, ವೀರಶೈವರ ಶಕ್ತಿಸಂಪತ್ತನ್ನೂ ರಸವತ್ತಾಗಿ ರಚಿಸಿರುವ ಪುಟ್ಟ ನಿಬಂಧವೇ ವೀರಶೈವರ ಶಕ್ತಿಸಂಪಾದನೆ. ಮತ ಧರ್ಮ ಮತ್ತು ಆಚಾರ ವಿಚಾರಗಳನ್ನು ಒಳಗೊಂಡ ವಿಷಯಸಾರವೇ ಷಟ್ಸ್ಥಲ ಚಿಂತಾರತ್ನ. ಪ್ರಾಚೀನ ಶಿವಶರಣನಾದ ಆದಿಶೆಟ್ಟಿಯ ವಿಚಾರಕಥನದ ನಾಟಕವೇ ಪದ್ಮಾವತೀ ಪರಿಣಯ. ರಾಮನಾಥದಲ್ಲಿನ ವೀರಶೈವ ಮಹಾ ಸಭೆಯಲ್ಲಿ ಕೊಟ್ಟ ವ್ಯಾಖ್ಯಾನವೇ *Veerashaiva or Lingayet Religion* ಇಷ್ಟೆಲ್ಲ ಗ್ರಂಥಗಳು ಪ್ರಕಟವಾಗಿವೆ. ಕಮಲೆ ಎಂಬ ಕಾದಂಬರಿ, ವೀರಶೈವ ಸ್ವಾತಂತ್ರ್ಯ ಎಂಬ ಕವಿತೆ ಅಪ್ರಕಟಿತವಾಗಿವೆ.

ಸಾಹಿತ್ಯ ಹಾಗೂ ಸಮಾಜಸೇವೆಯನ್ನು ತಮ್ಮ ಯಥಾಶಕ್ತಿಗೆ ಮೀರಿ ಮಾಡಿ ತಮ್ಮ ಪುಣ್ಯಪುರುಷಾರ್ಥದ ಸಿದ್ಧಿಯನ್ನು ಜೀರಗೆ ಬಸವಲಿಂಗಪ್ಪನವರು ಪಡೆದರು. ಬರಹಗಳನ್ನು ಬರೆಯುವುದು ಎಂದರೆ ಇವರಿಗೆ ಪಂಚರಸ ಕಜ್ಜಾಯ. ಮರಣವು ಸಮೀಪಿಸುವ ವರೆಗೂ ಸಾಹಿತ್ಯ ದೇವಿಯ ನೆನಪಿನಿಂದ ಇವರು ಕೆಲಸ ಮಾಡಿದರು. ಸೇವೆಯನ್ನು ಮನದಣಿಯ ಮಾಡಿ, ತಮ್ಮ ಮನವು ಪರಿಪೂರ್ಣವಾಗಲು, ಪರಶಿವನಲ್ಲಿ ಬೆರೆದು ಬಯಲಾಗುವ ವೇಳೆಯಲ್ಲಿಯೂ ೧೯೩೬ ರಲ್ಲಿ ತಮ್ಮ ಅರುವತ್ತುಮೂರನೆ ವಯಸ್ಸಿನಲ್ಲಿ ಬರಹವೊಂದನ್ನು ಹೇಳಿ ಬರೆಯಿಸಿದರು. ಜೀವನವು ಅಶಾಶ್ವತ ಸಾಹಿತ್ಯವು ಶಾಶ್ವತ ಎಂದ ಜಾನ್ ಆಡಮ್ಸನ ತತ್ವವು ಸತ್ಯವೆಂದು ಅರಿತರೆ ಶರಣ ಸಾಹಿತಿಯೂ ಸಕಳ ಸಾಹಿತಿಯೂ ಆದ ಜೀರಗೆ ಬಸವಲಿಂಗಪ್ಪನವರು ಇನ್ನೂ ಅಳಿದಿಲ್ಲವಲ್ಲವೇ ? ಈ ಶರಣರ ತುಂಬಿಯ ಮನೋಹರ ಮಂಜುಳ ಕೀರ್ತನೆಯನ್ನು ಕೇಳಿರಿ.

ಬಸವ ಬಸವ ಪ್ರಮಥವರ್ಯ । ಶಂಕರ ಪ್ರಿಯಾ
ಬಸವ ಭಕ್ತಪಾಲ ದೇವ । ಅಸಮ ಶಕ್ತಿ ಯುಕ್ತಿ ನೀಯುತ ॥
ರಸೆಯ ನೀನು ಕರುಣದಿಂದ । ಲೊಸೆದು ಪಾಲಿಸ್ಪೆ ।
ಭಿನ್ನ ಭಾವಗಳನ್ನು ಮುರಿದೆ । ಅನ್ನೆಯಗಳ ಕೊರಳ ಹರಿದೆ ।
ಖಿನ್ನ ಜನರ ಕಷ್ಟ ಮುನ್ನೆ ಹರಿಸಿದ್ಪೆ ॥

# ಭೂಷಣ.

ಬರೆದವರು:— ಡಾ॥ ಎಸ್. ಬಿ. ಪಾಠಕ ವಿಜಯಪುರ.

---

ಆಚಾರ್ಯತ್ರರು ಆರ್ಯಾವರ್ತಕೆ ಸಲೆ ಭೂಷಣ ।
ಆತ್ಮಪ್ರಬೋಧಕ ಮುಮುಕ್ಷು ಜೀವಿಗೆ ತಾನೇ ಭೂಷಣ ।
ಅಚ್ಚುಕಟ್ಟೇ ಮಾನವನ ಸೌಜನ್ಯತೆಗೇ ಭೂಷಣ ।
ಅಚ್ಯುತನ ನಾಮವನು ಚಿತ್ತೇಕ ಸ್ಮರಿಸುವದೇ ಭೂಷಣ ।
ಅಧ್ಯಾತ್ಮ ಜೀವಿಗೆ ಸಾಕ್ಷಾತ್ಕಾರವೆ ನಿಜ ಭೂಷಣ ।
ಅಹಮ್ಮು ನೀಗಿ ವಿಶ್ವಕರ್ಮನರಿಯುವ ಶಿಲ್ಪಿತಾ ।
ಅಷ್ಟಮದಗಳು ದಾಟಿ ಪರಮ ಶಾಂತಿಯು ಜಗಕೆ ಭೂಷಣ ।
ಅಗಸ್ಟ ಹದಿನೈದರಿಂದ ಪ್ರಬುದ್ಧ ಭಾರತಕೆ ಭೂಷಣ ।
ಪೂರ್ವ ಶಾಂತಿ ವಿಶಾಲ ಭಕ್ತಿ ಸರ್ವರಿಗೆ ಭೂಷಣ ।
ಭಾರತದ ಕವಿಗಣಕೆ ಶಾರದಾಂಬೆಯ ಕೃಪೆಯೆ ಭೂಷಣ ।
ರನ್ನ, ಪಂಪ, ರಾಘವಾಂಕರು, ನಮ್ಮ ನಾದಗತಿ ಭೂಷಣ ।
ರಾಮ, ಕೃಷ್ಣ, ಬುದ್ಧ, ಅಶೋಕ, ಬಸವ, ನರೇಂದ್ರ ಭೂಷಣ ।
ಲೋಕಮಾನ್ಯ, ಶ್ರೀ ಅರವಿಂದ, ಮಹಾತ್ಮರ ದೃಷ್ಟಿಯೆ ಭೂಷಣ, ।
ಜ್ಞಾನ, ಭಕ್ತಿ, ಕರ್ಮನರಿತು ತನ್ನ ತಾನರ್ಪಿಸುವದೇ ಭೂಷಣ ।
ಕೋಟಿ ಜಪ ತಪಗಳಿಗಿಂತ ಸರಿಬಾರವು ಸತ್ಯ ನಡೆನುಡಿ ಭೂಷಣ ।
ಯಜ್ಞ ಕರ್ಮಫಲಕ್ಕಿಂತ ಹೃದಯ ಭಕ್ತಿಯೆ ಶಿವಗೆ ಭೂಷಣ ।
ಲಕ್ಷ ಶಾಸ್ತ್ರಗಳು ಸರಿಬಾರವು ಗುರು ಸಾನ್ನಿಧ್ಯವೇ ಭೂಷಣ ।
ಸ್ವಾತಂತ್ರ್ಯ ರಾಷ್ಟ್ರಕ್ಕೆ ವಿಶಾಲ ಸಾಮರಸ್ಯವೇ ಭೂಷಣ ।
ವಸುಧಿ ಪ್ರಗತಿಗಾಗಿ ತಳೆದ ದಶಾವತಾರವೇ ಭೂಷಣ ।
ಹೃದ್ವಿಕಾಸ ಪೂರ್ಣ ಪ್ರಕಾಶಿಸುವ ತಾಯಿಃಕೃಪೆಯೇ ಭೂಷಣ ।
ಶ್ರೀ ವರ ಮಾನರವಿಂದರ ಪ್ರಭೆಯೇ ಜಗಕೆ ಭೂಷಣ ॥ ೨೧ ॥

# ಶಿವಶರಣರ ದೃಷ್ಟಿಯಲ್ಲಿ ಕಾಯಕ.

(ಲೇಖಕ :— ಶಾಂತರಸ, ರಾಯಚೂರ)

ಪ್ರತಿಯೊಬ್ಬ ಮನುಷ್ಯ ಜೀವನೋಪಾಯಕ್ಕಾಗಿ ಒಂದು ಉದ್ಯೋಗ ಕೈಕೊಳ್ಳುತ್ತಾನೆ. ಅದರಿಂದ ಅವನು ತನ್ನ ಬೇಕು-ಬೇಡಗಳನ್ನು ಪೂರೈಸಿ ಕೊಳ್ಳುತ್ತಾನೆ. ಸಮಾಜ ಜೀವಿಯಾಗಿ ಬದುಕುವ ಪ್ರತಿಯೊಬ್ಬನಿಗೂ ಒಂದು ಉದ್ಯೋಗ ಬೇಕೇಬೇಕು. ಈ ಉದ್ಯೋಗಕ್ಕೇನೇ ಶರಣರು "ಕಾಯಕ" ಎಂದು ಕರೆದಿರುವರು. ಆದರೆ ಅವರ ದೃಷ್ಟಿಯಲ್ಲಿ ಕಾಯಕಕ್ಕೊಂದು ವಿಶಿಷ್ಟ ಅರ್ಥವಿದೆ. ಯಾದ ಉದ್ಯೋಗವೇ ಆಗಲಿ ಅದು ಕಾಯಕವೆನಿಸುವದು. ಅದನ್ನು ಸ್ವಹಿತ ಮತ್ತು ಪರಹಿತಕ್ಕಾಗಿ ಬಳಸಿಕೊಂಡಾಗ ಮಾತ್ರ.

ಕಳ್ಳನಿಗೆ ಕಳ್ಳತನವೇ ಒಂದು ಉದ್ಯೋಗ; ಆದರೆ ಅದು ಕಾಯಕ ವೆನಿಸದು. ಸಾಲಕೊಡುವ ಸಾಹುಕಾರನಿಗೆ ಸಾಲ ಕೊಡುವುದೇ ಒಂದು ಉದ್ಯೋಗ; ಆದರೆ ಅದು ಕಾಯಕಕ್ಕೆ ಹೊರಗು. ಮೊದಲನೆಯವನು ಮುಚ್ಚುಮರೆಯಾಗಿ ಕಳ್ಳತನವೆಸಗಿದರೆ, ಎರಡನೆಯವನು ಬಹಿರಂಗವಾಗಿ ಸುಲಿಗೆ ಮಾಡುವನು, ಇವು ವ್ಯಕ್ತಿಯನ್ನೂ, ಸಮಾಜವನ್ನೂ ಹೀನದೆಶೆಗೊಯ್ಯುವ ಘಾತುಕ ಕೆಲಸಗಳು.

## ಕಾಯಕದ ಅರ್ಥ

ಬದುಕಿಗಾಗಿ ಮನುಷ್ಯ ಹೊಟ್ಟೆ ಹೊರೆಯುತ್ತಾನೆ. ಹೊಟ್ಟೆ ಹೊರೆಯಲು ಉದ್ಯೋಗ ಕೈಕೊಳ್ಳುತ್ತಾನೆ, ಹೊಟ್ಟೆ ತುಂಬುವದರ ಜೊತೆಗೆ ಈ ಉದ್ಯೋಗದಿಂದ ಬದುಕಿನಲ್ಲಿ ಬಲ್ಮೆ-ನಲ್ಮೆಗಳೂ ತುಂಬಿ ಬರಬೇಕು; ಬದುಕಿನ ಅಂತಿಮ ಗುರಿಯನ್ನೂ ಸಾಧಿಸಬೇಕು. ಇಂತಿದೆ ಕಾಯಕದ ಅರ್ಥ.

ಕಾಯಕದಲ್ಲಿ ಮೇಲು-ಕೀಳಿಲ್ಲ ಜಲಗಾರನಿಂದ ಮಂತ್ರಿಯವರೆಗೆ ಎಲ್ಲರು ಕಾಯಕಿಗಳೇ. ಜಲಗಾರ ಕೀಳಲ್ಲ; ಮಂತ್ರಿ ಮೇಲಲ್ಲ. ಇಬ್ಬರಿಗೂ ಒಂದೇ ಸ್ಥಾನ, ಒಂದೇ ಪ್ರತಿಷ್ಠೆ. „ದೇವ ಸಹಿತ ಭಕ್ತ ಮನೆಗೆ ಬಂದರೆ ಕಾಯಕ ವಾವುದೆಂದು ಬೆಸಗೊಂಡರೆ ನಿಮ್ಮಾಣೆ, ನಿಮ್ಮ ಪ್ರಥಮರಾಣೆ" ಎಂಬ ಅಣ್ಣ

ಬಸವಣ್ಣನ ವಚನ ಕಾಯಕದ ಅರ್ಥವನ್ನು ಸರಿಯಾಗಿ, ಸಮಂಜಸವಾಗಿ ತಿಳಿಸುತ್ತದೆ. " He also serves him who stands and waits" ಎಂಬ ಮಿಲ್ಟನ್ ಮಹಾಕವಿಯ ಮಾತು ಇದನ್ನೇ ಸಮರ್ಥಿಸುತ್ತದೆ.

### ಶರಣರ ಆದರ್ಶ

ಉದ್ಯೋಗದಲ್ಲಿ ಮೇಲು ಕೀಳು ಉಂಟಾದರೆ ಸ್ವಪ್ರತಿಷ್ಠೆಗೆ ಕುಂದು. ಇದರಿಂದ ಸಮಾಜ ಶಿಥಿಲಗೊಳ್ಳುವುದು; ಐಕ್ಯತೆ ಸಾಧಿಸದು; ಪ್ರಗತಿಯಂತೂ ಬಹು ದೂರದ ಮಾತು. ಇಂದೀ ಸಮಾಜದಲ್ಲಾದ ವರ್ಣವ್ಯವಸ್ಥೆ " ವೃತ್ತಿ ದೃಷ್ಟಿ"ಯಿಂದ ಎಂದು ಒಪ್ಪಿಕೊಂಡರೂ ಅದರ ಘೋರ ಕಹಿಫಲವನ್ನಿಂದು ಉಣ್ಣುತ್ತಿದ್ದೇವೆ. ಊರೂರಿಗೆ ಹೊಲಗೇರಿಗಳಾದವು. ಸಮಾಜದ ಬಹು ಭಾಗ ಅವಿದ್ಯೆ, ಅಜ್ಞಾನದಲ್ಲುಳಿಯಿತು, ಐಕ್ಯತೆ ನಷ್ಟವಾಯಿತು. ಅಂತೆಯೇ ಶರಣರು ಕಾಯಕದಲ್ಲಿ ಮೇಲು—ಕೀಳು ಕೂಡದು, ಸಲ್ಲದು ಎಂದು ಹೇಳಿದರು; ಅದರಂತೆ ಆಚರಿಸಿ ತೋರಿಸಿದರು.

ವ್ಯವಹಾರದಿಂದ ನಿತ್ಯದ ದುಡಿಮೆಯಿಂದ ಬಿಡುವು ಗಳಿಸಿಕೊಂಡು ಧ್ಯಾನ, ಜಪ, ಪೂಜೆಗಳನ್ನೆಸಗಿ ಸತ್ಯ ಸೌಂದರ್ಯಗಳ ಸಾಕ್ಷಾತ್ಕಾರ ಹೊಂದುವೆನೆಂಬುದು ಮೂರ್ಖತನದ ಮಾತೇ ಸರಿ! ದುಡಿಮೆ, ಉದ್ಯೋಗ, ಕಾಯಕ ಇವೆಲ್ಲವೂ ಬಹಿರಂಗ ವರ್ತನೆಗಳು. ಅಂತರಂಗ ವ್ಯಾಪಾರವೇ ಬೇರೆ. ಅದಕ್ಕಾಗಿ ಪೂಜೆ, ಧ್ಯಾನಗಳು ಬೇಕು; ಪ್ರತ್ಯೇಕ ವೇಳೆ ಬೇಕು. ಅದಕ್ಕೂ ಇದಕ್ಕೂ ಏನೂ ಸಂಬಂಧವಿಲ್ಲ ಎಂಬ ಕಲ್ಪನೆ ಶುದ್ಧ ಮೂರ್ಖತನದ್ದು. ವ್ಯವಹಾರದಲ್ಲಿ ನೀಚತನವೆಸಗಿ ಪೂಜೆ, ಧ್ಯಾನ, ದಾನ, ಧರ್ಮಗಳನ್ನು ಮಾಡುವದರಿಂದ ಮುಕ್ತಿ ದೊರಕುವದೇ? ಪೂಜೆ, ಧ್ಯಾನ ಮುಂತಾದವು ಮನುಷ್ಯನಿಗೆ ಅವಶ್ಯಕ. ಆದರೆ ಅವುಗಳನ್ನು ಕಾಯಕದಿಂದ ವಿಂಗಡಿಸ ಕೂಡದು. ಕಾಯಕವೇ ಪೂಜೆ, ಧ್ಯಾನ ಸತ್ಯಶುದ್ಧ ಕಾಯಕವೇ ಕೈಲಾಸ. ಪೂಜೆ, ಧ್ಯಾನಗಳಿಂದ ಕೈಲಾಸ ಸಿಕ್ಕುವದೆಂಬ ಭಾವನೆ. ಆದರೆ ಕಾಯಕವೇ ಕೈಲಾಸವಾದಾಗ ಬೇರೆ ಕೈಲಾಸದ ಹಂಗೇಕೆ?

### ವೃತ್ತಿಭೇದ ಅಳಿಯಲಿ

ಸಮಾಜದಲ್ಲಿ ಇಂದು ಎದ್ದು ಕಾಣುವ ಅವ್ಯವಸ್ಥೆ, ಶಿಥಿಲತೆ, ವಿಷಮತೆಗೆ ವೃತ್ತಿಭೇದವೇ ಬಹುಮಟ್ಟಿಗೆ ಕಾರಣವಾಗಿದೆ. ಮನುಷ್ಯನ ಅಂತಸ್ತನ್ನು ಅಳಿಯಲು ಅವನು ಕೈಕೊಂಡ ಕಾರ್ಯವೇ ಅಳತೆಗೋಲಾಗಿದೆ.

ಇದರಿಂದ ಸಮಾಜದಲ್ಲಿ ಮೇಲು, ಕೀಳು, ಬಡವ–ಬಲ್ಲಿದ ಮುಂತಾದ ಭೇದ ಭಾವನೆಯುಂಟಾಗಿ ವ್ಯಕ್ತಿಯ ಪ್ರಗತಿಗೆ ತಡೆಯುಂಟಾಗಿದೆ. ಇಂಥ ಸಮಾಜದಲ್ಲಿ ಮೇಲಿನವನು ಇನ್ನೂ ಮೇಲೆ ಹೋಗುತ್ತಾನೆ; ಕೆಳಗಿನವನು ಇನ್ನೂ ಕೆಳಗಿಳಿಯುತ್ತಾನೆ. ಸಮಾಜದ ಸರ್ವಾಂಗೀಣ ಉನ್ನತಿಗೆ ಪ್ರತಿ ವ್ಯಕ್ತಿಯ ಅಂತರಂಗ, ಬಹಿರಂಗ ವಿಕಸನ ಮುಖ್ಯ. ಜಾತಿ, ಹುಟ್ಟು, ವೃತ್ತಿ, ಚಿಂತನಗಳಿಂದ ಬೆಲೆಕಟ್ಟುವ ಸಮಾಜದಲ್ಲಿ ಕೆಳಗಿನವನು ಮೇಲೇಳಲು ಅವಕಾಶವಿಲ್ಲ.

## ಸಮಾಜದ ಜೀವಳವೇ ಕಾಯಕ

ಸಮಾಜದ ಪ್ರಗತಿಗೆ ಸಮಾಜ ಜೀವಿಗಳೆಲ್ಲರೂ ಉದ್ಯೋಗಿಗಳಾಗಿರ ಬೇಕು; ಕಾರ್ಯಶೀಲರಾಗಿರಬೇಕು. ಬಹುಜನ ನಿರುದ್ಯೋಗಿಗಳಾಗಿದ್ದ ಸಮಾಜದಲ್ಲಿ ಹೊಸ ಹುಟ್ಟು ಮೈದೋರದು; ಲೋಕದ ಕಣ್ಣಿನಲ್ಲಿ ಅದು ಕೀಳಾಗುವದು. ಕೈಕೊಂಡ ಕಾರ್ಯ ವ್ಯಕ್ತಿಯ ಬಾಳನ್ನು ಬೆಳಗಿ ಸಮಾಜ ವನ್ನು ಬಲಿವುಳ್ಳದ್ದನ್ನಾಗಿ ಮಾಡುವದು. ಪ್ರತಿಯೊಬ್ಬನಿಗೆ ಉದ್ಯೋಗ ಬೇಕು, ಅದು ಕರ್ತಾರನ ಕಮ್ಮಟವಾದ ಮರ್ತ್ಯದಲ್ಲಿ ಜೀವಿಯನ್ನು ಸಲ್ಲುವಂತೆ ಮಾಡುವಂಥದ್ದಾಗಿರಬೇಕು. ಇಂಥ ಉದ್ಯೋಗಕ್ಕೆನೇ ಶರಣರು ಕಾಯಕ ವೆಂದು ಕರೆದರು. ಶಿವಶರಣರು ಕನ್ನಡ ನಾಡಿನಲ್ಲಿ ಒಂದು ಸುಭದ್ರ ಸುವ್ಯ ವಸ್ಥೆಯ ಸಮಾಜವನ್ನು ಕಟ್ಟಿದರು. ಆ ಸಮಾಜದ ಜೀವಾಳವೇ ಕಾಯಕ.

ಕಾಯಕದಲ್ಲಿ ಫಲಾಪೇಕ್ಷೆ ಇರಕೂಡದು; ಮುಕ್ತಿಯ ಆಸೆಯೂ ಇರ ಕೂಡದು. ಗೀತೆಯ "ನಿಷ್ಕಾಮ ಕರ್ಮದಿಂದ ಮುಕ್ತಿ" ಎಂಬುದಕ್ಕೂ, ಶರಣರ "ಕಾಯಕವೇ ಕೈಲಾಸವೆಂಬುದಕ್ಕೂ ಬಹಳ ವ್ಯತ್ಯಾಸವಿದೆ. ನಿಷ್ಕಾ ಮ್ಯವಾಗಿ ಕರ್ಮಗೈಯುತ್ತ ಹೋದರೆ ಕೊನೆಗೆ ಮುಕ್ತಿ ಎಂದು ಹೇಳುವಾಗ ಕರ್ಮಕ್ಕೆ ಪ್ರಧಾನ್ಯ ಹೆಚ್ಚಾಗಿ ಫಲಾಪೇಕ್ಷೆ ಇಲ್ಲವೆನ್ನುವದರಲ್ಲಿಯೇ ಮುಕ್ತಿಯ ಆಸೆ ಮೈದೋರಿ ನಿಂತಿರುತ್ತದೆ. ಸತ್ಯ ಶುದ್ಧ ಕಾಯಕವುಳ್ಳವನಿಗೆ ಮುಕ್ತಿಯ ಬಯಕೆಯಿಲ್ಲ; ಪರಮಪದವಿ ಅವನಿಗೆ ಬೇಡ. "ಅಮೃತಕ್ಕೆ ಹಸಿವುಂಟೇ? ಜಲಕ್ಕೆ ತೃಷೆಯುಂಟೇ? ಸತ್ಯ ಶುದ್ಧ ಕಾಯಕವಂತನಿಗೆ ಮುಕ್ತಿಯ ಬಯಕೆ ಯುಂಟೇ?" "—ಅವನಿಗೆ ಅದು ಸ್ವಯಂಭೂ, ಸಹಜ ಸ್ವಭಾವ "—ಎನಗೆ ನಿಮ್ಮ ತೊತ್ತುಗೆಲಸವೇ ಸಾಕು. ಮಹಾಲಿಂಗ ಕಲ್ಲೇಶ್ವರ ದೇವಾ ಪರಮ ಪದವಿಯ ನಿಮ್ಮ ತಲೆಯಲ್ಲಿ ಸುತ್ತಿಕೊಳ್ಳಿ." ಇನ್ನು ಮುಕ್ತಿ, ಪರಮಪದವಿಯ ಬಯಕೆಯೇ ಇಲ್ಲಿರುವಾಗ ಫಲಾಪೇಕ್ಷೆ ಎಲ್ಲಿ? ಮಾಡುವ ಭಕ್ತನು ನೀನೆ,

ಮಾಡಿಸಿಕೊಳ್ಳುವ ದೇವನೂ ನೀನೇ" ಎಂಬ ಭಾವ ಅಳವಟ್ಟಾಗ ಇನ್ನಾವ ಪ್ರತಿಫಲದ ಆಸೆ? "ಪುಷ್ಪದೊಳಗಿರ್ದ ತುಂಬಿ ಪರಿಮಳವನರಸಲುಂಟೆ?" ಹೀಗೆ ಕರ್ಮಯೋಗಿಗೆ ಕಾಯಕವೇ ಕೈಲಾಸವಾದಾಗ ಬೇರೆ ಕಾವ್ಯದ ಆಸೆ ಎಂತು ಸುಳಿವುದು?

ಮುಕ್ತಿಯ ಬಯಕೆಗಾಗಿ, ಪುಣ್ಯಕ್ಕಾಗಿ, ಪರಮ ಪದವಿಗಾಗಿ ಕರ್ಮಗೈವಾಗ ಕರ್ಮಕ್ಕೆ ಪ್ರಾಧಾನ್ಯ ಹೆಚ್ಚಾಗಿ ಅದರ ಬಗ್ಗೆ ಇರುವ ಪಾವಿತ್ರ್ಯ ಭಾವನೆ ಉಳಿಯುವದು ಕಷ್ಟ. ಈ ಭಾವನೆಗಳು ವ್ಯಕ್ತಿಯಲ್ಲಿ ಏಕತೆಯನ್ನು ಬೆಳೆಸಿದವು; ಸಮಷ್ಟಿಯ ಭಾವನೆ ಲೋಪವಾಯಿತು. ಶರಣರು ಕಾಯಕವೇ ಕೈಲಾಸವೆಂದು ನಡೆದು, ನುಡಿದು ವ್ಯಕ್ತಿಯ ಏಕತೆಯನ್ನು ಅಳಿಸಿದರು; ಪರಲೋಕದ ಚಿಂತೆಯಲ್ಲಿಯೇ ಇದ್ದು, ಮುಕ್ತಿಗಾಗಿಯೇ ಜೀವಿಸಿ ಇಹಲೋಕವನ್ನು ಮರೆತ ಮಾನವರ ಕಣ್ಣು ತೆರೆಯಿಸಿದರು. ಪುಣ್ಯದಿಂದ, ಸತ್ಕರ್ಮದಿಂದ ಕೈಲಾಸ ಮುಕ್ತಿಗಳನ್ನು ಸಾಧಿಸಬಯಸುವ ಮನುಷ್ಯನಿಂದ ಮರ್ತ್ಯಕ್ಕೆ ಮಾನವ ಸಮಾಜಕ್ಕೆ ಯಾವ ಲಾಭವೂ ಇಲ್ಲ. ಒಂದು ದೃಷ್ಟಿಯಿಂದ ಅವರನ್ನು ಸ್ವಾರ್ಥಿಗಳೆಂದರೆ ತಪ್ಪಾಗದು.

## ಕಾಯಕವೆಂದರೇನು?

ಕೈಕೊಂಡ ಕಾಯಕವೇ ಕೈಲಾಸವೆಂದು ಹೇಳುವಾಗ ಕಾಯಕ ಉದರ ಪೋಷಣೆಯ ಸಾಧನೆಯೊಂದೇ ಆಗಲಾರದು. ಅದು ಕೇವಲ " ವೃತ್ತಿ " ಯಲ್ಲ, ವ್ಯಕ್ತಿಯ ಅಂತರಂಗ, ಬಹಿರಂಗ ಪವಿತ್ರಗೊಳಿಸಿ ಸ್ವಹಿತ, ಪರಹಿತ ಲೋಕಹಿತವನ್ನುಂಟು ಮಾಡುವದೇ ಕಾಯಕ. "ಸಕಲ ಜೀವಾತ್ಮರಿಗೆ ಲೇಸ ಬಯುವದೇ" ಕಾಯಕ. ಈ ಉದಾರತೆ, ವೈಶಾಲ್ಯತೆ ಕೈಲಾಸ, ಮುಕ್ತಿ, ಸ್ವರ್ಗ ಬಯಸುವ ಮಾನವನಿಗೆಂತು ಬರುವದು? ಸತ್ಯ ಶುದ್ಧ ಕಾಯಕ, "ಭೂತಂಗಳೊಳನು ಕಂಪವುಳ್ಳವನು" ಮರ್ತ್ಯದ ಮಾನವರೆಲ್ಲರಲ್ಲಿಯೂ ಪ್ರೀತಿಯುಳ್ಳವನು. ಅವನು ಬಾಳು ಚೊಕ್ಕ; ಆ ಬಾಳಿನ ಸವಿಯೇ ಶಿವಪೂಜೆ ಅವನು ಮರ್ತ್ಯವನ್ನು ಹಳಿದು; ಪರವನ್ನು ಆಶಿಸನು. ಅವನು ಸ್ವಾವಲಂಬಿ, ಸತ್ಯ ಸಂಶೋಧಕ; ನಿಜವಾದ ಮಾನವ.

## ಗರ್ವ ತ್ಯಾಜ್ಯ

ಕಾಯಕ ಮಾಡುವಲ್ಲಿ ಗರ್ವ ಸಲ್ಲದು; ತಾ ಮಾಡುವೆನೆಂಬ ಹಮ್ಮು ಕೂಡದು. "ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ

ಡಂಗುರ." ಈ ಭಾವನೆ ಸುಳಿಯದಂತೆ ಎಚ್ಚರ ವಹಿಸಬೇಕು. ಹಾಗಿರಲು "ದಾಸೋಹಂ" ಭಾವನೆ ಬೇಕು; ಕರ್ತವ್ಯದಲ್ಲಿ ತಾದಾತ್ಮ್ಯತೆ ಬೇಕು. "ಕಾಯಕದಲ್ಲಿ ನಿರತನಾದರೆ ಗುರುದರ್ಶನವಾದರೂ ಮರೆಯಬೇಕು. ಅಮುಳೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು" ಹೀಗೆ ಕ್ರಿಯೆಯಲ್ಲಿ ತಾದಾತ್ಮ್ಯತೆ, ಕ್ರಿಯಾಶೀಲತೆ ಇಲ್ಲದ ಯಾವ ಉದ್ಯೋಗದಿಂದ ಸ್ವಹಿತ ಪರಹಿತವಾದೀತು? ಈ ಉದ್ಯೋಗ ಶೀಲತೆಗೆ ದಾಸೋಹಂ ಭಾವನೆ ಆವಶ್ಯಕ." ಸಕಲ ಪ್ರಾಣಿಗಳಿಗೆ ಲೇಸಾಗಲೆಂದೇ ಮಜ್ಜನಕ್ಕೆರೆವೆ" "ಆರಂಬವ ಮಾಡುವೆನಯ್ಯಾ ಶಿವಪೂಜೆಗೆಂದು ವ್ಯವಹಾರವ ಮಾಡುವೆನಯ್ಯಾ ಜಂಗಮಾರ್ಚನೆಗೆಂದು." ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ ಎನ್ನೊಡಲಿಂಗೆ ಎನ್ನ ಮಡದಿ ಮಕ್ಕಳಿಂಗೆ ಕುದಿದೆನಾದೊಡೆ ಎನ್ನ ಮನಕ್ಕೆ ಮನವೇ ಸಾಕ್ಷಿ. ಹೊಲೆ ಹೊಲೆಯರ ಮನೆಯ ಹೊಕ್ಕಾದಡೆಯೂ ಸಲೆ ಕೈಕೂಲಿಯ ಮಾಡಿಯಾದಡೆಯೂ ನಿಮ್ಮ ನಿಲುವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದಡೆ ತಲೆದಂಡ ಕೂಡಲ ಸಂಗಮದೇವಾ" "ತನ್ನ ಬಿಟ್ಟನ್ಯರ ಹಿತವ ನೋಡಿದರೆ ಕೂಡಿಕೊಂಬನಮ್ಮ ಕಪಿಲ ಸಿದ್ಧಮಲ್ಲಯ್ಯ" ಈ ದ್ವಂದ್ವನತಿಗಳಿದು ದಾಸೋಹಂ ಎಂದೆನಿಸಯ್ಯಾ ಕಪಿಲ ಸಿದ್ಧ ಮಲ್ಲಿಕಾರ್ಜುನಾ."

## ನೀತಿಗೆ ಮುಖ್ಯ ಸ್ಥಾನ

ಕಾಯಕದಲ್ಲಿ ನೀತಿಗೆ ಮುಖ್ಯ ಸ್ಥಾನವಿದೆ. ಪ್ರಾಮಾಣಿಕತೆ ರುಜುತ್ವ, ಇಲ್ಲದ ಕೆಲಸ ಕಾಯಕವಾಗಲಾರದು. ಸತ್ಯಶುದ್ಧ ಕಾಯಕ "ಧನದಲ್ಲಿ ಶುಚಿ ಪ್ರಾಣದಲ್ಲಿ ನಿರ್ಭಯನು" ನಿಧಾನ ತಪ್ಪಿಬಂದರೆ ಆತ ಒಲ್ಲನು; ಊರಮುಂದೆ ಹಾಲ ಹಳ್ಳ ಹರಿಯುತ್ತಿರಲು" "ಅವನು ಅದನ್ನು ಮುಟ್ಟ, ಏಕೆಂದರೆ ಅದು ಕಾಯಕದಿಂದ ಬಂದುದಲ್ಲ. ಕಾಯಕಿ ನಿರ್ಭಯನು ನಿರಾಶನು.

ಕಾಯಕ ಮಾಡುವದು ಹೇಮದಾಸೆಗಾಗಿ ಅಲ್ಲ, ಮತ್ತು ಹೆಚ್ಚಿನ ಗಳಿಕೆಗಾಗಿಯೂ ಅಲ್ಲ. ಗಳಿಕೆ ಲೋಭಿಯ ಗುಣ. ಲೋಭ ಸಾಧಕನ ಕಡುವೈರಿ ಸರ್ವಾರ್ಪಣ, ಈಶಾರ್ಪಣ ಕಾಯಕದ ಜೀವ. "ಆಶೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ ಈಸಕ್ಕಿಯ ಆಸೆ ನಿಮಗೇಕೆ ಮಾರಯ್ಯಾ ಅಮುಳೇಶ್ವರ ಲಿಂಗಕ್ಕೆ ದೂರ" ಒಮ್ಮನದಲ್ಲಿ ತಂದರೆ ಶಿವ ಮೆಚ್ಚುವ ಇಮ್ಮನದಲ್ಲಿ ತಂದರೆ ಶಿವ ಮೆಚ್ಚುವನು."

ಸತ್ಯ ಶುದ್ಧ ಕಾಯಕರಿಂದ ಬಂದ ಹಣ ತನಗೂ ಗುರುಜಂಗಮಕ್ಕೂ ವ್ಯಯಿಸಬೇಕು. ಬೇಕಾದಷ್ಟೇ ಹಣ ಗಳಿಸಬೇಕು. ಹೆಚ್ಚಿನ ಗಳಿಕೆ ಕಾಯಕಕ್ಕೆ ಹೋಗದು. "ಸತ್ಯ ಶುದ್ಧ ಕಾಯಕದಲ್ಲ. ಚಿತ್ತದಿಚ್ಛಂದವಾಗಿರಬೇಕು. ನೇಮದ ಕೂಲಿ ಅಂದಿನ ನಿತ್ಯ ಕಾಯಕದಲ್ಲಿ ಸಂದಿರಬೇಕು. ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ ತಾಮಾಡುವ ಸೇವೆ ನಷ್ಟವಯ್ಯಾ" ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ ಬೇಕೆಂದೆ ನಾದೊಡೆ ನಿಮ್ಮ ನಿಮ್ಮ ಪ್ರಮಥ ಪ್ರಮಥರಾಣೆ ಕೂಡಲಸಂಗಮದೇವಾ."

## ಶ್ರಮಜೀವಿಯ ಪಾತ್ರ.

ಹೀಗೆ ದುಡಿಮೆಯಿಂದ ನಿತ್ಯ ದಾಸೋಹ ಸಾಗಿಸಬೇಕು. ಇಲ್ಲಿ ಶ್ರಮಜೀವಿಯಾದವನಿಗೆ ನಾಳೆಯ ಚಿಂತೆಯಿಲ್ಲ. ನಾಳೆಯ ಚಿಂತೆಯಿಂದ ಇಂದಿನ ದುಡಿಮೆಯಲ್ಲಿ ತುಸುವನ್ನಾದರೂ ಉಳಿಸಿಡಬೇಕೆಂಬ ಅವಶ್ಯಕತೆಯಿಲ್ಲ. ನಿತ್ಯ ದುಡಿಮೆ, ನಿತ ದಾಸೋಹ, ಗಳಿಸಿ ಉಳಿಸಬೇಕೆಂಬ ಭಾವ ಮೈದೋರಿದಾಗ ಮನುಷ್ಯ ಉದ್ಯೋಗದಲ್ಲಿ ಪ್ರಾಮಾಣಿಕತೆ ಉಳಿಯುವದಿಲ್ಲ; ಅಗ ಅವನು ಅನೀತಿ, ಅನಾಚಾರ, ಅಸತ್ಯಗಳ ದಾಸನಾಗುವನು. ಒಬ್ಬನ ಗಳಿಕೆಯೆಂದರೆ ಹಲವು ಜೀವಿಗಳ ನಾಶ. ಸಾವಿರ ಜನಗಳ ಹೊಟ್ಟೆಗೆ ಕಲ್ಲು ಹಾಕಿ ಒಬ್ಬ ಶ್ರೀಮಂತನಾಗುವ. ಅಂತೇನೇ ಶರಣರು ಗಳಿಕೆಗೆ ಬಹಿಷ್ಕಾರ ಹಾಕಿದರು.

ಕಾಯಕದಿಂದ ಎಲ್ಲರಿಗೂ ಹೊಟ್ಟೆಗೆ ಹಿಟ್ಟು, ಮೈಗೆ ಬಟ್ಟೆ, ಇರಲು ಮನೆ, ತಾನಾರೆಂಬುದನ್ನರುಹುವ ಜ್ಞಾನ ಲಭಿಸುವವು. ಇಲ್ಲಿ ಎಲ್ಲರೂ ಸಮಾನರು; ಎಲ್ಲರ ಬದುಕು ಚೆನ್ನು. ಇದು ಶರಣರ ಸಮತಾವಾದ ಈ ಸಮತಾದಲ್ಲಿ ಹಿಂಸೆಗೆಡೆಯಿಲ್ಲ. ತನ್ನ ಬಾಳನ್ನು ಶುದ್ಧಗೊಳಿಸಿ, ಸಮಾಜದ ಉತ್ಕರ್ಷೆಗೆ ವಿರೋಧವಾಗುವಂತೆ-ತನ್ನಿಚ್ಛೆಯಂತೆ ಇರಲು, ನುಡಿಯಲು, ಮಾಸಿ ನಡೆಯಲು, ವ್ಯಕ್ತಿಸ್ವಾತಂತ್ರ್ಯವಿದೆ. ಅಲ್ಲದೆ ನಿಜವಾದ ಮಾನವ ಧರ್ಮದ ತಳವಿದೆ. ಲೋಕ ಕಲ್ಯಾಣದ ಗುರಿಯಿದೆ.

ಕಾಯಕ ಮಾಡುವವನಿಗೆ ಬಡತನವಿಲ್ಲ. ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ ಚಿತ್ತ ಶುದ್ಧನಾಗಿ ಕಾಯಕ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು, "ಮನೆನೋಡಾ ಬಡವರು ಮನ ನೋಡಾ ಧೀರರು. ಸೋಂಕಿನಲ್ಲಿ ಶುಚಿಗಳು" ಸರ್ವಾಂಗಧೀರರು—ಶರಣರು.

## ಗಳಿಕೆ ಕಾಯಕಕ್ಕೆ ಹೊರಗು

ಪಿತ್ರಾರ್ಜಿತ ಆಸ್ತಿಯಿಂದ ದಾಸೋಹ ಮಾಡುವೆನೆಂದರೆ ಆಗದು. ಗಳಿಕೆಯು ಕಾಯಕಕ್ಕೆ ಹೊರಗು ಎನ್ನುವಾಗ ಹಿರಿಯರ ಹಿಂದಿನವರಗಳಿಕೆ ಲಿಂಗಜಂಗಮಕ್ಕೆ ದಾಸೋಹಕ್ಕೆ ಸಲ್ಲದು. ಸತ್ಯದಿಂದ, ಪ್ರಾಮಾಣಿಕತೆಯಿಂದ ಹಣದ ಗಳಿಕೆಯಾಗದು. ಹಾಗೆ ಗಳಿಸಿದ ಹಣವಿದೆಯೆಂದು ಹಣದ ಗಳಿಕೆಯಾಗದು. ಹಾಗೆ ಗಳಿಸಿದ ಹಣವಿದೆಯೆಂದು ಕಾಯಕ ಮಾಡದೇ ನಿರುದ್ಯೋಗಿಯಾಗಿ ಹೊಟ್ಟೆ ಹೊರೆದರೆ ಅವನಿಗೆ ಸದ್ಗತಿಯಿಲ್ಲ; ಅವನು ಮಾನವನಲ್ಲ. "ಪಾಪಿಯ ಧನ ಪ್ರಾಯಶ್ಚಿತ್ತಕಲ್ಲದೆ ಸತ್ಪಾತ್ರಕ್ಕೆ ಸಲ್ಲದು." "ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಾರ್ಪಿತ, ಉಳಿದುದು ಅನರ್ಪಿತ, ಸತ್ಯ ಶುದ್ಧ ಕಾಯಕದ ನಿತ್ಯ ದ್ರವ್ಯ ಚಂಡೇಶ್ವರ ಲಿಂಗಕ್ಕೆ ನೈವೇದ್ಯ." ಇಂದು ತುಸುಹೆಚ್ಚಿಗೆ ದುಡಿದು ನಾಳೆ ಕಾಯಕ ಬಿಟ್ಟು ದಾಸೋಹ ಮಾಡಲು ಅವಕಾಶವಿಲ್ಲ. ಕಾಯಕದ ನಿತ್ಯ ದ್ರವ್ಯವೇಬೇಕು ದಾಸೋಹಕ್ಕೆ. ಇಂದು ಗಳಿಸಿ ನಾಳೆ ಮಾಡಿಹೆನೆಬಲ್ಲಗಿರುದ್ಯೋಗ್ಯಕ್ಕೆಡೆಯುಂಟು. ನಿತ್ಯ ಕಾಯಕ, ನಿತ್ಯ ದಾಸೋಹ.

ದಾಸೋಹಕ್ಕೆಂದು ಕಾಡಿ, ಬೇಡಿ ತರುವದು ಸರಿಯಲ್ಲ, ಭಿಕ್ಷೆ ಬೇಡುವದು ನೀಚ ಕೆಲಸ. "ಅನ್ಯರ ಮನೆಗೆ ಹೋಗಿ ತನ್ನುದರವ ಹೊರೆಯುದವನೇ ಅಚ್ಚ ಶರಣನು." "ಕಂದಿಸಿ, ಕುಂದಿಸಿ, ನೋಯಿಸಿ, ಕಂಡ ಕಂಡವರ ಬೇಡಿ ತಂದು ಮಾಡಿಹೆನೆಂಬುದು ದುಂದುಗದೋಗರ. ಅದು ಲಿಂಗ ನೈವೇದ್ಯಕ್ಕೆ ಸಲ್ಲದು" ಕೆಲವರು ದುಡಿಯದೆ ದುರುಳವೇದಾಂತಿಗಳಾಗಿ, ಅಂಗವಿಕಾರ ಮನವಿಕಾರವುಳ್ಳವರಾಗಿ ನಿಜವ ಸಾಧಿಸದೆ ಕೆಡುವರು. "ಕಾಯಕಕಾರದೆ ಮೈಸೊಂಬತನದಿಂದ ಬೇರೆ ಕೂಳಗಳಿಸಲಾರದೆ ಹಸಿದಿಪ್ಪರಯ್ಯಾ ಒಡಲ ಸೀರೆಯ ಗಳಿಸಲಾರದೆ ಕಚ್ಚುಟವ ಕಟ್ಟಿಕೊಂಡಿಪ್ಪರಯ್ಯಾ. ಮೀಯಲು ಎಣ್ಣೆಯ ಗಳಿಸದೆ ಮಂಡೆಬೋಳಾಗಿಪ್ಪಿರಯ್ಯಾ. ದಿಟದಿಂದ ಬಿಡಿಸಲರಿಯದೆ ಸಂಸಾರದ ಶಠೆಯನವಧರಿಸಿ ಕೊಂಡಿಪ್ಪವರಿಗೆ ನಾನಂಜುವೆನಯ್ಯಾ ಸಕಳೇಶ್ವರಾ."

## ಕಾಯಕದಿಂದಲೇ ಜೀವನ್ಮುಕ್ತಿ

ಗುರುಲಿಂಗ ಜಂಗಮರಿಗೆ ತನು ಮನ ಧನ ಸಲ್ಲಿಸಬೇಕು. ಹೀಗೆ ಸಲ್ಲುವದು ದಾನರೂಪದಿಂದಲ್ಲ; ಅರ್ಪಣ ಭಾವದಿಂದ. ಅಲ್ಲದೆ ಗುರುಲಿಂಗ ಜಂಗಮರೂ ಕಾಯಕವುಳ್ಳವರು. ಅವರು ಬೇಡುವದಿಲ್ಲ. ಭಕ್ತ ನೀಡುವದಿಲ್ಲ

"ಬೇಡುವಾತ ಜಂಗಮನಲ್ಲ, ಬೇಡಿಸಿಕೊಳ್ಳುವಾತ ಭಕ್ತನಲ್ಲ" ಎಲ್ಲರೂ ಕಾಯಕ ಮಾಡುವಾಗ ಯಾರು ಯಾರಿಗೆ ಬೇಡಬೇಕು ನೀಡಬೇಕು. ಭಕ್ತ ಜಂಗಮನಿಗೆ ನೀಡಿದರೆ ಅದು ಆ ಜಂಗಮನ ಕಾಯಕ, (ಪ್ರತಿಫಲ) "ನೇಮವ ಮಾಡಿಕೊಂಡು ಭಕ್ತರ ಭವನಂಗಳ ಹೊಕ್ಕು ಕಾಯುವ ಬಿಟ್ಟು ಹೊನ್ನ ಬೇಡಿ ಹೆನೆಂಬುದು ಕಷ್ಟವಲ್ಲವೇ? ಆ ಗುಣ ಅಮಳೇಶ್ವರ ಲಿಂಗಕ್ಕೆ ದೂರ" "ಗುರುವಾದಡೆಯೂ ಕಾಯಕದಿಂದಲೇ ಜೀವನ್ಮುಕ್ತಿ ಲಿಂಗವಾದಡೆಯೂ ಕಾಯಕದಿಂದಲೇ ಶಿಲೆಯ ಕುಲಹರಿವದು. ಜಂಗಮವಾದಡೆಯೂ ಕಾಯಕದಿಂದಲೇ ವೇಷದ ಪಾಶ ಹರಿವುದು" ಹೀಗೆ ಗುರುಲಿಂಗ ಜಂಗಮರಿಗೆ ಕಾಯಕಬೇಕೇ ಬೇಕೆಂಬುದನ್ನು ವಚನಕಾರರು ಒತ್ತಿ ಹೇಳಿದ್ದಾರೆ. ದುಡಿತಕ್ಕೆ ಒಲ್ಲೆಂಬ ಲಿಂಗವನ್ನು ಬಿಟ್ಟು ದುಡಿಯಲು ಒಪ್ಪಿ ಮತ್ತೆ ಬಂದಲಿಂಗವನ್ನು ದುಡಿಸಿ ದಾಸೋಹ ಮಾಡಿದ ಪುಣ್ಯ ಪುರುಷ ನುಲಿಯ ಚಂದಯ್ಯ. ಶಿವನನ್ನು ವಚನಕಾರರು ಸಿರುದ್ಯೋಗಿಯೆಂದು ಕರೆದಿದ್ದಾರೆ. ಕಂಕರಿ ಕಕ್ಕಯ್ಯನೆಂಬ ಶರಣ ಕಂಕರಿಬಾರಿಸಿ ವಚನವನ್ನು ಹಾಡಿ ಜ್ಞಾನ ಪ್ರಸಾರ ಮಾಡುವ ಕಾಯಕ ಮಾಡುತ್ತಿದ್ದನು. ಒಮ್ಮೆ ಶಿವನು ಅವನ ಕಂಕರೀ ನುಡಿತಕ್ಕೆ ಮನಸೋತು ಕುಣಿದು ಕಾಯಕ ಬೇಡಿದ. ಆಗ ಕಂಕರೀ ಕಂಕಯ್ಯ— "ನಿನ್ನ ಕೈಲಾಸದಲ್ಲಿರುವವರೆಲ್ಲ ಸೋಮಾರಿಗಳು. ನೀನು ಅವರೊಡೆಯ. ನಿನಗೆ ಕಾಯಕ ಕೊಡಲಾಗದು. ನೀನು ಈ ಭೂಮಿಯಲ್ಲಿ ಬಂದು ವಾಸಿಸಿ ದುಡಿದವನಾಗು ಆಗ ಕಾಯಕ (ಕೂಲಿ) ಕೊಡುವೆನು'' ಎಂದನು.

ಕಾಯಕ ಬೇರೆಯವರಿಂದ ಮಾಡಿಸಿ ತನ್ನುದರ ಹೊರೆಯಕೂಡದು. '' ತನ್ನಾಶ್ರಯದ ರತಿ ಸುಖವನು ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಯ್ಯಲು ಮಾಡಿಸಬಹುದೇ? ತನ್ನ ಲಿಂಗಕ್ಕೆ ತಾ ಮಾಡುವ ನಿತ್ಯ ನೇಮವ ಬೇರೊಬ್ಬರ ಕೈಯ್ಯಲು ಮಾಡಿಸಬಹುದೇ?" ಕಾಯಕಿ ಶೀಲವಂತನಾದರೆ ತಾ ಸವೆದು ಶೀಲವ ಮಾಡಬೇಕು. ತಾಮಸ ಶೀಲಗಳು ವರ್ಜ್ಯ. ಅವರಿಗೆ ಗ್ರಹಬಲ ಬೇಕಿಲ್ಲ. ''ಶುಭಾಶುಭ ಶಿವಾರ್ಪಣ''ವೆಂದು ನಂಬಿದವರಿಗೆ ಗ್ರಹಬಲವೇಕೆ? " ದಿನ ಒಂದೇ ಹರಣೆಂಬುವಂಗೆ '' ದಿನ ಒಂದೇ ಹಣೆಯ ದುರ್ಲಿಖಿತವಂ ತೊಡವಂಗೆ.]

ಸತ್ಯ ಶುದ್ಧ ಕಾಯಕವುಳ್ಳವ ಉಂಡುಪವಾಸಿ, ಬಳಸಿ ಬ್ರಹ್ಮಚಾರಿ. ಆತ ದೇಹ ದಂಡಿಸನು. ಅವನು ಸಶಕ್ತನು. ಆದರೆ ದೇಹ ವಿಕಾರಕ್ಕೆ ಒಳಗಾಗುವನಲ್ಲ. "ಹಾವಿನ ಹಲ್ಲ ಕಳೆದು ಹಾವ ನಾಡಿಸಬಲ್ಲರೆ ಹಾವಿನ

ಸಂಗವೇ ಲೇಸು ಕಂಡಯ್ಯಾ" ಕಾಯದಿಂದ ಲಿಂಗದರುಶನ, ಕಾಯದಿಂದ ಜಂಗಮದರುಶನ ಕೂಡಲಚನ್ನಸಂಗಯ್ಯಾ ಈ ಕಾಯದಿಂದ ನಿವ್ಮನ ಕಂಡೆನು ಇಂದ್ರಿಯ ನಿಗ್ರಹಮಾಡಕೂಡ. ಹಾಗಾದರೆ ಪಂಚೇಂದ್ರಿಯಂಗಳು ಮುಂದೆ ಬಂದು ಕಾಡುವವು. ಹಿಂದಿನ ಪುರಾತರು ಸಂಸಾರಿಗಳಾಗಿದ್ದರು. ಕಾಯವ ದಂಡಿಸಿ ಬರಿದೆ ಹಾಳಾಗಬಾರದು. "ಕೂಡಲಸಂಗಮನೊಲಿಪ ಬಂದ ಪ್ರಸಾದ ಕಾಯ ಕೆಡಿಸಲಾಗದು." ಹೊನ್ನು, ಹೆಣ್ಣು, ಮಣ್ಣು ಬೇಕು. ಆದರೆ ಪರಸ್ತ್ರೀ ಪರಧನ ಆಶೆಕೂಡದು. "ಭಕ್ತನ ಮನ ಹೆಣ್ಣಿನೊಳಗಾದರೆ ವಿವಾಹ ಮಾಡಿ ಕೊಡುವದು. ಭಕ್ತನ ಮನ ಮಣ್ಣಿನೊಳಗಾದರೆ ಕೊಂಡು ಆಲಯವ ಮಾಡುವದು. ಭಕ್ತನ ಮನ ಹೊನ್ನಿನೊಳಗಾದರೆ ಬಳಲಿ ದೊರಕಿಸುವದು ನೋಡಾ ಕಪಿಲ ಸಿದ್ಧಮಲ್ಲಿಕಾರ್ಜುನ. ಹೀಗೆ ಸತ್ಯ-ಶುದ್ಧ ಕಾಯಕದಿಂದ ದೇಹ ದೇವಾಲಯವಾಗುವದು.

## ಸಂಸಾರ ಸಾಧನರಂಗ.

ಸಂಸಾರ, ಮರ್ತ್ಯ ದೇಯುವಲ್ಲ. ಹೇಡಿಯಾದವನು ಈ ಭಾವವುಳ್ಳವನಾಗಿರುತ್ತಾನೆ. ಧೀರ ಕಾಯಕಿಗೆ ಇವು ಅವನ ಸಾಧನ ರಂಗಗಳು; ಅಲ್ಲಿ ಕಾಯವೆಸಗಿ ಶಿವನ ಸಿಜವ ಸಾಧಿಸುತ್ತಾನೆ. ಸತಿ-ಪತಿಗಳೊಂದಾಗಿ ಆಶೆ ಆಮಿಷವಿಲ್ಲದೆ ಕಾಯಕಗೈದು ಬಂದುದರಿಂದ ದಾಸೋಹ ಮಾಡುವ ಅಚ್ಚ ಶರಣರ ಸಂಸಾರ ಸವಿಸುಖವೇ ಶಿವಗೆ ಪೂಜೆ, ನೈವೇದ್ಯ. ಕಾಯಕಿಗಳು ಲಿಂಗಭೋಗೋಪಭೋಗವುಳ್ಳವರು. ಕಾರಣ ಅವರು ಬಳಸಿ ಬ್ರಹ್ಮಚಾರಿ, ಉಂಡು ಉಪವಾಸಿಗಳು.

## ಕಾಯಕದ ಮಹತಿ.

ಲಿಂಗವಂತ ಧರ್ಮವು ಭಕ್ತಿ, ಜ್ಞಾನ ಕ್ರಿಯೆಗಳ ತ್ರಿವೇಣಿ ಸಂಗಮ "ಹರಿವ ನದಿಯ ತೆರನ ಹೋಲಬಲ್ಲರೆ ಭಕ್ತಿ" "ಜ್ಞಾನವೆಂದರೆ ತಿಳಿವುದು" "ಕ್ರಿಯೆಯೆಂದರೆ ತಿಳಿದಂತೆ ಆಚರಿಸುವುದು"-ಹೀಗೆ ವಚನಕಾರರು ಭಕ್ತಿ, ಜ್ಞಾನ ಕ್ರಿಯೆಗಳ ವ್ಯಾಖ್ಯೆ ಹೇಳಿದ್ದಾರೆ. ಸಾಧಕನಿಗೆ ಈ ಮೂರೂ ಅತ್ಯಾವಶ್ಯಕ.

ಮೂರು ಶರೀರಗಳ ವಿಕಾಸಕ್ಕೆ ಬಾಹ್ಯ ಕ್ರಿಯೆಗಳು ಅವಶ್ಯಕ. ಈ ಕ್ರಿಯೆಯಲ್ಲಿ ಮನುಷ್ಯನು ನಿತ್ಯ ಮಾಡುವ ಕ್ರಿಯೆಗಳೆಲ್ಲಾ ಸಮಾವೇಶವಾಗುತ್ತವೆ. ಇವುಗಳನ್ನು ಶರಣರು ಉದರಪೋಷಣೆಯ ಕ್ರಿಯೆಗಳೆಂದು ತಿರಸ್ಕರಿಸದೆ ಇವುಗಳಿಗೆ ಅವರು ಕಾಯಕವೆಂದು ಕರೆದು ಆಧ್ಯಾತ್ಮಿಕ ಉನ್ನತಿಯ ಮಾರ್ಗಗಳನ್ನಾಗಿ ಮಾಡಿದರು.

ಬಾಹ್ಯ ಕ್ರಿಯೆ, ವ್ಯವಹಾರ, ದುಡಿಮೆಗಳಿಗೆ ಹಿಂದುಸ್ಥಾನದ ಯಾವ ಧಾರ್ಮಿಕ ಪಂಥದವರೂ ಮಹತ್ವ ಕೊಟ್ಟಿಲ್ಲ. ಶರಣರು ಇವುಗಳಿಗೆ ಧಾರ್ಮಿಕ ಉಚ್ಚ ಸ್ಥಾನವನ್ನು ಕೊಟ್ಟರು; ಅಲ್ಲದೆ ಪ್ರತಿಯೊಬ್ಬ ಶರಣನು ಯಾವುದೇ ಒಂದು ಉದ್ಯೋಗವನ್ನು ಕೈಕೊಳ್ಳಬೇಬೇಕೆಂದು ವಿಧಿಸಿದರು. ಜಗತ್ತನ್ನು ಮಾಯೆಯೆಂದು ಭಾವಿಸದೆ ಅದರ ಪರಿಣಾಮಗಳನ್ನು ತಾಳದಂತೆ ಅದನ್ನು ತಿಗಳೆಯಲು ಕ್ರಿಯೆ ಬೇಕೇಬೇಕೆಂದು ಹೇಳಿ, ಯಾವುದೇ ವ್ಯವಹಾರ ಮಾಡಿದರೂ ಅದರ ಪರಿಣಾಮವೂ ಕೂಡ ಅಂಟದಂತೆ ವರ್ತಿಸಬೇಕೆಂದು ನುಡಿದು ನಡೆದರು. ಇದಕ್ಕಾಗಿ ಮನುಷ್ಯನು ಅಂಗಕ್ರಿಯೆಗಳನ್ನು ಲಿಂಗಕ್ರಿಯೆಗಳನ್ನಾಗಿ ಮಾರ್ಪಡಿಸಬೇಕು. ಇದುವೇ ಸತ್ಯ ಶುದ್ಧ ಕಾಯಕ.

## ಕಾಯಕದಲ್ಲಿ ಬರುವ ತೊಂದರೆ.

ಹೀಗೆ ಕಾಯಕ, ಕೈಕೊಂಡ ಉದ್ಯೋಗ ಹೊಟ್ಟೆ ತುಂಬಿಸಿ, ಹೃದಯತುಂಬಿಸಿ, ಅಂತರಂಗ—ಬಹಿರಂಗ ಶುಚಿಗೊಳಿಸಿ, ತನುತ್ರಯಗಳನ್ನು ವಿಕಾಸಗೊಳಿಸಿ ತಾನಾರೆಂಬುದನ್ನರುಹಿ, ಅಂಗವನ್ನು ಲಿಂಗವನ್ನಾಗಿ ಮಾಡುವುದು.

ಕಾಯಕ ಮಾಡುವದೆಂದರೆ ಅಲುಗಿನ ಮೇಲೆ ಸಾವು ಮಾಡಿದಂತೆ! ಸಾಧಕನಿಗೆ ಧಿಟ್ಟತನ, ಎದೆಗಾರಿಕೆ ಬೇಕು. ಹಿಡಿದ ಕಾಯಕ ಸತ್ಯ ಶುದ್ಧವಾಗಿ ಮಾಡುವೆನೆಂಬ ಛಲವಿರಬೇಕು; ಆದರೆ "ನಾನು ಮಾಡುವೆ" ಎಂಬ ಹಮ್ಮು-ಬಿಮ್ಮುಗಳಿರಕೂಡದು. ಕಾಯಕದಲ್ಲಿ ತಾದಾತ್ಮತೆ ಬೇಕು; ಆದರೆ ಕ್ರಿಯೆಯ ಪರಿಣಾಮಗಳು ಹೊದ್ದಂತೆ ನಿರ್ಲೇಪಿಯಾಗಿ ಇರಬೇಕು. "ಮಾಡುವಂತಿರಬೇಕು. ಮಾಡದಂತಿರಬೇಕು; ಮಾಡುವ ಮಾಟದೊಳಗೆ ತಾ ನಿಲ್ಲದಂತಿರಬೇಕು." ಇಂತು ಕರ್ಮಯೋಗಿ ಕಾಯಕ ಮಾಡುವಲ್ಲಿ ಶಿವನು ಅನೇಕ ಅಡೆತಡೆಗಳನ್ನು ತಂದೊಡ್ಡುತ್ತಾನೆ. ಆಗಾಗ ಧನ ಪಿಶಾಚಿಯು ಸುಳಿಯುವುದೂ ಉಂಟು. ಒಮ್ಮೊಮ್ಮೆ ಪ್ರಾಣದ ಮೇಲೆ ಬರುವುದೂ ಉಂಟು. "ಕಾಯದ ಕಳವಳಕಂಜಿ ಕಾಯಯ್ಯಾ ಎನ್ನೆನು; ಜೀವನೋಪಾಯಕ್ಕಾಗಿ ಈಯಯ್ಯಾ ಎನ್ನೆನು." "ತನುವ ಬೇಡಿದಡೀವೆ, ಮನವ ಬೇಡಿದಡೀವೆ, ಧನವ ಬೇಡಿದಡೀವೆ." "ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪದು ಈಗಲೇ ಬರಲಿ." "ಅರ್ಥವನರ್ಥವ ಮಾಡಿ ಕೋಳಾಹಳಂಗೈಯ್ಯುತ್ತಿರಲಿ—ಇಕ್ಕುವ ಶೂಲ ಪ್ರಾಪ್ತಿಯಾಗಲಿ ಮತ್ತೆಯೂ ಲಿಂಗಾರಾ

ಧನೆ ಮಾಡುವೆ.'' ಎಂಬ ವೀರಭಾಷೆಯಿಂದ ಕ್ರಿಯೆಯಲ್ಲಿ ಪ್ರಗತಿಹೊಂದುತ್ತ ಮುನ್ನಡೆಯಬೇಕು. ಕಾಯಕಭೋಗಿಗೆ ಮಹಾನವಮಿ ಅವನಿಗೆ ದೀಪದೋಲು ರಿದ್ದು, ಗಂಧದಂತೆ ಸವೆದು, ಕಬ್ಬಿನಂತೆ ಹಿಂಡಿ ಹಿಪ್ಪೆಯಾಗುವದರಲ್ಲಿ ಸಂತ ಸವಿದೆ. ಸಮಾಧಾನವಿದೆ.

## ದೃಢತೆಯಿಂದ

ಹಿಡಿದ ಕಾಯಕವನ್ನು ದೃಢತೆಯಿಂದ, ಅಚಂಚಲತೆಯಿಂದ, ರುಜು ತೆಯಿಂದ ಮಾಡುತ್ತ ಪ್ರಗತಿಹೊಂದಿ ಸಾಧಕನು ಮೆಲ್ಲಮೆಲ್ಲನೆ ಭಕ್ತನೆನಿ ಸುವನು, ಮೆಲ್ಲಮೆಲ್ಲನೆ ಯುಕ್ತಾನೆನಿಸುವನು. ಮೆಲ್ಲಮೆಲ್ಲನೆ ಶಿವನಿಗಿಂತ ಮಿಗಿಲೆನಿಸುವನು. ಕೊನೆಗೆ ಹತ್ತರೊಳಗೆ ಹನ್ನೊಂದಾಗಿ ನೀರ ತಾವರೆಯಂ ತಿಪ್ಪನು, ಮೇಲು ಕೀಳು, ಸಿರತನ ಬಡತನ ವೈರ ವೈಶ್ರ, ಹುಟ್ಟು ಸಾವು ಇಹ ಪರ ಮೀರಿ ಜವನ ಬಾಯಲ್ಲಿ ಬೀಲಕೊಯ್ದು ಹೋಗುತ್ತಾನೆ.

ಶರಣರ ಕಾಯಕಕ್ಕೆ ಇಂತಹ ಸ್ಥಾನಕೊಟ್ಟು ಜನಗಳನ್ನು ಉದ್ಯೋಗಿ ಗಳನ್ನಾಗಿ ಮಾಡಿದರು. ತಮ್ಮ ನಿತ್ಯ ವ್ಯವಹಾರಗಳಿಂದಲೇ ಶಿವನ ನಿಜವ ಸಾಧಿಸುವದನ್ನು ತೋರಿಸಿಕೊಟ್ಟರು.

## ಉದ್ಯೋಗವೇ ಶಿವಪೂಜೆ

ಗುರುವು ಶಿಷ್ಯನಿಗೆ ದೀಕ್ಷೆಯನ್ನು ಕೊಟ್ಟನಂತರ ಒಂದು ಉದ್ಯೋಗ ವನ್ನು ಕೈಕೊಳ್ಳಲು ಹೇಳುತ್ತಾನೆ. ಅಥವಾ ಶಿಷ್ಯ ತನ್ನ ಇಚ್ಛೆಯಂತೆ ಉದ್ಯೋಗ ಆಚರಿಸಕೊಳ್ಳಬಹುದು. ಅವನಿಗೆ ಆ ಉದ್ಯೋಗವೇ ಶಿವಪೂಜೆ ಕಾಯಕವಿಲ್ಲದೆ ಯಾವ ಶರಣನೂ ಇಲ್ಲ. ಅನೇಕರು ಅನೇಕ ರೀತಿಯ ಕಾಯ ಕಗಳನ್ನು ಮಾಡಿ ಅವುಗಳಿಂದಲೇ ತಮ್ಮ ನಿಜವ ಸಾಧಿಸಿಕೊಂಡರು. ಬಸ ವಣ್ಣನ ಮಹಾ ಮನೆಯಲ್ಲಿ ನಿತ್ಯ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಗಣಂಗಗಳಿಗೆ ಭೋಜನವಾಗುತ್ತಿತ್ತು. ಎಲ್ಲರಿಗೂ ಇದು ಗೊತ್ತು. ಆದರೆ ಬಹುಜನರಿಗೆ ಆ ಗಣಂಗಳೆಲ್ಲರು ಬೇರೆ ಬೇರೆ ಕಾಯಕ ಮಾಡುತ್ತಿದ್ದರೆಂ ಬುದು ತಿಳಿಯದು. ಅಣ್ಣ ಬಸವಣ್ಣ ವಿಶ್ವ ಕುಟುಂಬಿ ಎಲ್ಲ ಗಣಂಗಳು ಅಣ್ಣನ ಜೊತೆಗೇ ಇರುತ್ತಿದ್ದರು. ಅವರೆಲ್ಲರೂ ಉದ್ಯೋಗಸ್ತರು. ಅವರು ಸತ್ಯ ಶುದ್ಧ ಕಾಯಕ ಮಾಡಿ ನಿತ್ಯ ಸುಖಿಗಳಾಗಿದ್ದರು; ನಿತ್ಯ ಮುಕ್ತರಾಗಿದ್ದರು.

———

# ಪರಮಾತ್ಮ, ಲಿಂಗ ಮತ್ತು ಲಿಂಗಾಂಗ ಸಾಮರಸ್ಯ ಇವುಗಳ ಸ್ವರೂಪುಗಳು



## ಪರಮಾತ್ಮನ ಮೂಲಸ್ವರೂಪು.

೧. ಅಯ್ಯಾ, ನಿರವಯ ಶೂನ್ಯಲಿಂಗ ಮೂರ್ತಿಯ ನಿಲುಕಡೆ ಎಂತೆಂದೊಡೆ, ಸಾಕಾರನಲ್ಲ ನಿರಾಕಾರನಲ್ಲ ನೋಡಾ. ನಿರವಯ ಶೂನ್ಯಲಿಂಗ ಮೂರ್ತಿ ಆದಿಯಲ್ಲ, ಇಹಪರದವನಲ್ಲ, ಸುಖದವನಲ್ಲ, ದುಃಖದವನಲ್ಲ. ನಿರವಯ ಶೂನ್ಯಲಿಂಗ ಮೂರ್ತಿ ಪುಣ್ಯ ಪಾಪದವನಲ್ಲ, ಕರ್ತೃಭೃತ್ಯನಲ್ಲ, ಕಾರಣ ಕಾರ್ಯನಲ್ಲ, ಧರ್ಮಿ ಕರ್ಮಿಯಲ್ಲ, ಪೂಜ್ಯ ಪೂಜಕನಲ್ಲ. ಇಂತು ಉಭಯ ವಳಿದು ಬೆಳಗುವ ನೋಡಾ ನಮ್ಮ ಗುಹೇಶ್ವರಲಿಂಗವು.

೨. ಅಯ್ಯಾ ನಾಟಕನಲ್ಲ, ಬೂಟಕನಲ್ಲ, ಶೀಲಿಗನಲ್ಲ, ಕಪಟ ನಾಟಕನಲ್ಲ, ರುಂಡಮಾಲಿಗ ಪುಲಿಚರ್ಮ ಗಜಚರ್ಮನಲ್ಲ, ದಕ್ಷಧ್ವಂಸನಲ್ಲ, ತ್ರಿಪುರಾರಿಯಲ್ಲ, ನಂದಿ ವಾಹನನಲ್ಲ, ಸರ್ಪಧರ ಚಂದ್ರಶೇಖರನಲ್ಲ, ಗಂಗಾಧರ ಗೌರೀವರನಲ್ಲ, ಗಿರಿಜಾವಲ್ಲಭ ಪಾರ್ವತೀ ಪ್ರಿಯನಲ್ಲ, ಯೋಗಿ ಜೋಗಿಯಲ್ಲ, ಶ್ರವಣ ಸನ್ಯಾಸಿಯಲ್ಲ, ಕಾಳಾ ಮುಖಿಯಲ್ಲ, ಪಾಶು ಪತಿಯಲ್ಲ, ನೋಡಾ ನಿರವಯ ಶೂನ್ಯಲಿಂಗ ಮೂರ್ತಿ ಗುಹೇಶ್ವರಲಿಂಗವು.

೩. ಧರೆಯಾಕಾಶವಿಲ್ಲದಂದು, ತ್ರೈಮಂಡಲ ನೆಲೆಗೊಳ್ಳದಂದು, ಹೋಮ, ನೇಮ, ಜಪ, ತಪವಿಲ್ಲದಂದು ನಿಮ್ಮನಾರು ಬಲ್ಲರು? ಹರಿಬ್ರಹ್ಮರಿಗೆ ಅಗೋಚರ, ನಿರ್ಲೇಪ, ನಿರಂಜನನಾಗಿ, ವೇದಂಗಳರಿಯವು. ಶಾಸ್ತ್ರ, ಶ್ರುತಿ, ಸ್ಮೃತಿಗಳು ನಿಮ್ಮನರಿಯವು. ಗಗನ ಕಮಳ ಕುಸುಮ ಪರಿಮಳದಿಂದತ್ತಲು ಗುಹೇಶ್ವರಾ ನಿಮ್ಮ ನಿಲವನಾರು ಬಲ್ಲರು?

೪. ಆದಿ ಅನಾದಿ ಇಲ್ಲದಂದು, ಅಜಾಂಡ ಬ್ರಹ್ಮಾಂಡವಿಲ್ಲದಂದು ತಾನೆ. ನಾದಬಿಂದು ಕಳಾತೀತನು ಜನ ಪರಮರಿಲ್ಲದಂದು ತಾನೆ. ನಾಮ ರೂಪು ಕ್ರಿಯಾತೀತನು ಸಚರಾಚರಂಗಳೆಲ್ಲ ರಚನೆಗೆ ಬಾರದಂದು ತಾನೆ. ಅಖಂಡ ಪರಿಪೂರ್ಣನು, ಅಪ್ರಮಾಣ, ಅಗಮ್ಯ, ಅಗೋಚರದತ್ತಲಾದ ಮಹಾಘನ ಚೈತನ್ಯಲಿಂಗ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೫. ದ್ವೀಪಾದ್ವೀಪವಿಲ್ಲದಲಿಂದತ್ತತ್ತ, ಕಾಲಕರ್ಮವಿಲ್ಲದಲಿಂದತ್ತತ್ತ, ಮಾಯಾ ಮೋಹವಿಲ್ಲದಲಿಂದತ್ತತ್ತ, ಏನೂ ಏನೂ ಇಲ್ಲದಲಿಂದತ್ತತ್ತ, ಆದಿ ಮೂವರಿಲ್ಲದಲಿಂದತ್ತತ್ತ, ಸಿಮುಲಿಗೆಯ ಚನ್ನರಾಮನೆಂಬ ಲಿಂಗವಿಲ್ಲದ ಲಿಂದತ್ತತ್ತ.

೬. ಅಂಡಜ ಒಡೆಯದುದರಿಂದ ಮುನ್ನ, ದ್ವೀಪಾದ್ವೀಪವಿಲ್ಲದರಿಂದ ಮುನ್ನ, ಅನಲ ಪವನವಿಲ್ಲದರಿಂದ ಮುನ್ನ, ರವಿಶಶಿಗಳಿಲ್ಲದರಿಂದ ಮುನ್ನ, ಇಂತೀ ಚತುರ್ವಿಧ ಒಂದಾಗದ ಮುನ್ನ, ಗುಹೇಶ್ವರ ಲಿಂಗವಿಲ್ಲದರಿಂದ ಮುನ್ನ.

೭. ಶೂನ್ಯಹೃದಯ ನಿಶ್ಶೂನ್ಯವಿಲ್ಲದಂದು, ಬ್ರಹ್ಮ, ವಿಷ್ಣು, ಮಹೇಶ್ವರ ರಿಲ್ಲದಂದು, ಹದಿನಾಲ್ಕು ಭುವನದಿಗ್ವಳಯವಿಲ್ಲದಂದು, ಕೂಡಲ ಚನ್ನಸಂಗ ನೆಂಬ ಹೆಸರು ಮುನ್ನಿಲ್ಲದಂದು.

---

## ಸೃಷ್ಟಿಯ ರಚನೆ.

೧. ಮಹಾ ಕರ್ತನು ತನ್ನ ಶಕ್ತಿಯ ವಿನೋದಕ್ಕೆ ಜಗವ ನಿರ್ಮಿಸಿದ. ಅನಂತ ಲೋಕಂಗಳನ್ನು, ಚಂದ್ರ ಸೂರ್ಯ ನಕ್ಷತ್ರ ಸಿಡಿಲು ಮಿಂಚುಗಳನ್ನು, ಕಾಲಕರ್ಮ ಪ್ರಳಯಂಗಳನ್ನು, ಹೆಣ್ಣು ಗಂಡು ಜಾತಿ ವಿಜಾತಿಗಳಾದ ನರ ಸುರ ತಿರ್ಯಗ್ಜಾತಿ ಸ್ಥಲ ಭೋಗ ಆಯುಷ್ಯ ನಿದ್ರೆ ಮೊದಲಾದ ಸಮಸ್ತ ಪ್ರಪಂಚ ಗಳನ್ನು, ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳನ್ನು ಹುಟ್ಟಿಸಿದ ತನ್ನ ವಿನೋ ದಕ್ಕೆ. ಯಂತ್ರವಾಹಕನು ಮಾಡಿದ ಕಟ್ಟಣೆಯನಾರಿಗೂ ತಿಳಿಯಬಾರದು ನೋಡಾ. ಸರ್ವಾತ್ಮರು ಮಲಪಾಶದಿಂದ ಬಂಧಿಸಿಕೊಂಬ ಪಶುಗಳಾದರು, ತಾ ಪಶುಪತಿಯಾದ ನಮ್ಮ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು.

೨. ಮರದೊಳಗಣ ಪತ್ರ ಫಲಂಗಳು ಮರಕಾಲವಶದಲ್ಲಿ ತೋರುವಂತೆ, ಹರನೊಳಗಣ ಪ್ರಕೃತಿ ಸ್ವಭಾವಂಗಳು ಹರಭಾವದಿಚ್ಛೆಗೆ ತೋರುವವು. ಲೀಲೆ ಯಾದಡೆ ಉಮಾಪತಿ. ಲೀಲೆ ತಪ್ಪಿದಡೆ ಸ್ವಯಂಭು ಗುಹೇಶ್ವರಾ.

೩. ತನ್ನ ವಿನೋದಕ್ಕೆ ತಾನೇ ಸೃಷ್ಟಿಸಿದ ಸಕಲ ಪ್ರಪಂಚನು. ತನ್ನ ವಿನೋದಕ್ಕೆ ತಾನೇ ತಿರುಗಿಸಿದ ಅನಂತ ದುಃಖಂಗಳಲ್ಲಿ. ಇಂತೆನ್ನ ಚನ್ನಮಲ್ಲಿ ಕಾರ್ಜುನನೆಂಬ ಪರಶಿವನು ಜಗದ್ವಿಲಾಸ ಸಾಕಾದಡೆ, ಮತ್ತೆ ಪರಿವನಾ ಮಾಯಾ ಪಾಶವನು.

೪. ಹೊದ್ದು ಹೊದ್ದೆಂಬುದು ಇಲ್ಲದ ದೇವಾ, ನಿಮ್ಮಿಂದ ನೀವೇ ಶೂನ್ಯ ದಲ್ಲಿ ನಿಂದು, ಸ್ವಯಂಭುವಾದಿರಲ್ಲಾ! ಬೀಜವೃಕ್ಷದಂತೆ ಸಾಕಾರ ನಿರಾಕಾ ರವು ನೀವೇಯಾದಿರಲ್ಲಾ! ಮಹಾ ಕರ್ತನು ತನ್ನ ಶಕ್ತಿಯ ವಿನೋದಕ್ಕೆ ಜಗವ ನಿರ್ಮಿಸಿದ ಸ್ವತಂತ್ರ ಸಿದ್ಧಲಿಂಗೇಶ್ವರಾ.

೫. ಘನಗಂಭೀರ ಮಹಾ ವಾರುಧಿಯಲ್ಲಿ ಫೇನತರಂಗ ಬುದ್ಬುದಂಗಳು ದಯವಲ್ಲದೆ, ಬೇರಾಗಬಲ್ಲವೇ? ಆತ್ಮನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡ ಕೋಟಿಗಳಾದುವಲ್ಲದೆ ಬೇರಾಗಬಲ್ಲವೇ? ಇದು ಬೇರೆಂಬ ಅರಿಮರುಳುಗಳ ನೇನೆಂಬೆ? ವಿಶ್ವವನರಿದು ನೋಡಲು ಸಿಮುಲಿಗೆಯ ಚನ್ನರಾಮನೆಂಬ ಲಿಂಗವು ಬೇರಿಲ್ಲ.



## ಪರಮಾತ್ಮನ ನಿಜವನ್ನರಿಯುವದು ಕಷ್ಟವು.

೧. ಅರಿದೆವೆಂದಡೆ ಅರಿಯಬಾರದು ನೋಡಾ. ಘನಕ್ಕೆ ಘನ ತಾನೇ ನೋಡಾ. ಚನ್ನಮಲ್ಲಿಕಾರ್ಜುನನ ನಿರ್ಣಯವಿಲ್ಲದೆ ಪೋದೆನು.

೨. ನಿಮ್ಮ ತೇಜವ ನೋಡಲೆಂದು ಹೆರೆಸಾರಿ ನೋಡುತ್ತಿರಲು, ಶತ ಕೋಟಿ ಸೂರ್ಯರು ಮೂಡಿದಂತೆ ಇದ್ದುದಯ್ಯ. ಮಿಂಚಿನ ಬಳ್ಳಿಯ ಸಂಚವ ಕಂಡಡೆ ಎನಗಿದು ಸೋಜಿಗವಾಯಿತ್ತು. ಗುಹೇಶ್ವರಾ, ನೀನು ಜ್ಯೋತಿರ್ಲಿಂಗ ವಾದಡೆ, ಉಪಮಿಸಿ ನೋಡಬಲ್ಲವರಿಲ್ಲವಯ್ಯ.

೩. ಕಾಲಕಲ್ಪಿತಂಗಳಿಲ್ಲದೆ ನಿನ್ನಿಂದ ನೀನೇಯಾಗಿರ್ದೆಯಲ್ಲ. ನಿಮ್ಮ ಪರಮಾನಂದದ ಪ್ರಭಾವದ ಪರಿಣಾಮದಲ್ಲಿ ಅನಂತಕಾಲವಿದ್ದಿರಲ್ಲ. ನಿಮ್ಮ ಆದ್ಯಂತವ ನೀವೇ ಅರಿವುತಿದ್ದಿರಲ್ಲ. ನಿಮ್ಮ ನಿಜಭಾವವ ನೀವೇ ಬಲ್ಲಿರಿ ಕೂಡಲ ಚನ್ನಸಂಗಮದೇವಾ.

೪. ಅಸುರರ ಮಾಲೆಗಳಿಲ್ಲ, ತ್ರಿಶೂಲ ಡಮರುಗವಿಲ್ಲ, ಬ್ರಹ್ಮ ಕಪಾಲ ವಿಲ್ಲ, ಭಸ್ಮ ಭೂಷಣನಲ್ಲ, ಋಷಿಯ ಮಗಳೊಡನಿರ್ದಾತನಲ್ಲ. ಎಸಗುವ ಸಂಸಾರದ ಕುರುಹಿಲ್ಲದಾತಂಗೆ ಹೆಸರಾವುದೆಂದ ನಂಬಿಗ ಚೌಡಯ್ಯ?

೫. ತರುಗಳ ಮುರಿದು ಗಗನಕ್ಕೀಡಾಡುವ ಅನಿಲ ರೂಪೋ ನಿರೂಪೋ ಬಲ್ಲರೆ, ನೀವು ಹೇಳಿ ಭೋ. ಗಜಸಿಂಹ ಶಾರ್ದೂಲವೆಂಬ ಅಧಿಕ ಮೃಗಂಗಳ

ಮುರಿದೊತ್ತಿ ಕೆಡಹುತ್ತಿಪ್ಪ ವ್ಯಾಧ ರೂಪೋ ನಿರೂಪೋ, ಬಲ್ಲರೆ ನೀವು ಹೇಳಿ ಭೋ. ಕಾಣಲೀಯದೆ ಕೇಳಲೀಯದೆ ಅವಿಧಾನಂಗಳ ಕೆಡಿಸುತ್ತಿಪ್ಪ ನಿದ್ರೆ ರೂಪೋ ನಿರೂಪೋ ಬಲ್ಲರೆ ನೀವು ಹೇಳಿ ಭೋ. ಇಂತಾಳಿವಾಳನ ಕೀಳಾಳಿನ ಅಂತಸ್ಥವನಾರಿಗೂ ಅರಿಯಬಾರದು. ಅನಾದಿ ಮೂಲದೊಡೆಯನ ಬಲ್ಲೆನೆಂಬ ಪರಿ ಇನ್ನೆಂತೋ? ರೂಪೆಂದಡೆ ಶಬ್ದ, ನಿರೂಪೆಂದಡೆ ಶೂನ್ಯ. ಈ ಎರಡರ ಆದಿಯಿಂದತ್ತತ್ತ ಕಾಣಾ. ನಮ್ಮ ತಂದೆ ಕಪಿಲ ಸಿದ್ಧ ಮಲ್ಲಿಕಾರ್ಜುನ ಲಿಂಗವು ಗುರುಕರುಣವುಳ್ಳವರಿಗಲ್ಲದೆ ಅರಿಯಬಾರದು.

೬. ಸನಕ ಸನಂದ ಮುನಿಜನಾದಿಗಳು ಅರಿಯರಯ್ಯ ನಿಮ್ಮ ಅಂತುವನು. ಒಂದರಲ್ಲಿ ಹಲವಾಗಿ, ಹಲವರಲ್ಲಿ ಒಂದಾಗಿ, ಸಾಕಾರ ನಿರಾಕಾರ ವಾಗಿಪ್ಪಲ್ಲಿ ಏಕವಾಗಿಪ್ಪ ಕಪಿಲಸಿದ್ಧ ಮಲ್ಲಿನಾಥ ನೀವೇಯಾಗಿ.

೭. ವೇದಾತೀತ, ಷಡ್ವರ್ಣರಹಿತ, ಅಷ್ಟತ್ರಿಂಶತ್ ಕಳಾತೀತ, ವ್ಯೋಮಾತೀತ, ಅಗಮ್ಯ, ಅಗೋಚರ ಕೂಡಲಸಂಗಮದೇವಾ.

೮. ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ ಪರಮೇಶ್ವರವೆಂಬ ಸಂದಣಿ ತಲೆದೋರದ ಮುನ್ನ, ಅಲ್ಲಿಂದತ್ತತ್ತ ಬಯಲೇ ಸ್ವರೂಪವಾಯಿತ್ತು. ಆ ಸ್ವರೂಪಿನ ಘನತೆಯನುಪಮಿಸಬಾರದು. ನೋಡ ಬಾರದ ಬೆಳಗು, ಕೂಡ ಬಾರದ ಮೂರ್ತಿ, ಅಖಂಡ ಅಪ್ರತಿಮ ಗುಹೇಶ್ವರಲಿಂಗದ ಬೆಳಗಿನ ಮೂಲವ ಲಿಂಗ ಸಂಗಿಗಳಲ್ಲದ ಮಿಕ್ಕಿನ ಅಂಗವಿಕಾರಿಗಳೆತ್ತ ಬಲ್ಲರು ?

೯. ತೋರುವನಯ್ಯ ಶಿವನು, ಅಡಗುವನಗಲುವನಯ್ಯ ಶಿವನು. ಕಂಗಳ ಮುಂದೆ ಕಾಯಗೊಂಡು, ಮನದ ಮುಂದೆ ಕಸವಾಗಿ ಕಾಡುವನಯ್ಯ ಶಿವನು. ಒಲ್ಲದಡೆ ಅಲ್ಲೇ ಇದ್ದು, ಹಲವೆಡೆಯಲ್ಲಿ ತೋರುವನು. ಹಲವೆಡೆಯಲ್ಲೈದಿ ಒಂದೇರೂಪಾಗಿರ್ಪನು. ಕೂಡಲಸಂಗಮದೇವನು ಚಿನ್ಮಯನಾಗಿ ಎನಗೆ ಅಸಾಧ್ಯನಾದನು.

———

## ಪರಮಾತ್ಮನು ವಿಶ್ವವ್ಯಾಪಿಯು.

೧. ವಿಶ್ವದೊಳಗೆಲ್ಲ ನೀನೇ ದೇವಾ. ವಿಶ್ವಭರಿತನು ನೀನೇ ದೇವಾ. ವಿಶ್ವರೂಪನು ನೀನೇ ದೇವಾ. ವಿಶ್ವಪತಿ ನೀನೇ ದೇವಾ. ವಿಶ್ವಾತೀತನು ನೀನೇ ದೇವಾ ಅಖಂಡೇಶ್ವರಾ.

೨. ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ. ಸಕಲ ವಿಸ್ತಾರದ ರೂಹು ನೀನೇ ದೇವಾ. ವಿಶ್ವತೋಚಕ್ಷು ನೀನೇ ದೇವಾ. ವಿಶ್ವತೋಮುಖ ನೀನೇ ದೇವಾ. ವಿಶ್ವತೋಬಾಹು ನೀನೇ ದೇವಾ. ವಿಶ್ವತೋಪಾದ ನೀನೇ ದೇವಾ ಕೂಡಲಸಂಗಮದೇವಾ.

೩. ಕುರುಹುಂಟೇ ಮರಳಿ ಲಿಂಗಕ್ಕೆ ? ತೆರಹುಂಟೇ ಮರಳಿ ಲಿಂಗಕ್ಕೆ? ಎಲ್ಲೆಡೆಯೊಳು ಪರಿಪೂರ್ಣವಾದ ಪರಾತ್ಪರ ಲಿಂಗದ ನಿಲವನರಿಯದೆ, ಹುಸಿಯು ಕಲ್ಪಿಸಿ, ಹುಸಿಯನೇ ಪೂಜಿಸಿ, ಹುಸಿಯು ಫಲಪದವನುಂಡು, ಹುಸಿಯಾಗಿ ಹೋದವರ ಕಂಡು ನಗುತಿರ್ದನಯ್ಯ ನಮ್ಮ ಅಖಂಡೇಶ್ವರಾ.

೪. ಗಿರಿಗಳ ಗುಹೆಗಳ ಕಂದರದಲ್ಲಿ ನೆಲಹೊಲದಲ್ಲಿ ಇಪ್ಪೆ ದೇವಾ. ಎಲ್ಲಿ ನೋಡಿದಡಲ್ಲಿ ಇಪ್ಪೆ ದೇವಾ. ಮನಕ್ಕಗಮ್ಯ ಅಗೋಚರವಾಗಿ, ಅಲ್ಲಲ್ಲಿ ಎಲ್ಲಿಯೂ ನೀನೇ ಇಪ್ಪೆಯಯ್ಯಾ. ಗುಹೇಶ್ವರಾ ನಿಮ್ಮ ನಗಲಕ್ಕೆ ಹರಿವರಿದು ಕಂಡೆ ನಾನು.

೫. ಎಲ್ಲೆಲ್ಲಿ ನೋಡಿದಡಲ್ಲಲ್ಲಿ ನೀನೇ ದೇವಾ. ಪಿಂಡಾಂಡಂಗಳೊಳಗೆಲ್ಲ ನೀನೇ ದೇವಾ. ಮಹದಾಕಾಶರೂಪ, ನಿರುಪಾಧಿಕ, ಪರಂಜ್ಯೋತಿ, ನೀನೇ ದೇವಾ. ಉಪಮಾತೀತ ವಾಙ್ಮನಕ್ಕಗೋಚರ ನೀನೇ ದೇವಾ. ಸ್ವಾನುಭೂತಿ ಸ್ವರೂಪ ಶರಣ ಜನಮನೋವಲ್ಲಭ ನೀನೇ ದೇವಾ. ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

೬. ಅಣುವಿಂಗೆ ಅಣು, ಮಹತ್ತಿಂಗೆ ಮಹತ್ತಾಗಿ, ಎಣಿಸಬಾರದ ಬಹುಳ ಬ್ರಹ್ಮಕ್ಕೆ ಎಣೆಯಾವುದು ಹೇಳಾ? ಅಗಣಿತನಕ್ಷಯ, ಸರ್ವಜೀವ ಮನಃ ಪ್ರೇರಕ, ಸರ್ವಜ್ಞ, ಏಕೋದೇವ ಸಂವಿತ್ ಪ್ರಕಾಶ ಪರಮೇಶ್ವರನು ಮನವೆಂಬ ದರ್ಪಣದೊಳಗೆ ಬಿಂದ್ವಾಕಾಶ ರೂಪವಾಗಿ ಬೆಳಗಿ ತೋರುವ ಶಿವನ ಅಂದವ ತಿಳಿದು ನೋಡಿ ಕೂಡಬಲ್ಲಾತನೇ ಪರಶಿವಯೋಗಿ. ಆತ ಜನನ ಮರಣವಿರಹಿತ, ಆತನೇ ಸರ್ವಜ್ಞನು. ಆತನೇ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು ತಾನೇ.

೭. ಪಾತಾಳದಿಂ ಕೆಳಗೆ ಪಾದ, ಸುವರ್ಲೋಕದಿಂ ಮೇಲೆ ಉತ್ತಮಾಂಗ, ಬ್ರಹ್ಮಾಂಡವೇ ಮಕುಟ, ಗಗನವೇ ಮುಖ, ಚಂದ್ರಾರ್ಕಾಗ್ನಿಗಳೇ ನೇತ್ರ, ದಶದಿಕ್ಕುಗಳು ಬಾಹುಗಳು, ಮಹದಾಕಾಶವೇ ಶರೀರ, ತರುಗಳೇ ತನೂರುಹ, ಶೂನ್ಯವೇ ಕರಸ್ಥಲದ ಲಿಂಗ, ನಕ್ಷತ್ರಗಳೇ ಪುಷ್ಪ, ನಿತ್ಯವೇ ಪೂಜೆ, ಮೇಘವೇ ಜಡೆ, ಬೆಳದಿಂಗಳೇ ವಿಭೂತಿ, ಪರ್ವತಂಗಳೇ ರುದ್ರಾಕ್ಷಿ, ಪಂಚಬ್ರಹ್ಮವೇ ಪಂಚಾಕ್ಷರ, ತತ್ವಂಗಳೇ ಜಪಮಾಲೆ, ಮೇರುವೇ ದಂಡ, ಜಗವೇ ಕಂಥಾ, ಅನಂತನೇ ಕೌಪೀನ, ತ್ರಿಗುಣ ಒಂದಾದುದೇ ಕರ್ಪೂರ, ಚತುರ್ಯುಗಂಗಳೇ ಗಮನ, ಮಿಂಚೇ ಅಂಗರುಚಿ, ಸಿಡಿಲವೇ ಧ್ವನಿ, ವೇದಾಗಮವೇ ವಾಕ್ಯ, ಜ್ಞಾನಮುದ್ರೆಯೇ ಉಪದೇಶ. ಪೃಥ್ವಿಯೇ ಸಿಂಹಾಸನ, ದಿವಾರಾತ್ರಿಯೇ ಅರಮನೆ, ಶಿವಜ್ಞಾನವೇ ಐಶ್ವರ್ಯ, ನಿರಾಳವೇ ತೃಪ್ತಿ, ಇಂಥ ಚೈತನ್ಯಜಂಗಮಕ್ಕೆ ನಾನು ನಮೋ ನಮೋ ಎನುತಿರ್ದೆನಯ್ಯ ಸೌರಾಷ್ಟ್ರ ಸೋಮೇಶ್ವರಾ.

೮. ವನವೆಲ್ಲ ನೀವೇ. ವನದೊಳಗಣ ದೇವತರುವೆಲ್ಲ ನೀವೇ. ತರುವಿನೊಳಗಾಡುವ ಮೃಗವೆಲ್ಲ ನೀವೇ. ಚನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರ.

೯. ಇಳೆ ನಿಮ್ಮ ದಾನ, ಸುಳಿದು ಬೀಸುವ ವಾಯು ನಿಮ್ಮ ದಾನ, ನಿಮ್ಮ ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ರಾಮನಾಥಾ?

೧೦. ಕಾಯ ನಿಮ್ಮದಾನ, ಜೀವ ನಿಮ್ಮದಾನ, ಕಾಯ ಜೀವವುಳ್ಳಲ್ಲಿಯೇ ಪೂಜಿಸದ ಅನ್ಯಾಯಿಗಳನೇನೆಂಬೆ ಹೇಳಾ ರಾಮನಾಥಾ ?

೧೧. ಎತ್ತು ನಿಮ್ಮದಾನ, ಬಿತ್ತು ನಿಮ್ಮದಾನ, ಸುತ್ತಿ ಹರಿವ ಸಾಗರವೆಲ್ಲ ನಿಮ್ಮದಾನ, ನಿಮ್ಮದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ಹೇಳಾ ರಾಮನಾಥಾ ?

೧೨. ಇಂತೆಂದ ಭೂಮಿಯ, ಇಂತೆಂದ ಗಗನವ, ಇಂತೆಂದ ಸಪ್ತಸಾಗರವ ಇಂತೀ ಲೋಕದೊಳಗೆ ತಿಂಥಿಣಿಯಾಗಿಪ್ಪ ಅಚಿಂತ್ಯನನಾರುಬಲ್ಲರೈ ರಾಮನಾಥಾ?

೧೩. ಸಹಸ್ರ ಶೀರ್ಷನಾದಿ ಪುರುಷನು. ತ್ರಿಪಾದೂರ್ಧ್ವ ಪುರುಷನೊಬ್ಬ ಪುರುಷನು, ಉದನ್ಮುಖನೊಬ್ಬ ಪುರುಷನು, ಉದಯಪುರುಷನೊಬ್ಬ ಪುರುಷನು, ವಿರಾಟ್ ಪುರುಷನೊಬ್ಬ ಪುರುಷನು, ಆದಿಪುರುಷನೊಬ್ಬ

ಪುರುಷನು, ತದ್ವಿಯತ್ಪುರುಷ ಪುರುಷರಿಲ್ಲದ ಪ್ರಭೆಯ ನೋಡಿರೇ. ವೇದ ನಾದಾತೀತ, ತುರೀಯ ಪರಮಾನಂದ ನಿರವಯ, ಷಟ್‌ತ್ರಿಂಶತ್ ಪ್ರಭಾ ಪಟಲದ ಬೆಳಗಿದೆ ನೋಡಿರೋ. ಬೆಳಗಿನೊಳಗಿನ ಮಹಾ ಬೆಳಗಿನ ಬೆಳಗು ನಮ್ಮ ಕೂಡಲಸಂಗಮದೇವಯ್ಯ.

೧೪. ಶ್ರುತಿತತಿ ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನನೇನೆಂಬೆನಯ್ಯ. ಘನಕ್ಕೆ ಘನ ಮಹಿಮನ, ಮನಕ್ಕಗೋಚರನ, ಅಣೋರಣೀಯಾನ್, ಮಹತೋ ಮಹೀಯಾನ್ ಮಹಾದಾನಿ ಕೂಡಲಸಂಗಮದೇವಾ.

೧೫. ಸಕಲ ನಿಷ್ಕಲವ ಕೂಡಿಕೊಂಡಿಪ್ಪೆಯಾಗಿ, ಸಕಲ ನೀನೇ ನಿಷ್ಕಳ ನೀನೇ ಕಂಡಯ್ಯ. ವಿಶ್ವತೋಚಕ್ಷು ನೀನೇ ದೇವಾ, ವಿಶ್ವತೋ ಮುಖ ನೀನೇ ದೇವಾ ಕೂಡಲಸಂಗಮದೇವಾ.

೧೬. ನೆಲದೀಪದೊಡೆಯನು, ಜಲತಂಪಿನೊಡೆಯನು, ಹಿರಿಯ ಪೆಂಪಿನೊಡೆಯನು, ಅಗ್ನಿ ಉಷ್ಣದೊಡೆಯನು, ಚಂದ್ರಕಾಂತದೊಡೆಯನು, ಸಕಲ ದೈವಂಗಳಿಗೆ ಆಯುಷ್ಯ ಭಾಷೆಯ ಕೊಟ್ಟ ಭೋಗದೊಡೆಯನು ಜಗತ್ಪ್ರಭು ಸೊಡ್ಡಳಾ.



## ಪರಮಾತ್ಮನು ಜಗತ್ತಿಗೆಲ್ಲ ಆಧಾರಭೂತನಾಗಿದ್ದಾನೆ.

೧. ತನ್ನಲ್ಲಿ ಅನಂತಕೋಟಿ ಬ್ರಹ್ಮರುತ್ಪತ್ತಿಸ್ಥಿತಿ ಲಯ ನೋಡಾ. ತನ್ನಲ್ಲಿ ಅನಂತಕೋಟಿ ವಿಷ್ಣ್ವಾದಿಗಳುತ್ಪತ್ತಿ, ಸ್ಥಿತಿ, ಲಯ ನೋಡಾ. ತನ್ನಲ್ಲಿ ಅನಂತಕೋಟಿ ದೇವತೆಗಳುತ್ಪತ್ತಿ, ಸ್ಥಿತಿ, ಲಯ ನೋಡಾ. ತಾನೇ ಅಖಂಡಿತ, ಅಪ್ರಮೇಯ, ಅಗಣಿತ, ಅಗಮ್ಯ, ಅಗೋಚರ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨. ರುದ್ರ ಮುಖದಲ್ಲಿ, ವಿಷ್ಣು ಭುಜದಲ್ಲಿ, ಜಂಘೆಯಲ್ಲಿ ಅಜನ ಜನನವು. ಇಂದ್ರ ಪಾದದಲ್ಲಿ, ಚಂದ್ರ ಮನದಲ್ಲಿ, ಚಕ್ಷುವಿನಲ್ಲಿ ಸೂರ್ಯನ ಜನನವು. ನೊಸಲಲ್ಲಿ ಅಗ್ನಿಯು, ಪ್ರಾಣದಲ್ಲಿ ವಾಯು, ನಾಭಿಯಲ್ಲಿ ಅಂತರಿಕ್ಷ ಜನನವು. ಶಿರದಲುದಯ ಮುವತ್ತುಮೂರುಕೋಟಿ ದೇವರ್ಕಳು. ಪಾತಾ

ತಳದಲ್ಲಿ ಭೂಮಿಯು ಜನನವು. ಶ್ರೋತ್ರದಲ್ಲಿ ದಶದಿಕ್ಕು. ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ. ಅಕ್ಷಯನಗಣಿತನು. ಸಾಸಿರ ತಲೆ, ಸಾಸಿರ ಕಣ್ಣು, ಸಾಸಿರ ಕೈ, ಸಾಸಿರ ಪಾದ, ಸಾಸಿರ ಸನ್ನಿಹಿತ ನಮ್ಮ ಕೂಡಲಸಂಗಮದೇವಾ.

೩. ನಿಮ್ಮ ನಿಜದಂತ್ಯವನಾರು ಬಲ್ಲರಯ್ಯಾ ? ಚತುರ್ದಶ ಭುವನಂಗಳೆಲ್ಲ ನಿಮ್ಮಾಧೀನವಯ್ಯ. ನಿಮಗೆಣೆಯುಪ್ಪ ದೇವರುಂಟೇ ಕಪಿಲಸಿದ್ಧ ಮಲ್ಲಿಕಾರ್ಜುನಾ ?

೪. ಸರ್ಪನೂ, ಕೂರ್ಮನೂ, ದಿಕ್ಕರಿಗಳೆಂಟೂ, ಭೂಮಿಯ ಹೊತ್ತಿರ್ದಹರೆಂದು, ಅಹರ್ನಿಶ ಹೊತ್ತಿರ್ಪವರಿಗೆ ಅತ್ತಲಾಧಾರ, ಇತ್ತಲಾಧಾರ. ಉತ್ತರ ಕೊಡುವವರಿಗೆ ಇಕ್ಕುವೆ ಮುಂಡಿಗೆಯ, ಎತ್ತುವರುಳ್ಳೊಡೆ, ತೋರಿರೈ, ರಾಮನಾಥಾ ?

೫. ಶರಧಿಯ ಮೇಲೆ ಧರೆಯ ಕರಗದಂತಿರಿಸಿದೆ. ಅಂಬರಕ್ಕೆ ಗದ್ದುಗೆ ಬೋದುಗೆ ಇಲ್ಲದಂತಿರಿಸಿದೆ. ಎಲೆ ಮೃಡನೇ ನೀನಲ್ಲದೆ ಉಳಿದ ದೈವಂಗಳಿಗಹುದೇ ರಾಮನಾಥಾ ?

೬. ಕಲಿ ವೀರ ಕಡಿವಲ್ಲಿ, ಬಲು ವಿಷವು ಸುಡುವಲ್ಲಿ, ನೆಲೆಗೆಟ್ಟು ಮೊರೆಯೋ ಎಂಬಲ್ಲಿ, ನಿಮ್ಮ ತಲೆಗಾದು ರಕ್ಷಿಸಿದ ಸುಲಭನನರಿಯಿರೇ, ಹೊಲೆಯರಿರಾ. ಸಲೆ ನಂಬಿ ಬದುಕಿರೊ ರಾಮನಾಥನಾ.

೭. ಸ್ವರ್ಗಲೋಕ ತಾನಿರ್ದಲ್ಲಿ, ಜ್ಯೋತಿರ್ಮಯ ಲೋಕ ತಾನಿರ್ದಲ್ಲಿ, ಸಚರಾಚರಂಗಳೆಲ್ಲ ತಾನಿರ್ದಲ್ಲಿ, ತನ್ನಿಂದಧಿಕವಪ್ಪ ದೈವ ಒಂದಿಲ್ಲವಾಗಿ, ಇವೆಲ್ಲ ತನ್ನಾಧೀನವಲ್ಲದೆ, ಅವರಾಧೀನ ತಾನಲ್ಲ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೮. ಬ್ರಹ್ಮ ವಿಷ್ಣ್ವಾದಿಗಳು ತಾನಿರ್ದಲ್ಲಿ, ರುದ್ರ ಈಶ್ವರರು ತಾನಿರ್ದಲ್ಲಿ, ಪಂಚಮುಖ ದಶ ಭುಜವನುಳ್ಳ ಸದಾಶಿವರು ತಾನಿರ್ದಲ್ಲಿ, ನಾಲ್ವತ್ತೆಂಟು ಸಾವಿರ ಮುನಿಗಳು ತಾನಿರ್ದಲ್ಲಿ, ಮೂವತ್ತು ಮೂರುಕೋಟಿ ದೇವತೆಗಳು ತಾನಿರ್ದಲ್ಲಿ, ತಾನೇ ಅಖಂಡ ಪರಿಪೂರ್ಣನಾಗಿ ಮಹಾಘನವಲ್ಲದೆ, ತನ್ನಿಂದಧಿಕವಪ್ಪ ಘನವಿಲ್ಲ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೯. ಸಪ್ತಕೋಟಿ ಮಹಾ ಮಂತ್ರಂಗಳು, ತಾನಿರ್ದಲ್ಲಿ, ತೊಂಭತ್ತು ನಾಲ್ಕು ವ್ಯೋಮ ವ್ಯಾಪಿಸಿದ ಪದಂಗಳು ತಾನಿರ್ದಲ್ಲಿ, ಆಕಾರಾದಿ ಕ್ಷಕಾರಾಂತ್ಯ

ವಾದ ಐವತ್ತೆರಡಕ್ಷರಗಳು ತಾನಿರ್ದಲ್ಲಿ, ಮೂವತ್ತಾರು ತತ್ವಂಗಳು ತಾನಿರ್ದಲ್ಲಿ. ಷಟ್ಕಳೆ, ದ್ವಾದಶಕಳೆ, ಷೋಡಶ ಕಲೆಗಳು ತಾನಿರ್ದಲ್ಲಿ. ಅರವತ್ತುನಾಲ್ಕು ಕಳೆ ಜ್ಞಾನಂಗಳು ತಾನಿರ್ದಲ್ಲಿ. ಇವೆಲ್ಲವು ತನ್ನಲ್ಲಿ ಉತ್ಪತ್ತಿ ಸ್ಥಿತಿ ಲಯವಾದ ಕಾರಣ, ತನ್ನಿಂದಧಿಕವಪ್ಪ ಘನ ಒಂದಿಲ್ಲವಾಗಿ, ತಾನೇ ಪರಬ್ರಹ್ಮ ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೧೦. ಎತ್ತನೇರಿದ ಕರ್ತನೊಬ್ಬನೇ ಜಗಕ್ಕೆಲ್ಲ. ಎತ್ತು ಬೆಳೆದ ಧಾನ್ಯ ವನುಂಬ ದೇವರ್ಕಳೆಲ್ಲ ನಿಮ್ಮ ತೊತ್ತಿನ ಮಕ್ಕಳು ರಾಮನಾಥಾ.

೧೧. ಜಗವೆಲ್ಲ ಗೋವಿನ ಹಂಗು. ನರಸುರಾದಿಗಳೆಲ್ಲರು ಗೋವಿನ ಹಂಗು. ಸಕಲ ಜೀವಾಧಾರ, ಗೋಮಯ, ಗೋಕುಲಕ್ಕೊಡೆಯ ಗೋಪ್ರಣವ ಸ್ವರೂಪ ನಾರಾಯಣ ಪ್ರಿಯ ರಾಮನಾಥಾ.

———

## ಪರಮಾತ್ಮನಿಗೆ ಹುಟ್ಟು ಸಾವೆಂಬುವಿಲ್ಲ. ಆತನು ನಿತ್ಯನು-

೧. ಹುಟ್ಟು ಮೆಟ್ಟೆಂಬುದು ನಿಮ್ಮಲ್ಲಿಲ್ಲ. ನಿಮ್ಮಿಂದ ನೀವೇ ಸ್ವಯಂ ಭುವಯ್ಯ. ಇಂತಾದಿರಯ್ಯ, ಇಂತಾದಿರಯ್ಯ. ನೀವಿಂತಾದಿರಯ್ಯ. ನಿಮ್ಮ ಮಹಾತ್ಮೆಯ ನೀವೇ ಬಲ್ಲಿರಿ, ನಿಜ ಗುರು ಕಪಿಲಸಿದ್ಧ ಮಲ್ಲಿನಾಥಯ್ಯ.

೨. ಅಮೃತವತಿ ಸೋಮಶಂಭುವಿಂಗೆ ಹುಟ್ಟಿದಾತ ಇಂದ್ರ. ಸತ್ಯ ಋಷಿ ಜ್ಯೇಷ್ಠಾದೇವಿಗೆ ಹುಟ್ಟಿದಾತ ಬ್ರಹ್ಮ. ವಸುದೇವ ವಸುದೇವಕಿಗೆ ಹುಟ್ಟಿದಾತ ವಿಷ್ಣು. ನಾಭಿರಾಜ ಮರುತಾದೇವಿಗೆ ಹುಟ್ಟಿದಾತ ಅರುಹ. ಇವರೆಲ್ಲರು ಯೋನಿಜರೆಂಬುದು ಜಗವೆಲ್ಲ ಬಲ್ಲುದು. ಉತ್ಪತ್ತಿ, ಸ್ಥಿತಿ ಪ್ರಳಯಕ್ಕೆ ಹೊರಗಾದ ನಮ್ಮ ಕೂಡಲಸಂಗಮದೇವಂಗೆ ಮಾತಾಪಿತೃಗಳುಂಟೇ ಹೇಳಿರೇ?

೩. ಅಮೌಲ್ಯನು, ಅಪ್ರಮಾಣನು, ಅಗೋಚರ ಲಿಂಗವು, ಆದಿ ಮಧ್ಯಾಂತವಿಲ್ಲದ ಲಿಂಗವು, ಸ್ವತಂತ್ರ ಲಿಂಗವು, ನಿತ್ಯ ನಿರ್ಮಲ ಲಿಂಗವು, ಅಯೋನಿ ಸಂಭವನಯ್ಯ ನಮ್ಮ ಕೂಡಲಸಂಗಮದೇವಾ.

೪. ಅಜ ಹರಿ ಸುರರೆಲ್ಲರೂ ಅಳಿಯದೆ ಉಳಿದವರಿಲ್ಲ. ಶಿವನೇ ನಿತ್ಯನೆಂದು ಹೊಡೆನಡುತ್ತಿವೆ ವೇದಶ್ರುತಿಃ— "ಉತ, ಇದಂ, ವಿಶ್ವಭೂತಾನಿ, ಸ ದೃಷ್ಟೇ ಮೃಡೋ ಯಾತಿ. ನಮಸ್ತು ನೀಲಗ್ರೀವಾಯ, ಸಹಸ್ರಾಕ್ಷಾಯ, ಈಡುಷೆ." ಬಸವಪ್ರಿಯ ಕೂಡಲಚನ್ನಸಂಗಯ್ಯನೊಬ್ಬನೇ ನಿತ್ಯನೆಂದು ಹೊಗಳುತ್ತಿದೆವೇದ.

೫. ಅಳಿಯು, ಬೆಳೆಯು, ಸುಳಿವನಲ್ಲ, ಪ್ರಳಯವಿಲ್ಲದ ವಿಜಯನು. ಕಳಾ ಕುಳದ ಆತ್ಮನ ಅಂಗಸಂಗಿಯಲ್ಲ. ಸುಳುಹಿನೊಳಗಣ ಸೂಕ್ಷ್ಮವ ತಿಳಿದು ನೋಡಿರೇ. ಅಣಿಮಾದಿ ಗುಣರಹಿತನ ಅಕಲ್ಪಿತನನೇನೆಂಬೆ? ಕಳವಳದ ಬಳಿಯು ಭಾವರೂಪಲ್ಲ ಬೆಳಗಿನೊಳಗಣ ಬೆಳಗು ಗುಹೇಶ್ವರಲಿಂಗವು.

೬. ತಾಯಿತಂದೆ ಇಲ್ಲದ ಕಂದಾ, ನಿನಗೆ ನೀನೇ ಹುಟ್ಟಿ ಬೆಳೆದೆಯಲ್ಲಾ! ನಿನ್ನ ಪರಿಣಾಮವೇ ನಿನಗೆ ಪ್ರಾಣತೃಪ್ತಿಯಾಗಿ ಇದ್ದೆಯಲ್ಲಾ! ಭೇದಕರಿಗೆ ಅಭೇದ್ಯನಾಗಿ ನಿನ್ನ ನೀನೇ ಬೆಳಗುತ್ತಿರ್ದೆಯಲ್ಲಾ! ನಿನ್ನ ಚಾರಿತ್ರ ನಿನಗೆ ಸಹಜ ಗುಹೇಶ್ವರಾ.

---

## ಪರಮಾತ್ಮನ ವ್ಯಾಪಕತೆಯ ಸ್ಥಿತಿ.

೧. ಮರೀಚಿಯೊಳಗಣ ಬಿಸಿಲಿನಂತೆ ಇದ್ದಿತ್ತು. ಕ್ಷೀರದೊಳಗಣ ತುಪ್ಪ ದಂತೆ ಇದ್ದಿತ್ತು. ಚಿತ್ರಿಕನೊಳಡಗಿದ ಚಿತ್ರದಂತೆ ಇದ್ದಿತ್ತು. ಆಲಿಯೊಳಗಡ ಗಿದ ತೇಜದಂತೆ ಇದ್ದಿತ್ತು. ನುಡಿಯೊಳಡಗಿದ ಅರ್ಥದಂತಿದ್ದಿತ್ತು ಕೂಡಲ ಚನ್ನಸಂಗಯ್ಯ ನಿಮ್ಮ ನಿಲವು.

೨. ವಸ್ತುವೆಂದರೆ ಹೇಗಾಯಿತ್ತಯ್ಯ ಹೇಳುವೆ ಕೇಳಯ್ಯ ಮಗನೇ. ಕಾಷ್ಠದಲ್ಲಿ ಅಗ್ನಿ ಹೇಗೆ ಹಾಗಿಪ್ಪುದು. ಕ್ಷೀರದೊಳಗೆ ಘೃತ ಹೇಗೆ ಹಾಗಿ ಪ್ಪುದು. ಸರ್ವತ್ರ ಎಲ್ಲಿ ಠಾವಿನಲ್ಲಿಯೂ ವಸ್ತುವಿನ ಕಳೆ ಪರಿಪೂರ್ಣವಾಗಿ ರ್ಪುದೆಂಬೆನಯ್ಯ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

೩. ಅಡಗನೊಳಗಣ ಹಾಲು ಅಡಗಿಪ್ಪ ಭೇದದಂತೆ ಬೆಡಗಪ್ಪ ತುಪ್ಪದ ಕಂಪಿನ ಪರಿಯಂತೆ, ಎಲೆ ಮೃಡನೇ ನೀನು ಪ್ರಾಣ ಪ್ರಕೃತಿಗಳೊಳಗೆ ಅಡಗಿದ ಭೇದವ ಲೋಕದ ಜಡರೆತ್ತ ಬಲ್ಲರೈ ರಾಮನಾಥಾ?

೪. ಅಕ್ಷರದಲ ಭ್ಯಾಸವ ಮಾಡಿ, ಬರಹತೊಡೆದ ಪರಿ ಎಂತೋ? ಸ್ವರೂ ಪೆಂಬುದಾವುದು, ನಿರೂಪೆಂಬುದಾವುದು, ಎಂದರಿಯರಾಗಿ, ಆದಿ ನಿರಾಳ, ಮಧ್ಯ ನಿರಾಳ, ಊರ್ಧ್ವ ನಿರಾಳ ಗುಹೇಶ್ವರಾ.

೫. ಅಂಬುವಿನ ಸಾರ ಒಡಗೂಡಿ ಆ ಮಣ್ಣಿಂಗೆ ಕುಂಭವೆಂಬುದಕ್ಕೆ ಕುರುಹುಗೊಟ್ಟು ಘನ ಕಿರಿದಲ್ಲದೆ, ಕುಂಭದಲ್ಲಿಯೇ ಲೀಯ್ಯವಾದಂತೆ, ನಿಷ್ಕ ಳಂಕ ಮಲ್ಲಿಕಾರ್ಜುನ ಅಂಗದಲ್ಲಿಯೇ ಲೀಯ್ಯ.

೬. ಕಲ್ಲೊಳಗಣ ಕಿಚ್ಚು ಉರಿಯ ಬಲ್ಲುದೇ? ಬೀಜದೊಳಗಣ ವೃಕ್ಷ ಉಲಿಯ ಬಲ್ಲುದೇ? ತೋರಲಿಲ್ಲಾಗಿ, ಬೀರಲಿಲ್ಲಾಗಿ ಗುಹೇಶ್ವರಾ ನಿಮ್ಮ ನಿಲವ ಅನುಭವಸುಖಿ ಬಲ್ಲ.

೭ ನೆಲದ ಮರೆಯ ನಿಧಾನದಂತೆ, ಮುಗಿಲ ಮರೆಯಲಡಗಿರ್ದ ಮಿಂಚಿನಂತೆ, ಬಯಲ ಮರೆಯಲಡಗಿರ್ದ ಮರೀಚಿನಂತೆ, ಕಂಗಳ ಮರೆಯ ಲಡಗಿರ್ದ ಬೆಳಗಿನಂತೆ ಗುಹೇಶ್ವರಾ ನಿಮ್ಮ ನಿಲವು.

೮. ಆಡಬಾರದ ಬಯಲು, ನೋಡಬಾರದ ಬಯಲು, ನುಡಿಯ ಬಾರದ ಬಯಲು, ಹಿಡಿಯಬಾರದ ಬಯಲು, ಈ ಒಡಲಿಲ್ಲದ ಬಯಲೊಳಗೆ ಅಡಗಿರ್ದ ಭೇದವ ಈ ಲೋಕದ ಜಡರೆತ್ತ ಬಲ್ಲರೈ ರಾಮನಾಥಾ?

೯. ಪಿಂಡದೊಳಗೆ ಪಿಂಡರೂಪಾಗಿ, ಈ ಪರಿಯಲ್ಲಿ ಗೌಪ್ಯವಾಗಿರ್ದು ಎನ್ನಲ್ಲಿ ಕಾಣಿಸಿಕೊಳ್ಳದಿರ್ದಿರಿ, ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

೧೦. ಮರದೊಳಗಣ ಮಂದಾಗ್ನಿಯ ಉರಿಯದಂತಿರಿಸಿದೆ. ನೊರೆವಾಲೊಳಗೆ ತುಪ್ಪದ ಕಂಪಿಲ್ಲದಂತಿರಿಸಿದೆ. ಶರೀರದೊಳಗಾತ್ಮನ ಕಾಣದಂತಿರಿಸಿದೆ. ನೀ ಬೆರಸಿದ ಭೇದಕ್ಕೆ ಬೆರಗಾದೆನೈ ರಾಮನಾಥಾ.

೧೧. ಧರಣಿಯ ಪಸರಿಸಿ, ಉರಗನ ಅಡಿ ಇಟ್ಟು, ಶರಧಿ ಏಳಕ್ಕೆ ಎರೆದನು ಒಕ್ಕುಡಿತೆ ಉದಕವ. ಹರಿಯಜ ಸುರರಿಗೆ ಪರಿಪರಿಯ ಲೋಕವ ಕೊಟ್ಟು ಅರಿಯದಂತಿರ್ದೆ ಕಾಣಾ ರಾಮನಾಥಾ.

೧೨. ಹೂವಿನೊಳಗಣ ಕಂಪಹೊರಸೂಸಿ ಸುಳಿವ ಅನಿಲನಂತೆ, ಅಮೃತದೊಳಗಣ ರುಚಿಯ ನಾಲಿಗೆಯ ತುದಿಯಲ್ಲಿ ಅರಿವನ ಚೇತನದಂತೆ, ನಿಲವಿಲ್ಲದ ರೂಪ ಕಳೆಯಲ್ಲಿ ವೇಧಿಸುವನ ಪರಿ ರಾಮನಾಥಾ.

೧೩. ಒಡಲೊಳಗಣ ಕಿಚ್ಚು ಒಡದ ಸುಡದ ಭೇದವ, ಕುಡಿದ ಉದಕದಲ್ಲಿ ಆ ಕಿಚ್ಚು ನಂದದ ಭೇದವ, ಮೃಡ ನೀ ಪ್ರಾಣ ಪ್ರಕೃತಿಯೊಳಗಡಗಿದ ಭೇದವ, ಲೋಕದ ಜಡರೆತ್ತ ಬಲ್ಲರೈ ರಾಮನಾಥಾ?

ಅರ್ಥ :— ದೇಹದಲ್ಲಿ ಉದರಾಗ್ನಿಯು ಆ ದೇಹದಹನವ ಮಾಡದಿಪ್ಪ ವಿಚಾರದ ಹಾಗೆ, ಪಾನವ ಮಾಡಿದ ಜಲದಲ್ಲಿ ಆ ಉದರಾಗ್ನಿಯು ನಾಶವಾಗದೆ ಇಪ್ಪ ವಿಚಾರದ ಹಾಗೆ, ಎಲೇ ಶಿವನೇ ನೀನು ಪ್ರಕೃತಿ ರೂಪವಾಗಿ ಪ್ರಾಣದಲ್ಲಿ ಅಡಗಿರ್ದು, ಆ ಪ್ರಾಣನ ವರ್ತನೆಯಲ್ಲಿ ಬೆರೆಯದೆ ರಹಸ್ಯವಾಗಿಪ್ಪ ವಿಚಾರ ಎಂಬಲ್ಲಿ ಆ ಬ್ರಹ್ಮವನೆ ಇಷ್ಟಲಿಂಗವಾಗಿ ಪಡೆದುಕೊಂಡು ಆಚರಿಸುವದನು ಲೋಕದ ಜೀವರರಿಯರೆಂಬುದರ್ಥ.

೧೪. ಎಣ್ಣೆ ಇದ್ದು ಎಳ್ಳು ನೆನೆಯದ ಭೇದವ, ಕಿಚ್ಚಿದ್ದು ಕಲ್ಲು ಸಿಡಿಯದ ಭೇದವ, ಕಾಮವಿದ್ದು ಕನ್ನೆಯನನುಭವಿಸದ ಭೇದವ, ಪರವಿದ್ದು ಪ್ರಾಣನ ಪ್ರಕೃತಿಯು ಹರಿಯದ ಭೇದವ ನರರೆತ್ತ ಬಲ್ಲರೈ ರಾಮನಾಥಾ?

೧೫. ಮಣಿಗಳ ಸೂತ್ರದಂತೆ, ತ್ರಿನಯನ ನೀನಿಪ್ಪೆಯಯ್ಯ. ಎಣಿಸುವಡೆ, ತನು ಭಿನ್ನ, ಆತ್ಮನೊಬ್ಬನೇ. ಅಣುರೇಣು ಮಧ್ಯದಲ್ಲಿ ಗುಣಭರಿತ ನೀನೆಂದು ಮಣಿವುತಿರ್ಪೆನಯ್ಯ ರಾಮನಾಥಾ.

---

## ಪರಮಾತ್ಮನು ವಿಶ್ವಮಯನಾದರೂ ವಿಶ್ವದ ಗುಣಗಳನ್ನು ಹೊದ್ದನು.

೧. ಶಿವ ತನ್ನ ವಿನೋದಕ್ಕೆ ರಚಿಸಿದನು ಅನಂತ ವಿಶ್ವವನು. ರಚಿಸಿದವನು ವಿಶ್ವಕ್ಕೆ ಹೊರಗಾಗಿರ್ದನೇ? ಇಲ್ಲ. ವಿಶ್ವಮಯ ತಾನಾದನು. ವಿಶ್ವವೆಲ್ಲವೂ ತಾನಾದೊಡೆ, ವಿಶ್ವದುತ್ಪತ್ತಿ ಸ್ಥಿತಿ ಲಯಕ್ಕೊಳಗಾದನೇ? ಇಲ್ಲ. ಅದೇನು ಕಾರಣವೆಂದಡೆ, ಅಜಾತನಾಗಿ, ಉತ್ಪತ್ತಿ ಇಲ್ಲ. ಕರ್ಮ ರಹಿತನಾಗಿ ಸ್ಥಿತಿಗೊಳಗಲ್ಲ ಮರಣ ರಹಿತನಾಗಿ ಲಯಕ್ಕೊಳಗಲ್ಲ. ಇಂತೀ ಗುಣತ್ರಯಂಗಳ ಹೊದ್ದಲರಿಯ. ತಾನಲ್ಲದೆ ವಿಶ್ವಕ್ಕಾಧಾರವಿಲ್ಲಾಗಿ ದೂರಸ್ಥನಲ್ಲ ತನ್ನಲ್ಲಿ ತಾನಲ್ಲದೆ ಅನ್ಯವು ತೋರಲರಿಯದಾಗಿ, ಇದಿರಿಲ್ಲ. ಇದಿರಿಲ್ಲಾಗಿ ವಿಶ್ವಮಯ ತಾನಾದುದೇ ಸತ್ಯ. ಅರಸು ಕಾಲಾಳಾಗಬಲ್ಲ ತನ್ನ ವಿನೋದಕ್ಕೆ. ಮರಳಿ ಅರಸಾಗಬಲ್ಲ. ನಮ್ಮ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರನು ಜಗವಾಗಲೂ ಬಲ್ಲ. ಜಗವಾಗದಿರಲೂ ಬಲ್ಲನಯ್ಯ.

೨. ಜಲದೊಳಗಣ ಸೂರ್ಯನಂತಿರ್ಪನಯ್ಯ ಶಿವನು. ಲೋಕಾದಿ ಲೋಕಂಗಳೊಳಗಿರ್ದಡೇನು, ಜಗದ ಪುಣ್ಯ, ಪಾಪ, ಸ್ವರ್ಗ, ನರಕ, ಬಂಧ, ಮೋಕ್ಷಕ್ಕೊಳಗಾದಾತನೇ? ಅಲ್ಲ. ಅದೆಂತೆಂದೊಡೆ, ಜಲದೊಳಗಣ ಪ್ರಕೃತಿ ವಿಕೃತಿಗಳು ಜಲಕ್ಕಲ್ಲದೆ ಸೂರ್ಯಂಗಿಲ್ಲವಾಗಿ, ಲೋಕದ ಸ್ಥಿತಿಗತಿ ಲೋಕಕ್ಕಲ್ಲದೆ, ಶಿವನಿಗಿಲ್ಲವಾಗಿ, ಅನಂತಕೋಟಿ ಬ್ರಹ್ಮಾಂಡಂಗಳು ತನ್ನ ಒಡಲೊಳಗೆ ಅಡಗಿದವೆಂದಡೆ, ತಾ ಹೊರಗಾಗಿ ಅಡಗಲೆಡೆ ಏನುಂಟು? ಇದು ಕಾರಣ ನಮ್ಮ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರನು ವಿಶ್ವದೊಳಗೆ ಹೊದ್ದಿಯೂ ಹೊದ್ದದಿರಬಲ್ಲ, ವಿಶ್ವಾಧಿಪತಿಯಾಗಲೂ ಬಲ್ಲ.

೩. ಹಲವು ತೃಣಕಾಷ್ಠಗಳಲ್ಲಿ ಅಗ್ನಿ ಬೆರೆದಿರ್ದಂತೆ, ಹಲವು ಘಟ ಜಲದಲ್ಲಿ ಸೂರ್ಯ ಬಿಂಬಿಸುತ್ತಿರ್ದಂತೆ, ಇದ್ದನಯ್ಯ ಶಿವನು. ಸಕಲ ಜೀವರ ಹೃದಯದಲ್ಲಿ ಬೆರಸಿಯೂ ಬೆರಸದಂತಿಪ್ಪನಯ್ಯ ನಮ್ಮ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು.

೪. ಜಲವೊಳಗಣ ಕಿಚ್ಚು ಜಲವ ಸುಡದೆ ಜಲವು ತಾನಾಗಿಯೇ ಇದ್ದಿತ್ತು ನೋಡಾ. ನೆಲೆಯನರಿದು ನೋಡಿಹೆವೆಂದಡೆ, ಅದು ಜಲವು ತಾನಲ್ಲ. ಕುಲದೊಳಗಿರ್ದು, ಕುಲವ ಬೆರಸದೆ ನೆಲೆಗೆಟ್ಟು ನಿಂದುದನಾರು ಬಲ್ಲರು? ಹೊರಗೊಳಗೆ ತಾನಾಗಿರ್ದು ಮತ್ತೆ ತಲೆದೋರದಿಪ್ಪುದು ಗುಹೇಶ್ವರಾ ನಿಮ್ಮ ನಿಲವು ನೋಡಾ.

ಅರ್ಥಃ — ಶುಕ್ರಶೋಣಿತಾತ್ಮ ಸಂಗದಿಂದಾದ ಜಲಬುದ್ಬುದ ಪಿಂಡದೊಳಗೆ ಅಡಗಿಪ್ಪ ಪರಶಿವಜ್ಞಾನಾಗ್ನಿ ಜಡ ಪಿಂಡದ ದಗ್ಧವ ಮಾಡಲರಿಯದೆ ಅಲ್ಲಿಯೇ ಗತವಾಗಿ ತದ್ರೂಪವಾಗಿತ್ತೆಂಬುದೀಗ, ಜಲದೊಳಗಿರ್ದ ಕಿಚ್ಚು ಜಲವ ಸುಡದೆ ಜಲವು ತಾನಾಗಿದ್ದಿತ್ತೆಂಬ ಶಬ್ದಕ್ಕರ್ಥ. ವಿವೇಕದಿಂ ತಿಳಿದು ನೋಡಿದಡೆ, ಆ ಶಿವಜ್ಞಾನ ಜಡಪಿಂಡರೂಪಲ್ಲವೆಂಬುದೀಗ ನೆಲೆಯನರಿಯಬಲ್ಲಡೆ, ಅದು ಜಲವು ತಾನಲ್ಲವೆಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು, ಜಾತಿ ವರ್ಣಾಶ್ರಮ ಕುಲಗೋತ್ರ ನಾಮಂಗಳೊಳಗೆ ವೇಧಿಸಿಕೊಂಡಿರ್ದು, ಹೊದ್ದಿಯೂ ಹೊದ್ದದೆ ಸರ್ವತೋಧಿಕವಾಗಿದ್ದಿತ್ತೆಂಬುದೀಗ, ಕುಲದೊಳಗಿರ್ದು ಕುಲವ ಬೆರಸದೆ ನೆಲೆಗೆಟ್ಟುನಿಂದುದ. ನಾರು ಬಲ್ಲರು ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಅಂತರಂಗ ಬಹಿರಂಗದೊಳಗೆ ಪರಿಪೂರ್ಣವಾಗಿರ್ದು ಅನ್ಯವಾಗಿ ತೋರಿಸಿಕೊಳಲರಿಯದೆ ಗೌಪ್ಯವಾಗಿಪ್ಪುದೆಂಬುದೀಗ ಒಳಹೊರಗೆ ತಾನಾಗಿ ಮತ್ತೆ ತಲೆದೋರದಿಪ್ಪುದೆಂಬ ಶಬ್ದಕ್ಕರ್ಥ.

೫. ಬಣ್ಣ ಹಲವಪ್ಪಲ್ಲಿ ಬಣ್ಣ ತಾನೊಂದಾಗಿ ಬಣ್ಣ ಮೂಜಗಕ್ಕೆ ಮುಕ್ಕಣ್ಣ ತಾನು ಬಣ್ಣಕರು ಬಣ್ಣದೊಳಗಾಳುವದನೆ ಕಂಡು ಅಣ್ಣ ನಗುತಿರ್ದನೈ ಯೋಗಿನಾಥಾ.

ಅರ್ಥ :— ಮಹಾಲಿಂಗದ ಚಿತ್ ಪ್ರಭಾಂಗವೆಂಬುದೀಗ ಬಣ್ಣವೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗಕ್ಕೆ ಲೀಲಾ ವಿಲಾಸ ತೋರಿದಲ್ಲಿ ಚಿತ್ ಪ್ರಭಾಕಾಶವೇ ಸ್ಫುರಿಸಿ ನಾನಾತ್ವವನೈದಿ ಪರಿಚ್ಛಿನ್ನಾತ್ಮರಾದರೆಂಬುದೀಗ ಬಣ್ಣ ಹಲವಪ್ಪಲ್ಲಿ ಎಂಬ ಶಬ್ದಕ್ಕರ್ಥ. ಅಂತು ಹಲವಾತ್ಮರಾದ ಚೈತನ್ಯ ಒಂದೇ

ಎಂಬುದೀಗ ಬಣ್ಣ ತಾನೊಂದಾಗಿ ಎಂಬ ಶಬ್ದಕ್ಕರ್ಥ. ಅಂತು ಲಿಂಗದ ಚಿತ್ ಪ್ರಕಾಶವೇ ಮೂಜಗವಾಯಿತ್ತೆಂಬುದೀಗ ಬಣ್ಣ ಮೂಜಗಕ್ಕೆ ಮುಕ್ಕಣ್ಣ ತಾನು ಎಂಬ ಶಬ್ದಕ್ಕರ್ಥ ಅಂತು ಚಿದಂಶಿಕರಾದ ಆತ್ಮರು ದೇಹೇಂದ್ರಿಯ ಕುಲಗೋತ್ರಂಗಳು ಮೊದಲಾದ ನಾನಾ ಪ್ರಪಂಚಿನ ಬಣ್ಣದ ಸಂಸಾರಸಾಗರ ದೊಳಗೆ ಮುಳುಗಿ ಆಳುತ್ತಿಪ್ಪ ಜೀವರ ನೋಡಿ ವಿನೋದಿಸುತ್ತ ತಾ ಹೊರಗಾ ಗಿರ್ದಾತನೆಂಬುದೀಗ ಬಣ್ಣಕರು ಬಣ್ಣದೊಳಗಾಳುವದನೆ ಕಂಡು ಅಣ್ಣ ನಗು ತಿರ್ದನೈ ಯೋಗಿನಾಥಾ ಎಂಬ ಶಬ್ದಕ್ಕರ್ಥ.

---

## ವಿಶ್ವವು ಪರಮಾತ್ಮನಲ್ಲ.

೧. ಸರ್ವವೂ ಶಿವನಿಂದ ಉದ್ಭವಿಸಿದವೆಂದೊಡೆ, ಆ ಉದ್ಭವಿಸಿದವೆಲ್ಲ ಶಿವನೇ? ಸಕಲ ಬೀಜನ ಬಿತ್ತುವನು ಒಕ್ಕಲಿಗನೆಂದೊಡೆ, ಬೆಳೆ ತಾನೊಕ್ಕಲಿ ಗನೆ? ಮಡಕೆಯ ಕುಂಬರ ಮಾಡುವನೆಂದೊಡೆ, ಆ ಮಡಿಕೆ ತಾ ಕುಂಬರನೇ? ಕಬ್ಬುನದ ಕಮ್ಮರ ಮಾಡುವನೆಂದೊಡೆ, ಆ ಕಬ್ಬುನ ತಾ ಕಮ್ಮರನೇ? ಈ ಪರಿಯಲ್ಲಿ ಸಕಲ ಜಗತ್ತು ಸಚರಾಚರವನು ಶಿವನು ಮಾಡುವನೆ ದೊಡೆ, ಆ ಸಚರಾಚರವೆಲ್ಲವೂ ಶಿವನೇ? ಹಾಗಾದೊಡೆ ಅಷ್ಟಾದಶ ವರ್ಣಂಗಳೇಕಾ ದವು? ಎಂಭತ್ತೆಂಟು ಲಕ್ಷ ಜೀವರಾಶಿಗಳೇಕಾದವು ಸುಖ, ದುಃಖ ಸ್ವರ್ಗ, ನರಕಂಗಳೇಕಾದವು? ಆಚಾರ ಅನಾಚಾರಗಳೇಕಾದವು? ಪುಣ್ಯ, ಪಾಪ, ಭವಿ ಭಕ್ತರೆಂದೇಕಾದವು? ಇದು ಕಾರಣ ಸದ್ಭಕ್ತ ಸದಾಚಾರದಲ್ಲಿರ್ಪನು. ಅಂತಲ್ಲದೆ ಸರ್ವವೂ ಶಿವನೆಂದೊಡೆ ಘೋರ ನಾಯಕನರಕ ಕೂಡಲ ಚನ್ನಸಂಗಯ್ಯ.

೨. ಶಿವನು ಸರ್ವಗತನಾಗಿಯೂ ಇಹನೆಂದೊಡೆ ಎಲ್ಲವೂ ಶಿವನೇ? ಅಲ್ಲ. ಮತ್ತೆಲ್ಲಿಹನೆಂದೊಡೆ, ನಿರ್ಮಲಚಿತ್ತರಾದ ದೇಹಿಗಳಲ್ಲಿ, ಸಂತೋಷಿ ಗಳಾದ ನಿರಾಶಾಭರಿತರಲ್ಲಿ, ನಿರ್ಮಲ ಪರಮ ಮಾಹೇಶ್ವರರ ಹೃದಯದಲ್ಲಿ ಅತಿ ಪ್ರೇಮದಿಂದಿಹನು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು.

೩. ಸರ್ವಗತನೆಂಬುದು ಲೋಕವೆಲ್ಲ. ಶಿವಶಿವಾ, ನಿರ್ಬುದ್ಧಿ ಜನಂಗಳ ನೇನೆಂಬೆ? ಸರ್ವವೂ ಶಿವನಾದೊಡೆ, ಹಿಂದಣಯುಗ ಪ್ರಳಯಂಗಳೇಕಾದವು?

ಎಂಭತ್ತುನಾಲ್ಕು ಲಕ್ಷ ಜೀವರಾಶಿಗಳೇಕಾದವು? ಸೂತ್ರಧಾರ ನರರಿಗಾಗಿ ಯಂತ್ರವನಾಡಿಸುವಲ್ಲಿ, ಹೊರಗಿದ್ದಾಡಿಸುವನಲ್ಲದೆ, ತಾನೊಳಗಿದ್ದಾಡಿಸುವನೇ? ಆ ಹಾಗೆ ಶಿವನು ತನ್ನಾಧೀನವಾಗಿರ್ದ ತ್ರಿಜಗದ ಸಚರಾಚರಂಗಳೆಂಬ ಯಂತ್ರವನು ಯಂತ್ರವಾಹಕನಾಗಿ ಆಡಿಸುವನಲ್ಲದೆ, ತಾನಾಡುವನೇ? ಇದು ಕಾರಣ ಸರ್ವವೂ ಶಿವನೆನಲಾಗದು. ಮತ್ತೆಲ್ಲಿಹನೆಂದೊಡೆ ಸದಾಚಾರ ಸದ್ಭಕ್ತಿ ಸನ್ನಿಹಿತ ಲಿಂಗ ಜಂಗಮದೊಳಗಿರ್ಪ, ಮತ್ತೆಲ್ಲಿಯೂ ಇಲ್ಲ ಕೂಡಲ ಚೆನ್ನಸಂಗಯ್ಯ.

೪. ಪರುಷದ ಪುತ್ಥಳಿಗೆ ಕಬ್ಬುನದಾಭರಣ ಉಂಟೇ ಅಯ್ಯ? ಲೋಕದೊಳಗೆ ಲಿಂಗ, ಲಿಂಗದೊಳಗೆ ಲೋಕವಾದೊಡೆ, ಹಿಂದಣ ಪ್ರಳಯಂಗಳೇಕಾದವು? ಇನ್ನು ಮುನ್ನಿನ ಪ್ರಳಯಂಗಳಿಗೆಂತೋ? ಲೋಕ ಲೋಕದಂತೆ, ಲಿಂಗವು ಲಿಂಗದಂತೆ। ಈ ಉಭಯದ ಭೇದವ ಗುಹೇಶ್ವರಾ ನಿಮ್ಮ ಶರಣನೇ ಬಲ್ಲ.

೫. ಸರ್ವಗತ ಶಿವನೆಂದು ಹೇಳುವ ಮರುಳು ಮಾನವರ ಮಾತು ಕೇಳಲಾಗದು. ಅದೆಂತೆಂದೊಡೆ, ಸರ್ವ ಜೀವರುಗಳಂತೆ ವನಿತಾದಿ ವಿಷಯ ಪ್ರಪಂಚದಲ್ಲಿ ಮಗ್ನನಾಗಿ ಇರುವನೇ? ಶಿವನು ಸರ್ವ ಜೀವರುಗಳಂತೆ, ಪುಣ್ಯ, ಪಾಪ, ಸುಖ, ದುಃಖ, ಸ್ವರ್ಗ, ನರಕಗಳೆಂಬ ದ್ವಂದ್ವ ಕರ್ಮಂಗಳಲ್ಲಿ ಹೊಂದಿರ್ಪನೇ? ಶಿವನು ಸರ್ವ ಜೀವರುಗಳಂತೆ ಉತ್ಪತ್ತಿ, ಸ್ಥಿತಿ, ಪ್ರಳಯ, ಬಂಧನಗಳೆಂಬ ಕಷ್ಟಕ್ಕೆ ಸಿಲ್ಕಿ ಸುದು ಕುಳಿಗೊಂಬನೇ ಶಿವನು? ಇಂತೀ ಭೇದವನರಿಯದೆ, ಸರ್ವಗತ ಶಿವನೆಂದು ನುಡಿವ ಕಡು ಪಾತಕರ ಜಡಜೀವಿಗಳ ಎನಗೊಮ್ಮೆ ತೋರದಿರಯ್ಯ ಅಖಂಡೇಶ್ವರಾ.

೬. ಈಡಾ, ಪಿಂಗಳ, ಸುಷುಮ್ನ, ಗಾಂಧಾರಿ, ಹಸ್ತಿ, ಜಿಹ್ವೆ, ಪೂಷ, ಪಯಸ್ವಿನೀ, ಅಲಂಬು, ಲಕುಹ, ಶಂಕಿನಿ ಎಂಬ ದಶನಾಡಿಗಳು ತಾನಿರ್ದಲ್ಲಿ, ಈಡಾ, ಪಿಂಗಳ, ಸುಷುಮ್ನ, ನಾಳಂಗಳೊಳಗೆ ಆಡುವ ವಾಯು, ಪ್ರಾಣಾಪಾನ, ವ್ಯಾನಉದಾನ, ಸಮಾನ, ನಾಗ, ಕೂರ್ಮ, ಕ್ರಕರ, ದೇವದತ್ತ, ಧನಂಜಯವೆಂಬ ದಶವಾಯುಗಳು ತಾನಿರ್ದಲ್ಲಿ, ಅಗ್ನಿಮಂಡಲ, ಆದಿತ್ಯಮಂಡಲ, ಚಂದ್ರಮಂಡಲವೆಂಬ ಮಂಡಲ ತ್ರಯಂಗಳು ತಾನಿರ್ದಲ್ಲಿ. ತಾನೇ ಯಂತ್ರವಾಹಕನಾಗಿ, ಇವೆಲ್ಲವು ತನ್ನ ಲೀಲಾ ಮಾತ್ರದಲ್ಲಿ ಆಡಿಸುತ್ತಿಹನಲ್ಲದೆ ತಾನಾಡನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೭ ಶಿವನು ಜಗದ್ಭರಿತನೆಂದವರ ಬಾಯಲ್ಲಿ ಇಕ್ಕಿರೋ ಹನ್ನೆರಡು ವರ್ಷದ ಹಳೆಯ ಪಾದರಕ್ಷೆಯನು. ಅದೇನು ಕಾರಣವೆಂದಡೆ, ಶಿವನು ಜಗದ್ಭರಿತನೇ? ಅಲ್ಲ. ಶಿವನು ಜಗದ್ಭರಿತನಾದೊಡೆ, ಜೀವಕ್ಕೆ ಜೀವ ಭಕ್ಷಿಸಲೇತಕೋ? ಶಿವನು ಜಗದ್ಭರಿತನೆಂದರಿದೊಡೆ, ಪ್ರಾಣಕ್ಕೆ ಪ್ರಾಣ ವಿರೋಧಿಸಲೇತಕೋ? ಶಿವನು ಜಗದ್ಭರಿತನೆಂದರಿದೊಡೆ, ತಾನೇ ಗುರು, ತಾನೇ ಲಿಂಗ, ತಾನೇ ಜಂಗಮ, ತಾನೇ ಪಾದೋದಕ ಪ್ರಸಾದ ಕಾಣಾ ನಿಃಸಂಗ ನಿರಾಳ ಪ್ರಭುವೇ.

೮. ಅದ್ವೈತವ ಸಾಧಿಸಿ ಸರ್ವವೂ ಶಿವನೆಂಬರು. ಎನಲಾಗದು. ಸರ್ವಕ್ಕೂ ಲಯ ಗಮನ ಉಂಟು. ಶಿವಂಗಿಲ್ಲವಾಗ ಯಂತ್ರವಾಹಕನೆಲ್ಲಿಯೂ ಪರಿಪೂರ್ಣನಾಗಿಹನೆಂದಡೆ, ಎಲ್ಲವೂ ಶಿವನಾಗಬಲ್ಲವೇ? ಅಗಲರಿಯವು. ನಿಜ ಗುರು ಸ್ವತಂತ್ರ ಸಿದ್ಧಲಿಂಗೇಶ್ವರನು ಪದ್ಮಪತ್ರ ಜಲದಂತೆ ಹೊದ್ದಿಯೂ ಹೊದಂತಿಹನು.

ಸಂಪುಟ ೨೯ ಸಂಚಿಕೆ ೨



# ಶಿವಾನುಭವ



: ಸಂಪಾದಕರು :
ಫ. ಗು. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ.



ವಾ. ಚ. ೫-೧೨-೦] ವಿಜಾಪೂರ [ಫೇಬ್ರುವರಿ ೧೯೫೫

# ವಿಷಯಾನುಕ್ರಮಣಿಕೆ



# ಶಿವಾನುಭವ

ಸಂಪುಟ ೨೯ | ಫೆಬ್ರುವರಿ ೧೯೫೫ | ಸಂಚಿಕೆ ೨

## ಇಷ್ಟಲಿಂಗ

—( ಲೇಖಕರು:- ಶ್ರೀ ಸಿ. ನಾ. ಮಹಾಂತಪ್ಪನವರ. ಮು॥ ಹುನೂರ. )—



ಸದ್ಯದ ಸಮಾಜ ಸ್ಥಿತಿಯನ್ನು ಸಹೃದಯಿಗಳು ನಿರೀಕ್ಷಿಸಿದಲ್ಲಿ ಪರಧರ್ಮಿಗಳ ಇನ್ನೂರು ವರ್ಷಗಳ ಸಂಘಟನೆಯಿಂದಲೂ ಪ್ರಕೃತಿ ಗುಣ ಗನುಸಾರವಾದ ಸ್ವಚ್ಛಂದ ವೃತ್ತಿಯಿಂದಲೂ ಅನೇಕ ಪಂಥ, ಮತ, ಕುಲ, ಧರ್ಮ ಜಾತಿಗಳ ಪ್ರಭೇದಗಳಿಂದಲೂ ಮತಮತಾಂತರಗಳಿಂದಲೂ ಚಹಾ ಚುಟ್ಟಾ ತಿನಸುಗಳಿಂದಲೂ, ಇನ್ನೂ ಅನೇಕಾನೇಕ ಅಪೇಯ ಪಾನ, ಅಭಕ್ಷ್ಯ ಭಕ್ಷಣಗಳಿಂದಲೂ ಅನೀತಿ ಅನಾಚಾರಗಳಿಂದಲೂ ಅಧೋ ಗತಿಗೆ ಇಳಿಯುತ್ತ ನಡೆಸಿದೆಂಬುದು ಆ ಸುಹೃದಯಗಳ ದೃಷ್ಟಿಗೆ ನಟ್ಟೇ ಇರು ವದೆಂಬುದನ್ನು ಹೇಳಬೇಕಿಲ್ಲ. ಇಂಥ ಪರಿಸ್ಥಿತಿಯಲ್ಲಿ ವಿಶ್ವಧರ್ಮವಾದ ವೀರಶೈವ ಮತಾನುಯಾಯಿಯು ತನ್ನ ಶಿವಭಕ್ತಿ ಶಿವಪೂಜೆ ಶಿವಧ್ಯಾನ ಶಿವಜ್ಞಾನ, ಶಿವಯೋಗಾದಿಗಳನ್ನು ಬಿಟ್ಟು ಬಹಿರಂಗದ ಅನೀತ್ಯನಾಚಾರ ಗಳ ಬೆನ್ನು ಹತ್ತುವದು ವಿಶ್ವಧರ್ಮಕ್ಕೆ ಕುಂದು ತಂದಂತೆಯೇ ಸರಿ. ಸುಶಿಕ್ಷಿತರೆಂದೆನಿಸುವ ಸ್ವರಾಜ್ಯ ಶಕಟವನ್ನು ನಡೆಸುವ ವಿಶಿಷ್ಟ ಜನತೆಯ ಅನುಕರಣವನ್ನೇ ಸಾಮಾನ್ಯ ಜನರು ಅನುಸರಿಸುವದು ಪ್ರಕೃತಿಧರ್ಮವು. ಈ ಪ್ರಕೃತಿಯ ವಿಕೃತಿಗಳಿಗೆ ಬಲಿಬೀಳದೆ, ಸುಕೃತಿಗಳ ಆಚಾರಾನುಭವ ಹಾಗು ಭಕ್ತಿ ಶಕ್ತಿಗಳ ಸ್ವೀಕೃತಿಗಳಿಗೆ ಮನಗೊಟ್ಟು ಮುಂದರಿದು ಸಂಸ್ಕೃತಿ, ಸುಜ್ಞಾನ, ಸದಾಚಾರಾದಿಗಳನ್ನಾಚರಿಸಿ, ವಿಶ್ವಧರ್ಮದ ವಿಶಾಲ ದೃಷ್ಟಿಗೆ ಮೈಗೊಟ್ಟು ಮೊದಲು ಇಷ್ಟಾನಿಷ್ಟಗಳ ವಿವೇಕಿಸಿ ಇಷ್ಟವನು

ತನ್ನ ದೃಷ್ಟಿಯೊಳು ನಿಕ್ಷಿಸಿ ಅಷ್ಟೈಶ್ವರ್ಯಸಂಪದಗಳಿಂದ ಮೆರೆಯುವರಾಗಿ ಸೃಷ್ಟಿಯನ್ನು ವ್ಯಾಪಿಸಿದ ಇಷ್ಟಲಿಂಗದ ಮಹಿಮೆಯನ್ನು ಪೂಜೆಯನ್ನು ಅರಿತು ಆಚರಿಸಿದ್ದಾದರೆ ವೀರಶೈವವು ವಿಶ್ವಧರ್ಮದ ತತ್ವವಾಯಿತೇ ಎಂಬ ಸಿದ್ಧಾಂತವು ಸ್ಪಷ್ಟವಾಗುವದು "ಎನಗೆ ಅದು ಬೇಕು, ಇದು ಬೇಕು ಎಂಬ ಎದೆಗುಂಡಿಗೆತನ ಬೇಡ, ಸದ್ಭೈವನಾಗಿರ್ದೊಡೆ ಸಾಕು. ತಾನಿದ್ದೆಡೆಗೆ ಷಡ್ರಸಪದಾರ್ಥಂಗಳು, ನಿಧಿನಿಕ್ಷೇಪಂಗಳು ಬಾಹವಯ್ಯ ಸಕಳೇಶ್ವರ ದೇವರ ನಂಟಿರ್ದೊಡೆ ಬೇಡಿದ ಪದವಿಯು ನೀನಾ" ಎಂಬ ಶರಣರ ವಾಕ್ಯವು ಸಟೆಯಾಗಬಹುದೇ?

ಶಿಷ್ಯನಲ್ಲಿಯ ಚಿತ್ಕಳೆಯು ಕರಣೇಂದ್ರಿಯಗಳನ್ನೂ ದಶವಾಯುಗಳನ್ನೂ ಜ್ಞಾನೇಂದ್ರಿಯಗಳನ್ನೂ ಕರ್ಮೇಂದ್ರಿಯಗಳನ್ನೂ ವ್ಯಾಪಿಸಿ ಸಮುದ್ರದ ನೀರು ಸೂರ್ಯೋಷ್ಣತೆಯಿಂದ ಕಾವು ಉಗಿಯಾಗಿ ಮೋಡ ಮಳೆ ರೂಪದಿಂದ ಬೀಳುವಾಗ್ಗೆ ಅದು ನಿರ್ಮಲ ನೀರಿದ್ದರೂ ಭೂಮಿಗಾಳಿಗಳ ಸಂಸರ್ಗದಿಂದ ಕಲಕಾಗುವಂತೆ ಜೀವ ಭಾವವನ್ನೊಳಕೊಂಡ ಆ ಚಿತ್ಕಳೆಯು ಕರ್ಮೇಂದ್ರಿಯಗಳ ಕರ್ಮ, ಜ್ಞಾನೇಂದ್ರಿಯಗಳ ಮಾಯೆ, ವಾಯ್ವೇಂದ್ರಿಯಗಳ ಜಾಲ, ಕರಣೇಂದ್ರಿಯಗಳ ಮಲಗಳಿಂದ ಶಿವಭಾವದರಿವು ನಶಿಸಿ, ಪಶುಜೀವಿಯಂತೆ ಹುಟ್ಟು ಸಾವುಗಳಿಗೀಡಾಗಿ ಕಾಲಕಾಮರ ವಶವಾಗಿ ಕೆಟ್ಟು ಹೋಗುತ್ತಿಹುದೆಂಬುದ ಸರ್ವಶ್ರುತವು. ಇದೇ ಜನನ ಮರಣ, ಇದೇ ಸಂಸ್ಕೃತಿ. ಇದೇ ಭೋಗ. ಈ ಹುಟ್ಟು ಸಾವುಗಳಿಗೀಡಾಗಬಾರದೆಂದು " ಸಾವಜೀವಕ್ಕೆ ಗುರುಬೇಡ. ಸಾಯದ ಜೀವಕ್ಕೆ ಗುರುಬೇಡ, ಗುರುವಿಲ್ಲದೆ ಕೂಡಲಿಕ್ಕೆ ಬಾರದು, ಇನ್ನಾವ ಠಾವಿಂಗೆ ಗುರುಬೇಕು? ಸಾವಜೀವಗಳ ಸಂಬಂಧವ ಠಾವ ತೋರಬಲ್ಲಾತ ಗುರು, ಗುಹೇಶ್ವರಾ"

ಸದ್ಗುರುವು ಚಿತ್ಕಲೆಯು ಮಲಿನವಾಗುವ ಮೊದಲು ಊರ್ಧ್ವದಲ್ಲಿಯೇ ವೇಧಾದೀಕ್ಷೆಯಿಂದ ತಡೆಹಾಕಿ, ಮನುದೀಕ್ಷೆಯಿಂದ ಶ್ರೋತ್ರಕ್ಕೂ ಚಿತ್ತಕ್ಕೂ ತಂದು ಕ್ರಿಯಾ ದೀಕ್ಷೆಯಿಂದ ನೇತ್ರಕ್ಕೆ ತೋರಿ, ಕರಸ್ಥಲಕ್ಕೆ ಮುಹೂರ್ತಂಗೈವನು, ಆಗ ಆಲಿಂಗವು ಸಿನೇಮಾದೊಳಗಿನ ಚಿತ್ತಾಕರ್ಷಕ ಚಿತ್ರಗಳಂತೆ ಮನೋನೇತ್ರಾದಿಗಳಲ್ಲಿ ಪ್ರತಿಕ್ರಿಯೆಗಳನ್ನುಂಟು ಮಾಡಿ, ಅವುಗಳಲ್ಲಿದ್ದ ಮಲಮಾಯಾ ಕರ್ಮಜಾಲಂಗಳನು (ಇಷ್ಟಲಿಂಗಾನು ಸಂಧಾನದಿಂದ) ಜ್ವಲಿಸುವದು. ಆಗ ಜಾಡ್ಯವಳಿದ ವಿಶ್ವವು ಸದ್ರೂಪವಾಗಿಯೂ ಆ ವಿಶ್ವದ ಮಾಯೆಯಳಿದ ವೃತ್ತಿಜ್ಞಾನವು ಚಿದ್ರೂಪವಾಗಿಯೂ ಇವು

ಗಳಿಂದುಂಟಾದ ನಿರ್ಮಲಾತ್ಮ ಜ್ಞಾನಾತ್ಮದಿಂದ ಕರ್ಮಚ್ಛೇದವಾಗಿ ಆತ್ಮ ಜ್ಯೋತಿಯು ಚಿತ್ಪ್ರಕಾಶಮಯ ವಾಗುವದು. ಈ ಇಷ್ಟಲಿಂಗಾನು ಸಂಧಾನವಿಲ್ಲದ ಜೀವಿಗಳು ಮಲವೂಾಯಾ ಕರ್ಮಗಳಿಂದಲೂ ಅಹಂಕಾರ ಮಮಕಾರಗಳಿಂದಲೂ ಅಜ್ಞಾನಾಂಧಕಾರದೊಳು ಏನನ್ನೂ ಕಾಣದೆ ಅಂಯುದೆ ಜೀವಭಾವದಿಂದ ಕರ್ಮವನ್ನೆಸಗುವವು. ಇದೇ ಕರ್ಮಜಾಲವು.

"ಕರಸ್ಥಲಗತಂ ಲಿಂಗಂ ವಾಮತ: ಕೃತಗೋಮುಖಂ। ಅಂಗುಷ್ಠಾಗ್ರೇಣ ಚೈವಂಹಿಸಂಸ್ಪೃಶೇದರ್ಚನಾವಿಧೌ। ಭಾವಪ್ರಾಣೇಷ್ಟ ಲಿಂಗಾನಿ ಪೂಜಯೇದೇಕ ಭಾವತಃ॥ ಎಂಬ ವೀರಶೈವ ಸೂಕ್ತಾಗ್ರಮದಂತೆ ಇಷ್ಟ ಲಿಂಗ ಪೂಜಾಪ್ರಭಾವದಲ್ಲಿ ಮಲಿನ ದೇಹದೊಳು ತದ್ಗಗವಾದ ಪ್ರಾಣವನ್ನು ಸತ್ಕ್ರಿಯಾ ರೂಪದಿಂದ ಕರಸ್ಥಲದ ಇಷ್ಟಕ್ಕಿಳಿಸಿ ಲಿಂಗಾನು ಸಂಧಾನದ ಅನುವನಾಚರಿಸುವ ಸಾಧನವ ಸಾಧ್ಯ ಮಾಡಕೊಳ್ಳಲು ಬಾಹ್ಯ ಜಗತ್ತು ನೇತ್ರ ಶ್ರೋತ್ರಕ್ಕೂ, ಸ್ಪರ್ಶನ ಜಿಹ್ವೆವಾಸನೆಗಳ ಪಂಚ ವಿಷಯಕ್ಕೂ ಪೂರಾಗಿ ಚಿತ್ಪೃಥ್ವಿ, ಚಿಜ್ಜಲ, ಚಿದಗ್ನಿ, ಚಿದ್ವಾಯು, ಚಿದಾಕಾಶದೊಳು ಮೆರೆವ ಚಿಲ್ಲಿಂಗ ಮೂರ್ತಿಯು ಚಿದಾತ್ಮನೊಡಗೂಡಿ ಚಿನ್ಮಯವಾಗುವದು. ಆಗ ಸದ್ಭಕ್ತನ ಅಂಗವಿಕಾಸ, ತನು ಮನೋಭಾವ ವಿಕಾಸಗಳಿಗೆಷ್ಟು ಆಸ್ಪದ ವಿರದ ಶಿವಪೂಜಾ ಕೋಣೆಯೂ ಅರ್ಥಾತ್ ಶುದ್ಧ ಬದ್ಧಕಾಯವೂ ಶಾಂತ್ಯಾದಿ ಕಲೆಗಳೂ ಹೊಳಚದ ದೃಷ್ಟಿಯೂ ಏಕಾಗ್ರ ಚಿತ್ತವೂ ಉಂಟಾಗಿ " ಅಂಗಕಳೆ ಲಿಂಗದಲಿ ಲಿಂಗಕಳೆಯಂಗದಲಿ ಅಂಗ ಲಿಂಗವೆಂಬ ಉಭಯವಳಿದು॥ ಸಂಗಳ ಮಹಾಜ್ಞಾನದ ಬೆಳಗಿನ ಬೆಳಗಿನೊಳಗೆ ಕಂಗಳೆ ಪ್ರಾಣವಾಗಿರುತ್ತಿರ್ದೆನು" ಎಂಬಂತೆ ಶಿವಯೋಗಿಗಳಿಗೆ ಹೇಳಬೇಕಿಲ್ಲ ಪ್ರಪಂಚದೊಳಿದ್ದು ಪಾರಮಾರ್ಥವ ಸಾಧಿಸುವ ಪರಮಯೋಗವಿದು, ಪಕ್ಷ ಪಕ್ಷಕ್ಕೆ ಬರುವ ಚತುರ್ದಶಿ ಕಾಲದ ಸೂರ್ಯ ಚಂದ್ರರ ನಡುವಣ ಅಗ್ನಿಯು ಕಾಂತಿಯಿದು, ಆ ಕಾಂತಿಯ ಮಧ್ಯ ದೊಳು ಮೆರೆವ ಸಮ್ಯಜ್ಞಾನವಿದು, ಆ ಸಮ್ಯ ಜ್ಞಾನದ ಮಧ್ಯದೊಳು ಕಂಗೊಳಿಸುವ ಆತ್ಮ ಜ್ಯೋತಿಯಿದು. ಆ ಚಿದಾತ್ಮನ ಮಧ್ಯದೊಳು ಪ್ರಜ್ವಲಿಸುವ ಸ್ವಸ್ತಿಕಾನನದೊಳು ಸಾವಸ್ರಟಿ ಸ್ವರೂಪವಾದ ಚಿತ್ಪ್ರಕಾಶ ಮೂರ್ತಿ ಪರಶಿವಪುಂಜವಿದು. ಇದರ ಪ್ರಕಾಶವನ್ನೂಹಿಸಲು ಆದಿಶೇಷನಿಗೂ ಅಸಾಧ್ಯ. ಅಂತೇ ಶ್ರೀ ಸಿದ್ಧರಾಮೇಶ್ವರನು ತನಗೆ ಇಷ್ಟಲಿಂಗವನ್ನು ದಯಪಾಲಿಸಿದ ದೀಕ್ಷಾಗುರುವಾದ ಶ್ರೀ ಚನ್ನಬಸವೇಶನನ್ನು "ಹೃದಯ ಕಮಲ

ದಷ್ಟದಳದ ದ್ವಾತಿಂಶತ್ಸುಮ ಮಧ್ಯದಲ್ಲಿಪ್ಪನಾ ಸೂರ್ಯನು, ಆ ಸೂರ್ಯನ ಮಧ್ಯದಲ್ಲಿಪ್ಪನಾ ಚಂದ್ರನು, ಆ ಚಂದ್ರನ ಮಧ್ಯದಲ್ಲಿಪ್ಪನಾ ಅಗ್ನಿ ಆ ಅಗ್ನಿಯ ಮಧ್ಯದಲ್ಲಿಪ್ಪುದಾ ಕಾಂತಿ, ಆ ಕಾಂತಿಯ ಮಧ್ಯದಲ್ಲಿಪ್ಪುದಾ ಸುಜ್ಞಾನ, ಆ ಸುಜ್ಞಾನದ ಮಧ್ಯದಲ್ಲಿಪ್ಪುದಾ ಚಿದಾತ್ಮ. ಆ ಚಿದಾತ್ಮನ ಮಧ್ಯದಲ್ಲಿಪ್ಪನಾ ಚಿತ್ಪ್ರಕಾಶ ಸ್ವರೂಪನಪ್ಪ ಪರಶಿವನು, ಅಂತಪ್ಪ ಪರಶಿವನು ಸುಜ್ಞಾನ ಕಾಯದ ಮಸ್ತಕದ ಮೇಲೆ ಹಸ್ತವನಿರಿಸಿ ಮನಭಾವ ಕರಣೇಂದ್ರಿಯಗಳಿಂ ಸ್ವರೂಪೀಕರಿಸಿ ದೃಷ್ಟಿಗೆ ತೋರಿ ಕೈಯಲ್ಲಿ ಲಿಂಗವ ಕೊಟ್ಟ ಡನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನಯ್ಯ ಪ್ರಭುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ" ಈ ಪ್ರಕಾರ ಕೊಂಡಾಡಿದ್ದಾಗಿದೆ.

" ಶಿವಾಂಗ ಇಷ್ಟಲಿಂಗಂಚ ಮನಸ್ತತ್ರ ಪ್ರಾಣಲಿಂಗಯೋಃ। ಆತ್ಮಾನಂ ಭಾವಲಿಂಗಂಚ ತ್ರಿವಿಧಂ ಜ್ಯೋತಿ ರೂಪಕಂ"॥ ಎಂಬದಾಗಿ ಜೀವ ಭಾವಹೋಗಿ ಶಿವಭಾವ ಉಂಟಾಗಲು ಇಷ್ಟಲಿಂಗ ಧಾರಣವೂ ಆ ಲಿಂಗದ ಪೂಜೆಯೂ ಮತ್ತು ಆ ಲಿಂಗದ ಜ್ಞಾನವೂ ಅತ್ಯವಶ್ಯವು. "ಹಾಲ ಹರಿವೆಯ ಮೇಲೆ ಮಜ್ಜಿಗೆಯ ತುಂಬಿ ಇರಿಸಿದೊಡೇನು? ಹೆಪ್ಪಾಗ ಬಲ್ಲದೇನಯ್ಯ ಸಮ್ಮಿಶ್ರದಿಂದಲ್ಲದೆ? ಅಂಗದ ಮೇಲೆ ಲಿಂಗಧಾರಣ ಮಾಡಿದರೇನಯ್ಯ? ಸಂಗ ಸಮರಸವಾಗಬಲ್ಲದೆ ಶಿವಜ್ಞಾನವಿಲ್ಲದನ್ನಕ್ಕರ ಅಖಂಡೇಶ್ವರಾ"॥ ಹಾಗು "ದೇವರ ನೆನೆದರೆ ಮುಕ್ತಿಯಾಗುವದೆಂಬ ವಿವರಗೇಡಿಗಳ ಮಾತು ಕೇಳಲಾಗದು ಅನ್ನವ ನೆನೆದರೆ ಹಸಿವೆ ಹಿಂಗುವದೇ? ರಂಭೆಯ ನೆನೆದರೆ ಕಾಮ ಹಿಂಗುವದೇ? ಜ್ಯೋತಿಯ ನೆನೆದರೆ ಕತ್ತಲೆ ಹಿಂಗುವದೇ? ನೋಡಿಕಂಡು ನಿರ್ಧರಿಸಿ ಕೂಡಿದಲ್ಲದೆ ಸೌರಾಷ್ಟ್ರ ಸೋಮನಾಥ ತಾನಾಗಬಾರದು॥ ಆದ್ದರಿಂದ "ಮಡಿಕೆಯ ಮಾಡುವರೆ ಮಣ್ಣೇ ಮೊದಲು, ತೊಡಿಗೆಯ ಮಾಡುವರೆ ಹೊನ್ನೇ ಮೊದಲು, ಶಿವ ಪಥವನರಿವಡೆ ಗುರುಪಥವೇ ಮೊದಲು ಕೂಡಲ ಸಂಗನುನರಿವಡೆ ಶರಣರ ಸಂಗವೇ ಮೊದಲು॥ ಅಂದ ಬಳಿಕ ದೀಕ್ಷಾತ್ರಯಂಗಳನು ೨೧ ದೀಕ್ಷಾ ಭೇದಂಗಳೊಡನೆ ಪಡೆಯಲೇ ಬೇಕಾಯಿತು. ಇಂತು ಪಡೆದ , ಶಿಷ್ಯನ ಇರವನೇನೆಂದು ಹೇಳಲಿ? "ನೆನೆಹಿನಿಂದೀ ವಿಶ್ವಕಾರಣ। ಮೆನಿಪವಿಶ್ವಾತೀತವಾಗಿಹ। ಮನುಮುನೀಶ್ವರರಿಂಗೆ ನಿಲುಕದ ಗುರುವು ತೋರಿದೊಡೆ। ತನು ಮನೋಭಾವದಲಿ ತುಂಬಿಹ ಘನಮಹಾ ಚಿಜ್ಯೋತಿಯದು ತಾ। ನನಘ ಭಕ್ತನ

ಹಸ್ತನಳಿದೊಳಿಸಿವ ಸೈಪೆನಿತೋ॥ ಮತ್ತು "ಯಥಾ ಕಲಾ ತಥಾ ಭಾವೋ ಯಥಾ ಭಾವಸ್ತಥಾಮನಃ। ಯಥಾ ಮನಸ್ತಥಾ ದೃಷ್ಟಿ: ಯಥಾ ದೃಷ್ಟಿಸ್ತಥಾ ಸ್ಥಲಂ॥ ಎಂಬದಾಗಿ ಶ್ರೀ ಗುರುವು ತನ್ನ "ಹಸ್ತಾಬ್ಜ ಮಥನದಿಂದೊತ್ತಿ ಭಸ್ಮವನೆ ಮಾಡಿ ಪಂಚಾಕ್ಷರಿಯ ಮರುಜೀವಣೆಯು ಚಿತ್ರಶ್ರೋತ್ರದೊಳು ಧಾರೆಯನೆರೆಯಲು ಆತ ನಿನ್ನಂತೆ ಕಾಣಾ ರಾಮನಾಥಾ॥ ಹಾಗು "ಭಾವಮನೋದೃಕ್ಕರತಳ। ಪಾವನ ಗುರುದತ್ತ ಸರ್ವ ಕಾರಣ ಮನುಪಂ॥ ಜೀವನ ಷಡ್ಬ್ರಹ್ಮೇಶ್ವರ। ಕೈವಲ್ಯ ಕಲಾಲರಾಜ ಲಿಂಗಪ್ರಭುವೇ॥ ಸಾರಾಂಶ ಶಿಷ್ಯನಂತರಂಗದಲ್ಲಿರ್ದ ಚಿತ್ಕಲಾಲಿಂಗವೇ ಗುರುಮುಖದಿಂ ಬಹಿಷ್ಕರಿಸಿ ಬಂದು ಭಾವ ಮನದೃಕ್ಕರತಳನೊಳಕೊಂಡು, ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಪರಮೇಶ್ವರರೆಂಬ ಷಣ್ಮೂರ್ತಿಗಳಿಗೆ ಒಡೆಯನಾದಂಥ ಷಡ್ಬ್ರಹ್ಮ ಪರಿಯಾಯವಾದ ಲಿಂಗವು ಷಡಿಂದ್ರಿಯಂಗಳಲ್ಲಿ ಷಡ್ಲಿಂಗವಾಗಿ ಬೆಳಗುವದೆಂಬಂತಾಯಿತು. ಈ ಪ್ರಕಾರವಾಗಿ ಗುರುಕರುಣವನ್ನು ಪಡೆದ ಶಿಷ್ಯನ ಭಕ್ತ್ಯಾನುಭಾವವು ವಾಚಕರ ಮುಂದಿರಿಸುವದು ಅಪ್ರಾಸಂಗಿಕವಾಗದೆಂದೂಹಿಸಿ ಕೆಲ ತ್ರಿವಿಧಿಗಳನ್ನು ಒಡಮೂಡಿಸಲುದ್ಯುಕ್ತನಾಗುವೆ.

ಮಜ್ಜೀವ ನಿಮ್ಮಿಸಾ। ದಾಬ್ಜವ ಭಜಿಸಿಹ। ಸ್ವಾಬ್ಜದೊಳ್ ಜನಿಸಿ॥ ಸಜ್ಜೀವ ನಾದುದೆಂ। ಮ್ಮಜ್ಜಯ್ಯಗುರುವೆ ಕೃಪೆಯಾಗು ।।೧।। ಯುಗ ನಾಲ್ಕು ಒಂದಾದ। ಜಗದೊಳು ತಾನಿರ್ಪ। ಬಗೆಯಾನಾ ಜಗದೊ॥ ಳೊಗೆದು ಕಣ್ಣಲಿನೋಡಿ ನಗುವ ಶ್ರೀ ಗುರುವೇ ಕೃಪೆಯಾಗು ॥೨॥ ಕಾಯ ಕರ್ಪಗಳೆಂಬ ಮಾಯೆ ಸಂಸಾರವನು। ಹೇಯುವ ಮಾಡಿ॥ ಪ್ರಿಯ್ಯದಿಂದಲಿಪಾಲಿಸಯ್ಯ ಶ್ರೀ ಗುರುವೇ ಕೃಪೆಯಾಗು ॥೩॥ ಮಗನೆ ಈ ಸಂಸಾರ। ತೆಗಹನೆ ಪರಿಹರಿಪೆ। ದುಗುಡಬೇಡೆಂದು॥ ನಗು ತೊಂದಾಲೋಚನೆಯಂ। ಬಗೆದ ಶ್ರೀ ಗುರುವೇ ಕೃಪೆಯಾಗು ॥೪॥ ಕರೆದು ಮುಂಡೆಯ ಮೇಲೆ। ಕರವಿಟ್ಟು ಶಿರದಡಹಿ। ಗುರುಪುತ್ರ ನೆನಿಸಿನಿ॥ ಸ್ಥಿರವಾಗಿ ಬಾಳೆಂದು। ಹರಸಿದ ಗುರುವೇ ಕೃಪೆಯಾಗು ॥೫॥ ದೀಕ್ಷೆತ್ರೈವ್ರತಸುವಿಂಗೆ। ಶಿಕ್ಷೆಮನ್ಮನಸಿಂಗೆ। ಮೋಕ್ಷಮಾತ್ಮಂಗೆ॥ ಈಕ್ಷಿಸಿಕೊಟ್ಟಪ್ರ॥ ತ್ಯಕ್ಷ ಶ್ರೀಗುರುವೇ ಕೃಪೆಯಾಗು ॥೬॥ ಅಡಿಗೆರಗಿದವನ ಶಿರ। ದಡಹಿ ಮನ್ನಿಸಿಯೆನ್ನ। ನುಡಿಯಬ್ರಹ್ಮವನೆ॥ ನ್ನೆಡೆಗೆ ತಂದಿತ್ತಯೆ। ನ್ನೊಡೆಯ ಶ್ರೀಗುರುವೇ ಕೃಪೆಯಾಗು ॥೭॥ ಮಸ್ತಕದೊಳು ನಿನ್ನ। ಹಸ್ತವನಿಟ್ಟು ನಿಜ। ವಸ್ತುವ

ತೆಗೆದು ॥ ಹಸ್ತಪೀಠದೊಳಿತ್ತು ಸ್ವಸ್ತಿ ಶ್ರೀಗುರವೇ ಕೃಪೆಯಾಗು ॥೮॥ ಅಂತರಂಗದ ಮೂರು ಮಂತ್ರ ರೂಪಕದವು। ಶಾಂತ ಬ್ರಹ್ಮವನು॥ ಮುಂತೆ ನೀ ತೆಗದಿತ್ತ ಚಿಂತಾಮಣಿ ಗುರುವೇ ಕೃಪೆಯಾಗು ॥೯॥ ಗುರುವೆ ನಿಮ್ಮ ಯಕೃಪಾ। ಶರಧಿಯೊಳ್ ಜನಿಸಿದ। ಪರಮ ಸುಜ್ಞಾನ॥ ನವರತ್ನ ಕರದಿಪ್ಪ। ದೊರವಿತ್ತ ಧರ್ಮಿರ್ಗೆ ಕೃಪೆಯಾಗು ॥೧೦॥ ಪಶ್ಚಿಮ ಮಾರ್ಗದೊಳಿರ್ದ। ಸ್ವಚ್ಛ ನಿರಂಜನ। ವಚ್ಚಬ್ರಹ್ಮವನು॥ ನಿಶ್ಚಯಿಸಿ ಕರಕಿತ್ತ। ನಿಶ್ಚೇಷ್ಟ ಗುರುವೇ ಕೃಪೆಯಾಗು ॥೧೧॥ ಉನ್ನತ ಶಿಖಿಯು। ಸೌಜನ್ಯ ನಾಗಿದ್ದನಿ। ಶೂನ್ಯ ಬ್ರಹ್ಮವನ್ನು॥ ನಿನ್ನ ನೀನೊಲಿದಿತ್ತ। ಚನ್ನ ಶ್ರೀಗುರುವೇ ಕೃಪೆಯಾಗು ॥೧೨॥ ಅಜರಂಧ್ರದಡಿಯ ಸರ। ನಿಜದ। ನಿಷ್ಕಲ ಬ್ರಹ್ಮವ। ಭಜಿಸೆಂದು ಯೆನ್ನ। ನಿಜ ವಾಮಕರಕಿತ್ತ। ತ್ರಿಜಗ ಶ್ರೀಗುರುವೇ। ಕೃಪೆಯಾಗು ॥೧೩॥ ಭೂಮಧ್ಯದಾಗ್ನೇಯ ನಿಸ್ಸೀಮ ಪರಬ್ರಹ್ಮವನು। ನೇಮಿಸಿ ಯೆನ್ನ॥ ವಾಮ ಹಸ್ತದೊಳಿತ್ತ। ಶ್ರೀ ಮಹಾಗುರುವೇ ಕೃಪೆಯಾಗು ॥೧೪॥ ಮಾನಿತ ಶ್ರೀಕಂಠ। ಸ್ಥಾನ ವಿಶುದ್ಧಿವಿ। ಜ್ಞಾನ ಬ್ರಹ್ಮವನು॥ ನೀನೊಲಿದು ಕರಕಿತ್ತ। ಸ್ವೈಜ ಶ್ರೀಗುರುವೇ ಕೃಪೆಯಾಗು ॥೧೫॥ ಕುಂದದೆ ಸದು ಹೃದಯ। ಮಂದಿರದನಾಹತಾ। ನಂದ ಬ್ರಹ್ಮವನು॥ ತಂದು ಕರಕೆ ಕೊಟ್ಟಂದೀನಗುರುವೇ ಕೃಪೆಯಾಗು ॥೧೬॥ ವಿಲಸಿತ ನಾಭಿಮಂಡಲ ಮಣಿಪೂರಕದಸ। ತ್ಕಲೆಯ ಬ್ರಹ್ಮವನು॥ ವೊಲಿದೆನ್ನ ಕರಕಿತ್ತು। ಸಲಹಿದ ಗುರುವೇ ಕೃಪೆಯಾಗು ॥೧೭॥ ಅಂಡಜದಗ್ರದ। ಖಂಡ ಸ್ವಾಧಿಷ್ಠದ। ಪಿಂಡ ಬ್ರಹ್ಮವನು॥ ತಂದೆನ್ನ ಕರಕಿತ್ತು। ದ್ವಂಡ ಶ್ರೀಗುರುವೇ ಕೃಪೆಯಾಗು ॥೧೮॥ ತೊರ್ಶಿಪರ್ಾಧಾರದ। ವಾರ್ತೆಗುದಮಂದಿರದ। ಮೂರ್ತಿಬ್ರಹ್ಮವನು ಅರ್ಥಿಯಿಂದಿತ್ತಸ। ತ್ಕೀರ್ತಿಮಯ ಗುರುವೇ ಕೃಪೆಯಾಗು ॥೧೯॥ ನವ ಚಕ್ರದೊಳಗಿರ್ದ। ನವಬ್ರಹ್ಮವನು ತೆಗೆದು। ಶಿವಲಿಂಗ ವಿಗ್ರ॥ ಹವಮಾಡಿ ಕರುಣಿಸಿದ। ಸುವಿವೇಕ ಗುರುವೇ ಕೃಪೆಯಾಗು ॥೨೦॥ ಯಮಯೋಗೆಪಾಪದ। ಕ್ರಮವೆಂದು ತೊಲಗಿಸಿ। ಸುಮನ ಸತ್ಕ್ರಿಯೆ॥ ಕ್ರಮದ ಲಿಂಗವನಿತ್ತ। ವಿಮಲ ಶ್ರೀಗುರುವೇ ಕೃಪೆಯಾಗು ॥೨೧॥ ನಿಯಮ ಯೋಗದ ಧರ್ಮ। ಲಯವೆಂದು ತೊಲಗಿಸಿ। ಸ್ವಯಂಲಿಂಗಪೂಜೆ॥ ನಿಯಮ ಕರುಣಿಸಿದ। ಭಯಹರ ಗುರುವೇ ಕೃಪೆಯಾಗು ॥೨೨॥ ಆಸನಯೋಗದ। ಭ್ಯಾಸವಾಯಸವೆಂದು। ವಾಸರಿಸಿ ಕರಕಂ॥ ಜಾಸನ ಲಿಂಗವನಿತ್ತು। ಲ್ಹಾಸ ಶ್ರೀ ಗುರುವೇ ಕೃಪೆಯಾಗು ॥೨೩॥ ಪ್ರಾಣಯಾಮದ ಯೋಗ। ತ್ರಾಣಗುಂದುವನೆಂದು।

ಮಾಣಿಸಿ ಮುಕ್ತಿ॥ ತ್ರಾಣಲಿಂಗವನಿತ್ತ। ಜಾಣ ಶ್ರೀಗುರುವೇ ಕೃಪೆಯಾಗು ॥೨೪॥ ಪ್ರತ್ಯಹಾರವಕೊಂಬ। ಮಿಥ್ಯಯೋಗವ ಬಿಡಿಸಿ। ಅಥ್ಯಾಗಿರ್ದ॥ ನಿತ್ಯ ತೃಪ್ತಿಯಲಿಂಗ। ವಿತ್ತ ಶ್ರೀಗುರುವೇ ಕೃಪೆಯಾಗು ॥೨೫॥ ಮೌನಗೊಂಡಿರುತಿರ್ಪ। ಧ್ಯಾನ ಯೋಗವ ಬಿಡಿಸಿ। ನೀನಿಷ್ಟಲಿಂಗ॥ ಧ್ಯಾನದೊಳರಿಸಿದ। ಮಾನಿತ ಗುರುವೇ ಕೃಪೆಯಾಗು ॥೨೬॥ ಧಾರಣ ಯೋಗದಲಿ। ಕಾರಣಿಯುನತಿಗಳೆದು। ಕಾರಣಲಿಂಗ॥ ಧಾರಣಗೈದ ಪರಿ। ಪೂರಣ ಶ್ರೀಗುರುವೇ ಕೃಪೆಯಾಗು ॥೨೭॥ ಸುಸಮಾಧಿ ಯೋಗತಾ। ಮುಸಮುವೆಂದು ತೊಲಗಿಸಿ। ಅಸಮ ಲಿಂಗವೊ॥ ಳಸುವಡೆ। ಐಕ್ಯವೆಂದು ಸುರಿದ ಗುರುವೇ ಕೃಪೆಯಾಗು ॥೨೮॥ ಅಷ್ಟಾಂಗಯೋಗ ಬಹು। ಕಷ್ಟವೆಳೆವಾಗನೆ ಯೆಂ। ದಿಷ್ಟ ಲಿಂಗವನು॥ ಸೃಷ್ಟಿಸಿ ಕರಕಿತ್ತ। ಶ್ರೇಷ್ಠ ಶ್ರೀಗುರುವೇ ಕೃಪೆಯಾಗು ॥೨೯॥ ಶಾಂಭವಿಯು ಮುದ್ರೆವಿ॥ ಡಂಬಿಸಿ ಯೆನಗೆ ಸ್ವಯಂಭು ಲಿಂಗವ॥ ಕರಾಂಬುಜಕಿತ್ತಕೃ। ಪಾಂಬುಧಿ ಗುರುವೇ ಕೃಪೆಯಾಗು ॥೩೦॥ ಕಣ್ಮಾ ಕಿವಿ ಬಲಿದ। ಷಣ್ಮುಖಿಯು ಮುದ್ರೆಬಹು। ತಿಣ್ಣೆಂದು ಬಿಡಿಸಿ॥ ಷಣ್ಮಂತ್ರುವ ನಿತ್ತನೆ। ಣ್ಣಣ್ಮ ಶ್ರೀಗುರುವೇ ಕೃಪೆಯಾಗು ॥೩೧॥ ಖೇಚರಿಯು ಮುದ್ರೇನೀ। ನಾಚರಿಸಲೇನುಂಟು। ಗೋಚರಿಪ ಲಿಂಗ॥ ದಾಚರಣೆ ಘನವೆಂದು। ಸೂಚಿಸಿದ ಗುರುವೇ ಕೃಪೆಯಾಗು ॥೩೨॥ ಹಠಯೋಗ ಮಾರ್ಗಸಂ। ಕಟದಿಂದಾಗುವ ಮೋಕ್ಷ। ಸಟೆಯೆಂದು ಬಿಡಿಸಿ॥ ಘಟದ ಸಂಗವ ಲಿಂಗ। ಥಿಟವೆಂದ ಗುರುವೇ ಕೃಪೆಯಾಗು ॥೩೩॥ ಹಲವು ಯೋಗವ ಮಾಡಿ। ಫಲವೇನು ಮಗನೆ ಯೆಂ। ದೊಲಿದು ಲಿಂಗಾಂಗವು। ಸುಲಭ ಯೋಗವ ನೋಡ। ಗಲಿಸಿದ ಗುರುವೇ ಕೃಪೆಯಾಗು ೩೪॥ ಈ ಲಿಂಗವೆ ನಿನ್ನಂಗ। ಕ್ಕಾಲಿಂಗನ ವಾಗಲ್ಕೆ। ನೀ ಲಿಂಗವು ನಿಗ ಮೈಲಿಂಗವೆಂದೆನ್ನೋಳ್ಕೇಲಿಸಿದ ಗುರುವೇ ಕೃಪೆಯಾಗು ॥೩೫॥ ಈ ಲಿಂಗವೇ ಶಕ್ತಿಯುದ। ಮೂಲ ಸಮ್ಯಜ್ಞಾನ। ದಾಲಯವು ನೀತ್ರೈಕಾಲ ಪೂಜಿಪುದೆಂದು। ಪಾಲಿಸಿದ ಗುರುವೇ ಕೃಪೆಯಾಗು ॥೩೬॥ ಈ ಲಿಂಗವೆ ಭಕ್ತಿವ್ರತಶೀಲ ನೇಮಗಳಿಂದ। ಓಲೈಸು ನಿನಗೆ॥ ಮೇಲುಪದವಹ ದೆಂದು। ಪಾಲಿಸಿದ ಗುರುವೇ ಕೃಪೆಯಾಗು ॥೩೭॥ ಸಾಲೋಕ್ಯ ಮೊದಲಾದ। ಮೇಲಾದ ಪದವಿ ನಾಲ್ಕು। ಈ ಲಿಂಗಪದಕೆ॥ ಕೀಳಾಗುತಿಹವೆಂದು ಪೇಳಿದ ಗುರುವೇ ಕೃಪೆಯಾಗು ॥೩೮॥ ಈ ಲಿಂಗದೊಡಲೊಳಗೆ ಮೂಲೋಕವಡಗಿರ್ದು। ಮೂಲೋಕದೊಳ॥ ಈ ಲಿಂಗವಡಗಿರ್ಪುದ

ಪಾಲಿಸಿದ ಗುರುವೇ ಕೃಪೆಯಾಗು ॥ ೩೯ ॥ ಆದಿಪೀಠವೆ ಗುರುಮೋ। ಲಾದಿ ಪೀಠವೆಲಿಂಗ । ನಾದಿ ಗೋಮುಖವೆ॥ ಮೋದಜಂಗಮವೆಂದು। ಬೋಧಿಸಿದ ಗುರುವೇ ಕೃಪೆಯಾಗು ॥೪೦॥ ಅಡಿಯ ಪೀಠವೆ ಇಷ್ಟ। ಮುಡಿಯ ಪೀಠವೆ ಪ್ರಾಣ। ನಡುವಣ ಗೋಮುಖವು॥ ದೃಢಭಾವ ಲಿಂಗವೆಂ। ದೊಡನುಸುರ್ದ ಗುರುವೇ ಕೃಪೆಯಾಗು ॥೪೧॥ ಮೊದಲ ಪೀಠವೆ ಸ್ವಯ। ಮೇಲ್ತುದಿಯ ಪೀಠವೆ ಪರ ಮ। ಧ್ಯದ ಗೋಮುಖವು॥ ಪರತತ್ವ ಜಂಗ ಮವೆಂ। ಬುದಪೇಳ್ದ ಗುರುವೆ ಕೃಪೆಯಾಗು॥ ॥೪೨॥ ಗುರುಲಿಂಗ ಜಂಗ ಮವು। ವರಭಾವ ಪ್ರಾಣೇಷ್ಟ। ಸ್ಥಿರ ಚರಪರ॥ ಮೂರು ಕರದಿಷ್ಟ ಲಿಂಗವೆಂ। ದೊರೆದ ಶ್ರೀಗುರುವೆ ಕೃಪೆಯಾಗು ॥೪೩॥ ತರುಳ ಕೇಳಿವು ಮೂ। ರಕ್ಷರವೆ ಮೂರೊಂದಾದ। ವರ ಮೂಲ ಪ್ರಣವ॥ ದಿರವೆಯಿ ಲಿಂಗ ವೆಂ। ದರುಹಿದ ಗುರುವೇ ಕೃಪೆಯಾಗು ॥೪೪॥ ತಾರಕಾಕೃತಿ ಮೊದಲಾ। ದಾರು ಕಲೆಗಳ ಲಿಂಗಾ। ರುಸ್ಥಾನದೊಳು॥ ಪ್ರಣವೇಕಾಕೃತಿಯ ತೋ ರಿದ ಗುರುವೇ ಕೃಪೆಯಾಗು ॥೪೫॥ ವೃತ್ತ ಕಟಿ ಗೋಮುಖ। ಮತ್ತೆ ವರ್ತುಳ ನಾಳ। ದತ್ತ ಚಿತ್ಪೀಠ॥ ಗೊತ್ತು ತೋರಿಸಿಲಿಂಗ। ವಿತ್ತ ಶ್ರೀಗುರುವೇ ಕೃಪೆಯಾಗು ॥೪೬॥ ಬಾಲ ಬಾರೆಂದೆನ್ನ ಕೈಲೆ ಲಿಂಗವಕೊಟ್ಟು। ಈ ಲಿಂಗ ದೊಳಗೆ॥ ಮೂಲ ಮಂತ್ರಗಳ॥ ಕೀಲಿಸಿದ ಗುರುವೇ ಕೃಪೆಯಾಗು ॥೪೭॥ ಚಾರು ವೃತ್ತದೊಳಿರ್ಪಾ। ಚಾರ ಲಿಂಗದೊಳು ನ। ಕಾರ ಮೊದಲಾದ॥ ಆರು ಪ್ರಣವದ ನೆಲೆಯ। ತೋರಿಸಿದ ಗುರುವೇ ಕೃಪೆಯಾಗು ॥೪೮॥ ಪರಮ ಕಟಿಯ ಶ್ರೀ ಗುರುಲಿಂಗದೊಳಗೆ ಮ। ಕ್ಷರವೆ ಮೊದಲಾದ॥ ವರ ಷಡಕ್ಷರ ಮಂತ್ರ। ನೊರೆದ ಶ್ರೀ ಗುರುವೇ ಕೃಪೆಯಾಗು ॥೪೯॥ ಅವಿ ರತ ಗೋಮುಖ। ಶಿವಲಿಂಗದೊಳು ಶಿ। ಕಾರವೆ ಮೊದಲಾದ॥ ತವೆ ಷಣ್ಮಂತ್ರವ ತೋರಿ। ದವಿರಳ ಗುರುವೇ ಕೃಪೆಯಾಗು ॥೫೦॥ ಇಂತು ವರ್ತುಳದೊಳಗಿ। ಪ್ಪಂತ ಜಂಗಮಲಿಂಗ। ಮಂತ್ರವಕಾರ॥ ಮುಂತಾದ ಷಣ್ಮಂತ್ರಮಂ॥ ತೋರಿಸಿದ ಗುರುವೇ ಕೃಪೆಯಾಗು ॥೫೧॥ ನಾದ ನಾಳದಿ ಸುಪ್ರ। ಸಾದಲಿಂಗದೊಳು ನಿ। ರ್ಭೇದವಹ ಯಕಾ॥ ಕಾರಾದಿ ಷಣ್ಮಂತ್ರ ಗಳ। ಬೋಧಿಸಿದ ಗುರುವೇ ಕೃಪೆಯಾಗು ॥೫೨॥ ಬಹು ಮೇಲುಪೀಠದ। ಮಹಲಿಂಗದೊಳಗೆ ತಾ। ನಿಹ ಓಂಕಾರವೆ॥ ಸಹಜ ಮಂತ್ರವ ಪೀನ। ರುಹಿದ ಗುರುವೇ ಕೃಪೆಯಾಗು ॥೫೩॥ ಇಂತಿಪ್ಪ ಲಿಂಗಪಾ। ದ್ಯಂತ ಷಡುಸ್ಥಾನದೊಳು। ದಂತದಿವಾಂತ॥ ಮಂತ್ರ ಮೂಲವ ತೋರಿ। ದಂತ ಶ್ರೀ

ಗುರುವೇ ಕೃಪೆಯಾಗು ॥೫೪॥ ತನುವಿಷ್ಟಲಿಂಗನಂ। ಮನ ಪ್ರಾಣಲಿಂಗವಾ। ತ್ಮನೆ ಭಾವಲಿಂಗ॥ ದನುವ ಬೋಧಿಸಿದ ಚಿ। ದ್ಘನ ಮಹಗುರುವೇ ಕೃಪೆ ಯಾಗು ॥೫೫॥

ಇಂತಪ್ಪ ಇಷ್ಟಲಿಂಗದ ಪೂಜಾಕ್ರಮವರಿತು ಭಕ್ತಿಸ್ಥಲದಾದಿಯಾಗಿ ಐಕ್ಯಸ್ಥಲಾಂತವಾಗಿ ಆಚರಿಸಿದ ಮಹಾ ಘನಲಿಂಗಿಗಳ ಅನುಭಾವದ ನುಡಿ ಗಡಣದ ಕಡೆಗಿಷ್ಟು ತೋರಳುವಾ:- "ತನ್ನಂಗದಮೇಲೆ ಬಂದ ಆಚಾರಲಿಂಗದ ಹೊಲಬನರಿಯದೆ ಕೈಲಾಸದ ಮೇಲೆ ರವಿಕೋಟಿ ಪ್ರಕಾಶವುಳ್ಳ ಶಿವನ ಒಲಿಸ ಬೇಕೆಂದು, ಒಂದು ವಸ್ತುವಿನಲ್ಲಿ ಭಿನ್ನವಿಟ್ಟು ನುಡಿವ ಮಂದ ಮತಿಗಳು ನೀವು ಕೇಳಿರಿ, ಮಹಾ ಮೇರುವೇ ಶರಣ. ಆತನ ಸ್ಥೂಲ ಶರಿರವೇ ರಜತಾದ್ರಿ ಸೂಕ್ಷ್ಮಶರೀರವೇ ಹೇಮಾದ್ರಿ, ಕಾರಣ ಶರೀರವೇ ಮಂದರಾದ್ರಿ, ಇಂತೀ ಮೂರು ಪರ್ವತಗಳುಳ್ಳ ಅರಮನೆಯಲ್ಲಿ ನೆಲೆಗೊಂಡ ಶಿವನು ಆರೆಂದಡೆ ? ಆ ನಿರಾಕಾರವಾದ ಶೂನ್ಯ ಬ್ರಹ್ಮವೇ ಶರಣನನ್ನು ಕುರಿತು ಪಂಚಸಾದಾಖ್ಯ ಗಳನ್ನೊಳಗೊಂಡು ಬಂದ ಇಷ್ಟಲಿಂಗವೇ ಶಿವನು. "ಜ್ವಲತ್ಕಾಲಾನಲಾ ವಾಸಾತಟಿತ್ಕೋಟಿ ಸಮಪ್ರಭಾ। ತಸ್ಯೋರ್ಧ್ವಂಚ ಶಿಖಾ ಸೂಕ್ಷ್ಮಾಚಿದ್ರೂಪ ಪರಮಾಕಲಾ । ಏವಂಭೇದ ಕಲಾದೇವಿ ಸದ್ಗುರು ಶಿಷ್ಯ ಮಸ್ತಕೇ ಹಸ್ತಾಬ್ಜ ಮಥನಗ್ರಾಹ್ಯಂ ತಸ್ಯ ಭಾವಕರೋದಿತಾಂ" ಇಂತೆಂದುದಾಗಿ ಆ ಶಿವನಿದ್ದ ದೇಹವೇ ಕೈಲಾಸ. ಇದನ್ನರಿಯದೆ ಮತ್ತೊಂದು ಕೈಲಾಸ ಬೇರೊಬ್ಬ ಶಿವ ನುಂಟೆಂದು ಭ್ರಮೆಗೊಂಡು ಮನವ ಎರಡು ಮಾಡುವದು ಅಜ್ಞಾನವು. ತನ್ನೆ ದೆಯ ಮೇಲೆ ಒರಗಿರ್ದ ಗಂಡನ ಬಿಟ್ಟು ನೆರೆಮನೆಯ ಗಂಡನ ಮೇಲೆ ಮನವ ಸಿಕ್ಕುವ ಹಾದರಗಿತ್ತಿಗೆ ಪತಿಭಕ್ತಿಯೆಲ್ಲಿಯದೋ? ಶ್ರೀಗುರು ಕರುಣಿಸಿ ಕೊಟ್ಟ ಕ್ರಿಯಾಲಿಂಗವನು ಅರ್ಚನೆ ಪೂಜೆಯಿಂದ, ಧ್ಯಾನ ಅರ್ಪಿತಾವಧಾನದಿಂದ, ಧ್ಯಾನಧಾರಣದಿಂದ, ಸಮತೆ ಸಮಾಧಾನದಿಂದ, ಧ್ಯಾನ ಮೌನ ಉಪಾವಸ್ತೆ ಯಿಂದ, ಮನಸು ಮೂದಲೆಯಿಂದ ಕಾಮಿಸಿ, ಕಂಬನಿದುಂಬಿ, ಕರದಲ್ಲಿರ್ದ ಪ್ರಾಣೇಶನ ಚರಣಕ್ಕೆ ಲಲಾಟ ಪೂಜೆಯಮಾಡಿ, ಒಲಿಸಿಕೊಂಡು ಒಟ್ಟೈ ಗೂಡಿ ಮುಕ್ತಿ ಪಡೆಯದೆ, ಆಕಾರವಂ ಮರೆತು ನಿರಾಕಾರವ ಕೂಡುವೆನೆಂಬ ಬಯಸುವ ಲೌಕಿಕದ ಕಾಕುಮಾನವರೆಲ್ಲಾ ಕಾಲಕಾಮರಿಗೆ ತುತ್ತಾಗಿ ಕಾಲಾಗ್ನಿ ಹೊಡೆತಕ್ಕೆ ಈಡಾಗುವರಯ್ಯಾ ಘನಲಿಂಗಿ ಮೋಹದ ಚನ್ನಮಲ್ಲಿ ಕಾರ್ಜುನಾ" ॥೧॥

ಲಿಂಗಾಂಗ ಸಂಬಂಧದ ಭೇದವನರಿಯದೆ ನಾವು ಲಿಂಗಾಂಗ ಸಂಬಂಧಿಗಳೆಂದು ಅಂದಚಂದವಾಗಿ ನುಡಿಕೊಂಬ ಕ್ರಿಯಾಭ್ರಾಂತರು ನೀವು ಕೇಳಿರಿ. ಲಿಂಗಾಂಗ ಸಂಬಂಧದ ಉತ್ತರೋತ್ತರ | ನಿರ್ಣಯವಾ. ಹೊರಗಣ ಹೂವ ತಂದು ಸ್ಥೂಲ ತನುವಿನ ಮೇಲಿಪ್ಪ ಆಚಾರಲಿಂಗವ ಪೂಜೆಯಂ ಮಾಡಿ, ತನುವ ಸಮರ್ಪಿಸಿ ಬೇಡಿಕೊಂಡು, ಹೊರಗೆ ಹೊನ್ನು ಹೆಣ್ಣು ಮಣ್ಣು ಷಟ್ಕರ್ಮಂಗಳ ಬಿಟ್ಟುದ್ದೇ ಇಷ್ಟಲಿಂಗದ ಪೂಜೆ, ಬಳಿಕ ಮನವ ಸಮರ್ಪಿಸಿ ಉಪಾವಸ್ಥೆಯ ಮಾಡಿ ಒಳಗಣ ಅಂತಃಕರಣಂಗಳಂ ಸುಟ್ಟುದೇ ಪ್ರಾಣಲಿಂಗದ ಪೂಜೆ. ಮನೋಮಧ್ಯದೊಳಿಪ್ಪ ಭಾವ ಪುಷ್ಪವನೆ ತಂದು ಕಾರಣ ತನುವಿನ ಮೇಲಣ ತೃಪ್ತಿಲಿಂಗವಂ ಪೂಜೆಯಂ ಮಾಡಿ ಸಂತೋಷವಂ ಸಮರ್ಪಿಸಿ ಜ್ಞಾನಕ್ರಿಯೆಗಳಳಿದುದೇ ಭಾವಲಿಂಗದ ಪೂಜೆ. ಈ ಪ್ರಕಾರದ ಲಿಂಗಾಂಗದ ಸಾಧಕತ್ವನಂ ಶಿವರಾತ್ರಿ ಸಂಕಣ್ಣಗೊಲಿದಂತೆ ಎನಗೊಲಿದು ಕರುಣಿಸಯ್ಯಾ ಘನಲಿಂಗ ಮೋಹದ ಚನ್ನಮಲ್ಲಿಕಾರ್ಜುನಾ ॥ ೨ ॥

ನಿಜ ಮುಕ್ತಿಗೆ ಸದಾ ಸಂಧಾನದಲ್ಲಿರಬೇಕೆಂದು ಶಿವಶರಣರು ನುಡಿಯುತ್ತಿರ್ಪರು. ಆ ಸಂಧಾನದ ತೊಲಬ ನಾನರಿಯೆ? ಎನಗೆ ಮುಕ್ತಿಯಿಲ್ಲ. ಇನ್ನೇವೆನೆಂದು ಕಂಬನಿದುಂಬಿ ಕರಗುತಿರ್ಪ ಮನವೆ! ಗುರುಕೊಟ್ಟ ಸಂಧಾನವೇ ಕರಕಮಲದಲ್ಲಿ ಪ್ರಸನ್ನ ಪ್ರಸಾದವು ಪ್ರತ್ಯಕ್ಷವಾಗಿ ತೋರುತ್ತಿದೆ. ಗುರುಕೊಟ್ಟ ಸಂಧಾನವೇ ಎಂಟೆಸಳಿನ ಚೌದಳದ ಮಧ್ಯದಲ್ಲಿ ಹೊಂಗಲಶದಂತೆ ಥಳಥಳನೆ ಹೊಳೆಯುತ್ತಿದೆ, ಗುರುಕೊಟ್ಟ ಸಂಧಾನವೇ ಮುಪ್ಪುರದ ಮಧ್ಯದಲ್ಲಿ ರತ್ನಮಿಂಚಿನಂತೆ ಕುಡಿವರಿದು ಉರಿಯುತ್ತಿದೆ. ಗುರುಕೊಟ್ಟ ಸಂಧಾನವೇ ಪಂಚಪತ್ರದ ನಡುವೆ ಬೆಳದಿಂಗಳ ಲತೆಯಂತೆ ಬೀದಿವದು ಬೆಳಗು ಬೀರುತ್ತದೆ, ಈ ಪ್ರಕಾರದ ಬೆಳಗೆ, ಮುಕ್ತಿಸಂಧಾನವಾಗಿ ಒಪ್ಪುತ್ತಿಹುದು. ಇದನೆ ಕಣ್ದುಂಬಿ ನೋಡಿ ಇದನೆ ಮನದಣಿವಂತೆ ಹಾಡಿ, ಇದನೆ ಅಪ್ಪಿ ಅಗಲದಿಪ್ಪುದೆ ನಿಜಮುಕ್ತಿ. ಇದಕ್ಕೆ ತಪ್ಪದೆ ನೀನಂಜಬೇಡ ಗುರುಕೊಟ್ಟ ಸಂಧಾನಂಮರೆದು ಭಿನ್ನವಿಟ್ಟು ಲಕ್ಷಿಸರ ಸಂಧಾನವೆಲ್ಲಾ ಭವದ ಸಾಧನವಯ್ಯ ಘನಲಿಂಗಿ ಮೋಹದ ಚನ್ನಮಲ್ಲಿಕಾರ್ಜುನಾ ॥೨॥

ನಿರ್ಗಮನಿಯಾದ ಶರಣಂಗೆ ಸಂಧಾನವಲ್ಲದೆ ಗಮನಿಯಾದ ಶರಣಂಗೆ ಅನುಗೊಳದೆಂಬ ಅಣ್ಣಗಳು ನೀವು ಕೇಳಿರಿ. ಸೂರ್ಯನು ರಥವನೇರಿ, ಪದಾರ್ಥಂಗಳ ಚಬರುಮಾಡಿ ಮನೋವೇಗದಿಂ ಪಶ್ಚಿಮ ಸಮುದ್ರಕ್ಕೆ ದಾಳಿ ಇಡಿದೊಡೆ ರವಿ ಕಿರಣಂಗಂಳು ಹಿಂದುಳಿದಿಪ್ಪವೆ? ಅದು ಕಾರಣ ಪುಷ್ಪವಿದ್ದಲ್ಲಿ

ಪರಿಮಳವಿಪ್ಪುದು ಅಂಗವಿದ್ದಲ್ಲಿ ಲಿಂಗವಿಪ್ಪುದು, ಲಿಂಗವಿದ್ದಲ್ಲಿ ಆ ಲಿಂಗದ ಮೇಲೆ ಮನವಿಪ್ಪುದು. ಲಿಂಗದ ಮೇಲೆ ಮನವಿದ್ದಕ್ಕೆಯೇ ಶರಣ. ಆ ಶರಣ ನಡೆದಕ್ಕೆಯೇ ಉರಿವಗ್ನಿಯ ಮೇಲೆ ತಂಗಾಳಿ ಬೀಸಿದಂತೆ, ತ್ರಿಪುಟಿಯ ಮೇಲೆ ಚಿದ್ಬೆಳಗು ಓಲಾಡುತ್ತಿದೆ, ಶರಣ ನುಡಿದಕ್ಕೆಯೇ ಪ್ರಣವದ ಬಳ್ಳಿ ಮನವ ಸುತ್ತುತ್ತಿದೆ, ಶರಣ ನೋಡುವಲ್ಲಿಯೇ ಪಂಚವರ್ಣದ ಸ್ವರೂಪ ಲಿಂಗಾರ್ಪಿತವಾಗುತ್ತದೆ. ಶರಣ ಕುಂಭಿಸಿದಲ್ಲಿಯೇ ಓಂಕಾರ ಒಡಗೂಡುವ ದಯ್ಯ, ಶರಣ ಸುಳಿವಲ್ಲಿಯೇ ಹಲವು ಪ್ರಕಾರದ ವಸ್ತುಗಳ ತನುಸೋಂಕೆ ಅಂಗವ ಲಿಂಗ ಮನವ ತುಂಬುತಿದ್ದ, ಇದು ಕಾರಣ ಕೋಟಿದಾರ್ಯನ ಕರುಣ ಪ್ರಸಾದವುಂ ಪಡೆದು, ತತ್ವಸ್ವರೂಪು, ಧ್ಯಾನಧಾರಣ ಅರ್ಪಿತಾವಧಾನವನರಿದ ಶರಣಂಗೆ ಗಮನಾಗಮನವೆಂಬುಭಯವುಂಟೇ ಘನಲಿಂಗಿಯ ಚನ್ನಮಲ್ಲಿಕಾರ್ಜುನಾ ॥೪॥

ಆಚಾರಲಿಂಗವ ಅಂಗೈಯೊಳಳವಡಿಸಿ, ಮಜ್ಜನಕ್ಕೆರೆದು ತ್ರಿಪುಂಡ್ರವುಂ ಧರಿಸಿ ಪುಷ್ಪಜಾತಿಗಳಿಂದರ್ಪಿಸಿ ಪೂಜೆಯ ಮಾಡುವಕರವು ಆ ಪೂಜೆಗೆ ಮೆಚ್ಚಿ, ಪಂಚ ಸ್ಪರ್ಶನಂಗಳಂ ಮರೆಯಲೊಡನೆ ಆ ಕರದಲ್ಲಿ ಜಂಗಮಲಿಂಗ ನೆಲೆಗೊಂಡಿತ್ತು. ಆ ಲಿಂಗವುಂ ಪ್ರಕಾಶವುಂ ನೋಡುವ ನೇತ್ರಗಳು ಆ ಪ್ರಕಾಶಕ್ಕೆ ಮೆಚ್ಚಿ ಪಂಚವರ್ಣಗಳಂ ಮರೆಯಲೊಡನೆ ಆ ನೇತ್ರಂಗಳಲ್ಲಿ ಶಿವಲಿಂಗ ನೆಲೆಗೊಂಡಿತ್ತು. ಆ ಲಿಂಗದ ಸದ್ವಾಸನೆಯುಂ ವಾಸಿಪ ಘ್ರಾಣವು ಆ ವಾಸನೆಗೆ ಮೆಚ್ಚಿ ಪಂಚಗಂಧಗಳಂ ಮರೆಯಲೊಡನೆ ಆ ಘ್ರಾಣದಲ್ಲಿ ಆಚಾರಲಿಂಗ ನೆಲೆಗೊಂಡಿತ್ತು ಆ ಲಿಂಗದುಂ ಮಂತ್ರ ಸ್ವರೂಪವನೆತ್ತಿ ಕೊಂಡಾಡುವ ಜಿಹ್ವೆಯು ಆ ಮಂತ್ರಕ್ಕೆ ಮೆಚ್ಚಿ ಪಂಚರಸಗಳಂ ಮರೆಯಲೊಡನೆ ಆ ಜಿಹ್ವೆಯಲ್ಲಿ ಗುರುಲಿಂಗ ನೆಲೆಗೊಂಡಿತ್ತು. ಆ ಲಿಂಗವುಂ ಮನವಂದು ಹಾಡುವ ನಾದವುಂ ಕೇಳಿದ ಶ್ರೋತ್ರವು ಆ ನಾದಕ್ಕೆ ಮೆಚ್ಚಿ ಪಂಚನಾದಂಗಳಂ ಮರೆಯಲೊಡನೆ ಆ ಶ್ರೋತ್ರದಲ್ಲಿ ಪ್ರಸಾದಲಿಂಗ ನೆಲೆಗೊಂಡಿತ್ತು, ಆ ಲಿಂಗವ ನೆನವ ಮನ, ಆ ನೆನಹಿಂಗೆ ಮೆಚ್ಚಿ ಪಂಚ ಪರಿಣಾಮಂಗಳ ಮರೆಯಲೊಡನೆ ಆ ಮನದಲ್ಲಿ ಮಹಾಲಿಂಗ ನೆಲೆಗೊಂಡಿತ್ತು. ಈ ಷಡಿಂದ್ರಿಯಂಗಳು ಆ ಲಿಂಗವನಪ್ಪಿ ಅಗಲಕಾರಣದ ಆ ಲಿಂಗ ಒಲಿದು ಷಡಿಂದ್ರಿಯಗಳಲ್ಲಿ ಷಡ್ವಿಧಲಿಂಗವಾಗಿ ನೆಲೆಗೊಂಡಿತ್ತು, ಇಂತಪ್ಪ ಇಷ್ಟಲಿಂಪದಲ್ಲಿ ಶರಣನಿಷ್ಠೆ ನಿಬ್ಬೆರಗಾಗಿ ಧ್ಯಾನಯೋಗವುಂ ಕೈಕೊಂಡು ಷಡುವರ್ಣವುಂ ಮರೆಯಲೊಡನೆ ಆ ಲಿಂಗ ಒಲಿದು ಅಂಗ ವೇಧಿಸಿ ಜ್ಞಾನಕ್ರಿಯೆಗಳಲ್ಲಿ ಷಡ್ವಿಧ ಪ್ರಾಣಲಿಂಗವಾಗಿ ನೆಲೆ

ಗೊಂಡಿತ್ತು. ಆ ಪ್ರಾಣಲಿಂಗಗಳಂ ಶರಣ ಮಂತ್ರ ಮಾಲೆಯ ಹೃದಯದೊಳಿಂ ಬಿಟ್ಟು, ಮನವರಳ್ದ ತಾವರೆಯಲ್ಲಿ ಜಾಗ್ರ ಸ್ವಪ್ನದಲ್ಲಿ ಪೂಜಿಪ ಧಾರಣ ಯೋಗದೊಳಿರ್ಪ ಕ್ರಿಯೆಯಂ ಮರೆಯಲೊಡನೆ ಆ ಲಿಂಗ ಒಲಿದು ಮನ ವೇಧಿಸಿ ಭಾವವಡಗಿ ತ್ರಿವಿಧ ಭಾವಲಿಂಗವಾಗಿ ನೆಲೆಗೊಂಡಿತ್ತು, ಆ ಭಾವ ಲಿಂಗಗಳ ಶರಣ ಒಡೆವೆರೆಯಲೊಡನೆ ಕರ್ಪೂರ ಹೋಗಿ ಉಗಿ ಉರಿ ಹಿಡಿ ದಂತಾದ ಸಮಾಧಿಯೋಗದೊಳಿರ್ದ ಜ್ಞಾನವ ಮರೆಯಲೊಡನೆ ಆ ಶರಣಂಗೆ ಆ ಲಿಂಗ ಒಲಿದು ಸರ್ವಾಂಗ ಲಿಂಗವಾಯಿತ್ತು. ಅತನೇ ಪರಬ್ರಹ್ಮನೋಡಾ ಘನ ಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ ॥೫॥

ನಿತ್ಯವಾಗಿಪ್ಪ ಪರಮಾತ್ಮನು ಅನಿತ್ಯವಾಗಿಪ್ಪ ದೇಹದೊಡನಾಡಿ, ಜೀವ ನಾಗಿ ಹೋಗುತಿದೆ ನೋಡಾ. ನಿತ್ಯ ಅನಿತ್ಯದ ಸಂಧಾನವನಿಕ್ಕಿದ ಸಮರ್ಥ ನಾರಯ್ಯಾ? ಇದಕ್ಕೆ ಅನುಕೂಲವಾಗಿ ಮಾಡಿದವರು ಮತ್ತೊಬ್ಬರುಂಟೆಂದು ನಿನ್ನಲ್ಲಿ ತಿಳಿಯಬೇಡ, ಅದು ತನ್ನಿಂದ ತಾನೇ ಮಾಡಿಕೊಂಡಿತು. ಅದು ಹೇಗೆಂದೊಡೆ ಆತ್ಮನ ಭೋಗವೆಂಬ ಸೂಜಿಯಂ ಪಿಡಿದು ಆ ಸೂಜಿಗೆ ಮೂರೊಂದು ಕರಣ, ಎಂಡು ಮೂರು ಇಂದ್ರಿಯಗಳೆಂಬ ನವ ಸೂತ್ರವ ಪೋಣಿಸಿ, ತನು ಮನದ ಸಂಚರಿವೆಯಂ ಮಾಡಿ, ಕಟದಾರವಂ ಕಟ್ಟಿ, ಸಂದ ರಿಯ ಬಾರದಂತೆ ಅದು ತನ್ನಿಂದ ತಾನೇ ಹೊಲಿಗೆಗೊಂಡಿತು, ಇದನು ಬಿಚ್ಚಿ ಬೇರೆ ಮಾಡುವ ಪರಿ ಯಾವುದಯ್ಯಾ? ಭೋಗವೆಂಬ ಸೂಜಿಯಂ ಮುರಿದು ನಾಲ್ಕು ಕರಣ, ಐದಿಂದ್ರಿಯವೆಂಬ ಒಂಭತ್ತು ದಾರವಂ ತುಂಡು ತುಂಡಿಗೆ ಹರಿಯಲೊಡನೆ, ತನು ಪ್ರಕೃತಿಯ ಕೂಡಿತ್ತು. ಪ್ರಾಣ ಪರಬ್ರಹ್ಮವ ಕೂಡಿತ್ತು, ಕಾಣಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ ॥ ೬ ॥

ಇದೇ ಸಂಗತಿಯನ್ನು ಕುರಿತು "ಪ್ರಾಣದ ಕಳೆ ಪ್ರಕೃತಿಯಲ್ಲಡಗಿ, ಪ್ರಕೃತಿಯ ಕಳೆ ಪ್ರಾಣದಲ್ಲಡಗಿ, ಪ್ರಾಣ ಪ್ರಕೃತಿಗಳ ಲಿಂಗವೆಂದರಿದು, ಅಂಗೈಸಿ ಅನುಭವಿಸ ಬಲ್ಲವರ ಲೆಂಕನಾನಾಗಿಪ್ಪೆನೈ ರಾಮನಾಥಾ॥ ಎಂದು ನುಡಿದ ಶಿವಶರಣರ ಭಾವವೂ ಒಂದೇ ಲಿಂಗಾಂಗ ಸಮರಸಕ್ಕೆ ಭಕ್ತಿಯೂ ನಿಷ್ಠೆಯೂ ಶೀಲವೂ ಸರ್ವಾಚಾರ ಸಂಪತ್ತಿನ ಆಚರಣೆಯೂ ಶಿವಯೋಗವೂ ಶಿವಜ್ಞಾನವೂ ಅತ್ಯವಶ್ಯವು. ಐಕ್ಯನಿಗೆ ತಳಹದಿಯು ಶಿವಜ್ಞಾನವೂ, ಶಿವ ಜ್ಞಾನಕ್ಕೆ ತಳಹದಿಯು ಶಿವಯೋಗವೂ, ಶಿವಯೋಗಕ್ಕೆ ತಳಹದಿಯು ಸರ್ವಾ ಚಾರ ಸಂಪತ್ತಿನ ಅರ್ಥಾತ್ ಪ್ರಸಾದರೂಪಭೋಗದಿಂದ ನಿರ್ವಿಷಯದ ತಳ

ಹದಿಯೂ, ಈ ಪ್ರಸಾದಿ ಸ್ಥಲಕ್ಕೆ ನೇಮ ವ್ರತ ಲಿಂಗನಿಷ್ಠೆಯು ತಳಹದಿಯೂ ಈ ನೇಮವ್ರತನಿಷ್ಠೆಗಳಿಗೆ ಭಕ್ತಿಯೂ ಆಧಾರದಾಗಿದೆ. ಇದರಿಂದ ಮೊದಲು ಭಕ್ತಸ್ಥಲದ ಅವಶ್ಯವೆಂಬದು ಷಟ್‌ಸ್ಥಲ ಬ್ರಹ್ಮಿಗೆ ತಿಳಿಯದಿರದು.

ತಾಯಿಯ ಗರ್ಭದಲ್ಲಿಯ ಶಿಶು ತಾಯಿಯ ಕುರುಹನರಿಯದು. ಆ ತಾಯಿ ಶಿಶುವಿನ ಕುರುಹನೆಂತೂ ಅರಿಯಳು ಮಾಯಾ ಮೋಹದಲ್ಲಿರುವ ಭಕ್ತ, ದೇವರನರಿಯನು, ಆ ದೇವರು ಅಂತಪ್ಪ ಭಕ್ತನ ಎಂದೂ ಅರಿಯನು ಕಾಣಾ ರಾಮನಾಥಾ ॥

ಗುರುದ್ರವ್ಯವ ಅಪಹರಿಸಲಾಗದು, ದೇಹಿಕದ್ರವ್ಯ, ಭೌತಿಕದ್ರವ್ಯ, ಆತ್ಮದ್ರವ್ಯ ಇಂದ್ರಿಯದ್ರವ್ಯ ಜ್ಞಾನದ್ರವ್ಯವೆಂಬ ಪಂಚದ್ರವ್ಯವನು ಉಭಯ ವಳಿದು ಷೋಡಶೋಪಚಾರದಲ್ಲಿ ಅರ್ಪಿಸಬಲ್ಲಡೆ, ನಮ್ಮ ಕೂಡಲ ಚನ್ನ ಸಂಗನಲ್ಲಿ ಆತನೇ ಗುರುಭಕ್ತನು. ॥

ಗುರುವಿನಲ್ಲಿ ವಿನಯ ಭಯ, ಸಮಪಂಕ್ತಿಯ ಅಭಾವ, ಸರಿಕರೊಡ ನೆಮಾಡಿದಂತೆ ಮಾಡುವ ಸಂಭಾಷಣೆಯ ಅಭಾವ, ಕೈಯೊಡ್ಡಿ ಪರರ ಬೇಡ ದಿರುವಿಕೆಯೇ ಗುರುಭಕ್ತಿ॥ ಲಿಂಗದಲ್ಲಿ ಪ್ರೀತಿ, ಪ್ರೇಮ, ಸ್ನೇಹ, ಮೋಹ ಗಳನ್ನಿಡುವದೇ ಲಿಂಗಭಕ್ತಿ.

ಜಂಗಮರಲ್ಲಿ ಸ್ಥಿರಬುದ್ಧಿ, ಸತ್ಯವಾಕ್ಯ ಪಂತಿಯಲ್ಲಿ ಅಭೇದ, ವಿನಯ ದಯಗಳನ್ನಿಡುವದೇ ಜಂಗಮಭಕ್ತಿ.

ಮಾರ್ಗಕ್ರಿಯೆಯಲ್ಲಿ ನಯ ನುಡಿ, ನಮಸ್ಕಾರ, ಭಯಭಕ್ತಿ, ಕರುಣ ಕಿಂಕುರ್ವಾಣಗಳೊಡನೆ ಒಕ್ಕುಮಿಕ್ಕ ಪ್ರಸಾದ ಭೋಗಿಸುವಲ್ಲಿ ಪದಾರ್ಥ ಭಾವನೆ ಮಾಡದೆ ಭೋಗಿಸುವದೇ ಪ್ರಸಾದ ಭಕ್ತಿ.

ಆದಿ ಆಧಾರವಾಗಿಹುದೇ ಘನ. ಆಘನ ವೇಧಿಸುವದೇ ಮನ, ಆ ಮನವು ಘನದಲ್ಲಿ ನಿಂದಿಹುದೇ ಭಕ್ತಿ ಭಿನ್ನಭಾವದ ಇಚ್ಛೆ ತಲೆದೋರ ದಿಹುದೇ ಆಚಾರ, ತಟ್ಟು ಮುಟ್ಟು ತಾಗು ನಿರೋಧವಿಲ್ಲದಿಹುದೇ ಪೂಜೆ, ಆಶೆರೋಷವಿಲ್ಲದಿಹುದೇ ಪ್ರಸಾದ, ಕಾರಣ ಮಥನವಿಲ್ಲದಿಹುದೇ ಅನುಭಾವ, ಇಂತೀ ಸರ್ವಾಂಗದಲ್ಲಿ ಸರ್ವಾಚಾರ ಸನ್ನಿಹಿತವಾದ ನಿಜಲಿಂಗೈಕ್ಯಂಗೆ ನಮೋ ನಮೋ ಎಂಬೆನಯ್ಯ ಕೂಡಲ ಚನ್ನ ಸಂಗಮದೇವಾ ॥

ಆಶೆಯೆಂಬ ಕೂಸನೆತ್ತಿ ರೋಷವೆಂಬ ತಾಯಿ ಬಂದು ಮುಂದೆ ನಿಂದಿ ಪ್ಪಳು ನೋಡಾ ಇಂತಿವೆರಡಿಲ್ಲದೆ ಕೂಸನೆತ್ತ ಬಲ್ಲೊಡೆ ಆತ ಅಚ್ಚ ಶೀಲ ವಂತಯ್ಯ ಗುಹೇಶ್ವರಾ ॥

ಪದ:—ಕಾಮಕ್ರೋಧಾಲೋಭಾಮೋಹಾ । ತಾಮಸ ಮದಮೀಮತ್ಸ ರಂಗಳ। ಶೀಮೆಗೆ ಶೀಲದೊಳಗೆ ಶೀಲದೊಳಗೆ ಶಿವ ತಾಮನೆಗಟ್ಟಿಹನ ನವರತಾ ॥ಪ॥

ಅಂಗಪ್ರಾಣಾಂತರ್ಬಹಿರಂಗವ । ನುಂಗಿ ಮುಗುತ್ತಿಹ ಮಾಯಾ ಸಂಗವ। ಹಿಂಗದೆ ನಾನಾಶೀಲವ ಹಿಡಿವರೆ ಫಲವೇನವರಿಂದ ॥೧॥

ತನುಗುಣಗಳನಂಗೀಕರಿಸದೆ ಕರಣಾದಿ ವಿಕಾರದ । ನೆನಹನು ಲಿಂಗ ದೊಳಗೆ ಮುಟ್ಟಿಸಬಲ್ಲೊಡೆ ತಾನದು ಶೀಲಾ ॥೨॥

ಶೀಮೆಯ ಸಂಕಲ್ಪದ ಶೀಲದೆ ಮನ ತಾಮಸದಲಿ ಮನೆಗಟ್ಟಿಹುದು। ತಾಮಸ ಶೀಮೆಯನರಿಯದೆ ನಿಜ ಸೀಮೆಯೊಳಿರು ತಿರ್ಗದೆ ಶೀಲಾ ॥೩॥

ಶಿವಶರಣರ ನಂಬದೆ ಶೀಲವು ಅವಗುಣಗಳ ಹೊದ್ದದೊಡದು ಶೀಲಾ ಶಿವದಾಸೋಹದೊಳಿರಡರಿಯದೆ ಇರಬಲ್ಲೊಡೆ ತಾನದುಶೀಲಾ ॥೪॥

ಅಂಗದೊಳಗೆ ಗುರು ಲಿಂಗದೊಳಗೆಮನ ಜಂಗಮದಲಿ ಧನವರ್ಪಿತವಾಗಿ ಯೇ । ಲಿಂಗಾಂಗಿತವಾಗಿರ ಬಲ್ಲೊಡೆ ತಾನದುಶೀಲಾ ॥೫॥

ಪದ್ಯ:— ತತ್ವಾತೀತವೆನಿಪ್ಪ ತತ್ಪರಶಿವಜ್ಞಾನಂ ನಿಜಕ್ಕಿಲ್ಲಮು। ತ್ತತ್ವಂ ಪಿಂಗದು ವಿತ್ತ ಪುತ್ರ ಸತಿಯೆಂಬೀ ಮೂರರೊಳ್ ಸದ್ವಿರಾ । ಗತ್ವಂತೋ ರದು ಲಿಂಗ ಜಂಗಮದೊಳು ವಿಶ್ವಾಸವಿಲ್ಲದ ಭಾ। ವತ್ವಂಪೊರ್ದಿದ ಶೀಲಮಂ ಸುಡುಬಿಡಾ ಶ್ರೀಸಿದ್ಧಲಿಂಗೇಶ್ವರಾ. ॥೧॥

ವಚನ:—ಸರ್ವಾಚಾರ ಸಂಪತ್ತಿನಾಚಾರವಂ ಅರಿದಲ್ಲದೆ ನಿಜಬಯಲ ಪದವ ಕಾಣಬಾರದು ನೋಡಾ, ಆ ಸರ್ವಾಚಾರ ಸಂಪತ್ತು ಎಂತೆಂದಡೆ-ಷಡ್ಭೂತಂಗಳಲ್ಲಿ ಷಡ್ವಿಧ ಮಂತ್ರಗಳನೆ ನೆಲೆಗೊಳಿಸಿ, ಆ ಷಡ್ವಿಧ ಚಕ್ರಂಗ ಳೆಂದು ತಿಳಿದು, ಆ ಷಡ್ವಿಧ ದೇವತೆಗಳನ್ನುಷಡ್ವಿಧ ಅಂಗವೆಂದು ಆಧಾರ ಗೊಳಿಸಿ ಆ ಷಡ್ವಿಧ ಅಂಗಕ್ಕೆ ಷಡ್ವಿಧ ಕರಣಂಗಳನೆ ಷಡ್ವಿಧ ಹಸ್ತಂಗಳೆಂದು ಅರಿದು ಅಳವಡಿಸಿಕೊಂಡು, ಆ ಷಡ್ವಿಧ ಹಸ್ತಂಗಳಿಗೆ ಷಡ್ವಿಧ ಲಿಂಗಗಳೆಂದು ಅಳವಡಿಸಿಕೊಂಡು ಆ ಷಡ್ವಿಧ ಲಿಂಗಕ್ಕೆ ಷಡ್ವಿಧ ಇಂದ್ರಿಯಗಳನೆ ಷಡ್ವಿಧ ಮುಖಗಳೆಂದು ಸಂಬಂಧಿಸಿ ಷಡ್ವಿಧ ಮುಖಂಗಳಿಗೆ ಒಳಹೊರಗೆಲ್ಲಾ ಷಡ್ವಿಧ ಲಿಂಗಬೆಳಗು ತುಂಬಿ ತೊಳಗಿ ಬೆಳಗುವ ಷಡ್ವಿಧ ವಿಷಯಂಗಳನೆ ಷಡ್ವಿಧ ಪದಾರ್ಥಂಗಳೆಂದರಿದು, ಷಡ್ವಿಧ ಪದಾರ್ಥಂಗಳನ್ನು ಷಡ್ವಿಧ ಭಕ್ತಿಯಿಂದ ಷಡ್ವಿಧ ಮುಖಂಗಳಿಗೆ ಸಮರ್ಪಿಸಲು ಒಳಹೊರಗೆಲ್ಲಾ ಷಡ್ವಿಧ ಲಿಂಗದ ಬೆಳಗು ತುಂಬಿ ತೊಳಗು ತಿಪ್ಪದು ನೋಡಾ ಅಖಂಡೇಶ್ವರಾ ॥

ಎಡೆದೆರಹವಿಲ್ಲದ ಷಡ್ವಿಧ ಲಿಂಗದ ಬೆಳಗಿನೊಳಗೆ ತನ್ನ ಷಡ್ವಿಧ ಲಿಂಗದ ಕಳೆಗಳೆಲ್ಲವ ಅಡಗಿಸಿ ತಾನೆಂಬಕುರುಹು ತೋರಿದಿರ್ಪುದೆ ಸರ್ವಾಚಾರ ಸಂಪತ್ತು ನೋಡಾ ಅಖಂಡೇಶ್ವರಾ ।

ಕಾಮಬೇಕು ಲಿಂಗದಲಿ, ಕ್ರೋಧಬೇಕು ಕರಣಂಗಳಲ್ಲಿ ಲೋಭಬೇಕು ಪಾದೋದಕ ಪ್ರಸಾದದಲ್ಲಿ, ಮೋಹಬೇಕು ಗುರುಲಿಂಗ ಜಂಗಮದಲ್ಲಿ, ಮದ ಬೇಕು ಶಿವಚಾರ ಘನವೆಂಬಲ್ಲಿ, ಮತ್ಸರಬೇಕು ಹೊನ್ನಹೆಣ್ಣು ಮಣ್ಣಿನಲ್ಲಿ, ಇಂತಿ ಷಡ್ಗುಣವಿರಬೇಕು.

ಕಾಮಬೇಡ ಪರಸ್ತ್ರೀಯಲ್ಲಿ, ಕ್ರೋಧಬೇಡ ಗುರುವಿನಲ್ಲಿ ಲೋಭ ಬೇಡ ತನುಮನಧನದಲ್ಲಿ, ಮೋಹಬೇಡ ಸಂಸಾರದಲ್ಲಿ, ಮದಬೇಡ ಶಿವ ಭಕ್ತರಲ್ಲಿ. ಮತ್ಸರಬೇಡ ಸಕಲಪ್ರಾಣಿಗಳಲ್ಲಿ ಎಂದಾತ ನಮ್ಮ ಕೂಡಲ ಚನ್ನ ಸಂಗಮದೇವಾ ॥

ಪದಾರ್ಥ ಪದಾರ್ಥವೆಂದೆಂಬಿರಿ, ಪದವಾವುದು ? ಅರ್ಥವಾವುದು ? ಪದವೆ ಲಿಂಗ, ಅರ್ಥವೆಭಕ್ತ, ಇದನರಿದು ಪದಾರ್ಥವೇದು ತಂದು. ಅರ್ಪಿತವ ಮಾಡಬಲ್ಲೊಡೆ ಕೂಡಿಪ್ಪನಯ್ಯ ನಮ್ಮ ಕೂಡಲಚನ್ನಸಂಗಮದೇವಾ ॥

ಸಂಯೋಗೇಚ ವಿಯೋಗೇಚ ಅಣುಮಾತ್ರ ಸುಖಾರ್ಪಿತಂ। ಯಃ ಕುರ್ಯಾದಿಷ್ಟ ಲಿಂಗೇಷು ಸಾವಧಾನೀ ನಿರಂತರಂ ॥

ಸಾಂಖ್ಯಬ್ರಹ್ಮವೇ: ಶಂಕರ, ಸದಾಶಿವ, ಮಹಾದೇವ, ಶಿವಬಸವ ಭಕ್ತರಲ್ಲಿ ಬಣ್ಣವನರಸುವಾತ ಆಚಾರದ್ರೋಹಿ, ಪಾದೋದಕದಲ್ಲಿ ಸೂತಕ ಹಿಡಿವಾತ ಲಿಂಗದ್ರೋಹಿ. ಪ್ರಸಾದದಲ್ಲಿ ರುಚಿಯನರಸುವಾತ ಜಂಗಮ ದ್ರೋಹಿ, ಜಂಗಮದಲ್ಲಿ ಜಾತಿಯನರಸುವಾತ ಪ್ರಸಾದದ್ರೋಹಿ. ಹೀಗಲ್ಲದೆ ಈ ಚತುರ್ವಿಧದೊಳಗೆ ಸನ್ನಿಹಿತನಾದಾತನೇ ಭಕ್ತ, ಈ ಚತುರ್ವಿಧದೊಳಗೆ ಏಕಾಗ್ರನಾತ ಮಹೇಶ್ವರ, ಲಯವಾದಾತ ಪ್ರಸಾದಿ, ತದ್ಗತವಾದಾತ ಪ್ರಾಣ ಲಿಂಗಿ, ಲವಲವಿಕೆಯುಳ್ಳಾತ ಶರಣ, ಈ ಚತುರ್ವಿಧವ ತನ್ನೊಳಗೆ ಅಡ ಗಿಸಿಕೊಂಡು ತಾನೆ ತಾನೆನಿಸಿ ಸಾಧ್ಯವ ಮಾಡಿಕೊಂಡಾತ ಲಿಂಗದೇಹಿ(ಐಕ್ಯ) ಎಂದಾತ ಕೂಡಲಚನ್ನಸಂಗಮದೇವಾ ॥

ತನುತ್ರಯಗಳಲ್ಲಿ ಗುರುತ್ರಯಗಳನ್ನು ಸಂಬಂಧಿಸಿ, ಮನತ್ರಯಗಳಲ್ಲಿ ಲಿಂಗತ್ರಯಗಳನ್ನು ಸಂಬಂಧಿಸಿ, ಭಾವತ್ರಯಂಗಳಲ್ಲಿ ಜಂಗಮತ್ರಯಗಳನ್ನು ಸಂಬಂಧಿಸಿ, ಆತ್ಮತ್ರಯಂಗಳಲ್ಲಿ ಪಾದೋದಕತ್ರಯಂಗಳನ್ನು ಸಂಬಂಧಿಸಿ. ಅವಸ್ಥಾತ್ರಯಂಗಳಲ್ಲಿ ಪ್ರಸಾದತ್ರಯಗಳನ್ನು ಸಂಬಂಧಿಸಿ. ಕರಣತ್ರಯಂಗ

ಭಸಿತತ್ರಯಂಗಳ ಸಂಬಂಧಿಸಿ, ಜೀವತ್ರಯಂಗಳಲ್ಲಿ ರುದ್ರಾಕ್ಷಿತ್ರಯಂಗಳಂ ಸಂಬಂಧಿಸಿ, ಅಷ್ಟಾವರಣ ಕ್ರಿಯೆಯಂ ಆಚರಿಸಿ ಅಂಗಗುಣಗಳ ಕಳೆದು ಲಿಂಗಾಂಗಿಗಳಾದರು ನೋಡಾ ನಮ್ಮ ಶರಣರು.

ಇಂತು ಭಕ್ತಿ ಜ್ಞಾನ ವೈರಾಗ್ಯ ತಪ್ಪದೆ, ಷಟ್‌ಸ್ಥಲದ ಇರವು ತಪ್ಪದೆ, ಜ್ಞಾನಕ್ರಿಯೆಗಳಲ್ಲಿ ಪ್ರಿಯತಪ್ಪದೆ, ಶರಣಸತಿ, ಲಿಂಗಪತಿಭಾವ ತಪ್ಪದೆ, ಇಷ್ಟ ಪ್ರಾಣಭಾವಲಿಂಗಗಳ ಪೂಜೆ ತಪ್ಪದೆ ಷಡ್ವಿಧಲಿಂಗಗಳ ಅರ್ಪಿತಾವಧಾನ ತಪ್ಪದೆ ತೀರ್ಥಪ್ರಸಾದಗಳ ಒಯ್ಯಾರ ತಪ್ಪದೆ, ಮಂತ್ರಗಳಿಂದೊಡಗೂಡಿದ ಸಂಧಾನ ತಪ್ಪದೆ ಹಿಡಿದವ್ರತಂಗಳಲ್ಲಿ ನೈಷ್ಠೆ ತಪ್ಪದೆ, ನಡೆದಂತೆ ನುಡಿ ನುಡಿದಂತೆ ನಡೆವ ಭಾವ ತಪ್ಪದೆ, ದ್ವೈತಾದ್ವೈತಗಳನೂಂಕಿ ವೈರಾಗ್ಯ ಒಪ್ಪುಗೊಳ್ಳದೆ ನಿಜವಿರತಿಯ ಹೊಲಬು ತಪ್ಪದೆ ಪಂಚೈವರೊಂದಾಗಿ ಸದ್ಯೋನ್ಮುಕ್ತಿಗೆ ಮನವಿಟ್ಟು ಅರ್ಥಿಯಿಂದಾಚರಿಸುವರಯ್ಯ ನಿಮ್ಮ ಶರಣರು ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ ॥

ಕಾಮಧೇನುವಿನಲ್ಲಿ ಕಲ್ಪಿಸಿದ ಸವಿಯಿಪ್ಪುದಲ್ಲದೆ, ಮರ್ತ್ಯದ ಪಶುವಿನಲ್ಲಿ ಉಂಟೇ ಅಯ್ಯ; ಮಹಾಶೇಷನಲ್ಲಿ ಮಾಣಿಕ್ಯ ಪ್ರಭಾವಿಸುತ್ತಿಹುದಲ್ಲದೆ ಕೆರೆಯ ಉಳ್ಳೆಯಲ್ಲಿ ಉಂಟೇ ಅಯ್ಯ! ಕರಿಯ ಕುಂಭಸ್ಥಳದಲ್ಲಿ ಮೌಕ್ತಿಕ ಬೆಳಗುತ್ತಿಪ್ಪುದಲ್ಲದೆ ಹಂದಿಯಲ್ಲಿ ಉಂಟೇ ಅಯ್ಯ; ಶರಣರ ಮನೋಮಧ್ಯದಲ್ಲಿ ಆ ಶಿವನು ಮೂರ್ತಗೊಂಡು, ಆ ಶರಣರ, ಜಿಹ್ವೆಯ ಕೊನೆಯ ಮೇಲೆ ವಚನವೆಂಬ ಪರಮಾಮೃತವ ಕರೆದು, ಕೆಲಬಲದ ಗಣಂಗಳಿಗೆ ಸವಿದೋರಿ, ಆ ಶಿವಶರಣರಲ್ಲಿ ಪರಿಪೂರ್ಣನಾಗಿಪ್ಪನಲ್ಲದೆ ದ್ವೈತಾದ್ವೈತಿಗಳಲ್ಲಿ ಉಂಟೇ ಅಯ್ಯ? ಘನಲಿಂಗಿ ಮೋಹದ ಚನ್ನಮಲ್ಲಿಕಾರ್ಜುನಾ॥

ಈ ಪ್ರಕಾರ ಇಷ್ಟಲಿಂಗವಿಡಿದು ಕ್ರಿಯಾಚಾರ ಜ್ಞಾನಾಚಾರ ಭಕ್ತ್ಯಾಚಾರ ಮುಂದುಗೊಂಡು ಸದಾಚಾರ ಸಂಪತ್ತಿನಾಚರಣೆಯಿಂದ ವೀರಶೈವತ್ವದಲ್ಲಿ ನಿರತರಾಗಿ ನಿಜಸುಖ ಪಡೆಯುವ ಸುಲಭಮಾರ್ಗವಿದು. ಇದರ ನೆಲೆಕಲೆ ಸ್ಥಳಕುಳ ಸಕೀಲಗಳನರಿತು ನಡೆದಲ್ಲಿ ಇಹಪರ ಸುಖವು ಸಾಧ್ಯವಾಗದೆ ಇರದು.

ವಚನ:— ಭವಬಂಧನವ ಬಿಡಿಸಿ, ಲಿಂಗಾನುಸಂಧಾನವ ಹಿಡಿಸಿ, ಕಂದನಕಾಯ್ವ ತಂದೆ ನೀನಿರಲು ಅಂದಿಂದೆಂಬ ಸಂದೇಹವೆನಗೇಕೆ ಹೇಳಾ ಎನ್ನ ಮನದೊಡೆಯ ಸಿದ್ಧೇಶ್ವರಾ ॥೧॥

ಹಸಿಯುಗೋಡೆಯ ಮೇಲೆ ಹಳ್ಳವ ನಿಟ್ಟಂತೆ, ತೃಷೆಯಿಂದ ತಳಮಳಗೊಂಡಂಗೆ ತೆಂಗಿನ ಹಾಲು ಮನದಣಿ ಕುಡಿದಂತೆ, ಹಸಿವೆಯಿಂದ ಕಸವಿಸಿಗೊಂಡಂಗೆ ಬಯಸಿದ ಬಿಸಿಯುಡಗಿಯುಂಡಂತೆ ಸಂಸಾರ ತಾಪದಿಂ ಬೆಂಡಾದಂಗೆ ಅಖಂಡಿತ ಮೂರ್ತಿವೈಗೊಂಡಂಗೆ ಪಿಂಡವೆಲ್ಲಿಯುದಯ್ಯ ಎನ್ನ ಸಿದ್ಧೇಶ್ವರಾ ॥೨॥

ಸೂಸಲವಕ್ಕಿಯ ಲೇಸಾಗಿ ಬಯಸುವಗೆ, ಚಹಾದ ಚಟಕ್ಕೆ ಚಿಟಿಮಿಟಿಗೊಳ್ಳುವಗೆ, ಕಾಮದ ಕಸವಿಸಿಯೊಳು ನಿಮಿಷಾರ್ಧ ಸಹ ಶಾಂತನಾಗದಂಗೆ ಶಂಭುಲಿಂಗವ ನಗಲದ ಅನುಮಿಷ ದೃಷ್ಟಿ ಇಷ್ಟದೊಳಗೆಲ್ಲಿಯುದೆಂದ ನಮ್ಮ ಸಿದ್ಧೇಶ್ವರಾ ॥೩॥

ಶೀಲದ ಬಲವುಳ್ಳಂಗೆ ನಿಜನಿಲವಿನ ಚಿಂತೆಯೇಕೆ? ಸರ್ವಾಚಾರ ಸಂಪತ್ತಿನಾಚಾರವುಳ್ಳಂಗೆ ನಿರ್ಭಾವದ ಅನುಸಂಧಾನವೇಕೆ? ಅಜ್ಞಾನವಳಿದಂಗೆ ವಿಜ್ಞಾನದ ವಿಚಾರವೇಕೆ? ಜ್ಯೋತಿತಾನಿರಲು ಕತ್ತಲೆಯ ಕಲ್ಪನೆ ಏಕೆ? ಹೇಳಾ ಎನ್ನ ಸಿದ್ಧೇಶ್ವರಾ ॥೪॥

ಸೃಷ್ಟಿಯ ಮರೆತಂಗೆ ಅಷ್ಟೈಶ್ವರ್ಯದ ಅರುಹುಯೆಲ್ಲಿ? ಇಷ್ಟದೊಳು ದೃಷ್ಟಿಯು ಬಲಿತಂಗೆ ಭವದ ಬಂಧನವೆಲ್ಲಿ? ಲಿಂಗನಿಷ್ಠೆ ನೆಲೆಗೊಂಡಂಗೆ ಅನಾಚಾರದ ಆಗಮನವೆಲ್ಲಿ? ಸದಾ ಸಂಧಾನಿಗೆ ಸಮಾಧಿಯ ಅನುವಿನ ಆತುರವೆಲ್ಲಿ? ಉಸಿರುಗಳೆಲ್ಲ ಶಶಿಧರನ ನಾಮವಾದಂಗೆ ಜಪತಪಗಳ ಜಂಝಾಟವೆಲ್ಲಿ? ಹೇಳಾ ಸಿದ್ಧೇಶ್ವರಾ ॥೫॥

---

# ಭಕ್ತಿಯೋಗ

## ಲೇಖಾಂಕ ೪.

=[ಲೇಖಕರು:- ಶ್ರೀ ಶಿವಾನಂದಸ್ವಾಮಿ ಗವಿಮಠ, ತಿಗ್ಗೀಹಳ್ಳಿ, ತಾ. ಇಂಡಿ.]=



ಮೊದಲನೇ ಲೇಖದಲ್ಲಿ ಭಕ್ತಿಯೋಗದ ಸಾಮಾನ್ಯ ಸ್ವರೂಪವನ್ನು ವಿವರಿಸಿದೆ. ಎರಡನೇ ಲೇಖದಲ್ಲಿ ಪ್ರೇಮ, ದೇವ, ಮನ, ಭಕ್ತಿ ಇವೆಲ್ಲ ಒಂದೇ ಅರ್ಥದ ಶಬ್ದಗಳು. ಭಕ್ತಿಯೋಗವು ಮನವನ್ನು ಶುದ್ಧಗೊಳಿಸಿ ಒಂದು ಗೂಡಿಸುವದೆಂದು ವಿವರಿಸಿದೆ. ಮೂರನೇ ಲೇಖದಲ್ಲಿ ಭಕ್ತನಿಗೆ ಸತ್ಸಂಗದ ಅವಶ್ಯಕತೆ ನವದ್ವಾರಗಳಿಂದ ಒಳಗಿರುವದೆಲ್ಲ ಆಧ್ಯಾತ್ಮ ಉನ್ನತಿ ಮಾಡುತ್ತಿದ್ದರೆ ಸತ್ಸಂಗ ಅವನತಿ ಇದ್ದರೆ ದುಸಂಗವೆಂದು ವಿವರಿಸಲಾಗಿದೆ. ಸತ್ಸಂಗದ ವಿಷಯವು ಬಹು ವಿಶಾಲವಾದದ್ದು ಸತ್+ಸಂಗ = ಸತ್ಸಂಗ ಸತ್ ಅಂದರೆ ಯಾವಾಗಲೂ ಇರತಕ್ಕಂಥಾದ್ದು ಸತ್ಯವಾದುದು ಅದೇ ಪರಶಿವ ಪರಬ್ರಹ್ಮ ಅವರ ಸಂಗವೇ ಸತ್ಸಂಗವೆನಿಸುವದು. ಇದನ್ನು ಪಡೆಯಲಿಕ್ಕೆ ನಮ್ಮೊಳಗಿನ ಮನಸ್ಸಿಗೆ ಈ ಒಂಬತ್ತು ಬಾಗಿಲಿನಿಂದ ಎಂಥವುಗಳನ್ನು ಒಳಗೆ ಕಳಿಸಬೇಕೆಂಬುದರ ವಿಚಾರವೇ ಬಹು ಮಹತ್ವವಾದುದು. ಹೊಸದಾಗಿ ಸಾಧನಮಾಡುವ ಭಕ್ತನು ಮಾತ್ರ ಬಹು ಜಾಗರೂಕವಾಗಿ ಇರಲಿಕ್ಕೆಬೇಕು. ಎರಡು ಕಣ್ಣು ಎರಡು ಕಿವಿ ಮೂಗು ನಾಲಿಗೆ (ಬಾಯಿ) ಮಲದ್ವಾರ ಮೂತ್ರದ್ವಾರ ಚರ್ಮ ಇವೇ ಈ ಶರೀರದ ಮುಖ್ಯ ಬಾಗಿಲುಗಳು. ಇವುಗಳಿಂದ ಒಳಗೆಹೋದ ಒಳ್ಳೆಯವುಗಳು ಮನವನ್ನು ಶುದ್ಧಗೊಳಿಸಿ ಪವಿತ್ರಗೊಳಿಸಿ ಶಾಂತಗೊಳಿಸಿದರೆ ಅದೇ ಸತ್ಸಂಗವಾಗುವದು. ಸತ್ಸಂಗವೇ ನಿರ್ಮೋಹತ್ವ, ನಿರ್ಮೋಹತ್ವವೇ ನಿಸ್ಸಂಗತ್ವ, ನಿಸ್ಸಂಗತ್ವವೇ ಜೀವನಮುಕ್ತತ್ವ, ವೆಂದು ಇವೆಲ್ಲ ಶಬ್ದಗಳು ಅಷ್ಟೇ ಅದೇ ಅರ್ಥವನ್ನು ಕೊಡುವವು. ನಿರ್ಮೋಹವಾಗುವದು ಭಕ್ತನಿಗೆ ಅವಶ್ಯಬೇಕೆನಿಸುವದು. ಈ ನಿರ್ಮೋಹವಾಗಿ ನಿಸ್ಸಂಗವಾಗಿ ಜೀವನ್ಮುಕ್ತಿ ಅಂದರೆ ಗವಂತನ ಪ್ರಾಪ್ತಿಯಾಗಬೇಕಾದರೆ ದೀರ್ಘಪ್ರಯತ್ನ, ತಾಳ್ಮೆ, ಶಾರೀರಿಕ ಪರಿಶುದ್ಧತೆ, ಮಾನಸಿಕ ಪರಿಶುದ್ಧತೆ, ಉತ್ಕಟ ಆಕಾಂಕ್ಷೆ, ಮತ್ತು ಷಟ್‌ಸಂಪತ್ತಿ ಇವು ಅಳವಡಬೇಕು.

ಷಟ್ ಸಂಪತ್ತಿ ಅಂದರೆ ಶಮ, ದಮ, ಉಪರತಿ. ತಿತಿಕ್ಷ. ಶ್ರದ್ಧೆ ಸಮಾಧಾನಗಳು. ಶಮ ಅಂದರೆ ಅಂತಃಕರಣ ಸ್ಥಿರತೆ, ಅದರ ಶುದ್ಧಿ ಪವಿತ್ರತೆ ಮಾಡುವದು. ದಮ ಅಂದರೆ ಇಂದ್ರಿಯ ನಿಗ್ರಹ. ಆಧ್ಯಾತ್ಮಕ್ಕೆ ಅಡ್ಡಿಯಾಗುವ ಯಾವತ್ತು ವಿಷಯ ಸುಖವನ್ನು ನಿಗ್ರಹಿಸವದು. ಇದೆಲ್ಲ ಮನೋನಿಗ್ರಹದಲ್ಲಿ ಬರುವದು. ಇಂದ್ರಿಯಗಳೆಂದರೆ ಬಾಗಿಲುಗಳು. ಈ ಬಾಗಿಲುಗಳಾದ ಇಂದ್ರಿಯಗಳಿಗೆ ಸುಖವೂ ಇಲ್ಲ. ದುಃಖವೂ ಇಲ್ಲ. ಅದೆಲ್ಲ ಮನಸ್ಸಿಗೆ ಸುಖವಾಗಲಿ ದು:ಖವಾಗಲಿ ಆಗುವದು. ಉಪರತಿ ಅಂದರೆ ವಿಷಯಾಸಕ್ತಿಯಿಂದ ತ್ಯಾಗವಾಗುವದು. ತಿತಿಕ್ಷ ಎಂಥ ಕಷ್ಟಬಂದರೂ ಸ್ವಲ್ಪವೂ ವ್ಯಗ್ರನಾಗದೆ ಕೊರಗದೆ ಮರುಗದೆ ಶಾಂತವಾಗಿ ಇರುವ ಸ್ಥಿತಿ. ಶ್ರದ್ಧೆ ಅಂದರೆ ಗುರುವಿನ ಮೇಲೆ ಮತ್ತು ಶಾಸ್ತ್ರವಾಕ್ಯಗಳಮೇಲೆ ನಂಬಿಗೆ ವಿಶ್ವಾಸ ಇಡುವದು. ಸಮಾಧಾನ ಅಂದರೆ ಇಷ್ಟದೇವತೆಯ ಮೇಲೆ ಬಹು ಪ್ರೀತಿಯಿಂದ ಚಿತ್ತವನ್ನು ನಿಲ್ಲಿಸುವದು. ಇವು ಆರು ಗುಣಗಳು ಭಕ್ತನಾಗುವವನಿಗೆ ಅತ್ಯವಶ್ಯಕ. ಮೊದಲಿನ ಮೂರೂ ಗುಣಗಳು ಒಂದೇ ಅರ್ಥಕೊಡುವದರಿಂದ ಅವುಗಳನ್ನೆಲ್ಲ ಕೂಡಿಸಿ ಒಂದೇಗುಣವೆಂದು ಹೇಳಿದರೂ ಅಡ್ಡಿಯಿಲ್ಲ. ಆದರೂ ಜನರು ಶರೀರ ಬೇರೆ ಮನಸ್ಸು ಬೇರೆ ಶರೀರ ಬೇಕಾದದ್ದನ್ನು ಹೂಡಿದರೂ ಅಲ್ಲ, ಮನಸ್ಸು ಇರದಿದ್ದರೆ ಪಾಪವಿಲ್ಲ ಸಂಬಂಧವಿಲ್ಲವೆಂದು ಹೇಳುವರು ಕಾರಣ ಬೇರೆ ಬೇರೆಯಾಗಿ ಆರೂ ಬೇಕೇಬೇಕೆಂದು ಹೇಳದೆ ಗತ್ಯಂತರವೇ ಇಲ್ಲ. ಇದಕ್ಕಾಗಿ ಷಟ್‌ಸಂಪತ್ತಿ ಅವಶ್ಯಬೇಕು.

ಇವೆಲ್ಲಕ್ಕೂ ಮೊದಲು ಪ್ರತಿಯೊಂದಕ್ಕೂ ವಿವೇಕವು ಬೇಕು. ಬದ್ಧಜೀವಿಗಳು ಅನ್ಯರ ಅತ್ಯುತ್ತಮ ಆದರ್ಶಗಳನ್ನು ಕೇಳಿ ತಾವು ಅದರ ಕಡೆಗೆ ಹೋಗಬೇಕೆಂದು ಬಯಸಿ ಹಾಳಾದದ್ದು ಕಂಡುಬರುವದು. ಯಾಕಂದರೆ ಅವರು ತಮ್ಮಲ್ಲಿ ವಿವೇಕ ಉದಯವಾಗದೆ ಈ ಕೆಲಸಗಳನ್ನು ಮಾಡಿರುವದರಿಂದ ಹೀಗೆ ಆಗುವದು. ಸಂಸಾರದ ಬಂಧನಗಳು ನಮ್ಮಲ್ಲಿ ಸ್ಥಿತಿ ಬಂದಂತೆ ಕಳಚಿಹೋಗುವವು. ಇದಕ್ಕೆ ವಿವೇಕವನ್ನು ಚನ್ನಾಗಿ ಉಪಯೋಗಿಸಬೇಕು. ಅಂದರೆ ನಾವು ಗುರಿಯನ್ನು ಸೇರುವೆವು. ಇಲ್ಲವಾದರೆ ನಾವು ಇದಕ್ಕೂ ಬಹು ಕೆಳಗೆ ಬೀಳುವೆವು. ಅಂದರೆ ನಾವು ಸ್ವಾತಂತ್ರ್ಯವನ್ನು ಪಡೆಯಬಹುದು. ಅದಕ್ಕಾಗಿ ವಿಚಾರವಿಲ್ಲದ ಭಕ್ತಿ ವಿನಾಶಕ್ಕೆ ಕಾರಣವಾಗುವದು ಎಂದು ಗಾದೆ ಇದೆ. ಭಕ್ತನಿಗೆ ಮೂಢನಂಬಿಗೆ ಅಥವಾ ಅಂಧ

ಶ್ರದ್ಧೆಗಳು ಎಳ್ಳಷ್ಟೂ ಉಪಯೋಗವಿಲ್ಲ. ಯಾರು ಮುಕ್ತರಾಗಬೇಕೆಂದು ಬಯಸುವರೋ ಯಾರು ದೇವರನ್ನು ಕಾಣಬೇಕೆನ್ನುವರೋ ಯಾರು ದೇವರನ್ನು ಪ್ರೀತಿಸಬೇಕೆಂದು ಬಯಸುವರೋ ಅವರು ಪ್ರಾಪಂಚಿಕ ಅತ್ಯಾಶೆಯಿಂದ ಪಾರಾಗಬೇಕು. ಪ್ರಪಂಚದಲ್ಲಿದ್ದು ಪಾರಮಾರ್ಥವನ್ನು ಪಡೆಯಬೇಕೆಂದು ಹೇಳುವರು. ಇದರ ಅರ್ಥವನ್ನು ಒಳ್ಳೇ ವಿಪರೀತಮಾಡಿ ಕೆಡುವದು ಹೆಚ್ಚಾಗಿದೆ. ಪ್ರಪಂಚ ಅಂದರೆ ಈಲೋಕ ಭೂಲೋಕ. ಇದರಲ್ಲಿ ಜನಿಸಿ ಯೋಗ್ಯರೀತಿಯಿಂದ ಸಾಧನಮಾಡಿ ಮುಕ್ತರಾಗಬೇಕೆಂದು ಅದರ ಭಾವ. ಇದನ್ನು ಈಗ ಜನರು ಮಾಡುವಂತೆ ಕಚಿಪಿಚಿ ಮನಬಲ್ಲಂತೆ ಸಂಸಾರಮಾಡಿ ವಿಷಯದಲ್ಲಿ ಮುಳುಗಿ ಸಂಸಾರದಲ್ಲಿ ಕೊಳೆತು ಹೋದರೆ ಮುಕ್ತಿಸಿಗುವದೆಂದು ಅರ್ಥಮಾಡುವರು. ಇದು ಸರಿಯಲ್ಲೆಂದು ಹಿಂದಿನ ಮೂರು ಲೇಖಗಳಿಂದಲೂ ಈಗಿನ ಈ ಲೇಖದಿಂದಲೂ ಅನಿಸದೆ ಇರಲಾರದು. ಅದಕ್ಕೇ ಭಕ್ತನಿಗೆ ವಿವೇಕ ವೈರಾಗ್ಯ ಷಟ್‌ಸಂಪತ್ತಿಬೇಕೆಂದು ಹೇಳುವರು. ವೀರಶೈವರದು ಬೇರೆ ಅದೆ ಎಂದು ಕೆಲವರು ಸಾಧಿಸುವರು. ಇದು ತಪ್ಪು. ಲಿಂಗಾರ್ಪಿತಮಾಡಿ ಭೋಗಿಸುವದು ಲಿಂಗಭೋಗೋಪಭೋಗಿ ಯಾಗುವದು. ಪ್ರಸಾದರೂಪದಿಂದ ಭೋಗಿಸುವದು ಎಂದು ಹೇಳುವರು. ಲಿಂಗಾರ್ಪಿತವೆಂದರೆ ಈ ಎಡೆ ಈ ನೈವೇದ್ಯ ಈ ಅನ್ನ ಈ ಸ್ತ್ರೀ ಈ ಪದಾರ್ಥ ಲಿಂಗಕ್ಕೆ ಅರ್ಪಣವಾಗಲಿ, ಎಂದರೆ ಲಿಂಗಾರ್ಪಿತ ಅಥವಾ ಲಿಂಗ ಭೋಗೋಪ ಭೋಗವಾಗುವದಿಲ್ಲ. ಒಬ್ಬ ರಾಜನು ಗುರುವಿನ ಕಡೆಯಿಂದ ಬೋಧೆಕೇಳಿ ತಾನೂ ಬ್ರಹ್ಮ ಸರ್ವವೂ ಬ್ರಹ್ಮ, ರಾಣಿ ದಾಸಿ ಒಂದೇ, ಭೇದವಿಲ್ಲ. ಅದಕ್ಕೆ ದಾಸಿಯೇ ರಾಣಿ ರಾಣಿಯೇ ದಾಸಿ ಎಂದು ನುಡಿಯಹತ್ತಿದನು. ಆಗ ರಾಣಿಯು ಆತನ ಗುರುವಿನ ಕಡೆಗೆ ತಕರಾರನ್ನು ಒಯ್ದಳು. ನಾಳೆ ತಾನೂ ಊಟಕ್ಕೆ ಬರುವೆನು. ರಾಜನಿಗೂ ನನಗೂ ಮಲವನ್ನೇ ಬಡಿಸು, ಎಂದು ಹೇಳಿಕಳಿಸಿದನು. ಮರುದಿನ ಇಬ್ಬರೂ ಊಟಕ್ಕೆ ಕುಳಿತರು. ಆಗ ರಾಣಿಯು ಮಲವನ್ನೇ ಬಡಿಸಿದಳು. ರಾಜನು ಬಹು ಕೋಪಗೊಂಡು ಬೈದನು. ಬ್ರಹ್ಮವಿರುವಿ ಊಟ ಮಾಡೆಂದಳು. ಆಗ ಗುರುಗಳು ಮಾಡಲಿ ಅಂದರೆ ಅವರು ಬ್ರಹ್ಮನಾಗುವರು ಎಂದು ಅರಸನು ನುಡಿಯಲು ಅವನು ಆಗಲಿ ಎಂದು ಹೇಳಿ ಹಂದಿಯ ರೂಪತಾಳಿ ಆ ಮಲವನ್ನು ತಿಂದನು. ಅಂದಿನಿಂದ ಅರಸನು ತನ್ನ ಹುಚ್ಚುತನವನ್ನು ತಿಳಿದುಕೊಂಡು ಮೊದಲಿನಂತೆ ಇರಹತ್ತಿದನು. ಬಾಯಿಬ್ರಹ್ಮ ಉಪಯೋಗವಿಲ್ಲ.

ಈ ಗುರುವಿನಂತೆ ಮಾಡಬಲ್ಲರೆ ಲಿಂಗಾರ್ಪಿತ ಮಾಡಿದಂತೆ, ಲಿಂಗ ಭೋಗೋಪಭೋಗ ಮಾಡಿದಂತೆ ಪ್ರಸಾದರೂಪದಿಂದ ಸ್ವೀಕರಿಸಿದಂತೆ, ಆಗುವದು. ಇಲ್ಲವಾದರೆ ಇಲ್ಲ. ಇದೆಲ್ಲಕ್ಕೂ ನಿಜವಾಗಿ ವಿವೇಕಬೇಕು. ಭಕ್ತರಿಗೆ ಗುರುಗಳು ಎಷ್ಟು ಹೇಳಬಹುದು? ಪುಸ್ತಕಗಳು ಎಷ್ಟು ತಿಳಿಸಬಹುದು? ಅದರಿಂದ ಹೆಚ್ಚಿಗಿ ತಿಳುವಳಿಕೆ ಯಾಗುವದಿಲ್ಲ. ಅದಕ್ಕೆ ಭಕ್ತರಾಗುವವರಿಗೆ ಅವಶ್ಯ ವಿವೇಕವು ಬೇಕೇ ಬೇಕು. ಅದರಂತೆ ಬಹಳಸಿ ಬ್ರಹ್ಮಚಾರಿ ಉಂಡು ಉಪವಾಸಿಗಳಿಗೆ ಮೇಲಿನ ಸಂಸಾರಿಕ ವಿಷಯಭೋಗದ ಅರ್ಥವನ್ನು ಹಚ್ಚುವರು. ಇದು ತಪ್ಪು. ಮನೆಮಠಗಳಲ್ಲಿ ಸ್ತ್ರೀಯರಿಂದಕೂಡಿ ಇದ್ದರೂ ಬ್ರಹ್ಮಚಾರಿಯಾಗಿರಬೇಕು. ಉಪವಾಸವಿದ್ದರೂ ಉಂಡವನಂತೆ ತೃಪ್ತರಾಗಿರುವನು. ನಿತ್ಯ ಸ್ತ್ರೀಯನ್ನು ಭೋಗಿಸಿ ಬ್ರಹ್ಮಚಾರಿಯಾಗಿರುವದು ಯಾವಕಾಲಕ್ಕೂ ಶಕ್ಯವಿಲ್ಲ. ನಿತ್ಯ ಯಥೇಚ್ಛಉಂಡು ಉಪವಾಸ ಇರುವದು ಅಂದರೆ ಒಂದಕ್ಕೊಂದು ವಿರೋಧ ಆಚರಣೆಗಳೇ ಸರಿ. ಮೈಪೆ ರಾಡಿ ಹೊಲಸು ಮಲ ಬಡಕೊಂಡು ಜಳಜಳಇರುವೆನೆಂದು ಹೇಳಿದಂತೆ ಆಗುವದು. ಸಿದ್ಧರು ಕೆಳಗಿನ ವಿಷಯಗಳನ್ನೇಕೆ ಕೆಳಗೆ ಬರುವರು. ಕತ್ತಲೆಯು ಬೆಳಕಿದ್ದಲ್ಲಿ ಬರುವದು ಶಕ್ಯವಿಲ್ಲ. ವಿಷಯ ಸುಖಕ್ಕೂ ಪಾರಮಾರ್ಥ ಸುಖಕ್ಕೂ ಎಂದೂ ಕೂಡಿ ನಡೆಯುವದಿಲ್ಲ. ಕಾರಣ ಇವುಗಳಿಗೆ ವಿಪರೀತ ಅರ್ಥಮಾಡಿ ಕೆಡಬಾರದು ಅದಕ್ಕಾಗಿಯೇ ಭಕ್ತನಿಗೆ ವಿವೇಕವು ಅವಶ್ಯ ಬೇಕೇಬೇಕು. ಈ ಸಂಸಾರವು ಈ ಪ್ರಪಂಚವು ನಾವು ಮುಟ್ಟಬೇಕಾದ ಮುಕ್ತಿಗೆ ಒಂದು ದಾರಿ ಹೊರತು ಇದೇ ಗುರಿಯಲ್ಲ. ಈ ಪ್ರಪಂಚದ ಆಚೆಗೆ ಹೋದರೆ ದಿವ್ಯ ಜ್ಞಾನವು ಲಭಿಸುವದೆಂದು ಎಲ್ಲರೂ ಹೇಳುವರು. ಆದರೆ ಈ ಪ್ರಪಂಚವೇ ಜ್ಞಾನವುಯವಲ್ಲ. ಇದು ಸುಳ್ಳು ಬ್ರಹ್ಮ ಒಬ್ಬನೇ ಸತ್ಯ. ಆದರೆ ಸತ್ಯ ವಸ್ತುವನ್ನು ಕಾಣಬೇಕಾದರೆ ಶರೀರವೆಂಬ ಈ ಕದುರೆಯು ಅವಶ್ಯ ಹೊರತು ಕುದುರೆಗಳೇ ಸತ್ಯವಲ್ಲ. ಇದನ್ನೆಲ್ಲ ವಿಚಾರಿಸಲು ವಿವೇಕ ಬೇಕು.

ಈ ಪ್ರಪಂಚಕ್ಕೆ ಈ ಸಂಸಾರಕ್ಕೆ ನಮ್ಮ ಹಬ್ಬಗಳಿಗೆ ಚಿತ್ರಗಳಿಗೆ ಕವನಗಳಿಗೆ ಪುರಾಣಕ್ಕೆ ಭಾರತ ರಾಮಾಯಣಗಳಿಗೆ ವಚನಗಳಿಗೆ ಎಲ್ಲದಕ್ಕೂ ಒಂದು ಒಳಗಿನ ತತ್ವ್ಯತ್ತನುವಾದ ಆಧ್ಯಾತ್ಮದ ಅರ್ಥವಿರುವದು. ಬರೇ ತೋರಿಕೆಯ ಶಬ್ದಾರ್ಥಗಳನ್ನು ಮಾಡಿಯೇ ಜಗವು ಕೆಡುತ್ತಿರುವದು. ನಾವು ಸದ್ಗುರುವಿನ ಅನುಭವಾಮೃತವೆಂದು ಒಂದು ಪುಸ್ತಕವನ್ನು ಬರೆದಿದ್ದೇವೆ. ಅದು ಶಿವಾನುಭವದಲ್ಲಿ ಪ್ರಕಟವಾಗುವದು. ನೋಡಿಕೊಳ್ಳಿರಿ. ಇವ

ಕ್ಕಾಗಿ ವಿವೇಕಬೇಕೆಂದು ಪತಿಯೊಬ್ಬರು. ಹೇಳುವರು. ವಿವೇಕದ ಬಲವು ಬೆಳೆಯಬೇಕಾದರೆ ವೈರಾಗ್ಯವು ಅವಶ್ಯಬೇಕು. ಅಂದರೆ ಓದಿದ ಪ್ರತಿಯೊಂದು ಪುಸ್ತಕಕ್ಕೆ ಕೇಳಿದ ಪ್ರತಿಯೊಂದು ನುಡಿಗೆ ಅಂತರಂಗದ ದಿವ್ಯ ಅರ್ಥ ತಿಳಿಯುವದೆಂದು ಜ್ಞಾನಿಗಳು ಹೇಳುವದನ್ನು ಅನುಭವ ಮಾಡಿಕೊಂಡರೆ ಒಳಿತು. ಕಾರಣ ಭಕ್ತನು ಸ್ಥೂಲದಿಂದ ಸೂಕ್ಷ್ಮ ಕಾರಣ ಮಹಾಕಾರಣದ ಕಡೆಗೆ ಏರುತ್ತ ಸಾಗಬೇಕಾಗುವದು. ಕಾರಣ ಅವನಿಗೆ ವಿವೇಕ ವೈರಾಗ್ಯ ಗಳು ಅವಶ್ಯಬೇಕು. "ತ್ಯಾಗವೇ ಧರ್ಮದ ಮೂಲವಯ್ಯ" ಎಂದು ಬಸ ವಣ್ಣನವರು ಹೇಳಿದ್ದಾರೆ. ಏನು ತ್ಯಾಗಮಾಡಬೇಕೆ ಬುದಕ್ಕೆ ವಿವೇಕ ಬೇಕು. ಈ ಪ್ರಪಂಚವು ಮುಕ್ತಾತ್ಮರಾಗುವದಕ್ಕೆ ನಮಗೆ ಸಹಾಯವಾಗು ವದಕ್ಕೆ ನಮಗೆ ಸಹಾಯ ಮಾಡುವರೊ ಅಲ್ಲಿಯವರೆಗೆ ಇದು ಒಳ್ಳೆ ಯದು. ಎಂದು ಎಲ್ಲ ಇದರಿಂದ ಜೀವನ್ಮುಕ್ತಿಗೆ ಸಹಾಯ ಮಾಡುವ ದಿಲ್ಲವೋ ಆಗ ಈ ಪ್ರಪಂಚ ಪಾಪಮಯವಾಗುವದು. ಅದರಂತೆ ಗಂಡ ಹೆಂಡತಿ ಮಕ್ಕಳು ಐಶ್ವರ್ಯ ಪಾಂಡಿತ್ಯ ಮೊದಲಾದವುಗಳ ರೀತಿಯೂ ಸಹ ಇರುವದು. ಆಧ್ಯಾತ್ಮಕ್ಕೆ ಸಹಾಯಮಾಡಿದರೆ ಒಳ್ಳೇಯವು. ಸಹಾಯ ಮಾಡ ದಿದ್ದರೆ ಪಾಪಮಯವೆಂದು ಧಾರಾಳವಾಗಿ ಹೇಳಬಹುದು ಇದನ್ನೆಲ್ಲ ವಿಚಾ ರಿಸಲಿಕ್ಕೆ ಸರಿಯಾದ ವಿವೇಕಬೇಕು.

ಇನ್ನು ಅವಶ್ಯಬೇಕಾದುದು ವೈರಾಗ್ಯ. ಅದೇ ಶಮ ದಮ ಉಪ ರತಿ. ವೈರಾಗ್ಯ ಇದ್ದುದೇ ಮನೋನಿಗ್ರಹ, ಇಂದ್ರಿಯನಿಗ್ರಹ, ವಿಷಯ ತ್ಯಾಗಗಳು ಸಹಜಬರುವವು. ಇವೆಲ್ಲ ಒಂದೇ ಅರ್ಥದ ಶಬ್ದಗಳು. ಹೊಲಸು ಬಟ್ಟೆಗೆ ಉಳಿದ ಬೇರಾವ ಬಣ್ಣ ಚನ್ನಾಗಿ ಕೂಡುವದಿಲ್ಲ. ಅದಕ್ಕೆ ಮೊದಲು ಆ ಬಟ್ಟೆಯನ್ನು ಚನ್ನಾಗಿ ಗಂಜೀಮಾಡಿ ಬೆಳ್ಳಗೆ ಮಾಡುವರು. ಆಗ ಇದಕ್ಕೆ ಬೇಕಾದ ಬಣ್ಣವು ಕೂಡುವದು. ಅದರಂತೆ ವಿಷಯದಿಂದ ಮಲಿನವಾದ ಮನಸ್ಸು ಶರೀರಗಳಲ್ಲಿ ಭಕ್ತಿಯು ನೆಲಿಸುವದು ಶಕ್ಯವಿಲ್ಲ. ಭಕ್ತಿತೋರಿ ದರೂ ಅದೆಲ್ಲ ನಟನೆ ಡಾಂಭಿಕ ಭಕ್ತಿಯಾಗಿರುವದು. ನಿಜ ಭಕ್ತಿ ಒಳಗೆ ಇರುವದಿಲ್ಲ. ನಟಕದಲ್ಲಿಯ ಸೋಗಿನಂತೆ ತೋರುವದು. ಇದರಿಂದ ಯಾತಕ್ಕೂ ಉಪಯೋಗವಿಲ್ಲ. ಆದಷ್ಟು ತೀವ್ರ ಇದರಿಂದ ದೂರ ಸರಿಯಬೇಕು. ಈಗ ಡಾಂಭಿಕ ಭಕ್ತರೇ ಹೆಚ್ಚಾಗಿದ್ದಾರೆ. ಕೀರ್ತಿ, ಹೆಸರು ಜಯಜಯಕಾರ ಪಾದಪೂಜೆ ಮೊದಲಾದವುಗಳೇ ಇವರು ಹೆಚ್ಚಾಗಿ ಮೆಚ್ಚುವರು ಇದೆಲ್ಲ ವಿವೇಕ ವೈರಾಗ್ಯ ಇಲ್ಲದಕ್ಕಾಗಿ ಈ ಪ್ರಕಾರ ಸೋಗನ್ನು ನಟಿಸುತ್ತಿರುವರು.

ಆದರೆ ಅವರ ಅಂತರಂಗವೆಲ್ಲ ಪ್ರಾಪಂಚಿಕ ವಿಷಯಗಳಿಂದ ತುಂಬಿರುವದು ಅವರ ಮುಖದ ಮೇಲೆ ಒಡೆದುಕಾಣಿಸುವದು. ಆದರೂ ಜನರು ಆಡುವದಿಲ್ಲ, ಇಂಥವರಲ್ಲಿ ಭಕ್ತಿಯು ಅಂಕುರಿಸದು. ಗುರುಬೋಧೆ ಮಾಡಿದರೂ ಶಾಸ್ತ್ರಕೇಳಿದರೂ ಏನೂ ಆಗುವದಿಲ್ಲ. ಇವರೇ ಬದ್ಧ ಜೀವಿಗಳು. ಬದ್ಧಜೀವಿಗಳಿಗೆ ಎಂದೂ ಯಾವ ಕಾಲಕ್ಕೂ ಭಕ್ತಿಹುಟ್ಟುವದು ಶಕ್ಯವೇ ಇಲ್ಲ. ಮನಸ್ಸುಯಾವಾಗಲೂ ದೇವರ ಕಡೆಗೆ ಹೋಗಬೇಕು. ಇದು ನಿತ್ಯ ಅಭ್ಯಾಸದಿಂದ ಬರುವದು. ಮೇಲಿನ ಗುಣಗಳು ಭಕ್ತನಲ್ಲಿ ಬಂದಿದ್ದರೆ ನಿತ್ಯ ಅಭ್ಯಾಸದಿಂದ ದೇವರ ಮೇಲೆ ಸದಾ ಪ್ರೀತಿ ಸ್ವಾಭಾವಿಕವಾಗಿ ಹರಿಯುವದ . ಮನಸ್ಸು ಶುದ್ಧವಿದ್ದರೆ ಪವಿತ್ರವಿದ್ದರೆ ದೇವರನ್ನು ಅದು ಸದಾ ಆಲೋಚಿಸಲಿಕ್ಕೆ ಶಕ್ಯವಿದೆ. ಮನಸ್ಸು ಬಹು ಚಂಚಲವಾದುದು ಇದನ್ನು ಒಂದುಗೂಡಿಸಲಿಕ್ಕೆ ದೇವರ ಮೇಲೆ ನಮ್ಮ ಎಲ್ಲ ಮನವನ್ನು ಇರಿಸಿ ಪ್ರೀತಿಮಾಡುವದೇ ಆಗಿದೆ. ಮನವು ಒಂದುಗೂಡಿದರೆ ಧ್ಯಾನವು ಸ್ವಾಭಾವಿಕವಾಗಿ ಸದಾ ತಾನೇ ಒಲ್ಲೆಂದರೂ ದೇವರ ಧ್ಯಾನವನ್ನು ಮಾಡುವದು. ಮನಸ್ಸು ಇಷ್ಟು ಚಂಚಲವಾಗಲಿಕ್ಕೆ ಸದಾ ಇಂದ್ರಿಯ ಮನಸ್ಸುಗಳು ವಿಷಯದ ಚಿಂತನೆ ಆಲೋಚನೆಗಳನ್ನು ಮಾಡುವದೇ ಕಾರಣವಾಗಿದೆ. ಒಮ್ಮೆ ಅಳವು ಒಮ್ಮೆ ನಗುವುಗಳಿಂದ ನಮ್ಮ ಜೀವನವು ಕೂಡಿದೆ. ಹೀಗಾಗಿ ನಾವು ಸಂಸಾರದ ಪ್ರತಿಯೊಂದಕ್ಕೂ ಗುಲಾಮರಾಗಿದ್ದೇವೆ. ದಾಸರಾಗಿದ್ದೇವೆ. ಅವೇ ನಮ್ಮನ್ನು ಆಳುವವು. ಅದಕ್ಕಾಗಿಯೇ ಎಲ್ಲ ತಿರುವು ಮುರುವು ಆಗಿದೆ. ಒಳ್ಳೇ ನಾಚಿಕೆಗೇಡು ಆದರೂ ನಾವು ಭಕ್ತರು ಧರ್ಮಾತ್ಮರೆಂದು ಜಂಬುಕೊಚ್ಚಿಕೊಳ್ಳುತ್ತಿರುವೆವು. ವಿಷಯ ಸುಖ ಇಂದ್ರಿಯ ಸುಖಗಳನ್ನು ಮೊದಲಾದವುಗಳ ಬಗ್ಗೆ ಆಲೋಚಿಸುವದನ್ನು ಬಿಟ್ಟು ಮನಸ್ಸು ಯಾವಾಗಲೂ ದೇವರಬಗ್ಗೆ ಆಲೋಚಿಸುವಂತೆ ಆಗಬೇಕು. ಇದನ್ನು ಬಿಟ್ಟು ಮನಸ್ಸು ಬೇರೆಕಡೆ ಹೋದರೆ ಅದಕ್ಕೆ ದಂಡಿಸು, ಛೀ ಹಾಕು. ಇದರಂತೆ ಮಾಡುತ್ತ ಕೆಲವು ದಿನ ಹೋದರೆ ಅಭ್ಯಾಸದಿಂದ ಆಗ ಸದಾ ದೇವರ ಬಗ್ಗೆ ಆಲೋಚಿಸುವದು. ದೇವರ ವಿಚಾರವಾಗಿ ಕೇಳಬೇಕು, ಮಾತನಾಡಬೇಕು. ದೇವರ ವಿಚಾರವಾಗಿ ಓದಬೇಕು ಇದಕ್ಕೆ ಕೆಲವು ವಚನಗಳನ್ನು ಉದಹರಿಸುವೆನು- "ಶಿವಕಥೆಗಳ ಕೇಳಿ ಸಂತೋಷಿಸಿ, ಶಿವ ಕೀರ್ತನವ ಪಾಡಿ ಮಾಡಿ ದಣಿವಿಲ್ಲದೆ ಶಿವನ ನೆನೆದು ನೆನೆದು, ಶಿವಸೇವೆಯ ಮಾಡುತ್ತ ಮಾಡುತ್ತ, ಶಿವಪೂಜೆಯನೋಜೆಯಲ್ಲಿ ವಿಸ್ತರಿಸಿ, ಶಿವಶರಣೆಂದು

ಶಿವನೊಡವೆಯು ಶಿವನವರಿಗರ್ಪಿಸಿ ಶಿವನೇ ತಾನಾದ ಭವರಹಿತ ಭಕ್ತನ ನೋಡಾ ನಿಜಗುರು ಸ್ವತಂತ್ರ ಸಿದ್ಧಲಿಂಗಾ”

ವಾರೆಂದರಿಯೆ, ದಿನವೇದರಿಯೆ, ಏನೆಂದರಿಯೆನಯ್ಯ ಇರುಳೆಂದರಿಯೆ, ಹಗಲೆಂದರಿಯೆನಯ್ಯ. ನಿಮ್ಮವ ಪೂಜಿಸಿ ಎಮ್ಮವ ಮರೆದೆ ಕೂಡಲ ಸಂಗಮ ದೇವಾ.

ಇರುಳುವನು ಹಗಲುವನು ಕಳೆದು ಪೂಜೆಯನು ಪೂಜಿಸಲು ಬೇಕು. ಕಂಡ್ಯಾ! ಇಂತಪ್ಪ ಪೂಜೆಯ ಪೂಜಿಸುವವರ ತೋರಯ್ಯ ಎನಗೆ ಗುಹೇಶ್ವರಾ.

ಆಡಿ ಕಾಲ ದಣಿಯವು. ನೋಡಿ ಕಣ್ಣು ದಣಿಯವು. ಮಾಡಿ ಕೈ ದಣಿಯವು. ಹಾಡಿ ನಾಲಿಗೆ ದಣಿಯದು. ಇನ್ನೇವೆ ಇನ್ನೇವೆ? ನಾನಿಮ್ಮ ಕೈಯಾರೆ ಪೂಜಿಸಿ ಮನ ದಣಿಯಲೊಲ್ಲದು ಕೂಡಲಸಂಗಮದೇವಯ್ಯ.

ಎನ್ನ ಕಾಯವ ದಂಡಿಗೆಯ ಮಾಡಯ್ಯ. ಎನ್ನ ಸಿರವ ಸೋರೆಯ ಮಾಡಯ್ಯ. ಎನ್ನ ನರವ ತಂತಿಯ ಮಾಡಯ್ಯ. ಎನ್ನ ಬೆರಳ ಕಡ್ಡಿಯ ಮಾಡಯ್ಯ. ಮೂವತ್ತೆರಡು ರಾಗವ ಹಾಡಯ್ಯ. ಎನ್ನ ಉರದ ಲೊತ್ತಿ ನಿನ್ನ ಜಯ ಗಾನವಂ ಬಾರಿಸು ಕೂಡಲಸಂಗಮ ದೇವಾ.

ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ಮೂರುತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ, ಕೂಡಲಸಂಗಮದೇವಾ ನಿಮ್ಮ ಚರಣ ಕಮಲನೊಳು ಸೊಗದ ಬಂಡುಂಬ ತುಂಬಿಯಾಗಿರ್ಪೆ.

ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ. ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ಮತ್ತೊಂದು ಕೇಳದಂತೆ ಕಿವುಡನ ಮಾಡಯ್ಯ ಅನ್ಯಕ್ಕೆ ಎಳಸದಂತೆ ಮನವ ನಿಮ್ಮಲ್ಲಿ ಇರಿಸಯ್ಯ ಕೂಡಲಸಂಗಮದೇವಾ.

ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯ! ನಾ ನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯ! ನಾನಿನ್ನ ನಪ್ಪಿದಲ್ಲದೆ ಸೈರಿಸಲಾರೆನಯ್ಯ! ನಾನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯ. ಚನ್ನಮಲ್ಲಿಕಾರ್ಜುನಯ್ಯ ನಾನಿಮ್ಮ ಪೂಜಿಸಿ ಹರುಷದೊಳೋಲಾಡುವೆನಯ್ಯಾ.

---

# ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು

[ಶ್ರೀ ಅರ್ಚಕ ವೆಂಕಟೇಶ- ಸಹಸಂಪಾದಕರು ವಿಶ್ವಕರ್ನಾಟಕ]



"ಕರ್ನಾಟಕ ಸಾಹಿತ್ಯ ನಭೋಮಂಡಲದಲ್ಲಿ ಪಂಪ-ರನ್ನರಂತಹ ಮಹಾಕವಿಗಳನ್ನೂ, ಹರಿಹರ, ರಾಘವಾಂಕರಂತಹ ಕ್ರಾಂತಿಕಾರಕ ಕವಿಗಳನ್ನೂ ನೇಮಿ ಷಡಕ್ಷರರಂತಹ ರಸಕವಿಗಳನ್ನೂ ಲಕ್ಷ್ಮೀಶ ಕುಮಾರ ವ್ಯಾಸರಂತಹ ಕವಿಕೋಕಿಲೆಗಳನ್ನೂ ನಿಜಗುಣ ಪುರಂದರರಂತಹ ಋಷಿ ಕವಿಗಳನ್ನೂ ನಾವು ಪ್ರಕಾಶಮಾನವಾದ ತಾರೆಗಳೆಂದು ಭಾವಿಸಿದರೆ (Personality) ಸ್ವಾತಂತ್ರತವು ವ್ಯಕ್ತಿತ್ವದ ದೆಸೆಯಿಂದ ಸರ್ವಜ್ಞ" ಮೂರ್ತಿಯನ್ನು ಧೃವ ನಕ್ಷತ್ರವೆಂದು ಕರೆಯಬೇಕಾಗುತ್ತದೆ.

ಮೇಲೆ ಉದಾಹರಿಸಿದ ವಾಕ್ಯವೃಂದವನ್ನು ಕೀರ್ತನಕೇಸರಿ 'ಕನ್ನಡಿಗರ ಬಂಟ' ಶಿವಮೂರ್ತಿ ಶಾಸ್ತ್ರಿ, ಹುಲ್ಯಂಟಿ ಮಠ ಇವರು ಧಾರವಾಡದ ಶ್ರೀ ಚನ್ನಪ್ಪ ಉತ್ತಂಗಿಯವರು ೧೯೩೫ ರಲ್ಲಿ ಪ್ರಕಟಿಸಿದ 'ಸರ್ವಜ್ಞ ವಚನಗಳ' ಜನಪದಾವೃತ್ತಿಗೆ ಬರೆದ ಮುನ್ನುಡಿಯಿಂದ ಆರಿಸಿದ್ದೇನೆ. ಶ್ರೀ ಶಿವಮೂರ್ತಿ ಶಾಸ್ತ್ರಿಗಳು ಎಷ್ಟು ಸೊಗಸಾದ ಗದ್ಯವನ್ನು ಬರೆಯುತ್ತಾರೆಂಬುದಕ್ಕೆ ಈ ಒಂದು ವಾಕ್ಯಸಾಕು.

ಕನ್ನಡದ ಪತ್ರಿಕೋದ್ಯಮವಾಗಲಿ, ಆಂಗ್ಲಪತ್ರಿಕೋದ್ಯಮವಾಗಲಿ, ಅಥವ ಇನ್ನಾವ ಪತ್ರಿಕೋದ್ಯಮವಾಗಲಿ ಅಲ್ಲಿನ ಪತ್ರಿಕಾ ಸಂಪಾದಕರ ಯೋಗ್ಯತಾ ಸಿದ್ಧಿಯಮೇಲೆ ಅವಲಂಬಿಸಿರುತ್ತದೆ. ಈ ಮಾತು ನಮ್ಮ ಭಾರತದ ಪ್ರಸಿದ್ಧ ಪತ್ರಿಕೆಯನ್ನೇ ತೆಗೆದುಕೊಂಡರೂ ಸತ್ಯವೆನಿಸುತ್ತದೆ ಗಾಂಧಿಜಿ ಹೊರಡಿಸುತ್ತಿದ್ದ ಈಗಲೂ ಹೊರಡುತ್ತಿರುವ "ಹರಿಜನ" ಪತ್ರಿಕೆಯೇ ಇದಕ್ಕೆ ಉದಾಹರಣೆ ಹಾಗೆಯೇ ಮಹಾರಾಷ್ಟ್ರ ಪತ್ರಿಕೆ ವಿಚಾರಕೂಡ.

ಇನ್ನು ಮಾಸಪತ್ರಿಕೆಗಳ ಕಡೆಗೆ ನಮ್ಮ ದೃಷ್ಟಿ ಹೊರಳಿಸಿದರೂ ಅದೇ ಅನುಭವವಾಗುತ್ತದೆ. ಮಹಾರಾಷ್ಟ್ರ ಸಾಹಿತ್ಯದಲ್ಲಿ ಸೂರ್ಯ-ಚಂದ್ರರೆಂದು ಖ್ಯಾತಿವೆತ್ತ ಶ್ರೀ ವಿ. ಸ. ಖಾಂಡೇಕರ. ಪ್ರೊ. ನಾ. ಸಿ. ಫಡಕೆಯವರು ಎಷ್ಟು ಸುವಿಖ್ಯಾತ ಕಾದಂಬರಿಕಾರರೂ ಅಷ್ಟೇ ಪ್ರಸಿದ್ಧ ಪತ್ರಿಕಾಕಾರರು. ಹಿಂದಿ, ಗುಜರಾತಿ ಬಂಗಾಳಿ ಮಲಿಯಾ ಉರ್ದು ಮೊದಲಾದ ಭಾಷೆ

ಗಳ ವಿಖ್ಯಾತ ಸಾಹಿತಿಗಳೇ ಕೆಲವು ಪತ್ರಿಕೆಗಳಿಗೆ ಸಂಪಾದಕರಾಗಿರುವುದು ಗೋಚರವಾಗುವದು. ಅಂಥ ಸಂಪಾದಕರಲ್ಲಿ ಕೀರ್ತನಾಚಾರ್ಯ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳೂ ಒಬ್ಬರು.

ಶಿವಮೂರ್ತಿ ಶಾಸ್ತ್ರಿಗಳ ಬಾಲ್ಯಜೀವನ ಬಹಳ ಕಷ್ಟಮಯವಾಗಿ ಕಳೆಯಿತು. ನೂರಾರು ಸಂಕಷ್ಟಗಳನ್ನು ಕಂಡುಂಡ ಜೀವ ಅದು. ಬಾಲ್ಯದಲ್ಲಿ ಅವರಿಗೆ ಉಚಿತ ಶಿಕ್ಷಣ ದೊರೆಯಲಿಲ್ಲ. ದೈಹಿಕವಾಗಲಿ ಮಾನಸಿಕವಾಗಲಿ ಸುಖನೆಮ್ಮದಿ ಶಾಸ್ತ್ರಿಗಳಿಗೆ ಬಾಲ್ಯದಲ್ಲಿ ಸಿಕ್ಕಲಿಲ್ಲ. ಆದರೂ ಈ ವಯಸ್ಸಿನಲ್ಲಿ ಅವರಿಗೆ ಏನೂ ಒಂದು ಕೆಚ್ಚು, ನಾನೂ ಒಬ್ಬ ಕವಿಯಾಗಬೇಕೆಂಬ ಹುಚ್ಚು, ಕನ್ನಡ ನಾಡನುಡಿಯ ಮೇಲಿನ ನೆಚ್ಚು.

ಇಂದಿನ ಶಾಲಾ ಕಾಲೇಜುಗಳ ಶಿಕ್ಷಣದ ದೃಷ್ಟಿಯಿಂದ ನೋಡಿದರೆ ಶಾಸ್ತ್ರಿಗಳು ಪಡೆದದ್ದು ಶಿಕ್ಷಣವೇ ಅಲ್ಲವೆನ್ನಬೇಕು. ಅವರು ಓದಿದ್ದು ಪುಸ್ತಕದ ನಿರ್ಜೀವ ಓದನ್ನಲ್ಲ. ವಿಶಾಲ ಪ್ರಪಂಚವೇ ಅವರ ವಿಶ್ವವಿದ್ಯಾನಿಲಯವಾಯಿತು. ಸರ್ವರೊಳಗೊಂದು ನುಡಿಗಲಿತು ವಿದ್ಯೆಯಾಪರ್ವತವೇ ಆದರವರು. ಅಲ್ಲದೆ ಕೈಲಾಸವಾಸಿ ಮಹಾವಿದ್ವಾನ ಪಿ. ಆರ್. ಕರಿಬಸವ ಶಾಸ್ತ್ರಿಗಳ ಬಳಿ ಶಾಸ್ತ್ರಿಗಳು ಕನ್ನಡ ಮತ್ತು ಸಂಸ್ಕೃತವನ್ನು ಶಾಸ್ತ್ರೋಕ್ತವಾಗಿ ಓದಿ, ಪಾಂಡಿತ್ಯವನ್ನೂ ಕಾವ್ಯರಚನಾ ಶಕ್ತಿಯನ್ನೂ ಸಂಪಾದಿಸಿಕೊಂಡರು. ಎಲ್ಲಕ್ಕೂ ಮಿಗಿಲಾಗಿ ಗುರುವಿನ ಆಶೀರ್ವಾದ ಪಡೆದರು. ಆ ಮಹಾಗುರುವಿನ ಹರಕೆಯು ಶಾಸ್ತ್ರಿಗಳನ್ನು ಇಂದಿನ ಕೀರ್ತಿಕಳಶಕ್ಕೆ ಕೊಂಡೊಯ್ದುದ್ದು ಎಂದರೆ ಅತಿಶಯೋಕ್ತಿಯಾಗಲಾರದು. ಅಪ್ರಸಿದ್ಧ ಕರಿಬಸವ ಶಾಸ್ತ್ರಿಗಳು ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳ ಶಿಷ್ಯರೆಂಬುದು ಪ್ರಸಿದ್ಧವಿಚಾರ.

'ಪರಮ ಸಾಹಸದ ಶಾಸ್ತ್ರಿಗಳ' ಹುಟ್ಟುಗುಣ ಚಿಕ್ಕಂದಿನಿಂದಲೇ ಕೀರ್ತನಕ್ಕೆ ಕಂಕಣ ಕಟ್ಟಿದರು. ಶಾಸ್ತ್ರಿಗಳು ಎಲ್ಲ ಸಭೆಗಳಲ್ಲೂ ಹೌದೆನಿಸಿಕೊಂಡರು. ಇವರ ಮನೆತನದಲ್ಲಿ ಹಿಂದೆ ಕೆಲವು ಮಂದಿ ಗಮಕಿಗಳು ಪೌರಾಣಿಕರೂ ಇದ್ದರೆಂಬುದು ಇಲ್ಲಿ ಗಮನಾರ್ಹ. ಕೇವಲ ಕೆಲವೇ ವರ್ಷಗಳಲ್ಲಿ ಗನ್ನಡ ನಾಡಿನಲ್ಲಿ ಅಭೂರ ಪೂರ್ವವಾದ ಕೀರ್ತಿಗಳಿಸಿದ ಕೀರ್ತನಕಾರರಾಗಿ ಮೆರೆದು. ಅವರಿಗೆ ಕೀರ್ತನಾಚಾರ್ಯ, ಶಿವಕೀರ್ತನ ಕವಿರಾಜ, ಕೀರ್ತನ ಶಿರೋಮಣಿ, ಕೀರ್ತನ ಕೇಸರಿ, ಕೀರ್ತನ ವಿಚಕ್ಷಣ ಅಲ್ಲದೆ ಇನ್ನೂ ಅನೇಕ ಬಿರುದು

ಗಳೂ ಕನ್ನಡದ ಹಿರಿಯ ಮಠಗಳಿಂದ ಮಠದ ಮಹಾ ಸ್ವಾಮಿಗಳಿಂದ ಶಾಲು ಜೋಡಿಗಳು, ಚಿನ್ನದ ಕಡಗಗಳೂ, ಬಹುಮಾನವಾಗಿ ದೊರೆತವು. ನೂರಾರು ಕಡೆ ಮಾನಪತ್ರಗಳೂ ದೊರೆತವು.

ಶಾಸ್ತ್ರಿಗಳು ಕನ್ನಡ ನಾಡಿನಲ್ಲಿ 'ಕೀರ್ತನ ಕೇಸರಿ'ಗಳಾಗಿ ಹತ್ತಾರು ವರ್ಷಗಳ ಕಾಲ ಸಂಚರಿಸಿ ಲಕ್ಷೋಪ ಲಕ್ಷ ಜನರನ್ನು ನಗಿಸಿ ನಲಿಸಿ ದೇಶ ಭಾಷಾಭಿಮಾನಿಗಳು ಕನ್ನಡಿಗರಲ್ಲಿ ವಿಸ್ಫಲವಾಗುವಂತೆ ಮಾಡಿ ಕೀರ್ತಿಗಳಿಸಿ ವರು. ಕೀರ್ತನದ ಜೊತೆಗೆ ಶಾಸ್ತ್ರಿಗಳು ಎಲ್ಲಕಡೆಗೂ ಉದ್ದಾಮ ಭಾಷಣ ಗಳನ್ನು ಮಾಡಿಧ್ದಾರೆ. ಅವರು ಕನ್ನಡನಾಡಿನಲ್ಲಿ ಕೆಲವೇ ಜನ ಪ್ರತಿಭಾ ಶಾಲಿ ಭಾಷಣಕಾರರಲ್ಲಿ ಒಬ್ಬರು. ಅವರ ವಾಗ್ಮಿತ್ವವು ಅವರ ಪ್ರತಿ ಪಕ್ಷ ದವರನ್ನು ತಲೆದೂಗಿಸುವಂತಹುದು. ಇವೆಲ್ಲಕ್ಕೆ ಹೆಚ್ಚಾಗಿ ಶಾಸ್ತ್ರಿಗಳ ಒಲವು ಹಲವು ಪತ್ರಿಕೆಗಳ ಕಡೆಗೆ ಹರಿದಿದೆ. ೧೯೩೭ರಲ್ಲಿ ಅವರು ಉದಾತ್ತ ಧ್ಯೇಯ ಗಳನ್ನೊಳಗೊಂಡು "ಶರಣಸಾಹಿತ್ಯ" ಎಂಬ ಮಾಸ ಪತ್ರಿಕೆಯನ್ನು ಹೊರ ಡಿಸಿದರು. ಹೆಸರು ಶರಣ ಸಾಹಿತ್ಯವಾದರೂ ಈ ಪತ್ರಿಕೆ ಕೇವಲ ಲಿಂಗಾಯತ ರಿಗೆ ಮಾತ್ರ ಮೀಸಲಾಗಿದೆ. ಸಕಲ ಕನ್ನಡ ವಿದ್ವಾಂಸರಿಗೆ, ಕನ್ನಡ ನಾಡಿನ ಸಮಸ್ತ ಜನಾಂಗಕ್ಕೆ ಮೀಸಲಾಯಿತು. ಈ ಪತ್ರಿಕೆಯಲ್ಲಿ ವೀರಶೈವರ ವಿದ್ವಾಂಸರೇ ಹೆಚ್ಚಾಗಿ ಲೇಖಗಳನ್ನು ಬರೆದಿದ್ದಾರೆಂದರೆ ತಪ್ಪಾಗದು. ಧರ್ಮ, ಸಾಹಿತ್ಯ, ಕಲೆನಾಡು, ನುಡಿಗಳ ಉದ್ಧಾರಕ್ಕೆ ಶರನಾಸಾಹಿತ್ಯ ಕನ್ನಡ ನಾಡಿಗೆ ಕಳೆದ ೧೬ ವರ್ಷಗಳಲ್ಲಿ ಅಪಾರ ಸೇವೆ ಸಲ್ಲಿಸಿದೆ. ಅದರ ಸೇವೆ ಈಗಲೂ ಅಖಂಡವಾಗಿ ಸಾಗಿದೆ. ಇದರಲ್ಲಿ ಬಂದ ಬರಹಗಳು ಉದ್ದಾಮ ಗ್ರಂಥಕಾರರಿಗೆ ಆಧಾರವೆನಿಸಿದೆ. ಸಂಶೋಧಕರಿಗೆ ಮಾರ್ಗದರ್ಶಕವಾಗಿದೆ. ವಿಚಾರ ಪರರಿಗೆ ಮನಶ್ಯಾಂತಿಯುತ್ತಿವೆ.

ಕೀರ್ತನಕಾರರು, ಭಾಷಣಕಾರರು, ಇತಿಹಾಸ ಸಂಶೋಧಕರು ಮಾಸ ಪತ್ರಿಕಾ ಸಂಪಾದಕರೂ ಆಗಿ ಸೇವೆ ಸಲ್ಲಿಸಿದ ಶಾಸ್ತ್ರಿಗಳಿಗೆ ತಮ್ಮ ಕ್ಷೇತ್ರದ ವಿಸ್ತಾರ ಇನ್ನೂ ಸಾಲದಾಯಿತು. ೧೯೩೮ರಲ್ಲಿ ಸ್ವತಂತ್ರ ಕರ್ನಾಟಕ ವಾರ ಪತ್ರಿಕೆ ಸ್ಥಾಪಿಸಿದರು. ಪತ್ರಿಕೆಯ ಹೆಸರೇ ಸೂಚಿಸುವ ಹಾಗೆ ಅದು ಕನ್ನಡ ನಾಡಿನ ಒಕ್ಕೂಟಕ್ಕಾಗಿ ಕರ್ನಾಟಕ ಏಕೀಕರಣಕ್ಕಾಗಿ ಶ್ರಮಿಸಿದರು. ಐದು ವರ್ಷ ನಡೆಯಿತು. ಆ ಪತ್ರಿಕೆಯಿಂದ ಶಾಸ್ತ್ರಿಗಳಿಗೆ ಅಪಾರ ಧನ ನಷ್ಟ ವಾಯಿತು. ಹಿರಿಯರ ಆಸ್ತಿ ಪಾಸ್ತಿಮಾರಿ ಸಾಲ ತೀರಿಸಿದ ಶಾಸ್ತ್ರಿಗಳಲ್ಲದೆ ಮತ್ತಾರರೂ ಆಗಿದ್ದರೆ ಎಂದೊ ಪತ್ರಿಕೋದ್ಯಮಕ್ಕೆ ಶರಣು ಹೊಡೆಯುತ್ತಿದ್ದರು

ಎಂತಹ ಕಷ್ಟ ನಷ್ಟಗಳು ಬಂದರೂ ಅವರು ಇಟ್ಟ ಹೆಜ್ಜೆಯನ್ನು ಕಿತ್ತಲಿಲ್ಲ. ಅವರದು ಧೀರಹೆಜ್ಜೆ ! ಮುಂದಿಟ್ಟ ಅಡಿಯನ್ನು ಹಿಂದಿಡದ ಶರಣರ ಪಂಥ. ಇದಲ್ಲದೆ ಶಾಸ್ತ್ರಿಗಳು ಪರಿಷತ್ತಿನ ಕನ್ನಡ ನುಡಿಗೆ ೧ಲ ತಿಂಗಳು ಸಂಪಾದಕ ರಾಗಿದ್ದರು. ಉಷಾ ಒಂಬ ಮಾಸಿಕ ಪ್ರಾರಂಭಿಸಿ ಕೆಲವು ವರ್ಷ ನಡಿಸಿ ಮಿತ್ರರಿಗೆ ವಹಿಸಿದರು. ಇಷ್ಟೆಲ್ಲ ಕಾರ್ಯಕ್ರಮಗಳ ಜೊತೆಗೆ ಶಾಸ್ತ್ರಿಗಳು ದೇಶಾಟನವನ್ನು ಅಖಂಡವಾಗಿ ಮಾಡಿದ್ದಾರೆ. ಕನ್ನಡನಾಡಿನಲ್ಲಿ ಅವರು ಹೋಗದ ಊರಿಲ್ಲ. ಅವರು ಸಂದರ್ಶಿಸದ ದೇವಾಲಯವಿಲ್ಲ. ನೋಡದ ಸ್ಮಾರಕ ವಿಲ್ಲ, ಸಂಗ್ರಹಿಸಿದ ತಾಳೆಯೋಲೆ ಗ್ರಂಥವಿಲ್ಲ. ಇವರ ಸಂಶೋಧನಾ ಕೆಲಸ ವಂತು ಪ್ರಶಂಸಾರ್ಹವಾಗಿದೆ. ಹೋದ ಹೋದಲ್ಲಿ ಸಂಗ್ರಹಿಸಿ ತಂದ ತಾಳೆ ಯೋಲೆ ಗ್ರಂಥಗಳ ರಾಶಿಯನ್ನು ಅವರ ' ಲೈಬ್ರರಿ ' ಯಲ್ಲಿ ಈಗಲೂ ನೋಡ ಬಹುದು. ಆ ರಾಶಿಯಲ್ಲಿ ರಾಘವಾಂಕ ಮಹಾಕವಿಯ ಶರಭಚರಿ ತ್ರೆಯೂ ಅಡಗಿ ಕುಳಿತಿದೆ. ಇನ್ನೂ ಎಷ್ಟೆಷ್ಟು ಕಾವ್ಯಗಳಿವೆಯೋ ಯಾರು ಬಲ್ಲರು ?

ಪಂಪ, ರನ್ನ , ಹರಿಹರ, ರಾಘವಾಂಕ, ಸರ್ವಜ್ಞ, ಕೆರೆಯ ಪದ್ಮ ರಸ ಪದ್ಮರಸ, ಷಡಕ್ಷರಿದೇವ, ನೇಮಿಚಂದ್ರ, ಜನ್ನ , ಲಕ್ಷ್ಮೀಶ, ಕುಮಾರವ್ಯಾಸ, ಮುದ್ದಣನೇ ಮೊದಲಾದ ಕನ್ನಡ ಕವಿಗಳ ಬಗ್ಗೆ ಆಳ ವಾಗಿ ಅಭ್ಯಾಸಮಾಡಿ, ಇವರ ಬಗ್ಗೆ ಪ್ರಶಸ್ತಿ ಗ್ರಂಥಗಳನ್ನು ಬರೆಯಬೇ ಕೆಂದು ಶಾಸ್ತ್ರಿಗಳು ಅನೇಕ ವರ್ಷಗಳಿಂದ ಚಿಂತಿಸುತ್ತಲೇ ಇದ್ದಾರೆ. ಆದರ ಅವರ ಕ್ಷೇತ್ರ ದಿನೇದಿನೇ ವಿಸ್ತರಿಸುವದರಿಂದ ಅದು ಸಾಧ್ಯವಿಲ್ಲ.

ಕನ್ನಡದಲ್ಲಿ ಶ್ರೀ ಶಾಸ್ತ್ರಿಗಳು ಮಹಾಕವಿ ನಿಜಗುಣ ಶಿವಯೋಗಿಯ ಪುರಾತನ ತ್ರಿವಿಧಿ. ಮಹಾಕವಿ ರಾಘವಾಂಕನ 'ವೀರೇಶ ಚರಿತ್ರೆ' ಪಾಲ್ಕು ರಿಕೆ ಸೋಮನಾಥನ ಬಸವೋದಾಹರಣಂ ಗುರುಬಸವನ ಮನೋವಿಜಯಂ ಪ್ರಭುಲಿಂಗದೇವರ ವಚನ, ಸರ್ವಜ್ಞಮೂರ್ತಿ ಮೊದಲಾದ ಶ್ರೇಷ್ಠ ಗ್ರಂಥ ಗಳನ್ನು ಪ್ರಕಟಿಸಿ ಕನ್ನಡ ಸಾಹಿತ್ಯಕ್ಕೆ ಉಪಕಾರ ಮಾಡಿದ್ದಾರೆ. ಅವರು ಬರೆಯಬೇಕೆಂದು ಗುರುತು ಹಾಕಿಕೊಂಡಿರುವ ಗ್ರಂಥಗಳು ಬೇಗನೆ ಬೆಳಕು ಕಾಣುವಂತಾಗಬೇಕು. ಶಾಸ್ತ್ರಿಗಳ ಆಲೋಚನೆ ಬರಿ ಆಲೋಚನೆಯಾಗಿಯೇ ಉಳಿದರೆ, ಕನ್ನಡ ಸಾಹಿತ್ಯಕ್ಕೆ ಅಪಾರ ನಷ್ಟವಾಗುವದು. ಇತ್ತೀಚಿನ ಅವರ ಕವನ ಸಂಗ್ರಹ 'ದುಂಬಿ' ವೀರಶೈವ ಮಹಾಪುರುಷರು ಮತ್ತು ವೀರಶೈವ ಸಾಹಿತ್ಯ, ಇತಿಹಾಸ ಈ ಗ್ರಂಥಗಳು ಅವರ ಬಹು ಮುಖಪ್ರತಿ

ಭೆಗೆ ನಿದರ್ಶನವಾಗಿದೆ. ಶಾಸ್ತ್ರಿಗಳು ಉತ್ತಮ ವಾಗ್ಮಿಗಳೂ ಶ್ರೇಷ್ಠ ಪತ್ರಿಕೋದ್ಯಮಿಗಳೂ ಆಗಿರುವಂತೆ ಉತ್ತಮ ಇತಿಹಾಸ ಸಂಶೋಧಕರೂ ಆಗಿದ್ದಾರೆ. ಅವರು ಹಲವು ಶಿಲಾಶಾಸನಗಳು ಐತಿಹಾಸಿಕ ಸ್ಥಳಗಳನ್ನು ಪರಿಶೀಲಿಸಿದ್ದಾರೆ. ಡಾ|| ಫ್ಲೀಟ್, ಮಹಾ ಮಹೋಪಾಧ್ಯಾಯ ಆರ್. ನರಸಿಂಹಾಚಾರ್ಯರು ಮತ್ತು ರಾವಬಹಾದ್ದೂರ ವೀರೇಶ ಸಂತಲು ಮೊದಲಾದವರ ಸಂಶೋಧನೆಗೆ ನಿಲುಕದ ಹಲವಾರು ಸಂಗತಿಗಳನ್ನು ಕಂಡು ಹಿಡಿದು ಪ್ರಕಟಿಸಿದ್ದಾರೆ. ಸರ್ಕಾರದವರು ಅವರನ್ನು ಇತಿಹಾಸ ಸಂಶೋಧನಾ ಸಂಸ್ಥೆಗೆ ಸದಸ್ಯರನ್ನಾಗಿ ಮಾಡಿದ್ದಾರೆ. ಅವರ ಶರಣ ಸಾಹಿತ್ಯದಲ್ಲಿ ಅಂತಹ ಹಲವಾರು ಲೇಖನಗಳು ಪ್ರಕಟವಾಗಿ ವಿದ್ವಾಂಸರ ಮನ್ನಣೆಗೆ ಪಾತ್ರವಾಗಿವೆ. ಶ್ರೀಶೈಲ ಪೀಠಾಧೀಶರು ಇವರಿಗಿತ್ತಿರುವ ವಿಮರ್ಶನಾಚಾರ್ಯ ಎಂಬ ಬಿರುದು ಅರ್ಥಯುಕ್ತವೇ ಆಗಿದೆ.

ಶ್ರೀ ಶಾಸ್ತ್ರಿಗಳು ಸಾರ್ವಜನಿಕರಲ್ಲಿಯೇ ಅಲ್ಲದೆ ಸರಕಾರದಲ್ಲಿಯೂ ಗೌರವ ಪಡೆದುಕೊಂಡಿದ್ದಾರೆ. ಸರಕಾರದವರು ಸಂಸ್ಕೃತ ಪ್ರಚಾರಸಮಿತಿ, ಪಠ್ಯಪುಸ್ತಕ ಸಮಿತಿ, ಸಂಸ್ಕೃತ ಕಾಲೇಜ ಸಮಿತಿ, ಗ್ರಾಮಾಭ್ಯುದಯ, ಪತ್ರಿಕಾ ಸಂಪಾದಕ ಮಂಡಲ, ವೇದ ಮಹಾಪಾಠಶಾಲಾ ಸಮಿತಿ ಮೊದಲಾದವುಗಳಲ್ಲಿ ಅವರು ಸದಸ್ಯರಾಗಿರುವಂತೆ ಮಾಡಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಕೋಶ ಸಮಿತಿ, ಸಂಪಾದಕ ಮಂಡಲಿಯಲ್ಲಿ ಪ್ರಕಟನ ಸಂಪಾದಕ ಮಂಡಲಿಯಲ್ಲಿಯೂ ಇವರಿದ್ದಾರೆ. ಶಾಸ್ತ್ರಿಗಳ ಬಳಗ ದೊಡ್ಡದು. ನಮ್ಮ ದೇಶದಲ್ಲಿ ಪ್ರಖ್ಯಾತರಾದ ಸರ್, ಮಿರ್ಜಾ, ಇಸ್ಮಾಯಿಲ್. ಸರ್ ಎ. ಆರ್. ಮೊದಲಿಯಾರ್. ಶ್ರೀ. ಡಿ. ಪಿ. ಕರಮರಕರ. ಶ್ರೀ. ಬಿ. ಎನ್. ದಾತಾರ ಶ್ರೀ. ಎಂ. ಪಿ. ಪಾಟೀಲ. ಡಾ|| ಆರ. ನಾಗನಗೌಡ. ಶ್ರೀ. ಎಸ್, ನಿಜಲಿಂಗಪ್ಪ. ಶ್ರೀ. ಎಚ್. ಸಿದ್ದಯ್ಯ ಶ್ರೀ ಅಣ್ಣಾರಾವ ಗಣಮುಖಿ. ಶ್ರೀ. ಶಂಕರದೇವ. ವಿದ್ಯಾಲಕಾರ, ಶ್ರೀ ಪೂರ್ಣಯ್ಯ ಮೈಸೂರಿನ ಮಾನ್ಯಮಂತ್ರಿಗಳು, ನ್ಯಾಯಮೂರ್ತಿಗಳು, ಉನ್ನತಾಧಿಕಾರಿಗಳು ಕರ್ನಾಟಕದ ಪ್ರಮುಖರು ಮೊದಲಾದವರೆಲ್ಲರೂ ಶಾಸ್ತ್ರಿಗಳ ಸ್ನೇಹಬಳಗದವರಾಗಿದ್ದಾರೆ. ಇದನ್ನು ಗಮನಿಸಿದಾಗ ಅವರ ಆತ್ಮ ಶಕ್ತಿಯನ್ನು ನಾವು ತಿಳಿಯಬಹುದು.

ಶಾಸ್ತ್ರಿಗಳು ಭಾಷೆಗೆ, ನಾಡಿಗೆ, ನಾಡಿನ ಜನಕ್ಕೆ ಸಲ್ಲಿಸಿದ ಅಪಾರ ಸೇವೆಗೆ ಪ್ರತಿಫಲದೊರೆಯದೆ ಹೋಗಲಿಲ್ಲ. ನಾಡಿನ ಜನವಂತೂ ಎಂದೋ

ಅವರ ಪ್ರತಿಭೆಯನ್ನು ಕಂಡು ಮೆಚ್ಚಿ ನೂರಾರು ಮಾನಪತ್ರಗಳ ಮೂಲಕ ಸುವರ್ಣ ಪದಕಗಳ ಮೂಲಕ ಗೌರವಿಸಿದರು. ಅರಮನೆಯಿಂದಲೂ ಅವರ ಪಾಂಡಿತ್ಯಕ್ಕೆ ಮೆಚ್ಚಿಕೆ ದೊರೆಯಿತು. ಆಸ್ಥಾನ ವಿದ್ವಾನ ಪದವಿಯು ದೊರೆತ ಒಂದೆರಡು ವರ್ಷಗಳಲ್ಲಿ ಆಳುವ ಮಹಾಸ್ವಾಮಿಯವರಿಂದ ಅವ ರಿಗೆ ಪಂಡಿತರತ್ನಂ ಎಂಬ ಘನಕವು ಪ್ರಶಸ್ತಿ ಪ್ರಾಪ್ತವಾಯಿತು.

ಶಾಸ್ತ್ರಿಗಳ ಜೀವನದ ರಹಸ್ಯವೊಂದಿದೆ. ಅದೇ! ಸಾಹಸ! ಅವರಷ್ಟು ಸಾಹಸಿಗಳಾದವರನ್ನು ಕಾಣುವದು ಸುಲಭವಲ್ಲ. ಅವರ ದೃಷ್ಟಿಯಲ್ಲಿ ನಿರಾ ಶೆಯೆಂಬುದು ಇಲ್ಲದೇ ಇಲ್ಲ. ಅಖಂಡ ಸಾಹಸದಿಂದ ಬೇಕಾದ್ದನ್ನು ಸಾಧಿಸ ಬಹುದೆಂಬುದಕ್ಕೆ ಶ್ರೀ ಶಾಸ್ತ್ರಿಗಳ ಜೀವನವೇ ಒಂದು ಸಾಕ್ಷಿ. ಕರುನಾ ಡಿಗೆ ಅವರು ಸ್ಫೂರ್ತಿದಾಯಕರು.

ಇಷ್ಟೆಲ್ಲ ಕೀರ್ತಿ ಪ್ರತಿಷ್ಠೆ ಗಳಿಸಿದರೂ ಶಾಸ್ತ್ರಿಗಳ 'ಜೇಬು' ಇನ್ನೂ ಬರಿದು. ಕೀರ್ತಿದೊರೆತ ಹಾಗೆ ಅವರಿಗೆ ಹಣ ದೊರೆತಿಲ್ಲ. ಅವರ ಬಳಿ ಲಕ್ಷಾಂತರ ರೂಪಾಯಿ ಇದ್ದರೆ ನೋಡಬೇಕಾಗಿತ್ತು ಆದರೆ ಹಣ ಇಲ್ಲ ದಿದ್ದರೂ ಭಾರಿ ಭಾರಿ ಟೀಪಾರ್ಟಿ ಗೌರವ ಕೂಟಗಳನ್ನು ಏರ್ಪಾಡು ಮಾಡಿ ಕನ್ನಡದ ಕವಿಗಳನ್ನೂ, ಕಲೆಗಾರರನ್ನೂ ಸಂಗೀತಗಾರರನ್ನೂ ಸಾಧಿ ರಿದ್ದಾರೆ. ಸರ್ಕಾರ ಸನ್ಮಾನಗಳ ಹುಚ್ಚು ಶಾಸ್ತ್ರಿಗಳಿಗೆ ಬಹಳ.

ಶಾಸ್ತ್ರಿಗಳು ಹುಟ್ಟು ರಸಿಕರು. ಅದರೊಂದಿಗೆ ಒಂದೆರಡು ಮಾತನಾಡಿ ದರೆ ಈ ಮಾತು ಶಕ್ಯವೆಂದು ಭಾಸವಾಗುತ್ತದೆ. ಹಾಸ್ಯದ ಚಟಾಕಿಗಳನ್ನು ಹಾರಿಸಿ ತಾವೂ ನಕ್ಕು ಎಲ್ಲರನ್ನು ನಗಿಸುತ್ತಾರೆ. ಅದು ಅವರ ಸ್ವಭಾವ. ನಕ್ಕು ನಗಿಸುವದೇ ಸಾಹಿತ್ಯದ ಗುರಿ ಎಂದು ಒಡೆದು ಹೇಳಿದ್ದು ಬಿಟ್ಟು ಅದು ಶಾಸ್ತ್ರಿಗಳ ಅನುಷ್ಠಾನದಲ್ಲಿದೆ.

ಈಗ ಶಾಸ್ತ್ರಿಗಳ ಮುಂದೆ ಒಂದೇ ಒಂದು ಬೃಹದಾಸೆ ಇದೆ. ಕರ್ನಾ ಟಕ ಏಕೀಕರಣವಾಗಬೇಕು. ಅದನ್ನು ನಾವು ಕಣ್ಣಾರ ನೋಡಬೇಕು ಎಂಬುದು. ಏಕೀಕರಣಕ್ಕಾಗಿ ಅವರು ಪಟ್ಟಶ್ರಮ, ಮಾಡಿದ ಸಹಾಸ ಶಬ್ದಾ ತೀತ ವರ್ಣನಾತೀತ. ನಿಸ್ವಾರ್ಥ ಸೇವೆಗೆ ಪ್ರತಿಫಲ ಈ ಜಗತ್ತಿನಲ್ಲಿ ಪಡೆಯದೆ ಹೋಗುವುದಿಲ್ಲವಲ್ಲವೆ ? ಕರ್ನಾಟಕ ಚರಿತ್ರೆಯಲ್ಲಿ ಶಾಸ್ತ್ರಿಗಳಿಗೆ ಪ್ರತ್ಯೇಕ ಪುಟವುಂಟು.

ನಾನು ಶಾಸ್ತ್ರಿಗಳನ್ನು ಕಳೆದ ೧೩-೧೪ ವರ್ಷಗಳಿಂದ ಬಲ್ಲೆ. ನನ್ನವರು 'ವೆಂಕಣ್ಣ' ಎಂದು ಅಕ್ಕರೆಯಿಂದ ಕರೆಯುತ್ತಾರೆ. ಶಾಸ್ತ್ರಿಗಳು ಎಲ್ಲರನ್ನು ಗೌರವದಿಂದಲೇ ಮಾತನಾಡಿಸುತ್ತಾರೆ. ತಾವು ದೊಡ್ಡ ಮನುಷ್ಯರೆಂದು ಮೆರೆಯುವ ಮನೋಧರ್ಮ ಅವರಲ್ಲಿಲ್ಲ. ನಾವಂತೂ ಎಂದೂ ಕಂಡಿಲ್ಲ. ಅವರದು ವಿನಮ್ರ ಸೇವಾಮನೋಭಾವ. ಶಿವಶರಣರ ಕೈಂಕರ್ಯ ದಾಸೋಹ ಭಾವ ಅವರದು.

ಪಂಡಿತ ರತ್ನಂ ಶಿವಮೂರ್ತಿ ಶಾಸ್ತ್ರಿಗಳಂಥವರು ಕನ್ನಡನಾಡಿನಲ್ಲಿದ್ದಾರೆಂದು ಹೇಳುವದೇ ಒಂದು ಹೆಮ್ಮೆ. ಯಾವ ನಾಡಿನ ಸಂಪಾದಕರಿಗೂ ಅವರು ಕಡಿಮೆ ಇಲ್ಲ. ಅವರ ಸೇವೆ ನಮ್ಮ ನಾಡಿಗೆ, ಕನ್ನಡ ಪತ್ರಿಕೋದ್ಯಮಕ್ಕೆ ಚಿರಕಾಲ ದೊರೆಯಬೇಕು. ಅವರು ಅತಿ ಶೀಘ್ರದಲ್ಲೇ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಅಖಿಲ ಮೈಸೂರು ಪತ್ರಿಕೋದ್ಯೋಗಿಗಳ ಸಮ್ಮೇಳನದ ಅಧ್ಯಕ್ಷರಾಗಿ ಆರಿಸಲ್ಪಟ್ಟು ಮಹೋನ್ನತ ಸೇವೆಸಲ್ಲಿಸಲಿ ಎಂದು ದೇವರನ್ನು ಪ್ರಾರ್ಥಿಸುತ್ತೇನೆ.

ಕನ್ನಡನಾಡಿನಲ್ಲಿ ಅಸಂಖ್ಯ ಭಾಷಾಸೇವಕರಿದ್ದಾರೆ, ಶಾಸ್ತ್ರಿಗಳಂತಹವರು ಸಿಕ್ಕುವುದು ವಿರಳ. ತಾಯಿ ಸರಸ್ವತಿ ಅವರಿಗೆ ಸಕಲ ಸನ್ಮಂಗಳಗಳನ್ನಿತ್ತು ಕಾಪಾಡಲಿ ಎಂದು ಪ್ರಾರ್ಥಿಸುತ್ತೇವೆ.

# ದೇವನೊಬ್ಬ ನಾಮ ಹಲವು

(ಲೇಖಕ- ಬಿ, ಎಸ್, ಸಿದ್ಧರಾಮಣ್ಣನವರು)



ಹನ್ನೆರಡನೆ ಶತಮಾನದ ಮಧ್ಯಭಾಗದಲ್ಲಿ ಅಸಂಖ್ಯ ವಚನಕಾರರು ಕರ್ನಾಟಕದಲ್ಲಿ ಉದಯವಾದರು. ಅವರೆಗೆ ಕನ್ನಡ ವಾಙ್ಮಯದಲ್ಲಿ ಚಂಪು ಕಾವ್ಯದ ಪ್ರಾಬಲ್ಯವು ಅಧಿಕವಾಗಿತ್ತು, ಅವುಗಳು ಪಂಡಿತರಿಗೆ ಮಾತ್ರ ಸುಲಭಸಾಧ್ಯಗಳಾಗಿದ್ದವು. ಆದರೆ ಬಸವೇಶ್ವರ ಕಾಲದಲ್ಲಿ ಪಂಡಿತ ಪಾಮರ ಎನ್ನದೆ ಎಲ್ಲರಿಗೂ ಗ್ರಾಹ್ಯವಾದ ಶೈಲಿಯೊಂದು ಬಂದು ಹೊಸ ವಾಙ್ಮಯವು ಉಂಟಾಯಿತು. ಇದೇ ವಚನ ವಾಙ್ಮಯವಾಗಿದೆ. ಈ ವಾಙ್ಮಯ ಚಟುವಟಿಕೆಗಳನ್ನು ಪ್ರೋತ್ಸಾಹಿಸಿದವನು ಶ್ರೀ ಬಸವೇಶ್ವರನೇ ಇದ್ದಾನೆ.

ವಿಚಾರ ಸ್ವಾತಂತ್ರತೆಯು ಇಲ್ಲಿ ವಾಙ್ಮಯ ಅಭಿವೃದ್ಧಿಯಾಗುತ್ತದೆ. ಅಂಧಶ್ರದ್ಧಾ ಇದ್ದಲ್ಲಿ ಅದು ಬೆಳೆಯಲಾರದು. ಬಸವೇಶ್ವರನ ಕಾಲದಲ್ಲಿ ಅನೇಕ ವಚನಕಾರರು ಕಲ್ಯಾಣದಲ್ಲಿ ಪ್ರಸಿದ್ಧಿಗೆ ಬಂದರು. ಅವರೆಲ್ಲರೂ ಸ್ವತಂತ್ರ ವಿಚಾರವುಳ್ಳವರು. ಇದರಿಂದ ವಚನವಾಙ್ಮಯವು ನಾನಾವಿಧವಾಗಿ ಆ ಕಾಲದಲ್ಲಿ ಬೆಳೆಯಿತು. ಈ ವಾಙ್ಮಯದಲ್ಲಿ ನೀತಿ, ಭಕ್ತಿ, ಲಯೆ, ಆಚಾರ, ಜ್ಞಾನ, ಯೋಗ, ಮುಂತಾದ ಅನೇಕ ವಿಷಯಗಳಿವೆ. ಈ ಎಲ್ಲ ವಿಷಯಗಳ ಮೇಲೆ ವಿವಿಧ ಗ್ರಂಥಗಳು ಗದ್ಯ ಪದ್ಯಗಳು ವಚನ ವಾಙ್ಮಯದಲ್ಲಿ ಉಂಟಾದವು. ಬಸವೇಶ್ವರರು ತನ್ನ ನಡೆನುಡಿಗಳಿಂದ ಅನುಷ್ಠಾನದ ಮೂಲಕ ಹೇಸರಿಗೆ ತಕ್ಕಂತ, ದೇವನೊಬ್ಬ, ನಾಮಹಲವು ಎಂಬನುಡಿಯಲ್ಲಿ ಶಿವ ತತ್ವಗಳನ್ನೊಳಗೊಂಡು ಶಿವಭರಿತ ಜಗತ್ತೆ ಎಂಬುದಕ್ಕೆ ಜಗತ್ತಿನೊಳಗೆಲ್ಲ ವ್ಯಾಪಕನಾಗಿರುತ್ತಾನೆ.ಜಗತ್ತಿಯಲ್ಲವನ್ನು ತನ್ನೊಳು ಐಕ್ಯಮಾಡಿಕೊಂಡಿರುತ್ತಾನೆ ಹತ್ತಿಯಿಂದ ನೂಲನ್ನು ನೂತು ಬಣ್ಣವನ್ನು ಕಟ್ಟಿ, ದೋತ್ರ, ದುಪಟಿ, ಪಂಚೆ, ಶಲ್ಯ ಸೀರೆಕುಪ್ಪಸಗಳನ್ನು ಇನ್ನು ನಾನು ತರದ ಉಡುಪುಗಳನ್ನು ಮಾಡಿ ನಾನಾ ತರ ಹೆಸರಿನಿಂದ ಕರೆಯುತ್ತಾರೆ. ಅದನ್ನು ಅನುಷ್ಠಾನಕ್ಕೆ ತಂದಿರುವರು ಹೀಗೆಯೇ ಈ ಉಡುಪುಗಳನ್ನು ಬೇರೆ ಬೇರೆ ತರದ ಬಣ್ಣಗಳನ್ನು ತಟ್ಟಿ ಬೇರೆ ಬೇರೆ ಹೆಸರಿನಿಂದ ಕರೆದುದು. ಇದೆಲ್ಲವು ಒಂದೇ ಹತ್ತಿಯಿಂದ ಆಗಿ

ರುವಂತೆ ಈ ಜಗತ್ ಎಲ್ಲವು ಒಂದೇ ವಸ್ತುವಿನಿಂದ ನಿರ್ಮಿಸಲ್ಪಟ್ಟಿರುವ ದರಿಂದ ನಾವುಗಳು ದೇವರು ಒಬ್ಬನೇ ಇರುವನೆಂದು ತಿಳಿದುಕೊಳ್ಳಬಹುದು. ಈಗ ನಮ್ಮ ತಂದೆಯು ನನ್ನನ್ನು ಮಗನೆನ್ನುತ್ತಾನೆ. ಪುತ್ರನು (ಮಗನು) ತಂದೆಯನ್ನುತ್ತಾನೆ. ಅಜ್ಜನು ಮೊಮ್ಮಗನೆನ್ನುತ್ತಾನೆ. ಮೊಮ್ಮಗನು ಅಜ್ಜನೆನ್ನುತ್ತಾನೆ. ಅಣ್ಣನು ನನ್ನ ತಮ್ಮನೆನ್ನುತ್ತಾನೆ. ತಮ್ಮನು ಅಣ್ಣನೆನ್ನುತ್ತಾನೆ. ನಮ್ಮ ಭಾವನು ಬಾವಮೈದುನನೆನ್ನುತ್ತಾನೆ. ಬಾವಮೈದುನನು ಮಾವನೆನ್ನುತ್ತಾನೆ. ಅತ್ತಿಗೆಯು ನನ್ನ ಮೈದುನನೆನ್ನುತ್ತಾಳೆ. ನಾದಿನಿಯು ಮಾವನೆನ್ನುತ್ತಾಳೆ. ಅತ್ತೆಯು ಅಳಿಯನೆನ್ನುತ್ತಾಳೆ ಹೆಂಡತಿಯು ನನ್ನ ಗಂಡನೆನ್ನುತ್ತಾಳೆ. ನಾದುನಿಯು ತನ್ನ ಮಾವನೆನ್ನುತ್ತಾಳೆ ಹೀಗೆ ಒಬ್ಬರನು ಹತ್ತಾರು ಜನರು ಹತ್ತು ಹೆಸರಿನಿಂದ ಕರೆಯಲ್ಪಡುವಂತೆ ದೇವರನ್ನು ಸಹ ಹಲವು ನಾಮಗಳಿಂದ ಕರೆಯುತ್ತಾ ಪೂಜಿಸುತ್ತಾರೆ. ಆದರೆ ಶ್ರೀ ಬಸವಾದಿ ಪ್ರಮಥರು ಹೇಳಿರತಕ್ಕಂತೆ ದೇವನೊಬ್ಬ ನಾಮಹಲವು ಎಂಬ ಒಂದು ಶಬ್ದವು ವಿಶ್ವವನ್ನೇ (ಜಗತ್ತನ್ನೇ) ವ್ಯಾಪಿಸಿ ವಿಶ್ವಧರ್ಮಯೆನಿಸಿದೆ. ಇನ್ನು ವಿಶ್ವ ಆದರ್ಶ ಮೂರ್ತಿಗಳಾದ ಮಹಾತ್ಮರನೇಕರು ಹೇಳಿರುವ ತತ್ವವೇನೆಂದರೆ (ಅವನನ್ನು ಶಿವನೆಂದು ಶೈವರು, ಅವನನ್ನು ಹರಿಯೆಂದು ವೈಷ್ಣವರು, ಅವನನ್ನು ವೇದಾಂತಿಗಳು ಪರಬ್ರಹ್ಮನೆನ್ನುತಿಹರು. ಅವನರ್ಹತ್ ಜೈನರಿಗೆ ಮೇಣು, ಗಾಡ್ ನೆನಿಸಿಹನು ಕ್ರಿಸ್ತರಿಗೆ. ಮುಸ್ಲೀಮರಿಗೆ ಅಲ್ಲಾ, ಅಕ್ತಯರಿಗೆ ಪರಶಕ್ತಿಯೂ, ಆವಾವ ಲೋಕದಿ ಸರ್ವಮಂಗಳವು ಅವನಿಗೆ ಅರ್ಪಿತವು. ಸರ್ವೇಶ ರಕ್ಷಿಸು ಎಂದು ಒಬ್ಬ ಕವಿಯು ಹೇಳುತ್ತಾನೆ.
ನಮ್ಮನ ನವರತ

ಟೀಪು:— ಲೋಕದಲ್ಲಿ ದೇವರಪೂಜೆಯು ನಾನಾವಿಧವಾಗಿರುತ್ತದೆ ಇದು ಪೂಜೆಮಾಡುವವರ ಬೆಳವಣಿಗೆಯ ಅಂತಸ್ತಿಗೆ ತಕ್ಕಂತೆ ಇರುವುದು. ಕೇವಲ ಅಜ್ಞಾನಿಗಳಿಂದ ಸಾಮಾನ್ಯ ಮನುಷ್ಯರಿಂದ ಹಿಡಿದು ಪೂರ್ಣ ಜ್ಞಾನಿಗಳಾದ ಮಹಾಪುರುಷರವಿಗೂ ಪೂಜಾ ವಿಧಾನವು ಬೇರೆ ಬೇರೆಯಾಗಿದೆ. ತಿಳುವಳಿಕೆ ಇಲ್ಲದ ಸಾಮಾನ್ಯ ಜನರು ಮರಗಳ ತಳಭಾಗದಲ್ಲಿ ಬಂದು ಚಿಕ್ಕಗೂಡಿನಂತೆ ಮಣ್ಣುಗಲ್ಲುಕಟ್ಟಿ ಅದರಲ್ಲಿ ಒಂದ ಸಿಲೆಯನ್ನಿಟ್ಟು ಅದಕ್ಕೆ ಗ್ರಾಮದೇವತೆ ಮಾರಿ. ಮಸಣಿ ಮುಂತಾದ ಹೆಸರುಗಳನ್ನು ಇಟ್ಟುಕೊಂಡು ಕೋಳಿ ಕುರಿ ಮೊದಲಾದ ಪ್ರಾಣಿಗಳನ್ನು ಬಲಿ

ಯಾಗಿ ಕೊಡುತ್ತಾ ಅವರ ಯೋಗ್ಯತೆಗೆ ಅನುಸಾರವಾಗಿ ಪೂಜನಾ ವಂದ ನಾದಿಗಳನ್ನು ಮಾಡುತ್ತಿರುವವರು ಇದು ಅವರಿಗೆ ವಿಶೇಷವಾದ ಪೂಜೆಯು ॥೧॥

ಇವರಿಗಿಂತ ಉತ್ತಮರಾದವರು ಸುಂದರವಾದ ದೇವಸ್ಥಾನಗಳನ್ನು ಕಟ್ಟಿ ಸ್ತ್ರೀಪುರುಷ ವಿಗ್ರಹಗಳನ್ನು ಪ್ರತಿಷ್ಠೆಮಾಡಿ ಅವುಗಳನ್ನು ನಾನಾವಿಧ ವಾದ ವಸ್ತ್ರಾಭರಣಗಳಿಂದ ಅಲಂಕಾರ ಮಾಡಿ ತಮಗೆ ಹಿತವಾದ ಪದಾ ರ್ಥಗಳನ್ನು ಸಂಗ್ರಹಿಸಿ ಅವುಗಳಿಗೆ ಸಮರ್ಪಿಸುತ್ತಾ ನಿತ್ಯೋತ್ಸವ ರಥೋ ತ್ಸವ, ಮೊದಲಾದವುಗಳನ್ನು ಮಾಡಿಸುತ್ತಾ ಅವರಿಂದ ವಿಶೇಷವಾಗಿ ಆನಂ ದವನ್ನು ಹೊಂದುತ್ತಿರುವವರು. ಇದು ಕೆಲವರ ಸಾಂಪ್ರದಾಯಿಕ ಪೂಜೆಯಾ ಗಿರುವುದು. ॥೨॥

ಇನ್ನು ಕೆಲವರು ಪ್ರಾತಃಕಾಲದಲ್ಲಿ ಎದ್ದು ಸ್ನಾನಮಾಡಿ ಸಾಲಿಗ್ರಾಮ ಲಿಂಗಾದಿಗಳನ್ನು ಹೊರಗೆ ತೆಗೆದಿಟ್ಟು ಭಗವದ್ಗೀತೆ ಪಾರಾಯಣ ಮತ್ತು ಶಿವಪುರಾಣಗಳನ್ನು ಮತ್ತು ಅವರವರ ಆಚಾರ್ಯ ಉಪದೇಶಕ್ಕೆ ಅನುಸಾರ ವಾಗಿ ಗಂಧ ಪುಷ್ಪಾದಿಗಳಿಂದ ಎಲ್ಲವನ್ನು ಪೂಜಿಸಿ ಪುನಃ ಅವುಗಳನ್ನು ಸಂಪುಷ್ಟಗಳಲ್ಲಿ ಮುಚ್ಚಿಡುವರು. ಈ ರೀತಿ ನಿತ್ಯವೂ ನಡಿಸಿ ಅದರಿಂದ ಒಂದು ವಿಧವಾದ ಸಂತೋಷವನ್ನು ತೃಪ್ತಿಯನ್ನು ಹೊಂದುವರು. ಇದು ಕೆಲವರ ಅಭಿಪ್ರಾಯವಾಗಿದೆ. ॥೩॥

ಹೀಗೆಯೇ ಹರಿಸ್ಮರಣಮಾತ್ರದಿಂದಲೇ ಪಾಪಪರಿಹಾರ ವಾಗುವದಲ್ಲದೆ ಮೋಕ್ಷಸ್ಥಾನವನ್ನು ನೇರವಾಗಿ ಕೊನೆಗಾಣಿಸಬಹುದೆಂದು ತಿಳಿದು ಕೋಟಿ ಸಲ ರಾಮನಾಮವನ್ನು ಬರೆದು ಅದರಂತೆ ಜಪಮಾಡುತ್ತಾ ತಮ್ಮ ಕಾಲ ವನ್ನು ಕಳೆಯುತ್ತಿರುವರು ॥೪॥

ಮತ್ತೆ ಕೆಲವರು ಅಂದರೆ ಪ್ರಾಪಂಚಿಕ ಐಶ್ವರ್ಯವನ್ನು ಹೊಂದಿದ ಲೌಕೀಕರು ತಮಗೆ ವಿರಾಮವಿಲ್ಲವೆಂಬ ನೆವದಿಂದಲಾದರು ತಾವೇ ದೇವರ ಪೂಜೆಮಾಡುವದು ತಮ್ಮ ಗೌರವಕ್ಕೆ ಸಾಲದೆಂಬ ಭ್ರಾಂತಿಯಿಂದಲೂ ಮನೆ ಯಲ್ಲಿ ತಮ್ಮ ಹಿರಿಯರು ಪೂಜೆಮಾಡಿಕೊಂಡು ಬರುತ್ತಿದ್ದ ವಿಗ್ರಹಗಳನ್ನು ಇತರರ ಮೂಲಕ ಪುರೋಹಿತರು ಆಚಾರ್ಯರು ಮೊದಲಾದವರ ಮೂಲಕ ಅರ್ಚನಾದಿಗಳನ್ನು ಮಾಡಿಸುತ್ತಾ ತರುವಾಯ ಅವರು ಕೊಟ್ಟ ತೀರ್ಥ ವನ್ನು ಸೇವಿಸಿದ ಮಾತ್ರದಿಂದಲೇ ಪೂಜೆಯ ಫಲವು ತಮಗೆ ಉಂಟಾಗುವ ದೆಂದು ಭಾವಿಸುವರು ॥೫॥

ಮತ್ತೆ ಕೆಲವರು ತೀರ್ಥಯಾತ್ರೆಗಳನ್ನು ಮಹಾಕ್ಷೇತ್ರಗಳಲ್ಲಿರುವ ಪುರಾಥನ ದೇವಸ್ಥಾನಗಳಲ್ಲಿ ಅರ್ಜನೆಗಳನ್ನುಮಾಡಿಸಿ ದೇವರ ದರ್ಶನವನ್ನು ಮಾಡುವದರಿಂದ ತಮ್ಮ ಪರಲೋಕ ಸಾಧನವನ್ನುಂಟು ಮಾಡುವುದೆಂದು ಭಾವಿಸುವರು ॥೬॥

ಇತರ ಮತೀಯರಾದ ಮುಹಮದೀಯ ಕ್ರೈಸ್ತರು ಈಶ್ವರನು ನಿರಾಕಾರನೆಂದು ತಿಳಿದು ಅತಿ ಸುಂದರವಾದ ಶೂನ್ಯ ಮಂಡಿರಗಳನ್ನು ನಿರ್ಮಿಸಿ, ಎಲ್ಲರೂ ಸೇರಿ ತಮ್ಮ ಇಷ್ಟ ದೈವವನ್ನು ಧ್ಯಾನಮಾತ್ರದಿಂದ ಆರಾಧಿಸುತ್ತಿರುವರು. ಇದು ಅವರ ಮತವು. ॥೭॥

ಈ ರೀತಿ ಪುಜಾವಿಧಾನಗಳು ಚಿರಕಾಲದಿಂದ ನಮಲ್ಲಿ ನಾಟಿರುವದು ಎಲ್ಲರಿಗೂ ತಿಳಿದಂಶವೇ ಆಗಿರುತ್ತದೆ. ಇಷ್ಟಾದಾಗ್ಯೂ ಪೂಜೆಯ ಪರಾರ್ಥವೇನೆಂಬುದನ್ನು ಮಾತ್ರ ಅನೇಕರು ಸ್ಪಷ್ಟವಾಗಿ ತಿಳಿದಿರುವದಿಲ್ಲ. ಮತ್ತೆ ಅವರು ತಿಳಿದವರನ್ನು ವಿಚಾರಗಳನ್ನು ಎಂದೂ ಒಪ್ಪುವದಿಲ್ಲ. ನಿಜವಾದ ದೇವರಾರಾಧನೆಗೆ ನಿಯಮಿತವಾದ ಕಾಲದೇಶಗಳಲಿ ನಾವು ಬದುಕಿರಲು ಉಚ್ಛ್ವಾಸ ನಿಶ್ವಾಸಗಳು ಹೀಗೆ ಅವಶ್ಯವೋ ಹಾಗೆ ನಮ್ಮ ಪರಾರ್ಥ ಸಾಧನೆಗೆ ಪೂಜೆ ಎಂಬುದು ಯಾವಾಗಲೂ ಅವಶ್ಯಕವಾದುದು, ಸೃಷ್ಟಿ ಧರ್ಮಗಳಲ್ಲಿ (ಅಂದರೆ) ಭಗವಂತನ ಸಂಕಲ್ಪದಲ್ಲಿ ಗುರಿಇಟ್ಟು ಅಧರ್ಮಗಳಿಗೆ ಭಂಗಬಾರದಂತೆ ಪ್ರತಿಯೊಬ್ಬರೂ ತನ್ನ ಯೋಜನೆ ಕೋರಿಕೆ ಇಚ್ಛೆಗಳು ಮಾಡತಕ್ಕ ಕಾರ್ಯಗಳು ಪರಿಶುದ್ಧವನ್ನಾಗಿ ಇಟ್ಟುಕೊಂಡು ಎಲ್ಲರ ಹಿತಕೋಸ್ಕರವೇ ನಾನಿರುವದು ಎಂದು ತಿಳಿದು ಅದರಂತೆ ನಡೆಯಲು ಪ್ರಯತ್ನಿಸುವದೇ ಈಶ್ವರನಿಗೆ ಅತ್ಯಂತ ಹಿತವಾದ ಪೂಜೆ ಎಂದು ಭಾವಿಸಿದರೆ ತಪ್ಪಾಗಲಾರದು. ಸೂರ್ಯನು ಉದಯವಾದಾಗಿನಿಂದಲೂ ಅಸ್ತಂಗತನಾಗುವವರೆಗೂ ತನ್ನ ಉಷ್ಣವನ್ನು ತೇಜಸ್ಸನ್ನು ಲೋಕದಲ್ಲೆಲ್ಲ ಹರಡಿ ಸಮಸ್ತ ಜೀವರಾಶಿಗಳಿಗೂ ಸಸ್ಯಗಳಿಗೂ ಪ್ರಾಣವನ್ನು ಕೊಟ್ಟು ಅವುಗಳು ಚೆನ್ನಾಗಿ ಬೆಳೆಯುವಂತೆ ಮಾಡುತ್ತಾನಲ್ಲವೆ? ಇವನು ಮಾಡುವ ಕಾರ್ಯವು ಪರಾರ್ಥರಹಿತವಾದದ್ದು. ಭಗವಂತನ ಸಂಕಲ್ಪವನ್ನು ಅನುಸರಿಸಿ ಮಾಡುವಂಥಾದ್ದು. ಆದುದರಿಂದ ಸೂರ್ಯನು ಈ ಕಾರ್ಯವು ದೇವರ ಪೂಜೆಯಾಗಿರುವದು ಎಂದು ಊಹಿಸಬಹುದು. ನಮಗೆ ತಿಳಿಯದೆ ಕೋಪೋದ್ರೇಕವಾದಾಗ ಇಂತಹ ಕೋಪವನ್ನು ಅಣಕಿಸಿ ಅದನ್ನು ನಾಶ ಮಾಡುವದಕ್ಕೂ ನಮ್ಮಲ್ಲಿ ಶಾಂತ ಗುಣವನ್ನು ಎಬ್ಬಿಸಿಕೊಳ್ಳುವದಕ್ಕೂ ಪ್ರಯತ್ನಿಸುತ್ತಿರುವದು ಒಂದು ವಿಧವಾದ ಪೂಜೆ. ಪರವು ನಮ್ಮನ್ನು ನಿಂದಿ

ಸುತ್ತಿರುವಾಗ ಆಗ್ರಹಗೊಳ್ಳದೆ ಅವರು ಹಾಗೆ ದೋಷಿಸಲು ನಮ್ಮಲ್ಲಿ ಯಾವ ದೋಷಗಳಿರಬಹುದೆಂದು ಹುಡಿಕಿ ಅಂತಹ ದೋಷಗಳಿದ್ದಲ್ಲಿ ಅವುಗಳನ್ನು ಸರಿಪಡಿಸಿಕೊಳ್ಳುವದು ಒಂದು ವಿಧವಾದ ಪೂಜೆ. ಪರರ ಸೊತ್ತುಗಳನ್ನು ನಮ್ಮ ಮನಸ್ಸು ಆಕರ್ಷಿಸಲ್ಪಟ್ಟಾಗ ನಿವಾರಿಸಿ ನಿರೋಧಿಸುತ್ತಿರುವದು ಒಂದು ಪೂಜೆ. ಪರಸ್ತ್ರೀಯರನ್ನು ನೋಡಿದಾಗ ಮೋಹಿಸುತ್ತಾ ಅವರನ್ನು ಹಿಂಬಾಲಿಸುತ್ತಿರುವ ಮನುಷ್ಯನನ್ನು ಕಟ್ಟಿ ಬಿಗಿದು ನಿರೋಧಿಸತಕ್ಕದೊಂದು ಪೂಜೆ. ಅಧಿಕಾರ ಬಂದಾಗ ತಮ್ಮ ಪ್ರತಾಪಗಳನ್ನೇ ದೊಡ್ಡದಾಗಿ ಎಣಿಸಿ ಸ್ವಪ್ರಯೋಜನಕ್ಕೆ ಮನಸ್ಸನ್ನು ಕೊಡದೆ ತನಗೆ ಕೀಳಪಟ್ಟವರನ್ನು ತನ್ನಂತೆಯೇ ಭಾವಿಸುತ್ತಾ ತನಗೆ ಕೊಟ್ಟಿರುವ ಪ್ರತಿಭಾಕಾರ್ಯವನ್ನು ನಿರ್ವಂಚನೆಯಿಂದ ನಿರ್ವಹಿಸುವದು ಒಂದು ಪೂಜೆ. (ಹೀನಜಾತಿಯವರನ್ನು ಸಂಕೇತಗಳಿಗಾಗಿ ತಿರಸ್ಕರಿಸದೆ, ಅವರನ್ನು ವೃದ್ಧಿಗೆ ತರುವುದಕೋಸ್ಕರವಾಗಿ ತನ್ನ ಕೈಯಲ್ಲಾದ ಸಹಾಯವನ್ನು ಮಾಡುವದು ಒಂದು ಪೂಜೆ.) ಸ್ತ್ರೀಯರು ಶೂದ್ರರು,ಆತ್ಮೋದ್ಧಾರಕ್ಕೆ ಅನರ್ಹರೆಂದು ದೂಷಿಸದೆ ಅವರುಗಳಿಗೆ ವಿವೇಕವನ್ನುಂಟುಮಾಡಿ ಅವರ ಮನೋವೃತ್ತಿಯನ್ನು ವಿಕಾಸಗೊಳಿಸಲು ಪ್ರಯತ್ನಿಸುವದು ಒಂದುಪೂಜೆ ಕಾರಣಾಂತರಗಳಿಂದ ಮತ್ಸರಾದಿಗಳು ನಮ್ಮ ಮನಸನ್ನು ಆ ಕಾರಣದಿಂದ ಜನ ಸಂಘಕ್ಕೇ ಕೇಡುಬರುತ್ತಿರುವವನ್ನು ತಿಳಿದು ಅದನ್ನು ಆಗ ತಿದ್ದಿ ಸರಿಮಾಡಿಕೊಳ್ಳುವದೊಂದು ಪೂಜೆ. ಸಾಂಕ್ರಮಿಕ ರೋಗಗಳು ಗ್ರಾಮುಗಳಲ್ಲೂ ಪಟ್ಟಣಗಳಲ್ಲೂ ತಲೆದೋರಿ ಹಾವಳಿಯನ್ನು ನಡೆಸುತ್ತಿರುವ ವೇಳೆ ಅವುಗಳ ನಿವಾರಣೆಗಾಗಿ ನಾವು ಮಾಡುವ ಅತ್ಯಲ್ಪವಾದ ಸಹಾಯವು ಒಂದೊಂದು ಪೂಜೆ. ಗ್ರಾಮುಗಳಲ್ಲಿ ಕ್ಷಕ್ಷಿಗಳಿಂದ ಪರಸ್ಪರ ವೈರವು ಬೆಳೆದು ಕೆಡಕು ಉಂಟಾಗುತ್ತಿರುವಾಗ ಸಮಯವನ್ನು ಅರಿತು ಅದನ್ನು ಅಣಕಿಸಿ ಪರಸ್ಪರ ಸ್ನೇಹವುಂಟುಮಾಡುವದೊಂದು ಪೂಜೆ. ವ್ಯಾಪಾರಗಳಲ್ಲಿ ಅಧಿಕ ಲಾಭಕ್ಕೆ ಆಶೆ ಪಡದೆ, ಸ್ವಲ್ಪಲಾಭದಲ್ಲಿ ತೃಪ್ತರಾಗಿ ತನ್ನೂರಿಕ್ಕೆ ಜನಗಳಿಗೆ ಉಪಕಾರಮಾಡುವದೊಂದು ಪೂಜೆ. ಏನನು ತಿಳಿಯದ ಒಕ್ಕಲುಗಳು ವ್ಯರ್ಥ ವ್ಯವಹಾರವನ್ನು ಬೆಳಿಸಿ ನ್ಯಾಯಸ್ಥಾನಗಳಿಗೆ ಹೋಗಬೇಕೆಂದು ನ್ಯಾಯವಾದಿಗಳಲ್ಲಿ ಸೇರಿದಾಗ ಸುಲಭಾಕಾಂಕ್ಷೆಯನ್ನು ಅಡಗಿಸಿ ಅವರಿಗೆ ಹಿತವನ್ನು ಉಂಟುಮಾಡಲು ಪ್ರಯತ್ನಿಸುವದು ಒಂದು ಪೂಜೆ. ಈ ರೀತಿ ಪೂರ್ಣಜ್ಞಾನಿಗಳಾದ ಮಹಾಪುರುಷರು ಈ ರೀತಿಯ ಪೂಜೆಯ ಫಲಗಳನ್ನು ಅಪ್ಪಣೆ

ಮಾಡಿದ್ದಾರೆ. (ಇಲ್ಲಿಗೆ ಹನ್ನೆರಡನೇ ಶತಮಾನದಲ್ಲಿ ಆಗಿ ಹೋದ ವಚನಕಾರರಲ್ಲಿ ಒಬ್ಬರು ಹೇಗೆ ಹೇಳಿದ್ದಾರೆ:--

**ವಚನ:**- ಅಯ್ಯಾ ನಿಮಗೆ ಪತ್ರಪುಷ್ಪದಲ್ಲಿ ಪೂಜೆಮಾಡುತಿದ್ದರೇನು ಸರ್ವೇಂದ್ರಿಯಂಗಳು ಸೋಕಿದೆವಲ್ಲಾ, ನಿಮ್ಮ ಪೂಜೆಯಾಗಿಮಾಡಿದೆನ್ನ ಅಕ್ಕರ ನಿಮ್ಮ ನೆನೆಯುತ್ತಿದ್ದರೇನು? ನೆನಿಸಿ ಮನದಲ್ಲಿ ನಿಮ್ಮ ನೆಲೆಗೊಳಿಸಿ ಮನ ನಿಮ್ಮಲ್ಲಿ ವಿಲಯವಾಗದನ್ನ ಅಕ್ಕರ ಅಯ್ಯ ನಿಮಗೆ ಸಕಲ ಸುಯಿಧಾನ ಅರ್ಪಿಸುತ್ತಿದ್ದಾರೇನು ಅರ್ಪಣದೊಳಗಾತನು ನಿಮ್ಮಲ್ಲಿ ನಿಮ್ಮೊಳಕ್ಕರಗದನ್ನ? ಆದಕಾರಣ ಗುಣವಿಡಿದು ಲಿಂಗವಮುಟ್ಟಿ ಪೂಜೆಯುಮಾಡಿದವರೆಲ್ಲ ನಿಮಗೆ ಮುನ್ನವೇ ದೂರವಾದರು. ನಾನಿದನರಿದು ಅವಶ್ಯ ಲಿಂಗಾರ್ಚನೆಯಮಾಡಿ ನಿಮ್ಮೊಳಗಾದೆನಯ್ಯ ನಿಜಗುರು ಸ್ವತಂತ್ರ ಶಿದ್ದಲಿಂಗೇಶ್ವಲಾಗಾ ॥ ಬಸವೇಶ್ವರರೂ ಕೂಡ ಹೀಗೆ ಹೇಳಿದ್ದಾರೆ. ತನು ನಿಮ್ಮದೆಂದಬಳಿಕ ಎನಗೆ ಬೇರೆ ತನುವಿಲ್ಲ. ಮನ ನಿಮ್ಮದೆಂದ ಬಳಿಕ ಎನಗೆ ಬೇರೆ ಮನವಿಲ್ಲ. ಧನ ನಿಮ್ಮದೆಂದ ಬಳಿಕ ಎನಗೆ ಬೇರೆ ಧನವಿಲ್ಲ ಇಂತೀತ್ರಿವಿಧವು ನಿಮ್ಮಿಂದರಿದ ಬಳಿಕ ಎನಗೆ ಬೇರೆ ವಿಚಾರವುಂಟೆ ಕೂಡಲಸಂಗಮದೇವ ಎಂದು ಹೇಳಿದ್ದಾರೆ. ಅಲ್ಲಮ ಪ್ರಭು ವೈರಾಗ್ಯ ಆಚಾರ್ಯರು ಹೀಗೆ ಹೇಳಿದ್ದಾರೆ.

ಗಗನವೇ ಗುಂಡಿಗೆ ಆಕಾಶವೇ ಅಗ್ಗವಣಿ ಚಂದ್ರ ಸೂರ್ಯರಿಬ್ಬರೂ ಪುತ್ರ ಬ್ರಹ್ಮನೇ ಧೂಪ, ವಿಷ್ಣುವೇದೀಪ, ರುದ್ರನೋಗರ ಸುಹಿದಾನ ನೋಡಾ ಗುಹೇಶ್ವರಲಿಂಗಕ್ಕೆ ಪೂಜೆ ನೋಡ. ಪರಮಾತ್ಮನ ಪ್ರೇಮದಿಂದ ಮೈಮರೆಯುವದರಲ್ಲಿಯೇ ಭಕ್ತಿ ರಹಸ್ಯವಿರುವುದು. ಅಂತ ಭಕ್ತಿಯು ಸ್ಥಿರಚಿರವಾಗಿರಬೇಕು. ಅದೇ ನಿಷ್ಠೆಯೆನಿಸುವದು. ಪ್ರೇಮವೇ ಕೊಟ್ಟು ಕೊಳ್ಳುವ ವಸ್ತು. ನೀವು ದೇವರನ್ನು ಪ್ರೀತಿಸಿದರೆ ದೇವರು ನಿಮ್ಮನ್ನು ಪ್ರೀತಿಸುವನು. ಆದರೆ ಅವನು ಪ್ರೀತಿಸುವ ಮೊದಲು ಅವನು ಭಕ್ತನನ್ನು ಪರೀಕ್ಷಿಸುವನು. ನಮ್ಮ ಭಕ್ತಿಯು ಅನನ್ಯತೆ ದೃಢತೆ ಇವುಗಳನ್ನೇ ನೋಡುವನು. ಏಕಪತ್ನಿ ಪುರುಷನಂತೆ ಕಣ್ಣುಮನಗಳು ಅತಿಕಾಲ ಅಳುಕದಿರಬೇಕು ಈ ರೀತಿ ಅರ್ಧ ಕ್ಷಣವಾದರು ಪರಮಾತ್ಮನನ್ನು ನೆನೆಸಿದರೆ ಅದು ಫಲಕೊಡುವದು. ಆದರೆ ಆ ಭಕ್ತನು ಈ ಫಲಗಳನ್ನು ಬೇಡುವವನಲ್ಲ ಅವನ ಕೇವಲ ಪ್ರೇಮ ಅಭಿಷ್ಟವು. ಭಕ್ತಿಯು ಅವನ ಸಹಜ ಸ್ವಬಾವವು. ದೇವರನ್ನು ಒಲಿಸುವ ವಿಚಾರದಲ್ಲಿ ಶ್ರೀ ಬಸವಣ್ಣನವರು ನಾದಪ್ರಿಯ ಶಿವನೆಂಬರು, ನಾದಪ್ರಿಯ ಶಿವನಲ್ಲವಯ್ಯಾ ವೇದಪ್ರಿಯ ಶಿವನೆಂಬರು. ವೇದಪ್ರಿಯ ಶಿವನಲ್ಲ ವೈಯ್ಯ

ನಾದವಮಾಡಿದ ರಾವಳಂಗೆ ಅದೆ ಆಯುಷ್ಯವಾಯಿತು. ವೇದವನು ಓದಿದಬ್ರಹ್ಮ ನ ಶಿರಹೋಯಿತ್ತು ನಾದ ಪ್ರಿಯನೂ ಅಲ್ಲ ವೇದಪ್ರಿಯನೂ ಅಲ್ಲ ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವಾ ಈ ರೀತಿ ಬಸವಣ್ಣನವರು ಅಪ್ಪಣೆಮಾಡಿದ್ದಾರೆ.

## ಭಕ್ತಿ

ಜಗತ್ತಿನಲ್ಲಿ ಮನುಷ್ಯನು ಮೋಕ್ಷವನ್ನು ಹೊಂದಬೇಕಾದರೆ ಶ್ರೇಷ್ಠ ವಾದ ಅತ್ಯಂತ ಸುಲಭವಾದ ಉಪಾಯವೆಂದರೆ ಭಕ್ತಿಮಾರ್ಗ ಒಂದಾಗಿ ರುತ್ತದೆ. ಮಾನವನು ಭಕ್ತಿಯನು ಮಾಡಬೇಕಾದರೆ ಅದಕ್ಕೇನಾದರೂ ಖರ್ಚು ಮತ್ತು ಎರಡನೆಯವರ ಸಹಾಯ ಹಣ ಮುಂತಾದವು ಏನೂ ಬೇಡ. ತನ್ನ ಮನಸ್ಸು ತನ್ನ ಆಧೀನದಲ್ಲಿಟ್ಟು ಕೊಳ್ಳುವುದು. ಬೇರೆಯು ವರ ಆಧೀನದಲ್ಲಿ ಏನೂ ಇರುವದಿಲ್ಲ. ಆದ್ದರಿಂದ ತನ್ನ ಚಂಚಲವಾದ ಮನಸ್ಸನ್ನು ತನ್ನ ಹಿಡಿತದಲ್ಲಿ ಇಡಲು ತಾನೇ ಕಾರಣನು. ಮೊದಲು ಮಾನವನು ಮನಸ್ಸನ್ನು ಶುದ್ಧವಾಗಿ ಅತ್ಯಂತ ಪವಿತ್ರವಾಗಿ ಇಟ್ಟು ಕೊಳ್ಳ ತಕ್ಕದ್ದು ಮನಸ್ಸು ಶುದ್ಧವಾದರೆ ಆತ್ಮ ಶುದ್ಧಿಯಾಗುವದು. ಭಕ್ತಿಗೆ ಮೂಲ ಕಾರಣವಾದುದು ಮನಸ್ಸೇ ಇರುವದು. ನಾವು ಶುದ್ಧವಾದ ಮನಸ್ಸಿನಿಂದ ಆ ಪರಮಾತ್ಮನ ನಾಮಸ್ಮರಣೆಯನ್ನು ಮನಸ್ಸಿನಿಂದ ಮಾಡಿದರೆ ಪರಮಾ ತ್ಮನು ನಮ್ಮಗಳ ಮೇಲೆ ಕೃಪಾಶೀರ್ವಾದ ಮಾಡುವನು. ಆ ಪರಶಿವನ ನಾಮಸ್ಮರಣೆ ಮಾಡಲು ವೇದಘೋಷಮಾಡಲು ಕಾರಣವಿಲ್ಲ. ಒರೆ ಶಿವ ಶಿವ ಎಂಬ ಎರಡಕ್ಷರದಿಂದ ಕೂಡಿದ ಶುದ್ಧವಾದ ಪವಿತ್ರವಾದ ನಾಮ ಸ್ಮರಣೆಯನ್ನು ಮಾಡಿದರೆ ಸಾಕು. ಕರುಣಾಳುವಾದ ದಯಾಘನವಾದ ಶಿವ ನಿಗೆ ನಾವು ಮಾಡಿದ ನಾಮಸ್ಮರಣೆಯು ಮುಟ್ಟುವುದು. ಎಷ್ಟು ಅಸಂ ಖ್ಯಾತ ನಾಮಗಳಿಂದ ಕೂಡಿದ ಪರಮಶಿವನ ಸಹಸ್ರಾರು ನಾಮಗಳಿಂದ ಎಚ್ಚರಿಸಿದರೂ ಅಷ್ಟೇ ಇರುವುದು. ಎಲ್ಲವೂ ಆ ಪರಮಾತ್ಮನ ನಾಮವೇ ಆಗಿರುವುದು. ಆದರೆ ನಾವು ನಾಮ ಸ್ಮರಣೆಯನ್ನು ಮಾಡಬೇಕಾದರೆ ಪೂಜಾದಿ ಕರ್ಮಗಳನ್ನು ಮಾಡಬೇಕಾದರೆ ಮನಸ್ಸಿನಿಂದ ಮಾಡಬೇಕು. ನಮಗೆ ಆ ಪರಶಿವನನಲ್ಲಿ ದೃಢವಾದ ನಂಬಿಗೆ ಇರಬೇಕು. ನಮಗೆ ಏನಾದರೂ ಕಷ್ಟ ಗಳು ಬಂದರೆ ಅಸಂತೋಷ ಪಡುವದು ಮತ್ತು ಆತನ ಮೇಲೆ ಸಿಟ್ಟಾ ಗುವದು. ಇದರಂತೆ ಸುಖಾನಂದಗಳು ಬಂದರೆ ಹಿಗ್ಗಿ ಸಂತೋಷದಿಂದ ಪರಶಿವನನ್ನು ಪೂಜಿಸುವುದು ಹೀಗೆ ಮಾಡಬಾರದು. ಆತನು ಕಷ್ಟಗಳನ್ನು

ಒಡಗಿಸಿದರೆ ನಮಗೆ ಹಿತದಸಲುವಾಗಿ ಮತ್ತು ಸುಖಾನಂದಗಳನ್ನು ಒದಗಿದರೆ ನಮ್ಮಗಳ ಹಿತದ ಸಲುವಾಗಿ ಎಂದು ಮನದಲ್ಲಿ ಅಸಂತೋಷವನ್ನು ಹೊಂದದೆ ಭಾವಿಸುವುದು. ನಾವು ಹೀಗೆ ಭಾವಿಸಿ ದೃಢವಾದ ಮನಸ್ಸಿಂದ ಧ್ಯಾನಮಾಡುವುದು ಆ ದಯಾಳುಗಳ ಮನಸ್ಸನ್ನು ಪರೀಕ್ಷಿಸುವುದಗೋಸ್ಕರ ಈ ರೀತಿಮಾಡುವನು. ಆದ್ದರಿಂದ ಆತನ ಭಕ್ತಿ ಪರೀಕ್ಷೆಯು ಯಾವರೀತಿ ಇರುವುದು? ಎಂಬುದರ ಬಗ್ಗೆ ನಮ್ಮ ವೀರಶೈವರಲ್ಲಿ ಈಗ್ಗೆ ಎಂಟುನೂರು ವರ್ಷಗಳ ಹಿಂದೆ ಆಗಿಹೋದ ಆ ಮಹಾನುಭಾವರಾದ ಭಕ್ತಿಭಾಂಡಾರಿ ಬಸವಣ್ಣನವರು ತಮ್ಮ ಸರಳವಾದ ಶೈಲಿಯಲ್ಲಿ ಒಂದುವಚನಗಳನ್ನು ಹೀಗೆ ಹೇಳಿರುವರು. ವಚನ:- ತನುವನ್ನಲ್ಲಾಡಿಸಿ ನೋಡುವೆ. ಮನವನ್ನಲ್ಲಾಡಿಸಿ ನೋಡುವೆ. ಧನವನಲ್ಲಾಡಿಸಿನೋಡುವೆ ನೀನು. ಇದಕ್ಕೆಲ್ಲ ಅಂಜದಿದ್ದರೆ ಭಕ್ತಿಕಂಪಿತ ಕೂಡಲಸಂಗಮದೇವಾ ಎಂದು ಅಪ್ಪಣೆಮಾಡಿದ್ದಾರೆ. ದೇವರ ದರ್ಶನವು ದೃಢ ಭಕ್ತನಿಂದಲೇ ಸಾಧ್ಯ. ಉಳಿದ ಯಾವ ಭಕ್ತಿಯಿಂದಲು ಶಕ್ಯ ವಿಲ್ಲ. ಈ ಜಗತ್ತಿನಲ್ಲಿ ಎಲ್ಲಿ ಎಷ್ಟೆ ವಿಷಯಗಳಿದ್ದರು ಭಕ್ತಿ ಒಂದು ಇರದಿದ್ದರೆ ಸಿಕ್ಕುವನೇ ಮನುಷ್ಯರಲ್ಲಿ ಶ್ರೇಷ್ಠ, ಎಷ್ಟೆ ಶಿವಶರಣರು ಅತಿ ಬಡವರು ಕಂಗಾಲಸ್ಥಿತಿಯುವರು ಇದ್ದರೂ ಇವರೇ ಹೆಚ್ಚಿನವರೆಂದು ಶ್ರೀ ಬಸವಣ್ಣನವರು ಎಷ್ಟೋ ಸಲ ಹೇಳಿದ್ದಾರೆ. ಎನಗಿಂತ ಕಿರಿಯರಿಲ್ಲ. ಶಿವ ಭಕ್ತರಿಗಿಂತ ಹಿರಿಯರಿಲ್ಲ. ನಿಮ್ಮ ಪಾದ ಸಾಕ್ಷಿ ಎನ್ನ ಮನಸಾಕ್ಷಿ ಕೂಡಲಸಂಗಮದೇವ ಎನಗಿದೆ ದಿಯ್ಯ. ಅಯ್ಯ ನಿಮ್ಮ ಶರಣಾರಚಃಮ್ಮಾವುಗೆಗೆ ಹೃಥ್ವಿಸಮಬಾರದು. ಸರಿಯಲ್ಲ ನೋಡಾ ಕೂಡಲಸಂಗಮದೇವ ನಿಮ್ಮ ಶರಣರಚಮ್ಮಾವಿಗೆಗೆ. ಶರಣರ ಮನೆಬಡವಾದರು ಮನಘನ ಸಂಪನ್ನವಿಹುದು ಶರಣರೆಂದರೆ ಸರ್ವವನ್ನು ಸರ್ವಸ್ವವನ್ನು ದೇವನಿಗಾಗಿ ತ್ಯಾಗ ಮಾಡುವದಲ್ಲದೆ. ಸರ್ವವನ್ನು ಕೂಡ ದೇವನಿಗೂ ಮಾಡುವಲ್ಲಿ ಸದಾ ಸಿದ್ಧವಿರುವರೆಂದು ಅರ್ಥ ಇವರೇ ಬಸವನ ಭಕ್ತರು. ಬೇಡರ ಕನ್ನಪ್ಪ ವಾಲ್ಮಿಕಿ ವೊದಲಾದವರು. ತಮ್ಮ ಎಲ್ಲ ಧರ್ಮಗಳನ್ನು ಬಿಟ್ಟು ಪರಮಾತ್ಮನಿಗೆ ಶರಣುಹೋದರು ಹೆಚ್ಚು ಪದವಿಗೆ ಹೋಗಿ ದೇವಮಾನವರಾಗಿ ಮುಕ್ತರಾದರು. ಅದಕ್ಕೆ ಭಕ್ತಿಮಾರ್ಗವು ಹೆಚ್ಚಿನದೆಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಜಗತ್ತಿನ ಕಣ್ಣುಗಳೇ ಭಕ್ತರು. ಭಕ್ತಿಯೋಗವನ್ನು ಸಾಧಿಸಿ ಶ್ರೀ ಬಸವಣ್ಣನವರು ಭಕ್ತಿಭಾಂಡಾರ ಹೂಸಿಸಿದ್ದಾರೆ ಮನದಲ್ಲಿ ಸಾಲದಕ್ಕೆ ಒಂದ ನಾಡ ಹೋಗಿ ಒಂಬತ್ತು ನಾಡುವ ಡಂಭಕರ ಮೆಚ್ಚಿ ಕೂಡಲ

ಸಂಗನುದೇನ. ಈ ಪ್ರಕಾರವಾಗಿ ಅನೇಕ ವಚನಗಳನ್ನು ಡಾಂಬಿಕ ಭಕ್ತಿಯು ದುಷ್ಪರಿಣಾಮವಾಗಿ ಸರಸಾಗಿ ಆಡಿದ್ದಾರೆ. ಕಾರಣ ನಿಜವಾದ ಭಕ್ತರಾದಲ್ಲಿ ಸರ್ವರಲ್ಲಿ ಸುಖ.

---

# ಶಿವಶರಣೆ ಲಕ್ಕಮ್ಮ

—( ಲೇಖಕರು:- ಶ್ರೀ ಜಿ. ಎಂ, ಕಟಗೇರಿ. ಮು॥ ಬೇಲೂರ )—



" ಸತಿಪತಿಗಳೊಂದಾದ ಭಕ್ತಿ
ಹಿತವಾಗಿಪ್ಪುದು ಶಿವಂಗ
ಸತಿಪತಿಗಳೊಂದಾಗದ ಭಕ್ತಿ
ಅಮೃತದೊಳು ವಿಷಬೆರೆದಂತೆ ಕಾಣಾ ರಾಮನಾಥ "

ಶಿವನ ಪ್ರೀತಿಯನ್ನು ಸಂಪಾದಿಸಬೇಕಾದರೆ ಸತಿಪತಿಗಳ ಭಕ್ತಿ ಸಮರಸವಾಗಬೇಕು. ಇಲ್ಲದಿದ್ದರೆ ಹಾಲಿನಲ್ಲಿ ಉಪ್ಪು ಬೆರೆಸಿದಂತೆ ಹಾನಿಕರವಾದುದು.

ಸಂಸಾರವು ಹಲವು ಎಡರು-ತೊಡರುಗಳಿಂದ ಕೂಡಿದೆ. ಇಂಥ ಕಷ್ಟನಷ್ಟಗಳಿಗೆ ಎದೆಗುಂದದೆ ಮಾನವನು ಮುನ್ನುಗ್ಗಬೇಕಾದರೆ ಆದರ್ಶ ವ್ಯಕ್ತಿಗಳ ಜೀವನ ಅಭ್ಯಾಸವು ಅತ್ಯವಶ್ಯ. ಅವರ ಆಚರಣೆಯ ಅನುಕರಣವು ಮುಖ್ಯವು. ನಮ್ಮೀ ಕನ್ನಡ ನಾಡಿನಲ್ಲಿ ಅಲ್ಲಮಪ್ರಭು. ಬಸವಣ್ಣ, ಚನ್ನಬಸವಣ್ಣ, ನುಲಿಯ ಚಂದಯ್ಯ, ಮಡಿವಾಳ ಮಾಚಿತಂದೆ, ದೇವರ ದಾಸಿಮಯ್ಯ, ಮೋಳಿಗೆಯ ಮಾರಯ್ಯ, ಮೊದಲಾದ ಶಿವಶರಣರು ಬಾಳಿ ಬೆಳಗಿದಂತೆ ಸತ್ಯಕ್ಕ, ರೇಮವ್ವ, ರೇಕಮ್ಮ, ಗಂಗಮ್ಮ, ವೀರಮ್ಮ, ಗುಡ್ಡವ್ವ, ಮುಕ್ತಾಯಕ್ಕ, ಅಕ್ಕಮಹಾದೇವಿ. ಶಿವಶರಣೆಯರೂ ಕೂಡ ಬಾಳಿ ಬೆಳಗಿ ಮುಕ್ತಿಯನ್ನು ಹೊಂದಿದ್ದಾರೆ. ಇಂಥ ಶಿವಶರಣೆಯರಲ್ಲಿ ಲಕ್ಕಮ್ಮನೂ ಒಬ್ಬಳಾಗಿದ್ದಾಳೆ.

ವಶರಣರು ಹಾಗೂ ಶಿವಶರಣೆಯರು ತಮ್ಮ ವಚನಗಳನ್ನು ಒಂದೊಂದು ಅಂಕಿತದಿಂದ ನುಡಿದಿದ್ದಾರೆ. ಅಕ್ಕಮಹಾದೇವಿಯು ಚನ್ನಮಲ್ಲಿಕಾರ್ಜುನನ ಅಂಕಿತದಿಂದ ವಚನಗಳನ್ನು ನುಡಿದಂತೆ ಲಕ್ಕಮ್ಮನು "ಮಾರಯ್ಯ ಪ್ರಿಯ ಅಮರೇಶ್ವರಲಿಂಗ" ಎಂಬ ಅಂಕಿತದಿಂದ ನುಡಿದಿದ್ದಾಳೆ.

ಮಾರಯ್ಯನು ಶಿವಶರಣರಲ್ಲಿ ಒಬ್ಬಾತನಾಗಿದ್ದಾನೆ. ವಚನಕಾರರು ಶಿವಾನುಭವಿಗಳ ಸಮಿತಿಯನ್ನು ಏರ್ಪಡಿಸಿದ್ದರು. ಅವರು ಧಾರ್ಮಿಕ ಚರ್ಚೆಯನ್ನು ಮಾಡುವ ಸ್ಥಾನ ಶಿವಾನುಭವ ಮಂಟಪ. ಅಲ್ಲಿಯ ಧಾರ್ಮಿಕ ಚರ್ಚೆಯಲ್ಲಿ ಯಾವತ್ತೂ ಶರಣರು ಭಾಗವಹಿಸುವಂತೆ; ಈತನೂ ಭಾಗ ವಹಿಸುತ್ತಿದ್ದನು. ನೂಲಿಯ ಚಂದಯ್ಯ, ಮೋಳಿಗೆಯ ಮಾರಯ್ಯ, ವೈದ್ಯ ಸಂಗಣ್ಣ, ಇವರು ಬೇರೆ ಬೇರೆ ಕಾಯಕವನ್ನು ಕೈಕೊಂಡಿದ್ದರಿಂದಲೇ ಇವರಿಗ ಅವರವರ ಕಸಬುಗಳ ಹೆಸರುಂಟಾಗಿವೆ. ಮಾರಯ್ಯನೂ ಕೂಡ ಶಿವಶರಣರ ಮನೆಯ ಮುಂದಿನ ಅಂಗಳದಲ್ಲಿ ಬಿದ್ದಿರತಕ್ಕ ಅಕ್ಕಿಯನ್ನು ಆಯ್ದು ತರುತ್ತಿದ್ದನು. ಅದರಿಂದಲೇ ಆಯದಕ್ಕಿ ಮಾರಯ್ಯನೆಂದು ಹೆಸರು ಪಡೆದನು. ಲಕ್ಕಮ್ಮನು ಆಯದಕ್ಕಿ ಮಾರಯ್ಯನ ಧರ್ಮಪತ್ನಿಯು; ತನ್ನ ಪತಿಯನ್ನು ದಿವ್ಯಸಂದೇಶಕೊಟ್ಟು ಮೇಲಿಂದಮೇಲೆ ಎಚ್ಚರಿಸುತ್ತಿದ್ದಳು. ಇವಳ ಆತ್ಮ ವಿಶ್ವಾಸ ಧೃಡತರವಾದುದು. ಜಂಗಮಾರಾಧನೆಯ ಹೊರತು ಬಾಯಲ್ಲಿ ನೀರು ಕೂಡ ಹಾಕುತ್ತಿದ್ದಿಲ್ಲ. ಯಾವ ಕಾಯಕ ಮಾಡಿದರೂ ಭಾವ ಶುದ್ಧವುಳ್ಳವಳಾಗಿದ್ದಳು. ಶಿವೈಕ್ಯ ನಿಷ್ಠಳಾಗಿದ್ದಳು. ಜಂಗಮ ದಾಸೋಹದಲ್ಲಿಯೂ ಲಿಂಗವುಂಟು ಎಂಬುದನ್ನು ಅರಿತಿದ್ದಳು. ಕಸ್ತೂರಿಯು ಕಸ್ತೂರಿಮೃಗದ ನಾಭಿಯಿಂದ ಹುಟ್ಟಿದಾಗ್ಯೂ ಅದರ ಬೆಲೆಯನ್ನು ಕಟ್ಟು ವದು ಕಠಿಣ ಎಂಬಂತೆ ಪರಿಪೂರ್ಣ ಸಂಸಾರದಲ್ಲಿದ್ದರೂ ತನ್ನ ಸೌಮ್ಯ ವೃತ್ತಿಯಿಂದಲೂ, ವೈಶಿಷ್ಟ್ಯಪೂರಿತ ನುಡಿಗಳಿಂದಲೂ, ಸರ್ವಮಂಗಳೆಯಾಗಿ ಶೋಭಿಸಿದಳು. ಸರ್ವಕಾರ್ಯಗಳಲ್ಲಿಯೂ ತನ್ನಪತಿಗೆ ಅನುಕೂಲಳಾಗಿಯೇ ಇದ್ದಳು. ಅವನೂ ಕೂಡ ಅವಳನ್ನು ಬಹಳ ಗೌರವದಿಂದ ಕಂಡು ದೇವಿ ಎಂದು ಸಂಬೋಧಿಸಿದ್ದುಂಟು.

ಭಕ್ತಿಯನ್ನು ಮಾಡಿ ದೇವತ್ವವನ್ನು ಪಡೆಯುವದನ್ನು ಇವಳು ಅರಿ ತ್ತಿದ್ದಳು. ಚಂಚಲಮನಸ್ಸಿನಿಂದ ಭಕ್ತಿ ಸಾಧನವು ನಡೆಯಲಾರದು. ಭಾವ ಶುದ್ಧವಿಲ್ಲದ ಭಕ್ತಿ ನಿಜವಾದ ಭಕ್ತಿಯಲ್ಲ, ಎಂದು ತಿಳಿದು ತನ್ನಪತಿಗೆ

" ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು
ನಡೆಯಿಲ್ಲದ ನುಡಿ ಅರುಹಿಂಗೆ ಹಾನಿ
ಕೊಡದೆ ತ್ಯಾಗಿ ಎನಿಸಿಕೊಂಬುದು ಮುಡಿ ಇಲ್ಲದ ಶೃಂಗಾರ
ಧೃಡವಿಲ್ಲದ ಭಕ್ತಿ ಅಡಿವೆಡೆದ ಕುಂಭದಲ್ಲಿ ಸುಖಜಲವ ತುಂಬಿದಂತೆ
ಮಾರಯ್ಯಪ್ರಿಯ ಅಮುಳೇಶ್ವರ ಲಿಂಗಕ್ಕೆ ಮುಟ್ಟದ ಭಕ್ತಿ "
ಈ ರೀತಿ ಮೇಲಿಂದಮೇಲೆ ಎಚ್ಚರಿಸುತ್ತಿದ್ದಳು.

ಕರ್ಮಫಲದ ಆಶೆಯನ್ನು ಬಿಡುವುದೆಂದರೆ ಕಠಿಣ. ಕರ್ಮವು ಮೋಕ್ಷಕ್ಕೆ ಸಾಧನವು. ಫಲತ್ಯಾಗದಿಂದ ಮುಕ್ತಿದೊರೆಯುವದು. ಕಾಯಕ ನಿಷ್ಠರಾಗಿ ಫಲಾಪೇಕ್ಷೆ ಇಲ್ಲದೆ ಕಾರ್ಯನಿರತರಾಗಿರುವದೇ ಭಕ್ತಧರ್ಮ! ನಿಷ್ಕಾಮ ಕರ್ಮವೆಂಬುದೊಂದು ತಪಶ್ಚರ್ಯ. ಅಂತಹ ಫಲತ್ಯಾಗ ರೂಪದಿಂದ ಶಾಂತಿಯು ಕರತಲಾಮಲಕವಾಗುವುದು, ಎಂಬುದನ್ನು ಈ ನಮ್ಮ ಕಥಾ ನಾಯಕಿಯು ಚನ್ನಾಗಿ ಅರಿತಿದ್ದಳು. ಒಪ್ಮೆ ಇವಳ ಪತಿದೇವ (ಮಾರಯ್ಯ)ನು ಕಲ್ಯಾಣದ ಬಸವೇಶ್ವರ ದೇವರ ಅಂಗಳದಿಂದ ದಿನಕ್ಕಿಂತಲೂ ಹೆಚ್ಚು ಅಕ್ಕಿಯನ್ನು ಆಯ್ದು ತಂದು ಉಡಿಯಲ್ಲಿ ಹಾಕುವನು. ಆಗ ಆವಳು ಪತಿದೇವಾ! ಹೆಚ್ಚಿನವುಗಳನ್ನು ಅಕ್ಕಿಯೇ ಚಲ್ಲು; ದಿನದಷ್ಟೇ ಸಾಕು. ಆಗ ಮಾರಯನು ಆವೇಶದಿಂದ ಕಡಿಮೆ ತಂದರೂ ಅಧರ್ಮ; ಹೆಚ್ಚುತಂದರೂ ಅಧರ್ಮ ಎಂದು ತಿರಸ್ಕರಿಸುವನು. " ಆಶೆಯು ಅರಸರಿಗಲ್ಲದೆ ಶಿವಭಕ್ತರಿಗುಂಟೇ ? " ಇಂಥ ಸಣ್ಣ ಆಶೆಗಳಿಗಾಗಿ ಆದರ್ಶ ಜೀವನವನ್ನು ಹಾಳು ಮಾಡಿಕೊಳ್ಳುವಿರಿ; ಎಂದು ಪ್ರತಿಭಟಿಸುವಳು. ಆಗ ಮಾರಯ್ಯನು ರೋಷದುಂಬವನು. " ರೋಷವೆಂಬುದು ಯುವದೂತರಿಗಲ್ಲದೆ ಅಜಾತರಿಗುಂಟೇ? " ಎಂದು ಸಮಾಧಾನ ಹೇಳುವಳು. ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನವುಂಟೇ ? ಹೆಚ್ಚಾಗಿತಂದು ಚನ್ನಾಗಿ ತೃಪ್ತಿಪಡಿಸಿದೆ ನೆಂಬುದು ಹಮ್ಮಿಗೆ ಮೂಲ. ಗರ್ವದಿಂದ ಮಾಡುವ ಭಕ್ತಿ ಹಾನಿಕರವಾದುದು; ಎಂದು ತಿಳಿಸಿ ಹೇಳುವಳು. ಆಸೆ ಆಮಿಷಗಳಿಗಾಗಿ ಸಾಯದೆ ದೇವನಿಗಾಗಿ ಸತ್ತಿದ್ದಾಳೆ. ಅವಳಲ್ಲಿ ಫಲತ್ಯಾಗದ ಆಶೆ ಇತ್ತೆಂಬ ಬಗ್ಗೆ,

" ಮಾಡಿ ನೀಡಿ ಹೊಂದಿಹನೆಂಬಾಗಲೆ ಕೈಲಾಸವೇನು ಕೈಕೂಲಿಯೇ?
ಮುಂದೊಂದು ಕಲ್ಪಿಸದೆ ಹಿಂದೊಂದು ಭಾವಿಸದೆ ಸಲೆ ಸಂದಿದ್ದಾಗಲೆ
ಮಾರಯ್ಯ ಪ್ರಿಯ ಅಮುಳೇಶ್ವರ ಲಿಂಗವಿದ್ದ ಠಾವೇ ಕೈಲಾಸ. "

ಮಾಡಿಸೆನೆಂಬ ತವಕ ಹಿಂಗಡೆ ಅಲಸಿಕೆಯಿಂದ ಕೈಲಾಸಕ್ಕೆ ಹೋಗುವೆನೆಂದರೆ ಅದೆಂದಿಗೂ ಸಾಧ್ಯವಿಲ್ಲ.

ಜಂಗಮಸೇವೆ ಮಾಡಿದರೆ ಇಹಪರಗಳಲ್ಲಿ ಸುಖ. ಜಂಗಮಸೇವೆಯೇ ಲಿಂಗಪೂಜೆ. ಜಂಗಮವು ಲಿಂಗಮುಖ. ಜಂಗಮ ತೃಪ್ತಿಯು ಲಿಂಗತೃಪ್ತಿ. ಗುರುಲಿಂಗ ಜಂಗಮ ದಾಸೋಹದಿಂದಲೇ ಮುಕ್ತಿಯೆಂದು ತಿಳಿದು ಲಕ್ಷದ ಮೇಲೆ ತೊಂಭತ್ತಾರು ಸಾವಿರಗಣಂಗಳಿಗೆ ಆರಾಧನೆಗೆಂದು ಬರಲು ತಿಳಿಸುವಳು. ಆಗ ಮಾರಯ್ಯನು ದೇವಿ! ನಾವು ಬಡವರು. ಎಂದು ಉದಾರ ತಗೆಯುವನು. ಆ ಸಮಯ ಅವಳು

" ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ,
ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ
ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿತಾನೆ ತಾನಾಗಿಪ್ಪಳು
ಮಾರಯ್ಯಪ್ರಿಯ ಅಮಳೇಶ್ವರ ಲಿಂಗದ ಸೇವೆಯುಳ್ಳನ್ನಕ್ಕ. "

ಎಂದು ಆತನನ್ನು ಸಂತೈಸಲು ಮಾರಯ್ಯನು ದೇವಿ! ನಾನೇಕೆ ನಿನ್ನ ದಿವ್ಯ ಶಕ್ತಿಗೆ ಅಡ್ಡಬರಲಿ ಎಂದು ಸುಮ್ಮನಾಗುವನು, ಲಕ್ಕಮ್ಮನು ಅಮಳೇಶ್ವರ ಲಿಂಗವನ್ನು ಶುದ್ಧ ಮನಸ್ಸಿನಿಂದ ಭಜಿಸಿ, ದೇವಾ, ನಾನು ಬಸವಣ್ಣನಲ್ಲಿ ಕೇಳಿಕೊಂಡದ್ದನ್ನು ಪೂರ್ದೈಸಬೇಕೆಂದು ತನ್ನ ಭಕ್ತಿ ಪ್ರಭಾವದಿಂದ ಎಲ್ಲವನ್ನೂ ಸಿದ್ಧಪಡಿಸಿ ಜಂಗಮರ ಬರುವಿಕೆಯನ್ನೇ ಕಾಯುತ್ತಿರುವಳು. ಆ ವೇಳೆ ಮಾರಯ್ಯನು. ಎಲ್ಲರನ್ನೂ ಮನೆಗೆ ಕರೆದುಕೊಂಡು ಬಂದು ಮಂಗಲ ಘೋಷದೊಡನೆ ಶ್ರೀ ಪ್ರಭುವಿನ ಪಾದಪೂಜೆ ತೀರಿಸಿ ಪಾದೋದಕವಾದ ನಂತರ ಎಲ್ಲ ಶರಣರಿಗೂ, ಗಣಂಗಳಿಗೂ ಹಾಗೂ ಪ್ರಮಥ ಪುಂಗವರಿಗೂ ಎಡೆಮಾಡಿ ಪಂಕ್ತಿಯು ಪ್ರಾರಂಭನಾದನಂತರ ಲಕ್ಕಮ್ಮನು ಭಕ್ತಿಭಾವದಿಂದ ಉಲ್ಲಾಸ ಉತ್ಸಾಹದಿಂದ ಕೃಶವಾದ ದೇಹವನ್ನು ಲಕ್ಷಕ್ಕೆ ತಾರದೆ ನೀಡುತ್ತಾ ಸೇವೆಯಲ್ಲಿ ತತ್ಪರಳಾಗುತ್ತಾಳೆ. ಕೊನೆಗೆ ಅಮಳೇಶ್ವರ ಲಿಂಗದಲ್ಲಿ ಬೆರೆಯುತ್ತಾಳೆ.

ಇಂಥ ಶಿವಶರಣೆಯರನ್ನು ಅನುಸರಿಸಿದ್ದಾದರೆ ಪಾಮರರಾದ ನಮ್ಮ ಮಹಿಳೆಯರು ಪುನೀತರಾಗುತ್ತಾರೆ, ಎಂದು ಹೇಳಲು ಯಾವತರದ ಶಂಕೆಯಿಲ್ಲ.

---

# ಸದ್ಭಕ್ತನ ಸುಖವಿಲಾಸ



ವಿಶ್ವವ ವಿಚರಿಸಿ ನೋಡಲುಬೇಕು। ವಿಶ್ವ ಕುಟುಂಬಿಯ ನರಿಯಲುಬೇಕು॥
ವಿಶ್ವಂಭರನವನೆನ್ನಲುಬೇಕು। ವಿಶ್ವಾತ್ಮಕನಂಶ ತಾನೆನಬೇಕು ॥೧॥

ವಿಶ್ವಧರ್ಮವ ಪಿಡಿಯಲುಬೇಕು। ವಿಶ್ವರೂಪನ ಹುಡುಕಲುಬೇಕು ॥
ವಿಶ್ವರೂಪಗುರುವೆನ್ನಲುಬೇಕು। ವಿಶ್ವಾಸವನೊಳು ವಿಡಲೇಬೇಕು ॥೨॥

ವಿಶ್ವಕೋಣಗಳ ತಿಳಿಯಲುಬೇಕು। ವಿಶ್ವಗುರುಕರಜ ತಾನಿರಬೇಕು ॥
ವಿಶ್ವಲಿಂಗವ ಪಡೆಯಲೆಬೇಕು। ವಿಶ್ವಮಂತ್ರವ ಜಪಿಸಲೆಬೇಕು ॥೩॥

ವಿಶ್ವಾತ್ಮಕಬುದ್ಧಿ ಬರಿಯಲುಬೇಕು! ವಿಶ್ವಾತ್ಮಲಿಂಗನ ಪೂಜಿಸಬೇಕು।
ವಿಶ್ವಕಾಯಕ ಕೈಕೊಳಬೇಕು। ವಿಶ್ವದಳಾಷ್ಟಕ ನೋಡಲುಬೇಕು ॥೪॥

ಇಷ್ಟಾನಿಷ್ಟವ ನರಿಯಲುಬೇಕು। ಇಷ್ಟವಕರದೊಳು ಪಿಡಿಯಲುಬೇಕು॥
ಇಷ್ಟದೆ ದೃಷ್ಟಿಯು ಬಲಿಯಲುಬೇಕು। ಕಷ್ಟಕರ್ಮಗಳ ಕಳೆಯಲೆಬೇಕು ॥೫॥

ಇಷ್ಟಾಂತರದೊಳು ಮನವಮುಳುಗಲುಬೇಕು। ಸ್ಪಷ್ಟಪ್ರಾಣಾಂತರ ವಾಪಿಸಬೇಕು ॥
ತುಷ್ಟಿಬಲಿದು ಭಾವಬೆರೆತಿರಬೇಕು। ದೃಷ್ಟಿತುಷಾರವು ತೊಟ್ಟಿಡಬೇಕು ॥೬॥

ನಿಷ್ಠೆನೇಮವ್ರತ ಹಿಡಿದಿರಬೇಕು। ಶ್ರೇಷ್ಠಶೀಲವ ಬಿಡದಿರಬೇಕು॥
ಶ್ರೇಷ್ಠಶರಣರ ಮನ್ನಿಸಬೇಕು। ಅಷ್ಟಾವರಣವನರಿಯಲುಬೇಕು ॥೭॥

ಅಷ್ಟಮದಂಗಳನಳಿಯಲುಬೇಕು। ಸೃಷ್ಟಿಯ ಸೊಬಗನು ನೋಡಲುಬೇಕು॥
ವ್ಯಷ್ಟಿಸಮಷ್ಟಿಯು ತಿಳಿದಿರಬೇಕು। ದೃಷ್ಟಿಸಮತೆ ಸಂಗೋಪಿಸಲುಬೇಕು ॥೮॥

ಭಕ್ತಿಪತಿಯಕರ ಪಿಡಿಯಲುಬೇಕು। ಶಕ್ತಿಷಡುಗಳ ಬೆಳಸಲುಬೇಕು॥
ಭುಕ್ತಿಭೋಜನ ನಡೆಸಲುಬೇಕು। ಯುಕ್ತ ಜಂಗಮಾರ್ಪಿತ ಮಾಡಲುಬೇಕು ॥೯॥

ಭಕ್ತರ ಭಕ್ತತಾನಾಗಿರಬೇಕು। ಭಕ್ತಿಬೀಜವ ಬೆಳೆಸಲುಬೇಕು॥
ಭಕ್ತಿ ತ್ರಿವಿಧದೊಳಿಟ್ಟಿರಬೇಕು। ಭಕ್ತಿಯಿಂದ ತ್ರಿವಿಧವಪೂಜಿಸಬೇಕು।೧೦॥

ಭಕ್ತಿನಿಜದೊಳು ನಟ್ಟಿರಬೇಕು। ಭಕ್ತಸದ್ಭಕ್ತಿಗಳನರಿಯಲುಬೇಕು॥
ಭಕ್ತಾದಿ ಷಡುಸ್ಥಲವೇಧಿಸಬೇಕು। ವ್ಯಕ್ತನೂರೊಂದರೊಳರುಹಿರಬೇಕು ॥೧೧॥

ಭಕ್ತಿಭಾಗ್ಯವ ಪಡೆಯಲೆಬೇಕು। ಶಕ್ತಿಸೌಭಾಗ್ಯಭೋಗಿಸಬೇಕು॥

ಭಕ್ತಿಶಕ್ತಿಯೋ ದಾಸೋಹಕೆಬೇಕು । ಸೂಕ್ತದಾಸೋಹವೆ ಮುಕ್ತಿಗೆಬೇಕು ॥೧೨॥

ಅಂಗದೊಳಾಚಾರಳವಡಬೇಕ । ಲಿಂಗದೊಳು ಮನವಡಗಲ ಬೇಕು॥
ಕಂಗಳ ಕಳವಳಹಿಂಗಿರಬೇಕು। ಲಿಂಗಾಂಗದಸುಖ ಸಂಬಿಂಬೇಕು ॥೧೩॥

ಸಂಗ ಶರಣರೊಳುಬಿಡದಿರಬೇಕು। ಮಂಗಳ ಮಹಾಜ್ಞಾನಪಡೆದಿರಬೇಕು॥
ತಂಗಕ್ರಿಯೆಗಳ ನಡೆಸಲುಬೇಕು। ಜಂಗಮತೀರ್ಥ ಪಡೆಯಲುಬೇಕು ॥೧೪॥

ಅಂಗತ್ರಯಗಳನರಿಯಲುಬೇಕು। ಲಿಂಗತ್ರಯಗಳ ತಿಳಿಯಲುಬೇಕು॥
ಅಂಗಲಿಂಗನುಸಂಧಾನವುಬೇಕು। ಸಂಗ ಸಮರಸಿಯಾಗಿರಬೇಕು ॥೧೫॥

ಭೃಂಗ ಕೀಟಕನ್ಯಾಯನರಿಯಲುಬೇಕು। ಶೃಂಗಾಟಕ ಸ್ಥಲಹಿಡಿಯಲು ಬೇಕು॥
ಕಂಗಳೆ ಪ್ರಾಣಾಗಿರಲೇಬೇಕು । ತ್ರಿಕೂಟದೊಳು ತಾ ಶಮನಿಸಬೇಕು॥೧೬॥

ಶಿವಗುಣಗಳ ತಾನಳಿದಿರಬೇಕು । ಶಿವಭಾವವು ಸಲೆಸಂದಿರಬೇಕು॥
ಶಿವಾನುಭವಿತಾನಾಗಿರಬೇಕು । ಶಿವಾರ್ಪಣ ಬುದ್ಧಿಯಿದ್ದಿರಬೇಕು ॥೧೭॥

ಭವಿಗಳ ಭಕ್ತರಮಾಡಲುಬೇಕು। ಶಿವಸಾಮ್ರಾಜ್ಯವಗೆಯ್ಯಲುಬೇಕು॥
ಶಿವನಡೆನುಡಿಗಳ ಬಿಡದಿರಬೇಕು। ಶಿವಕೀರ್ತನಗಳ ಕೇಳಲುಬೇಕು ॥೧೮॥

ಶಿವಪ್ರಪಂಚವಗೆಯ್ಯಲುಬೇಕು। ಶಿವಗೋಷ್ಠಿ ಕಿವಿ ಸೋಲಲುಬೇಕು॥
ಶಿವಪ್ರಸಾದವಸಲ್ಲಿಸಬೇಕು । ಶಿವಾನಂದವಹೊಂದಿರಬೇಕು ॥೧೯॥

ಶಿವಾಲಯಗಳ ಬೆಳಸಲುಬೇಕು। ಶಿವಾರ್ಚನೆಗಳಗೆಯ್ಯಲುಬೇಕು॥
ಶಿವಬೋಧಾಮೃತ ಸವಿಯಲೆಬೇಕು। ಶಿವಶರಣರನಡೆನುಡಿ ಬಿಡದಿರಬೇಕು ॥೨೦॥

ಪಂಚಪ್ರಪಂಚವ ಮಾಡಲುಬೇಕು। ಪಂಚಪಾಶ ಹರಿಯಲುಬೇಕು॥
ಪಂಚಯೋಗಗಳ ಜ್ಞಾನವುಬೇಕು। ಪಂಚಾವಸ್ಥೆಗಳನುಭವಿಸಬೇಕು ॥೨೧॥

ಪಂಚಾಚಾರದೆ ನಡೆಯಲುಬೇಕು। ಪಂಚಕೋಶಗಳನರಿಯಲೆಬೇಕು॥
ಪಂಚಾಕ್ಷರಗಳ ಪಠಿಸಲುಬೇಕು। ಪಂಚಪ್ರಸಾದವ ಪಡೆಯಲುಬೇಕು॥೨೨॥

ಪಂಚವಿಂಶತಿ ತತ್ವತಿಳಿಯಲೆಬೇಕು। ಪಂಚಕರಣಗುಣ ಪರಿಹಾರವುಬೇಕು॥
ಪಂಚಲಗುಣಗಳನಳಿಯಲುಬೇಕು। ಪಂಚೇಂದ್ರಿಯ ಲಿಂಗೇಂದ್ರಿಯನಾಗಲು ಬೇಕು ॥೨೩॥

ಪಂಚಪತ್ರದ ಮಧ್ಯನರಿಯಲುಬೇಕು। ಪಂಚಸಾದಾಖ್ಯ ಪ್ರಕಾಶಿಸಬೇಕು॥
ಪಂಚಾವಧಾನಿಯು ತಾನಿರಬೇಕು। ಪಂಚಪರುಷಪಡೆಯಲುಬೇಕು ॥೨೬॥
ತನುಹಿಡಿದವಗೆ ಮನೆಮಾರವುಬೇಕು। ಮನವಿಡಿದವಗೆ ಘನಲಿಂಗತ್ವಬೇಕು॥
ಧನವಿಡಿದವಗೆ ಗಣತೃಪ್ತಿಯುಬೇಕು। ಏನಹಿಡಿದೊಡವ ಪಿಡಿಯದಂತಿರಬೇಕು ॥೨೫॥

— ಸಿ. ನಾ. ಮಹಾಂತಣ್ಣವರ

---

# ಶಿವಾದ್ವೈತ ತತ್ವಪ್ರಚಾರವು ವಿಶ್ವಶಾಂತಿಯು ಜನ್ಮ

( ಲೇಖಕ:- ಶ್ರೀ ಭಸ್ಮಾಂಗದೇವರು ಭಸ್ಮಾಂಗಿಮಠ ಚಿಕ್ಕಬಳ್ಳಾಪೂರ)

ಈ ವಿಶಾಲವಾದ ವಿಶ್ವವನ್ನು ತೆರೆದ ಭಾವ, ಮನ ಮತ್ತು ಕ್ರಿಯಾನುಭವದಿಂದ ಸಿಂಹಾವಲೋಕವ ಮಾಡಿದಲ್ಲಿ ಜಗತ್ತು ಜಗದೀಶನ ಲೀಲೆಯು ಉದ್ಯಾನವನ ವೆಂದು ಸರ್ವರಿಗೂ ವಿಧಿತವಾಗುವುದು. ಈ ಸೊಗಸಾದ ಪ್ರಪಂಚವನ್ನು ಜಗತ್ತಿನಲ್ಲಿಯ ಜೀವರಾಶಿಗಳು ತಮ್ಮ ಸುಖ ಶಾಂತಿಗಳಿಗೆ ತಮಗೆ ಇಷ್ಟ ಬಂದಂತೆ ಉಪಯೋಗಿಸಿಕೊಳ್ಳುತ್ತಿವೆ. ಅದರಂತೆ ಮಾನವನೂ ಜಗದ ಐಶ್ವರ್ಯವನ್ನು ನಾನಾ ಮೂಲಕ ನಾನಾ ವಿಧಾನಗಳಿಗೆ ಉಪಯೋಗಿಸಿಕೊಂಡು ಸುಖಶಾಂತಿಯನ್ನು ಪಡೆಯಲು ಆತುರ ಪಡುತ್ತಿರುವದು ಎಲ್ಲರಿಗೂ ತಿಳಿದ ವಿಚಾರವೇ ಹೌದು. ನೈಜವಾದ ಸಹಜವಾದ ಶಕ್ತಿ ಜಗತ್ತನ್ನು ಎಡಬಿಡದಂತೆ ಆವರಿಸಿದೆ. ಈ ಶಕ್ತಿಯನ್ನು ಮಾನವನು ಹೇಗೆ ಬೇಕಾದರೂ ಉಪಯೋಗಿಸಿಕೊಳ್ಳಬಹುದು. ಈ ಶಕ್ತಿಯ ಮಾರ್ಪಾಡಿನಿಂದ ಮಾನವನು ದೇವರಾಗಬಹುದು. ಅಥವಾ ದೆವ್ವನಾಗಬಹುದು. ದೇವರೆಂದರೆ ದಿವ್ಯವಾದ ಗುಣಗಳಿಂದಗೂಡಿ ಜಗತ್ತಿನಲ್ಲಿ ಸುಖ ಶಾಂತಿಗಳಿಗೋಸ್ಕರವೇ ಜಗದೀಶನ ಐಶ್ವರ್ಯಗಳನ್ನು ಉಪಯೋಗಿಸಿಕೊಳ್ಳುವುದು. ದೆವ್ವ ವೆಂದರೆ ಜಗತ್ತಿನಲ್ಲಿ

ಧಯ, ಕೊಲೆ, ಅಶಾಂತಿ, ಸ್ವಾರ್ಥಕ್ಕೋಸ್ಕರ ಮತ್ತೊಬ್ಬರ ಸುಖ ಶಾಂತಿಗಳನ್ನು ಅಪಹರಣ ಮಾಡುವುದು ಇವೇ ಮೊದಲಾದವುಗಳಿಗೆ ಪರಮಾತ್ಮನ ಐಶ್ವರ್ಯಗಳನ್ನು ವ್ಯಾಪಾರ ಮಾಡುವದು. ಒಟ್ಟಿನಲ್ಲಿ ಬದಲಾವಣೆಯಿಂದ ಜೀವನು ಸುಜೀವನನಾಗಬಹುದು ಅಥವಾ ದುರ್ಜೀವನನಾಗಬಹುದು. ಮಾನವ ಕೋಟಿಯು ಬಯಸುವದು ಸುಜೀವತ್ವ. ಈ ಸುಜೀವನವನ್ನು ಕಲ್ಪಿಸುವದಕ್ಕೋಸ್ಕರ ಜಗತ್ತಿನ ನಾನಾ ಭಾಗಗಳಲ್ಲಿ ಮಹಾವಿಭೂತಿ ಪುರುಷರು ಅವತಾರ ಮಾಡಿ ಆಯಾ ಭಾಗಗಳಲ್ಲಿ ಆಯಾ ದೇಶಕಾಲಕ್ಕೆ ತಕ್ಕಂತೆ ಆಯಾ ಭಾಷೆಗಳಲ್ಲಿಯೇ ಜ್ಞಾನವನ್ನು ಬೋಧಿಸುತ್ತಾರೆ. ಈ ಮಹಾ ಪುರುಷರ ಧ್ಯೇಯವೆಲ್ಲವೂ ಒಂದೇ. ಧ್ಯೇಯಮಾತ್ರ ಯಾವಾಗಲೂ ನಿಷ್ಠೆಯಿಂದ ಕೂಡಿರಬಹುದಾಗಿದೆ. ಮಾನವತೆಯು ಸುಖ ಶಾಂತಿಗಳಿಂದ ಬಾಳುವುದೇ ಈ ಧ್ಯೇಯ. ಸುಖಶಾಂತಿ ಸರ್ವರಿಗೂ ಅವಶ್ಯವಾಗಿ ಬೇಕಾಗಿರುವ ಅತ್ಯಂತ ಶ್ರೇಷ್ಠ ವಸ್ತುಗಳು ಮಹಾಪುರುಷರು ಮುಂದಿನ ಜನಾಂಗಕೋಸ್ಕರ ಸ್ಥಿರವಾದ ಜ್ಞಾನ ಭಂಡಾರವನ್ನು ಬರೆದಿಟ್ಟು ನಮಗೆ ಬಹಳ ಉಪಕಾರವಮಾಡಿರತ್ತಾರೆ. ಇವುಗಳೆಲ್ಲೆಲ್ಲ ಅತ್ಯಂತ ಶ್ರೇಷ್ಠವಾದ ಭಂಡಾರವೆಂದರೆ ಶಿವಶರಣರ ವಚನ ಸಾಹಿತ್ಯಗಳು. ಇಡೀ ಜಗತ್ತೆ ಸುಖಶಾಂತಿಗಳಿಂದ ಕೂಡಿ ಆನಂದವಾಗಿರಬೇಕೆಂದರೆ ಶಿವಶರಣರ ನುಡಿ ನಡೆಗಳಿಂದ ಎಲ್ಲರನ್ನೂ ತನ್ನಂತೆ ತಿಳಿಯುವುದು ಇದು ಪ್ರಾಣಲಿಂಗಿಸ್ಥಲ. ಇಲ್ಲಿ ಇಡೀ ಮಾನವ ಕೋಟಿಯನ್ನೇ ಅಲ್ಲದೆ ಇಡೀ ಜೀವಕೋಟಿಯನ್ನೇ ತನ್ನಂತೆಯೇ ತಿಳಿದು ಆಚರಿಸುವುದು. ತನಗೆ ಹೇಗೆ ಸ್ವಾತಂತ್ರ್ಯ, ಸುಖ, ಶಾಂತಿ, ಮಾನ, ಮರ್ಯಾದೆ, ಹಸಿವುಗೋಸ್ಕರ ಅನ್ನ ಆಹಾರಗಳು ಬೇಕೋ ಹಾಗೆಯೇ ಇತರರಿಗೂ ಬೇಕು ಎಂದು ತಿಳಿದು ಎಲ್ಲರಿಗೂ ಮೊಲ್ಕಂಡ ಐಶ್ವರ್ಯಗಳನ್ನು ಕಲ್ಪಿಸಿಕೊಡುವದು. ಇವೇ ಮೊದಲಾದವುಗಳನ್ನು ಶಿವಶರಣರ ವಚನ ಭಂಡಾರದಲ್ಲಿ ಕಾಣಬಹುದು. ಪ್ರಪಂಚದಲ್ಲಿನ ನಾನಾ ವಸ್ತುಗಳನ್ನು ತಮ್ಮ ಪರಿಶುದ್ಧವಾದ ಭಾವನೆಗಳಿಂದ ಪ್ರಸಾದವನ್ನಾಗಿ ಮಾರ್ಪಡಿಸಿಕೊಂಡು ಪ್ರಸಾದಕಾಯರಾಗಿ ಪ್ರಸಾದ ಪ್ರಾಣಲಿಂಗಿಯಾಗಿ ಪ್ರಸಾದ ಭಾವಲಿಂಗಿಯಾಗಿ ಬಾಳಿರುವುದು ಈ ಶರಣ ಮಂಡಲಿಯಲ್ಲಿ ಶೇಕಡಾ ೧೦೦ಕ್ಕೆ ನೂರು ಸಿಗುತ್ತವೆ. ಇಂತಹ ವರ ಧ್ಯೇಯ ಅನುಷ್ಠಾನಗಳನ್ನು ಪ್ರಚರಿಸಿ ಪಡಿಸಿ ಜನ ವೃಂದಕ್ಕೆ ಸುಖ ಶಾಂತಿಗಳನ್ನೊದಗಿಸುವದು ಪ್ರತಿಯೊಬ್ಬ ಸತ್ಪ್ರಜೆಯ ಕರ್ತವ್ಯ ನಮ್ಮ ನಾಡಿನಲ್ಲಿ ಅನೇಕ ಮಾಸ ಪತ್ರಿಕೆಗಳು ದಿನ ಪತ್ರಿಕೆಗಳು ಇದ್ದರೂ ಸರ್ವರ ಸುಖ

ಶಾಂತಿ, ಅನ್ನ ಬಟ್ಟೆಗಳ ಸಂಪಾದನೆ ನಿರುದ್ಯೋಗಳ ನಿರ್ಮೂಲತ್ವ ಸರ್ವ ಸ್ವಾತಂತ್ರ್ಯತ್ವ ಇವುಗಳು ಪ್ರಚಾರ ಕಾರ್ಯವು ಬಹಳ ಕಡಿಮೆ. ಸಮಾಜ ಸುಧಾರಣೆ ಸತ್ಯ, ಅಹಿಂಸೆ, ಪ್ರಾಣಿದಯೆ ದೀನದಲಿತ ಜನರ ಉದ್ಧಾರ ಮಾರ್ಗಗಳ ಯೋಜನೆಯನ್ನು ಪ್ರಚಾರ ಮಾಡತಕ್ಕದ್ದು ಪ್ರತಿಯೊಬ್ಬರ ಮೊದಲನೆ ಕಾರ್ಯವೆಂದು ನಾವೆಲ್ಲ ತಿಳಿಯಬೇಕಾಗಿದೆ. ಆದರೂ ಸಧರ್ಮ ದೀಪಿಕೆ ಶಿವಾನುಭವ ಶರಣಸಾಹಿತ್ಯ ಮೊದಲಾದ ಧಾರ್ಮಿಕ ಹಾಗೂ ಸಾಮಾಜಿಕ ಮಾಸ ಪತ್ರಿಕೆಗಳು ಬಹಳ ಮಟ್ಟಿಗೆ ಶ್ರಮಿಸುತ್ತವೆ. ಆದರೂ ಜನತೆಯು ಮಟ್ಟ ಮೇಲ್ಮುಖವಾಗಿದೆ. ಇಳಿಮುಖನಾಗಿರುವದು ಎಲ್ಲೆಲ್ಲಿಯೂ ಕಂಡು ಬರುತ್ತದೆ. ಕಾರಣ ನಮ್ಮಲ್ಲಿ ಅವಿದ್ಯಾಂತರ ಸಂಖ್ಯೆ ಬಹಳ ಜಾಸ್ತಿ ಹಾಗೇಯೇ ಅಶಿಕ್ಷಿತ ವಿದ್ಯಾವಂತರಂತೂ ಹೆಚ್ಚಾಗಿಯೇ ಇರುತ್ತಾರೆ. ಜೀವನ ಕ್ರಮಬದ್ಧವಾಗಿಲ್ಲ ಜೀವನ ಶಾಂತಿ ಶಿಸ್ತುಗಳಿಂದ ಕೂಡಿಲ್ಲದಿರುವದು ಎಲ್ಲೆಲ್ಲಿಯೂ ಕಂಡು ಬರುತ್ತದೆ. ಅನೇಕ ಮಠ, ವಿದ್ಯಾಮಂದಿರ ಆಶ್ರಮಗಳು ನಮ್ಮ ಕರ್ನಾಟಕದಲ್ಲಿ ಇದ್ದರೂ ನಮ್ಮ ಸುಸಂಸ್ಕೃತಿಗೆ ಧಕ್ಕೆ ಬಂದಿದೆ. ಏತಕ್ಕೆಂದರೆ ನಮ್ಮ ಮುಂದಾಳುಗಳು ಮೇಲ್ಕಂಡ ಸಮಾಜ ಮಂದಿರಗಳ ಅಭಿವೃದ್ಧಿಯ ಬಗ್ಗೆ ಹೆಚ್ಚಿಗೆ ಗಮನ ಕೊಡದಿರುವದು ಅದರಲ್ಲಿಯೂ ವೀರಶೈವ ಹಾಸ್ಟೇಲುಗಳಲ್ಲಿ ವೀರಶೈವ ಪೂಜಾ ಸಾಹಿತ್ಯಗಳ ಕೊರತೆ ಹೇಳುವಂತೆಯೇ ಇಲ್ಲ. ಬಾಯಾರೆ ಒಂದು ಸ್ವಲ್ಪ ನೀರನ್ನು ಕುಡಿಯೋಣವೆಂದರೆ ಪೂರ್ವಭಾವಿಯಾಗಿ ಮುಖ ಮಜ್ಜನವನ್ನಾದರೂ ಮಾಡಿ ಶಿವಪೂಜೆಯ ಮೂಲಕ ದಾಹ ಅಡಗಿಸಿಕೊಳ್ಳಲು ಅನುಕೂಲವೇ ಇಲ್ಲದಾಗಿದೆ ಇದಕ್ಕೆ ಕಾರಣವೇನಂದ ಸಾಕಷ್ಟು ಶಿವಶರಣ ಸಾಹಿತ್ಯಗಳ ಪ್ರಚಾರವಿಲ್ಲದಿರುವುದು ದಾಸೋಹಮಠಗಳು ಇಲ್ಲದಿರುವುದು. ಇವುಗಳನ್ನು ಸರಿಪಡಿಸಲು ನಮ್ಮ ಧೀರವೀರಶೈವರಿಗೆ ಬಹಳಸುಲಭ. ಶಿವಾದ್ವೈತ ಪ್ರಚಾರಮಾಡೋಣದರಿಂದ ಸಾಮಾನ್ಯವಾದ ಮನುಷ್ಯನೂ ಕೂಡ ಈಶ್ವರಗೊಳ್ಳುವನು. ಈ ಪ್ರಚಾರಕ್ಕೋಸ್ಕರ ಆಧುನಿಕ ವಿದ್ಯುತ್‌ವಾಹಕ ಯಂತ್ರಗಳನ್ನೂ ರೇಡಿಯೋ ಕೇಂದ್ರಗಳನ್ನು ಸುಲಭವಾಗಿ ಉಪಯೋಗಿಸಿಕೊಂಡು ಜಗತ್ತಿನ ಜನರು ಸುಖ ಶಾಂತಿಗಳನ್ನು ಮತ್ತು ಅವುಗಳ ಭದ್ರತೆಯನ್ನೂ ಹೆಚ್ಚಿಸಿಕೊಳ್ಳಬಹುದು. ನಮ್ಮಲ್ಲಿ ಅನೇಕ ಮಠಗಳೂ, ಐಶ್ವರ್ಯವಂತರೂ, ಕಾರುಗಳನ್ನು ಹೊಂದಿರುತ್ತಾರೆ. ವರ್ಷಕ್ಕೆ ಎಂಟು ದಿನಗಳು ಕಾರುಗಳ ಮತ್ತು ಬ್ಯಾಟರಿಗಳ ಸಹಾಯದಿಂದ ಜನಸಂದಣಿಗೆ ಹಳ್ಳಿ ಪಟ್ಟಣಗಳ ಬಾಂಧವರಿಗೆ ವಿದ್ಯು

ಧ ನಿವಾಹಕ ಯಂತ್ರಗಳ ಮೂಲಕ ಶಿವಶರಣರ ವಚನ ಭಾಂಡಾರವನ್ನು ಪ್ರಚಾರಮಾಡಿದರೆ ಸಾಕು. ಅನೇಕ ಅವಿದ್ಯಾವಂತರೂ ಕೂಡ ಶಿವಶರಣರ ಸೂಳ್ನುಡಿಗಳನ್ನು ಗಮನಿಸಿ ಸತ್ಪ್ರಜೆಗಳಾಗುತ್ತಾರೆ. ಜನರೆಲ್ಲರೂ ಎಚ್ಚರಗೊಂಡು ಎಲ್ಲರನ್ನೂ ತನ್ನಂತೆಯೇ ತಿಳಿಯುವ ಮಹಾಜ್ಞಾನವನ್ನು ಪಡೆಯುತ್ತಾರೆ. ಕೆಲವಾರು ವರ್ಷಗಳಲ್ಲಿಯೇ ಇಡೀ ಭಾರತ ಕೀರ್ತಿಧ್ವಜವು ವಿಶ್ವದ ಶಾಂತಿ ಧ್ವಜವನ್ನು ಸ್ಥಾಪಿಸಿ ವಿಶ್ವದಲ್ಲಿ ಪ್ರತಿಯೊಬ್ಬನೂ ಪ್ರತಿಯೊಂದು ಜೀವವೂ ಪರಮಾತ್ಮನ ಶಕ್ತಿಯಿಂದ ಕೂಡಿದೆ ಎನ್ನುವುದರ ಅರಿವನ್ನು ಮಾಡಿಕೊಡುತ್ತದೆ

( ) ಮಣಿಗಳ ಸೂತ್ರದಂತೆ ತ್ರಿನಯನ ನೀ ನಿದ್ದೆಯಾಗಿ ತನು ಭಿನ್ನ ಆತ್ಮನೇ ಅಣುರೇಣು ತೃಣಕಾಷ್ಠಂಗಳಲ್ಲಿ ನೀನಿದ್ದೆಯೆಂದು ಮಣಿಯು ತಿದ್ದನಯ್ಯಾ ರಾಮನಾಥಾ.

(೨) ಇವನಾರವ ಇವನಾರವನೆಂದೆಣಿಸದಿರಯ್ಯಾ ಇವನಮ್ಮವ ಇವನಮ್ಮವನೆಂದೆಣಿಸಯ್ಯಾ ಕೂಡಲಸಂಗಮದೇವ ನಿಮ್ಮ ಮನೆಯ ಮಗನೆಂದೆನಿಸಯ್ಯಾ

ಇವುಗಳ ಪ್ರಚಾರಕ್ಕೆ ಸಮಾಜದಲ್ಲಿನ ಐಶ್ವರ್ಯಗಳನ್ನು ೧೦೦೦ ಕ್ಕೆ ೧ ರಂತೆ ಉಪಯೋಗಿಸಿದರೆ ಸಾಕು. ಸಮಾಜವು ಇತ್ತಕಡೆ ಗಮನ ಕೊಡಲಿ.

# ತತ್ವಮಸಿ

(ಬರೆದವರು- ಶ್ರೀ ಸ್ವಾಮಿಶಿವಾನಂದರು ಗವಿಮಠ ತಿಗ್ಗಿಹಳ್ಳಿ ತಾ. ಇಂಡಿ.)



ಗುಡಿಗಳಲಿ ಅರಸಿದೆನು ಎಡೆಬಿಡದೆ ಕೇಳಿದೆನು।
ಬಿಡದೆ ದೀಪ ಧೂಪಗಳ ನಿಟ್ಟಿಹೆನು।।
ನಡುಗಿದೆನು ತೀರ್ಥದಲಿ ಅಡಬಡಿಸಿ ಮೀಯುತ್ತ।
ಎಡೆಗಾಣದಲೆ ತಿರುಗಿದೆನು ಸುತ್ತ ॥೧॥

ನೋಡಿದೆನು ಕ್ಷೇತ್ರದಲಿ ಪಾಡಿದೆನು ಸ್ತೋತ್ರವನು।
ಹಾಡಿದೆನು ಸಾಧುಸಜ್ಜನರ ಕಥನ।
ನಾಡನಾಡನೆ ತಿರುಗಿ ನಿನಗಾಗಿ ಬಾಡಿದೆನು।
ಗೂಢದಲಿ ಎಲ್ಲಡಗಿಕೊಂಡೆ ನೀನು ॥೨॥

ವೇದಗಳ ನೋಡಿಹೆನು ವಾದಗಳ ಮಾಡಿಹೆನು।
ಶೋಧಿಸಿದೆ ನಾಕಾವ್ಯ ಕಥೆಗಳೊಳಗೆ।
ಹಾದಿಹಾದಿಗಳೊಳಗೆ ಹಾದುಹೋಗುವ ಜನಕೆ।
ಮೋದದಲಿ ಕೇಳಿದೆನು ನಿನ್ನ ನೆನಹ ॥೩॥

ಜಲದಲ್ಲಿ ಹುಡುಕಿದೆನು ನೆಲಬಗೆದು ನೋಡಿದೆನು।
ಮಲಯಮಾರುತನ ಕೇಳಿದೆನು ನಾನು।।
ಅಲರಲ್ಲಿ ಅರಸಿದೆನು ಫಲದೊಳಗೆ ಇಣಿಕಿಹೆನು।
ನೆಲಗಾಣದಲೆ ಮರುಗಿದೆನು ನಾನು ॥೪॥

ಗವಿಗಳಲಿ ನೆರಳಿದೆನು ಹವೆಪಾನಮಾಡಿದೆನು।
ಸವಿಸಿದೆನು ದೇಹ ನಿನಗಾಗಿ ನಾನು
ರವಿಯನ್ನು ಕೇಳಿದೆನು ಬುವಿಯಲ್ಲಿ ತಿರುಗಿದೆನು।।
ತವ ಸುಳುವ ಕಾಣದಲೆ ನಿಂತಿರ್ದೆನು ॥೫॥

ಇಲ್ಲಿಲ್ಲ ಅಲ್ಲಿಲ್ಲ ಎಲ್ಲೆಲ್ಲಿ ಕಾಣದಕೆ।
ಕಲ್ಲೆದೆಯ ಕಟುಕ ನೀನೆಂದೆ ನಾನು।।
ಬಲ್ಲವರ ಬಲ್ಲಿದರ ಎಲ್ಲರನು ಕೇಳಿದೆನು।
ಇಲ್ಲ ತಿಳಿಯವೆಂದುಸುರಿದರು ಅವರು ॥೬॥

ದಾನಗಳ ಕೊಟ್ಟಿಹೆನು ಬಾನೊಳಗೆ ನೋಡಿಹೆನು।
ಗಾನಧಾರೆಯ ಸುರಿಸಿ ಕರೆದಿಹೆನು ನಾನು।
ಮೌನದಲ್ಲಿ ಕೂತಿಹೆನು ತಾನದಲಿ ಕೂಗಿದೆನು।
ಏನು ಗಾಣದಲೆ ಬಳಲಿದೆನು ನಾನು ॥೭॥
ಕಾಯಕವ ಮಾಡಿದೆನು ಶಿವಶರಣರಂದದಲಿ।
ವೈರಾಗ್ಯದಿಂ ಪರಹಿತವ ಮಾಡುತಲಿ।
ಸಮಭಾವ ನಿಟ್ಟಿಹೆನು ಸರ್ವ ಜೀವರುಗಳಲಿ।
ಪಿಂದಾಗಿ ನಂಬುತಲೆ ಏಕತ್ವವ ॥೮॥
ಉಪಕಾರ ಮಾಡಿದೆನು ಅಪಕಾರಗೈದವಗು।
ಯಾತಕೂ ನಾಕೇಡ ಬಗೆಯಲಿಲ್ಲ॥
ಸತ್ಯಅಹಿಂಸಾ ಬ್ರಹ್ಮಚರ್ಯದಿಂದಿರ್ದನಾ।
ಚಿತ್ತದಲಿ ಓಂಕಾರ ಬಿಡೆ ನೆನೆಯಲು ॥೯॥
ಮಾಯೆ ತಾ ಅಳಿಯಲ್ ದ್ವಂದ್ವಗಳ ಕಳೆಯಲ್।
ಕಾಯ ವಚ ಮನ ತಾಶುದ್ಧ ವಾಗಲ್॥
ಭಾವ ಅಂತಃಕರಣ ಆಶೆಗಳು ಶಾಂತಿಯನು।
ಪೊಂದಿದೊಡೆ ಹೊಳೆದಿತೆನ್ನೊಳಗೆ ತಾನೆ ॥೧೦॥
ನಾನೆ ನೀನಾಗಿರುವೆ ನೀನೆ ನಾನಾಗಿರುವೆ।
ಜ್ಞಾನೋದಯವಾಯ್ತು "ತತ್ವಮಸಿಯ" ॥
ನೀನೆ ಎನ್ನೊಳಗಿರುವಿ ನೀನೆ ಸರ್ವರೊಳಿರುವಿ।
ನಾನರಿತೆ ಸರ್ವವೂ ದೇವವೆಂದು ॥೧೧॥

## ಶಿವಾನುಭವ ಸಂಪಾದಕರ ಸನ್ನಿಧಿಗೆ :—

ತಮ್ಮ ಪಿ. ನಾ. ಮಹಾಂತಣ್ಣವರ ಕೃತ ಶರಣಶರಣಾರ್ಥಿಗಳು ತಮಗೆ ಅರಿಕೆ ಮಾಡಿಕೊಳ್ಳುವದೇನಂದರೆ ಸದ್ಯಕ್ಕೆ ಜನಾಂಗದಲ್ಲಿ ತಾವು ಶಿವ ಶರಣರ ವಚನವಾಙ್ಮಯ ಸಾಹಿತ್ಯವನ್ನು ಈ ಅಲ್ಪಾವಧಿಯಲ್ಲಿ ಒಬ್ಬರಿಂದ ಆಗದ ಅಶಕ್ಯಕಾರ್ಯಗಳನ್ನು ಮಾಡಿದ್ದು, ಪೂರ್ವಕಾಲದ ಧರ್ಮಾವತಾರಿಗಳು ಮಾಡಿದ ಅಘಟಿತ ಘಟನಾಕಾರ್ಯವನ್ನು ಹೋಲುವದು. ಆದರೆ ತಮ್ಮ ವಿಶಾಲ ದೃಷ್ಟಿಯ ಮನೋರಾಜ್ಯಕ್ಕೆ ಬೆಂಬಲವಿಲ್ಲದ್ದು ದುಃಖಕರವು. ಜಗದೀಶನ ಪ್ರೇರಣೆಯು ಸಮಾಜ ಬಾಂಧವರಿಗೆ ಉಂಟಾಗಲಿಲ್ಲವೆನ್ನುವದೇ ಸದ್ಯದ ಸಮಾಧಾನಕರವು. ತಮ್ಮಂತೆ ಕೆಲವರು ಸಾಹಸಪಟ್ಟರೂ ತಕ್ಕಷ್ಟು ಕೆಲಸ ಆಗಿಲ್ಲ. ಆಗದಿದ್ದರೂ ತಮ್ಮ ಅನುಕರಣದಿಂದ ಇಷ್ಟಾದರೂ ಕೆಲಸಮಾಡಿದ್ದು ಸಮಾಜಕ್ಕೆ ಹಿತವೇ ಎಂದು ಭಾವಿಸಬೇಕಾಗಿದೆ "ಹಲ್ಲು ಇದ್ದಲ್ಲಿ ಕಡ್ಲಿ ಇಲ್ಲ. ಕಡ್ಲಿ ಇದ್ದಲ್ಲಿ ಹಲ್ಲು ಇಲ್ಲ" ಎಂಬ ಉಕ್ತಿಯಂತೆ ಧಾರವಾಡದ ಶಿವಾನುಭವ ಸಂಘಕ್ಕೆ ಬೇಕಾದಷ್ಟು ಜನಧನ ಸಹಾಯವಿದ್ದರೂ ಕೆಲಸ ಆಗಲಿಲ್ಲ. ತಮ್ಮಂಥ ಅಸಹಾಯ ಶೂರರಿಗೆ ಜನಧನ ಸಹಾಯವಿರದಿದ್ದರೂ ಮಹತ್ವದ ಬಹಳಷ್ಟು ಕೆಲಸವಾಗಿ ತಮ್ಮ ಈ ಕೆಲಸವು ಅಜರಾಮರವಾಗಿದೆ. ಕೈಕೊಂಡ ವಿಶ್ವಧರ್ಮದ ಮಹಾಕಾರ್ಯದ ನಡವಳಿಕೆಯು ಸದ್ಯಕ್ಕೆ ಸುರುವಾಗಿ, ಶ್ರೀ ಬಸವೇಶ್ವರ ಕಾಲದ ಹಾಗು ವಿಜಯನಗರದ ಕಾಲದ ಮೇಲು ಮಟ್ಟದ ಸ್ಥಿತಿಯು ಸ್ಥಿರವಾಗಿ ಕಡೆತನಕ ಉಳಿಯಲೆಂಬ ಹೆದ್ದಾಶೆಯು ತಮ್ಮದದೆ. ಇದಕ್ಕೆ ಅವಕಾಶವು ಬೇಕಾಗಿದೆ. ತಾವು ಬರೆದ ಗ್ರಂಥಭಾಂಡಾರದ ಬುಕ್ಕುಗಳು ಎಷ್ಟೋ ೨ನೇ ಆವೃತ್ತಿಯಲ್ಲಿ ಛಾಪಿಸಲ್ಪಟ್ಟಿಲ್ಲ- ಛಾಪಿಸಿದಲ್ಲಿ ಅವೂ ಖರ್ಚಾಗಬಹುದು.

(೧) ಸಧ್ಯಕ್ಕೆ ಅಕ್ಕನಬಳಗವು ಬಳಕೆಯಲ್ಲಿ ಬಂದು ತಾಯಿಗಳ ಸುಧಾರಣಾ ಕಾರ್ಯವು ಜೋರಿನಿಂದ ನಡೆದಿದೆಂಬದು ನಾನು ನಿರೀಕ್ಷಿಸಿದ ಊರುಗಳಲ್ಲಿ ಮನಗಂಡಿರುವೆ.

ಜಮಖಂಡಿ ಮಹಾದೇವಿಯಕ್ಕನ ಗುಡಿಯನ್ನು ಸ್ತ್ರೀಯರೇ

ಕಟ್ಟಿಸಿ ಅಕ್ಕನ ಸುಂದರ ಕೃತಿಯನ್ನು ಪ್ರತಿಷ್ಠಿಸುವದರಲ್ಲಿ ಇದ್ದಾರೆ.

(೨) ಬೀಳಗಿಯಲ್ಲಿ ಅಕ್ಕನಬಳಗದ ಪ್ರತಿಯೊಬ್ಬ ತಾಯಿಗಳು ಶ್ರೀ ಸಿದ್ಧೇಶ್ವರ ದೇವಾಲಯಕ್ಕೆ ಹೋಗಿ ಬರುವಾಗ ತಮಗೆ ನೆಗುವಷ್ಟು ಇವಾರತು ಕಲ್ಲು ಅಕ್ಕನಮಂದಿರ ಕಟ್ಟೋಲಿಕ್ಕೆ ತರುತ್ತಲಿದ್ದಾರೆ.

(೩) ರಬಕವಿ, ನಿಪ್ಪಾಣಿ, ಬೆಳಗಾವ, ಧಾರವಾಡ. ಐಜಾಪೂರ, ಗದಗಗಳಲ್ಲಿ ಅಕ್ಕನ ಬಳಗದವರು ಶಿವಾನುಭವವನ್ನು ನಡೆಯಿಸುತ್ತಲಿದ್ದಾರೆ, ಇಷ್ಟೇ ಅಲ್ಲ. ಬೆಳಗಾವ, ಗದಗಗಳ ಕೆಲ ವ್ಯಕ್ತಿಗಳು ಪ್ರವಚನವನ್ನು ಸರಸಾಗಿ ನಡೆಯಿಸುತ್ತಲಿದ್ದದನ್ನು ಕಣ್ಣಾರೆ ಕಂಡಿರುವೆ.

(೪) ಗದಗಿನಲ್ಲಿ ಶಿವಾನಂದ ರಡ್ಡಿ. ಸ್ವಾಮಿಗಳ ಮಂದಿರದಲ್ಲಿ ಯಾವಾಗಲೂ ೫೦ ೬೦ ವಿದ್ಯಾರ್ಥಿಗಳು ಪುರಾಣ, ಪುಣ್ಯಕಥೆ, ವೇದಾಂತ ವೀರಶೈವ ಮತಗ್ರಂಥಗಳ ಅಭ್ಯಾಸಮಾಡಿ ಬ್ರಹ್ಮಚಾರಿಗಳಾಗಿ ಕಲಿಯುವದು ತೀರಿದ ಕೂಡಲೇ ದೇಶಸಂಚಾರ ಮಾಡುತ್ತ ವೇದಾಂತ ಗ್ರಂಥಗಳನ್ನೂ ವೀರಶೈವ ಶಿವಶರಣರ ಪುರಾಣಗಳನ್ನೂ ಆಚಾರಕ್ರಿಯೆಗಳನ್ನೂ ಸಾರುತ್ತಲಿದ್ದಾರೆ. ಇಂಥದರಲ್ಲಿ ಶ್ರೀ ಮಲ್ಲಿಕಾರ್ಜುನಶಾಸ್ತ್ರಿ (ಸ್ವಾಮಿ) ಗಳು ಇಲ್ಲಿ, ಹುನ್ನೂರ, ಹುಲ್ಯಾಳ, ಮುದಗಖಂಡಿ. ರಬಕವಿ, ಐನಾಪುರ, ನಿಪ್ಪಾಣಿ ಕೊಲ್ಲಾಪೂರ, ಇಚಲಕರಂಜಿ ಇನ್ನೂ ಎಷ್ಟೋ ಗ್ರಾಮುಗಳಲ್ಲಿ ಈಗೆ ೪।೫ ವರ್ಷಗಳಿಂದ ವೀರಶೈವ ಮತದ ಜಾಗ್ರತೆಯನ್ನು ಮಾಡುತ್ತ ಮತದ ದೀಕ್ಷೆ ಕೊಡುತ್ತ ನಡೆದಿದ್ದಾರೆ.

(೫) ಶ್ರೀ ಷ. ಬ್ರ. ಪಟ್ಟದ್ದೇವರು ಬೀಳಗಿ ಇವರು ಅಲ್ಲಲ್ಲಿ ಮೋಲಿನವರಂತೆ ಪುರಾಣ ಪುಣ್ಯಕಥೆಗಳನ್ನೂ ಪ್ರವಚನಗಳನ್ನೂ ಮಾಡುತ್ತ ಜನರ ಆದರಕ್ಕೆ ಪಾತ್ರರಾಗಿದ್ದಾರೆ. ಇವರ ಮುಖಂಡತೆಯಲ್ಲಿ ಗಿರಿಸಾಗರ, ಕಲಾದಗಿ, ಜಮಖಂಡಿ, ಮುದಗಖಂಡಿ ತೇರದಾಳ ಕುಂದಗೋಳ ಮುಂತಾದ ಪಟ್ಟಚರಮೂ

ರ್ತಿಗಳು ಅವರಂತೆ ಕೆಲಸ ವಹಿಸಿಕೊಂಡು ಹಳ್ಳಿಗಳನ್ನು ಸುಧಾರಿಸುತ್ತಲಿದ್ದಾರೆ.

(೬) ಸದ್ಯಕ್ಕೆ ತಾವು ಶೂನ್ಯಸಂಪಾದನೆ ಕಾರ್ಯವನ್ನು ಮುಗಿಸಿ "ಏಕ ಅಣ್ಣಾಮಾಲಾ" ಪುಸ್ತಕ ಪ್ರತಿಗಳನ್ನು ಸಾವಿಂಮೊದಲು ತೆಗೆಯುತ್ತ ಅವುಗಳ ಪ್ರಚಾರಗಳನ್ನು ಅಲ್ಲಲ್ಲಿ ಮಾಡಲು ಒಪ್ಪುವ ವಿಶ್ವಾಸಿಕರನ್ನು ನೇಮಿಸಿದಲ್ಲಿ ಹಾಗು ಕಾಯಕದ ಅಯ್ಯನವರು (ಕಲಿತವರು) ಸಿಕ್ಕರೆ ಅವರಿಗೆ ಕಮೀಶನ್ ಕೊಟ್ಟು ಅಥವಾ ಮಾಸ್ತರರಿಗೆ ಕಮೀಶನ್ ಕೊಟ್ಟು ಹಳ್ಳಿಗಳ ಔದ್ಯೋಗಿಕ ಧಾರ್ಮಿಕ ಸಾಮಾಜಿಕ ಸಂಘಟನೆ ಆಗುವಂತೆ ಬರೆದು ಪ್ರಯತ್ನಿಸಿದಲ್ಲಿ ತಮ್ಮ ಮುಖ್ಯೋದ್ದೇಶವು ಕೈಗೂಡಬಹುದು. ಹಾಗೂ ಪರಿಸ್ಥಿತಿ ನೋಡಿದಲ್ಲಿ ಅವತಾರಿ ಪುರುಷರ ಆವರ್ಭಿಸುವ ಕಾಲವು ಸಮೀಪಿಸಿರುವದೆಂದೂ ನನ್ನ ಮತ.



# ಮುಕ್ತಿಯು ಮಾರ್ಗ

( ಲೇಖಕರು:. ಶ್ರೀ ಅಲ್ಲಯ್ಯನವರಮಠ ಮು. ಬೆಳಗಾಂವಿ )



ಬ್ರಹ್ಮ ಸೃಷ್ಟಿ ವಿಶಾಲವಾಗಿದೆ, ಈ ವಿಶಾಲ ಸೃಷ್ಟಿಯಲ್ಲಿ ಸೇಂದ್ರಿಯ ಮತ್ತು ನಿರೀಂದ್ರಿಯ ಎಂಬೆರಡು ಭಾಗಗಳು. ಪೃಥ್ವಿ, ಆಪ್, ತೇಜ, ವಾಯು, ಆಕಾಶ ಮತ್ತು ಧಾತುಗಳೆಲ್ಲವೂ ನಿರೀಂದ್ರಿಯುಗಳು. ಇವಕ್ಕೆ ಸುಖ ದುಃಖಗಳ ವೇದನೆಯಾಗಲಾರದು. ಆದರೆ ಗಿಡ, ಬಳ್ಳಿ. ಕ್ರಿಮಿ-ಕೀಟಕ ಮತ್ತು ಪ್ರಾಣಿಗಳೆಲ್ಲ ಸೇಂದ್ರಿಯುಗಳು. ಸೇಂದ್ರಿಯುಗಳಿಗೆ ಇಂದ್ರಿಯಗಳಿವೆ. ಅಂತಲೇ ಅವುಗಳಿಗೆ ವೇದನೆ ಸುಖ-ದುಃಖಗಳ ಕಲ್ಪನೆಯಿದೆ. ಸೇಂದ್ರಿಯ ಸೃಷ್ಟಿಯಲ್ಲಿ ಮಾನವನೇ ಶ್ರೇಷ್ಠನು. ಮಾನವ ಚೈತನ್ಯದ ಪರಮಾವಧಿ. ಅವನ ಜ್ಞಾನ ಸಾಧನ ತೀವ್ರವಾದುದು. ಅಂತಲೇ ಅವನಲ್ಲಿ ತಾನ-ತನ್ನದು ಸುಖ-ದುಃಖಗಳ ಭಾವ ಬೆಳೆದು ಬಂದಿದೆ. ಶ್ರೇಷ್ಠ ಮಾನವರು ಇದನ್ನು ನೆಚ್ಚರು, ಅವರು ಇತರ ಪ್ರಾಣಿಗಳಂತೆ ಕ್ಷಣ ಭಂಗಾರ ಸುಖಕ್ಕಾಗಿ ನೆಚ್ಚಿ ದುಡಕದೆ ವರ್ತಮಾನ, ಭೂತ ಮತ್ತು ಭವಿಷ್ಯತ್ತುಗಳ ತ್ರೈರಾಶಿಕದಿಂದ ಲೆಕ್ಕ ಹಾಕಿ ಶಾಶ್ವತ ಪರಮ ಸುಖಕ್ಕಾಗಿ ಹೆಣಗುವರು.

ಮುಕ್ತಿಯೆಂದರೆ ನಿಸ್ಸೀಮ ಸುಖ. ನಿತ್ಯಾನಂದದ ಆಗರ. ಅದೊಂದು ವಸ್ತುವಲ್ಲ. ಜ್ಞಾನಿಗಳ ಮನೋವೃತ್ತಿ. ಚಿತ್ತಸ್ಥಿತಿ ಅಮೃತ ತೊರೆಯಂತೆ ಹರಿಯುವ ನಿತ್ಯಾನಂದ ವಾಹನವೇ ಮುಕ್ತಿ. ಅದು ಅನುಪಮವಾದುದು. ಮುಕ್ತಿಯಲ್ಲಿ ಸದೇಹ ಮುಕ್ತಿ ಮತ್ತು ವಿದೇಹ ಮುಕ್ತಿ ಎಂಬೆರಡು ವಿಧಗಳು. ಜೀವ ಇರುವಾಗಲೇ ನಿತ್ಯಾನಂದದ ನಿಸ್ಸೀಮ ಸುಖವನ್ನನುಭವಿಸುವದೇ ಸದೇಹ ಮುಕ್ತಿ. ಮತ್ತು ದೇಹಪಾತದನಂತರ ಪುನರ್ಜನ್ಮವಿಲ್ಲದೆ ಆ ಸುಖವನ್ನನುಭವಿಸುವದೇ ವಿದೇಹ ಮುಕ್ತಿ. ಜೀವನ್ಮುಕ್ತಿ ಮುಖ್ಯವಾದುದು. ಜೀವನ್ಮುಕ್ತಿಯಿಂದ ಬೇಕಾದದ್ದನ್ನು ಸಾಧಿಸ ಬಹುದು. ಜೀವನ್ಮುಕ್ತಿಯಾದವನಿಗೆ ಎಲ್ಲ ಸುಖಗಳೂ ಬೆಲ್ಲಕ್ಕೆ ಇರುವೆ ಬರುವಂತೆ ತಾವೇ ತಾವಾಗಿ ಬರುವವು. ಜೀವನ್ಮುಕ್ತಿಯಾಗಬೇಕಾದರೆ ಸಂಕುಚಿತ ಭಾವನೆ ಕಮರಬೇಕು. ಅನುಭಾವ ಜ್ಞಾನ ಚಿಗುರಬೇಕು. ಅನುಭಾವ ಜ್ಞಾನ ವೆಂದರೆ ಶಾಕ್ಷಾತ್ಕಾರ, ಸಾಕ್ಷಾತ್ಕಾರವೇ ಮುಕ್ತಿಯ ಮೊದಲು ಮೆಟ್ಟಲು-

ಅಂಗವಿಲ್ಲದ ರೂಪವ ಕಂಡು ಮರುಳಾದೆನವ್ವಾ ।
ಆತನ ಕಂಡು ಬೆರಗಾದೆನವ್ವಾ! ಎನ್ನಂತರಂಗದ ।
ಆತ್ಮನೊಳಗೆ ಅನುಪಮ ನಿಜೈಕ್ಯ ಗುಹೇಶ್ವರನ ಕಂಡು ॥

ಆರಳಿದು ಮೂರಾಗಿ, ಮೂರಳಿದು ಎರಡಾಗಿ, ಎರಡಳಿದು ಒಂದಾದಾಗ ಬರುವದು ಅನುಭಾವ. ಅದರಿಂದಾಗುವ ಆನಂದ ಅತೀತವಾದುದು. ಆ ಅನುಭಾವದ ಚಿತ್ತ ಸಮಾಧಿಯಲ್ಲಿ ದಿವ್ಯಜ್ಞಾನದ ಪ್ರಕಾಶವೊಂದು ಕಾಣುವದು. ಅದು ಕಂಡುಂಡುಮಾನವ ಅನುಭಾವಿಯಾಗುವನು. ಈ ಅನುಭಾವಿಯೇ ಸಾಕ್ಷಾತ್ಕಾರಿಯು. ಅವನು ಲೀಲಾವಿಹಾರಿಯಾಗಿರುವನು. ಅವನಿಗೆ ಯಾವ ಕೊರತೆಯೂ ಇಹದಲ್ಲಿಲ್ಲ. ಸಾಕ್ಷಾತ್ಕಾರಿಯು ಭಾವ ಸಮಾಧಿಯಲ್ಲಿ ಆತ್ಮನೊಡನೆ ಲೀನವಾಗುವನು. ಅವನಿಗೆ ಉಳಿದುದೆಲ್ಲ ಹೇಯವಾಗುವದು. ನೇಮ, ಪೂಜೆ, ಜಪ, ತಪಗಳೆಲ್ಲ ಬೇಡಾಗುವದು.

ಲಿಂಗವೆನ್ನೆ ಲಿಂಗೈಕ್ಯವೆನ್ನೆ ಸಂಗವೆನ್ನೆ ಸಮರಸವೆನ್ನೆ ।
ನೀನೆನ್ನೆ ನಾನೆನ್ನೆ ಚನ್ನಮಲ್ಲಿಕಾರ್ಜುನನಲ್ಲಿ ಐಕ್ಯವಾದ।
ಬಳಿಕ ಏನೂ ಎನ್ನೆ ॥ ಎಂದಿದ್ದಾಳೆ ಮಹಾದೇವಿಯಕ್ಕ

ಮುಕ್ತಿಯಿಂದಾಗುವ ಆನಂದ ಅವರ್ಣನೀಯವಾದುದು. ಶಬ್ದಾತೀತವಾದುದು. "ಅಂತರಂಗ, ಬಹಿರಂಗ, ಆತ್ಮಸಂಗ, ಒಂದೇ ಅಯ್ಯಾ. ಆರೂಢದ ಸುಖವ ಕೂಡಲಸಂಗಮದೇವನೇ ಬಲ್ಲ" ಪೂರ್ಣ ಜ್ಞಾನಿಯಾದವನಿಗೆ ಕರ್ಮವು ಕರಗಿ ಪುನರ್ಜನ್ಮವಿಲ್ಲದಾಗುವದು. ಸಾಕ್ಷಾತ್ಕಾರದ ಸಾಧನೆಗೆ ಈ ಒಂದು ಸಾಧನ ಮಾತ್ರ. ಕಾಯದ ಪರಿವೆ ಅವನಿದ್ದರೆ ಸರ್ವನಾಶವಾಗುವದು. ಕಾಯ ಒಂದು ಯಂತ್ರ ಪರಮಾತ್ಮ ಯಾಂತ್ರಿಕ.

ಹಾವಿನ ಹಲ್ಲಕಳೆದು ಹಾವನಾಡಿಸ ಬಲ್ಲಡೆ
ಹಾವಿನ ಸಂಗವೇ ಲೇಸು ಕಂಡಯ್ಯಾ! ಕಾಯದ
ಸಂಗವ ವಿವರಿಸಬಲ್ಲಡೆ ಕಾಯದ ಸಂಗವೇ ಲೇಸು ಕಂಡಯ್ಯಾ ॥
ತಾಯಿ ರಕ್ಕಸಿಯಾದಂತೆ ಕಾಯ ವಿಕಾರವು ಚನ್ನ-
ಮಲ್ಲಿಕಾರ್ಜುನಯ್ಯಾ
ನಿನ್ನೊಲಿದವರು ಕಾಯಗೊಂಡಿದ್ದರೆನಬೇಡ.

ಇಂತು ಸಂಸಾರದಲ್ಲಿದ್ದು ಸದ್ಗತಿಯನ್ನು ಹೊಂದುವದೇ ಜೀವನ್ಮುಕ್ತಿ. ಅವನು ಸೃಷ್ಟಿ ಜಾಲದಲ್ಲಿದ್ದರೂ ಆಶಾರಹಿತ. ಅವನ ತನ, ಮನ, ಧನಗಳೆಲ್ಲ ಆತ್ಮಮಯವಾಗಿರುವವು. ಸಾಕ್ಷಾತ್ಕಾರಿಯು ಜೀವನದಲ್ಲಿದ್ದರೂ ಘೃತಸೊಂಕದ

ತಾವರೆಯಂತೆ ಇರುವನು. ಅವನು ನಿಷ್ಕಾಮಪ್ರೇಮಿ, ಫಲದಾಶೆಯಿಲ್ಲದೆ ಪರಹಿತಕ್ಕಾಗಿ ದುಡಿಯುವನು. ಅವನು ನಿರಪೇಕ್ಷ, ನಿತ್ಯ ಮುಕ್ತ. ಮಾಟ ಕೂಟಗಳೆರಡೂ ಒಂದೇ ಅವನಿಗೆ. ಆತ ಅನಾಮಯಿ, ಅಹಂಭಾವ ಅವನಿಗಿಲ್ಲ.

ಸತ್ತ ಬಳಿಕ ಮುಕ್ತಿಯೆಂಬುದು ಬರಿ ಭ್ರಾಮಕ ಮಾತ್ರ. ಜೀವನ್ಮುಕ್ತಿ ಅವಶ್ಯವಾದದು. ಅದೇ ಸಹಜ ಸಮಾಧಿಯ ಬೆಳಕು. ಸಹಜ ಎಂದರೆ ಚಿತ್ತವು ಸಂಪೂರ್ಣವಾಗಿ ಪರಮಾತ್ಮನಲ್ಲಿ ಲೀನವಾಗುವದು. ಈ ಸಮಾಧಿಯ ಬೆಳಕಿನಲ್ಲಿ ಉಳಿದುದೆಲ್ಲವೂ ತಾನೇ ತಾನಾಗಿ ಕಾಣುವದು.

ಜ್ಞಾನ ನಿಷ್ಠೆಯಿಂದ ಮುಕ್ತಿ ಸಾಧ್ಯ. ನಿಜ ಭಕ್ತ-ಜ್ಞಾನಿ ನಿಸ್ಸಂಗಿಯಾಗಿರುವನು. “ತನ್ನ ತಾನರಿದು ತಾನಾರೆಂದು ತಿಳಿದರೆ ತಾನೇ ದೇವರು ನೋಡಾ” ಅವನೇ ಚೈತನ್ಯ ಸ್ವರೂಪಿ. ಇದಕ್ಕೆ ಸ್ವರೂಪ ಜ್ಞಾನವೆನ್ನುವರು. ಸ್ವರೂಪ ಜ್ಞಾನದ ಸಹಜ ಸಮಾಧಿಯಲ್ಲಿ ಪಡೆಯುವ ದಿವ್ಯಾನಂದವೇ ಸಾಕ್ಷಾತ್ಕಾರ. ಮುಕ್ತಿಯು ಸಾಕ್ಷಾತ್ಕಾರದ ಪ್ರತೀಕ. ಆಧ್ಯಾತ್ಮ ಸತ್ಯದ ಪ್ರತ್ಯಕ್ಷ ಜ್ಞಾನವೇ ಅನುಭಾವ ಸಾಕ್ಷಾತ್ಕಾರ. ಅನುಭಾವಿ ನಿಸ್ಸೀಮ ಆನಂದ ಸಾಮ್ರಾಜ್ಯದ ಸಾಮ್ರಾಟ. ಅನುಭಾವವೆಂದರೆ ಆತ್ಮವಿದ್ಯೆ. ಸಾಕ್ಷಾತ್ಕಾರದ ಸಹಜ ಪರಿಣಾಮವೇ ಮುಕ್ತಿ. ಜೀವನ್ಮುಕ್ತಿಯಾದವಂಗೆ ಆಕಾಶ ಭೂ ಪಾತಾಳಗಳೆಲ್ಲ ಒಂದೇ ಲೋಕಾಲೋಕಗಳ ಭೇದ ಅವನಿಗಿಲ್ಲ.

ಅರುಣೋದಯಕ್ಕೆ ಕತ್ತಲೆ ಹರಿದು ಬೆಳಕು ಪುರಸ್ಕರಿಸುವಂತೆ !<br>ಸಮ್ಯಕ್-ಜ್ಞಾನವೆನಗಾಗಿ ಅಜ್ಞಾನ ಬೀಜ ಮಲಸಂಸಾರ ತೊಲಗಿ<br>ಪರಮಾತ್ಮ ತಾನೆಂದರಿದು ಆ ಅರಿದರಿವು ಕರಿಗೊಂಡು<br>ಪರಶಿವನೊಡನೆ ಸಮಭಾವಿಯಾದಾತನೇ ಮುಕ್ತನಯ್ಯಾ ॥

ಕಾಯವೇ ಮರ ಸಾಕ್ಷಾತ್ಕಾರವೇ ಹೂವು<br>ಮುಕ್ತಿಯೇ ಫಲ.

# ವೀರಶೈವ ಧರ್ಮದ ಪ್ರಾಚೀನತೆಯು ಮತ್ತು ಕುರುಹುಗಳು

( ಲೇಖಕರು:- ಶ್ರೀ ಷ. ಬ್ರ. ಶಿವಪ್ರಕಾಶ ಸ್ವಾಮಿಗಳು ಉಜ್ಜಯಿನಿ ಮಠ ಬೆಂಗಳೂರು )



ಭಾರತಭೂಮಿ ಪುಣ್ಯಭೂಮಿ. ಇದು ಸಮೃದ್ಧಿಯಾದ ಖನಿಜ ಸಂಪತ್ತಿನಿಂದಲೂ ಜಗತ್ತಿನ ಎತ್ತರವಾದ ಹಿಮಾಲಯದ ಪರ್ವತಶ್ರೇಣಿಯಿಂದಲೂ ಔಷಧಗಳಿಂದಲೂ ತುಂಬಿ ಮಂಗಳಮಯವಾಗಿದೆ. ಪುಣ್ಯ ನದಿಗಳಿಂದ ಆವೃತವಾಗಿ "ಪುಣ್ಯಭೂಮಿ ಭಾರತ" ವೆಂದು ಅನ್ವರ್ಥವಾಗಿರುವದಲ್ಲದೆ ಅನೇಕ ದೈವಾಚಾರ ಸಂಭೂತರೂ ಆಚಾರ್ಯರೂ ಋಷಿಗಳೂ ಆದ ಮಹಾತ್ಮರ ಜನ್ಮಭೂಮಿ ಯಾಗಿ ಆಧ್ಯಾತ್ಮನಾಡೆಂದು ಪ್ರಖ್ಯಾತವಾಗಿದೆ.

ನಮ್ಮ ಸಂಸ್ಕೃತಿಯಾದರೂ ಉಚ್ಚ ಸಂಸ್ಕೃತಿ. ಇತ್ತೀಚಿಗೆ ನಡೆದ ಹರಪ್ಪಾ ಮಹಾಂಜದಾರೊ ಎಂಬ ಪ್ರಸಿದ್ಧ ಭೂಗತ ನಗರಗಳ ಸಂಶೋಧನೆಯಿಂದ ಐದುಸಾವಿರ ವರ್ಷದ ಪ್ರಾಚೀನ ಶೈವ ಸಂಸ್ಕೃತಿಯು ನಾಗರಿಕತೆಯನ್ನು ಕಾಣಬಹುದಾಗಿದೆ. ಈ ಪವಿತ್ರಭೂಮಿಯಲ್ಲಿ ದ್ವೈತ ಅದ್ವೈತ ವಿಶಿಷ್ಟಾದ್ವೈತ ಶಕ್ತಿ ವಿಶಿಷ್ಟಾದ್ವೈತ ವೆಂಬ ವೇದ ಧರ್ಮಗಳೂ ಮುಖ್ಯವಾಗಿದ್ದು ಸಾಂಖ್ಯ. ಬೌದ್ಧ. ಜೈನಮತಗಳು ಪ್ರಚಾರದಲ್ಲಿವೆ. ಮತ್ತು ನವೀನಕಾಲ ಧರ್ಮವನ್ನು ಅನುಸರಿಸಿ ಸಾಮಾಜಿಕ ಧರ್ಮಗಳು ಉದಯವಾಗಿವೆ. ಆದಕಾರಣ ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ಆಧ್ಯಾತ್ಮಿಕತೆಯಲ್ಲಿ ಮಾರ್ಗದರ್ಶವಾಗಿದೆ. " ಧರ್ಮೇಣಧಾರ್ಯತೆ ಲೋಕಃ " ಎಂಬಂತೆ ಲೋಕವು ಧರ್ಮದಿಂದ ಹಿಡಿಯಲ್ಪಟ್ಟಿದೆ.

ಚಾರಿತ್ರಿಕವಾಗಿ ನೋಡಿದರೆ ಮೊದಲು ಗವಿಗಳಲ್ಲಿ ವಾಸಮಾಡುತ್ತ ಅರಣ್ಯವಾಸಿಗಳಾದ ಜನಾಂಗ ಸಂಸ್ಕೃತಿ ಬೆಳೆದಹಾಗೆ ಗುಡಿಗೋಪುರಕಟ್ಟಿ ಪ್ರತಿಷ್ಠಿತ ಲಿಂಗಮೂರ್ತಿಗಳನ್ನು ಪೂಜಿಸಿದರೆಂದು ತಿಳಿಯಬಹುದು.

ಜ್ಞಾನದ ಪ್ರಚಾರ ಹೆಚ್ಚಿ ಸುಸಂಸ್ಕೃತರಾದ ಜನಗಳು ಧರ್ಮ ಗುರುಗಳಿಂದ ವಿವಿಧ ಧರ್ಮಗಳನ್ನು ಹೊಂದಿದರೆಂದು ಹೇಳಬಹುದು. ಯಾವ

ಧರ್ಮದ ಹಿನ್ನೆಲೆಯನ್ನು ನೋಡಿದರೂ ಶಿವಸಂಸ್ಕೃತಿ ಸಂಬಂಧ ಇದ್ದೇ ಯಿರುತ್ತದೆ. ಚಿತ್ರದುರ್ಗದ ಚಂದ್ರವಳ್ಳಿನಗರ ಚಾರಿತ್ರಿಕರ ಅಭಿಪ್ರಾಯ ದಂತೆ ನಾಲ್ಕುಸಾವಿರ ವರ್ಷಗಳಿಂದೂ ಗೊತ್ತಾಗಿದೆ. ಇಲ್ಲಿ ಇತ್ತೀಚಿಗೆ ಭಾರತ ಸರಕಾರದವರು ಪ್ರಾಚ್ಯವಸ್ತು ಪ್ರದರ್ಶನಾಲಯುನ್ನಿಟ್ಟಿದ್ದಾರೆ. ಇಲ್ಲಿ ಸ್ಪಷ್ಟವಾಗಿ ನೋಡಬಹುದು.

## ಚಂದ್ರವಳ್ಳಿ

ಈ ಪುರಾತನ ಚಂದ್ರವಳ್ಳಿ ನಗರವು ಹೂತು ಹೋಗಿರುವ ಭವ್ಯ ಮನೆಗಳಿಂದಲೂ ಸಮಾಧಿಯಿಂದಲೂ ಅರಮನೆ, ದೇವಾಲಯ, ಮತ್ತು ನಾಣ್ಯ ಬ್ರಾಹ್ಮಲಿಪಿ ಮೊದಲಾದ ಪ್ರಾಚೀನ ಕಲಾಕೃತಿಯಿಂದ ಆಚ್ಯಳಿಯ ದೆಯಿದೆ. ಈ ನಗರದ ಭವ್ಯ ದೇವಾಲಯುವಾದ ಸಿದ್ಧೇಶ್ವರ ದೇವಾಲಯದಲ್ಲಿ ಸುಂದರವಾದ ವೀರಭದ್ರ, ಗಣಪತಿ, ಲಕ್ಷ್ಮಿ, ಸರಸ್ವತಿ, ಮೊದಲಾದ ಶಿಲ್ಪಿನೈ ಪುಣ್ಯವುಳ್ಳ ಕಲಾಮೂರ್ತಿಗಳಿವೆ. ಈ ದೇವಾಲಯ ಎತ್ತರವಾಗಿದ್ದರಿಂದ ಅಲ್ಲಲ್ಲಿ ಶಿಥಲವಾಗಿದೆ ಸ್ವಲ್ಪ ಸಮೀಪದಲ್ಲಿ ಕನ್ನಡನಾಡಿನಲ್ಲಿ ಆಚ್ಯರಿ ಪಡುವ ಧವಳೇಶ್ವರ ಬೆಟ್ಟ ಅತಿ ಎತ್ತರವಾಗಿದ್ದು ನೀಳವಾಗಿದೆ. ಮೇಲಕ್ಕೆ ಹತ್ತಲು ಸ್ಥೂಲ ಶರೀರಗಳಿಗಸಾಧ್ಯ ಮೊದಲು ಬಾಗಿಲಲ್ಲಿ ಸೀಳು ಬಂಡೆಯು ಮನು ಷ್ಯನ ಗಾತ್ರವನ್ನು ಪರೀಕ್ಷೆ ಮಾಡುತ್ತಿದೆ. ನಂತರ ಮೇಲಕ್ಕೆ ಹೋಗಲು ಬೆಳಕೂ ಧೈರ್ಯವೂ ಅಗತ್ಯ. ಇದೇರೀತಿ ಇನ್ನೂರಡಿ ಮೇಲಕ್ಕೆ ಹೋದ ನಂತರ ಬೇಕು ಬಯಲು ಸಿಗುತ್ತದೆ. ಅಲ್ಲಿಂದ ಚಪ್ಪಟಕಲ್ಲಿನ ಸಹಾಯ ದಿಂದ ಇನ್ನೊಂದು ಬೆಟ್ಟಕ್ಕೆ ದಾಟಿ ಇದೇ ರೀತಿ ಅರ್ಧ ಫರ್ಲಾಂಗ ಮೇಲಕ್ಕೆ ಹೋದನಂತರ ಅಲ್ಲಿ ನೀರಿನ ದೊಣೆಯೂ, ಗಣಪತಿಯೂ, ಶಿವ ದೇವಾಲಯ ಶಾಸನವೂ ಮತ್ತು ವಿಶಾಲವಾದ ಬೆಟ್ಟದಮೇಲೆ ಪಂಚಲಿಂಗ ಗಳೂ ಇವೆ. ಧವಳೇಶ್ವರನೆಂಬ ಶರಣನು ವಾಸವಾಗಿದ್ದು ಸಾಲವನ್ನು ತೀರಿ ಸಲು ದುಗ್ಗಾಣಿಯನ್ನು ಬೇಡಿ ಋಣಮುಕ್ತನಾದ್ದರಿಂದ ದುಗ್ಗಾಣಿ ಧವ ಳೇಶ್ವರ ಬೆಟ್ಟವೆಂದು ಪ್ರಸಿದ್ಧಿಯಾಗಿದೆ.

## ಚಿನ್ಮೂಲಾದ್ರಿ

ಈ ಬೆಟ್ಟಕ್ಕೆ ಸೇರಿದ ಹಾಗೆ ವಿಚಿತ್ರವಾದ ಬಂಡೆಗಳಿಂದ ಕೂಡಿದ ಪರ್ವತ ಶ್ರೇಣಿ ಇದೆ. ಆದ್ದರಿಂದ ಇದಕ್ಕೆ ಚಿನ್ಮೂಲಾದ್ರಿಯೆಂದು ಹೆಸರು

ಈ ಬೆಟ್ಟ ಪ್ರಾಚೀನವಾದ ನೆಲ್ಲಿಕಾಯಿ ಲಿಂಗೇಶ್ವರ ಫಾಲ್ಗುಣೇಶ್ವರ ಮೊದಲಾದ ಶಿವದೇವಾಲಯುಗಳಿಂದಲೂ ಏಳು ಸುತ್ತಿನ ಕೋಟೆಯಿಂದಲೂ ಸುತ್ತಿದೆ. ಪರ್ವತ ಶ್ರೇಣಿಗಳಲ್ಲಿ ಐದು ತಾರಿಗಳು ಇವೆ. ಪರ್ವತದ ಮಧ್ಯದಲ್ಲಿ ಹಳೇ ಪಟ್ಟಣವೂ ಏಕನಾಥೇಶ್ವರೀ ಮೊದಲಾದ ಶಕ್ತಿ ದೇವಾಲಯುಗಳೂ ವ್ಯಾಯಾಮ ಶಾಲೆಗಳೂ ಕೂಡ ಇರುತ್ತವೆ.

## ಪಂಚಾಚಾರ್ಯರು

ಭವ್ಯ ಗುಹಾಂತರ ಸಂಪಿಗೆ ಸಿದ್ಧೇಶ್ವರವೆಂಬ ಹೆಸರಿನಿಂದ ರೇವಣ ಸಿದ್ದೇಶ್ವರ ದೇವಾಲಯವಿದೆ. ಅಲ್ಲಿ ರೇಣುಕರ ಶಿವಯೋಗನಿಲಯವೂ ರುದ್ರ ಮುನಿ ಶಿವಾಚಾರ್ಯರ ವಿಗ್ರಹಗಳಿವೆ. ೫ ಅಡಿ ಎತ್ತರದ ಭವ್ಯವಾದ ಶಿಲ್ಪಿ ಕಲಾ ವೈಭವದಿಂದ ಕೂಡಿದ ವೀರಭದ್ರನ ವಿಗ್ರಹವೂ ವಿಜಯನಗರ ಕಾಲದ ಈರ್ವ ಲಿಂಗಾಯತ ನಾಯಕರ ವಿಗ್ರಹಗಳೂ ದೇವಾಲಯ ಪ್ರವೇಶಿಸುವ ಕಾಲದಲ್ಲೇ ಗೋಚರಿಸುವವು. ವಿಶಾಲವಾದ ಕೆಂಡ ಸಂಪಿಗೆ ವೃಕ್ಷಗಳಿವೆ. ಒಂದು ಶಾಸನವೂ ಕೂಡ ಇರುವದಲ್ಲದೆ. ಪಂಚಪೀಠಗಳಲ್ಲಿ ಧರ್ಮಾಧಿಕಾರಿಗಳಿಗೆ ಯೋಗ್ಯವಾಗಿದೆ. ಸಮೀಪದಲ್ಲಿ ಸರೋವರವು. ವೀಶ್ವೇಶ್ವರನ ದೇವಾಲಯವು ಪ್ರಶಾಂತವಾಗಿದೆ. ಇನ್ನೊಂದೆಡೆಯಲ್ಲಿ ಒಂದೇ ಬಂಡೆಯ ಮೇಲೆ ದೊಡ್ಡದಾದ ಮಲ್ಲಿಕಾರ್ಜುನ ದೇವಾಲವೂ ಅದರಲ್ಲಿ ಕುಮಾರ ಸ್ವಾಮಿ ವಿಗ್ರಹ, ನವಗ್ರಹಗಳು ವೀರಭದ್ರ ಮೊದಲಾದ ಶಿವಗಣರಿಂದ ಕೂಡಿದ ಈ ಮಲ್ಲಿಕಾರ್ಜುನ ದೇವಾಲಯವು ಹಿಡಿಂಬಾಸುರ ಪೂಜಿಸಲ್ಪಟ್ಟುದಾಗಿ ಶಾಸನ ತಿಳಿಸುತ್ತದೆ.

ಈಮಧ್ಯೆ ವೈರಾಗ್ಯ ಸಿಂಹಾಸನವೆಂದು ಪ್ರಖ್ಯಾತಿ ಪಡೆದ ಏಕೋರಾಮ ಪೀಠವಾಗಿದ್ದ ಬೃಹದಾಕಾರದಚಾರಿತ್ರಿಕ ಮರವೂ ಇದೆ.

ಈ ಬೆಟ್ಟಕ್ಕೆ ಎರಡು ಮೈಲು ದೂರದಲ್ಲಿ ಹಿಮಕೇದಾರವೆಂಬ ಶೀತಲವಾಗಿ ಹೆಸರಿಗೆ ತಕ್ಕಹಾಗಿದೆ. ಇಲ್ಲಿ ಚಾಮುಂಡೇಶ್ವರೀ ವಿಗ್ರಹವೂ ಲಿಂಗವೂ ನಂದಿಯೂ ಇದ್ದು ಯಾವಾಗ್ಲೂ ಈ ಲಿಂಗದ ಮೇಲೆ ಮೇಲಿನಿಂದ ಪ್ರಕೃತಿದತ್ತವಾಗಿ ಸಹಸ್ರಾರು ಸನಿಗಳು ಧಾರಾಕಾರವಾಗಿ ಕುಂಭಾಭಿಷೇಕ ನೆಡೆಯುತ್ತಿದೆ. ಈ ನೀರು ಬಸವನ ಬಾಯಿಂದ ತೀರ್ಥವಾಗಿ ಬಂದು ದೊಡ್ಡ ಕೆರೆಸೇರುತ್ತದೆ. ಮೇಕೆ ಕಾಯುವದನ್ನು ಶರಣನು ಪೂಜಿ

ಸಿದ ಆಡು ಮಲ್ಲೇಶ್ವರ ದೇವಾಲಯವೂ ದೊಡ್ಡ (ಕಲ್ಯಾಣಿಯೂ) ಸರೋವರವೂ ಪ್ರಕೃತಿಯ ಮಡಲಲ್ಲಿ ನಿಸರ್ಗದ ಆನಂದವನ್ನುಂಟು ಮಾಡುತ್ತಿದೆ. ಈ ರೀತಿ ಪ್ರಾಚೀನವಾದ ಶೈವ ಧರ್ಮದ ಕುರುಹು ಪ್ರತ್ಯಕ್ಷವಾಗಿಯೂ ಅಗೋಚರವಾಗಿಯೂ ಪ್ರಕಾಶಮಾನವಾಗಿದೆ.

---

# ಶಿವಾನುಭವ ಮಂಟಪ ಕಲ್ಯಾಣ

(ಲೇಖಕರು:- ಗುರಲಿಂಗಪ್ಪ ವೀರಪ್ಪ ಹಾಲಪ್ಪನವರು ಮು. ಬೆಲ್ಲದ ಬಾಗೇವಾಡಿ)

ಅಣ್ಣಾ ನೋಡುನು ಬಾರೆ। ಅಕ್ಕಾ ನೋಡುನು ಬಾರೆ। ಅಪ್ಪಾ ನೋಡುನು ಬಾರೆ। ಕಲ್ಯಾಣ ಪಟ್ಟಣದ ವೀರಶೈವ ಮಹಾ ಸಭೆಗೆ ॥ ಪಲ್ಲ ॥

ರೊಕ್ಕಾ ಖರ್ಚುಮಾಡಿ ಶಿವಾನುಭವ ಮಂಟಪ ಕಟ್ಟಿದರು। ಎಲ್ಲ ಕಡೆಯ ಜನರು ಕೂಡುವರು. ಎಸೆವ ಕಲ್ಯಾಣದೊಳು ಆಸಮ ಶಿವ ಭಕ್ತಿಯು ಬಸವಾದಿ ಪ್ರಮಥರ ವಚನ ಪೇಳುವರು। ಕೇಳುವ ಜನ ಮನ ರಂಜನಗೊಳಿಸುವರು ॥೧॥

ವೇದ ಶಾಸ್ತ್ರಪುರಾಣ ಕಥೆಯು ಒಂದೊಂದು ವಚನದಲಿ ಪೇಳುವರು। ಜನರಲ್ಲಿ ಭಕ್ತಿಯ ಉಂಟುಮಾಡುವರು। ಬಾಗೇವಾಡಿ ಭಕ್ತಿ ಬಸವನ ಲೀಲೆ ಪೇಳುವರು। ಅವನು ಮಾಡುವ ಕೀರ್ತಿ ಪೊಗಳುವರು। ಒಂದು ಲಕ್ಷ ತೊಂಬತ್ತಾರು ಸಾವಿರ ಜಂಗಮರ ನೊಡಗೂಡಿ ವಚನಾಮೃತವನ್ನು ಬಾಯಿಂದ ಸುರಿಸುವರು ॥೨॥

ಲಿಂಗ ಪೂಜೆಯ ಮಹಿಮೆ ತೋರುವರು। ಪಾದಪೂಜೆ ತೀರ್ಥ ಪ್ರಸಾದ ಮಹಿಮೆಯ ಅರುಹುವರು। ಇಂಥ ಮಹಿಮನು ಇಹ ಲೋಕದಲ್ಲಿ ಬಸವನೆಂಬ ನಾಮವ ಧರಿಸಿ, ಕಲ್ಯಾಣದಲ್ಲಿ ಕೀರ್ತಿಯಪೊಂದಿ, ಕೂಡಲಸಂಗಮನಾಥನಲ್ಲಿ ಮುಕ್ತಿಹೊಂದಿದನು ॥೩॥

---

# ಉರುಳು ಹಗಲು ಇರುಳಿನೊಡನೆ



—( ೧ )—

ಅದೋ ನೋಡು ನಲಿಯುತ್ತಿದೆ.
ಚಣದಿ ಕಾಲ ಗತಿಸುತಿದೆ
ಇರುಳಿನಲ್ಲಿ ನಿದ್ರೆಯೊಡನೆ
ಹಗಲಿನಲ್ಲಿ ಎಚ್ಚರೊಡನೆ
ಹೀಗೆ ಜಗವೆಲ್ಲ ತಣಿದು
ಸುಖ-ದುಃಖದೊಡನೆ ಕವಿದು
ಸದಾ ಚಲಿಸುತಿರುವ ದಿನವೆ!
ಉರುಳು ಹಗಲು ಇರುಳಿನೊಡನೆ

—( ೨ )—

ಮೊನ್ನೆ ಮೊನ್ನೆಯಾಗಿ ಹೋಯ್ತು
ನಿನ್ನೆ ನಿನ್ನೆಯಾಗಿ ಹೋಯ್ತು
ಇಂದಿಗಿಂದಿಗಾಗಿ ಮುಗಿದು
ನಾಳೆ ನಾಳೆಗಾಗಿ ಇರಲಿ
ಅಳಿದ ದಿನಗಳೆಮಗೆ ಇಲ್ಲ
ಕಳೆದ ವೇಳೆ ಸಿಗುವದಿಲ್ಲ
ಎಂತು ಗತಿಸುತಿರುವೆ ದಿನವೆ
ಉರುಳು ಹಗಲು ಇರುಳಿನೊಡನೆ

—( ೩ )—

ದಿನವು ಗತಿಸಿ ದಿನವು ಬಂದು
ಜನಕ್ಕೆ ಹೊಸತು ಕಳೆಯ ತಂದು
ಸೂರ್ಯಚಂದ್ರರೊಡನೆ ನಲಿದು
ಒಲಿದು ತೋಷದಿಂದ ಬೆರೆದು

ಮಾಯ ಪಾಶದಿಂದ ಬಿಗಿದು
ಹಾಯಾಗಿ ಹುದು ದೇವಲೀಲೆ
ಸಹಜ ನಿನಗಿದೆಲ್ಲ ದಿನವೆ
ಉರುಳು ಹಗಲು ಇರುಳಿನೊಡನೆ.

—( ೪ )—

ನೀನು ಮರಳಿದಂತೆ ಜಗವು
ಉರುಳಿ ಹೊರಳಿ ಬರುತಲಿಹುದು
ಅರಿಯದಂತೆ ದಿನವು ದಾಂಟಿ
ವರುಷಚಕ್ರ ತಿರುಗುತಿಹುದು
ದುಃಖದೊಡನೆ ಒಮ್ಮೆ ಅಳುವು
ಸುಖದೊಡನೆ ಒಮ್ಮೆ ನಗುವು
ಇದುವೆ ನಿನ್ನ ಕರ್ಮದಿನವೆ!
ಉರುಳು ಹಗಲು ಇರುಳಿನೊಡನೆ.

ಶ್ರೀ ಶಿ. ವಿ. ಕಂಬಿ. ಶಾಲಾ ಗುರುಗಳು (ಮುದವಾಲ)

---

## ಚಂದಾದಾರರಲ್ಲಿ ವಿನಂತಿ

ಇನ್ನು ಮುಂದೆ ಶಿವಾನುಭವ ಪತ್ರಿಕೆಯ ಮೂಲಕ ಶಿವಾನುಭವ ತತ್ವಪ್ರಚಾರ ಕಾರ್ಯಗಳನು ಬಲವಾಗಿ ಸಾಗಿಸುವೆವು. ಈ ದೃಷ್ಟಿಯಿಂದ ಅದರಲ್ಲಿಯ ಲೇಖಗಳಲ್ಲಿ ಆವಶ್ಯಕ ಮಾರ್ಪಾಡುಗಳನ್ನು ಮಾಡುವೆವು. ಈ ಸಂಗತಿಯನ್ನು ಶಿವಾನುಭವ ವಾಚಕರು ಮುಂದಿನ ತಿಂಗಳಿನ ಸಂಚಿಕೆ ಯಲ್ಲಿಯೇ ಕಾಣುವರೆಂದು ನಾವು ನಿಶ್ಚಿತವಾಗಿ ತಿಳಿಸಲು ಬಯಸುತ್ತೇವೆ.

೧೫-೨-೧೯೫೫

ಫ. ಗು. ಹಳಕಟ್ಟಿ.
ಸಂಪಾದಕ
ಶಿವಾನುಭವ

# ಯಶೋದೀಪ



ಸಮಸ್ತ ನಿಜಗುಣ ಜನವರ ಬಸವಣ್ಣ
ಶಮಹಠ ವರಕರ ನೀಡೆಲೆ ಜಗದಣ್ಣ
ಸುಮನ ಭರ ಸುಜನಗಣ ಪ್ರಥಮ
ದಮನಧರ ಚಿರ ಭಕುತ ಸಂಗಮ ॥

ಶಿವದಾಸವರ ಕಲ್ಯಾಣ ಧರ ಮುಕ್ಕಣ್ಣ
ಭವಪಾಶಹರ ಕಲ್ಯಾಣನಿಕರ ರನ್ನ
ಶಿವತೇಜಧರ ನರ ಚಿರಮಹಿಮ
ಶಿವಲಿಂಗಧರ ವರ ಹರ ನಿಯಮ ॥

ಅವತಾರ ಪುರುಷ ವರಭಕ್ತಿಯ ಕೋಶ
ಶಿವಪಾರ ಧರ ಪರುಷ ಶರಣಗಣೇಶ
ನವಜೇಣ ರಸ ಭರಿತಸುಮವನ
ತವ ರಚಿತ ವರ ಕನ್ನಡ ವಚನ ॥

ಯಶದೀಪ ಚಿರವಿರಲಿ ಕನ್ನಡದರುಣ
ದೆಶೆಯೆಲ್ಲ ಕಡೆಹ ಕಡೆ ಹರಡಲಿ ತವಕಿರಣ
ರಸದುಸಿರುಮಿಡಿಯುತಿರಲಿ ವಾಣಿ
ರಸರಂಗವರ ಕನ್ನಡ ರಾಣಿ ॥

ಹಿಂಗಮಿರೆ ಬಿ. ಟಿ.
ಬೆಳಗಾಂವಿ.



ಸಂಪುಟ ೨೯ ಸಂಚಿಕೆ ೩.



# ಶಿವಾನುಭವ



॥ ಸಂಪಾದಕರು ॥

ಫ. ಗು. ಹಳಕಟ್ಟಿ,

ಬಿ. ಎ. ಎಲ್. ಎಲ್. ಬಿ.



ವಾ. ಚ. ೫-೧೨-೦] ವಿಜಾಪೂರ [ಮಾರ್ಚ ೧೯೫೫

# ವಿಷಯಾನುಕ್ರಮಣಿಕೆ





# ಶಿವಾನುಭವ

ಸಂಪುಟ ೨೯ | ಮಾರ್ಚ ೧೯೫೫ | ಸಂಚಿಕೆ ೩

## ಅಕ್ಕನ ಸಾಹಿತ್ಯದ ಸೊಬಗು

[ಶ್ರೀ ಮ. ಮಲ್ಲಪ್ಪ ಹಲಗೂರು ಜಿ॥ ಮಂಡ್ಯ]

ಕನ್ನಡ ಸಾಹಿತ್ಯದ ಪುರಾತನ ಲೇಖಕಿಯರಲ್ಲಿ ತೇಜಸ್ವಿನಿಯು ಅಕ್ಕ ಮಹದೇವಿ ವೀರ ತಪಸ್ವಿನಿ. ಬಸವನ ಮಹಾ ಕಾರ್ಯದಲ್ಲಿ ದೀಕ್ಷೆವಹಿಸಿದ ಅಕ್ಕ ಮಹದೇವಿ ಕನ್ನಡ ಪ್ರೇಮಿ; ಉಜ್ವಲ ಭಕ್ತಳು, ಸಮಾಜ ಸೇವಕಿ, ರುದ್ರಕನ್ನಿಕೆಯು. ಸರ್ವಾಂತರ್ಯಾಮಿಯಾದ ದೇವರನ್ನು ಎಲ್ಲೆಲ್ಲೂ ಕಂಡು ಶಿವನೇ ಗಂಡನೆಂದು ತನ್ನ ಆತ್ಮವನ್ನೂ, ಜೀವವನ್ನೂ ಶಿವಕಾರ್ಯಕ್ಕೆ ಅರ್ಪಣ ಮಾಡಿ, ದೊಡ್ಡ ಧರ್ಮ ಚಳುವಳಿಗಾಗಿ ನಾಡನ್ನೆಲ್ಲಾ ಸುತ್ತಿ ವಚನಗಳಲ್ಲಿ ತನ್ನ ಕಾಣ್ಕೆಯನ್ನು ಬೀರಿ ಆವೇಶ ಹುಟ್ಟಿಸಿದಳು.

ಉಡುತಡಿ ಎಂಬುದು ಒಂದು ಊರು. ಇದು ಪ್ರಕೃತಿ ಸೌಂದರ್ಯದ ನೆಲೆವೀಡು. ಶಿವಭಕ್ತಿ ಸಂಪನ್ನರಾದ ನಿರ್ಮಲ ಮತ್ತು ಸುಮತಿ ಇವರು ದಾಂಪತ್ಯ ಧರ್ಮವನ್ನು ದಳದಳಿತವಾಗಿ ನಿರ್ವಹಿಸಿಕೊಂಡು ಹೋಗುತ್ತಿದ್ದರು. ಮಹಾ ಶಿವಭಕ್ತ ಶಿರೋಮಣಿಗಳ ಉದರದಲ್ಲಿ ನಾರೀರತ್ನವೊಂದು ಹನ್ನೆರಡನೆ ಶತಮಾನದಲ್ಲಿ ಉದಯವಾಯಿತು. ಈ ರತ್ನವೇ ಅಕ್ಕ ಮಹಾದೇವಿಯು. ಜನಿಸುವಾಗಲೇ ಭಕ್ತಿ ಬಾಳ್ವೆಯು ಜೊತೆಯಲ್ಲಿಯೇ ಬಂದಿತು. ಬರಬರುತ್ತ ಸುಗುಣದ ಸುಲೇಪನವು ಚರ್ಮದ ಜೊತೆಯಲ್ಲಿಯೇ ಅಂಟಿಕೊಂಡಂತೆ ಅರಳುತ್ತಲಿತ್ತು. ಎಂಟನೆಯ ವಯಸ್ಸಿಗೆ ಸಂಸ್ಕೃತ ಕನ್ನಡ ಭಾಷೆಯಲ್ಲಿ ಪ್ರವೀಣತೆಯನ್ನು ಪಡೆದಳು. ಶ್ರೀ ಗುರುವಿನ ಕೃಪೆಯಿಂದಲೋ ಏನೋ ಎಂಬಂತೆ ಅಕ್ಕನ ಅಂತರಾಳದಲ್ಲಿ ಜ್ಞಾನಜ್ಯೋತಿಯು ಬೆಳಗು

ತ್ತಿತ್ತು. ಹೃದಯದಲ್ಲಿ ವೈರಾಗ್ಯದ ನೆಲೆಯಾಗಲು ಅನುವು ಅನುಕೂಲ ವಾಗಲು ಸತತ ಧ್ಯಾನ, ತಪಸ್ಸು, ನಿಷ್ಠೆಯು ನಿಡಿದಾಯಿತು. ಈಕೆಯ ಹೃದಯಾಂತರಾಳದಲ್ಲಿ ಸತ್ಯ ಪ್ರದೀಪ್ತಿಯು ಬೆಳಗಲು ಪ್ರಾರಂಭವಾಯಿತು. ಅಕ್ಕನ ಹೃದಯವು ದಯೆ ಪ್ರೀತಿಗಳಿಂದ ತುಂಬಿ ತುಳುಕಾಡುವಂತಾಯಿತು. ಹಿಂಸೆಗಾರರನ್ನು ಕಂಡು, ಹಿಂಸಾಮಯ ಜೀವಿಗಳನ್ನು ನೋಡಿ ಚಿಕ್ಕಂದಿ ನಲ್ಲಿಯೇ ಚೀತರಿಸಿಕೊಂಡು ಉದ್ರಿಕ್ತಳಾದಳು. ಕಾರುಣ್ಯವು ಕೊನರೇರು ತ್ತಿತ್ತು. ತಂದೆ ತಾಯಿಗಳ ಇಚ್ಛೆಯು ಗೃಹಿಣಿಯಾಗಬೇಕೆಂಬ ದು. ಆದರೆ ಈಕೆಯದು ತನ್ನದೇ ಆದ ನಡತೆ, ಆಚಾರ ವಿಚಾರವು ಇರಲು ತಂದೆ ತಾಯಿಗಳ ಅಭಿಲಾಷೆಗೆ ಅಡ್ಡಿಬರದೆ ತಾನೇ ಏನಾದೀತು ! ಪರಶಿವ ನನ್ನೇ ಮದುವೆಯಾಗುವೆನು ಎಂದು ಹೇಳಿದಳು. ಆದರೂ ತಂದೆತಾಯಿ ಗಳ ಬಲಾತ್ಕಾರಕ್ಕಾಗಿ ಕೌಶಿಕ ಮಹಾ ರಾಜನಿಗೆ ನಾಮಕಾವಸ್ಥೆ ಸತಿ ಯಾದಳು. ಅಲ್ಲಿಯೂ ತನ್ನದೇ ಆದ ಹಾದಿ. ಕೌಶಿಕನ ಅರಮನೆಯು ಅಕ್ಕನ ಆತ್ಮಪರೀಕ್ಷಾ ವಿಜ್ಞಾನಶಾಲೆಯಾಯಿತು. ಅಲ್ಲಿ ಅಕ್ಕನ ಧ್ಯಾನ, ಪೂಜೆಗಳು ಸಾಂಗೋಪಾಂಗವಾಗಿ ಸಾಗುತ್ತ ನಡೆದವು. ಅಲ್ಲಿಯೂ ಅಡ್ಡಿಯು ಮಧ್ಯೆ ಬಂದು ಆ ಅರಮನೆಯಿಂದ ಬಿಡುಗಡೆಯಾಗಿ ಕಲ್ಯಾಣ ದತ್ತ ಹೊರಟು ಕಾಡು ಬೆಟ್ಟಗಳಲ್ಲಿ ಅಲೆಯುತ್ತಾ ಸುತ್ತಾಡುತ್ತಾ ಸಾಗಿ ದಳು. ಸಾಧಕನು ಎಂತಹ ಕಷ್ಟ ಪರಂಪರೆಗೂ ಎದೆಗೊಡಬಲ್ಲನೆಂಬ ನುಡಿಯೂ ಅಕ್ಷರಶಃ ಸತ್ಯ ಪೂರ್ಣವು. ಚೆನ್ನ ಮಲ್ಲಿಕಾರ್ಜುನನ ಧ್ಯಾನ ದಲ್ಲಿ ಅಕ್ಕನು ತಲ್ಲೀನಳಾಗಿ ದೇಶದೇಶದಲ್ಲಿ ಅಲೆಯುವಾಗ ತನ್ನ ಸ್ವಾಮಿ ಯಲ್ಲಿ ಮೊರೆಯಿಡುವ ಭಾವಭಂಗಿಯನ್ನು ಹೇಳತೀರದು. ಶರಣರ ಸಂಗ ದಿಂದ ಪುನೀತಳಾಗುವ ಅಭಿಲಾಷೆಯೇ ಈಕೆಯ ಕೃಷಿಯಾಗಿತ್ತು. ಕಲ್ಯಾಣ ಪಟ್ಟಣವನ್ನು ಸೇರಿ, ಅಲ್ಲಿನ ಶರಣ ಶರಣೆಯರ ಜೊತೆಯಲ್ಲಿ ವಾದವಿವಾದ ಮಾಡಿ ಜಯಶೀಲೆಯಾಗಿ, ಅನಂತರ ಶ್ರೀಶೈಲದ ಚನ್ನಮಲ್ಲಿಕಾರ್ಜುನನಲ್ಲಿ ಬೆರೆದಳು.

ಈ ಬಗೆಯ ಜೀವನದಿಂದ ಧಾವಿಸಿದ ಈಕೆಯ ಚರಿತ್ರೆಯನ್ನು ಹೇಳ ತೀರದು. ಈ ಪರಿಯಿರುವಲ್ಲಿ ಸಾಹಿತ್ಯ ಸಾಮಗ್ರಿಯು ಈಕೆಗೆ ಏನಾದರೂ ಒದಗಿತ್ತೇ ? ಪ್ರತಿಭೆ, ವ್ಯುತ್ಪತ್ತಿ, ಅಭ್ಯಾಸ ಈ ಸಂಗಮತ್ರಯದಿಂದ ಹೊರ ಡುವ ಕವನವು ಉತ್ತಮ ಮಟ್ಟಕ್ಕೆ ಸೇರುತ್ತದೆ. ವ್ಯುತ್ಪತ್ತಿ ಮತ್ತು ಅಭ್ಯಾಸಗಳಿಂದ ಪ್ರತಿಭೆಗೆ ಒಂದು ಹೊಸ ಸಂಸ್ಕಾರವು ಆಗುತ್ತದೆ.

ಅಭ್ಯಾಸದಿಂದ ಸಂಸ್ಕಾರವನ್ನು ಪಡೆದ ಪ್ರತಿಭೆಯು ಕಾವ್ಯವೆಂಬ ಅಮೃತವನ್ನು ಕರೆಯುವ ಕಾಮಧೇನು ಎನಿಸಿಕೊಂಡಿದೆ. ಸರ್ವತೋಮುಖವಾದ ತಿಳಿವಿಗೆ ವ್ಯುತ್ಪತ್ತಿ ಎಂದು ಕಾವ್ಯಾನುಶಾಸನದ ಹೇಮಚಂದ್ರನು ಹೇಳಿದ್ದಾನೆ. ವ್ಯುತ್ಪತ್ತಿಯ ಬಲದಿಂದ ಔಚಿತ್ಯ, ಅನೌಚಿತ್ಯವು ತಿಳಿಯುತ್ತದೆ. ಅಕ್ಕನವರಿಗೆ ಜನ್ಮಾರಂಭದಲ್ಲಿಯೇ ಪ್ರತಿಭೆಯು ಪ್ರವಹಿಸುತ್ತಿತ್ತು. ಹೃದಯೋಲ್ಲಾಸಕರವಾದ ಅನುಭವವನ್ನು ವ್ಯಕ್ತಪಡಿಸುವ ಶಬ್ದರಾಶಿಯೇ ಕಾವ್ಯವು. ಕವಿಯಾಗಬೇಕಾದರೆ ಋಷಿಯ ಅಂಶವಿರಬೇಕಂತೆ. ಅಕ್ಕನವರ ಜೀವನವೇ ಋಷಿಗಿಂತ ಮಿಗಿಲಾದ ಮಹಾ ಸಾಧಕನ ಜೀವನಕ್ಕೆ ಸರಿಗಟ್ಟಿದೆ. ಅಕ್ಕನು ಕಲಿತು ಕಾವ್ಯ ರಚನೆಯನ್ನು ಮಾಡಿಲ್ಲ. ಕೀರ್ತಿಗಾಗಿ ಸಾಹಿತ್ಯವನ್ನು ಸೃಷ್ಟಿಸಲಿಲ್ಲ. ಈಕೆಯ ಅನುಭವ ಕಾವ್ಯಶಕ್ತಿಯಾಗಿಹುದರಿಂದಲೇ ಹರಿಹರನು ಕಾವ್ಯ ನವನೀತವನ್ನು ನೀಡಿದ್ದಾನೆ.

ಕ್ಷುದ್ರಂಗೆ ಸಕಲ ಸುಜನೋ ।
ಪದ್ರವ ರೂಪಂಗೆ ಪರಮ ಕಾವ್ಯಾರ್ಥಮುಮಂ ।
ಛಿದ್ರಿಸುವಂಗತಿ ಶಬ್ದದ ।
ರಿದ್ರಂಗಕ್ಕ ಮೊನ ವೀನ ಕಾವ್ಯಾರಂಭಮಂ ॥

ಈಕೆಯನ್ನು 'ಸಾಹಿತ್ಯ ನಿಧಿ' 'ಸಕಲ ಕಲಾಕೋವಿದೆ' ಎಂದು ಹರಿಹರನೂ 'ಸ್ವಾನುಭವ ಸಾಗರೆ' 'ತತ್ವಶಿಖಾಮಣಿ' ಎಂದು ಸಿದ್ಧವೀರಣ್ಣೊಡೆಯನೂ ನುತಿಸಿದ್ದಾರೆ. ಈಕೆಯ ಅಪಾರವಾದ ವೈದುಷ್ಯಕ್ಕೆ ಚೆನ್ನಬಸವಣ್ಣನು ಮೆಚ್ಚಿದನು.

ಆದ್ಯರ ಅರುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ.
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ.
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ.
ಅಜಗಣ್ಣನ ಐದು ವಚನಕ್ಕೆ ಕೂಡಲ ಚನ್ನಸಂಗಯ್ಯನಲ್ಲಿ
ಮಹಾದೇವಿಯಕ್ಕನ ಒಂದು ವಚನ.

ಚಾಮರಸ ಷಡಕ್ಷರಾದಿ ಕವಿಗಳು ತಮ್ಮ ತಮ್ಮ ಕಾವ್ಯಗಳ ಆದಿಯಲ್ಲಿ ಅಕ್ಕನನ್ನು ನೆನೆಯದೆ ನುತಿಸದೆ ಬಿಟ್ಟಿಲ್ಲ. ತನ್ನ ವಿರಕ್ತಿಯಿಂದ ಸರ್ವರನ್ನೂ ಅಕ್ಕನು ಅಚ್ಚರಿಗೊಳಿಸಿದಂತೆ ತನ್ನ ಅನುಪಮ ವೈದುಷ್ಯದಿಂದ ತಲೆದೂಗಿಸಿದ್ದಾಳೆ. ಮುಪ್ಪಿನಲ್ಲಿ ವಚನ ರಚನೆಗೆ ಕೈ ಹಾಕದೆ

ತುಂಬು ತಾರುಣ್ಯದಲ್ಲಿಯೇ ವಚನ ರಚನೆಗೆ ಕೈ ಹಾಕಿದ್ದಾಳೆ. ಅಕ್ಕನ ವಚನ ಯೋಗಾಂಗ ತ್ರಿವಿಧ ಸೃಷ್ಟಿಯ ವಚನ ಅಕ್ಕಗಳ ಪೀಠಿಕೆ ಎಂಬ ನಾಲ್ಕು ಗ್ರಂಥಗಳು ಈಕೆಯಿಂದ ಬರೆಯಲ್ಪಟ್ಟವೆ.

ಅಕ್ಕನವರ ವಚನಗಳು ಕಾವ್ಯಮಯವಾಗಿವೆ. ಅಕ್ಕನ ಅನುಭವ, ಭಾವನೆಗಳು, ಆ ಭಾವನೆಗಳು ಸಂಪೂರ್ಣವಾಗಿ ಅಂತಃಕರಣವನ್ನು ವ್ಯಾಪಿಸಿ ತುಂಬಿ ತುಳುಕಹತ್ತಿ ಅವುಗಳನ್ನು ಪರರಿಗೆ ನಿವೇದಿಸಬೇಕೆಂಬ ಉತ್ಕಟವಾದ ಸ್ತ್ರೀ ಸಹಜವಾದ ಬಯಕೆ, ಪರಮೇಶ್ವರ ವಿಷಯಕವಾದ ಭಕ್ತಿ, ಅದರ ಉದ್ರೇಕವು ಇವುಗಳು ನಮ್ಮೆಲ್ಲರನ್ನೂ ನಮಿರೇಳಿಸದೆ ಇರವು. ಈಕೆಯದು ಪ್ರಸಾದವಾಣಿ. ಪ್ರಪಂಚದಲ್ಲಿ ಪಾರಮಾರ್ಥವಿದೆಯೆಂದು ದೊಡ್ಡವರು ಹೇಳುವುದುಂಟು; ಆದರೆ ಅಕ್ಕನವರು ಪಾರಮಾರ್ಥದಲ್ಲಿ ಪ್ರಪಂಚವನ್ನು ಕಲ್ಪಿಸಿದ್ದಾರೆ. ಪುಟ್ಟಪುಟ್ಟ ಪದಗಳಲ್ಲಿ ಗೂಢಾರ್ಥವನ್ನು ಅಡಕ ಮಾಡಿಕೊಂಡು ಹೃದಯ ಚೆಲುವನ್ನು ಹೊರಗೆಡಹುವಂತಹ ವಚನವು ಇವರದು.

ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ;
ಬೆಳೆದೆನು ಅಸಂಖ್ಯಾತರ ಕರುಣದೊಳಗೆ.

ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ, ಪರಮಾರ್ಥವೆಂಬ ಸಕ್ಕರೆಯು ನಿಕ್ಕಿದಿರಿ ನೋಡಾ ! ಇಂತಪ್ಪ ತ್ರಿವಿಧಾಮೃತವ ದಣಿಯಲೆರೆದು ಸಲಹಿದಿರಿ.

ಅಕ್ಕನು ಹೆಂಗಸಾದರೂ ಈಕೆಯಲ್ಲಿ ಲೋಕಾನುಭವ ಜ್ಞಾನ ಅಂತರಂಗದ ಅನುಭವ ಜ್ಞಾನವು ಬಲು ಚೆನ್ನಾಗಿ ಹೊಂದಿಕೊಂಡಿವೆ. ಹಲವಾರು ಅಪೂರ್ವ ಭಾವನೆಗಳು ಈಕೆಯ ಪ್ರತಿಭೆಯಲ್ಲಿ ಮಿಂಚುತ್ತವೆ ಸೊಗಸಾದ ಭಾವನೆಗಳು ವ್ಯಕ್ತವಾಗಿರುವುದು ಇಲ್ಲಿ ಕಾಣಬರುತ್ತದೆ.

'ಯತಿಗೆ ಪರಾಕಿಯಾಯಿತ್ತು ಮಾಯೆ'

'ಅರಸಿ ತೊಳಲಿದರಿಲ್ಲ, ಬಯಸಿ ಹೊಕ್ಕರಿಲ್ಲ, ತಪಸ್ಸು ಮಾಡಿದವರಿಲ್ಲ, ಅದು ತನ್ನ ಬಹಕಾಲಕ್ಕೆ ಸಾಧ್ಯವಾಗದು. ಶಿವನೊಲಿದಲ್ಲದೆ ಕೈಗೂಡದು.'

'ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯಾ.'

'ಕೂಡಿ ಕೂಡುವ ಸುಖವೇ ಲೇಸು ಕೆಳದಿ'

ಈಕೆಯು ಚೆನ್ನಮಲ್ಲಿಕಾರ್ಜುನನಿಗಾಗಿ ಮೊರೆಯಿಡುವುದು ಎಂತಹವರಿಗದರೂ ಹೃದಯದ್ರಾವಕವನ್ನು ಉಂಟುಮಾಡುತ್ತದೆ.

'ಆಲಿಸೆನ್ನ ಬಿನ್ನಪವ, ಲಾಲಿಸೆನ್ನ ಬಿನ್ನಪವ,
ಪಾಲಿಸೆನ್ನ ಬಿನ್ನಪವ, ಏಕೆನ್ನ ಮೊರೆಯ ನೋಡೆ
ಎನ್ನ ದುಃಖವ ಚನ್ನ ಮಲ್ಲಿಕಾರ್ಜುನಯ್ಯ.'

ಅಕ್ಕನವರ ವಚನದಲ್ಲಿ ಬಣ್ಣದ ಬೆಡಗು ಶೂನ್ಯವು. ಈ ವಚನವು ರಸಸ್ಫುರಿತ ಫಲವು. ಅಕ್ಕನವರ ನುಡಿಯು ಕೋಲು ಮುಟ್ಟಿದಲ್ಲಿ ಕೋಲ್ಜೇನಿನಿಂದ ಮಧುವು ಸುರಿಯುತ್ತದೆ,

'ಅಳಿಸಂಕುಳವೇ, ಮಾಮರವೇ ಬೆಳದಿಂಗಳೇ, ಕೋಗಿಲೆಯೇ
ನಿಮ್ಮ ನಿಮ್ಮನೆಲ್ಲರನು ಒಂದು ಬೇಡುವೆನು. ಎನ್ನೊಡೆಯ
ಚನ್ನ ಮಲ್ಲಿಕಾರ್ಜುನನ ಕಂಡರೆ ಕರೆದು ತೋರಿಸಿ.'

ಇಲ್ಲಿ ವಿಪ್ರಲಂಭ ಶೃಂಗಾರ ರಸವು ಕೋಡಿಯೊಡೆವ ಕೆರೆಯಂತೆ ಇದೆ. ಮಾಲೆಯಲ್ಲಿರುವ ಹೂವುಗಳನ್ನೆಲ್ಲಾ ಎಳೆಯು ಹೊಂದಿಕೊಂಡಿರುವಂತೆ ಪರಶಿವನು ಈ ಭವಮಾಲೆಯಲ್ಲಿ ಇರುವ ಸಕಲ ಪ್ರಾಣಿಗಳಲ್ಲೆಲ್ಲಾ ಪ್ರಸಂಸಿಕೊಂಡಿದ್ದಾನೆ. ಆದ ಕಾರಣ ಇವೆಲ್ಲವೂ ಆತನ ಪರಿಚಯವನ್ನು ಕೇಳಲು ಅರ್ಹವಾಗಿದೆ ಯೆಂಬುದೇ ಈಕೆಯ ಭಾವನೆಯು. ಕವಿ ಕಾಳಿದಾಸ ರಚಿತವಾದ ವಿಕ್ರಮೋರ್ವಶೀಯ ನಾಟಕದಲ್ಲಿ ನಾಯಕನ ವಿಕ್ರಮನು! ತನ್ನ ಪ್ರಿಯಳಾದ ಊರ್ವಶಿಯ ವಿಯೋಗದಿಂದ ಆರ್ತನಾಗಿ ಭೃಂಗಾದಿಗಳನ್ನು ಮೋಹ ಮೂಢನಾಗಿ ಕೇಳುತ್ತಾನೆ.

"ಮಧುಕರ ಮದಿರಾಕ್ಷ್ಯಾಃಶಂಸತಸ್ಯಾ: ಪ್ರವೃತ್ತಿಂ"

ಈ ಇಬ್ಬರ ವಿರಹ ತಾಪವು ಒಂದೇ ಬಗೆ ಆಗಿದ್ದರೂ ಭಾವವು ಮಾತ್ರ ಬೇರೆ ಬೇರೆಯಾಗಿದೆ. ಮೋಹಮೌಢ್ಯದಿಂದ ವಿಕ್ರಮನು ಕೇಳುವುದು, ಶಿವನು ಸರ್ವಾಂತರ್ಯಾಮಿ ಎಂಬ ಅರಿವಿನಿಂದ ಅಕ್ಕನು ಕೇಳುವುದು, ಅವುಗಳಲ್ಲಿ ವಿಕ್ರಮನು ತನ್ನ ಪ್ರಿಯ ಪ್ರೇಯಸಿಯನ್ನು ಪಡೆಯಲಾರನು. ಆದರೆ ಅಕ್ಕನು ಅವುಗಳಲ್ಲಿ ಆತನನ್ನು ಪಡೆಯಬಲ್ಲಳು. ಅಕ್ಕನು ತನ್ನ ಪ್ರಿಯನಾದ ಪರಮೇಶ್ವರನಿಗಾಗಿ ಹಂಬಲಿಸಿ ಹಾತೊರೆಯುತ್ತಾ "ನಿನ್ನ ಬರುವೆನ್ನ ಅಸುವಿನ ಬರವು ಬಾರಯ್ಯ" ಎನ್ನುತ್ತಾಳೆ. ಪ್ರಿಯೆಯೊಬ್ಬಳು ಪ್ರಿಯನಿಗಾಗಿ ಪ್ರಲಾಪಿಸುತ್ತಾಳೆ.

"ಗಚ್ಛ ಗಚ್ಛಸಿ ಚೇತಕಾಂತ ; ತತ್ರೈವ ಸ್ಯಾತ್ ಜನಿರ್ಮಮ ॥
ಎಲೈ ಮನೋಕಾಂತನೆ, ಹೊರಡುವುದಾದರೆ ಹೊರಡು. ನಿನ್ನನ್ನು ಬಿಟ್ಟಿರಲಾರದೆ ಅಸುಗಳ ಈಡಾಡಿ ಅಲ್ಲಿಗೆ ಬಂದುಬಿಡುವೆ.

ಕಾಮಿನಿಯೋರ್ವಳು ಉಡಿಗೆ ತೊಡಿಗೆಗಳನ್ನೆಲ್ಲವನ್ನೂ ಧರಿಸಿಕೊಂಡು ಅಲಂಕೃತಳಾಗಿದ್ದು, ಸಮಯಕ್ಕೆ ಸರಿಯಾಗಿ ತನ್ನ ಪ್ರಿಯನು ಬಾರದಿದ್ದಲ್ಲಿ ಆಕೆಗೆ ಯಾವ ಕಾತುರವು ಜನಿಸಬೇಕೋ, ಯಾವ ಕುತೂಹಲವು ಹುಟ್ಟಬೇಕೋ ಆ ಕಾತುರ ಕುತೂಹಲಗಳು ಅಕ್ಕನಿಗೆ ಚನ್ನಮಲ್ಲಿಕಾರ್ಜುನನಲ್ಲಿ ತುಂಬಿರುವುದನ್ನು ಇಲ್ಲಿ ನೋಡಿರಿ.

ಅರಸಿನವನೆ ಮಿಂದು, ಹೊಂದುತುಗೆಯನೆ ತೊಟ್ಟು
ಬಂದಿಹನೆಂದು, ಬಟ್ಟೆಯ ನೋಡಿ,
ಬಾರದಿರ್ದೊಡೆ ಕರಗಿಕೊರಗಿದನವ್ವಾ।
ತಡವಾದಡೆ ಬಡವಾದೆ ತಾಯಿ
ಚೆನ್ನಮಲ್ಲಿಕಾರ್ಜುನನ ಒಂದಿರುಳು ಅಗಲಿದಡೆ
ತೆಕ್ಕೆ ಸಡಲಿದ ಜಕ್ಕವಕ್ಕಿಯಂತಾದೆನವ್ವ!
ಕವಿ ರವೀಂದ್ರರ ಸಮರ್ಪಣಾ ಸೊಲ್ಲಿನತ್ತ ಸಾಗಿರಿ.

*Life of my life I ever try to keep my body pure knowing that their living touch is upon my limbs.*

*If thou showest me not thou face if thou leavest me whether aside I know not how I am to pass these long rainy hours.*

ಶೃಂಗಾರಿಗಳು ಅಲ್ಪಸುಖಕ್ಕಾಗಿ ಸಂತಾಪಗೊಳ್ಳುವ ಅವಸ್ಥೆಗಿಂತಲೂ ಹೆಚ್ಚು ಹೆಚ್ಚಾಗಿ ಚೆನ್ನಮಲ್ಲಿಕಾರ್ಜುನನನ್ನು ಕೂಡುವ ಕಡೆಯಿಲ್ಲದ ಸುಖಕ್ಕಾಗಿ ಅಕ್ಕನು ಹಂಬಲಿಸಿದ್ದಾಳೆ. ಈ ಹಂಬಲಿಕೆಯಿಂದ ಎಲ್ಲೆಲ್ಲಿಯೂ ಚೆನ್ನಮಲ್ಲಿಕಾರ್ಜುನನ ಸಗೀಗಳೇ ಅಕ್ಕನಿಗೆ ಆಗಿದೆ. ಇಡೀ ಪ್ರಕೃತಿಯನ್ನೇ ತನ ನಲ್ಲನಿಗಾಗಿ ಬೇಡುತ್ತಾಳೆ.

ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೇ?
ಸರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೇ?
ಎರಗಿ ಒಂದಾಡುವ ತುಂಬಿಗಳಿರಾ ನೀವು ಕಾಣಿರೇ ?

ಕೊಳನ ತಡಿಯೊಳಾಡುವ ನವಿಲುಗಳಿರಾ ನೀವು ಕಾಣಿರೇ ?
ಗಿರಿಗಹ್ವರದೊಳಗಾಡುವ ನವಿಲುಗಳಿರಾ ನೀವು ಕಾಣಿರೇ ?
ಚೆನ್ನಮಲ್ಲಿಕಾರ್ಜುನನೆಲ್ಲಿಹನೆಂದು ನೀವು ಹೇಳಿರೇ ?

ರಾವಣನಿಂದ ಅಪಹೃತಳಾದ ಸೀತಾದೇವಿಯನ್ನು ಕುರಿತು ರಾಮಚಂದ್ರನು ಸುತ್ತ ಮುತ್ತಣ ವನಪ್ರದೇಶದಲ್ಲೆಲ್ಲ ಹುಡುಕಿ ವೈದೇಹಿಯನ್ನು ಆ ವನಾಂತರದಲ್ಲಿ ಎಲ್ಲಿಯೂ ಕಾಣದೆ ಇದ್ದಾಗ ಪ್ರಕೃತಿಯ ಸರ್ವಸ್ಥಾವರ ಜಂಗಮ ಸತ್ವಗಳಿಗೂ ಮೊರೆಯಿಡುವುದು ನಾಗಚಂದ್ರನ ನುಡಿಯಿಂದ ಗೊತ್ತಾಗುತ್ತದೆ.

ಕಳ ಹಂಸಾಲ ಪಯಾನೆ ಯಂ ಮೃಗಮದಾಮೋದಸ್ಯ ನಿಶ್ವಾಸೆಯುಂ।
ತಳಿರೇ ತಾವರೆಯೇ ಮದಾಳಿ ಕುಲಮೇ ಕರ್ನಯ್ದಿಲೆ ಮತ್ತೆಕೋ।
ಕಿಳ ಮೇ ಕಂಡಿಲೆ ಪಲ್ಲವಾಧರೆಯ ನಂಭೋಜಾಸ್ಯೆಯಂ ಭೃಂಗ ಕಂ।
ತಳೆಯಂ ಕೈರವನೇತ್ರೆಯಂ ಪಿಕಳರವ ಪ್ರಖ್ಯಾತೆಯಂ ಸೀತೆಯಂ ||

ಈ ಸಂದರ್ಭ ಸನ್ನಿವೇಶಗಳೂ, ವರ್ಣನೆ ವಿವರಣೆಗಳೂ ಕವಿ ಹೃದಯದ ಮಧುರ ಭಾವನನ್ನೇ ವ್ಯಕ್ತಪಡಿಸುತ್ತದೆ. ಈ ವಚನಗಳಲ್ಲಿ ಕಾಣಬರುವ ಸೌಕುಮಾರ್ಯ, ಮಾಧುರ್ಯಗಳನ್ನೂ, ಅರ್ಥ ಭಾವಗಳನ್ನೂ, ಅವುಗಳಿಗೆ ಹೊಂದಿಕೊಂಡು ಬಂದಿರುವ ಪದ ಪ್ರೌಢಿಮೆಯನ್ನೂ ಶ್ರೋತೃಗಳ ಹೃದಯವನ್ನು ರಸಸ್ಯಂದಿಯನ್ನಾಗಿ ಮಾಡುವ ನಾದ ಲೀಲೆಯು ನಾಂಕೇಳಾಪಾಕದ ಸವಿಯೇ ಸರಿಯು, ನವೀನರ ದೃಷ್ಟಿಯಲ್ಲಿ ಇದೊಂದು ಅತ್ಯುತ್ತಮ ಭಾವ ಗೀತೆಯು.

ಶೃಂಗಾರ ರಸವನ್ನು ಭಕ್ತಿರಸವನ್ನಾಗಿ ಮಾಡಿಕೊಂಡು ಸ್ವಾತ್ಮಸುಖವನ್ನೂ, ಸಾಹಿತ್ಯಸೇವಾ ಸೌರಭವನ್ನೂ ಪಡೆಯ ಬಹುದು ಎಂಬ ಪಾಠವನ್ನು ಕಲಿಸಿದ ಗುರುವು ಅಕ್ಕನೇ ಆಗಿದ್ದಾಳೆ. ರಸಭಾವಗಳಿಲ್ಲದ ಸಾಹಿತ್ಯವು ನಿಜವಾದ ಸಾಹಿತ್ಯವಲ್ಲ, ಅದು ಆತ್ಮವಿಲ್ಲದ ಅಂಗಶರೀರ. ಆ ರಸಭಾವಗಳ ಗುರಿಯು ರಸ ಸುರಸವಾದ ವಸ್ತು ಭಾವದಲ್ಲಿ ಲೀನವಾಗಿಸುವುದೇ ಉತ್ತಮ ಸಾಹಿತ್ಯವು. ಜನ ಜೀವನವನ್ನು ಸದ್ರೀತಿಗೆ ಬದಲಾಯಿಸುವ, ಮಹೋನ್ನತಗೊಳಿಸುವ ಸಾಹಿತ್ಯವು ಅದೇ. ಜೀವ ಜೀವರ ಹೋರಾಟವನ್ನಲ್ಲದೆ ಶಿವ ಜೀವರ ಹೋರಾಟವನ್ನೇ ಅಕ್ಕನು ರಮ್ಯತೆಯಿಂದ ಚಿತ್ರಿಸಿದ್ದಾಳೆ. ಜೀವನನ್ನು ಶಿವನನ್ನಾಗಿ ಮಾಡುವಂತಹ ಸರಳ ಸುಂದರ ಸಾಹಿತ್ಯವನ್ನು ಅಕ್ಕನವರು

ಸೃಷ್ಟಿಸಿದ್ದಾರೆ. ಭಕ್ತಿಯು ಎರಳಸವಲ್ಲಿಯಿಂದು ರಸ ಭಾವಗಳ ಊಟೆಯಲ್ಲಿ ಹಾಸ್ರಸಛಂದಸ್ಸುಗಳ ಲಾಸ್ಯದಿಂದ ಮಧುರವಾಗಿ ಅಕ್ಕನವರ ವಚನಗಳು ಹೊರ ಸೂಸಿವೆ.

ಈಳೆ ನಿಂಬು ಮಾವುಮಾದಲಕ್ಕೆ ಹುಳಿನೀರೆರೆದವರಾರಯ್ಯ?
ಬಾಳೆ ಹಲಸುನಾರಿ ಕೇಳಕ್ಕೆ ಸಿಹಿನೀರೆರೆದವರಾರಯ್ಯ!
ಕಳೆವಶಾಲಿಗೆ ಓಗರದ ನೀರೆರೆದವರಾರಯ್ಯ ?
ಒಂದೇ ಜಲವು ಹಲವು ದ್ರವ್ಯಂಗಳ ಕೂಡಿತನ್ನ ಪರಿ ?
ಬೇರೆಯಾಗಿರ್ಪ ಹಾಗೆ ಎನ್ನದೇವ ಚೆನ್ನಮಲ್ಲಿಕಾರ್ಜುನನು
ಹಲವು ಜಗಂಗಳ ಕೂಡಿಕೊಂಡಿರ್ದಡೇನು? ತನ್ನ ಪರಿಬೇರೆ,

ಅಕ್ಕನು ಅವ್ಯಕ್ತ ಸೌಂದರ್ಯವನ್ನು ವ್ಯಕ್ತಿ ಪಡಿಸಲು ಬಾಹ್ಯ ಜಗತ್ತನ್ನು ಸಾಧನ ಮಾಡಿಕೊಂಡು ತೋರಿಸಿದ್ದಾಳೆ ರಸಋಷಿಗಳು 'ಸತ್ಯಂಶಿವಂ ಸುಂದರಂ ಎಂದಿದ್ದಾರೆ ಜಾನ್‌ಕೀಟ್ಸ್ '*Beauty is Trwth Trwth is Beauty*' ಎಂದಿದ್ದಾನೆ. ರಾಘವಾಂಕನು 'ಹರನೆಂಬುವೆ ಸತ್ಯ ಸತ್ಯವೆಂಬುದೆ ಹರನು' ಎಂದಿದ್ದಾನೆ. ಇದನ್ನೆಲ್ಲ ನೊಡಿದರೆ ದಿವ್ಯ ಜೀವನದಲ್ಲಿಯೇ ಬೆರೆತು ಸತ್ಯ ಕಾಮಿಯಾಗಿ ಹೋದ ಅಕ್ಕನ ಜೀವನದ ವಾಣಿಯು ಸಾಹಿತ್ಯೋದ್ಯಾನವನದಲ್ಲಿ ಕಲ್ಪತರು. ಈಕೆಯ ಸೊಲ್ಲು ಸಾಹಿತ್ಯದಸಾರವು. ಈ ಬಗೆಯ ಸಾಹಿತ್ಯದಿಂದಲೇ ರವಿಂದ್ರರು ಇಂತು ನುಡಿದಿದ್ದಾರೆ.

If the pictures which have taken shope in memory can be braight out in words they are worth a place in litratere ಅಕ್ಕನ ಅಮರಾನುಭವದ ನುಡಿಗೆ ಉತ್ತಮ ಸಾಹಿತ್ಯದಲ್ಲಿ ಜಾಗವಿಲ್ಲದೆ ಇಲ್ಲ. ಅಕ್ಕನ ಭಾಷೆಯುಗುಟ್ಟು ಗುರಿಯು ಈ ಸರಸ್ವತಿ ಸೂಕ್ತಿಯೇ ಆಗಿದೆ. "ಭಾಷೆಯು ಸತ್ಯವನ್ನು ಪ್ರೀಲೇಪಿಸುತ್ತದೆ. ಸದ್ಬುದ್ಧಿಯನ್ನು ಚೇತರಿಸುತ್ತದೆ" ಅರವಿಂದಾಶ್ರಮದ ಮದರ To will what god wills that is the supleme seeret"ಎಂದಿರುವುದಕ್ಕಿಂತಲೂ ಒಂದು ಹೆಜ್ಜೆ ಮುಂದೆ ಅಕ್ಕನು ದಾಟಿರುತ್ತಾಳೆ.

ಆಡಿದೆನಯ್ಯ ನೀನಾಡಿಸಿದಂತೆ
ಹಾಡಿದೆನಯ್ಯ ನೀ ಹಾಡಿಸಿದಂತೆ
ಆಪದೆನಯ್ಯ ನೀನಿರಿಸಿದಂತೆ.

ಭಗವಂತನನ್ನು ಜಗದ ಯಂತ್ರಚಾಲಕನಾಗಿ ಅಕ್ಕನು ಮಾಡಿರುವುದನ್ನು ಇದು ತಿಳಿಸುತ್ತದೆ. ಪ್ರೇಯಸಿಯಾಗಿ, ಕವಿಯಾಗಿ, ಹುಚ್ಚಿಯಾಗಿ ನಿತ್ಯದ ನಿಲುವನ್ನು ಮುಟ್ಟಿದ ಅಕ್ಕನು ತನ್ನೊಬ್ಬಳನ್ನು ಹೊರತು ಉಳಿದುದೆಲ್ಲವೂ ಭಗವಂತನೆಂದು ಚೆನ್ನಮಲ್ಲಿಕಾರ್ಜುನನನ್ನು ಕಾಣುತ್ತಾಳೆ.

ವನವೆಲ್ಲ ನೀವೆ, ವನದೊಳಗಣ ದೇವ ತರುವೆಲ್ಲ ನೀವೆ.
ತರುವಿನೊಳಗಾಡುವ ಖಗಮೃಗವೆಲ್ಲ ನೀವೆ.
ಚೆನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರ.

ಕಾವ್ಯ, ಅನುಭಾವ, ಪ್ರೇಮವು ಇಲ್ಲಿ ಮುಪ್ಪುರಿಗೊಂಡಿರುವುದರಿಂದ ಮೂರನ್ನೂ ಒಟ್ಟಿಗೆ ನೋಡಿದರೆ ಅಕ್ಕನ ವಚನಗಳಲ್ಲಿ ಅಧ್ಯಾತ್ಮ ಭಾವನೆಯು ತುಂಬಿ ತುಳುಕಾಡುತ್ತದೆ.

ತನು ನಿಮ್ಮ ರೂಪಾದ ಬಳಿಕ ನಾನಾರಿಗೆ ಮಾಡುವೆ ?
ಮನ ನಿಮ್ಮ ರೂಪಾದ ಬಳಿಕ ನಾನಾರ ನೆನೆವೆ ?
ಪ್ರಾಣ ನಿಮ್ಮ ರೂಪಾದ ಬಳಿಕ ನಾನಾರನಾರಾಧಿಸುವೆ ?
ಅರಿವು ನಿಮ್ಮಲ್ಲಿ ಸ್ವಯವಾದ ಬಳಿಕ ನಾನಾರನರಿವೆ ?
ಚೆನ್ನಮಲ್ಲಿಕಾರ್ಜುನಾ, ನಿಮ್ಮಲ್ಲಿ ನೀವಾಗಿ ನಿಮ್ಮಿಂದ ನಿಮ್ಮ
ಮರೆದನಯ್ಯ

ಈಕೆಯ ತನು, ಮನ, ಪ್ರಾಣ, ಅರಿವೆಲ್ಲವೂ ಚೆನ್ನಮಲ್ಲಿಕಾರ್ಜುನನಲ್ಲಿ ಸ್ವಯವಾಯಿತು. ಜೀವನದ ರಹಸ್ಯವನ್ನು ಉತ್ತಮ ಶೈಲಿಯಲ್ಲಿ ಈ ವಚನಗಳು ಚೆನ್ನಾಗಿ ಬೋಧಿಸಿವೆ. ಕಷ್ಟವಾದ ಗಹನವಾದ ತತ್ವ ವಿಷಯಗಳನ್ನು ಬಳಕೆಯ ಭಾಷೆಯಲ್ಲಿ, ಸುಲಭ ಶೈಲಿಯಲ್ಲಿ ಬೋಧಿಸುವ ಬಲವು ಅಕ್ಕನಿಗಿದೆ ಅಕ್ಕನವರ ವಚನದಲ್ಲಿ ಶಬ್ದ, ಅರ್ಥ, ಧ್ವನಿ, ನಾದ, ಭಾವಾದಿಗಳು ತಾವೇ ತಾವಾಗಿ ಸೃಷ್ಟಿಯಾಗಿ ಮಿಡಿದು ಹೃದಯ ವೀಣೆಯಿಂದ ರಾಗ ರಸ ಗಂಗೆಯು ತರಂಗ ತರಂಗವಾಗಿ ಪ್ರವಹಿಸುತ್ತಿಲ್ಲವೇ? ವಿಷಯ ಗರ್ಭಗುಡಿಯಲ್ಲಿ ಆತ್ಮಾರಾಮನ ಪ್ರಾಣ ಪ್ರತಿಷ್ಠೆಮಾಡುವ ಕಲಾ ಪುರೋಹಿತನೇ ಕವಿಯು. ಈ ಭವಿಷ್ಯತ್ತಿನ ಹಿತಸಾಧನೆಯ ದಾರ್ಶನಿಕ ಚಕ್ಷುಸ್ಸು ಪ್ರಸಾದ ರೂಪವಾಗಿ ಈಶ್ವರದತ್ತವಾಗಿ ಅಕ್ಕನವರಿಗೆ ಬಂದಿರುವುದು ತಿಳಿಯಬರುತ್ತದೆ. ಅಲಂಕಾರದ ಅಟ್ಟಣೆಯು ಅರಳದೆ ಇದೆಯೇ ?

ಮಾಘಮಾಸವು ಪೋಗಿ ಬೇಗೆ ಬಂದಿತು ಚೈತ್ರ ।
ಬೇಗ ಮಾಮರವು ತಳಿರಿತು. ಅದು ಕಂಡು ।
ಕೂಗಿ ಕರೆಯಿತು ಕಳಕಂಠ ॥

ಇಲ್ಲಿ ಸ್ವಭಾವೋಕ್ತಿಯು ಸೊಗಸಾಗಿ ತೋರುತ್ತಿಲ್ಲವೇ ?

ಪಶ್ಚಿಮದ ಕೊಳದಲ್ಲಿ ಪುಟ್ಟ ತಾವರೆ ಅರಳೆ ।
ನಿಚ್ಚಳ ಗಂಧವೆಸೆಯಲು ಅದು ಕಂಡು ।
ಮೆಚ್ಚಿ ಭ್ರಮರವೆಸಗಿತು ॥

ಬಂಜೆ ಬೇನೆಯರಿಯಳು ಬಲದಾಯಿ ಮುದ್ದ ಬಲ್ಲಳೇ ?
ನೊಂದ ನೋವ ನೋಯದವರೆತ್ತ ಬಲ್ಲರು? ಚೆನ್ನಮಲ್ಲಿಕಾರ್ಜುನ
ನೀಸಿರಿದಲಗು ಒಡಲಲ್ಲಿ ಮುರಿದು ಹೊರಳುವಳ ನೀವೆತ್ತ ಬಲ್ಲಿರೇ
ಎಲೆ ತಾಯಿಗಳಿರಾ ?

ರೂಪಕಾಲಂಕಾರವು ವ್ಯಕ್ತತೆಯಿಂದಿರುವುದು ಇಲ್ಲಿ ಕಾಣುತ್ತದೆ. ಹೀಗೆ ಉಪಮಾ, ಅರ್ಥಾಂತರವು ಅಲ್ಲಲ್ಲಿ ಅದ್ದಿ ಹೋಗಿರುತ್ತದೆ. ದಿನಚರಿಯ ಲೋಕಾನುಭವದಿಂದ ನೇರವಾಗಿ ಎಳೆದುಕೊಂಡ ಉಪಮೆಗಳು ಉಲ್ಲಾಸಕರವೇ ಆಗಿರುತ್ತವೆ.

"ಊರ ಸೀರೆಗೆ ಅಗಸ ತನೆಗೊಂಬಂತೆ"

"ತೇಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ ತನ್ನ ನೂಲು ತನ್ನ ಸುತ್ತಿ ಸಾವ ತೆರದಂತೆ"

"ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆದಂತೆ"

"ಕತ್ತಲೆಯ ಪಾಳೆಯವ ರವಿ ಹೊಕ್ಕಂತೆ"

ಹೇಳುವ ಅರ್ಥವನ್ನು ಒತ್ತಿ ಅನುಮೋದಿಸುವ ವಿಚಾರಗಳನ್ನು ಸುಲಭ ಗ್ರಾಹ್ಯವಾಗುವಂತೆ ಇವು ಮಾಡಿವೆ. ಅಂತೆಯೇ ಅಕ್ಕನು ದೃಷ್ಟಾಂತಾಲಂಕಾರಗಳನ್ನು ಕೂಡ ತಪ್ಪದೆ ಉಪಯೋಗಿಸಿದ್ದಾಳೆ. ಜಗತ್ತಿನಲ್ಲಿ ಜನಿಸಿದವನು ಸಮಾಧಾನಿಯಾಗಿರಬೇಕು ಎನ್ನಲು ದೃಷ್ಟಾಂತವನ್ನು ಕೊಟ್ಟಿದ್ದಾಳೆ.

'ಬೆಟ್ಟದಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದೊಡೆಂತಯ್ಯಾ?'

ಈಕೆಯ ಜಾಣ್ಮೆಯ ಸಾಹಿತ್ಯವನ್ನು ನೋಡಿದರೆ ನಮಗೆ ಯಾವ ಸಾಹಿತ್ಯ, ರೀತಿ, ತತ್ವ, ಶೈಲಿ, ಸೊಬಗು ಬೇಕೋ ಅದು ತಪ್ಪದೇ ಸಿಗುತ್ತದೆ.

'ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ'
'ಸಿಂಹದ ಮರಿಯು ಸೀಳ್ನಾಯಿ ತಿಂಬರೆ ಭಂಗವಿನ್ನಾರದೋ ?'
'ನಿನ್ನನೊಲಿದು ಕೊಂಡಾಡಿದಡೆ ಇರುವೆ ರುದ್ರನಾಗದೆ ಹೇಳಯ್ಯ?'
'ಅಪ್ಪುದರೆ ಅಷ್ಟಗಳು ನುಗ್ಗು ನುರಿಯಾಗಬೇಕು'

ಹೃದಯಸಾಗರವನ್ನು ಕಡೆದ, ತೆಗೆದ ಸುಧಾ ಧಾರೆಗಳು ಅಕ್ಕನ ವಚನಗಳು ಬಸವಣ್ಣನ ಭಕ್ತಿ, ಚೆನ್ನಬಸವಣ್ಣನ ಜ್ಞಾನ, ಮಡಿವಾಳಯ್ಯನ ನಿಷ್ಠೆ, ಪ್ರಭುದೇವರ ಜಂಗಮಸ್ಥಲ, ಅಜಗಣ್ಣನ ಐಕ್ಯಸ್ಥಲ, ನಿಜಗುಣನ ಆರೂಢ ಸ್ಥಲ, ಸಿದ್ಧರಾಮಯ್ಯನ ಸಮಾಧಿ ಸ್ಥಲ ಇವುಗಳೆಲ್ಲರ ಗುಟ್ಟು ಗಹನವನ್ನು ಕಂಡುಕೊಂಡು ಚೆನ್ನಮಲ್ಲಿಕಾರ್ಜುನನ ನೆಲೆಯನ್ನು ತಿಳಿದ ಸಹಜ ಭಕ್ತಳೇ ಅಕ್ಕ ಮಹಾದೇವಿಯು. ಸಾಹಿತ್ಯದ ಪ್ರಭಾವವು ವ್ಯಕ್ತಿತ್ವವನ್ನು ಅವಲಂಬಿಸಿದೆಯಂತೆ. ಅಕ್ಕನ ಅಂತರಂಗದ ಆಧ್ಯಾತ್ಮಿಕ ತೇಜದ ಹೆಗ್ಗುರುತು ಆಕೆಯ ವಚನ. ಆಕೆಯ ಆತ್ಮಾನಂದದ ಹೊಂಬೆಳಗು ಕನ್ನಡ ಸಾಹಿತ್ಯವನ್ನು ಬೆಳಗಿಸುವುದಿಲ್ಲವೇ ? ವೈರಾಗ್ಯ, ಶಿವಭಕ್ತಿಯ ಮಿಲನವೇ ಈಕೆಯ ಸಾಹಿತ್ಯಕ್ಕೆ ಹಿಮ್ಮೇಳನವು. ಈ ವೀರ ವೈರಾಗ್ಯದ ದೃಢತೆಯು ರುದ್ರ ರಮಣಿಯೇ ಸರಿಯು.

ಹಸಿವ ದೊಡೆ ಭಿಕ್ಷಾನ್ನವುಂಟು;
ತೃಷೆಯಾದೊಡೆ ಕೆರೆ ಹಳ್ಳ ಭಾವಿಗಳುಂಟು;
ಶಯನಕ್ಕೆ ಪಾಳು ದೇಗುಲವುಂಟು;
ಆತ್ಮಸಂಗಾತಕ್ಕೆ ಚೆನ್ನಮಲ್ಲಿಕಾರ್ಜುನನುಂಟು.

ಅಕ್ಕನ ಅಚಲಿತೆಯ ಮನೋಧರ್ಮದ ಆತ್ಮಾರ್ಪಣೆಯು ಮೇರು ಪರ್ವತದ ಔನ್ನತ್ಯವು. ಈ ಬಗೆಯ ಉನ್ನತೋನ್ನತ ವಚನಗಳು ಈಕೆಯ ಸಾಹಿತ್ಯ ಗಣಿಯಲ್ಲಿ ಬೇಕಾದಷ್ಟು. ಅಕ್ಕನ ವಚನಗಳು ಬರೀ ಕಾವೀ ಕಪಿನಿಯ ಅಯ್ಯಗಳಿಗೆ ಮಾತ್ರವಲ್ಲ; ಹಸುರು ಬಟ್ಟೆಯ ತೊಟ್ಟ ಫಕೀರನಿಗೆ. ಹಳದಿಯ ಉಡಿಗೆಯನ್ನು ಉಟ್ಟ ಹೊರಟ ಬೌದ್ಧ ಭಿಕ್ಷುವಿಗೆ, ಕಪ್ಪು ವಸ್ತ್ರವನ್ನು ಹೊದ್ದ ಪಾದ್ರಿಗೆ 'ಕಿಡಿಕಿಡಿ ಕಿದರಿದಡೆ' ಎಂಬ ವಚನಗಳೇ ಪ್ರಿಯತೆಗೆ ನಿದರ್ಶನವು. ಅನುಭವದ ವಚನಗಳ ಅಮೃತ ಕಿರಣಗಳು ಯಾರಿಗೆ ತಾನೇ ಬೇಡ ? ಸಂಸಾರ ನಿರಸನ, ಮಾಯಾ ಮದ ಭಂಗಾದಿ ವಚನವನ್ನು ಅನುಭವ ಸಾಣೆಗೆ ಕೊಟ್ಟು ಕಿಡಿ ಕೆದರಿಸಿದ್ದಾಳೆ. ಈ ಧೀರ ಸಂಯಮಿಯು ಸಾಹಿತ್ಯಸಕ್ಕರೆಯ ಕಣಜವನ್ನು ಇರುವೆಯಂತೆ ನುಸುಳಿ

ಆ ಮಧುರ ಸವಿಯನ್ನು ಸ್ವಾದಿಸಿ ತೂಗಿ ತೋರಿಸುವುದೇ ಕನ್ನಡಿಗರ ಭಾಗಕ್ಕೆ ಬಿದ್ದಿದೆ. ಈಕೆಯ ಹಿರಿತನವನ್ನು ಅನುಭವಮಂಟಪದಲ್ಲಿನ ಜ್ಞಾನ ಖನಿ ಚೆನ್ನಬಸವಣ್ಣನವರು ಚೆನ್ನಾಗಿ ಚಿತ್ರಿಸಿದ್ದಾರೆ.

ಅಜಕೋಟಿ ವರುಷದವರೆಲ್ಲರೂ ಹಿರಿಯರೇ ?
ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ ?
ನಡುಮುರಿದು ಗುಡುಗೂರಿ ತಲೆನಡುಗಿ ನರೆ ತೆರೆ ಹೆಚ್ಚಿ
ಮತಿಗೆಟ್ಟು ಒಂದನಾಡಹೋಗಿ ಒಂಬತ್ತನಾಡುವ ಅಜ್ಞಾನಿಗಳೆಲ್ಲರೂ
ಹಿರಿಯರೇ ?

ಅನುವರಿದು ಘನವ ಬೆರಸಿ ಹಿಂದು ಕಿಂದೆಂಬ ಭೇದವ ಮರೆದು
ಕೂಡಲ ಚೆನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ
ಮಹಾದೇವಿಯಕ್ಕಂಗಾಯಿತ್ತು.

ಈ ಬಗೆಯ ಸಾಹಿತ್ಯವು Poetry is not the thing said but the way of saying it ಎಂದ A. E. Hauseman ನನ್ನು ನೆನಪಿಗೆ ತರುತ್ತದೆ.

ಮಹಾದೇವಿಯು ಕರ್ನಾಟಕದ ಮಹಿಳಾ ಮಂಡಲದಲ್ಲಿ ಅಸಮ ಪ್ರಭೆ ಯಿಂದ ಪ್ರಕಾಶಮಾನವಾದ ಮಹಾ ಜ್ಯೋತಿಯು. ಈಕೆಯ ಇಡಿಯ ಜೀವ ನವೇ ಒಂದು ಮಹಾ ಕಾವ್ಯವಾಗಿದೆ. ವಿಧವಿಧದ ಅನುಭವಗಳನ್ನು ಅಳವಡಿಸಿ ಕೊಂಡು ಉದಾತ್ತ ಜೀವನದ ಸೋಪಾನದ ಪರಂಪರೆಯನ್ನು ಸಾಧಿಸುತ್ತಿರು ವವಳಾದ ಈಕೆಯ ವಾಣಿಯಲ್ಲಿ ಅನುಭಾವಿತ್ವದ ಪೆಂಪೂ, ಕಾವ್ಯಹೃದಯದ ಸೊಂಪೂ ಒಡಮೂಡಿವೆ. — ಮಿಂಚಿದ ಮಹಿಳೆಯರು.

# "ಸಂಸ್ಕೃತ ಕನ್ನಡ ಉಪನಿಷತ್ತುಗಳು"

(ಲೇಖಕರು:- ವಿದ್ವಾನ್ ಕೆ. ಎಂ. ರಾಜಶೇಖರಯ್ಯನವರು, ಸಂಸ್ಕೃತೋಪಾಧ್ಯಾಯರು, ಫ್ರೌಢಶಾಲಾ, ಚಿಕ್ಕಬಳ್ಳಾಪುರ.)



ಆಟಪಾಠಗಳಲ್ಲಿ ಸರ್ವಸಾಮ್ಯದಲ್ಲಿ ರಾಜಕೀಯದಲ್ಲಿ ಒಂದೊಂದು ದೇಶವೂ ಮುಂದುವರಿದಿದ್ದರೆ ಭರತಖಂಡವು ಧರ್ಮದ ವಿಷಯದಲ್ಲಿ ಮುಂದುವರಿದಿದೆ ಎಂದರೆ ಅಭಿಮಾನದ ಮಾತಲ್ಲ. ಧರ್ಮ ಹಾಗೂ ದೇವರ ಬಗ್ಗೆ ಸಂಶಯ ಮತ್ತು ನಾಸ್ತಿಕ ಭಾವವನ್ನು ಪಡೆದಿದ್ದ ಪಾಶ್ಚಾತ್ಯರೂ ಕೂಡ ವಿಶ್ವಸಂಚಾಲಕ ಯಾವನೋ ಒಬ್ಬನಿದ್ದೇ ಇರಬೇಕೆಂಬ ತೀರ್ಮಾನಕ್ಕೆ ಬಂದಿದ್ದಾರೆ. ಅಂದಮೇಲೆ ಧರ್ಮದ ನೆಲೆಬೀಡಾದ ನಮ್ಮ ದೇಶದಲ್ಲಿ ಧರ್ಮ, ದೇವರು ಎಂಬ ಬಗ್ಗೆ ಪ್ರತಿಯೊಬ್ಬರಿಗೂ ಆಸ್ತಿಕತೆ ಇದ್ದೇ ಇದೆ. ಧರ್ಮ ಇಹದಲ್ಲಿ ಅಭಿವೃದ್ಧಿಯನ್ನು ಪರದಲ್ಲಿ ಶ್ರೇಯಸ್ಸನ್ನು ಅಂದರೆ ಮುಕ್ತಿಯನ್ನು ನೀಡುವುದೆಂದು ಮಹಾತ್ಮರ ವಾಣಿ ಮುಕ್ತಿಯನ್ನು ಬೋಧಿಸುವುದೇ ಬ್ರಹ್ಮವಿದ್ಯೆ ಅಥವಾ ಆತ್ಮವಿದ್ಯೆ. ಅದು ಉಪನಿಷತ್ತುಗಳಲ್ಲಿ ವಿಸ್ತಾರವಾಗಿ ಕಂಡುಬರುತ್ತದೆ. ಬಹಳ ಶ್ರಮಪಟ್ಟಿದ್ದಾರೆ ಋಷಿಗಳು. ಆತ್ಮನನ್ನು ಹುಡುಕುವ ಬಗ್ಗೆ ಸ್ವರೂಪವನ್ನು ಮನಗಂಡು ಪರಮಾನಂದದಲ್ಲಿ ಲೀನರಾಗಿ ಅನುಭವಗಳನ್ನು ಜನತೆಗೆ ಮೀಸಲಾಗಿಟ್ಟಿದ್ದಾರೆ.

ಉಪನಿಷತ್ ಈ ಪದದಲ್ಲಿ ಉಪ ನೀಸದ್ ಎಂಬ ಮೂರು ಪದಗಳು. ಸದ್ ಧಾತುವಿಗೂ ಮೂರರ್ಥಗಳಿವೆ. ವಿಶರಣ. ಗತಿ. ಮತ್ತು ಅವಸಾದನವೆಂಬುದಾಗಿ. ಕ್ರಮವಾಗಿ ನಾಶಮಾಡುವುದು, ಪಡೆಯುವುದು, ಲೀನವಾಗುವುದು, ಎಂದು ಮಲತ್ರಯವನ್ನು ನಾಶಮಾಡಿ ಪರಮಾತ್ಮಸಾಕ್ಷಾತ್ಕಾರ ಪಡೆದು ಆತನಲ್ಲಿ ಸಮುದ್ರದಲ್ಲಿ ನದಿ ಬೆರೆದಂತೆ ಜೀವಾತ್ಮನು ಬೆರೆಯುವುದೆಂದಾಯಿತು ಅಂದೇ ಮುಕ್ತಿ. ಅದರ ತಿಳವಳಿಕೆ ಉಪನಿಷತ್ತಿನಲ್ಲಿದೆ. ಉಪಸರ್ಗಗಳಿಗೆ ಸಮೀಪಕ್ಕೆ ಒಯ್ಯುವುದೂ ಎಂದಾಯಿತು. ಜೀವಾತ್ಮನನ್ನು ಪರಮಾತ್ಮನಲ್ಲಿಗೆ ಒಯ್ಯುವುದೇ ಮುಖ್ಯ ತತ್ವವೆಂದಾಯಿತು. ಉಪನಿಷಿದತಿ ಶ್ರೇಯ ಅಸ್ಯಾಮಿತಿ ಉಪನಿಷತ್ ಎಂದು.

ಮಾನವನ ಅಂತರಿಕ ಅನುಭವದಿಂದ ಹೊರಬಿದ್ದುದೇ ಉಪನಿಷತ್. ಋಷಿಗಳು ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಶುದ್ಧ ಚೈತನ್ಯದಿಂದ ಹೊರ ಬಿದ್ದ ಸತ್ಯಮೂರ್ತಿಯೇ ಉಪನಿಷತ್. ದೇಹಾಭಿಮಾನವನ್ನು ತೊರೆದು ಆತ್ಮಾನುಸಂಧಾನಿಗಳಾದ ಋಷಿಗಳು ಸ್ವಾನುಭವವನ್ನು ಗ್ರಂಥರೂಪವಾಗಿ ಬರೆದಿಟ್ಟಿರುವುವೇ ಉಪನಿಷತ್ ಧರ್ಮಸ್ಮೃತಿಗೆ ವೇದವೇ ಮೂಲ. ದೇಹಾಭಿಮಾನ ನೀಗಿದವರು ಪುರುಷರಲ್ಲವೆಂತಲೂ ಅವರ ನುಡಿ ಪೌರುಷೇಯವಲ್ಲವೆಂತಲೂ ಆದ್ದರಿಂದ ಅಪೌರುಷೇಯವೆಂತಲೂ ರೂಢಿ.

ವೇದಗಳಿಗೆ ಶ್ರುತಿ ಆವುಗಳೂ ಸಹ ಅಪೌರುಷೇಯವೆಂದು ರೂಢಿಯಿದೆ. ಆದರೆ ವೇದಗಳಂತೆಯೇ ಇತಿಹಾಸ, ಪುರಾಣ, ವಿದ್ಯೆ, ಉಪನಿಷತ್, ಸೂತ್ರಗಳು. ವ್ಯಾಖ್ಯಾನ ಮುಂತಾದುವು ಪರಮಾತ್ಮನ ನಿಃಶ್ವಸಿತಗಳೆಂದು ಬೃ. ಅ. ೨. ಬ್ರಾಹ್ಮಣ. ೪. ಮಂ ೧೦ ರಲ್ಲಿ ಉಕ್ತವಾಗಿದೆ. ಆಧ್ಯಾತ್ಮಿಕ ಪುರುಷರ ಹಾಗೂ ಋಷಿಗಳ ಮಾನಸಿಕ ದೈವೀ ಶಕ್ತಿಯಿಂದ ಹೊರಟಿದ್ದು ಉಪನಿಷತ್ತು ಮುಂತಾದುವು. ಅವರು ಸತ್ಯಗಳಲ್ಲ ಪ್ರೇರಕರಷ್ಟೆ ದೈವೀಶಕ್ತಿಗೆ ಅಪೌರುಷೇಯವೆಂದು ಕರೆಯುವ ರೂಢಿ. ಆ ಶಕ್ತಿಯೇ ಅವರಲ್ಲಿ ಆ ಮಾತುಗಳನ್ನು ನುಡಿಸಿದೆಯೆನ್ನಲೂ ಬಹುದು. ಅಂತು ಅವರು ಅಂತಶ್ಶಕ್ತಿಯಿಂದ ಹೊರಬಿದ್ದಿದೆ. ಅಂತಶ್ಶಕ್ತಿಗೆ ಅಂತರಾತ್ಮನೆಂದು ಕರೆಯುವುದು. ಅಂತರಾತ್ಮದ ಮುಂದೆ ಮಾನವನ ಕೈವಾಡವೇನಿದೆ? ಏನೂ ಇರಲಾರದು. ಆವು ಅಪೌರುಷೇಯವಲ್ಲದೆ ಮತ್ತಾವುವು?

ವಿದ್ಯೆಗಳಲ್ಲಿ ಪರಾ. ಅಪರಾ ವಿದ್ಯೆ ಎಂದು ಎರಡು ವಿಧ. ಇದನ್ನೇ ಉಪನಿಷತ್ಕಾರರಲ್ಲಿ ಜಿಜ್ಞಾಸೆಯಾಗಿ ಚರ್ಚಿಸಮಾಡಿದ್ದಾರೆ. ಶೌನಕರು ಅಂಗಿರಸನನ್ನು ನಾರದನು ಸನತ್ಕುಮಾರನನ್ನು ಕ್ರಮವಾಗಿ ಮುಂಡಕ ಮತ್ತು ಛಾಂದೋಗ್ಯೋಪನಿಷತ್ತುಗಳಲ್ಲಿ ಈ ವಿಷಯವಾಗಿ ಚರ್ಚೆ ಮಾಡಿದ್ದಾರೆ. ಅವರು ಈ ರೀತಿ ಉತ್ತರಕೊಟ್ಟಿದ್ದಾರೆ. ಅಪರಾ ವಿದ್ಯೆಗಳೇ ವೇದ. ವೇದಾಂಗ ಮುಂತಾದುವು. ಪರಾ ವಿದ್ಯೆಯೇ ಅಕ್ಷರವಿದ್ಯೆ. ಅಕ್ಷರ ಅಂದರೆ ನಾಶರಹಿತವಾದ ವಿದ್ಯೆ ಅದೇ ಆತ್ಮವಿದ್ಯೆ.

ಪರಾವಿದ್ಯೆಯಾದ ಆತ್ಮವಿದ್ಯೆ ಆತ್ಮಸ್ವರೂಪವನ್ನು ಸಂಸ್ಕೃತ ಕನ್ನಡ ಉಪನಿಷತ್ತುಗಳಲ್ಲಿ ಹೇಗೆ ವಿವರಿಸಿದ್ದಾರೆ ನೋಡೋಣ. ಸಂಸ್ಕೃತ ಉಪನಿಷತ್ತುಗಳೆಂದರೆ ಆಶ್ಚರ್ಯವಾಗುವುದಿಲ್ಲ. ಆದರೂ ಏಕೆ ಆಶ್ಚರ್ಯಪಡಬೇಕು?

ವಚನಗಳೇ ಕನ್ನಡ ಉಪನಿಷತ್ತುಗಳು. ಅವುಗಳಲ್ಲಿ ಸಂಸ್ಕೃತ ಉಪನಿಷತ್ತುಗಳಲ್ಲಿಲ್ಲದ ವಿಚಾರವು ಕಂಡು ಬರುವಾಗ ಆಶ್ಚರ್ಯಪಡುವುದು ಅರ್ಥವಿಲ್ಲದ್ದು.

## ವಚನಗಳು

ವಚ್-ಧಾತುವಿನಿಂದ ಹುಟ್ಟಿದೆ. ಶಿವಶರಣರ ಅನುಗ್ರಹ ಅದಕ್ಕೆ ಮೂಲ ಕಾರಣ. ವಚನಗಳಲ್ಲಿಯು ಆತ್ಮಸ್ವರೂಪ ಸಾಕ್ಷಾತ್ಕಾರ ಸಾಮರಸ್ಯ ಆನಂದ ಸಂಸ್ಕೃತ ಉಪನಿಷತ್ತುಗಳಿಗಿಂತ ಭಿನ್ನವಿದ್ದರೂ ಹೇಳುವ ಶೈಲಿ, ಕೊಡುವ ಉಪಮಾನ, ಭಾಷೆ ತೀರ ಭಿನ್ನವೆನ್ನಬಹುದು. ಈ ಮಾತು ಹೋಲಿಕೆ ಉದಾಹರಣೆಯಲ್ಲಿ ಸ್ಪಷ್ಟವಾಗಬಹುದು. ವಚನಗಳು ಈ ಮಾತನ್ನು ಕೇಳಿದ ಕೂಡಲೆ ಕೆಲವರು ಸರಿ. ಹಾಡುವುದಕ್ಕೆ ಬರುವುದಿಲ್ಲ. ದಾಸರ ಪದಗಳು ನೋಡಿ ಹೇಗೆ ಹಾಡಬಹುದು! ಎಂದು ಹೇಳುವರು. ಹಾಡಲೂಬಹುದು. ಆತ್ಮವಿಚಾರಗಳನ್ನು ಬಹು ಸುಲಭವಾಗಿ ತಿಳಿಯಬಹುದು

ವಚನಗಳು ಗದ್ಯದಲ್ಲಿವೆ. ವಚನವೆಂದರೆ ಗದ್ಯವಷ್ಟೆ "ಗದ್ಯಂ ಕವಿನಾಂ ನಿಕಷಂ ವದಂತಿ" ಗದ್ಯವು ಕವಿತೆಯನು ಪರೀಕ್ಷಿಸುವ ಒರೆಗಲ್ಲು. ಚಿನ್ನವನ್ನು ಪರೀಕ್ಷಿಸುವಂತೆ ಆತ್ಮವಿಚಾರಗಳನ್ನು ಪರರಿಗೆ ತಿಳಿಸಲು ಬಹು ಸುಲಭವಾದ ಸಾಧನ ಗದ್ಯ ಅಥವಾ ವಚನವೇ ಎಂದರೆ ತಪ್ಪಾಗಲಾರದು. ಹರಿಹರನ ರಗಳೆಗಳು ಇತ್ಯಾದಿ ಉದಾಹರಣೆ ಮಾತು ಮುದ್ದಾಗಿದ್ದಷ್ಟು ವಿಷಯ ಅಡಕವಾಗಿರುವುದ. ಅಲ್ಲದೆ ಬೇಗ ಮನವರಿಕೆಯಾಗಬೇಕು. ಇದು ವಚನಗಳಲ್ಲಿ ಕಾಣಬಹುದು. ವಚನಗಳು ಅಲಂಕಾರ (ಪ್ರಾಸ) ದಲ್ಲಿ ಕಡಿಮೆಯಿಲ್ಲ. ಈ ವಚನಗಳನ್ನು ಉದಾಹರಿಸಲಾಗುವದು:-

"ನೀನೊಲಿದರೆ ಕೊರಡು ಕೊನರುವದಯ್ಯ
ನೀನೊಲಿದರೆ ಬರಡು ಹಯನಹುವಯ್ಯ
ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯ
ನೀನೊಲಿದರೆ ಸಕಲಪದಾರ್ಥ ಇದಿರಲ್ಲಿಪ್ಪುದಯ್ಯ
ಕೂಡಲಸಂಗಮದೇವಯ್ಯ"

ಇದು ಸಮಾಕ್ಷರ ವೃತ್ತಿಯ ಛಂದಸ್ಸಿಗೆ ಉದಾಹರಣೆ. "ನೀನೊಲಿದರೆ" ಎಂಬ ಪದನಾಲ್ಕು ಪದಗಳಲ್ಲೂ ಬಂದಿವೆ. "ಅಯ್ಯ" ಎಂಬ ಪದ ಕೊನೆಯ

ಪದವಾಗಿದೆ. ಪ್ರತಿಪಾದದ "ಕೊರಡು, ಬರಡು" ಎಂಬ ಪದಗಳು ಎರಡು ಮೂರನೇ ಪಾದಗಳಲ್ಲಿ ಕಾಣಬರುತ್ತವೆ.

ಮೇಲಿನ ವಚನ ಯಾವ ಪದ್ಯಕ್ಕೆ ತಾನೇ ಕಡಿಮೆ? ಪದ್ಯ ತಪ್ಪಿದರೆ ಗದ್ಯವೇ ಆಗ ಪುದಲ್ಲವೆ.

ವಚನದಲ್ಲಿ ನಾಮಾಮೃತ ತುಂಬಿ
ನಯನದಲ್ಲಿ ಮೂರುತಿ ತುಂಬಿ
ಮನದಲ್ಲಿ ನಿಮ್ಮ ನೆನಹು ತುಂಬಿ
ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ
ಕೂಡಲಸಂಗಮದೇವ ನಿಮ್ಮ ಚರಣರ ಕಮಲದೊಳು
ಸೊಗದ ಬಂಡ ನುಂಡು ತುಂಬಿಯಾಗಿರ್ದೆನು.

ಇಲ್ಲಿ ಶಬ್ದಾಲಂಕಾರಕ್ಕೆ ಉದಾಹರಣೆ ಯಾಗಿರುವುದು ಕಂಡುಬರುವುದು. ವಚನ, ನಯನ, ಮನದಲ್ಲಿ ನಕಾರ, ತುಂಬಿ ಪದಗಳು ಇಲ್ಲಿ "ವರ್ಣ ಸಾಮ್ಯಮನುಪ್ರಾಸ:" ಎಂಬಂತೆ ವರ್ಣಸಾಮ್ಯ ಗಮನೀಯ.

ಕರಿಘನ ಅಂಕುಶ ಕಿರಿದೆನ್ನಬಹುದೇ ಬಾರದಯ್ಯ।
ಗಿರಿ ಘನ ವಜ್ರ ಕಿರಿದೆನ್ನಬಹುದೇ ಬಾರದಯ್ಯ।
ತಮಂಧ ಘನ ಜ್ಯೋತಿ ಕಿರಿದೆನ್ನಬಹುದೆ? ಬಾರದಯ್ಯ।
ಮರವು ಘನ ನಿಮ್ಮ ನೆನೆವ ಮನವ ಕಿರಿದೆನ್ನಬಹುದೆ? ಬಾರದಯ್ಯ
ಕೂಡಲಸಂಗಮದೇವ ॥

ದೃಷ್ಟಾಂತಾಲಂಕಾರಕ್ಕೆ ಉದಾಹರಣೆಯಾಗಬಹುದು. ಬಿಂಬ ಪ್ರತಿಬಿಂಬ ಭಾವವೇ ದೃಷ್ಟಾಂತಾಲಂಕಾರಕ್ಕೆ ಲಕ್ಷಣವಲ್ಲವೆ ಮರವು ಘನ. ನಿಮ್ಮ ನೆನೆವ ಮನವ ಕಿರಿದೆನ್ನಬಹುದೆ? ಈ ಮಾತಿಗೆ ಕರಿಘನ. ಇತ್ಯಾದಿ ದೃಷ್ಟಾಂತಗಳೆಲ್ಲವೂ ಪ್ರತಿಬಿಂಬ ಭಾವದಿಂದಲೇ ಕೂಡಿವೆ.

ಕಾದೆಹಂಚಿನಮೇಲೆ ಬಿಟ್ಟ ನೀರಿನಂತೆ ಬಧಿರನಕಾವ್ಯದಂತೆ ತಲೆದೋರದೆ ನಿಲ್ಲುವನು, ಎಂದು ಅಂಬಿಗರ ಚೌಡಯ್ಯನ ವಚನದಲ್ಲೂ.

ಹುಲಿಯ ಬಾಯಲ್ಲಿ ಸಿಕ್ಕಿದ ಹುಲ್ಲೆಯಂತೆ,
ಸರ್ಪನ ಬಾಯಲ್ಲಿ ಸಿಕ್ಕಿದ ಕಪ್ಪೆಯಂತೆ

ಸಕಲ ಲೋಕಾದಿಲೋಕಂಗಳು ಮಾಯಾಬಲೆಯಲ್ಲಿ ಸಿಕ್ಕಿ
ಸೆರೆಹೋಗುವುದಕಂಡು ನಾನು ಅಂಜಿ ನಿಮ್ಮ ಮೊರೆಹೊಕ್ಕೆನು
ಕಾಯಯ್ಯ ಕಾರುಣ್ಯ ನಿಧಿಯೆ ಅಖಂಡೇಶ್ವರ.

ಷಣ್ಮುಖದೇವರ ವಚನಾಮೃತದಲ್ಲಿಯೂ ಉಪಮಾನ ಕಂಡುಬರುತ್ತದೆ. ಉಪಮಾನ ಉಪಮೇಯ ಸಾಧಾರಣ್ಯ ಶಬ್ದ. ಉಪಮಾವಾಚಕಶಬ್ದ. ಇವುಗಳೇ ಉಪಮಾಲಂಕಾರದ ಸಾಮಗ್ರಿಗಳು. ತನ್ಮೂಲಕ ವೇದಾಂತ ವಿಚಾರವನ್ನು ಲೋಕರೂಢಿಯನ್ನನುಸರಿಸಿ ಲೋಕಾನುಭವದ ಮೂಲಕ ಸ್ವಾನುಭವವನ್ನು ಹೊರಗೆಡಹುದು ವಚನಕಾರರಿಗೆ ಹೊಸದೇನೂ ಅಲ್ಲ.

ಶೈಲಿ ಸುಲಭ. ವಚನಗಳು ಚಿಕ್ಕವು. ಏಳು ಅಥವಾ ಎಂಟು ವಾಕ್ಯಗಳಿದ್ದರೆ ಹೆಚ್ಚು. ಪುಟದಷ್ಟು ದೊಡ್ಡವಚನಗಳೂ ಇಲ್ಲವೆಂಬಹಾಗಿಲ್ಲ. ವಚನಗಳ ಆವಿರ್ಭಾವ ಕ್ರಿ. ಶ. ೧೨ರಲ್ಲೇ ಶರಣರ ಅವತಾರವಾಯಿತು. ಇದಕ್ಕಿಂತಲೂ ಪ್ರಾಚೀನದಲ್ಲಿ ಅಥವಾ ಬಸವಾದಿ ಪ್ರಮಥರಿಗಿಂತಲೂ ಹಿಂದೆ ದೇವರದಾಸಿಮಯ್ಯನೆಂಬ ಶಿವಶರಣರು ಅವತರಿಸಿ ವಚನಗಳ ರಚನೆಯನ್ನು ಪ್ರಾರಂಭಿಸಿದ್ದರೆಂದು ತಿಳಿದುಬರುತ್ತದೆ. ಶರಣರ ಸಂಖ್ಯೆ ೭೭೦. ಏಳನೂರೆಪ್ಪತ್ತು. ಅವರಲ್ಲಿ ವಚನಕಾರರು ಕೆಲವರು ವಚನಕಾರ್ತಿಯರೂ ಅಷ್ಟೆ. ತಿಳಿದು ಬಂದಿರುವಂತೆ ಪುರುಷರು ೨೧೩. ಸ್ತ್ರೀಯರು ೨೩.

ಪ್ರೊ. ವಿ. ವಿಚಕ್ಷಣ ಮಹಾ ಮಹೋಪಾಧ್ಯಾಯ ಶ್ರೀ ಆರ್ ನರಸಿಂಹಾಚಾರ್ಯರು ಕವಿಚರಿತೆಯಲ್ಲಿ ೧೬೦ ಕೋಟಿ ವಚನಗಳೆಂತಲೂ ಆರ್, ಆರ್. ದಿವಾಕರರು. ವಚನಶಾಸ್ತ್ರ ರಹಸ್ಯದಲ್ಲಿ "ವಚನಗಳು ಕೋಟ್ಯನು ಕೋಟಿ" ಯೆಂದಿದ್ದಾರೆ.

ಅಲ್ಲಯ್ಯಗಳ ವಚನ ಎರಡೆಂಭತ್ತುಕೋಟಿ
ಅಪ್ಪಯ್ಯಗಳ ವಚನ ನಾಲ್ಕು ಲಕ್ಷದ ಮೂವತ್ತಾರು ಸಾವಿರ
ಎಮ್ಮಯ್ಯಗಳ ವಚನ ವಚನಕ್ಕೊಂದು ।
ನೀಲಮ್ಮನ ವಚನ ಲಕ್ಷದ ಹನ್ನೊಂದು ಸಾಸಿರ ।
ಗಂಗಾಂಬಿಕೆ ವಚನ ಲಕ್ಷದ ಎಂಟುಸಾಸಿರ ।
ಎಮ್ಮಕ್ಕ ನಾಗಾಯಿಯರ ವಚನ ಮೂರು ಲಕ್ಷದ
ತೊಂಭತ್ತಾರು ಸಾಸಿರ ।

ಮಡಿವಾಳಣ್ಣನ ವಚನ ಮೂರುಕೋಟಿ ಮುನ್ನೂರು।
ಹಡಪದಪ್ಪಯ್ಯಗಳ ವಚನ ಹನ್ನೊಂದುಸಾಸಿರ
ಮರುಳ ಸಿದ್ಧನ ವಚನ ಅರುವತ್ತೆಂಟು ಸಾಸಿರ।
ಇಂತಪ್ಪ ವಚನ ರಚನೆಯು ಬಿಟ್ಟು ಕುತ್ಸಿತಕಾವ್ಯಾಲಂಕಾರ
ನೋಡುವವರ ನೋಡಿಹುಡಿಮಣ್ಣ ಹೊಯ್ಯದೇ ಮಾಂಬನೇ॥
ಮಹಾದೇವ ಕಪಿಲಸಿದ್ಧ ಮಲ್ಲಿಕಾರ್ಜುನ"

ಅಲ್ಲಯ್ಯಗಳ ವಚನಗಳೇ ಎರಡೆಂಭತ್ತುಕೋಟಿ. ಇತರ ಎಂಟು ಜನರ ಶರಣರ ವಚನಗಳೇ ಅಲ್ಲಯ್ಯನ ವಚನಗಳ ಸಂಖ್ಯೆಯಷ್ಟೇ ಆಗುವವು.

ಈ ವಚನೆಗಳ ಶಿವಾನುಭವ ಮಂಟಪದಲ್ಲಿ ಅವರವರ ಅನುಭಾವ ದಿಂದ ಹೊರಬಿದ್ದವು. ಅಷ್ಟೇ ಅಲ್ಲದೆ ಸಭೆಯು ಮುಂದಿಟ್ಟಾಗ ಚರ್ಚಿಸಿ ಸರ್ವಾನುಮತದಿಂದ ತೀರ್ಮಾನವಾಗುತ್ತಿದ್ದುವು. ಅಂದು ಕೆಲವರು ಅವು ಗಳನ್ನು ಪ್ರಚಾರಮಾಡುತ್ತಿದ್ದರು. ಕೆಲವರು ಬರೆದಿಡುತ್ತಿದ್ದರು. ಅವರಲ್ಲಿ ಶಾಂತರಸ, ಶಿವನಾಗಮಯ್ಯ ಎಂಬವರೇ ಆ ಕಾಯಕದಲ್ಲಿ ನಿರತರಾಗಿದ್ದ ರೆಂಬುದು ವಿದ್ವಾಂಸರ ಮತ. ಅವು ಧಾರ್ಮಿಕ ಸಾಮಾಜಿಕಕ್ಕೆ ಅಥವಾ ನೈತಿಕಕ್ಕೂ ಲೌಕಿಕಕ್ಕೂ ಸಂಬಂಧ ಪಟ್ಟಿದವಿದ್ದು ನಮ್ಮೆಲ್ಲರ ಅನುಭವಕ್ಕೆ ಬಂದಿದೆ. ಒಬ್ಬೊಬ್ಬರು ಒಂದೊಂದು ವಿಚಾರವನ್ನು ನಿರೂಪಿಸುತ್ತಿದ್ದರೂ ಆ ವಿಷಯಗಳು ಬೇರಾರಲ್ಲಿಯೂ ಇರಲಿಲ್ಲವೆಂದಲ್ಲ. ಭಕ್ತಿ, ಜ್ಞಾನ, ವೈರಾಗ್ಯ, ಕರ್ಮಯೋಗ, ಶರಣಸತಿ ಲಿಂಗಪತಿ ಎಂಬ ತತ್ವಗಳನ್ನು ಕ್ರಮ ವಾಗಿ ಬಸವಣ್ಣ, ಪ್ರಭುದೇವ, ಸಿದ್ಧರಾಮ ಮತ್ತು ಅಕ್ಕಮಹಾದೇವಿಯರು ನಿರೂಪಣೆ ಮಾಡಿದ್ದರೂ ಭಕ್ತಿ ಜ್ಞಾನಾದಿಗಳು ಇತರರಲ್ಲೂ ಇದ್ದುವೆಂಬು ದಕ್ಕೆ ಅನೇಕ ವಚನಗಳು ಅವರಲ್ಲಿ ಕಾಣಬಹುದು.

## ‡ " ವಚನಗಳ ಪ್ರಾಶಸ್ತ್ಯ "

ಮಡಿಕೇರಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತು. ಅದು ೧೮ ನೆಯದು. ಅಧ್ಯಕ್ಷರು ಆಗ ಶ್ರೀ. ಡಿ. ವಿ. ಜಿಯವರು. ಅವರೊಂದು ಸಾರಿ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಭಾಷಣಮಾಡುತ್ತಿದ್ದರು. ಆಗ " ಜರ್ಮನಿ, ಇಂಗ್ಲಂಡ, ಫ್ರಾನ್ಸ ಮುಂತಾದ ಪಾಶ್ಚಾತ್ಯ ಪಂಡಿತರು " ಬಂದು

---

‡ ಕ. ಸಾ. ಪತ್ರಿಕೆ ಸಂಪುಟ ೨೫. ವಿಕ್ರಮ-ಆಶ್ವೀಜ ಮಾರ್ಗಶಿರ ಸಂಚಿಕೆ ೪.

"ಕನ್ನಡದಲ್ಲಿ ಏನಿದೆ?" ಎಂದು ಕೇಳಿದರೆ "ವಚನ ಸಾಹಿತ್ಯವಿದೆ" ಎಂದು ಚಪ್ಪರಿಸಿ ಹೇಳುತ್ತೇನೆ, ಎಂಬಮಾತು ನನಗೆ ನೆನಪಿದೆ. ಎಂದು ಹೇಳಿದವರು ಯಾದಗಿರಿ ಶಂಕರ ಸಂಸ್ಕೃತ ಪಾಠಶಾಲೆ ಅಧ್ಯಕ್ಷರು. ಅವರೆ ಶ್ರೀಯುತ ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು. ಈ ಮಹನೀಯರೂ ಒಂದು ಸಾರಿ ಧಾರವಾಡದಲ್ಲಿ ನಡೆದ ಕನ್ನಡಸಾಹಿತ್ಯ ಸಮ್ಮೇಲನಕ್ಕೆ ಅಧ್ಯಕ್ಷರಾಗಿದ್ದರು. ಅದೇ ೨೫ ನೇ ಸಮ್ಮೇಲನ ೧೯೪೦ರಲ್ಲಿ ನಡೆಯಿತು. ಆದ್ದರಿಂದ ವಚನಸಾಹಿತ್ಯದ ಪ್ರಾಶಸ್ತ್ಯ ವಿಚಾರ ಹೆಚ್ಚಿಗೆ ವಿವರಿಸಬೇಕಾಗಿಲ್ಲ.

ಭಾಷಾಭಿವೃದ್ಧಿ ಮೊದಲನೆಯದಾದರೂ ತನ್ಮೂಲವೇ ಸಾಹಿತ್ಯ ಪ್ರಚಾರಸೂಕ್ತ ಅದರಲ್ಲೂ ದೇಶ ಭಾಷೆಯಾದರೆ ಮತ್ತು "ಅಧಿಕಸ್ಯ ಅಧಿಕಂ ಫಲಂ" ಎಂಬಂತೆ ಭಾಷೆ ಸಾಹಿತ್ಯ ಧರ್ಮವೂ ಉನ್ನತಿಯನ್ನೈದುವುದು. ರಾಜಾಧಿರಾಜರೂ ಸಹ ಮತ ಧರ್ಮ ಪ್ರಚಾರ ಮಾಡುವಾಗ ದೇಶ ಭಾಷೆಗಳನ್ನು ಅಭಿವೃದ್ಧಿ ಪಡಿಸಿರುವುದು ಕಂಡು ಬರುತ್ತದೆ. ಕವಿಗಳೂ ಅಷ್ಟೇ. ಇತರ ಭಾಷೆಗಳೇಕೆ ಅಭಿವೃದ್ಧಿ ಹೊಂದಬಾರದು? ಎಂಬ ಪ್ರಶ್ನೆ ಬೇರೆ. ಇಲ್ಲಿ ಅಪ್ರಕೃತ ಮುಂದುವರಿಯಲಿ. ಆದರೆ ದೇಶ ಭಾಷೆಯನ್ನು ಜನತೆ ಅರ್ಥಮಾಡಿಕೊಂಡಂತೆ ಇತರ ಭಾಷೆಯನ್ನು ಅರ್ಥಮಾಡಿಕೊಳ್ಳಲಾರದು. ಸಂಸ್ಕೃತ ಆಬಾಲವೃದ್ಧಗೂ ಅರಿವಾಗುವುದೇ ಎಂದು ಪ್ರಶ್ನೆಮಾಡಿದರೆ ಉತ್ತರ ಹೊರಡುವುದು ಶ್ರಮ ಸಾಧ್ಯವಾದೀತು. ಅಂದ ಮೇಲೆ ಆ ಭಾಷೆಯಲ್ಲಿರುವ ವೇದ, ವೇದಾಂತ ರಾಮಾಯಣ ಮಹಾಭಾರತಾದಿಗಳನ್ನು ಹೇಗೆ ಅರ್ಥಮಾಡಿಕೊಳ್ಳುವುದು? ೧೦೦ಕ್ಕೆ ಐದುಮಂದಿಗೆ ಮಾತ್ರ ಸಂಸ್ಕೃತ ಬರುವುದು. ಪರಿಚಯ ವಿದ್ದಮಾತ್ರಕ್ಕೆ ವೇದ, ವೇದಾಂತಕ್ಕೆ ಅರ್ಥಬಲ್ಲುದು ಎಂಬಮಾತು ಒಪ್ಪಲಾಗದು. ಆದ್ದರಿಂದ ದೇಶಭಾಷೆಯೇ ಮತ, ಧರ್ಮ ಸಾಹಿತ್ಯ ಪ್ರಚಾರಕ್ಕೆ ಮುಖ್ಯಸಾಧನೆಯೆಂದರೆ ಅಭಿಮಾನವಲ್ಲ.

ಆಧ್ಯಾತ್ಮಿಕ ಪ್ರಪಂಚದಲ್ಲಿ ಪ್ರತಿಯೊಬ್ಬರಿಗೂ ಪ್ರವೇಶವುಂಟು. ಮಹಿಳೆಯರು ಮಹನೀಯರೆಂಬ ಭೇದವಿಲ್ಲ. ಉದಾಹರಿಸಿದ ಅನಂತ ವಚನ ಸಂಖ್ಯೆಗಳಲ್ಲಿ ಸದ್ಯ ಮೂರು ಸಾವಿರ ವಚನಗಳು ಉಪಲಬ್ಧವಾಗಿವೆಯೆಂಬ ಪ್ರತೀತಿ. ಇವುಗಳಲ್ಲಿ ಅಂದರೆ ಇಡೀ ವಚನಸಾಹಿತ್ಯದಲ್ಲೇ ವೀರಶೈವ ಮತದ ಮುಖ್ಯ ತತ್ತ್ವಗಳಾದ ಅಷ್ಟಾವರಣ. ಪಂಚಾಚಾರ—ಷಟ್‌ಸ್ಥಲಕ್ಕೆ ಸಂಬಂಧಪಟ್ಟ ವಚನಗಳೇ ಹೆಚ್ಚು.

ಸಂಸ್ಕೃತ ಉಪನಿಷತ್ತುಗಳಂತೆಯೇ ಕನ್ನಡ ಉಪನಿಷತ್ತುಗಳೂ ಸಹ ಆತ್ಮ ಸ್ವರೂಪವನ್ನು ಸಾಕ್ಷಾತ್ಕಾರವನ್ನು ಆನಂದವನ್ನು ಬಹು ಸುಲಭವಾಗಿ ಉಪದೇಶಿಸಿವೆ. ಕನ್ನಡ ಶೈವಾಗಮಗಳೆಂದೂ ರೂಢಿ. ಆಗಮಗಳೂ ಶೈವಾಗಮಗಳೂ ವಿಶೇಷತಃ ವೀರಶೈವರಿಗೆ ಆಧಾರ ಗ್ರಂಥಗಳಷ್ಟೆ. ಆಗಮ ವಿಚಾರಗಳೂ ವಚನಗಳಲ್ಲಿ ಅಲ್ಲಲ್ಲಿ ಉದ್ಧರಿಸಿರುವುದು ಕಂಡುಬರುತ್ತವೆ. ಆದ್ದರಿಂದಲೇ ಶೈವಾಗಮಗಳು ಕನ್ನಡದ ! ವಚನಗಳ ವೈಶಿಷ್ಟ್ಯ.

ವಚನಗಳಲ್ಲಿ ಅನುಭವಕ್ಕೆ ಪ್ರಾಧಾನ್ಯವಿದೆ. ಶಿವಶರಣರಿಗೆ ವಚನಗಳೇ ಪ್ರಮಾಣ;—

"ನಮ್ಮ ನಡಾವಳಿಗೆ ನಮ್ಮ ಪುರಾತನರ ನುಡಿಯೇ ಇಷ್ಟವಯ್ಯ, ಸ್ಮೃತಿಗಳು ಸಮುದ್ರಪಾಲಾಗಲಿ. ಶ್ರುತಿಗಳು ವೈಕುಂಠಪಾಲಾಗಲಿ, ಪುರಾಣಗಳು ಅಗ್ನಿಯ ಪಾಲಾಗಲಿ. ಆಗಮಗಳು ವಾಯುವಹೊಂದಲಿ. ಎಮ್ಮ ನುಡಿ ಕಪಿಲಸಿದ್ಧಮಲ್ಲಿಕಾರ್ಜುನಮಹಾಲಿಂಗ ಹೃದಯದಲ್ಲಿ ಗ್ರಂಥಿಯಾಗಿರಲಿ. "

"ಅನಂತ ವೇದ, ಶಾಸ್ತ್ರ, ಆಗಮ, ಪುರಾಣ, ತರ್ಕ, ತಂತ್ರಗಳನ್ನು ಆತ್ಮಮಾಡುವನಲ್ಲದೆ ಆತ್ಮನ ಅವು ಮಾಡಿರುವುದಿಲ್ಲ. ಎನ್ನಂತರಂಗದ ಅರಿವಿನ ಮೂರ್ತಿಯಾಗಿ ಎನ್ನ ಗುರಿಲಿಂಗದೇವರು ಸಂಕಲ್ಪಿಸಿ ಆಗೆಂದರೆ ಆದೆವು. "

" ವಚನಾನುಭವಿಯಾದವನು ಪಂಡಿತನಯ್ಯ. ವಿದ್ಯೆಯೆಂಬುದು ಅಭ್ಯಾಸಕನ ಕೈವಶ. ಅವಿದ್ಯೆಯೆಂಬುದು ಸರ್ವರ ಕೈವಶ. ವಿದ್ಯಾವಿದ್ಯೆಯನ್ನರಿತು ಜಗವೇದ್ಯರಾಗಬಲ್ಲರೆ ಮಹಾ ಪಂಡಿತ ನೋಡ ಕಪಿಲಸಿದ್ಧ ಮಲ್ಲಿಕಾರ್ಜುನ"

ಈ ಮಾತುಗಳೇ ಅನುಭವಕ್ಕೆ ಸಾಕ್ಷಿ.

ಸಂಸ್ಕೃತೋಪನಿಷತ್ತುಗಳಲ್ಲಿ "ದಶೋಪನಿಷತ್ತು" ಪ್ರಾಚೀನ, ಶ್ರೇಷ್ಠವೆಂಬುದು ವಿದ್ವಾಂಸರ ಮತ. ಈಶ ಕೇನ ಕಠ ಮುಂಡಕ ಮಾಂಡೂಕ್ಯ ಪ್ರಶ್ನ ತೈತ್ತಿರೀಯ ಐತ್ತರೇಯ ಛಾಂದೋಗ್ಯ ಮತ್ತು ಬೃಹದಾರಣ್ಯಕ ಇವೇ ಆ ದಶೋಪನಿಷತ್ತುಗಳು. ಶ್ವೇತಾಶ್ವತರ ಕೈವಲ್ಯ. ಕೌಷೀತಕೀ ಮತ್ತು ಮೈತ್ರೀ ಎಂಬ ಈ ನಾಲ್ಕು ಉಪನಿಷತ್ತುಗಳು ಈಚೆಗೆ ದೊರೆತಿವೆ.

ಅಷ್ಟೋತ್ತರ ಶತೋಪನಿಷತ್ತುಗಳಲ್ಲದೆ ಹೊಸದಾಗಿ ಉಪಲಬ್ಧವಿರುವುವೂ ಸೇರಿ ೨೩೯ ಉಪನಿಷತ್ತುಗಳು ಎಂಬುದಾಗಿ ಅಭಿಪ್ರಾಯಪಡುತ್ತಾರೆ. ಉಪನಿಷತ್ತುಗಳಲ್ಲಿ ಆತ್ಮಸ್ವರೂಪ "ಯಾಜ್ಞವಲ್ಕ್ಯ ಗಾರ್ಗಿ ಮೈತ್ರೇಯೀ ಜನಕ, ಸನತ್ಕುಮಾರ, ನಾರದ ಜೈವಲಿ. ಶ್ವೇತಕೇತು ಯಕ್ಷ ದೇವತೆಗಳು ಯಮ ನಚಿಕೇತರ ಸಂಭಾಷಣೆ"ಯ ಮೂಲಕ ಸೂಚಿತವಾಗಿದೆ.

ಉಪನಿಷತ್ತು ಒಂದು ವೀರಶೈವರಿಗೆ ಆಧಾರಗ್ರಂಥವಷ್ಟೆ. ಅವುಗಳ ಕೆಲವು ವಾಕ್ಯಗಳ ಮತ್ತು ವಚನಕಾರರ ಅಮೃತವಾಣಿಯನ್ನು ಸಾಮ್ಯ ಮಾತ್ರ ತೋರಿಸಲು ಉದ್ಧರಿಸಲಾಗುವದು. ಮೊದಲು ಸಂಸ್ಕೃತ ಉಪನಿಷತ್ತು. ಅನಂತರ ಅವುಗಳಿಗೆ ಸ್ವಲ್ಪಮಟ್ಟಿದೆ ಸರಿಹೋಲುವ ಅಥವಾ ಭಾವವನ್ನು ಸೂಚಿಸುವ ಶರಣರ ವಚನಗಳನ್ನು ಕೊಡಲಾಗುವದು. ಸಂಸ್ಕೃತ ಉಪನಿಷತ್ತುಗಳ ಭಾವವನ್ನು ಶರಣರ ವಚನಗಳೇ ಸೂಚಿಸುವುದರಿಂದ ವಿವರಣೆ ಯಾವುದಕ್ಕೂ ಕೊಡಬೇಕಾದ ಅಗತ್ಯವಿರಲಾರದು. ಏಕೆಂದರೆ ವಚನಗಳಂತೂ ಪಾಮರರಿಗೂ ಜನಸಾಮಾನ್ಯಕ್ಕೂ ಮನವರಿಕೆಯಾಗುವುದು. ಉಪನಿಷತ್ತುಗಳ ಭಾಷೆಯಂತೂ ವೇದ. ಬ್ರಾಹ್ಮಣ ಆರಣ್ಯಕ ಭಾಷೆಗಳಿಗಿಂತಲೂ ಸುಲಭವಾಗಿರುವುದು ಉದಾಹರಣೆಯಲ್ಲಿ ಸ್ಪಷ್ಟ. ಉಪನಿಷತ್ತುಗಳ ಅಭಿಪ್ರಾಯಕ್ಕಿಂತಲೂ ವಚನಕಾರರ ಅಭಿಪ್ರಾಯ ಎಷ್ಟು ದೂರ ಮುಂದುವರೆದಿದೆ ಎಂಬುದಕ್ಕೆ ಕೊನೆಯಲ್ಲಿ ಎರಡು ವಚನಗಳನ್ನು ಹೇಳಿ ವಿರಮಿಸಲಾಗುವುದು.

ಸಾಮ್ಯ

ಏಕ ಏವಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ ।
ಏಕಧಾ ಚೈವ ದೃಶ್ಯತೇ ಜಲಚಂದ್ರವತ್ ॥

—ಅಮೃಬಿಂದೂಪನಿಷತ್

ಕುಂಭ ಸಹಸ್ರ ಉದಕದೊಳಗೆ ಬಿಂಬಿಸಿ ತೋರುವ ಸೂರ್ಯನೊಬ್ಬನಲ್ಲದೆ ಮತ್ತೆ ಹಲಬರುಂಟೇನಯ್ಯ ? ಸಕಲ ದೇಹಗಳೊಳಗೆ ಭ್ರಮಿಸಿ ತುಂಬಿಪ್ಪ ಪರವಸ್ತು ನೀನೊಬ್ಬನಲ್ಲದೆ ಮತ್ತಾರನೂ ಕಾಣೆನಯ್ಯ ಅಖಂಡೇಶ್ವರಾ.

೨. ವಿಶ್ವತಶ್ಚಕ್ಷುರುತ ವಿಶ್ವತೊ ಮುಖೋ
ವಿಶ್ವತೋ ಬಾಹುರುತ ವಿಶ್ವತಸ್ಪಾತ' ।
ಸಂಬಾಹುಭ್ಯಾಂ ಧ ಮತಿ ಸಂಪತ್ರ್ತೈರ್ದ್ಯಾವಾ ಪೃ-
ಥಿವೀ ಜನಯುಂ ದೇವ ಏಕ: ॥೩॥ ಮಂ. ೩.
ಶ್ವೆ. ಅ. ೩.

ಎತ್ತೆತ್ತ ನೋಡಿದಡತ್ತತ್ತ ನೀನೆ ದೇವಾ. ಸಕಲ ವಿಸ್ತಾರದ ರೂಹು ನೀನೆ ದೇವಾ. ವಿಶ್ವತೋ ಚಕ್ಷು ನೀನೆ ದೇವ. ವಿಶ್ವತೋಮುಖ ನೀನೇ ದೇವ. ವಿಶ್ವತೋ ಬಾಹು ನೀನೆ ದೇವ. ವಿಶ್ವತೋಪಾದ ನೀನೇ ದೇವ ಕೂಡಲಸಂಗಮದೇವ.

೩. ಏಕೋಹಿ ರುದ್ರೋನ ದ್ವಿತಿಯಾಯತಸ್ಥು: ।
ಯ ಇಮಾಲ್ಲೋಕಾನೀಶತ ಈಶನೀಭಿ: ।
ಪ್ರತ್ಯಂಜನಾಸ್ತಿಷ್ಠತಿ ಸಂಚುಕೋ ಚಾಂತಕಾಲೆ ।
ಸಗ್ ಸೃಜ್ಯ ವಿಶ್ವಾಭುವನಾನಿ ಗೋಪಾ। ॥೨॥
ಶ್ವೇ. ಉ. ಅ. ೩. ಪ.೦. ॥೨॥

ದೇವನೊಬ್ಬ ನಾಮ ಹಲವು, ಪರಮ ಪತಿವ್ರತೆಗೆ ಗಂಡನೊಬ್ಬ, ಮತ್ತೊಂದಕ್ಕೆರಗಿದಡೆ ಕಿವಿಮೂಗ ಕೊಯ್ವನು, ಹಲವು ದೇವರ ಎಂಜಲ ತಿಂಬುವರನೇನೆಂಬೆನಯ್ಯ.

ಅಥವಾ

ನಂಬಿದ ಹೆಂಡತಿಗೆ ಗಂಡನೊಬ್ಬನೇ ಕಾಣಿರೋ? ನಂಬ ಒಲ್ಲ ಭಕ್ತಂಗೆ ದೇವನೊಬ್ಬನೆ ಕಾಣಿರೋ. ಬೇಡ ಬೇಡ ಅನ್ಯ ದೈವದ ಸಂಗ ಹೊಲ್ಲ. ಅನ್ಯ ದೈವವೆಂಬುದು ಹಾದರ ಕಾಣಿರೋ, ಕೂಡಲಸಂಗಮ ದೇವರು ಕಂಡರೆ ಮೂಗ ಕೊಯ್ಯುವ ಕಾಣಿರೋ.

೪. ನೈವ, ಸ್ತ್ರೀ, ನ, ಪುಮಾನೇಷೋ!
ನೈವ ಚಾಯಂ ನ ಪುಂಸಕ:॥
ಯದ್ಯಚ್ಛರೀರ ಮಾದತ್ತೇ
ತೇನ, ತೇನನ ಸಯುಜ್ಯತಾ " (ರಕ್ಷ್ಯತೆ)
ಶ್ವೇ. ಅ. ೫. ಮಂ. ೧೦.

ಮೊಲೆ ಬಂದರೆ ಹೆಂಗಸೆಂಬರು. ಮೀಸೆಬಂದರೆ ಗಂಡಸೆಂಬರು. ಹೆಂಗಸು ಗಂಡಸು-ವ್ಯಕ್ತಿಗಳ ಮಧ್ಯದಲ್ಲಿರುವ ಆತ್ಮ ಹೆಂಗಸೂ ಅಲ್ಲ, ಗಂಡಸೂ ಅಲ್ಲ!

೫. ಅಪಾಣಿ ಪಾದೋ ಜವನೋಗ್ರಹೀತಾ
ಪಶ್ಯತ್ಯ ಚಕ್ಷುಸ್ಸಶೃಣಮೋತ್ಯ ಕರ್ಣಃ ।
ಶ್ವೇ. ಅ. ೩. ಮಂ. ೧೯.

ಕಾಲಿಲ್ಲದೆ ನಡೆಯುವನು. ಕೈಯ್ಯಿಲ್ಲದೆ ಹಿಡಿಯುವನು. ಕಣ್ಣಿಲ್ಲದೆ ನೋಡುವನು. ಸಹಜವಾಗಿ ಮೈಯ್ಯಿಲ್ಲದ ಬಣ್ಣ. ಮಥನವಿಲ್ಲದ ಕೂಟ. ಅಲ್ಲಿ ಸ್ವೈರಗಾಗಿ ಶಿಲೆಯ ಮೇಲಿಹ ಒಡಲು ತನ್ನತಾನರಿಯದೆ ಬಿಡದೆ ಎಲ್ಲ ಬೆಂಬತ್ತಿ ಬಂದ ಪರಿಯ ನೋಡ, ಜಡವಿಡಿದ ಎನ್ನ ಕಾಯದ ಕಳ ವಳವ ತಿಳುಹಲೆಂದು ಅಡಿಗಡಿಗೆ ಅನುಭಾವವ ತೋರುತ್ತಿದ್ದಾನೆ. ಕುಳ್ಳಿ ಡೆಯಲ್ಲಿ ಕುಂಟನ ನಿಂತೆಡೆಯಲ್ಲಿ ಎಳವ ಎಲ್ಲಿ ನೋಡಿದಡಲ್ಲಿ ಸಂಪೂರ್ಣ ಮೆಲ್ಲಮೆಲ್ಲನೆ ಒಳಗೆ ಕೊರೆದು ತೋರುತ್ತಿದ್ದಾನೆ. .....ಕೂಡಲಸಂಗಮ ದೇವರ ಮಹಾಮನೆಯಲ್ಲಿ ಪ್ರಭುದೇವರ ಮರೆಹೊಕ್ಕೆ ಬದುಕಿದೆ ನಾನು.

೬. ಯಥಾ ನಸ್ಯ ಸ್ಯಂದಮಾನಾಃ ಸಮುದ್ರೇ
ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ ।
ತಥಾ ವಿದ್ವಾನ್ ನಾಮರೂಪಾದ್ವಿ ಮುಕ್ತಃ ||
ಪರಾತ್ಪರಂ ಪುರುಷಂ ಉಪೈತಿ ದಿ ವ್ಯವತ್
ಮುಂ. ಖಂ. ೩. ಮಂ. ೮.

ಲಿಂಗವ ಪೂಜಿಸಿ ಫಲವೇನಯ್ಯ, ಸಮರತಿ ಸಮಸುಖವ ನರಿಯದ ನ್ನಕ್ಕ? ಲಿಂಗವ ಪೂಜಿಸಿ ಫಲವೇನಯ್ಯ ಕೂಡಲಸಂಗಮದೇವರ ಪೂಜಿಸಿ ನದಿಯೊಳಗೆ ನದಿಬೆರಸಿದಂತಾಗದನ್ನಕ್ಕ.

೭. ಅಣೋರಣೀಯಾನ್ಮಹತೋಮಹೀಯಾನ್
ಆತ್ಮಾಽಸ್ಯ ಜಂತೋರ್ನಿಹಿತೋಗುಹಾಯಾಮವತ್ ।
ಕಠ ಅ. ೧. ವಲ್ಲಿ ೨. ಮಂ, ೨೦.

ಹಿರಿದಕ್ಕೆ ಹಿರಿದು ಕಿರಿದಕ್ಕೆ ಕಿರಿದು ವಾಙ್ಮನಕ್ಕಗೋಚರ ಕೂಡಲ ಸಂಗಮದೇವ.

೮. ಅಂಗುಷ್ಠಮಾತ್ರ ಪುರುಷೋ ಅಂತರಾತ್ಮಾ
ಸದಾ ಜನಾನಾಂ ಹೃದಯೇ ಸನ್ನಿವಿಷ್ಟ ।

ಕಠ. ಅ. ೨. ಪ. ೬. ಮಂ. ೧೭.

"ಅಯ್ಯ ಪಾತಾಳವಿತ್ತಿತ್ತ, ಶ್ರೀಪಾದವತ್ತತ್ತ.
ಬ್ರಹ್ಮಾಂಡವಿತ್ತಿತ್ತ ಮಣಿಮಕುಟವತ್ತತ್ತ.
ಅಯ್ಯ ದಶದಿಕ್ಕು ಇತ್ತಿತ್ತ. ದಶಭುಜಗಳತ್ತತ್ತ.
ಚನ್ನಮಲ್ಲಿಕಾರ್ಜುನಯ್ಯ ನೀನೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ.

೧೦. ತಿಲೇಷು ತೈಲಂ ದಧನೀವ ಸರ್ಪಿ: ಆಪ: ಸ್ರೋತ: ಸು
ಅರಣೀಷುಚಾಗ್ನಿ: ।
ಏವಮಾತ್ಮನಿಗೃಹ್ಯತೇ ಸಾಸತ್ಯೇ ನೈನಂ
ತಪಸಾಯೋನುಪಶ್ಯತಿ ॥

ಶ್ವೇತಾಶ್ವತರ ಅ. ೧. ಮಂ. ೧೫.

ಮರೀಚಿಯೊಳಗಿನ ಬಿಸಿಲಿನಂತೆ ಇದ್ದಿತ್ತು ಕ್ಷೀರದೊಳಗಣ ತುಪ್ಪದಂತೆ ಇದ್ದಿತ್ತು. ಚಿತ್ರಿಕನೊಳಡಗಿದ ಚಿತ್ರದಂತಿದ್ದಿತ್ತು. ನುಡಿಯೊಳಡಗಿದ ಅರ್ಥದಂತಿದ್ದಿತ್ತು. ಆಲಿಯೊಳಡಗಿದ ತೇಜದಂತಿದ್ದಿತ್ತು. ಕೂಡಲ ಚನ್ನ ಸಂಗಯ್ಯ ನಿಮ್ಮ ನಿಲವು.

೧೧. ನೀಲ ತೋಯದ ಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ ।
ನೆಲದ ಮರೆಯ ನಿಧಾನದಂತೆ । ಮುಗಿಲಮರೆಯಲಡಗಿರ್ದ
ಮಿಂಚಿನಂತೆ. ಬಯಲಮರೆಯಲಡಗಿರ್ದ ಮರೀಚಿಯಂತೆ.
ಕಂಗಳ ಮರೆಯಲಡಗಿರ್ದ ಬೆಳಗಿನಂತೆ ಗುಹೇಶ್ವರ ನಿಮ್ಮ ನಿಲವು.

೧೨. ದೇಹೋ ದೇವಾಲಯ: ಪ್ರೋಕ್ತೋ
ಜೀವೋsಯಂ ಶಂಕರಸ್ಮೃತಃ ।
ತ್ಯಜೇದ ಜ್ಞಾನ ನಿರ್ಮಾಲ್ಯಂ
ಸೋಹಂ ಭಾವೇನ ಪೂಜಯೇತ್ ॥

ಉಳ್ಳವರು ಶಿವಾಲಯ ಮಾಡುವರು ನಾನೇನ ಮಾಡುವೆನಯ್ಯ.
ಬಡವನಯ್ಯ. ಎನ್ನ ಕಾಲೇ ಕಂಬ. ದೇಹವೇ ದೇಗುಲ. ಶಿರ

ಹೊನ್ನ ಕಲಶವಯ್ಯ, ನೋಡಯ್ಯ, ಕೂಡಲಸಂಗನು ದೇವಯ್ಯ.
ಕೇಳಯ್ಯ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ.

ಅಥವಾ

ದೇಹವೆಂಬ ದೇಗುಲದೊಳಗೆ ಭಾವ ಸಿಂಹಾಸನ ಮಾಡಿ ಜೀವದೊಡೆಯನ ಪೂಜಿಸಬಲ್ಲ ದೇವರಿಗೆ ದೇವನೆಂಬೆನಯ್ಯ ಅಖಂಡೇಶ್ವರ.

ಎನ್ನ ಪಾದವೇ ಶಿಲೆಯಾಗಿ, ಎನ್ನ ಕಾಯ ಕಡಹದ ಕಂಭಗಳಾಗಿ, ಎನ್ನ ತೋಳೆ ನಾಗವೇದಿಯಾಗಿ, ಎನ್ನ ಅಸ್ಥಿಯೇ ಸುತ್ತಳ ಜಂತ್ರಿಯಾಗಿ ಎನ್ನ ಅಧರವೇ ಬಳ್ಳಿಯ ಬಾಗಿಲಾಗಿ, ಎನ್ನ ಗುರುಕರುಣನೆ ಲಿಂಗವಾಗಿ ಎನ್ನಂಗವೇ ರಂಗಮಧ್ಯವಾಗಿ, ಎನ್ನ ಹೃದಯಕಮಲವೇ ಪೂಜೆಗಾಗಿ, ಎನ್ನ ಕಿವಿಗಳೇ ಕೀರ್ತಿಮುಖವಾಗಿ, ಎನ್ನ ನೆನೆವ ನಾಲಿಗೆಯೇ ಘಂಟೆಯಾಗಿ, ಎನ್ನ ಶಿರವೇ ನಿರ್ಮಲ ಹೊದಿಕೆಯಾಗಿ, ಎನ್ನ ನೆನಹೆ ನಿನಗೆ ಉಪಾಹಾರವಾಗಿ ಗುರುಪುರದ ಮಲ್ಲಯ್ಯ ಸಿಂದನಾಗಿ।

ದೇಹವೇ ದೇಗುಲವಾಗಿರಲು ಬೇರೆ ಮತ್ತೆ ದೇಗುಲವೇಕಯ್ಯ?
ಪ್ರಾಣವೇ ಲಿಂಗವಾಗಿರಲು ಬೇರೆ ಮತ್ತೆ ಲಿಂಗವೇಕಯ್ಯ?
ಹೇಳಲಿಲ್ಲ, ಕೇಳಲಿಲ್ಲ.ಗುಹೇಶ್ವರ ನೀನು ಕಲ್ಲಾದರೆ ನಾನೇನಪ್ಪೆನಯ್ಯ.

೧೩. ದ್ವೇ ವಿದ್ಯೇ ವೇದಿತವ್ಯೇ। ಇತಿ ಹಸ್ಮ ಯದ್ಬ್ರಹ್ಮವಿದೋವದಂತಿ।
ಪರಾಚೈವಾಪರಾಚ । ತತ್ರ ಅಪರಾ ಜ್ಯೋತಿಷಮಿತಿ ।
ಅಥ ಪರಾಯಯಾ । ತದಕ್ಷರ ಮಧಿಗಮ್ಯತೇ ॥

ಮುಂ. ೧. ಖಂ. ೧. ಮಂ. ೪. ೫.

ಓಂಕಾರ ಅಂದರೆ ಪ್ರಣವ. ಓಂಕಾರ: ಪ್ರಣವಸಮೌ ಅಮರಕೋಶ ಓಂಕಾರ, ಪ್ರಣವ, ಮಂತ್ರ, (ಪಂಚಾಕ್ಷರೀ) ಮೂರರಲ್ಲಿ ವ್ಯತ್ಯಾಸವೇನೂ ಇಲ್ಲ. ಸ್ವರೂಪವೊಂದೇ. ಪಂಚಾಕ್ಷರಿಯು ಲಿಂಗವನ್ನು ಬೋಧಿಸುತ್ತದೆ. ಶಿವಮಂತ್ರಕ್ಕೆ ಶಿವಲಿಂಗವೇ ವಾಚ್ಯ.

ನಮಃ ಪೀಠಮಿತಿ ಪ್ರೋಕ್ತಂ ಶಿಕಾರೋ ಮಧ್ಯವಿಲಾರಿತಂ
ವಾತಾರೋಗೋಮುಖಂ ವೃತ್ತಂ ಯಕಾರೋಗೋಲಕಂ ಸ್ಮೃತಂ ||
ಮಂತ್ರೇ ಲಿಂಗಂ ಪ್ರತಿಷ್ಠಿತಂ ಓಂಕಾರೋ ಲಿಂಗ ಮಾಖ್ಯಾತಂ
“ ಪ್ರಣವಂಬ್ರಹ್ಮರಾಟ್ ”
ಕಾಮಿಕಾಗಮ

## ಪ್ರಣವವೇ ಲಿಂಗ

ನಕಾರಶ್ಚಾದಿ ಪೀಠಂಚ ಮಕಾರೋ ಮಧ್ಯಮೇವಚ
ಶಿಕಾರೋ ವರ್ತುಲಂಕಾವ ವಾರೊ ಗೋಮುಖಂ ತಥಾ ||
ಯಕಾರೋ ಬಿಂದುರೇವಂಸ್ಯಾತ್ಪ್ರಣವೋ ಲಿಂಗ ಮುಚ್ಯತೇ||
ವೀರಶೈವ ರತ್ನಾಕರ ತ. ೧. ಪ. ೪.

## ಲಿಂಗಕ್ಕೆ ಸೂತ್ರವೆಂತಲೂ ಹೆಸರು

ಸೂಚನಾತ್ಪರ ಮೇಶಸ್ಯ ಲಿಂಗಂ ಸೂತ್ರಮಿತೀರಿತಮ್||
ಕಿರಣಾಗಮ:

ಪಂಚಸೂತ್ರ ಕೃತಂಲಿಂಗಂ ಧಾರಯೇ ದ್ವಿಧಿವಚ್ಛುಭಮ್।
“ವೀರಶೈವಾಚಾರ ಪ್ರದೀಪಿಕಾ”

ಪಂಚಾಕ್ಷರಸ್ಯೈವ ಸೂತ್ರನಾಮ ಪ್ರಸಿದ್ಧತಃ ಸಿ. ಶಿ.
ಸೂತ್ರಂ ಪಂಚಾಕ್ಷರ ಸ್ತಥಾ। ಸಿ. ಶಿ. ಪ. ೮ ಶ್ಲೋ. ೨೩.
ನಕಾರಸ್ತಾರಕ ಸ್ಥಾನಂ ಮಕಾರೋ ದಂಡ ಉಚ್ಯತೇ
ಶಿಕಾರ ಕುಂಡಲಾಕಾರೋ ವಾಕಾರಶ್ಚಾರ್ಧ ಚಂದ್ರಕ:।
ಯಕಾರೋ ಬಿಂದು ರೂಪೋಯಂ ಓಂಕಾರ: ಪಂಚವರ್ಣಕ: ।

ಪಂಚವರ್ಣಕ್ಕು ಒಂದೊಂದು ಹೆಸರು ಹೀಗಿದೆ. ತಾರಕ, ದಂಡ, ಕುಂಡಲ, ಅರ್ಧಚಂದ್ರ, ಬಿಂದು ಎಂಬುದಾಗಿ ಇವುಗಳಿಗೆ ಪಂಚಸೂತ್ರ ವೆಂದೂ ಹೆಸರು. ಲಿಂಗ, ಪಂಚಾಕ್ಷರೀ ಮಂತ್ರ, ಪ್ರಣವ ಅಥವಾ ಮಂತ್ರ ವೆಲ್ಲವೂ ಒಂದೇ ಎಂದಾಯಿತು.

# ಅವಸ್ಥಾತ್ರಯ ಹಾಗೂ ನಾಮಾಂತರವು.

| | ಸಮಷ್ಟಿ | | | | ವ್ಯಷ್ಟಿ | | |
|---|---|---|---|---|---|---|---|
| ೧. ಅವಸ್ಥೆಗಳು – | ಜಾಗ್ರತ್ | ಸ್ವಪ್ನ | ಸುಷುಪ್ತಿ | ತುರೀಯ<br>ಶುದ್ಧಾತ್ಮಸ್ಥಿತಿ | ವಿರಾಟ್<br>ಹಿರಣ್ಯಗರ್ಭ | ಈಶ | ಬ್ರಹ್ಮ |
| ೨. ನಾಮ— | ವಿಶ್ವ | ತೈಜಸ | ಪ್ರಾಜ್ಞ | | | | |
| ೩. ಸಂಜ್ಞಾ— | ತ್ಯಾಗಾಂಗ | ಭೋಗಾಂಗ | ಯೋಗಾಂಗ | | | | |
| ೪. ಲಿಂಗ— | ಇಷ್ಟ | ಪ್ರಾಣ | ಭಾವ | | | | |
| ೫. ಪ್ರಸಾದ— | ಶುದ್ಧ | ಸಿದ್ಧ | ಪ್ರಸಿದ್ಧ | | | | |
| ೬. ವೇದಾಂತ— | ಸ್ಥೂಲ | ಪ್ರವಿವಿಕ್ತ<br>(ಸೂಕ್ಷ್ಮ) | ಆನಂದ | | | | |
| ೭. ಶೈವಾಗಮ- | ರೂಪಂ | ರುಚಿ | ತೃಪ್ತಿ | | | | |
| ೮. ತತ್ವ- | ಮನ | ಬುದ್ಧಿ | ಚಿತ್ತ | ಅಹಂಕಾರ | | | |
| ೯. ವಿಷಯ- | ರೂಪ | ರಸ | ಗಂಧ | ಶಬ್ದ | ಸ್ಪರ್ಶ | ರತಿ | |
| ೧೦. ಅಂಗಾನಿ- | ನೇತ್ರಂ | ಜಿಹ್ವಾ | ಘ್ರಾಣಾ | ಶ್ರೋತ್ರಂ | ತ್ವಕ್ | ಭಾವ | |
| ೧೧. ಲಿಂಗಾನಿ- | ಶಿವ | ಗುರು | ಆಚಾರ | ಪ್ರಸಾದ | ಜಂಗಮ | ಮಹಾಲಿಂಗ | |
| ೧೨. ಕೋಶಾ- | ಅನ್ನಮಯ | ಪ್ರಾಣಮಯ | ಮನೋಮಯ | ವಿಜ್ಞಾನಮಯ<br>ಶತ್ತ್ವಮಯ | ಆನಂದಮಯ<br>ವಿದ್ಯೆ | | |

ಓಂಕಾರಾನುಸಂಧಾನ ಹೀಗಿದೆ. ಮುಂಡಕೋಪನಿಷತ್ ಅನುಭವ ಸೂತ್ರಗಳಲ್ಲಿ ವಿವರಣೆ ಸ್ಪಷ್ಟವಾಗಿದೆ. "ಗುರೂಪದೇಶತಃ ಸಾಧ್ಯಂನಾನ್ಯಥಾ ಗ್ರಂಥಕೋಟಿಭಿಃ" ಅನುಭವಸೂತ್ರಕಾರರೇ ಹೀಗೆ ಅಪ್ಪಣೆಯನ್ನಿತ್ತಿದ್ದಾರೆ. ಉಪದೇಶ ಮುಖ್ಯ. ಅಂತೆಯೇ ಆಚರಣೆ ಪಾರಾಯಣವಲ್ಲ.

೧೫. ಏವಂ ವಾ ಅರೇಽಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದೋ ಯಜುರ್ವೇದ ಸಾಮವೇದೋಽಥರ್ವಾಂಗಿರಸ ಇತಿಹಾಸಃ ಪುರಾಣಃ ವಿದ್ಯಾ ಉಪನಿಷದ ಶ್ಲೋಕಾಃ ಸೂತ್ರಾಣ್ಯನು ವ್ಯಾಖ್ಯಾನಾನಿ ಅಸ್ಯೈವೈತಾನಿ ಸರ್ವಾಣಿ ನಿಃಶ್ವಸಿತಾನಿ ॥ ಬೃ. ಅ. ೨. ಬ್ರಾ. ೪. ಮಂ ೧೦

೧೫. ಕಾಮಧೇನುವಿನಲ್ಲಿ ಕಲ್ಪಿಸಿದ ಸವಿಯಿಪ್ಪುದಲ್ಲದೆ ಪಾತ್ರ್ಯದ ಪಶುವಿನಲ್ಲುಂಟೇ ಅಯ್ಯಾ! ಮಹಾಶೇಷಿನಲ್ಲಿ ಮಾಣಿಕ್ಯ ಪ್ರಭಾವಿಪುತ್ತಿಪ್ಪುದಲ್ಲದೆ ಕೆರೆಯೊಳಗಣ ಬಳ್ಳಿ ( ನೀರ ಹಾವು ) ಯಲ್ಲಿ ಉಂಟೆ ಅಯ್ಯಾ! ವಾರಣದ ಕುಂಚ ಸ್ಥಲದಲ್ಲಿ ಮೌಕ್ತಿಕ ಬೆಳಗುತ್ತಿಪ್ಪುದಲ್ಲದೆ ಊರ ಹಂದಿಯಲ್ಲಿ ಉಂಟೆ ಅಯ್ಯಾ! ಶರಣರ ಮನೋಮಧ್ಯದಲ್ಲಿ ಶಿವನು ಮೂರ್ತಿಗೊಂಡು ಆ ಶರಣರ ಜಿಹ್ವೆಯ ಕೊನೆಯ ಮೊನೆಯ ಮೇಲೆ ವಚನವೆಂಬ ಪರಮಾಮೃತವ ಕರೆದು ಕೆಲಬಲದ ಗಣಂಗಳಿಗೆ ಸವಿಯ ತೋರಿ ಆ ಶರಣರಲ್ಲಿ ಪರಿಪೂರ್ಣನಾಗಿಪ್ಪುದಲ್ಲದೆ ದ್ವೈತಾದ್ವೈತಿಗಳೆಂಬವರಲ್ಲಿ ಉಂಟೇ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನ ॥

೧೬. ತದ್ಯಥಾ ಕ್ಷುರಃ ಕ್ಷುರಧಾನೇಽಹಿತಸ್ಯಂ ಪವಿಶ್ವಂಭರೋ ವಾ ವಿಶ್ವಂಭರಃ । ಕುಲಾಯ ಏವಮೇವೈಷ ಪ್ರಜ್ಞಾಽಽತ್ಮೇತಿ । ಇದಂ ಶರೀರಂ ಪ್ರವಿಷ್ಟಃ ಆಲೋಮಭ್ಯಃ ಆನಖೇಭ್ಯಃ ಕಾಷೀತಕಿ. ಅ. ೪. ಮಂ. ೧೯

೧೬. ಮುಗಿಲ ಮರೆಯ ಸೂರ್ಯನಂತೆ ನೆಲದ ಮರೆಯ ನಿಧಾನದಂತೆ ಒರೆಯ ಮರೆಯ ಅಲಗಿನಂತೆ ಹಣ್ಣೊಳಗಿನ ರಸದಂತೆ ಶರಣ ಶರೀರದ ಮರೆಗೊಂಡು ಪರಮಪಾವನ ಮೂರ್ತಿ ಪರಾಪರ ತಾನು ತಾನಾಗಿರ್ದುದನೇನೆಂಬೆನಯ್ಯಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೆ.

೧೭. ನ ಮೇ ಬಂಧುಃ ನ ಮೇ ಜನ್ಮ ನಮೇ ವಾಕ್ಯಂ ನಮೇ ರವಿಃ ನಮೇ ಗುರುಃ ನಮೇ ಶಿಷ್ಯೋ ನಮೇ ಹೀನೋನಬಾಧಿಕಃ ।
ನಮೇ ಬ್ರಹ್ಮಾ ನಮೇ ವಿಷ್ಣುಃ ನಮೋ ರುದ್ರೋನ ಚಂದ್ರಮಾಃ ॥

ಅಧ್ಯಾಯ ೪. ತೇಜೋಬಿಂದೂಪನಿಷತ್

ತಂದೆ ನೀವು ತಾಯಿ ನೀವು ಬಂಧು ನೀವು ಬಳಗ ನೀವು ನೀವಲ್ಲದೆ ಮತ್ತಾರೂ ಇಲ್ಲ. ಕೂಡಲಸಂಗಮದೇವ ಹಾಲಲದ್ದು ನೀರಲದ್ದು

೧೮. ಅಹಂ, ಬ್ರಹ್ಮಾಸ್ಮ್ಯಹಂ ಬ್ರಹ್ಮಾಸ್ಮಿ ಅಹಂಬ್ರಹ್ಮೇತಿನಿಶ್ಚಯಃ।
ಚಿದಹಂ ಚೇತಿ ಸಜೀವನ್ಮುಕ್ತ ಉಚ್ಯತೇ।
ಬ್ರಹ್ಮೈವಾಹಂ ಪರಮೋಹಂ ನಸಂಶಯಃ ।
ಸ್ವಯಮೇಪಸ್ವಯಂ ಹಂಸಸ್ವಯ ಮೇವ ಸ್ವಯಂ ಸ್ಥಿತಃ।
ಸ್ವಯಮೇವಸ್ವಯಂ ಪಶ್ಯೇತ್ ಸ್ವಾತ್ಮರಾಜ್ಯೇ ಸುಖಂವಸೇತ್।
ಸ್ವಾತ್ಮಾನಂದನ್ ಸ್ವಯಂ ಭುಂಕ್ತೇ ಸಜೀವನ್ಮುಕ್ತ ಉಚ್ಯತೇ ।
-ತೇಜೋಬಿಂದೂಪನಿಷತ್.

೧೯. ಅಹಂ ಬ್ರಹ್ಮಾಸ್ಮಿ ಬೃ. ಅ. ೧. ಬ್ರಾಹ್ಮಣ ೪. ಮಂ. ೧೦.

೨೦ ಅಯಮಾತ್ಮಾ ಬ್ರಹ್ಮ ಬೃ. ಅ. ೨. ಬ್ರಾಹ್ಮಣ ೫. ಮಂ. ೧೯.

೨೧. ಆತ್ಮಾನಂ ವಿಜಾನೀಯಾ ದಯಮಸ್ಮೀತಿ ಪುರುಷಃ
ಬೃ. ಅ. ೪. ಬ್ರಾ. ೪. ಮಂ. ೧೨

೨೨. ತತ್ತ್ವಮಸಿ ಛಾಂ. ಅ. ೬. ಖಂ. ೮. ಮಂ. ೭.

೨೩. ಸರ್ವಂ ಖಲ್ವಿದಂ ಬ್ರಹ್ಮಂ ಛಾಂ. ಅ. ೩. ಖಂ. ೧೪. ಮಂ. ೧.

ಕಲ್ಲುದೇವರು ದೇವರಲ್ಲ; ಮಣ್ಣು ದೇವರು ದೇವರಲ್ಲ; ಮರದೇವರು ದೇವರಲ್ಲ: ಪಂಚ ಲೋಹವಲ್ಲಿ ಮಾಡುವ ದೇವರು ದೇವರಲ್ಲ. ಸೇತುಬಂಧ, ರಾಮೇಶ್ವರ, ಗೋಕರ್ಣ, ಕಾಶಿ, ಕೇದಾರ ಮುಂತಾದ ಅಷ್ಟಾಷಷ್ಟಿ ತೀರ್ಥಂಗಳಲ್ಲಿಹ ದೇವರು ದೇವರಲ್ಲ. ತನ್ನ ತಾನರಿದು ತಾನಾರೆಂದು ತಿಳಿದಡೆ ತಾನೇ ದೇವ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೮. ಆತ್ಮಾವಾ ಅರೇದ್ರಷ್ಟವ್ಯೋ ಮಂತವ್ಯೋ ನಿಧಿಧ್ಯಾಸಿತವ್ಯ
ಬೃ. ಶ. ೨. ಬ್ರಾ. ೪. ೪. ಮಂ.೫

ಅಷ್ಟಾಷಷ್ಟಿ ಕೋಟಿ ತೀರ್ಥವ ಮಿಂದರಿಲ್ಲ ಕಾಣಿರಣ್ಣಾ. ಲಕ್ಷಾಲಕ್ಷ ಕೋಟಿ ಜಪವನೆಣಿಸಿ ಧ್ಯಾನ, ಹೋಮ, ನೇಮ, ಮೌನ, ಅನುಷ್ಠಾನ, ಮಾಡಿದರಿಲ್ಲ ಕಾಣಿರಣ್ಣಾ. ಕಾಶಿ, ಕೇದಾರ, ಶ್ರೀಶೈಲ, ಶಿವಗಂಗೆ| ಹೋದರಿಲ್ಲ ಕಾಣಿರಣ್ಣಾ. ಇವು ಎಲ್ಲ ಬರಿಯ ಭ್ರಾಂತಿ ಕೇಳಿರಣ್ಣಾ. ಶ್ರೀ ಗುರು ಕರುಣದಿಂದ ಬಜಯಾಗೈಸಿ ಕೊಟ್ಟ ಪರಮಲಿಂಗ ತನ್ನ ಕರದಲ್ಲಿ ತುಂಬಿಪ್ಪುದಯ್ಯ. ಹಲವು ಕಡೆಗೆ ಹೋದ ಮನವ ಧ್ಯಾನವೆಂಬ ಹಸ್ತದಲ್ಲಿ ಹಿಡಿದು ಆಲಿಂಗದ ಗೊತ್ತಿನಲ್ಲಿ ಕಟ್ಟಿ ನೆರೆಯಬಲ್ಲರೆ ಆತಪ್ಪನು ಪರಮೇಶ್ವರನು. ಇದೇ ನಿಶ್ಚಯ. ಉಳಿದುದೆಲ್ಲ ಹುಸಿ. ಕಂಡೆಯಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ.

ಇಲ್ಲಿಯವರೆಗೂ ಸಂಸ್ಕೃತ ಕನ್ನಡ ಉಪನಿಷತ್ತುಗಳ ತಾರತಮ್ಯವನ್ನು ವಿವರಿಸಲಾಯಿತು. ಕನ್ನಡ ಉಪನಿಷತ್ತುಗಳ ಅಭಿಪ್ರಾಯವು ಬಹು ಸುಲಭವಾಗಿ ಆಬಾಲವೃದ್ಧರಿಗೂ ಆ ಪಾಮರ ಪಂಡಿತರಿಗೂ ಆ ನರ ನರಪತಿಗಳಿಗೂ ಮನವರಿಕೆಯಾಗುವುದು. ಸಂಸ್ಕೃತ ಉಪನಿಷತ್ತುಗಳಿಗೆ ಅರ್ಥ ವಿವರಣೆಯಾಗಲು ಭಗವಾನ್ ವ್ಯಾಸರು ಬ್ರಹ್ಮಸೂತ್ರಗಳನ್ನು ಬರೆದರು. ಅವು ಗಳು ಉಪನಿಷತ್ತುಗಳಿಗೂ ಕಠಿನ. ಆದುದರಿಂದ ಪರಸ್ಪರ ಭಾವವನ್ನು ಮಾತ್ರ ಕಂಡ ಬರುವಂತೆ ವಿವರಿಸಲಾಯಿತು. ಮುಂದೆ ಉಪನಿಷತ್ತುಗಳಲ್ಲಿರುವುದು ವಚನಗಳಲ್ಲಿದೆ ವಚನಗಳಲ್ಲಿರುವುದು ಉಪನಿಷತ್ತುಗಳಲ್ಲಿವೆಂಬುದು ಅಭಿಮಾನದ ಮಾತಲ್ಲ. ಉದಾಹರಿಸಿ ಲೇಖನವನ್ನು ವಿರಮಿಸುವೆನು.

ಆತ್ಮ ಸ್ವರೂಪವ ಬಗ್ಗೆ ಉಪನಿಷತ್ಕಾರರು ಈ ರೀತಿ ಹೇಳಿದರು;—
ಅಣೋರಣೀಯಾನ್ ಮಹತೋ ಮಹೀಯಾನ್ ಆತ್ಮಾನಿಹಿತೋಽಸ್ಯ ಜಂತೋಃ ಗುಹಾಯಾವತ್. ಸ. ಅ. ನ. ೨. ಮಂ. ೨೦.

ಅಣುರೇಣು ತೃಣ ಕಾಷ್ಠಾದಿಗಳಲ್ಲಿ ಪರಮಾತ್ಮ ಸನ್ನಿಹಿತನೆಂಬುದು ಋಷಿಗಳ ಮತ. ಶರಣರ ಅಭಿಪ್ರಾಯವಲ್ಲಿ ವಿಶೇಷತಃ ಭಕ್ತಕಾಯ ಮಮಕಾಯಃ ” ಎಂಬುದು ಸೂಕ್ತಿ.

ಅಣುರೇಣು ಮಹಾತ್ಮನೆಂಬರು. ಅಣುರೇಣು ತೃಣಕಾಷ್ಠದೊಳಗಿಪ್ಪನೆಂಬರು. ಅಮ್ಮನಯ್ಯಾ. ನಾನೆನಲಮ್ಮೆನಯ್ಯಾ. ಶರಣ ಸನ್ನಿಹಿತನು ಭಕ್ತಕಾಯ ಮಮಕಾಯನು. ದಾಸೋಹ ಪರಿಪೂರ್ಣನು ಸದುಹೃದಯನಾದಲ್ಲಿ ಸಿಂಹಾಸನವಾಗಿ ಅಗಲದಿಪ್ಪನು ಕಲಿದೇವ.

ಹೀಗೆ ಆತ್ಮಸ್ವರೂಪ ಆತ್ಮಸಾಕ್ಷಾತ್ಕಾರಿಯ ಪರಮಾನಂದದ ಪರಮಾವಧಿಯ ವಿಚಾರದಲ್ಲಿ ಋಷಿಗಳಿಗಿಂತಲೂ ವಚನಕಾರರು ಸುಲಭವಾದ ಶೈಲಿ ಭಾಷೆ ಅಲಂಕಾರ ನಿರ್ದೇಶ ಮಾಡಿ ಬೋಧಿಸುತ್ತಾರೆ. ಎರಡರಲ್ಲೂ ಕ್ರಿಯಾಜ್ಞಾನಗಳ ಸಮುಚ್ಚಯವಿದ್ದೇ ಇದೆ. "ಕ್ರಿಯಾಜ್ಞಾನ ಸಮಾಯುಕ್ತಂ ವೀರಶೈವಸ್ಯ ಲಕ್ಷಣಂ ಎಂಬಂತೆ ಕರ್ಮ ಜ್ಞಾನಗಳ ಅಗತ್ಯವಿದ್ದೇ ಇದೆ." ಛಲಬೇಕು ಶಿವಶರಣಂಗೆ ಪರಧನವನೊಲ್ಲೆಂಬ ಪರಸತಿಯನೊಲ್ಲೆಂಬ ಎಂಬುದಾಗಿ ತಿಳಿಯುವದು ಜ್ಞಾನ ಅಂತೆಯೇ ಆಚರಿಸುವದು ಕರ್ಮ. ಇವೆರಡರ ಸಮುಚ್ಚಯವೇ ಅಗತ್ಯ, ಅಥವಾ ಪಕ್ಷಿಯ ಪಕ್ಕವಿದ್ದಂತೆ ಅಥವಾ ರಥಕ್ಕೆ ರಥದ ಗಾಲಿಗಳಂತೆ ಹಾಗೆಯೇ ಜಾಣನ ತಾರಕ ಪರಮಾರ್ಥವೆರಡನು ಮಾಣದೆ ನಡೆಸುತಿಹನಿಂತು ಕರುಣಿಯ ಮೊಲೆಯನಣುಗನುಣುತಲಸ್ಮ ಕರದೊಳುಳಿದರು ಜಾಗ್ರಪ ನೋವುವಂತೆ ಜಾಣನ ಮಾರ್ಗಾಚರಣೆಯನ್ನು ಶಿವಯೋಗಿಗಳು ಹೇಗೆ ಉಪದೇಶಿಸುತ್ತಾರೆ ಅಂತೆಯೇ ನಾವೆಲ್ಲರೂ ಇಹ ಪರದ ಅಗತ್ಯವನ್ನು ಪುನಗಾಣಬೇಕು. ಇಹಬಿಟ್ಟು ಪರದಾಶೆಯಿಟ್ಟಿರುವನು ಭೂಮಿ ಬಿಟ್ಟು ಆಕಾಶಕ್ಕೆ ಹಾರಿದಂತೆ. ಮೃತ್ಯುಲೋಕವೆಂಬುದು ಕರ್ತಾರನ ಕರ್ಮಟವಲ್ಲವೆ! ಅಣ್ಣ ಜಗದಣ್ಣ ಬಸವಣ್ಣ ಹೇಳಿಲ್ಲವೆ?

# ವಿರುಪಾಕ್ಷಲಿಂಗ

ಶ್ರೀಯುತ ಹಿಂಗಮಿರೆ ಬಿ. ಬಿ.
ರಾಜಾಪುರ (ಕೃಷ್ಣಾ ತೀರ)

---

ಕರ್ನಾಟಕದುತ್ತರದೇಶದ ದೆಶೆಯಲಿ
ನಾಗಾಲೋಟದ ಕೃಷ್ಣೆಯ ತೀರದಿ
ಕರ್ನಾಟಕ ಪ್ರಸಿದ್ಧ ವಿರುಪಾಕ್ಷಲಿಂಗ
ತೂಗುತಲಿಹನು ಧರ್ಮನ ತೊಟ್ಟಿಲನು ॥೪॥

ಧಾರ್ಮಿಕ ಭಾವನೆ ದಿನ ದಿನ ಹೆಚ್ಚುತ
ಪಸರಿಸುತಿಹುದದು ಅನಂತ ತೆರದಲಿ
ಮಾರ್ಮಿಕ ಮಂದಿರ ಬೇದಿಸಿ ಧರ್ಮವು
ಹೆಸರನು ಪಡೆದಿದೆ ಕ್ಷೇತ್ರ ಎಡೂರ ॥೮॥

ಬೆಳ್ಕಿರುವೆಗಳು ಮುತ್ತುವ ತೆರದಿಂ
ಜನಗಳ ಸಂದಣಿ ಪ್ರತಿದಿನವಿರುವದು
ಎಲ್ಲ ಸುತ್ತಲಿರುವ ಹಳ್ಳಿಯ ಜನಗಳ
ಪ್ರಾಣಗಿಂತಲೂ ಪ್ರೀತಿಯ ಮಂದಿರ ॥೧೨॥

ಬಸವ ಮಹಾತ್ಮರ ಪುಣ್ಯದ ಕಾಲದಿ
ಬೆಳಗಿದ ಕನ್ನಡ ವೀರಶೈವ ಮತ
ಹೊಸರಸ ಬೋಧಿಸ ಶರಣಗಣವರದಿಂ
ಬೆಳಗಲು ಹೊರಟಿದೆ ದಿಗಂತದೆಡೆಗೆ ॥೧೬॥

ಹಂಪೆಯ ಪ್ರಸಿದ್ಧ ವಿರುಪಾಕ್ಷದೇವರು
ಕನ್ನಡ ದೇಶದ ಗಂಗೆಯ ಬಳಿಯಲಿ
ತಂಪಿನ ಸಂತಸದಾಗರ ತೀರದೊಳ್
ರನ್ನರೂಪದಿಂ ಹೊಳೆಯುತಲಿರ್ಪನು ॥೨೦॥

ಮಂದಿರದೊಳಗಿನ ಬೆಳ್ಳಿಯ ಮೂರ್ತಿಯು
ಧರ್ಮದ ಬಲದಿಂ ಉಜ್ವಲವಾಗಿದೆ
ಚಂದ್ರ-ಶಶಿಕಿರಣ ಪ್ರವೇಶದೋಜೆಯಿಂ
ಮರ್ಮ ಮೂರ್ತಿ ವರ ಪ್ರಕಶಿಸುತಿಹುದು ।೩೪।

ದೇವಾಲಯುವದು ಚಿಕ್ಕದು ತೋರ್ಪುದು
ಕೀರ್ತಿಯ ಮಂದಿರ ವಿಶಾಲವಿಹುದು
ದೇವರ ಸುತ್ತಿಹ ಪೌಳಿಯ ಸಾಲ್ಗಳು
ಮೂರ್ತಿಮಂತರ ಭಕುತರ ಸ್ಥಳವು ।೩೮॥

ತೂಗುತಲಿರುವಾ ಘಂಟೆಯ ಸಾಲ್ಗಳು
ಹರ್ಷದಿ ಕುಣಿಯುತ ಸ್ಪರ್ಶ ಬಲದಿಂ
ಕೂಗುತ "ವಿರುಪಾಕ್ಷ" ಢಣಢಣ ಸ್ವರದಿಂ
ಸ್ಪರ್ಶಿಸುತಿಹವು ಕೈಲಾಸ ಜಗವ ॥೩೩॥

ವಿರುಪಾಕ್ಷನೆದುರಿನ ಕರ್ಪೂರ ಧೂಮವು
ಧರೆ ಸಂದೇಶ ಕೈಲಾಸಕೊಯ್ಯುವುದು
ವಿರುಪಾಕ್ಷನೆದುರಿನ ತೆಂಗಿನ ಕ್ಷೀರವು
ತಿರೆವರ ಗರ್ಭದಿ ಸಲೆ ಸೇರ್ವುತಿದೆ ॥೩೬॥

ಹೊರಗಡೆ ವಸಂತರಾಯನ ಭಜನ ವರ
ಒಳಗಡ್ಗೆ ಗುಡಿಯಲಿ ಭಕುತರ ಭಜನ
ಹರಸ್ತುತಿಕೇಳುತ ಕೃಷ್ಣಾ ತಾಯಿಯು
ಸಳ ಸಳ ಮೈಮರೆದೋಡುತಲಿಹಳು ॥೪೦॥

ತೀರದ ಹಸುರಿನ ಸುಂದರ ಬೆಳೆಗಳಲಿ
ತೋರ್ವುದು ಶಿವನಾ ಮಂದಿರ ಚೆಂದ
ಮೀರಿಸುತಿಹುದದು ಸೌಂದರ್ಯ ವನವನು
ಹರಕೃಪೆ ಮೀರಿದಾ ಕೃಷ್ಣಾತೀರವು ॥೪೪॥

ಅನಂತ ಜೀವಿಗಳ ತಪ್ಪನು ಕ್ಷಮಿಸುತ
ಬಪ್ಪುತಲಿಹನಾ ಕನ್ನಡ ದೇವನು
ಅನಂತ ಜೀವಿ ಗಣ ಪಾಪವ ತೊಳೆಯುತ
ಒಪ್ಪುತಲಿಹಳಾ ಗಂಗೆಯ ತಂಗಿಯು ॥೪೮॥

ಪಾಪದ ತಿಮಿರವು ಗಾಳಿಯ ಜೋರಿನಿಂ
ಓದುತ್ತಲಿಹುದದು ದಿಗಂತ ಕಡೆಯಲಿ
ತಾಪದಗ್ನಿಯದು ಗಾಳಿಯ ಜೋರಿನಿಂ
ಅಡಗುತಲಿಹುದು ಕೃಷ್ಣೆಯ ತಳದಲಿ ॥೫೨॥

# ಆದಿ ಶಕ್ತಿ ಪಾರ್ವತಿಯು ಬ್ರಹ್ಮಾಂಡದಲ್ಲಿ ತುಂಬಿ ಹುಟ್ಟಿಸಿ ಆಳುವದು.

### ೨ ನೇ ಅಧ್ಯಾಯ

**ಲೇಖಕರು:- ಶ್ರೀ ಶಿವಾನಂದಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ ತಾ. ಇಂಡಿ**



ಹಿಂದಿನ ಲೇಖದಲ್ಲಿ ಸತ್ ಪರ ಶಿವನಿಂದ ಚಿತ್ ಪಾರ್ವತಿ ಯಾಕೆ? ಹೇಗೆ? ಅವತರಣ ಆಗಿ ಹೊರಗೆ ಬಂದಳೆಂದೂ, ಆಕೆಯೇ ಅತಿ ಕೆಳ ಮಟ್ಟಕ್ಕೆ ಇಳದಿರುವಳೆಂದೂ ಹೇಳಲಾಗಿದೆ ಅದೇ ಶಿವ ಶಕ್ತಿಯರ ಗುರ್ತಾದ ಲಿಂಗವನ್ನು ನಮ್ಮ ಪೂರ್ವಜರು ರಚಿಸಿದ್ದಾರೆ. ಈ ಲಿಂಗದ ಪೂಜೆಯೇ ಪೂರ್ಣಪೂಜೆಯಾಗಿ ಪೂರ್ಣಯೋಗವೇ ಆಗುವದೆಂದು ತೋರಿಸಲಾಗಿದೆ. ಈ ಲೇಖದಲ್ಲಿ ಇನ್ನು ಹೆಚ್ಚಿನ ವಿಷಯಗಳನ್ನು ವಿವರಿಸುವೆನು. ಈ ತೋರವ ಜಗತ್ತು ಪ್ರಕೃತಿ ಪುರುಷರ ಸಂಯೋಗವಾಗಿದೆ. ಇವರಿಬ್ಬರ ಸಂಯೋಗ ವಿಲ್ಲದೆ ಈ ಜಗದ ಆಟವೆಲ್ಲ ನಿಂತು ಹೋಗುವದು. ಕುರುಡ ಕುಂಟರು ಕೂಡಿ ಹೊಳೆ ದಾಟಿದಂತೆ. ಕುರುಡನಿದ್ದಾನೆ ಬಲವಾದ ಶರೀರ ಕೈಕಾಲು ಗಳುಂಟು ಆದರೆ ಕಣ್ಣುಗಳಿಲ್ಲ. ಇದೇ ಪ್ರಕೃತಿ ಎನಿಸಿರುವದು. ಕುಂಟ ನಿದ್ದಾನೆ. ಬಲವಾದ ಕಣ್ಣು (ಜ್ಞಾನ) ಇರುವದು. ಆದರೆ ಕೈಕಾಲುಗಳು ಇಲ್ಲ. ಇದೇ ಪುರುಷ ನೆನಿಸುವನು. ಯಾವ ಒಬ್ಬನೂ ಹೊಳೆಯನ್ನು ದಾಟಲಾರನು. ಅಂದರೆ ಯಾವ ಕಾರ್ಯ ಕಲಾಪಗಳು ಒಬ್ಬನಿಂದ ಆಗುವದು ಶಕ್ಯವಿಲ್ಲ. ಇಬ್ಬರೂ ಕೂಡಿದರೆ ಮಾತ್ರ ಯಾವತ್ತೂ ಕಾರ್ಯ ಕಲಾಪಗಳು ನಡೆಯುವವು. ಅದರಂತೆ ಪ್ರಕೃತಿ ಪುರುಷರ ಸಂಯೋಗ, ಗೆಳೆತನವಾದರೆ ಈ ಜಗದ ಕಾರ್ಯ ಕಲಾಪಗಳು ಸಾಗುವವು. ಪ್ರಕೃತಿ ಪುರುಷರ ಸಂಯೋಗವಾದರೆ ಮಾತ್ರ ಮನುಷ್ಯನಿಗೆ ಕಾರ್ಯ ಮಾಡುವ ಶಕ್ತಿ ಬರುವದು, ಇಲ್ಲವಾದರೆ ಇಲ್ಲ. ಇವರಿಬ್ಬರ ಸಂಯೋಗವನ್ನು ಮನವು ಮಾಡುವದು. ಅದರಂತೆ ಗಂಡು ಮತ್ತು ಹೆಣ್ಣು ಕೂಡಿದರೆ ಮಾತ್ರ ಸಂಸಾರ ಚಕ್ರವು ಬೆಳೆಯುತ್ತ ಸಾಗುವದು. ಬರೆ ಒಬ್ಬಕಿ ಆದರೆ ಸಂಸಾರ ಚಕ್ರವು ಕುಂಠಿತವಾಗುವದು. ಇದೇ ಸನ್ಯಾಸಿ ಜೀವನವಿದ್ದಂತೆ, ಇವ ನಿಂದಲೇ ಎಲ್ಲವೂ ನಿಂತು ಹೋಗುವದು. ಸಂಸಾರ ವೃಕ್ಷದ ಕುಡಿಯು ಕವರಿ ಹೋಗುವದು. ಕೊನರುವದಿಲ್ಲ.

ಮೇಲೆ ವಿವರಿಸಿದಂತೆ ಬ್ರಹ್ಮಾಂಡದ ಆದಿಯಲ್ಲಿ ಪರಬ್ರಹ್ಮನಿದ್ದನು. "ಆದಿ ಅನಾದಿ ಇಲ್ಲದಂದು । ನಾದ ಬಿಂದು ಕಳೆಗಳಿಲ್ಲದಂದು । ಕಾಲ ಕಲ್ಪಿತಂಗಳಿಲ್ಲದಂದು । ಲೀಲೆ ಇಪ್ಪತ್ತೈದು ನಟಿಸದಂದು । ಕಾಲ ಕಾಮ ಮಾಯೆಗಳಿಲ್ಲದಂದು । ತತ್ವಮಸ್ಯಾದಿ ವಾಕ್ಯಗಳಿಲ್ಲದಂದು । ಪ್ರಕೃತಿ ವಿಕೃತಿಗಳಿಲ್ಲದಂದು । ಅಜ ಹರಿ ರುದ್ರ ಸುರಾಸುರ ಮನು ಮುನಿಗಳಿಲ್ಲದಂದು । ಜಗದ ಲೀಲೆ ವೈಭವಂಗಳೇನು ಇಲ್ಲದಂದು । ಭೇದಾಭೇದಂಗಳೇನು ಇಲ್ಲದಂದು । ವೇದ ಶಾಸ್ತ್ರ ಆಗಮ ತಂತ್ರಗಳೇನು ಇಲ್ಲದಂದು । ಅಖಂಡೇಶ್ವರ ನಿಮ್ಮ ನೀವರಿಯದೆ ಅನಂತಕಾಲ ವಿರ್ದಿರಂದು" ಈ ವಚನದಲ್ಲಿ ಏನೊಂದು ಅರಿಯದೆ ಸತ್ ಪರ ಶಿವನು ಒಬ್ಬನೇ ಇದ್ದನು. ಅವನು ಹ್ಯಾಗೆ ಇದ್ದನೆಂದ ಕೆಳಗಿನ ವಚನದಲ್ಲಿ ನೋಡಿರಿ. "ಕಾಲ ಕಲ್ಪಿತಗಳಿಲ್ಲದೆ ನಿನ್ನಿಂದ ನೀನೆಯಾಗಿದ್ದೆಯಲ್ಲಾ. ನಿಮ್ಮ ಪರಮಾನಂದದ ಪ್ರಭಾವದ ಪರಿಣಾಮದಲ್ಲಿ ಅನಂತಕಾಲವಿದ್ದಿರಲ್ಲಾ. ನಿಮ್ಮ ಆದ್ಯಂತವ ನೀವೆ ಅರಿವುತಿದ್ದಿರಲ್ಲಾ. ನಿಮ್ಮ ನಿಜ ಭಾವವ ನೀವೆ ಬಲ್ಲಿರಿ ಕೂಡಲ ಚನ್ನ ಸಂಗಮದೇವಾ" ಪರಶಿವನ ನಿಲಯವನ್ನು ಇದರಲ್ಲಿ ಚನ್ನಾಗಿ ವಿವರಿಸಿದ್ದಾನೆ. ಆದರೂ ಹಾಲಿನಲ್ಲಿ ತುಪ್ಪ ಕೂಡಿಕೊಂಡಂತೆ ಈ ಸತ್ ಶಿವನಲ್ಲಿ ಚಿತ್ ಪಾರ್ವತಿಯು ಕೂಡಿಕೊಂಡಿದ್ದಾಳೆ. ಅವೆರಡೂ ಕೂಡಿ ಒಂದೇ ಹಾಲಾದಂತೆ ಸಚ್ಚಿದಾನಂದವಿರುವದು. ಪರಬ್ರಹ್ಮನಲ್ಲಿ ಆದಿಶಕ್ತಿ ಪಾರ್ವತಿಯು ಕೂಡಿಕೊಂಡಿರುವಳು. ಆಕೆಗೆ ಚಿಚ್ಛಕ್ತಿ, ಸಗುಣಿ, ಬ್ರಹ್ಮ ಮೊದಲಾದ ಹೆಸರುಗಳುಂಟು.

ಪರಾತ್ಪರ ಪರಶಿವನಲ್ಲಿ ಅನೇಕವಾದ ಲೀಲೆಗಳನ್ನಾಡಬೇಕೆಂದು ಅವನು ಸಂಕಲ್ಪ ಮಾಡಿದನು. "ನೀವು ನಿಮ್ಮ ಸ್ವಲೀಲೆಯಿಂದ । ಜಗದ ವೈಭವಂಗಳನು ನಟಿಸಬೇಕೆಂದು । ನಿಮ್ಮಲ್ಲಿ ನೆನಹುದೋರಲು ಆ ನೆನಹು ನಿರ್ಧರಿಸಿ ಚಿತ್ತೆನಿಸಿತು । ಆ ಚಿತ್ತಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳೊದಗಿದವು ಆ ಚಿನ್ನಾದ ಚಿದ್ಬಿಂದು ಚಿತ್ಕಳೆ ಅಮೂಲ ಚಿತ್ತಸಹವಾಗಿ ಗಟ್ಟಿಗೊಂಡು ಅಖಂಡ ಗೋಳಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತು ಆ ಮಹಾಲಿಂಗವೇ ಪಂಚಮುಖವನೈದಿ ಸದಾಶಿವನೆಂದೆನಿಸಿತ್ತು. ಆ ಸದಾಶಿವನಿಂದ ಬ್ರಹ್ಮ ವಿಷ್ಣು ರುದ್ರರೆಂಬ ತ್ರೈಮೂರ್ತಿಗಳುದಿಸಿದರು; ಆ ತ್ರೈಮೂರ್ತಿಗಳಿಂದ ಸ್ವರ್ಗ ಮೃತ್ಯು ಪಾತಾಳಗಳೆಂಬ ಲೋಕಂಗಳು ಜನಿಸಿದವು. ಅವುಗಳ ಮಧ್ಯದಲ್ಲಿ ಸಚರಾಚರ ಹೆಣ್ಣು ಗಂಡು ನಾಮ ರೂಪ ಕ್ರಿಯಾದಿ

ಸಕಲ ವಿಸ್ತಾರವಾಯಿತು ಇಂತಿವೆಲ್ಲವು ನಿಮ್ಮ ನೆನಹು ಮಾತ್ರದಿಂದಾದವೈ ಅಖಂಡೇಶ್ವರ" ಪರಶಿವ ಸತ್‌ದಲ್ಲಿ ಚಿತ್ ಪಾರ್ವತಿ ಕೂಡಿಕೊಂಡಾಗ ಏನೊಂದುಇಲ್ಲದಂತೆ ನಿರಾಕಾರ ನಿರ್ಗುಣವೇ ತೋರುವದು. ಚಿತ್(ಪಾರ್ವತಿ) ಪರಮಾತ್ಮನ ಸಂಕಲ್ಪಮಾತ್ರದಿಂದ ವ್ಯಗ್ರವಾಗುವದು. ಆಗ ಸೃಷ್ಟಿಯ ವಿವಿಧ ವಿಶ್ವದ ಅನುಭವ ಪೂರ್ಣವಾದ ಉತ್ಪತ್ತಿಗೆ ಪ್ರಾರಂಭವಾಗುವದು. ಅವ್ಯಕ್ತ ಶಕ್ತಿಯು (ಚಿತ್) ಮೊದಲು ನಾದ ರೂಪದಿಂದ ಬಳಿಕ ಬಿಂದುರೂಪದಿಂದ ಕೊನೆಗೆ ಕಲಾರೂಪದಿಂದ (ಭಾಗಗಳಾಗಿ) ವ್ಯಕ್ತವಾಗಿ ಸೃಷ್ಟಿಯ ಸ್ವರೂಪವನ್ನು ತಾಳುವದು. ಚಿತ್‌ವೇ ಜ್ಞಾನದ ಮುಖ್ಯ ಸಾಧನೆ ಅಥವಾ ಗರ್ಭವು. ಪರಶಿವನ ಸಂಕಲ್ಪಮಾತ್ರದಿಂದ ಚಿತ್‌ಶಕ್ತಿ ಪಾರ್ವತಿಯು ಬ್ರಹ್ಮಾಂಡದುತ್ಪತ್ತಿಗೆ ಪ್ರಾರಂಭಿಸಲು ವ್ಯಗ್ರವಾದಳು. ಆಗ ಆಕೆಯಲ್ಲಿ ಚಲನವಲನಗಳು ಪ್ರಾರಂಭವಾದವು. ಆಗ ಆಕೆಯಲ್ಲಿ ಒಂದು ನಾದವು ಹುಟ್ಟಿತು. ಇದೇ ನಾದಬ್ರಹ್ಮವಾದ ಓಂ ಕಾರವು. ಆ ನಾದದಿಂದ ಅಂದರೆ ಓಂಕಾರದಿಂದ ಬಿಂದುಗಳುಂಟಾದವು- ಅವೇ ಅ ಉ ಮ ಗಳು. ಇವುಗಳಿಂದ ಕಲೆಗಳು ಅಂದರೆ ಸತ್ವರಜತಮುಗಳು ಜನಿಸಿದವು. ಇವು ಮೂರೂಕೂಡಿ ಆದದ್ದೇ ಮಹಾಲಿಂಗ ವೆಂದರೆ ನಾಮ ರೂಪತಾಳಿದ ಓಂ ಕಾರವೇ ಸರಿ. ಸತ್ವದಿಂದ ಬ್ರಹ್ಮರಜದಿಂದ ವಿಷ್ಣು, ತಮ್ಮದಿಂದ ರುದ್ರರು ಜನಿಸಿದರು. ಈ ಮೂವರಲ್ಲಿ ಬ್ರಹ್ಮನು ಒಳಗೆ ಸತ್ವ, ಹೊರಗೆ ರಜೋಗುಣ ಉಳ್ಳವನು. ಇವನು ಸೃಷ್ಟಿಸುವವನು ಅಂದರೆ ಹುಟ್ಟಿಸುವವನು. ವಿಷ್ಣು ಒಳಗೆ ರಜ ಹೊರಗೆ ಸತ್ವಗುಣ ಉಳ್ಳವನು. ಇವನು ಸೃಷ್ಟಿಯ ಉತ್ಪತ್ತಿ ಹಾಗೂ ಸ್ಥಿತಿ (ಸಂರಕ್ಷಣೆ) ಗಳಿಗೆ ಕರ್ತನು. ರುದ್ರ ಒಳಗೆ ಸತ್ವ ಹೊರಗೆ ತಮೋಗುಣ ಉಳ್ಳವನು. ಇವನು ಸೃಷ್ಟಿಯ ಉತ್ಪತ್ತಿ ಸ್ಥಿತಿ ಹಾಗೂ ಲಯಗಳೆಲ್ಲಕ್ಕೂ ಕರ್ತನು. ಈ ಮೂವರಿಂದ ಮೊದಲು ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ತೇಜ, ತೇಜದಿಂದ ಅಪ್ಪು, ಅಪ್ಪುವಿನಿಂದ ಪೃಥ್ವಿ ಹೀಗೆ ಪಂಚಮಹಾಭೂತಗಳು ಜನಿಸಿದವು.

| | | | | | | |
|---|---|---|---|---|---|---|
| ಆಕಾಶ | ವಾಯು | ತೇಜ | ಅಪ್ಪು | ಪೃಥ್ವಿ | ಭೂತಗಳು | ೫ |
| (ದಿಕ್ಕು) | (ವಾಯು) | (ಸೂರ್ಯ) | (ವರುಣ) | (ಅಶ್ವಿನಿದೇವತೆ) | ಅಧಿಪತಿಗಳು | |
| ಜ್ಞಾನ | ಮನ | ಬುದ್ಧಿ | ಚಿತ್ತ | ಅಹಂಕಾರ | ಕರಣಗಳು | ೫ |
| ಸಮಾನ | ವ್ಯಾನ | ಉದಾನ | ಅಪಾನ | ಪ್ರಾಣ | ಪ್ರಾಣಗಳು | ೫ |
| (ನಾಭಿಯ) | (ಸರ್ವಾಂಗ) | (ಕಂಠ) | (ಗುಧ) | (ಹೃದಯ) | (ಸ್ಥಾನಗಳು) | |
| ಕಿವಿ | ಚರ್ಮ | ಕಣ್ಣು | ನಾಲಿಗೆ | ಮೂಗು | ಜ್ಞಾನೇಂದ್ರಿಯ | ೫ |
| (ಶಬ್ದ) | (ಸ್ಪರ್ಶ) | (ರೂಪ) | (ರಸ) | (ಗಂಧ) | ವಿಷಯಗಳು | ೫ |
| ವಾಕ್ | ಪಾಣಿ | ಪಾದ | ಗುಹ್ಯ | ಗುಧ | ಕರ್ಮೇಂದ್ರಿಯ | ೫ |
| (ಮಾತಾಡುವದು) | (ಕೊಡಕೊಳ್ಳುವದು) | (ನಡೆಯುವದು) | (ವಿಷಯಾನಂದ) | (ಮಲವಿಸರ್ಜನ) | ವಿಷಯಗಳು | |
| ನಾಗ | ಕೂರ್ಮ | ಕ್ರಿಕರ | ಧನಂಜಯ | ದೇವದತ್ತ | ಉಪಪ್ರಾಣಗಳು | ೫ |
| (ರೋಮ) | (ಉದರ ಲಲಾಟ) | (ನಾಶಿಕಾಗ್ರ) | (ಬ್ರಹ್ಮರಂಧ್ರ) | (ಗುಧ ಕಟಿ) | ಸ್ಥಾನಗಳು | |
| (ಅಗ್ನಿ) | (ಇಂದ್ರ) | (ಉಪೇಂದ್ರ) | (ಬ್ರಹ್ಮ) | (ಯಮ) | ಅಧಿದೇವತೆಗಳು. | |

(೧) ಆಕಾಶದಿಂದ ಜ್ಞಾನ, ಸಮಾನ ಕಿವಿ, ಶಬ್ದ, ವಾಕ್, ನಾದ ಗಳು ಜನಿಸಿದವು. (೨) ವಾಯುವಿನಿಂದ- ವ್ಯಾನ, ಮನ, ಚರ್ಮ, ಸ್ಪರ್ಶ, ಪಾಣಿ, ಕೂರ್ಮ,ಗಳು ಜನಿಸಿದವು. (೩) ತೇಜದಿಂದ- ಕಣ್ಣು, ಬುದ್ಧಿ, ಉದಾನ, ರೂಪ, ಪಾದ, ಕ್ರಕರ,ಗಳು ಜನಿಸಿದವು. (೪) ಅಪ್ಪ ದಿಂದ ರಸ, ಚಿತ್ತ, ಅಪಾನ, ನಾಲಿಗೆ, ಗುಹ್ಯ, ಧನಂಜಯಗಳು ಹುಟ್ಟಿ ದವು. (೫) ಪೃಥ್ವಿಯಿಂದ- ಗುದ, ಅಹಂಕಾರ, ಪ್ರಾಣ ಮೂಗು ಗಂಧ ದೇವದತ್ತಗಳು ಜನಿಸಿದವು.

೫ ಭೂತಗಳು, ೫ ಕರಣಗಳು, ೫ ಪ್ರಾಣಗಳು, ೫ ಜ್ಞಾನೇಂದ್ರಿಯಗಳು, ೫ ಕರ್ಮೇಂದ್ರಿಯಗಳು ಅಂತು ೨೫ ತತ್ವಗಳಿಗೆ ಪಂಚೀಕರಣ ವೆನ್ನುವರು. ಇವುಗಳೂ ಹಾಗೂ ೫ ವಿಷಯಗಳು, ೫ ಕ್ರಿಯೆಗಳು, ೫ ಉಪಪ್ರಾಣಗಳು ಜೀವ ಈಶ್ವರರೊಡಗೂಡಿ ಯಾವತ್ತೂ ಚರಾಚರ ವಸ್ತುಗಳಾದವು.

(೧) ಆಕಾಶದಿಂದ ಜ್ಞಾನ, (೨) ವಾಯುವಿನ ಅರ್ಧಾಂಶದಿಂದ ವ್ಯಾನ (೩) ತೇಜದ ಅರ್ಧಾಂಶದಿಂದ ನೇತ್ರ (೪) ಅಪ್ಪಿನ ಅರ್ಧಾಂಶದಿಂದ ರಸ (೫) ಪೃಥ್ವಿಯ ಅರ್ಧಾಂಶದಿಂದ ಗಂಧ ಪ್ರತಿಯೊಂದರಲ್ಲಿ ಉಳಿದ ಅರ್ಧಾಂ ಶದಲ್ಲಿ ನಾಲ್ಕು ಭಾಗಮಾಡಲು ೨೦ ತತ್ವಗಳಾಗುವವು. ಇವುಗಳಲ್ಲಿ ಮೇಲಿನ ಅರ್ಧಾಂಶದ ೫ ತತ್ವಗಳನ್ನು ಕೂಡಿಸಲಾಗಿ ೨೫ ತತ್ವಗಳಾಗುವವು.

(೧) ಆಕಾಶಕ್ಕೆ - ಶಬ್ದ (೨) ವಾಯುವಿಗೆ – ಶಬ್ದ ಸ್ಪರ್ಶ, (೩) ತೇಜಕ್ಕೆ - ಶಬ್ದ, ಸ್ಪರ್ಶ, ರೂಪ, (೪) ಅಪ್ಪಿಗೆ - ಶಬ್ದ ಸ್ಪರ್ಶ, ರೂಪ, ರಸ, (೫) ಪೃಥ್ವಿಗೆ - ಶಬ್ದ, ಸ್ಪರ್ಶ, ರೂಪ, ರಸ ಗಂಧ ಈ ಪ್ರಕಾರ ಪಂಚಭೂತಗಳಿಗೆ ವಿಷಯದ ಗುಣಗಳಿರುವವು.

ಲೋಕಾದಿ ಲೋಕಂಗಳೇನೂ ಇಲ್ಲದಂದು ನೆನಹು ನಿಷ್ಪತ್ತಿಯಾಗಿತ್ತು ನೋಡಾ. ನೆನಹಿಲ್ಲದ ಘನವನ್ನೂ ನೆನೆದ ನೆನಹೇ ಸಮಯವಾಗಿ ಚಿತ್ತ ನಿಸಿಕೊಂಡಿತ್ತು. ಆ ಚಿತ್ತೆ ಸತ್ತು ಚಿತ್ತಾನಂದ ನಿತ್ಯಪರಿಪೂರ್ಣವೆಂದು ಐದಂಗವ ನಂಗೀಕರಿಸಿ ನಿಃಕಲ ಶಿವತತ್ವವೆದಿನಿತ್ತು ನೋಡಾ. ಆ ನಿಃಕಲ ಶಿವತತ್ವ ತಾನೊಂದೆ ತನ್ನ ಶಕ್ತಿಯ ಚಲನೆ ಮಾತ್ರದಿಂದ ಒಂದೆರಡಾ

ಯಿತ್ತು ನೋಡಾ. ಆ ಪರಶಿವನ ಚಿತ್ತ ಶಕ್ತಿ ಆರು ತೆರನಾಯಿತ್ತು. ಚಿತ್ರಶಕ್ತಿ - ಆದಿಶಕ್ತಿ - ಪರಾಶಕ್ತಿ - ಜ್ಞಾನಶಕ್ತಿ- ಇಚ್ಛಾಶಕ್ತಿ- ಕ್ರಿಯಾಶಕ್ತಿ. ಇನ್ನೂ ಕ್ರಿಯಾಶಕ್ತಿಯಿಂದ ನಿವೃತ್ತಿ ಕಲೆಯು ಸಂಕಲ್ಪ ಮಾತ್ರದಿಂದ ಮಾಯಾಶಕ್ತಿ ಹುಟ್ಟಿತು. ಈ ಮಾಯಾಶಕ್ತಿಯಿಂದ ಸಮಸ್ತ ಜಗತ್ತಿನ ಉತ್ಪತ್ತಿ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭೋ" ಈ ವಚನವಾ ದರೂ ಹಿಂದಿನ ವಿಷಯವನ್ನೇ ಪುಷ್ಟೀಕರಿಸುತ್ತದೆ. ಎಲ್ಲರ ಅಭಿಪ್ರಾಯವು ಒಂದೆಯಾಗಿದೆ. ಪರಶಿವನ ಲೀಲಾವಿನೋದದಿಂದ ಈ ಸೃಷ್ಟಿ ನಿರ್ಮಿಸ ಲ್ಪಟ್ಟಿತು. ನಿತ್ಯನಿರವಯ ಪರಶಿವ, ಬಳಿಕ ಅವನ ನೆನಹು ಅಥವಾ ಸಂಕಲ್ಪ ಬಳಿಕ ಚಿಚ್ಛಕ್ತಿ ಬಳಿಕ ಸದಾಶಿವ, ಬಳಿಕ ಪರಶಿವ, ಬಳಿಕ ಪುರುಷ ಪ್ರಕೃತ್ಯಾದಿ ೩೬ ತತ್ವಗಳು ಇದರಲ್ಲಿ ಸಾಂಖ್ಯರ ೨೫ ತತ್ವಗಳು ಬಂದಿರು ವವು. ಇದರ ಸರ್ವವಿವರಣೆಯನ್ನು ಮೇಲೆ ವಿವರವಾಗಿ ವಿವೇಚಿಸಲಾಗಿದೆ. ಬೇರೆ ಬೇರೆ ವಚನಕಾರರ ಅಭಿಪ್ರಾಯವನ್ನು ನೋಡಿದರೂ ಇದೇ ಹೊರ ಡುವದು. ಚಿತ್ ಪಾರ್ವತಿಯು ಜಗದುತ್ಪತ್ತಿಗೆ ಕಾರಣಳಾಗಿದ್ದಾಳೆಂದು ಹೇಳಲಾಗಿದೆ.

ಇನ್ನು ಪರಮಾನುಭವದಲ್ಲಿ ನಿಜಗುಣ ಶಿವಯೋಗಿಗಳು ಇದೇ ಅಭಿ ಪ್ರಾಯವನ್ನೇ ಬೇರೆ ನಾಮರೂಪದಿಂದ ಸಂಭೋದಿಸಿದುದು ಕಂಡುಬರು ವದು. ಒಂದನೇ ಸೂತ್ರದಲ್ಲಿ ಶ್ರೀ ಮಹಾದೇವಂಗೆ ಸೋಮಂಗೆ ಸುಖ ಪೂರ್ಣ ಧಾಮಂಗೆ ಸತ್ಯ ಚಿದ್ರೂಪಂಗೆ ಕಾಮಿತಜನ ಕಲ್ಪಭೋಗಂಗೆ ಶಂಭು ಲಿಂಗಾಮೋದದಿಂದ ವಂದಿಸುವೆನು. ಇದು ಪರಶಿವನ ವರ್ಣನೆ. ಇದೆಲ್ಲ ನಿರ್ಗುಣದವರ್ಣನೆಯೇ ಸರಿ. ಇನ್ನು ಎರಡನೇ ಪದ್ಯದಲ್ಲಿ ಪಾರ್ವತಿ ಸ್ತೋತ್ರವನ್ನು ಮಾಡಿದ್ದಾನೆ. ಸರ್ವ ವಿದ್ಯೆಗಳಿಗೆ ಸರ್ವಬುದ್ಧಿಗಳಿಗೆ ಸರ್ವ ಸ್ಥಾನಗಳಿಗೆ ಸರ್ವಕ್ಕೆ ಸರ್ವಜೀವರ ತೋರ್ಕೆಗಾದಿ ಕಾರಣವಾದ ಸರ್ವ ಶುಂಗಳಿಗೆ ಅನತನಪ್ಪೆ ಇದು ಸಗುಣದವರ್ಣನೆ. ಆದಿಶಕ್ತಿಯಿಂದ ಇದೆಲ್ಲ ಬಂತು. ಇವಳೆ ಇದಕ್ಕೆಲ್ಲ ಕಾರಣಳಾಗಿ ಹುಟ್ಟಿಸಿದ್ದಾಳೆಂದು ಹೇಳಿದ್ದಾರೆ. ಇದರ ಮೇಲಿಂದ ಪರಶಿವನಿಂದ ಆದಿಶಕ್ತಿ ಹೊರಬಿದ್ದು ಇದನೆಲ್ಲ ಹುಟ್ಟಿ ಸಿದಳೆಂದು ಇದರ ಭಾವವಿದೆ. ಇನ್ನು ಐದನೇ ಸೂತ್ರದಲ್ಲಿ ಒಂದರೆರಡು ಪದ್ಯ ಗಳನ್ನು ವಿಚಾರಿಸುವೆನು. ಅಲ್ಲಿ ನಿಮಿತ್ತ ಮೊಂದಿಲ್ಲದೆ ಸುಖಸುಪ್ತನಲ್ಲಿ ಕನ ಸಿನ ಜೀವತ್ವವು ನಲ್ಲಳೆ ಪರಿಶೋಭಿಸುವಂತೆ ಪ ಬ್ರಹ್ಮದಲ್ಲಿ ಕಲ್ಪಿತನಾದ

ನೋವ ನು ಕಾಂತೆ ಕಲ್ಪಿತು ಜೀವ ನಿಂತಾತ್ಮ ಪದವೊಳೋ ರಂತೆ ತೋರಿದ ನನ್ಯವಿಲ್ಲೆಂದು ಭ್ರಾಂತಿರಭ್ರಾಂತ ಪೂರ್ವಕಮೆಂಬ ವಚನದಿಂ ದಂತಿಳಿ ಸತ್ಯಾನುಭವವಿದು, ಇವುಗಳಲ್ಲಿಯೂ ಕೂಡ ಪರಬ್ರಹ್ಮನಲ್ಲಿ ಕಲ್ಪಿತ ಪುರುಷನು ಹುಟ್ಟಿದನು. ಇದೆಲ್ಲ ಭ್ರಾಂತಿ ಹೊರತು ಬೇರೆಇಲ್ಲ. ಈ ಕಲ್ಪಿತ ಪುರುಷ ಈ ಭ್ರಾಂತಿಗಳೆಂದರೆನೆ ಆದಿಶಕ್ತಿ ಮಾಯಾಶಕ್ತಿಗಳೇ ಹೊರತು ಬೇರೆ ಇಲ್ಲ. ಪರಬ್ರಹ್ಮನಲ್ಲಿ ಕಲ್ಪಿತ ಪುರುಷ ಭ್ರಾಂತಿಗಳು ಇದ್ದವೆಂದು ಸ್ಪಷ್ಟಹೇಳಲಾಗಿದೆ. ಭ್ರಾಂತಿ (ಮಾಯೆ) ಯಿಂದ ಉಳದ ಪ್ರಕೃತಿ ಪುರುಷ ಮೊದಲಾದ ಹಲವು ತತ್ವಗಳು ಉದಿಸಿದವೆಂದು ಅದರಲ್ಲಿ ಹೇಳಿದ್ದಾರೆ. ಇದಾದರೆ ಹಿಂದೆ ವಿವರಿಸಿದವುಗಳನ್ನೇ ಪುಷ್ಟೀಕರಿಸುತ್ತದೆಂಬುದರಲ್ಲಿ ಸಂದೇಹವಿಲ್ಲ. ಹೀಗಿದ್ದರೂ ಹಳ್ಳಿಯಲ್ಲಿ ನಿಜಗುಣ ಶಿವಯೋಗಿಗಳು ಅಖಂಡ ಅದ್ವೈತವನ್ನೇ ಪ್ರತಿಪಾದಿಸುವರೆಂದು ಹೇಳುವರು. ಇದು ತಪ್ಪು. ಅವರ ಕೈವಲ್ಯ ಪದ್ಧತಿಯಲ್ಲಿ ನೋಡಿದರೂ ಇದೇ ಹೊಳೆಯುವದು. ಶಿವ ಪಾರ್ವತಿಯರ ಸ್ತೋತ್ರಗಳನ್ನು ಮಾಡಿದ್ದಾನೆ. ಇಲ್ಲಿ ಇದಕ್ಕೆ ಸ್ಥಾನದ ಸಂಕೋಚದ ಮೂಲಕ ಹೆಚ್ಚಿಗೆ ವಿವರಣೆ ಮಾಡಿಲ್ಲ.

ಭಗವದ್ಗೀತೆಯಲ್ಲಿಯೂ ಕೂಡ ಅದೇ ಅಭಿಪ್ರಾಯವನ್ನು ಸ್ಪಷ್ಟಪಡಿಸಿದ್ದಾರೆ. ಹದಿಮೂರನೆ ಅಧ್ಯಾಯದಲ್ಲಿ ಪ್ರಕೃತಿ ಪುರುಷ, ಕ್ಷೇತ್ರ ಕ್ಷೇತ್ರಜ್ಞ ಇವುಗಳನ್ನು ಸಾಂಖ್ಯತತ್ವದಂತೆ ಮೇಲೆ ವಿವರಿಸಿದಂತೆ ವರ್ಣಿಸಿದ್ದಾನೆ. ಪ್ರಕೃತಿ ಪುರುಷ ಇಬ್ಬರೂ ಅನಾದಿಗಳು ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಈ ಸ್ಥಾವರ ಜಂಗಮಾತ್ಮಕವಾದ ಜೀವಸಮೂಹವೆಲ್ಲವೂ ಈ ಕ್ಷೇತ್ರ ಕ್ಷೇತ್ರಜ್ಞ (ಪ್ರಕೃತಿ ಪುರುಷರ) ಸಂಯೋಗದಿಂದಲೇ ಹುಟ್ಟಿರುವವಂದು ಹೇಳಲಾಗಿದೆ. ಕ್ಷೇತ್ರ ಅಂದರೆ ಚಿತ್ ಪ್ರಕೃತಿಯು ತನ್ನ ಹೆಂಡತಿ ತಾನು ಅವಳಲ್ಲಿ ಗರ್ಭವನ್ನಿಡುವಿ ಜಗತ್ತಿನ ತಂದೆ ಅವಳು ಸರ್ವಜೀವಿಗಳ ತಾಯಿಯು. ಇದರಿಂದ ಮುಂದೆ ಮೇಲಿನಂತೆಯೇ ವಿವರಣೆ ಇದೆ. ಇದು ೧೪ ನೇ ಅಧ್ಯಾಯದಲ್ಲಿ ಬಂದಿದೆ.

ಈ ಮೇಲಿನ ಮಾತೃ ತತ್ವವನ್ನು ಮಹಾಮಹಿಮಾಶಾಲಿಗಳಾದ ಅವತಾರಿಕರಾದ ದಿವ್ಯಜ್ಞಾನಿಗಳಾದ ದೇವಮಾನವರಾದ ಶ್ರೀ ರಾಮಕೃಷ್ಣ ಪರಮಹಂಸರೂ ಮತ್ತು ಶ್ರೀ ಅರವಿಂದರೂ ಶ್ರೀ ವಿವೇಕಾನಂದರೂ ಮೊದ

ಲಾದವರೂ ಕಂಡುಹಿಡಿದು ಅದರಂತೆ ಪ್ರಚಾರವನ್ನೂ ಕೂಡ ಮಾಡಿದ್ದಾರೆ. ಇದರಂತೆ ಇನ್ನೂ ಅನೇಕರು ಇದನ್ನು ಒಪ್ಪಿಕೊಂಡು ಅದರಂತೆ ನಡದಿದ್ದಾರೆ. ಅಂತು ಸತ್ ಪರಶಿವನಿಂದ ಚಿತ್ ಪಾರ್ವತಿಯು ಹೊರಗೆ ಬಂದು ಈ ಲೋಕಗಳನೆಲ್ಲ ನಿರ್ಮಿಸಿದಳೆಂದು ಧಾರಾಳವಾಗಿ ಹೇಳಬಹುದು.

ಈ ಪರಬ್ರಹ್ಮನಿಗೆ ಮಾಯೆಯು ಉಪಾಧಿಯಾಗಿ ಆತನನ್ನು ಮತ್ತು ಪಾರ್ವತಿಯನ್ನು ಕಾಣದಂತೆ ಮುಸುಕು ಹಾಕಿರುವಳು. ಈ ಮಾಯಾ ಉಪಾಧಿಯಿಂದಲೇ ಲೋಕಕ್ಕೆ ಅರಿವು (ವಿದ್ಯ) ಮರವು (ಅವಿದ್ಯ) ಉಂಟಾಗಿರುವದು. ಸಗುಣ ಪಾರ್ವತಿಯು ಅಥವಾ ನಿರ್ಗುಣ ಪರಶಿವನು ತಿಳಿಯಲಾರದೆ ಅಜ್ಞಾನ ಅಂಧಕಾರದಲ್ಲಿ ಜೀವಕೋಟಿಯಲ್ಲಿ ತೊಳಲುತ್ತ ಸುಖ ಶಾಂತಿಕಾಣದೆ ದುಃಖಸಾಗರದಲ್ಲಿ ಮುಳಿಗಿರುವನು. ಈ ಮಾಯಾ ಉಪಧಿಯಿಂದ ಆತ್ಮನಿಗೆ ಜೀವತ್ವ ಬಂದಿದೆ. ಮೇಲಿನ ೩೫ ತತ್ವಗಳಲ್ಲಿ ಕೂಡಿ ಪ್ರಕೃತಿ ಎನಿಸುವದು. ಮನ ಬುದ್ಧಿ ಇಂದ್ರಿಯಗಳಿಗೆ ಗೋಚರವಾಗುವ ಸೃಷ್ಟಿಯಲ್ಲಿ ಪ್ರಕೃತಿ ಎನಿಸುವದು. ಜೀವಾತ್ಮನ ಪುರುಷನೆನಿಸುವನು. ಮೇಲೆ ಹೇಳಿದಂತೆ ಪ್ರಕೃತಿಯು ಸೂಕ್ಷ್ಮ ಅಂಶವಾದ ಮನವು ಇವೆರಡನ್ನೂ ಸಂಯೋಗ ಮಾಡುತ್ತದೆ. ಆಗ ಸಂಸಾರ ಚಕ್ರವು ತಿರುಗುತ್ತ ಸಾಗಿರುವದು.

ಚಿತ್, ಆದಿಶಕ್ತಿ ಪಾರ್ವತಿಯು ಈ ಪ್ರಕಾರ ಅನಂತ ಬ್ರಹ್ಮಾಂಡಗಳನ್ನೂ, ಅನಂತ ಜೀವಕೋಟಿಗಳನ್ನೂ, ದೇವಾದಿದೇವತೆಗಳನ್ನೂ. ಸ್ವರ್ಗ ಮರ್ತ್ಯ ಪಾತಾಳಗಳನ್ನೂ ಅನಂತಲೋಕಗಳನ್ನೂ ಹುಟ್ಟಿಸಿ ಸಂರಕ್ಷಿಸಿ ಲಯಗೊಳಿಸುವ ಯಾವತ್ತೂ ಕಾರ್ಯಕಲಾಪಗಳನ್ನು ಸಾಗಿಸುತ್ತಿರುವಳು. ರಾಜನ ಸಂಕಲ್ಪಗಳನ್ನು ಮುಖ್ಯ ಮಂತ್ರಿ, ಉಪಮಂತ್ರಿ, ಪ್ರತಿನಿಧಿ ಪರಿವಾರದವರು ನೆರವೇರಿಸಿ ಆಳಿಪಾಲಿಸುವಂತೆ ಆದಿಶಕ್ತಿ ಪಾರ್ವತಿಯೇ ಅನೇಕ ದೇವಾದಿದೇವತೆಗಳ ನೆರವಿನಿಂದ ಈ ಲೋಕಗಳನ್ನೆಲ್ಲ ಪಾಲಿಸುತ್ತಿರುವಳು. ಅಲ್ಲದೆ ಅವಳು ತನ್ನ ಮಾಯಾಶಕ್ತಿಯಿಂದ ತನ್ನಂ ತಾನು ಮರೆಮಾಡಿಕೊಂಡು ಸರ್ವರಲ್ಲಿ ಸರ್ವದರಲ್ಲಿ ಸರ್ವಕಡೆಗೆ ಅಣುರೇಣು ತೃಣಕಾಷ್ಠಗಳಲ್ಲಿಯೂ ಕೂಡ ಶಕ್ತಿಯರೂಪದಿಂದ ಒಳಸೇರಿ ಸರ್ವವನ್ನೂ ಮಾಡುತ್ತಿರುವಳು ಮತ್ತು ನಿಂತು ನೋಡುತ್ತಿರುವಳು. ಪರಶಿವನು ಕೂಡ ಅತ್ರ

ರೂಪದಿಂದ ಎಲ್ಲದರಲ್ಲಿ ತುಂಬಿಕೊಂಡು ಸಾಕ್ಷೀಭೂತವಾಗಿ ನಿಂತಿರುವನು. ಬ್ರಹ್ಮ ವಿಷ್ಣು ರುದ್ರರನ್ನು ತನ್ನ ಕೈಯ್ಯಲ್ಲಿ ಮುಖ್ಯ ಮಂತ್ರಿಗಳನ್ನು ತನ್ನ ಕೈಯಲ್ಲಿ ಇಟ್ಟುಕೊಂಡು ಸರ್ವ ಕಾರ್ಯ ಕಲಾಪಗಳನ್ನು ಸಾಗಿಸುತ್ತಿರುವಳು. ಈ ಮಂತ್ರಿಗಳಿಗೆ ನೆರವಾಗಲು ಸರ್ವಕಾರ್ಯ ಮಾಡುವ, ಸರ್ವ ಅಧೀಕಾರ ಪಡೆದ, ಸರ್ವಶಕ್ತರಾದ ಸರ್ವಜ್ಞರಾದ, ಸರ್ವವ್ಯಾಪಕರಾದ ಮಹೇಶ್ವರಿ ಮಹಾಕಾಲಿ ಮಹಾಲಕ್ಷ್ಮಿ ಮಹಾಸರಸ್ವತಿಯ ರೂಪದಿಂದ ಈ ಬ್ರಹ್ಮಾಂಡಗಳ ಯಾವತ್ತೂ ಆಗುಹೋಗುಗಳನ್ನು ನಿರ್ವಹಿಸುತ್ತಿರುವರು. ಇವು ಆಕೆಯ ನಾಲ್ಕು ಪ್ರಮುಖ ವ್ಯಕ್ತಿತ್ವಗಳುಳ್ಳ ಶಕ್ತಿಗಳು. ಅಂದರೆ ಮಹೇಶ್ವರಿಯು ಶಾಂತಿ ಕರುಣೆಗಳುಳ್ಳವಳು. ಮಹಾಕಾಲಿಯು. ಶೌರ್ಯ ಶಕ್ತಿಗಳುಳ್ಳವಳು, ಮಹಾಲಕ್ಷ್ಮಿಯು ಸೌಂದರ್ಯ ಸಂಪತ್ತುಗಳುಳ್ಳವಳು, ಮಹಾಸರಸ್ವತಿಯು ಜ್ಞಾನಕಲೆಗಳುಳ್ಳವಳು. ಇವೆಲ್ಲ ಆದಿಶಕ್ತಿ ಪಾರ್ವತಿಯ ಗುಣಗಳೇ ಸರಿ. ಆದಿಶಕ್ತಿಯು ಇನ್ನೂ ಅನೇಕ ರೂಪಗಳಿಂದ ಕಾಣಿಸಿಕೊಂಡು ಅನೇಕಾನೇಕ ಕಾರ್ಯಗಳನ್ನೆಲ್ಲ ನಿರ್ವಹಣ ಮಾಡುತ್ತಿರುವಳು. ಅಲ್ಲದೆ ವಿಶಾಲ ಬುದ್ಧಿ ಮನ ವಚನಗಳಿಗೆ ಅಗೋಚರವಾದ ಅನೇಕ ಆಕೆಯ ದಿವ್ಯ ಭವ್ಯ ಮಹಾಶಕ್ತಿಗಳುಂಟು. ಇವಳು ತನ್ನ ಸೃಷ್ಟಿಗಳನ್ನೆಲ್ಲ ಪೂರ್ಣ ವ್ಯಾಪಿಸಿ ಇನ್ನೂ ಮೇಲೆ ನಿಂತಿರುವಳು.

ಪರಬ್ರಹ್ಮನ ಅವ್ಯಕ್ತ ಅಗೋಚರ ಗೂಢವಾದ ರಹಸ್ಯಗಳೊಂದಿಗೆ ಈ ಸೃಷ್ಟಿಗಳನ್ನೆಲ್ಲ ಜೋಡಿಸಿ ಮಧ್ಯಸ್ತಳಾಗಿರುವಳು. ಲೋಕಮಾತೆಯಾಗಿ ಲೋಕಗಳನ್ನು ಸೃಜಿಸಿ, ಲೋಕಗಳನ್ನೆಲ್ಲ ವ್ಯಾಪಿಸಿ, ವಿಶ್ವವಿರಾಟ ಸ್ವರೂಪತಳಿ ನಿಂತಿರುವಳು. ಮಹಾತಾಯಿ ಪಾರ್ವತಿಯೇ ಎಲ್ಲವನ್ನೂ ಹುಟ್ಟಿಸಿ ಎಲ್ಲವನ್ನೂ ಪೋಷಿಸಿ ಎಲ್ಲವನ್ನೂ ಲಯಗೊಳಿಸುತ್ತಾಳೆ. ಮತ್ತು ಇವಳು ಮಾನವ ಹಾಗೂ ದೈವಿಪ್ರಕೃತಿಗಳ ನಡುವೆ ಮಧ್ಯಸ್ತಳಾಗಿ ನಿಂತಿದ್ದಾಳೆ. ಎಲ್ಲ ಲೋಕಗಳನ್ನ ಆಳಿ ಪರಶಿವನನ್ನು ತನ್ನ ಮಹಾ ಮಾಯಾ ಶಕ್ತಿಯಿಂದ ಲೋಕಕಾಣದಂತೆ ಮರೆಮಾಡಿದ್ದಾಳೆ. ಸರ್ವ ಜೀವಕೋಟಿಗಳಲ್ಲ ವಿಶ್ವಶರೀರದಲ್ಲಿ ಇವಳು ಶಕ್ತಿರೂಪದಿಂದ ಸರ್ವಕಡೆ ವ್ಯಾಪಿಸಿರುವಳು. ಅಲ್ಲದೆ ಅವರಲ್ಲಿ ಆಪರಾತ್ಪರವೂ ಸಚ್ಚಿದಾನಂದವೂ ವ್ಯಕ್ತವಾಗಿರುತ್ತವೆ. ಈಶ್ವರ ಶಕ್ತಿಗಳೆರಡೂ ಒಂದೇ ಜ್ಞಾನ ಶಕ್ತಿಯಾಗಿ, ಪುರುಷ ಪ್ರಕೃತಿಗಳೆಂಬ ತತ್ವಗಳಾಗಿ ಈ ಮಹಾಮಾತೆ ಪಾರ್ವತಿಯೇ ಪ್ರಕಟವಾಗಿರುತ್ತಾಳೆ.

ಇವಳ ಮೂಲಕ ದೃಶ್ಯಾದೃಶ್ಯ ಜಗತ್ತುಗಳೆಲ್ಲ ರೂಪತಾಳಿ ನಿಂತಿವೆ. ಇವೆಲ್ಲವೂ ಪರಶಿವನೊಂದಿಗೆ ಆಡುವ ಆಟವೇ ಸರಿ. ನಿತ್ಯ ವ್ಯವಹಾರದ ರಹಸ್ಯಗಳೂ ಅನಂತದ ಅದ್ಭುತ ಲೀಲೆಗಳೂ ಈ ಮಹಾಮಾತೆಯಿಂದಲೇ ಪ್ರಕಟವಾಗುವವು. ಸರ್ವವೂ ಪಾರ್ವತಿಯೇ ಇದ್ದಾಳೆ. ಎಲ್ಲವೂ ಆಕೆಯ ದಿವ್ಯ ಶಕ್ತಿಯ ಅಂಶಗಳೇ ಇರುವವು. ಎಲ್ಲವೂ ಪಾರ್ವತಿಯಿಂದ ನಿರ್ಧಾರವಾದ ಮೇಲೆ ಪರಶಿವನ ಒಪ್ಪಿಗೆ ಪಡೆದಾಗ ಇಲ್ಲಿ ಅವೆಲ್ಲ ಇರಲಿಕ್ಕೆ ಯೋಗ್ಯವಾಗುತ್ತವೆ ಇಲ್ಲವಾದರೆ ಯಾವದಕ್ಕೂ ಅಸ್ತಿತ್ವವಿಲ್ಲ.

ಎಲ್ಲಕಡೆಗೂ ಚಿತ್ ಪಾರ್ವತಿಯು ಇದ್ದಾಳೆಂದು ನಮ್ಮ ವಚನಕಾರರೂ ಬಣ್ಣಿಸಿದ್ದಾರೆ. ಚಿತ್ ಪೃಥ್ವಿ, ಚಿದ್ವಾರಿ, ಚಿದಗ್ನಿ; ಚಿದ್ವಾಯು ಚಿದಾಕಾಶ, ಇವೆಲ್ಲ ಚಿದ್ರೂಪಗಳು. ಚಿದ್ರೂಪ ಚಿದ್ರಸ ಚಿದ್ಗಂಧ ಚಿತ್ ಸ್ಪರ್ಶ ಚಿಚ್ಛಬ್ದ ಇವು ಚಿದ್ವಿಷಯಗಳು. ಅದರಂತೆ ಚಿದ್ಗುರು ಚಿಲ್ಲಿಂಗ ಚಿಜ್ಜಂಗಮ ಚಿತ್‌ಪಾದೋದಕ ಚಿತ್‌ಪ್ರಸಾದ ಚಿದ್ವಿಭೂತಿ ಚಿದ್ರುದ್ರಾಕ್ಷಿ ಚಿನ್ಮಂತ್ರ, ಚಿನ್ಮಯ ಶಿವ, ಚಿದಾತ್ಮ ಚಿತ್‌ಅಷ್ಟಾವರಣಗಳು.

ಚಿತ್ ಎಂದರೆ ಜ್ಞಾನಪೂರ್ಣ. ಜ್ಞಾನವೆಂದರೆ ಅತಿಸೂಕ್ಷ್ಮವಾದುದು. ಪಂಚಭೂತಗಳು ಜಡಸ್ಥೂಲ ಇರುವದು ಎಲ್ಲರಿಗೂ ಗೊತ್ತುಂಟು. ಆದರೆ ಜ್ಞಾನಕ್ಕೆ ಸಂಬಂಧವಾದ ಸೂಕ್ಷ್ಮ ಪಂಚಭೂತಗಳಿಗೆ ಚಿತ್ ಭೂತಗಳೆನ್ನುವರು. ಅದರಂತೆ ಚಿದ್ವಿಷಯಗಳೂ ಇರುವವು. ಜ್ಞಾನರೂಪ ನಿರ್ಗುಣ ವಸ್ತುವೇ ಚಿದ್ಗುರು. ಜೀವಾತ್ಮ ಅಂತರಾತ್ಮಗಳ ಏಕರೂಪಹೊಂದುವದೇ ಚಿಲ್ಲಿಂಗವು. ಬರೇ ಜ್ಞಾನ ಮಾತ್ರದಿಂದ ಉಂಟಾದ ಚೈತನ್ಯ (ಚಲನವಲನ) ವು ಚಿಜ್ಜಂಗಮ. ಮಹಾಲಿಂಗದ ಕೃಪೆಯೇ ಚಿತ್‌ಪಾದೋದಕ. ಮಹಾಜ್ಞಾನ ಯೋಗದಿಂದ ಶಿವಚಿತ್‌ಕಳೆಯೇ ತೋರುವದು. ಚಿತ್‌ಪ್ರಸಾದ. ಅನಾದಿಯಾದ ಶಾಶ್ವತ ಶಾಂತಿಯೇ ಚಿದ್ವಿಭೂತಿ. ರುದ್ರನ ತ್ರಿನೇತ್ರವೇ ಚಿದ್ರುದ್ರಾಕ್ಷಿ. ನಿರಂಜನ ಲಿಂಗಪ್ರಣವವೇ ಹಂ ಎಂಬುದೇ ಚಿನ್ಮಂತ್ರ.

ಚಿನ್ಮಯ ಶಿವನೆಂದರೆ ಪ್ರಜ್ಞಾನ ಮಹಾಜ್ಞಾನ ಮಹತ್ತು. ಈ ಪ್ರಕಾರ ಈ ಚಿತ್ ಪಾರ್ವತಿಯನ್ನು ಎಲ್ಲೆಡೆಗೆ ವೀರಶೈವರು ಕಾಣುವರು. ಇದಕ್ಕಾಗಿಯೇ ಶಕ್ತಿ ವಿಶಿಷ್ಟಾದ್ವೈತ ಮತದವರೆಂದು ಇವರಿಗೆ ಅನ್ನುವ ರೂಢಿ

ಯಾಗಿ ವೀರಶೈವರು ಆದಿಶಕ್ತಿ ಪಾರ್ವತಿಯನ್ನು ಮೊದಲು ಮಾಡಿಕೊಂಡು ಸಾಗುವರು. ಆಕೆಯ ಪೂಜೆಯ ಗುರ್ತಿಗಾಗಿ ಪೀಠವಿರುವದು ಅದರಮೇಲೆ ಪರಶಿವನ ಗುರ್ತು ಪೆಂಡಿಕೆ ಇರುವದು. ಇದುವೇ ಪೂರ್ಣಪೂಜೆ. ಇದುವೇ ಪೂರ್ಣಯೋಗದ ಗುರ್ತು. ಉಳಿದ ಯುಗಧರ್ಮದಲ್ಲಿ ಯಾರ ಯೋಗದಲ್ಲಿ ಇಂಥ ಪೂರ್ಣಯೋಗದ ಗುರ್ತು ನೆಲೆಕಲೆಗಳು ಇಲ್ಲಿ ತಂದೆ ತಾಯಿಯ ಗುರುತಾದ ಲಿಂಗವನ್ನೇ ವೀರಶೈವರು ತಮ್ಮ ಎದೆಯಮೇಲೆ ಇಷ್ಟಲಿಂಗವೆಂದು ಧಾರಣಮಾಡುವರು. ಲಿಂಗಪೂಜೆಯ ಗೂಢವನ್ನು ಅದೆಷ್ಟು ಜನರು ಅರಿತಿದ್ದಾರೆ? ಪೂರ್ಣಯೋಗವನ್ನು ವೀರಶೈವರಷ್ಟು ಯಾರೂ ಕಂಡುಹಿಡಿದಿಲ್ಲೆಂದು ಧಾರಾಳವಾಗಿ ಹೇಳಬಹುದು ಲಿಂಗಪೂಜೆಯೊಂದಿಗೆ ಭಕ್ತಿ ಜ್ಞಾನ ಕ್ರಿಯಾಗಳು ಪ್ರಾರಂಭವಾಗಿ ಷಟ್‌ಸ್ಥಲಗಳನ್ನು ಏರಿ ಮಾನವನು ದೇವಮಾನವ ಜೀವನ್ಮುಕ್ತ ಮಹೇಶರಣ ಮಹಾಪೂರ್ಣಯೋಗಿ ಆಗಲಿಕ್ಕೆ ವೀರಶೈವರಲ್ಲಿ ಎಷ್ಟು ಉಚ್ಚವಿಚಾರ ವಿರುವದೋ ಮತ್ತೆಲ್ಲಿಯೂ ಇಲ್ಲ.

---

# ಭಕ್ತಿಯೋಗ

ಬರೆದವರು:— ಶ್ರೀ ಶ್ರೀವಾನಂದಸ್ವಾಮಿ ಗವಿಮಠ, ತೆಗ್ಗಿಹಳ್ಳಿ ತಾ. ಇಂಡಿ



೧ನೆ ಲೇಖದಲ್ಲಿ ಭಕ್ತಿಯೋಗದ ಸಾಮಾನ್ಯ ಸ್ವರೂಪ ೨ನೇ ಲೇಖದಲ್ಲಿ ಪ್ರೇಮ, ದೇವ, ಮನ, ಭಕ್ತಿ ಇವೆಲ್ಲ ಒಂದೇ ಭಕ್ತಿಯೋಗದಿಂದ ಮನ ಶುದ್ಧ ಪವಿತ್ರವಾಗಿ ಒಂದುಗೂಡುವದು. ೩ನೇ ಲೇಖದಲ್ಲಿ ಭಕ್ತನಿಗೆ ಸತ್ಸಂಗದ ಅವಶ್ಯಕತೆ ನವದ್ವಾರದಿಂದ ಒಳಸೇರುವದೆಲ್ಲ ಲಿಂಗದಲ್ಲಿ ಬರುವದು ಒಳ್ಳೇದಿದ್ದರೆ ಸತ್ಸಂಗ ಕೆಡಕಾದದ್ದು ಸೇರಿದರೆ ದುಸ್ಸಂಗವಾಗುವದು. ೪ನೇ ಲೇಖದಲ್ಲಿ ಭಕ್ತನಿಗೆ ಭಕ್ತಿಸಾಧವ ಮಾಡಲಿಕ್ಕೆ ವಿವೇಕ, ವೈರಾಗ್ಯ, ಷಟ್‌ಸಂಪತ್ತಿನ ಅವಶ್ಯಕತೆಯನ್ನು ಹೇಳಿದೆ. ೫ನೇ ಲೇಖದಲ್ಲಿ ಭಕ್ತನಲ್ಲಿ ಭಕ್ತಿ ಬೆಳಿಸಲು ಉಳಿದ ಕೆಲ ಗುಣಗಳ ಬಗೆಗೆ ವಿವರಿಸುವೆನು.

ದೇವರನ್ನು ಸದಾ ಜ್ಞಾಪಕದಲ್ಲಿ ಇಟ್ಟುಕೊಳ್ಳುವದಕ್ಕೆ ಸಂಗೀತವು ಬಹು ನೆರವಾಗುವದು. ಎಷ್ಟೋ ಪ್ರಾಣಿಗಳು ಹಾವು ಪಶು ಪಕ್ಷಿ ಮೊದಲಾದವುಗಳೂ ಕೂಡ ಸಂಗೀತಕ್ಕೆ ಮೆಚ್ಚುವವು. ಮನುಷ್ಯನಂತೂ ಸಂಗೀತಕ್ಕೆ ಬಹು ಹುಚ್ಚನಾಗುವನು. ಸಂಗೀತದ ಗುಣವಿಶೇಷದಂತೆ ಮಾನವನಾಗುವನು. ಅಂದರೆ ಭಕ್ತಿ ಜ್ಞಾನ ವೈರಾಗ್ಯ ತ್ಯಾಗ ಸೇವೆಗಳ ಸಂಗೀತವಿದ್ದರೆ ಅವುಗಳಂತೆ; ಅಶ್ಲೀಲವಿದ್ದರೆ ಅವುಗಳಂತೆ ಶೃಂಗಾರವಿದ್ದರೆ ಅವುಗಳಂತೆ; ವೀರರಸದಿಂದ ಕೂಡಿದರೆ ಅವುಗಳಂತೆ ಆಗುವನು. ಅದಕ್ಕೆ ಭಕ್ತನಾಗಬೇಕೆನ್ನುವವನು ಭಕ್ತಿಯ ಸಂಗೀತ ಕೇಳಬೇಕು. ಭಕ್ತಿಯ ಸಂಗೀತ ಹಾಡಬೇಕು. ಸ್ವಂತ ಸಂಗೀತ ಬಂದರೆ ಉತ್ತಮ ಭಕ್ತನಾಗುವದರಲ್ಲಿ ಸಂದೇಹವಿಲ್ಲ. ನಾರದನು ಒಳ್ಳೇ ಸಂಗೀತಗಾರನು, ಸದಾ ವೀಣೆ ಹಿಡಿದು ದೇವರ ಮಹಿಮೆಯನ್ನು ಹಾಡುತ್ತಲೇ ಸಂಚರಿಸುತ್ತಿದ್ದನು. ಪರಮಾತ್ಮನು ಇವನಿಗೆ ಬಹು ಮೆಚ್ಚಿದ್ದನು. ಮೀರಾಬಾಯಿಯು ಉತ್ತಮ ಕವಿಯಾಗಿದ್ದಳು. ಅಲ್ಲದೆ ಸಂಗೀತಗಾರಳೂ ಇದ್ದಳು. ಅದಕ್ಕೆ ಬಹು ದೊಡ್ಡ ಭಕ್ತಳಾದಳು. ತುಕಾರಾಮ ಜ್ಞಾನದೇವ, ನಾಮದೇವ, ಗೋರಾ ಕುಂಭಾರ ಮೊದಲಾದ ಸಂತರೂ ಉತ್ತಮ ಸಂಗೀತಗಾರರೇ ಇದ್ದರು. ಅವರು ಯಾವಾಗಲೂ ದೇವರ ಬಗೆ

ಅಭಂಗಗಳನ್ನೇ ರಚಿಸಿ ಹಾಡುತ್ತಿದ್ದರು. ಶರಣ ಶರಣೆಯರು ವಚನಗಳನ್ನು ರಚಿಸಿ ಸಂಗೀತದಲ್ಲಿ ಅವುಗಳನ್ನು ಪರಶಿವನು ಮೆಚ್ಚುವಂತೆ ಭಕ್ತಿಯಿಂದ ಹಾಡುತ್ತಿದ್ದರು. ದಾಸರು ದೇವರ ಮಹಿಮೆ ಭಕ್ತಿಗಳನ್ನು ಕುರಿತು ಪದಗಳನ್ನು ರಚಿಸಿ ಹಾಡುತ್ತಿದ್ದರು. ಬಹುತರ ಅನೇಕ ಭಕ್ತರೆಲ್ಲ ಸಂಗೀತ ಪ್ರಿಯರೇ ಇದ್ದರು. ಒಳ್ಳೇ ಭಕ್ತಿಯಿಂದ ಸಂಗೀತಗಳನ್ನು ಹಾಡಿ ಪರವಶರಾಗುತ್ತಿದ್ದರು. ಅಲ್ಲದೆ ನೆರೆದ ಭಕ್ತ ವೃಂದಕ್ಕೂ ಕಣ್ಣೀರು ಕರೆಯುವಂತೆ ಭಕ್ತಿ ಪ್ರಜ್ವಲಿಸುವಂತೆ ಮಾಡುತ್ತಿದ್ದರು. ಅದಕ್ಕಂತಲೇ ನಾನು ಸ್ವರ್ಗದಲ್ಲಿ ಇಲ್ಲ ಯೋಗಿಯ ಹೃದಯದಲ್ಲಿಯೂ ಇಲ್ಲ. ಜ್ಞಾನಿಗಳ ಹೃದಯದಲ್ಲಿಯೂ ಇಲ್ಲ ಎಲ್ಲಿ ನನ್ನ ಭಕ್ತರು ಭಕ್ತಿಯಿಂದ ಭಜನೆಮಾಡಿ ಹಾಡುವರೋ ಅಲ್ಲಿ ಇರುವೆನೆಂದು ಭಗವಂತನು ಧಾರಾಳವಾಗಿ ಹೇಳಿದ್ದು ನಿಜವದೆ. ಮನಸ್ಸಿನ ಮೇಲೆ ಸಂಗೀತದ ಪ್ರಭಾವ ಬಹಳೇ ಆಗುತ್ತದೆ. ಮನಸ್ಸು ಕ್ಷಣದಲ್ಲಿ ಏಕಾಗ್ರಗೊಳಿಸುತ್ತದೆ. ಒಳ್ಳೇ ಮೂರ್ಖನೂ ಶುದ್ಧ ಟೊಣಪನೂ ಕೂಡ ಸುಂದರವಾದ ಮಧುರ ಸಂಗೀತ ಕೇಳಿದರೆ ಅವನ ಮನವು ಕ್ಷಣಮಾತ್ರ ಏಕಾಗ್ರಗೊಳ್ಳುವದು. ಅಂದಮೇಲೆ ಮುಮುಕ್ಷು ಭಕ್ತನು ದೇವಮಹಿಮೆಯ ಉತ್ತಮ ಭಕ್ತಿಯ ಗಾಯನ ಕೇಳಿದರೆ ಯಾಕೆ ತಲ್ಲೀನನಾಗಬಾರದು ಹೇಳಿ ನೋಡುವಾ? ಅದಕ್ಕೆ ಭಕ್ತನಿಗೆ ಭಕ್ತಿಯ ಸಂಗೀತ ಕೇಳುವದಾಗಲಿ ಸ್ವತಃ ಹಾಡುವದಾಗಲಿ ಅವಶ್ಯಬೇಕು. ಇಂಥವನು ಬೇಕಾದಲ್ಲಿ ಮಾನಮನ್ನಣೆ ಪಡೆಯುವನು.

ಸದಾಚಾರ (ಸತ್‌ಕ್ರಿಯೆ) ಭಕ್ತನಿಗೆ ಅವಶ್ಯ ಬೇಕಾದ ಒಂದು ಗುಣವು. ಇದರಿಂದ ಅಂತಃಕರಣವು ಬಹು ಬೇಗ ಪವಿತ್ರವೂ ಶುದ್ಧವೂ ಆಗುವದು. ಯಾವನು ಬರೇ ಸ್ವಾರ್ಥಿಯಾಗಿರುವನೋ ಅವನಿಂದ ದೇವರು ಬಹು ದೂರ ಇರುವನು. ಪರಾರ್ಥಿಯಾದವನ ಸಮೀಪ ದೇವರು ಸದಾ ಇರುವನು. ಇಂಥವನೇ ನಿಜವಾದ ಬಕ್ತನಾಗಬಲ್ಲನು. ಪರಸೇವೆಯನ್ನು ಎಷ್ಟು ನಿಸ್ವಾರ್ಥದಿಂದ ನಿಷ್ಕಾಮವಾಗಿ ಫಲಾಪೇಕ್ಷೆ ಇಲ್ಲದೆ ಎಷ್ಟು ಮಾಡುವೆವೊ ಅಷ್ಟು ನಮ್ಮ ಹೃದಯವು ತೀವ್ರ ಶುದ್ಧ, ಪವಿತ್ರ ಆಗುವದರಲ್ಲಿ ಸಂದೇಹವಿಲ್ಲ. ಕೀರ್ತಿಜಯಜಯಕಾರಕ್ಕೆ ಹೆಸರಿಗೆ ಮನಸೋತು ಹೃದಯ ಶುದ್ಧವಾಗಲಾರದು. ಅವನು ಭಕ್ತನಾಗಲಾರನು ನಿಷ್ಕಾಮವಾದ ಸೇವೆಯು ಬಹು ಅವಶ್ಯವಾದುದು.

ತಾಯಿ ತಂದೆಗಳಿಗೆ ನಮ್ಮ ಕರ್ತವ್ಯ, ಮಾನವ ಕೋಟಿಗೆ ನಮ್ಮ ಕರ್ತವ್ಯ, ಪಶುಪಕ್ಷಿಗಳಿಗೆ ನಮ್ಮ ಕರ್ತವ್ಯ, ಗುರುಗಳಿಗೆ ನಮ್ಮ ಕರ್ತವ್ಯ, ಇವು ಅವಶ್ಯವಾದ ಭಕ್ತನ ನಿತ್ಯ ನಿಷ್ಠಾನುವಾದ ಕರ್ತವ್ಯಕರ್ಮಗಳಾಗಿವೆ. ಹೆಂಡತಿಗೆ ಗಂಡನ ಸಂಬಂಧವಾದ ಕರ್ತವ್ಯ, ಗಂಡನಿಗೆ ಹೆಂಡತಿಯ ಸಂಬಂಧವಾದ ಕರ್ತವ್ಯ, ಸಂಸಾರಿ ಭಕ್ತನ ಕರ್ತವ್ಯಗಳಾಗಿರುವವು. ಅದ ರಂತೆ ಮಕ್ಕಳಿಗೆ ಸಂಬಂಧಿಸಿದ ಕರ್ತವ್ಯಗಳೂ ಸಹ ಬರುವವು.

ತಂದೆ ತಾಯಿಗಳು ಹೆಂಡತಿ ಮಕ್ಕಳು ನಮ್ಮ ಭಕ್ತಿಯಲ್ಲಿ ಭಕ್ತಿಯ ಮಾರ್ಗದಲ್ಲಿ ನೆರವಾಗುತ್ತಿದ್ದರೆ ಅನುಕೂಲರಾಗುತ್ತಿದ್ದರೆ ಅವರಿಗೆ ದೇವ ದೇವತೆಯರೆಂದು ಹೊಟ್ಟೆ ಬಟ್ಟೆ ಮೊದಲಾದವುಗಳಿಂದ ಸೇವೆಗೈಯ್ಯಬೇಕು ಭಕ್ತರಾಗಲಿಕ್ಕೆ ವಿರೋಧ ಮಾಡಿದರೆ ಅವರನ್ನು ತ್ಯಾಗಮಾಡಲಿಕ್ಕೆ ಅಡ್ಡಿ ಇಲ್ಲ. ಪ್ರಲ್ಹಾದ ಧ್ರುವ ಬಸವ ವಿವೇಕಾನಂದರಂತೆ ತಂದೆ ತಾಯಿಗಳನ್ನು ತೊರೆದರೆ ಅಡ್ಡಿ ಇಲ್ಲ. ಸತ್ಯಮಾರ್ಗದಲ್ಲಿ ಚರಿಸಲಿಕ್ಕೆ ಆಗದವರನ್ನು ತೊರೆ ಯಲಿಕ್ಕೆ ಬೇಕು. ತಂದೆ ತಾಯಿಗಳಿಗಿಂತ ಸತ್ಯವು ಹೆಚ್ಚಿನದು ಸತ್ಯಕ್ಕಾಗಿ ತನು ಮನ ಧನ ಪ್ರಾಣಗಳನ್ನು ಅರ್ಪಣ ಮಾಡಿದವರು ಎಷ್ಟೋ ಇದ್ದಾರೆ.

ಸತ್ಯಮಾರ್ಗಕ್ಕೆ ಭಕ್ತಿಮಾರ್ಗಕ್ಕೆ ಅಡ್ಡಿಯಾದ ಗಂಡನನ್ನು ಅನೇಕರು ಬಿಟ್ಟಿದ್ದಾರೆ. ಮೀರಾಬಾಯಿ ರಾಣಿಯಾದರೂ ತನ್ನ ಗಂಡನಾದ ರಾಜನನ್ನೂ ಬಿಟ್ಟಳು. ಅಕ್ಕಮಹಾದೇವಿ ತನ್ನ ಭಕ್ತಿಪಥಕ್ಕೆ ಅಡ್ಡಿಯಾದಲ್ಲಿ ಗಂಡನನ್ನು ಒಂದೇ ಏಟಿಗೆ ಬಿಟ್ಟು ಅರಣ್ಯ ಸೇರಿ ಭಕ್ತಿ ಸಾಧನವನ್ನು ಮಾಡಿದಳು. ಹೇಮರಡ್ಡಿ ಮಲ್ಲಮ್ಮ ಅತ್ತೆ ಮಾವ ನೆಗಣ್ಣಿಯರು ಗಂಡ ಮೊದಲಾದವ ರನ್ನು ಬಿಟ್ಟು ಅರಣ್ಯದಲ್ಲಿ ನಿಂತು ಭಕ್ತಿ ಸಾಧನಮಾಡಿದಳು.

ಅದರಂತೆ ಗಂಡನು ಹೆಂಡತಿಯನ್ನು ಸತ್ಯಮಾರ್ಗದಲ್ಲಿ ಭಕ್ತಿಪಥದಲ್ಲಿ ಚಲಿಸಲಾರದ್ದಕ್ಕಾಗಿ ಬಿಟ್ಟುಬಿಟ್ಟಿದ್ದಾರೆ. ರಾಮದಾಸ ರಾಜಾ ಗೋಪಿಚಂದ ಗೌತಮಬುದ್ಧ, ಅರವಿಂದ, ಭರ್ತೃಹರಿ ಶಿವಾನಂದ ಮೊದಲಾದವರು ತಮ್ಮ ಹೆಂಡತಿಯು ತಮ್ಮ ಭಕ್ತಿಮಾರ್ಗಕ್ಕೆ ಅಡ್ಡಿಮಾಡಿದಾಗ ಯಾರಿಗೂ ಹೇಳದೆ ಬಿಟ್ಟುಬಿಟ್ಟಿದ್ದಾರೆ. ವಿಭೀಷಣನು ಅಣ್ಣನನ್ನೂ ತೊರೆದನು. ಅರ್ಜುನನು ಗುರುಗಳಾದ ದ್ರೋಣ ಭೀಷ್ಮರನ್ನು ವಧೆಮಾಡಿದನು. ಧರ್ಮರಾಜನು

ಹೆಂಡತಿಯನ್ನು ತಮ್ಮಂದಿರನ್ನು ಬಿಟ್ಟು ತನ್ನ ಮಾರ್ಗದಲ್ಲಿ ಚಲಿಸುವ ನಾಯಿ ಯನ್ನು ಸಂಗಡ ಕರಕೊಂಡು ಹೋದನು. ಅದರಂತೆ ಎಷ್ಟೋ ಜನರು ಮಕ್ಕಳನ್ನೂ ರಾಜ್ಯವನ್ನೂ ಸಂಪತ್ತನ್ನೂ ತಮ್ಮ ಭಕ್ತಿ ಮಾರ್ಗದಲ್ಲಿ ಅಡ್ಡ ಬರಲು ತೊರೆದು ಹೊರಟಿದ್ದಾರೆ. ಅದಕ್ಕೆ ದೋಷವಿಲ್ಲ.

ಯಾರು ತಮ್ಮ ಭಕ್ತಿಮಾರ್ಗದಲ್ಲಿ ಚಲಿಸಿ ನೆರವಾಗುವರೋ ಅಂಥ ಹೆಂಡತಿಯನ್ನು ಮಕ್ಕಳನ್ನು ಗಂಡನನ್ನು ಸಂಗಡ ಕರಕೊಂಡು ಭಕ್ತಿಮಾಡಿ ಮುಕ್ತರಾಗಿದ್ದಾರೆ. ಶ್ರೀರಾಮಕೃಷ್ಣ ಪರಮಹಂಸರು ತಮ್ಮ ಹೆಂಡತಿಯಾದ ಶಾರದಾ ದೇವಿಯನ್ನು ಕರಕೊಂಡರು. ಅದರಂತೆ ರಾಮನು ಸೀತಾ ಲಕ್ಷ್ಮಣ ರನ್ನು ಬಿಡಲಿಲ್ಲ. ಜನಕನು ತನ್ನ ಹೆಂಡತಿಯನ್ನು ಬಿಡಲಿಲ್ಲ. ಇದರಂತೆ ಗುರು ಗಳು ಶಿಷ್ಯರನ್ನು ಕರಕೊಂಡು ಇದ್ದರು. ನೆರವಾಗುವ ಪ್ರಾಣಿಯನ್ನು ಸಂಗಡ ಕರಕೊಂಡು ಸಾಗುವದು ಭಕ್ತನ ಕರ್ತವ್ಯವಾಗಿದೆ.

ಸನ್ಯಾಸಿಯಾಗಿ ಸರ್ವಸಂಗ ಪರಿತ್ಯಾಗ ಮಾಡಿ ಹೋದವನ ಕರ್ತವ್ಯ ಕ್ಕಿಂತು ಗೃಹಸ್ಥನಾದ ಭಕ್ತನ ಕರ್ತವ್ಯಗಳು ಬಹು ಕಠಿಣ ಇರುತ್ತವೆ. ಅವನು ದೀನ ದರಿದ್ರರ ರೋಗಿಗಳ ಸೇವೆ ಮಾಡಬೇಕು. ಅತಿಥಿ ಸತ್ಕಾರ ಮಾಡ ಬೇಕು. ಹೆಂಡತಿ ಮಕ್ಕಳಿಗೆ ಮಠಯನ್ನು ಕಟ್ಟಿದರೆ ಅವನು ಭಕ್ತನಾಗಲಾರನು. ಇದೇ ಶರಣರ ದಾಸೋಹವೇ ಸರಿ. ಬಹುತರ ಎಲ್ಲ ಶರಣರು ತಮ್ಮ ಹೆಂಡತಿ ಯೊಡನೆ ನಿಷ್ಕಾಮವಾಗಿ ಇದ್ದು ನಿಷ್ಕಾಮವಾಗಿ ಕಾಯಕಮಾಡಿ ನರರ ಸೇವೆಯನ್ನು ಹರನೆಂದೇ ಮಾಡುತ್ತಿದ್ದರೆ ಅದೇ ಅವರ ದಾಸೋಹಭಾವ ವಾಗುವದು. ಇದು ಬಹು ಕಠಿಣ. ಇದನ್ನೇ ಪ್ರಸಾದ ರೂಪದಿಂದ ಸೇವನೆ ಮಾಡುವದೇ ಆಗಿದೆ. ಆ ಉಳಿದ ಮಿಕ್ಕ ಪ್ರಸಾದವನ್ನು ಕೂಡ ಪ್ರಸಂಗ ಬಂದರೆ ಪರರಿಗೆ ಅರ್ಪಿಸಿ ಆತ್ಮಾರ್ಪಣ ಮಾಡುವದು ಆಗಿದೆ. ಶಕ್ಯವಿದ್ದಷ್ಟು ಪರರ ಸಲುವಾಗಿಯೇ ದುಡಿಯಬೇಕಾಗುವದು. ಎಲ್ಲವನ್ನು ಪರಮಾತ್ಮನಿಗೆ ಅರ್ಪಣ ಮಾಡಬೇಕಾಗುವದು. ಬಡವರು, ದೀನರು, ಅನಾಥರು, ಅಜ್ಞರು ಕಷ್ಟದಲ್ಲಿ ನರಳುವವರು ರೋಗಿಗಳು ಹಿಂದುಳಿದವರು ಮೊದಲಾದವರು ದೇವರ ಪ್ರತಿನಿಧಿಗಳು. ಇವರಿಗೆ ಅರ್ಪಿಸಿದರೆ ದೇವರಿಗೆ ಅರ್ಪಿಸಿದಂತೆ ಆಗು ವದು. ಅದರಂತೆ ಕಷ್ಟದಲ್ಲಿ ನರಳುವ ಪ್ರಾಣಿಗಳೆಲ್ಲ ದೇವರ ಪ್ರತಿನಿಧಿಗಳೇ ಸರಿ. ಅವುಗಳನ್ನು ಹಿಂಸಿಸುವದು ರಾಕ್ಷಸಿಕೃತ್ಯ, ದೇವರ ನೀತಿಯಲ್ಲ. ಕೊಲ್ಲು

ವದು ಬಹು ಕ್ರೂರತನ. ಈ ಪ್ರಕಾರ ಮಾಡದೆ ಅವಕ್ಕೆ ಆಹಾರ ನೀರು ಕೊಡ ಬೇಕು. ಅವುಗಳ ರೋಗ ನಿವಾರಿಸಬೇಕು. ಹಿಂಸೆಯಾಗುವದರಿಂದ ಅವು ಗಳನ್ನು ಉಳಿಸಬೇಕು. ಹೀಗೆ ಮಾಡಿದರೆ ಅವು ಮಾನವನ ಮೇಲೆ ಬಹು ಪ್ರೀತಿ ಮಾಡಿ ಅವರಿಗೆ ಪ್ರತ್ಯುಪಕಾರವನ್ನೇ ಮಾಡುವವು. ಇದಕ್ಕೆ ಪಶುಗಳ ಮೇಲೆ ಪ್ರೀತಿಮಾಡುವದೆಂದು ಅನ್ನುವರು. ಅಂದರೆ ಪಶುಪತಿಯು ಮೇಲೆ ಭಕ್ತಿಮಾಡಿದಂತೆ ಆ ಪಶುಪತಿ ಮೆಚ್ಚುವನು. ಭಕ್ತನಾಗಬೇಕೆನ್ನುವವನು ಇದ ನ್ನೆಲ್ಲ ಅವಶ್ಯ ಮಾಡಲೇ ಬೇಕು. ಸದಾ ನಾಲಿಗೆಯಿಂದ ಧ್ಯಾನ ಜಪಗಳು ನಡೆದಿರಬೇಕು.

" ಸರ್ವೇ ಸುಖಿನೋ ಭವಂತು " ಎಲ್ಲರಿಗೂ ಕಲ್ಯಾಣವನ್ನು ಸದಾ ಕೋರುವದು. ಯಾರಿಗೂ ವೈರಿಗೂ ಕೂಡ ಅಕಲ್ಯಾಣ ಅಥವಾ ಕೇಡನ್ನು ಎಂದಿಗೂ ಕೋರಬಾರದು. ಅಕಲ್ಯಾಣ ಕೋರುವದೆಂದರೆ ತನಗೆ ತಾನೇ ಕೆಡಕನ್ನು ಕೋರಿದಂತೆ ಸರಿ. ಯಾಕಂದರೆ ಆತ್ಮವತ್ ಸರ್ವಭೂತಾನಿ ಎಂಬಂತೆ ಸರ್ವ ಭೂತ ಮಾತ್ರದಲ್ಲಿ ಒಬ್ಬನೇ ಆತ್ಮನಿರುವನು. ಅದಕ್ಕೆ ಅನ್ಯರಿಗೆ ಕೆಡಕನ್ನು ಎಂದೂ ಯಾವ ಕಾಲಕ್ಕೂ ಕೋರಬಾರದು. ಬೈದರೆ ಬೈಗಳು ಕೈಯ ಮೇಲೆ ಹೊಯ್ದರೆ ಹೊಯ್ಗಳು ಕೈಮೇಲೆ. ಹಿಂದಣ ಜನನವೇನಾದಡಾಗಲಿ ಇಂದಿನ ಭೋಗವು ಕೈಮೇಲೆ ಕೂಡಲ ಸಂಗಮ ದೇವಯ್ಯ ನಿಮ್ಮ ಪೂಜಿಸಿದ ಫಲವು ಕೈಮೇಲೆ. " ಅನ್ಯರಿಗೆ ನಾವು ಏನು ಮಾಡುವೆವೊ ಏನು ಕೋರುವೆವೊ ಅದೇ ನಮಗಾಗುವದು ಹೊರತು ಬೇರೆ ಆಗುವ ಶಕ್ಯವಿಲ್ಲ.

ಸತ್ಯದಿಂದ ಇರುವದು—ಸತ್ಯವಂತರಿಗೆ ಸತ್‌ವ ಅಂದರೆ ಪರಶಿವನ ದರ್ಶನವಾಗುತ್ತದೆ. ಕಾಯಾ ವಾಚಾ ಮನಸಾ ಸತ್ಯದಿಂದ ಇರಬೇಕು. ಸತ್ಯಕ್ಕಾಗಿ ಯಾರು ಎಂಥ ಕಷ್ಟ ಒಬ್ಬರೆಂಬುದನ್ನು ವಿಚಾರಿಸಿರಿ. ಸತ್ಯಕ್ಕಾಗಿ ಹರಿಶ್ಚಂದ್ರ ರಾಮ ನಳ ಬಸವ ಮೊದಲಾದವರು ಬಹು ಕಷ್ಟವನ್ನು ಸುಭವಿಸಿ ದರು. ಆ ಮೇಲೆ ಸರಳವಾದ ಆಚರಣೆ ಕಾಪಟ್ಯವಿಲ್ಲದೆ ಇರುವದು. ಹೃದಯವನ್ನು ಯಾವಾಗಲೂ ಪ್ರಕಾಶಕ್ಕೆ ತೆರೆದಿಡುವದು. ಅದರೆ ಆತನು ನ್ಯಾಯ ನಿಷ್ಠುರಿ ಶರಣನು ಲೋಕ ವಿರೋಧಿ. ಕೂಡಲ ಸಂಗಮ ದೇವನ ರಾಜ ತೇಜದಲ್ಲಿ ಸಪ್ಪನಾಗಿ ಎಂದು ನುಡಿದಂತೆ.

ನಡೆವುದು ದಿಟವ ನುಡಿವುದು. ನಡೆದು ತಪ್ಪುವ ಪ್ರಪಂಚಿಯನೊಲ್ಲ ಕೂಡಲ ಸಂಗಮದೇವಾ. ಅದರಂತೆ ದಯೆಯು ಭಕ್ತನಲ್ಲಿ ಅವಶ್ಯಬೇಕು. ದಯೆವಿಲ್ಲದ ಧರ್ಮವಾವುದು? ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ ದಯವೇ ಧರ್ಮದ ಮೂಲವಯ್ಯಾ ದಯವಿಲ್ಲದವರನೊಲ್ಲ ಕೂಡಲ ಸಂಗಮ ದೇವಾ" ಅದರಂತೆ ಹಿಂಸೆಯನ್ನು ಎಂದೂ ಮಾಡಬಾರದು. ಕಾಯಿಕ ಹಿಂಸೆ ಮಾನಸಿಕ ಹಿಂಸೆ ವಾಚಕ ಹಿಂಸೆಗಳನ್ನು ಮಾಡಬಾರದು. ಕಡಬೇಡ ಕೊಲಬೇಡ ಹುಸಿಯ ನುಡಿಯಬೇಡ. ಇದಿರ ಹಳಿಯಲ ಬೇಡ ತನ್ನ ಬಣ್ಣಿಸಿಕೋಬೇಡ. ಇದೇ ಅಂತರಂಗ ಶುದ್ಧಿ ಇದೇ ಬಹಿರಂಗಶುದ್ಧಿ, ಇದೇ ನಮ್ಮ ಕೂಡಲಸಂಗಮದೇವನ ಒಲಿಸುವ ಪರಿ, ಎಂದು ಸಾಮಾನ್ಯವಾದ ಭಕ್ತನ ರೀತಿ ನೀತಿಗಳನ್ನು ಹೇಳಿದ್ದಾರೆ. ದಾನ ಮಾಡುವ ಗುಣವು ಭಕ್ತನಿಗೆ ಅವಶ್ಯವಾದುದು. ಶರಣರೆಲ್ಲ ಈ ತಂದವರೇ ಇದ್ದರು. ಕಾಗೆ ಬಂದಗಳ ಕಂಡರೆ ಕರೆಯದೆ ತನ್ನ ಬಳಗವನು? ಕೋಳಿ ಒಂದು ಗುಟುಕ ಕಂಡರೆ ಕೂಗಿ ಕರೆಯದೆ ತನ್ನ ಕುಲವೆಲ್ಲವ ? ಶಿವ ಶಿವ ಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದರೆ ಆ ಕಾಗೆ ಕೋಳಿಗಳಿಂದ ಕರಕಷ್ಟ ಕೂಡಲಸಂಗಮದೇವ. ದಾನ ಮಾಡುವದನ್ನು ಒಳ್ಳೇರೀತಿಯಿಂದ ಗಳಿಸಿದ್ದಿರಬೇಕು. ಪಾಪ ಕೃತ್ಯಗಳಿಂದ ಗಳಿಸಿರಬಾರದು. ಅದಕ್ಕೆ ದಾನಕ್ಕಿಂತ ಮಿಗಿಲಾದ ಧರ್ಮವಿಲ್ಲೆಂದು ಹೇಳುವರು. ತಕ್ಕೊಳ್ಳುವದಕ್ಕೆ ಕೈಯೊಡ್ಡುವದು ಒಳಿತಲ್ಲ. ಕೊಡುವದಕ್ಕೆ ಯಾರು ಕೈಯೊಡ್ಡುವರೋ ಅವರು ಉತ್ತಮರು. ದೇವರು ಕೈ ಕೊಟ್ಟಿರುವದು ದುಡಿದು ಅದರ ಫಲವನ್ನು ಅನ್ಯರಿಗೆ ಕೊಡುವದಕ್ಕೆ. ಉಪವಾಸ ಬಿದ್ದರೂ ಚಿಂತೆಇಲ್ಲ. ನಿಮ್ಮಲ್ಲಿ ಇದ್ದ ಒಂದು ಚೂರು ರೊಟ್ಟಿಯನ್ನಾದರೂ ಕೊಟ್ಟು ಬಿಡು. ನೀವು ಉಪವಾಸ ಸತ್ತರೂ ನಿಮಗೆ ಮೋಕ್ಷ ಕಟ್ಟಿಟ್ಟ ಗಂಟು. ನೀವು ದೇವರಾಗುತ್ತೀರಿ.

ಆನಂದದಿಂದ ಭಕ್ತನು ಸದಾ ಇರಬೇಕು. ನಿರಾಶನಾಗಿ ಅಳುಮೋರಿಯಿಂದ ಭಕ್ತನು ಯಾವಾಗಲೂ ಇರಕೂಡದು. ಭಕ್ತನು ಮಂದಹಾಸದಿಂದ ಇದ್ದರೆ ಭಜನೆ ಪ್ರಾರ್ಥನೆಗಿಂತು ಹೆಚ್ಚಾಗಿ ನಮ್ಮನ್ನು ದೇವರ ಸಮೀಪಕ್ಕೆ ಕರದೊಯ್ಯುವದು. ನಿರಾಶರಾಗಿ ಯಾವ ಚಟುವಟಿಗಳಿಲ್ಲದವರು ಅನ್ಯರನು ಪ್ರೀತಿಸಲಾರರು. ಹಿಂಸೆ ಮಾಡುವದೇ ಅವರ ಉದ್ದೇಶವಿರುತ್ತದೆ. ಅಳುಮೋರೆಯ ನಿಶಾಶವಾದಿಗಳು ಭಕ್ತರಾಗಲಾರರು. ಗಂಟುಮೋರೆಯನ್ನು ಮಾಡಿಕೊಳ್ಳುವವರಿಂದ ಹೃದಯದಲ್ಲಿಯ ಪ್ರೀತಿ ಹಾರಿ ಹೋಗುವದು. ಅಳುಮೋರೆ

ಯಾವನು ದೇವರ ಸಮೀಪಕ್ಕೆ ಎಂದೂ ಹೋಗಲಾರನು. ನನಗೆ ದುಃಖ ಬಹಳ ಕಷ್ಟ ಬಹಳ, ಎಂದು ಹೇಳುವದು ಎಂದೂ ಧರ್ಮವಾಗಲಾರದು. ಜಗತ್ತಿನಲ್ಲಿ ಯಾರಿಗೆ ದುಃಖವಿಲ್ಲ ಹೇಳಿನೋಡುವಾ. ಆದರೂ ಆನಂದದಿಂದ ಇರಲಿಕ್ಕೆ ಯತ್ನಿಸಬೇಕು. ಭಕ್ತರು ಇದನ್ನು ಸದಾ ಸಾಧಿಸಬೇಕು. ಸದಾ ಪ್ರಸನ್ನ ಚಿತ್ತದಿಂದ ಹಾಸದಿಂದ ಕೂಡಿರಬೇಕು. ಅಂದರೆ ಭಕ್ತನಿಗೆ ಭಕ್ತಿಯ ಸಾಧನೆ ಮಾಡಲಿಕ್ಕೆ ಅನುಕೂಲವಾಗುವದು. ಇಲ್ಲವಾದರೆ ಇಲ್ಲ.

"ಬಲಹೀನೇನ ಆತ್ಮನ ಲಭ್ಯಃ" ದುರ್ಬಲರಿಗೆ ದೇವರು ಸಿಗುವದಿಲ್ಲ. ಬಲವಾದ ಆರೋಗ್ಯವಂತ ಶರೀರವಿದ್ದವರಿಗೆ ಬಲವಾದ ಶುದ್ಧವಾದ ಮನ ವಿರುವದು. ಇಂಥವರಿಗೆ ದೇವರ ದರ್ಶನವು ಆಗುವದರಲ್ಲಿ ಸಂದೇಹವಿಲ್ಲ. ಅದಕ್ಕೆ ಭಕ್ತನಾಗಬೇಕೆನ್ನುವವನಿಗೆ ಬಲವಾದ ಆರೋಗ್ಯವುಳ್ಳ ಶರೀರ ಬೇಕು. ಅದಕ್ಕೆ ದೃಢಕಾಯದವರಿದ್ದರೆ ಭಕ್ತಿಮಾಡಲಿಕ್ಕೆ ಕ್ಕೆ ಸಾಧಿಸುವದು. ಇಲ್ಲವಾದರೆ ಭಕ್ತಿಯ ಸಾಧನಗಳು ಸರಿಯಾಗಿ ಸಾಧಿಸುವದಿಲ್ಲ. ಸಾಧನೆ ಯಿಂದ ಶರೀರಕ್ಕೆ ಬಹು ಪರಿಶ್ರಮವಾಗುವದು. ದೃಢಕಾಯವಿದ್ದರೆ ಸಾಧನೆಯ ಹೊಡತಗಳನ್ನು ತಡಕೊಳ್ಳುವ ಸಾಮರ್ಥ್ಯ ಬರುವದು. ಅಶಕ್ತರಿಗೆ ಸಾಧನೆ ಯಿಂದ ಆಗುವ ಕಷ್ಟಗಳನ್ನು ಸಹಿಸುವದು ಆಗುವದಿಲ್ಲ. ಹೀಗಾದರೆ ದೇವರ ಹತ್ತಿರ ಹೋಗುವದು ಶಕ್ಯವಿಲ್ಲ. ನಗು ಮತ್ತು ಅಳು ಇವು ಸಹೋದರರು. ಯಾವದೂ ಅತಿಯಾಗಿ ಇರಕೂಡದು. ಅತಿ ಸಂತೋಷವಾಗಲಿ ಅತಿ ಆನಂದ ವಾಗಲಿ ಇರಕೂಡದು. ಮಿತಿ ಇರಬೇಕು. ಯಾಕಂದರೆ ಮಿತಿಮೀರಿದ ಆನಂದ ವಾದಮೇಲೆ ಯಾವಾಗಲೂ ದುಃಖ ಬರುವದು. ಸಾಧಾರಣಸ್ಥಿತಿಯಲ್ಲಿ ಭಕ್ತನು ಇದ್ದರೆ ಮಾತ್ರ ಭಕ್ತಿಗೆ ಅನುಕೂಲವಾಗುವದು. ಕಾರಣ ಮನಸ್ಸು ಸಾಧಾ ರಣ ಸಂತೋಷ ಆನಂದ ಶಾಂತವಾಗಿರಬೇಕು ಅಂದರೆ ಭಕ್ತಿಯ ಸಾಧನೆ ಗಳನ್ನು ಮಾಡಲಿಕ್ಕೆ ಒಳ್ಳೆ ಅನುಕೂಲವಾಗುವದು. ಭಕ್ತನು ಸ್ತ್ರೀಯ ವ್ಯಾಮೋಹವನ್ನು ಬಿಡಬೇಕು. ಅಂದರೆ ಭಕ್ತಿ ಮಾಡಲಿಕ್ಕೆ ಬಹು ಅನು ಕೂಲವಾಗುವದು. ತನ್ನ ಹೆಂಡತಿಯು ಭಕ್ತಿಮಾರ್ಗಕ್ಕೆ ಅನುಕೂಲೆಯಾಗಿ ದ್ದರೆ ಬಹು ಒಳಿತು ಸುಖಕರ. ಆದರೆ ಅನುಕೂಲವಿಲ್ಲದಿದ್ದರೆ ಬಹು ತ್ರಾಸ ವಾಗುವದು ಆದರೂ ಭಕ್ತಿಮಾರ್ಗದಲ್ಲಿ ತ್ರಾಸಾದರೂ ಚಿಂತೆಯಿಲ್ಲ. ಸದಾ ಯತ್ನ ಮಾಡುತ್ತ ಮುಂದೆ ಹೋಗುತ್ತಲೇ ಇರಬೇಕು. ಮೇಲೆ ಬರೆದ ಗುಣ ಗಳು ಶಕ್ಯವಾದರೆ ಹೊಂದಿ ಭಕ್ತಿ ಮಾಡಿದರೆ ಭಕ್ತನು ಬಹು ಶೀಘ್ರ ಮುಂದು

ವಹಿಸುವನು. ಇವೆಲ್ಲ ಸಾಧಿಸದಿದ್ದರೂ ಕೂಡ ಚಿಂತೆ ಇಲ್ಲ. ಸದಾ ಭಕ್ತಿ ಅಂದರೆ ದೇವರ ನಾಮ ಜಪ, ಸಂಕೀರ್ತನೆ, ಭಜನೆ ಪೂಜೆ ಒಳ್ಳೇ ಶಾಸ್ತ್ರಗಳನ್ನು ಓದುವದು ಪುರಾಣ ಕೀರ್ತನೆಗಳನ್ನು ಕೇಳುವದು ಸಾಧು ಸಂತರ ಕ್ಷೇತ್ರ ತೀರ್ಥಗಳಿಗೆ ದರ್ಶನ ಕೊಡುವದು ಅಲ್ಲಿ ಕೆಲದಿನ ನಿಂತು ಧ್ಯಾನ ವಗೈರೆ ಮಾಡುವದನ್ನು ಬಿಡಬಾರದು. ಆಗ ದೇವರೇ ನಿನ್ನ ಭಕ್ತಿ ಮಾರ್ಗದಲ್ಲಿ ಇರುವ ಯಾವ ತ್ರಾಸ ಅಡ್ಡ ಆತಂಕಗಳನ್ನೆಲ್ಲ ತಾನೇ ಸಾವಧಾನದಿಂದ ನಿವಾರಿಸಿ ದಾರಿಯನ್ನು ತೋರುವನು. ಅವನು ಗುರುಗಳನ್ನು ಹುಡುಕುತ್ತ ಹೋಗುವ ಕಾರಣವಿಲ್ಲ. ದೇವರು ಇವನ ಕಡೆಗೆ ಗುರುಗಳನ್ನು ತಾನೇ ಕಳಿಸಿಕೊಡುವನು. ಗುರುಗಳ ಚಿಂತೆ ಮಾಡುವ ಕಾರಣವಿಲ್ಲ. ಗುರುಗಳ ಕೆಲಸ ಬಹಳ ಇಲ್ಲ. ಆದರೆ ಶಿಷ್ಯನ ಕೆಲಸ ಬಹಳೇ ಇದೆ. ಶಿಷ್ಯನು ಅಂದರೆ ಭಕ್ತನು ಗುರೂಪದೇಶ ಪಡೆಯುವದಕ್ಕಿಂತ ಮೊದಲು ತನ್ನ ಶುದ್ಧಿಯನ್ನು ಮಾಡಿಕೊಳ್ಳುವದು ಬಹಳೇ ಇದೆ. ಮನಸ್ಸು, ಪ್ರಾಣ, ಶರೀರ, ಬುದ್ಧಿ ಚಿತ್ತ ಮೊದಲಾದವುಗಳ ಶುದ್ಧಿಯನ್ನು ಮಾಡಿಕೊಳ್ಳಬೇಕಾಗುವದು. ಇದಕ್ಕೆ ಆಧಾರಶುದ್ಧಿ ಎಂದು ಅನ್ನುವರು. ಇದನ್ನು ಭಕ್ತನು ತಾನೇ ಮಾಡಿಕೊಳ್ಳಬೇಕಾಗುವದು. ಮೇಲೆ ಹೇಳಿದವುಗಳಂತೆ ನಡೆದು ಭಕ್ತಿಯನ್ನು ಮಾಡಿದರೆ ಆಧಾರ ಶುದ್ಧಿ ತಾನೇ ಆಗುವದು. ಭಕ್ತನು ಸದಾ ದೇವರ ಸ್ಮರಣೆಯನ್ನು ಮಾಡಲಿಕ್ಕೆ ಯತ್ನಿಸಬೇಕು. ನಿತ್ಯರೂಢಿಯಾದ ಇದೆಲ್ಲ ಶಕ್ಯವಾಗುವದು. ಇದು ಒಮ್ಮೆಲೆ ಒಂದೇ ಏಟಿಗೆ ಒಂದೇ ದಿನಕ್ಕೆ ಸಾಧಿಸುವದು ಶಕ್ಯವಿಲ್ಲ. ಮನವು ಚಂಚಲವಾಗಿ ಅನೇಕ ವಿಷಯಗಳನ್ನು ಆಲೋಚಿಸುತ್ತ ನಡೆಯುವದು. ಅವುಗಳಲ್ಲಿ ಅತ್ಯಂತ ನಿರುಪಯೋಗಿಯಾಗಿರುವವು. ಇಂಥ ಮನಸ್ಸಿಗೆ ಪ್ರಯತ್ನದಿಂದ ನಿತ್ಯ ರೂಢಿಮಾಡುತ್ತ ಧ್ಯಾನ ಮೊದಲಾದವುಗಳನ್ನು ಸಾಧಿಸಿ ಮನನ ಮಾಡಿಕೊಳ್ಳಬೇಕು ಅನ್ಯ ಆಲೋಚನೆಗಳ ಹೊರತಾಗಿ ದೇವರ ಆಲೋಚನೆಗಳನ್ನು ಮನಸ್ಸಿಗೆ ಮಾಡಲಿಕ್ಕೆ ಹಚ್ಚಬೇಕು. ಈ ರೂಢಿಯಾದರೆ ಎಲ್ಲ ತಾನೇ ಸಾಧಿಸುವದು. ಭಕ್ತಿಯು ಜೀವನದ ಜೀವಾಳವಾಗಿದೆ. ಆತ್ಮನ ಕಣ್ಣಾಗಿದೆ. ಅದನ್ನು ಭಕ್ತಿಯನ್ನು ಸದಾ ಸಾಧಿಸಬೇಕು. ಮುಂದಿನ ಲೇಖದಲ್ಲಿ ಭಕ್ತಿಯ ಅನೇಕ ಬೇರೆ ಬೇರೆ ವೈಶಿಷ್ಟ್ಯಗಳನ್ನು ವಿವರಿಸುತ್ತ ಹೋಗುವೆನು. ಈಗ ಭಕ್ತನು ಭಕ್ತಿಯನ್ನು ಪ್ರಾರಂಭಿಸುವದಕ್ಕೆ ಮೊದಲು ಏನು ಮಾಡಬೇಕೆಂದು ಇದರಲ್ಲಿ ವಿವರಿಸಲಾಗಿದೆ. ಭಕ್ತನಿಗೆ ಬೇಕಾಗುವ ಪೂರ್ವ ತಯಾರಿಯನ್ನು ಹಿಂದಿನ ಲೇಖಗಳಲ್ಲಿ ವಿವರಿಸಲಾಗಿದೆ. ಭಕ್ತನಲ್ಲಿ ಹಿಂದಿನ ಗುಣಗಳೆಲ್ಲ ಬಹು ಅವಶ್ಯ ಇರಲಿಕ್ಕೆಬೇಕು.

ಮೇಲಿನ ಎಲ್ಲ ವಚನಗಳ ವಿವರಣೆಯು ಪ್ರತಿ ನಿಮಿಷದಲ್ಲಿ ಪ್ರತಿ ಇಂದ್ರಿಯ ಮನಗಳನ್ನು ದೇವರ ಆಲೋಚನೆಯಲ್ಲಿಯೇ ಸದಾ ತೊಡಗಿಸುವ ಬಗ್ಗೆ ವಚನಕಾರರು ಬಹು ಸರಸಾಗಿ ಹಾಡಿದ್ದಾರೆ. ರೋಮ ರೋಮಗಳಲ್ಲಿ ನರನಾಡಿಗಳಲ್ಲಿ ಕಣ್ಣು ಮನಗಳಲ್ಲಿ ಕಿವಿ ನಾಲಿಗೆಯಲ್ಲಿ ರಕ್ತಮಾಂಸಗಳಲ್ಲಿ ಶರೀರದ ಪ್ರತಿಯೊಂದರಲ್ಲಿ ಭಕ್ತನ ಭಕ್ತಿಯ ಸಾಧನಗಳಾದ ಧ್ಯಾನ ಜಪ ಪೂಜೆ ನಾಮಸಂಕೀರ್ತನೆ ಮೊದಲಾದವುಗಳು ಸದಾ ನಡೆಯಲೆಂದೇ ಇವೆಲ್ಲವುಗಳ ಭಾವವಾಗಿದೆ. ಇದೆಲ್ಲ ಸಾಧಿಸಬೇಕಾದರೆ ವಿವೇಕ ವೈರಾಗ್ಯವು ಅವಶ್ಯಬೇಕು.

ತಿತಿಕ್ಷಾ:—ಎಂಥ ಕಷ್ಟ ಬಂದರೂ ಭಕ್ತನು ತನ್ನ ಭಕ್ತಿಯ ಸಾಧನಗಳನ್ನು ಎಂದೂ ಬಿಡಬಾರದು. ಒಮ್ಮೆ ಭಕ್ತಿ ಮಾಡುವದು, ಒಮ್ಮೆ ಬಿಡುವದರಿಂದ ಏನೂ ಸಾಧಿಸುವದಿಲ್ಲ. ಇಂದು ಬೇಕಾದುದು ಸಂಭವಿಸಲಿ ಎಂಥ ಕಷ್ಟನಷ್ಟಗಳೂ ಬರಲಿ, ಭಕ್ತನು ಒಳ್ಳೇ ಅಚಲನಾಗಿರಬೇಕು. ಅಲ್ಲದೆ ಭಕ್ತಿಯನ್ನು ಮಾಡುತ್ತ ಹೋದಂತೆ ಅವನಿಗೆ ಕಷ್ಟಗಳು ಹೆಚ್ಚುವವು. "ಭಕ್ತಿಯ ಮಾಡುವರೆ ಕರಗಸದಂತೆ ಹೋಗುತ್ತ ಕೊಯ್ಯುವದು ಬರುತ್ತ ಕೊಯ್ಯುವದು. ಒಂದಕ್ಕೊ ಅಂಜದೆ ಅಳಕದೆ ಇರ್ದಡೆ ತನ್ನ ತಾನೀಯುವನು ಕೂಡಲ ಸಂಗಮ ದೇವಾ" ಭಕ್ತರಿಗೆ ಸತ್ಯವಂತರಿಗೆ ನಿಜವಾಗಿ ಹೆಚ್ಚಿಗೆ ಕಾದಾಟವಾಗುವದು. ಅವೆಲ್ಲ ಅವನ ಕೀರ್ತಿಯನ್ನು ಹರಡಲಿಕ್ಕೆ ಯೋಗ್ಯತೆಯನ್ನು ತಂದುಕೊಡಲಿಕ್ಕೆ ಬರುವವು. ಅದಕ್ಕೆ ಎಂಥ ಸಂಕಟ ಬಂದರೂ ಅಂಜಬಾರದು ಹಿಂಜರಿಯಬಾರದು. " ಎನಿಸೆನಿಸೆಂದರೆ ನಾ ಧೃತಿಗೆಡೆನಯ್ಯ ಎಲಬು ದೋರೆ ನರಹರಿದರೆ ನೆರಹರಿದು ನೆಲಕಟ್ಟಿ ಬಿದ್ದರೆ ನಾಲಿಗೆ " ಓಂ ನಮಃ ಶಿವಾಯ " ಎಂದಿತ್ತು ಕೂಡಲ ಸಂಗಮ ದೇವಾ. "

ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೆ ? ಎನ್ನ ತಂದೆ ಚನ್ನಮಲ್ಲಿಕಾರ್ಜುನ ದೇವಯ್ಯ ಕೊಂದೊಡೆ ಶರಣೆಂಬುದ ಮಾಣೆ.

ಕಿಡಿ ಕಿಡಿ ಕೆದರಿದಡೆ ಎನಗೆ ಹಸಿವು ತೃಷೆ ಅಡಗಿತೆಂಬೆನು. ಮುಗಿಲು ಹರಿದು ಬಿದ್ದರೆ ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲೆ ಬಿದ್ದರೆ ಎನಗೆ ಪುಷ್ಪವೆಂಬೆನು. ಚನ್ನಮಲ್ಲಿಕಾರ್ಜುನಯ್ಯ ಶಿರಹರಿದು ಬಿದ್ದರೆ ಪ್ರಾಣ ನಿಮಗರ್ಪಿತವೆಂಬೆನು.

ಭಕ್ತನಲ್ಲಿ ಈ ತರದ ತಿತಿಕ್ಷಾ ಗುಣ ಇರಬೇಕು. ಭಕ್ತಿಮಾಡುವಾಗ ಎಂಥ ಸಂಕಟ ಬಂದರೂ ಅಂಜಿ ಅಳುಕದೆ ಭಕ್ತಿಯನ್ನು ಬಿಡಬಾರದು. ಒಂದು ಸಿಂಹವು ಭಕ್ತನನ್ನು ಬಾಯಿಂದ ಕಚ್ಚಿಕೊಂಡು ಒಯ್ಯುತ್ತಿದ್ದರೂ ಕೂಡ "ಓಂ ನಮಃ ಶಿವಾಯ" ಎಂದು ನುಡಿಯುತ್ತಲೇ ಇರಬೇಕು. ಇದನ್ನು ಶರಣರು ಸಾಧಿಸಿದ್ದರು. ಈ ತಿತಿಕ್ಷಾ ಗುಣವು ಪ್ರತಿ ಒಂದಕ್ಕೂ ಅತ್ಯವಶ್ಯವಿದೆ.

ಶ್ರದ್ಧೆ ಇದು ಭಕ್ತನಿಗೆ ಅತ್ಯವಶ್ಯಕವು. ಶ್ರದ್ಧೆ ಇದ್ದರೆ ಹೊಳೆಯು ದಾರಿ ಕೊಡುವದು. ಪರ್ವತವು ರಾಜಮಾರ್ಗ ಮಾಡಿಕೊಡುವದು. ಶ್ರದ್ಧೆಯ ಶಕ್ತಿ ಅನಂತವಾಗಿದೆ. ಸಂಶಯಗ್ರಸ್ತನು ಪರಮ ಪದವನ್ನು ಹೊಂದಲಾರನು. ತನ್ನ ಆತ್ಮದಲ್ಲಿ ವಿಶ್ವಾಸನಂಬಿಗೆ ಇಡದವನು ನಾಸ್ತಿಕನು. ನಿನ್ನಲ್ಲಿ ನಿನಗೆ ನಂಬಿಕೆ ಇದ್ದ ಹೊರತು ನಿನಗೆ ಪರಮಾತ್ಮನಲ್ಲಿ ನಂಬಿಕೆ ಹುಟ್ಟಲಾರದು. ದೇವಭಕ್ತನು ಎಂದೂ ಕೇಡಿಗೊಳಗಾಗನೆಂದು ದೃಢವಾಗಿ ನಂಬಬೇಕು. ಪ್ರಪಂಚವೇ ನಮ್ಮನ್ನು ಎದುರಿಸಲಿ, ಪ್ರತಿಭಟಿಸಲಿ. ಆದರೂ ನಮ್ಮ ಶ್ರದ್ಧೆಯನ್ನು ಎಂದೂ ಕಳಕೊಳ್ಳಬಾರದು. "ನೆಚ್ಚಿದೆನೆಂದರೆ ಮೆಚ್ಚಿದೆನೆಂದರೆ ಸಲೆಮಾರು ಹೋದೆನೆಂದರೆ, ತನುವನಲ್ಲಾಡಿಸಿ ನೋಡುವೆ ನೀನು ಮನವನಲ್ಲಾಡಿಸಿ ನೋಡುವೆ ನೀನು. ಧನವನಲ್ಲಾಡಿಸಿ ನೋಡುವೆ ನೀನು. ಇವೆಲ್ಲಕಂಜದಿದ್ದರೆ ಭಕ್ತಿಕಂಪಿತ ನಮ್ಮ ಕೂಡಲಸಂಗಮ ದೇವಾ. ಶ್ರದ್ಧೆಯಿಂದ ಭಕ್ತನು ಮಾಡ ಹತ್ತಿದರೆ ತನು ಮನ ಧನಗಳನ್ನು ಅಲ್ಲಾಡಿಸಿ ಅಂದರೆ ಕಾಡಿಬೇಡಿ ನೋಡುವನು. ಅದಕ್ಕಂಜದೆ ಇದ್ದರೆ ಅವನ ಭಕ್ತಿ ಇದರಿಂದ ಕಂಪಿತನಾದರೆ ದೇವನು ಮೆಚ್ಚುವನು. ಇಲ್ಲವಾದರೆ ಇಲ್ಲೆಂದು ಹೇಳಲಾಗಿದೆ. ಇಂಥ ಅಚಲವಾದ ಶ್ರದ್ಧೆಯು ಭಕ್ತನಿಗೆ ಅತಿ ಅವಶ್ಯವಾದುದು. ಶ್ರದ್ಧೆಯಲ್ಲಿ ಸಂಶಯ ಬಂದರೆ ಎಲ್ಲವೂ ತಿರವು ಮುರವು ಆಗುತ್ತದೆ. ಮೊದಲಿನಿಂದ ಮಾಡಿದ ಭಕ್ತಿ ಕೆಟ್ಟು ಹೋಗುವದು.

"ನಿಷ್ಠೆಯುಳ್ಳ ಭಕ್ತ ನಟ್ಟಡವಿಯಲ್ಲಿರ್ದಡೇನು ? ಅದು ಪಟ್ಟಣವೆಂದೆನಿಸುವದು. ನಿಷ್ಠೆ ಇಲ್ಲದ ಭಕ್ತ ಪಟ್ಟಣದಲ್ಲಿದ್ದರೂ ಅದು ನಟ್ಟಡವಿ ಕಾಣಾ ರಾಮನಾಥಾ"

" ನಂಬಿ ಕರೆದಡೆ ' ಓ ' ಎನ್ನನೆ ಶಿವನು ? ನಂಬದೆ ನಚ್ಚದೆ ಕರೆದಡೆ ' ಓ ' ಎನ್ನನು ಶಿವನು. ನಂಬಲರಿಯರು ನೆಚ್ಚಲರಿಯರು ಡಂಭಿನ ಭಕ್ತರು. ನಂಬದೆ ನೆಚ್ಚದೆ ಬರಿದೆ ಕರೆವಡ ಶಿವ ಮೌನದಲ್ಲಿಪ್ಪ ಕೂಡಲ ಸಂಗಮ ದೇವ. "

" ಛಲವಿರಬೇಕು ಭಕ್ತಿಯ ಮಾಡುವಲ್ಲಿ. ಹಿಡಿದು ಬಿಡೆನೆಂಬ ಛಲ ವಿರಬೇಕು ನಿತ್ಯ ನೇಮದಲ್ಲಿ. ಹಿಡಿದು ಬಿಡೆನೆಂಬ ಛಲವಿರಬೇಕು, ನಮ್ಮ ಅಖಂಡೇಶ್ವರ ಲಿಂಗವ ಕೂಡಿ ಅಗಲಬಾರದೆಂದು ನೈಷ್ಠೆಯಲ್ಲಿ. "

ಶ್ರದ್ಧೆ ಎಂದರೆ ವಿಶ್ವಾಸನಂಬಿಗೆ. ನಿರ್ಮಲ ಮನಸ್ಸಿನಲ್ಲಿ ಅಹಂಕಾರ ವಿಷಯ ವಾಸನೆ ಮೋಹ ಮುಂತಾದವುಗಳಿಂದ ರಹಿತವಾದ ಮನಸ್ಸಿನಲ್ಲಿ ಪರಮಾತ್ಮನ ಬಗ್ಗೆ ಶ್ರದ್ಧೆಯು ತಾನೇ ಒಡಮೂಡುವದು. ಪರಮಾತ್ಮನೇ ಸರ್ವಸ್ವ. ಎಂಥ ಪ್ರಸಂಗ ಬಂದರೂ ನಂಬಿಗೆ ಅಲ್ಲಾಡಬಾರದು. ಯಾವತ್ತೂ ಐಹಿಕ ವಿಷಯಗಳು, ಈ ಪ್ರಪಂಚವು ಬರಿ ಅಸತ್ಯ ಸುಳ್ಳು ಅಶಾಶ್ವತ ವೆಂದು ಪೂರ್ಣವಿವೇಕವು ಬರಬೇಕು. ಅಂದರೆ ಪರಮಾತ್ಮನಮೇಲೆ ಶ್ರದ್ಧೆಯು ಸಹಜ ಬೀಳುವದು. ನಿಷ್ಠೆಯು ಕೂಡ ಶ್ರದ್ಧೆಗೆ ಬೆಂಬಲವಿದೆ. ಕ್ರಿಯೆ ಯಲ್ಲಿ ಸ್ಥಿರತೆ ಅಂದರೆ ನಿಷ್ಠೆ ಶ್ರದ್ಧೆ ಇದ್ದರೆ ಕ್ರಿಯದಲ್ಲಿ ನಿಷ್ಠೆ ಉಂಟಾಗು ವದು ಸಹಜವಿದೆ. ತನ್ನ ಶ್ರದ್ಧೆಗನುಸರಿಸಿ ಹಿಡಿದ ವ್ರತ ನಿಯಮಗಳು ಮಹತ್ವವುಳ್ಳವುಗಳು. ಇವುಗಳನ್ನು ಬಿಡದೆ ನಡೆಸುವದು ನಿಯಮ ವ್ರತ.

ಸಮಾಧಾನ—ಇಷ್ಟ ದೇವತೆಯ ಮೇಲೆ ಬಹು ಪ್ರೀತಿಮಾಡುವದು. ತನ್ನ ಸರ್ವ ಚಿತ್ತವನ್ನು ಪರಮಾತ್ಮನಲ್ಲಿ ನೆಲಿಸುವದು. ಚಿಕ್ಕ ಮಕ್ಕಳಿಗೆ ಆಟನೆಯ ಗೊಂಬೆಗಳೇ ಸರ್ವಸ್ವವಾಗಿ ಬಿಟ್ಟಿರುವವು. ಜಗತ್ತಿನ ಐಶ್ವರ್ಯ ಸಂಪತ್ತು ಕಾಮಿನಿ ಕಾಂಚನ ಮೊದಲಾದವುಗಳಿಗಿಂತ ತನ್ನ ಆಟದ ಗೊಂಬೆಯೇ ಹೆಚ್ಚಿನದಾಗಿರುವಂತೆ ಭಕ್ತನಿಗೆ ಐಹಿಕ ಯಾವತ್ತೂ ವಿಷಯ ಗಳಿಗಿಂತ ತನ್ನ ಇಷ್ಟ ದೇವತೆಯು ಬಹು ಪ್ರಿಯವಾಗಿ ಹೆಚ್ಚಿನದಾಗಿ ಪರಿ ಣಮಿಸುವದು. ಅಂದರೆ ಭಕ್ತನು ಅದರ ಮೇಲೆ ಸರ್ವಮನವನ್ನು ಚಿತ್ತ ವನ್ನು ನೆಲಿಸಿ ಅದನ್ನು ಪ್ರೀತಿಸುವನು. ಇಲ್ಲವಾದರೆ ಇಂಥ ಪ್ರೀತಿ ಕೂಡ ಲಾರದು. ಆದಕ್ಕೆ ಸಮಾಧಾನವು ಅವಶ್ಯಬೇಕು.

ಶಮೆ— ಮನಸ್ಸನ್ನು ನಿಗ್ರಹಿಸುವದು. ಆದರೆ ಅದನ್ನು ಪರಮಾತ್ಮನ ಮೇಲೆ ಸಂಪೂರ್ಣ ನೆಲಿಸುವದು. ಅಶಾಶ್ವತವಾದ ವಿಷಯ ಸುಖಗಳು ಅಸತ್ಯ ದುಃಖದಾಯಕವೆಂದು ಸಂಪೂರ್ಣ ಮನವರಿಕೆ ಮಾಡಿಕೊಂಡು ಮನಸ್ಸನ್ನು ಅವುಗಳಿಂದ ತಿರಿಗಿಸುವದೇ ಶಮೆಎನಿಸುವದು. ಭಕ್ತನಿಗೆ ಇದು ಅವಶ್ಯವು ಮತ್ತು ಮಹತ್ವವು. ಮನವು ಬಹಿರ್ಮುಖವಾಗಲು ಮಾಯಾ ಪ್ರಪಂಚಿ ಮನಸ್ಸು ಅಂತರ ಮುಖವಾಗಲು ಅವಿರಳ ಜ್ಞಾನಿ. ಮನಸ್ಸು ಮಹದಲ್ಲಿ ನಿಂದಿರಲು ತಾ ಮುಕ್ತನೆಂದು ಬಸವಣ್ಣನವರು ಹಾಡಿದ್ದಾರೆ. ಶಮೆಯು ಅವಶ್ಯ ಬೇಕು.

ದಮೆ.— ಇಂದ್ರಿಯ ನಿಗ್ರಹ. ಬರಿ ಶಮೆಯಿಂದ ನಡೆಯುವದೆಂದು ಇಂದ್ರಿಯಗಳು ಮನಸ್ಸಿಲ್ಲದೆ ಏನುಬೇಕಾದರೂ ಮಾಡಿದರೂ ಪಾಪವಿಲ್ಲ ದೋಷವಿಲ್ಲೆಂದು ಹೇಳುವದು ಶುದ್ಧ ತಪ್ಪು. ಹೀಗಾದರೆ ಬರೇ ಶಮೆ ಮಾಡಿದರೆ ನಡೆಯುವದೆಂದು ಹೇಳಬೇಕಾಗಿತ್ತು. ಹಾಗೆ ಹೇಳದೆ ಶಮೆ ದಮೆ ಬೇಕೆಂದೇ ಹೇಳಿದ್ದಾರೆ. ಇಂದ್ರಿಯಗಳೂ ಮನಸ್ಸೂ ಒಂದೇ ರೀತಿಯಿಂದ ಹೆಜ್ಜೆ ಹಾಕಬೇಕು. ಈ ಶರೀರವೆಂಬ ರಥಕ್ಕೆ ಇವೆರಡು ಕುದುರೆಗಳು ಸರಿಯಾಗಿ ಹೋದರೆ ಗುರಿಯನ್ನು ಸೇರುವದು. ಇಲ್ಲವಾದರೆ ಇಲ್ಲ. ಇದರ ವಿವರಣೆಯು ಮೇಲೆ ಸ್ವಲ್ಪ ಬಂದಿದೆ. ಗೀತೆಯಲ್ಲಿಯೂ ಕೂಡ ಇಂದ್ರಿಯ ನಿಗ್ರಹ ಮನೋ ನಿಗ್ರಹದ ಬಗ್ಗೆ ಹೇಳಿದ್ದಾರೆ. ಆದರೆ ವಿಷಯ ಸುಖದಿಂದ ಅವುಗಳನ್ನು ಅಗಲಿಸಿ ಪರಮಾತ್ಮನಲ್ಲಿ ಇರಿಸುವದು ಹೊರತು ಬೇರೆ ಇಲ್ಲ. ಮನಸ್ಸಿಗೆ ಒಂದು ಕೆಲಸಬೇಕು. ಸುಳ್ಳು ಕೆಲಸ ಬಿಡಿಸಿ ಒಳ್ಳೇ ಕೆಲಸವಾದ ಭಕ್ತಿಯಲ್ಲಿ ಅವುಗಳನ್ನು ನೆಲಿಸುವದೆ ಶಮೆ ದಮೆ ಎನಿಸುವದು. ಉಪರತಿ ಇದರಲ್ಲೇ ಬರುವದು. ವಿಷಯಾಸಕ್ತಿಯಿಂದ ತ್ಯಾಗಮಾಡಿ ಮನಸ್ಸು ದೇವನಲ್ಲಿ ನೆಲಿಸುವದು.

ಅಂತು ವಿವೇಕವು ಪ್ರತಿಯೊಬ್ಬ ಭಕ್ತನಿಗೆ ಅವಶ್ಯಬೇಕು. ವಿವೇಕದಿಂದಲೇ ಮೇಲೆ ವಿವರಿಸಿದ ಷಟ್ ಸಂಪತ್ತಿಗಳನ್ನು ಪಡೆಯಬೇಕು. ಭಕ್ತನು ಇವುಗಳಿಲ್ಲದೆ ತನ್ನ ಗುರಿಯನ್ನು ಎಂದೂ ಮುಟ್ಟಲಾರನು. ಭಕ್ತನಿಗೆ ಸತ್ಸಂಗದಂತೆ ಇವೂ ಕೂಡ ಬೇಕು. ಆದರೆ ಪ್ರತಿಯೊಂದರಲ್ಲಿ ಸರಿಯಾದ ವಿವೇಕವನ್ನು ಉಪಯೋಗಿಸಬೇಕು ವಿವೇಕ ಶೂನ್ಯವಾದ ಎಲ್ಲ ಕೆಲಸಗಳು ವಿನಾಶಕ್ಕೆ ಒಯ್ಯುವವು. ವಿವೇಕವಾದರೆ ಭಕ್ತನ ದಾರಿ ಬಹು ಸುಗಮವಾಗುವದು ನಿಚ್ಚಳವಾಗುವದು.

---

## ಓಲೆ ೧

ಬರೆದವರು :- ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿ ಹಳ್ಳಿ ತಾ. ಇಂಡಿ

**ಪ್ರಿಯ ಅಣ್ಣನಿಗೆ ಅನೇಕ ವಂದನೆಗಳು:—**

ನಾನು ಒಳ್ಳೆತಾಗಿ ಇದ್ದೇನೆಂದ ಕೂಡಲೇ ಮನದಿಂದ ಬುದ್ಧಿಯಿಂದ ಆತ್ಮದಿಂದ ಒಳಿತಾಗಿದ್ದೇನೆಂದು ತಿಳಿಯಬೇಡಿರಿ. ನಾನು ಹೆಚ್ಚಾಗಿ ಶರೀರ ದಿಂದ ಚನ್ನಾಗಿದ್ದೇನೆ. ಉಳಿದ ಎಲ್ಲ ಒಳಿತುಗಳು ನನ್ನಲ್ಲಿ ಇನ್ನೂ ಬಂದಿಲ್ಲ. ಮುಂದೆ ಬರಬಹುದು. ನಿಮ್ಮೆಲ್ಲರ ಮಾತನ್ನು ಮೀರಿ ನಾನು ಈ ತರದ ತ್ಯಾಗದ ಬಾಳುವೆಯನ್ನು ಸುರು ಮಾಡಿದ್ದೇನೆ. ನೀವೆಲ್ಲರೂ ಬಂಧು ಪ್ರೀತಿ ಯಿಂದ ಅನೇಕ ಸಲ ಸಂಸಾರಿಯಾಗುವ ಬಗ್ಗೆ ಉಪದೇಶ ಮಾಡಿದಿರಿ. ಆದರೆ ಅದನ್ನು ಲೆಕ್ಕಿಸದೆ ಇದೇ ತರದ ಹಾದಿಯನ್ನು ಹಿಡಿದೆನು. ಒಂದು ವಿಷಯದ ಸಲವಾಗಿ ಯಾವನಿಗಾದರೂ ಭೂತ ಬಡಿದರೆ, ಅದನ್ನು ಬಿಡಿ ಸುವದು ಬಲು ಕಷ್ಟ. ಅದರಂತೆ ನನಗೆ ದೇವರ ಭೂತ ಬಡಿದಿದೆ. "ಬಸುದು ತಪ್ಪದು ಬಾರದು ಬಪ್ಪದು" ಎಂಬಂತೆ ನನಗೂ ಆಗಿದೆ. ಕಲಿತವಳನ್ನು ಆಗಿ ಆದರ್ಶ ಕರ್ಮಯೋಗಿಯಾಗಬೇಕೆಂದು ಮಾಡಿದ್ದೆ. ಅದೆಲ್ಲ ಈಗ ಮಾಯವಾಗಿ ಮನಸ್ಸಿನ ಓಘವು ಬೇರೆಕಡೆಗೆ ಹೊರಳಿದೆ. ಅದನ್ನು ತಡೆಯುವದು ಯಾರಿಂದಲೂ ಆಗದು. "ತಾನೊಂದು ಬಗೆದಡೆ ದೈವವತ್ತೊಂದು ಬಗೆವುದು" ಎಂಬಂತೆ ಆಗಿದೆ. ಈಗಿನ ಈ ಸ್ಥಿತಿಗಾಗಿ ನಾನು ಬಹು ಸಂತೋಷಿಯಾಗಿದ್ದೇನೆ. ಹುರುಳಿಲ್ಲದ ಹಾಳು ಬಾಳು, ಗೋಳು ಬಾಳು. ಇವರಲ್ಲಿ ಅನ್ಯರಂತೇ ಕೊಳೆತು ಹಾಳಾಗಿ ಹೋಗಬಾರ ದೆಂದೇ ನನ್ನ ಬಯಕೆ. ನೀವೆಲ್ಲರೂ ಜೀವನದ ಗುರಿಯನ್ನು ಅರಿತಿಲ್ಲ. ಪಶು ಪಕ್ಷಿಗಳಂತೆ ಏನೋ ಒಂದು ತರದ ಬಾಳನ್ನು ನೀವು ನಡಿಸಿದ್ದೀರಿ.

ನಿಮಗೆ ಅಧಿಕಾರ ಉಂಟು; ಧನ ಉಂಟು; ಭೂಮಿಯುಂಟು; ಸತಿ ಸುತರುಂಟು; ಆ ಎಲ್ಲರೂ ಇದಕ್ಕಾಗಿಯೇ ನಿಮ್ಮನ್ನು ಪ್ರೀತಿಸುವದುಂಟು. ಇದೆಲ್ಲ ಇದ್ದರೂ ನಷ್ಟು ನೀವು ಎಂದೂ ಸುಖಿಗಳಾಗಲಾರಿರಿ. ನನಗೆ ದರಿದ್ರತನವುಂಟು, ಅಧಿಕಾರವಿಲ್ಲ, ಅಪ್ಪಹೊಲಮನೆಗಳಿಲ್ಲ. ಸದಾ ಅಡಚಣಿ

ಯಾವ, ಹೇಗಿದ್ದರೂ ನಾನು ಯಾವಾಗಲೂ ಸುಖದಲ್ಲೇ ಕಾಲ ಕಳೆಯು ವೆನು. ಹೀಗಾಗಲಿಕ್ಕೆ ನೀವು ಚಲಿಸುವ ಮಾರ್ಗಕ್ಕೂ ನಾನು ಚಲಿಸುವ ಮಾರ್ಗಕ್ಕೂ ಮಹದಂತರವುಂಟು. ವಿಷಯದಲ್ಲಿ, ಐಹಿಕದಲ್ಲಿ ತೋರುವ ಜಗದಲ್ಲಿ, ಸುಖವನ್ನು ಹುಡುಕುತ್ತ ಹೊರಟವರು ನೀವು. ಇವುಗಳಲ್ಲಿ ಎಳ್ಳಷ್ಟು ಹುರಳಿಲ್ಲೆಂದು ನಂಬಿ ಸೂಕ್ಷ್ಮ, ಕಾರಣ, ಮಹಾಕಾರಣ ಜಗ ದಲ್ಲಿ ಅಂದರೆ ಆ ದೇವ ದೇವನಾದ ಸಚ್ಚಿದಾನಂದ ಪರಮಾತ್ಮನಲ್ಲಿ ಸದಾ ಸುಖ ಸದಾನಂದಗಳುಂಟೆಂದು ನಂಬಿ ಅವುಗಳನ್ನು ಹುಡುಕುತ್ತಿರುವವನು ನಾನು. ಅಣ್ಣಾ! ಇದನ್ನು ಅನುಭವದಿಂದ ಕಂಡು ಹಿಡಿದಿದ್ದೇನೆ. ನಿಮ್ಮಂತೆ ನಾನು ಮೊದಲು ಅಲ್ಪಸ್ವಲ್ಪ ಸಂಸಾರ ಮಾಡಿ ನಿಸ್ಸಾರೆಂದು ಕಂಡು ಹಿಡಿ ದವನು ನಾನು. ಅದಕ್ಕೆ ಸಾರವತ್ತಾದ ಸಾರವನ್ನು ಹುಡಿಕಿ ನಾನು ಸುರಿದು ನಿಮಗೂ ಸುರಿಯಲಿಕ್ಕೆ ಕೊಡಬೇಕೆಂದು ಹಿರಿದಾದ ಹಂಬಲ ಉಳ್ಳವನಿದ್ದೇನೆ. "ತ್ಯಾಗದಲ್ಲಿ ಸುಖ ಭೋಗದಲ್ಲಿ ದುಃಖ" ತ್ಯಾಗವೇ ಧರ್ಮದ ಮೂಲವಯ್ಯಾ. ತ್ಯಾಗಿಗಳು ಅಘಟಿತ ಘಟನೆಗಳನ್ನು ಮಾಡ ಬಲ್ಲರು. ಇಂಥ ತ್ಯಾಗ ವೇದಾಂತದ ಬಗೆಗೆ ಸ್ವಲ್ಪ ಬರೆಯುವೆನು ನೋಡಿ ಕೊಳ್ಳಿರಿ.

ಮಾನವನ ಹೆಗ್ಗುರಿಯು, ಜೀವಿತದ ಉದ್ದೇಶವು ವೇದಾಂತಿಯಾಗು ವದೇ ಆಗಿದೆ. ವೇದಾಂತಿ ಎಂದ ಕೂಡಲೇ ನಗಬೇಡಿರಿ. ವೇದಾಂತಿ ಎಂದ ಕೂಡಲೇ ಪಂಚರತ್ನ ಪಂಚೀಕರಣ, ದಾಸಬೋಧ ಅಭಂಗಗಳನ್ನು ಓದಿ ಊರೂರು ತಿರುಗಿ ಗುರುಬೋಧೆ ಕೊಡುತ್ತ ಶಾಸ್ತ್ರ ಹೇಳುವ ಹೊಟ್ಟೆ ಹೊರುವ ದುರುಳ ವೇದಾಂತಿಗಳಲ್ಲ. ಆದರೆ ವೀರ ವೇದಾಂತಿಗಳು ಸರಳ ವೇದಾಂತಿಗಳು. ಇಂಥವರೇ ದೇಶೋದ್ಧಾರಕ್ಕೆ ಈಗಿನ ಕಾಲಕ್ಕೆ ಬೇಕಾ ಗಿದ್ದಾರೆ. ಇದರಲ್ಲಿ ರುಚಿ ಇದೆ. ಸಜೀವವಿದೆ. ವೇದಾಂತವನ್ನು ಹೇಳಲಿಕ್ಕೂ ಓದಲಿಕ್ಕೂ ಕಲಿಯಲಿಕ್ಕೂ ಎಲ್ಲರಿಗೂ ಬರುತ್ತದೆ. ಅದನ್ನು ತಿಳಿಯದವ ರಾರು? ಅರಿಯದವರಾರು? ಹೇಳದವರಾರು? ಓದದವರಾರು? ಎಲ್ಲರೂ ಹಾಗೆ ಮಾಡಬಲ್ಲರು. ಆದರೆ ಅದರಂತೆ ನಡೆಯುವದೊಂದು ಬಹು ಬಿಗಿ ಯಾಗಿ ಕೂತಿದೆ. ಅದು ಚೂಪಾದ ಕತ್ತಿಯ ಅಲಗಿನ ಮೇಲೆ ನಡೆದಷ್ಟ ಕ್ಕಿಂತ ಬಹುಬಿಗಿ. ಇಂಥ ಬಿಗಿಯಾದ ಮಾರ್ಗದ ಕಡೆ ಜನರು ಹೋಗು ವದು ಬಹು ಕಡಿಮೆ. ಹೋದರೂ ನಡುವೇ ಉರುಳುವವರು ಹೆಚ್ಚು,

ನುಡಿದಂತೆ ನಡೆಯುವದು, ನಡೆದಂತೆ ನುಡಿಯುವದು, ಕಲಿತ ತೆ ಹೋಗು ವದು, ಅಂದಂತೆ ಆಚರಿಸವದು. ಹೇಳಿದಂತೆ ಬಾಳುವದು, ಇವುಗಳಿಗೆ ಕರ್ಮ ಜ್ಞಾನಗಳ ಸಮನ್ವಯವೆನ್ನುವರು. ಕ್ರಿ ಅಂದರೆ ತಿಳಿದಂತೆ ನಡೆಯು ವದು. ಜ್ಞಾ ಅಂದರೆ ತಿಳಿಯುವದು. ಜ್ಞಾ—ಕ್ರಿಯಾಗಳಲ್ಲಿ ಎಳ್ಳಷ್ಟು ಅಂತರ ವಿಲ್ಲ. ಜ್ಞಾನ ಬರಬೇಕಾದರೆ ಭಕ್ತಿ ಹೆಚ್ಚಾಗಬೇಕು. ಹೃದಯ ಅರಳಬೇಕು ಇವು ಮೂರು ಕೂಡಿದರೆ ಪೂರ್ಣಯೋಗವಾಗುವದು. ಬರೇ ಒಂಟಿಯು ಒಜ್ಜಿ ಪುಸ್ತಕಗಳನ್ನು ಓದಿದರೆ ಏನೂ ಪ್ರಯೋಜನವಿಲ್ಲ. ಭಕ್ತಿ-ಜ್ಞಾ-ಕ್ರಿ ಗಳೆಲ್ಲ ಕೂಡಿ ಸಾಗಬೇಕು. ಬರೇ ಪುಸ್ತಕ ಓದಿದವನು ಬರೇ ಪಂಡಿತ ನಾಗುವನು. ಪಂಡಿತನಿಗೂ ಜ್ಞಾನಿಗೂ ಮಹದಂತರವಿದೆ, ಪಂಡಿತನು ಮೆದುಳಿನಲ್ಲಿ ಓದಿ ಓದಿ ಪುಸ್ತಕಗಳನ್ನು ತುಂಬ ಇವನು. ಜ್ಞಾನಿ ಹೃದಯ ಕಮಲವನ್ನೇ ಅರಳಿಸಿರುವನು. ಹೃದಯವೇ ಜ್ಞಾನದ ಆಗರ ಕೂರತು ಮೆದುಳು ಅಲ್ಲ. ಪಂಡಿತನಿಗೂ ಜ್ಞಾನಿಗೂ ಮಹದಂತರವಿದೆ. ಪಂಡಿತನು ಕೊಪ್ಪು ಹೆಣ್ಣು ವಣ್ಣು ತೋರಿಯಬೇಕು. ಬ್ರಹ್ಮಚರ್ಯ ಪಾಲನ ಮಾಡ ಬೇಕೆಂದು ಕೀರ್ತನ ಪುರಾಣ ಉಪನ್ಯಾಸಗಳನೇಕ ಮಾಡಬಹುದು. ಹಲ ವಾರು ಪುಸ್ತಕಗಳನ್ನು ಸಹ ಬರೆಯಬಹುದು. ಆದರೆ ಅವನಿಗೆ ಏನು ಬಂತು ? ಬರೇ ಮಾತಿನ ಮಲ್ಲನೇ ಆದನೇಹೊರತು ಅವನಿಗೆ ನಿಜವಾದ ಪ್ರಾಪ್ತಿ ಇಲ್ಲ. ನಿಜಸುಖವಿಲ್ಲ.

ಈ ಪವಿತ್ರ ಮಾನವ ಜನ್ಮವು ದೇವರ ಅವತಾರವೇ ಹೊರತು ಬೇರೆ ಇಲ್ಲ. ಇದನ್ನರಿಯದೆ ಸಿಕ್ಕದ್ದನ್ನು ಮಾಡಿ ವ್ಯರ್ಥ ಹಾಳಾಗುವದು ತಿಳಿದವ ರಿಗೆ ಎಷ್ಟೂ ಮಾತ್ರವೂ ಸರಿಯಲ್ಲ. ಯಾರು ಹೊಗಳಿದರೂ ತೆಗಳಿದರೂ ಹಳಿದರೂ ಹೀಯಾಳಿಸಿದರೂ ಅದನ್ನು ಲಕ್ಷಿಸದೆ ತನ್ನ ಗುರಿಯ ಕಡೆಗೆ ವೀರಾವೇಶದಿಂದ ಎಂಥ ಸಂಕಟ ಬಂದರೂ ಹಿಂಜರಿಯದೆ ಸಾವಧಾನದಿಂದ ಸಾಗುವನು. ಅಂಥವನನ್ನು ಯಾವದೂ ಹೆದರಿಸುವದಿಲ್ಲ. ಹೀಗಾಗಲಿಕ್ಕೆ ಅವನ ದಿವ್ಯ ಜೀವನದ ಫಲವಲ್ಲದೇ ಮತ್ತೇನು ? ಅಣ್ಣಾ ! ನಾನು ಇದನ್ನು ಜಂಬಕೊಚ್ಚಿಕೊಳ್ಳಲಿಕ್ಕೆ ಬರೆದಿಲ್ಲ. ನನಗೆ ಹಾಗಾಗಿದೆ. ನನಗೆ ಯಾವದೋ ಒಂದು ಅದೃಶ್ಯ ದಿವ್ಯಶಕ್ತಿ ಮಾರ್ಗದರ್ಶಕವಾದಂತೆ ತೋರು ವದು. ದಿನದಿನಕ್ಕೆ ನನ್ನ ಬಲವು ಹೆಚ್ಚಿದಂತೆ ಅನಿಸುವದು. ಯಾವ ಕಠಿಣ ಕೆಲಸವನ್ನಾದರೂ ಸಹಜಮಾಡಬೇಕೆನ್ನುವಂಥ ಹುರುಪಾದ ಹುಮ್ಮಸ

ಉತ್ಸಾಹಗಳು ತಲೆದೋರ ಹತ್ತಿವೆ. ಇದರ ರುಚಿಸವಿಗಳು ಬೇರೆಯಾಗಿವೆ. ಯಾವ ಐಹಿಕ ಅಡಚಣಿಗಳು ನನ್ನನ್ನು ಇದರಿಂದ ಬಿಡಿಸಲಾರವು.

ಅಣ್ಣಾ! ಈ ಜಗತ್ತಿನಲ್ಲಿ ಬೋಗಿಸದವರಾರು ಉಣ್ಣದವರಾರು. ಆಶಿಸದವರಾರು? ಕಾಮಿಸದವರಾರು? ನೋಡದವರಾರು? ಉಡದವರಾರು? ತೊಡದವರಾರು? ಎಲ್ಲರಿಗೂ ಇದು ಸಹಜ ಸ್ವಾಭಾವಿಕ. ಇದು ಸೃಷ್ಟಿಯ ಧರ್ಮ. ಈ ಜಗತ್ತೇ ಇವುಗಳಿಂದ ಕಟ್ಟಿಬಿದ್ದಿದೆ. ಎಲ್ಲರೂ ಇವುಗಳಿಗೆ ಬದ್ಧರೇ ಸರಿ. ಸೃಷ್ಟಿಯಂತೆ ಮನಸ್ಸಿನ ಒಲವಿನಂತೆ ಹರಿಯುವದು ಯಾವ ದೊಡ್ಡ ಮಾತು? ಇವುಗಳ ಕಡೆಗೆ ನಾವು ಹರಿದರೆ ಸೃಷ್ಟಿಯಾಗಿ ಬಿಡುವೆವು. ಸೃಷ್ಟಿಯಾಗುವದು ನಮ್ಮ ಧರ್ಮವಲ್ಲ. ದೇವನಾಗುವದು ನಮ್ಮ ಧರ್ಮ. ನಮ್ಮ ಒಳಗಿನ ಚಿದಾತ್ಮನಾಗುವದೇ ನಮ್ಮ ಧರ್ಮ. ಯಾರಿಗಾದರೂ ಸೃಷ್ಟಿಯಂತೆ (ಮನಸ್ಸಿನಂತೆ) ಹರಿಯಲಿಕ್ಕೆ ಬರುತ್ತದೆ. ಇದು ಯಾವ ದೊಡ್ಡ ಮಾತು? ಹೊಳೆಯಲ್ಲಿ ಪ್ರವಾಹದ ಗುಂಟ ಈಸುವದು ಹರಿಯುವದು ಯಾವ ದೊಡ್ಡ ಮಾತು? ದಂಟು ಕಸ ಕಡ್ಡಿ ಕಟ್ಟಿಗೆ ಮೊದಲಾದವುಗಳು ಈಸುವದಿಲ್ಲವೆ? ಹೊಳೆಯಲ್ಲಿ ವಿರುದ್ಧ ದಿಕ್ಕಿಗೆ ಈಸಿದರೇನೆ ಅವನ ಬಂಟತನ ಪ್ರಕಟವಾಗುವದು. ಅವನೇ ನರಸಿಂಹನು ನರೋತ್ತಮನು. ಜಗತ್ತು ಹುಟ್ಟಿದಂದಿನಿಂದ ಇಲ್ಲಿಯ ವರೆಗೆ ಕೋಟ್ಯಾನುಕೋಟಿಗಟ್ಟಲೆ ಜನ್ಮವೆತ್ತಿರುವರು. ಆದರೆ ಅವುಗಳಲ್ಲಿ ವಿರುದ್ಧ ದಿಕ್ಕಿಗೆ ಈಸಿ ಹರಿದು ಹೋಗಿ ಎಷ್ಟು ಜನರು ಕೀರ್ತಿ ಶಾಲಿಗಳಾಗಿದ್ದಾರೆ, ವಿಚಾರಿಸಿರಿ. ಅವರು ಚುಕ್ಕಿಗಳಲ್ಲಿ ಚಂದ್ರನಂತೆ ಅತಿ ಸ್ವಲ್ಪೇ ಜನರಿದ್ದಾರೆ. ಎಲ್ಲರೂ ಜೀವಿಗಳು, ಎಲ್ಲರೂ ಶರೀರ ಧಾರಿಗಳು. ಎಲ್ಲರೂ ಕರ್ಮಕ್ಕೆ ಒದ್ದರೆ ಆದರೆ ಅವರ ಪ್ರಕಾಶಕ್ಕೂ ಇವರದಕ್ಕೂ ಮಹದಂತರವಿದೆ. ಅವರ ಬೆಳಕು ಇನ್ನೂ ಬೆಳಗುತ್ತದೆ. ನಾವೆಲ್ಲರೂ ಜೀವಿಸುವದಾದರೂ ಯಾರ ಬೆಳಕಿನಲ್ಲಿ? ಅಂಥ ಮಹಾ ಮಹಾ ವ್ಯಕ್ತಿಗಳ ಜ್ಯೋತಿಯಲ್ಲಿ ಅಲ್ಲವೆ? ಅವರ ಜ್ಯೋತಿ ಎಂದೂ ನಂದುವಂತಿಲ್ಲ. ನಂದಿಸಲಿಕ್ಕೆ ಯತ್ನಿಸಿದರೂ ನಂದುವದಿಲ್ಲ. ಇಂಥ ಬೆಳಕನ್ನು ಇಂಥ ತೇಜಸ್ಸನ್ನು ಗಳಿಸುವದು ಹೆಚ್ಚಿನದಲ್ಲವೇ? ಆ ಬೆಳಕು ಆ ಶಕ್ತಿ ತ್ಯಾಗದಲ್ಲಿ ಇದೆ ಹೊರತು ಭೋಗದಲ್ಲಿ ಇಲ್ಲ. ಸಿಂಗರಿಸಿದ ಮೇಲುಮಾಡೆಗಳಲ್ಲಿ ಇದ್ದು, ಧನಕನಕದಲ್ಲಿ ಲೋಲಾಡಿ, ಹೆಂಡರು ಮಕ್ಕಳಲ್ಲಿ ಆಸಕ್ತಿ ಇಟ್ಟು, ಸುಗ್ರಾಸಭೋಜನಮಾಡಿ ಮೃದುತಲ್ಪದಲ್ಲಿ ಮನಬಂದಂತೆ ಮಲಗಿ ಕಾಮ ಕೇಳಿಯನ್ನಾಡಿ ರಥ ಮೋಟಾರುಗಳಲ್ಲಿ ಮೆರೆದು

ಹೋದವರು ಹಿಂದಕ್ಕೆ ಏನಾದರೂ ದೇಶಕ್ಕೆ ಉಪಯೋಗ ಮಾಡಿದ್ದಾರೇನು? ಈಗ ಏನಾದರೂ ಅವರು ಕಲ್ಯಾಣ ಮಾಡುವರೇನು? ಅವರಿಂದ ಏನು ಆಗಬಲ್ಲುದ? ಆದರೆ ಅದೇ ಮುರುಕ ಗುಡಿಸಲಿನಲ್ಲಿ ಬಾಳಿ, ಕರಕ ರೊಟ್ಟೀತಿಂದು. ಹರಕ ಬಟ್ಟೀ ಹೊದ್ದುಕೊಂಡಂಥ ತ್ಯಾಗಿಯೋಗಿಗಳು ಜಗತ್ತಿಗೆ ಹಿಂದಕ್ಕೆ ಕಲ್ಯಾಣ ಎಷ್ಟು ಮಾಡಿದ್ದಾರೆ? ಈಗ ಏನು ಮಾಡುತ್ತಿದ್ದಾರೆ? ವಿಚಾರಿಸಿರಿ. ಇವರಿಗೆ ಯಾವ ಹೊರಗಿನ ಶಕ್ತಿಗಳೂ ಬೇಕಾಗಿಲ್ಲ. ಹೊರಗೆ ಹರಿಯುವವರು ಪತಂಗಗಳು ದೀಪದಲ್ಲಿ ಸುಖವಿದೆ ಎಂದು ಅದನ್ನು ಅಪ್ಪಿ ಪಟಪಟಸಾಯುವಂತೆ ಐಹಿಕ ವಿಷಯಗಳಿಗೆ ಸಾಯುತ್ತಿರುವರು. ಜೀವನದ ಗುರಿಯನ್ನು ಅರಿಯದೆ ರಾತ್ರಿಕಂಡ ಬಾವಿಯಲ್ಲಿ ಹಗಲು ಬೀಳುವದು ಒಳಿತೇ ಹೇಗೆ ವಿಚಾರಿಸಿರಿ. ತ್ಯಾಗಿಗಳು ತಮ್ಮಲ್ಲಿಯೇ ಅನಂತ ಶಕ್ತಿಯ ಝುರಿಗಳನ್ನು ಕಂಡುಕೊಂಡು ಅಗಾಧವಾದ ಕಾರ್ಯಗಳನ್ನು ಲೋಕಹಿತಕ್ಕಾಗಿ ಮಾಡುವರಲ್ಲವೆ? ಇಂಥವರಿಗೆ ಯಾವುದರ ಕೊರತೆ ಹೇಳಿರಿ ನೋಡುವಾ?

ಈ ಜಗತ್ತಿನಲ್ಲಿ ಚಲೋ ಕೆಡಕು (Good-Bad) ಎಂಬವುಗಳು ಸಮಪ್ರಮಾಣದಲ್ಲಿ ಇರುವವು. ಕತ್ತಲೆ ಬೆಳಕಿನಂತೆ ಇಲ್ಲಿಂದ ಕತ್ತಲೆಯನ್ನು ಹೊಡಬೇಕೆಂದರೆ ಮತ್ತೊಂದು ಕಡೆ ಹೋಗುವದು. ಇತ್ತ ಕೆಲವರಿಗೆ ಹಿತವಾದರೆ ಅತ್ತ ಕೆಲವರಿಗೆ ಅಹಿತವಾಗುವದು. ಒಂದೇಕಾಲಕ್ಕೆ ಒಂದೇ ದೇಶದಲ್ಲಿ ಒಂದೇ ಪರಿಸ್ಥಿತಿಯಲ್ಲಿ ಎಲ್ಲರಿಗೂ ಹಿತವಾಗುವಂಥ ಒಂದೇ ಕೆಲಸವು ಇಲ್ಲವೇ ಇಲ್ಲ. ಕೆಲವರಿಗೆ ಸುಖ ಕೆಲವರಿಗೆ ದುಃಖ ಆಗುವದ ಅದೇ ಕೆಲಸದಿಂದ. ಈ ಜಗತ್ತು ಒಂದಗೂಡು ಒಳಿತು—ಕೆಡಕುಗಳು ಯಾವಾಗಲೂ ಅಷ್ಟೇ ಇರುವವು. ಒಬ್ಬರಿಗೆ ಸಮಾಧಾನ ಮಾಡಲಿಕ್ಕೆ ಹೋದರೆ ಮತ್ತೊಬ್ಬರಿಗೆ ದುಃಖ. ಇದು ಈ ಜಗದ ಕೌತುಕ ನಿಯಮವೇ ಸರಿ. ಸುಖದುಃಖಗಳೆರಡನ್ನೂ ಕಟ್ಟಿ ಬಡಿದರೆ ತೀರಿತು. ಅವನೇ ಈ ಜಗತ್ತನ್ನು ಗೆದ್ದಂತ ಯಿತು. ಈಗ ನಾನು ಹೆಂಡತಿಯನ್ನು ಬಿಟ್ಟು ತ್ಯಾಗಿಯಾಗಿ ದೇವದೇವನ ದಿವ್ಯ ದರ್ಶನ ಪಡೆಯಬೇಕೆಂದು ನನ್ನ ಆಶೆ. ಇದೇ ನನಗೆ ಸುಖ. ಆದರೆ ಹೆಂಡತಿಗೆ ಸಂಸಾರದ ಚಿಂತೆ, ಮಕ್ಕಳ ಹಡೆಯುವ ಹಂಬಲ. ತಾಯಿಗೆ ಮೊಮ್ಮಕ್ಕಳನ್ನು ಎತ್ತಿ ಮುದ್ದಾಡುವ ಬಯಕೆ. ನಿಮಗೆ ನನ್ನ ಹೆಂಡತಿಯ ಗೋಳಾಟದ ಚಿಂತೆ. ಯಾರೇನು ಮಾಡುವದು? ನಾನೇನು ಕೆಟ್ಟ ಕೆಲಸಕ್ಕೆ ಹೊರಟಿಲ್ಲ.

ನನ್ನ ಉದ್ಧಾರ ಮತ್ತು ನಿಮ್ಮೆಲ್ಲರ ಉದ್ಧಾರದ ಸಲುವಾಗಿ ನಾನು ಹೊರಟಿದ್ದೇನೆ. ನನಗೆ ಶ್ರೀಯುತ ಜಯಮಾಲೆಯನ್ನು ಹಾರೈಸಿಂದು ನಿಮ್ಮೆಲ್ಲರ ಒಂದಾದ ಬಯಕೆ ಇರಬೇಕು. ನಮ್ಮ ವಂಶದಲ್ಲಿ ಇಲ್ಲಿಯ ವರೆಗೆ ತಮ್ಮ ಋಷಿಗಳೇ ಆಗಿ ಹೋಗಿದ್ದಾರೆ. ಆದರೆ ತ್ಯಾಗಿಗಳಾರೂ ಆದಂತೆ ತೋರುವದಿಲ್ಲ. ಅದಕ್ಕೆ ಅದರ ಕಡೆಗೆ ಹೋಗಬೇಕೆಂದು ಏಕೆ ಹೇಳಬಾರದು? ಮತ್ತು ನನ್ನ ಕೈಹಿಡಿದವಳಿಗೂ ಇದರ ಬಗ್ಗೆ ತಿಳಿಸಿ ಸಮಾಧಾನ ಪಡಿಸಬಾರದೇಕೆ? ಇದು ನಿಮ್ಮ ಕರ್ತವ್ಯವೇ ಸರಿ.

ಆ ಒಂದು ವ್ಯಕ್ತಿ (ಹೆಂಡತಿ) ಗಾಗಿ ನನ್ನ ಅನಂತವಾದ ಸುಖ ಶಾಂತಿಗಳ ಕಡೆಗೆ ಹೋಗುವದನ್ನು ನಿಲ್ಲಿಸುವದರಿಂದ ಎಲ್ಲರಿಗೂ ಹಾನಿಯೇ ಸರಿ. ಆ ಒಂದು ವ್ಯಕ್ತಿಯಿಂದ ಆಗುವದಾದರೂ ಏನು? ವಿಷಯ ಸುಖ ಕ್ಷಣಿಕವಲ್ಲವೆ? ಅವಳೂ ತ್ಯಾಗಿಯಾಗಿ ಯೋಗಿಯಾಗಿ ಯಾಕೆ ಬಾಳಬಾರದು? ಇಂದ್ರಿಯ ನಿಗ್ರಹ ಯಾಕೆ ಮಾಡಬಾರದು ? ನನಗೆ ಯಾರೂ ಕಲಿಸಿಲ್ಲ. ಆ ದೇವ ದೇವನ ಅಂತಃಕರಣೆಯಿಂದ ಇದೆಲ್ಲ ಸಾಗಿದೆ. ಮುಂದೆ ಎಲ್ಲಿಗೆ ಮುಟ್ಟುವದೋ ನೋಡಬೇಕು? ನನ್ನ ಬಾಳನ್ನು ನನ್ನ ಜೀವಿತವನ್ನು ನೋಡಿ ವಿಷಯದಲ್ಲಿ ಆಶೆಯನ್ನಿಡದೆ ಯಾಕೆ ಬಾಳಬಾರದು? ಆದೇವ ದೇವನೇ ಅವಳಿಗೂ ಮಾರ್ಗದರ್ಶಕನು. ಆತನೇ ಎಲ್ಲರ ಹಿತಚಿಂತಕನು. ಆತನನ್ನೆ ನಂಬಿದರೆ ಸರ್ವವೂ ಸುಗಮವಾಗಿ ಸಾಗುವದು. ಭಗವದ್ಗೀತೆಯಲ್ಲಿ- "ಮನವನ್ನು ನನ್ನಲ್ಲಿ ನೆಲಿಸು. ನನ್ನ ಭಕ್ತನಾಗು. ನನ್ನನ್ನು ಪೂಜಿಸು. ನನಗೆ ನಮಸ್ಕಾರಮಾಡು. ಅಂದರೆ ನೀನು ನನ್ನಲ್ಲಿಗೆ ಬರುವಿ ಎಂದು ಪ್ರತಿಜ್ಞಾಪೂರ್ವಕ ಹೇಳುತ್ತೇನೆ. ಯಾಕಂದರೆ ನೀನು ನನಗೆ ಪ್ರಿಯನು ಸರ್ವ ಧರ್ಮಗಳನ್ನು ಬಿಟ್ಟು ನನ್ನೊಬ್ಬನಿಗೇ ಶರಣು ಬಾ. ನಾನು ನಿನ್ನನ್ನು ಸರ್ವಪಾಪಗಳಿಂದ ಮುಕ್ತಮಾಡುತ್ತೇನೆ. ನಿನ್ನ ಯಾವತ್ತೂ ಯೋಗಕ್ಷೇಮಗಳನ್ನು ನೋಡಿಕೊಳ್ಳುತ್ತೇನೆ. ಯೋಚಿಸಬೇಡ" ಎಂದು ಶ್ರೀ ಕೃಷ್ಣನು ವಚನಕೊಟ್ಟಿದ್ದಾನೆ. ಇದರ ಮೇಲಿಂದ ಪರಮಾತ್ಮನಿಗೆ ಶರಣು ಹೋಗುವದು ಎಷ್ಟು ಮಹತ್ವವೆಂದು ಗೊತ್ತಾಗುವದು. ಬೇಕಾದವರು ಪೂಜ್ಯರಾಗುವರು. ಜಪಧ್ಯಾನಗಳು ಸದಾ ಅಂತಃಕರಣದಿಂದ ಬರಬೇಕು. ಫಲದ ಮೇಲಿನ ಆಶೆಬಿಟ್ಟು ನಿರ್ದ್ವಂದ್ವನಾಗಿ ಅಂದರೆ ಸುಖದುಃಖಗಳನ್ನು ಸಮವೆಂದು ಬಗೆದು ಪರಹಿತದ ಕಾರ್ಯಮಾಡಿದರಾಯಿತು. ಎಲ್ಲವೂ ತಾನೇ

ಆಗುವದು. ಇವಳಿಗೂ ಇದರಂತೆ ಯಾಕಾಗಬಾರದು? ಉಳಿದ ಹೆಂಗಸರಂತೆ ಅವಳಿಗೂ ದೇವರು ತ್ಯಾಗ ಧರ್ಮ ಸತ್ಯ ಸೇವೆಗಳೆಂದರೆ ತಲೆ ಏರುವದು. ನೀವು ಕಲಿಸೆನ್ನಬಹುದು. ಇನ್ನೂ ನಾನೇ ಕಲಿಯುವದೇ ನಡೆದಿದೆ. ಅವಳಿಗೇನು ಕಲಿಸಲಿ? ಈ ವಿಷಯ ಬಹು ಕಠಿಣ. ಕುಳ್ಳಿ ಮಾಡಲಿಕ್ಕೆ ಬರಲಾರದವಳಿಗೆ ರಂಜಣಿಗೆ ಸುರುಮಾಡಿದಂತೆ ಆಗುವದು. ಇದು ನಿರ್ಮಲವಾದ ಶುದ್ಧ ಮನಸ್ಸಿಗೆ ಸ್ವಲ್ಪ ಹೊಳೆಯುವದು. ತ್ಯಾಗ ವೈರಾಗ್ಯದ ಹೊರತು ಎಂದೂ ತಿಳಿಯುವದಿಲ್ಲ.

ತುಕಾರಾಮ ಅಸಾಧಾರಣ ಜ್ಞಾನಿ. ಸಹಿಬರುತ್ತಿರಲಿಲ್ಲ. ಧ್ಯಾನದಿಂದ ಅವನಿಗೆ ದಿವ್ಯ ದೃಷ್ಟಿಬಂತು. ಆದರೆ ಅವನ ಹೆಂಡತಿ ಚಂಡಿಯಂತೆ ಕಲ್ಲುಬಂಡಿಯಾಗಿಯೇ ಉಳಿದಳಲ್ಲವೆ? ಇದರಲ್ಲಿ ಅವಳಿಗೆ ತನ್ನೊಲೆ ಇರಲಿಲ್ಲ. ತನ್ನ ಹಾದಿಗೆ ತರಲು ಅವನಿಗೆ ಆಗಲಿಲ್ಲ. ಹೀಗಿದ್ದ ಈ ವಿಷಯವನ್ನು ಅವರು ಕಲಿಯುವದಂತೂ ದೂರೇ ಉಳಿಯಿತು. ಎಷ್ಟುಜನ ಸತ್ಯಕ್ಕಾಗಿ ದೇವನಿಗಾಗಿ ಹೆಂಡತಿಯನ್ನು ಬಿಟ್ಟು ಹೊದರು ನೋಡಿರಿ. ಭರ್ತೃಹರಿ ಏನು ಮಾಡಿದನು? ತುಲಸಿದಾಸನನ್ನು ನೋಡಿರಿ. ರಾಮದಾಸ ಅಕ್ಷತೆಬೀಳಲು ಓಡಿಹೋದನು. ಬುದ್ಧನು ೨೯ನೇ ವರ್ಷಕ್ಕೆ ಮಲಗಿದ ಮಗುವನ್ನು ಹೆಂಡತಿಯನ್ನು ಬಿಟ್ಟು ಅಡವಿಸೇರಿದನಲ್ಲವೇ? ಅರವಿಂದ ಘೋಷನನ್ನು ನೋಡಿರಿ ರಾಮಕೃಷ್ಣ ಪರಮಹಂಸರು ಹೆಂಡತಿಯನ್ನು ಪೂಜಿಸಿದರು. ಅಕ್ಕಮಹಾದೇವಿ ಕೌಶಿಕನನ್ನು ಬಿಟ್ಟು ಅರಣ್ಯವಾಸಿಯಾದಳು. ಮೀರಾಬಾಯಿ ಗಂಡನನ್ನು ಬಿಟ್ಟಳು. ಅನೇಕರು ಏನುಮಾಡಿದರೆಂದು ವಿಚಾರಿಸಿರಿ. ನಮಗೆ ಒಂದೇ ಕಾಲಕ್ಕೆ ನೆರಳೂ ಬಿಸಿಲೂ ಕೂಡಿ ಸಿಗುವದಿಲ್ಲ. ಇಹಸಿಕ್ಕರೆ ಪರ ಇಲ್ಲ. ಎರಡೂ ಒಂದಕ್ಕೊಂದು ವಿರುದ್ಧ ದಿಕ್ಕಿನಲ್ಲಿ ಇರುತವು. ಉತ್ತರ ದಕ್ಷಿಣ ಧ್ರುವಗಳನ್ನು ಕೂಡಿಸಲು ಶಕ್ಯವಿಲ್ಲ. ದೇವನನ್ನು ಕಾಣುವದು ಜನರಿಗೆ ಬಲುಬಿಗಿಯೆಂದು ಹೇಳುವರು. ಆದರೆ ಅದು ಸುಳ್ಳೆಂದು ನಾನು ಹೇಳುವೆನು. ಎಲ್ಲ ಯೋಗಗಳೂ ಎಲ್ಲ ಸಾಧನಗಳೂ ತ್ಯಾಗ ವೈರಾಗ್ಯ ಜಪತಪಗಳೂ ಬರೆ ಮನವನ್ನು ಗೆದ್ದು ನಿಲಿಸು ಲೀನಗೊಳಿಸೆಂದೇ ಹೇಳುತವು. ಒಟ್ಟಿನಮೇಲೆ ನನ್ನ ಮನೋವಾಕ್ಯಗಳು ಮಾತಾಡಲಿಕ್ಕೆ ಹತ್ತಿವೆ.

ಇಂತೀ ವಂದನೆಗಳು.

ಸಂಪುಟ ೨೯ ಸಂಚಿಕೆ ೪



# ಶಿವಾನುಭವ



॥ ಸಂಪಾದಕರು ॥
ಫ. ಗು. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ.



ವಾ. ಚ. ೫-೧೨-೦] ವಿಜಾಪೂರ [ಎಪ್ರೇಲ ೧೯೫೫

# ವಿಷಯಾನುಕ್ರಮಣಿಕೆ



# ಶಿವಾನುಭವ

ಸಂಪುಟ ೨೯ | ಎಪ್ರೀಲ ೧೯೫೫ | ಸಂಚಿಕೆ ೪.

## -ಷಡ್ಲಿಂಗಗಳ ವಿವರ-

( ಲೇಖಕ ಶ್ರೀ. ಕಲ್ಯಾಣಪ್ಪ ಬ್ಯಾಳಿ ಹುನಗುಂದ )

ಆತ್ಮೋದ್ಧಾರಕ್ಕಾಗಿ ಭಿನ್ನ ಭಿನ್ನ ಮತಗಳು ಬೇರೆಬೇರೆ ಮಾರ್ಗಗಳನ್ನು ಕಲ್ಪಿಸಿರುತ್ತವೆ. ಅದರಂತೆ ವೀರಶೈವ ಮತವು ತನು-ಮನ-ಭಾವ ಸಂಸ್ಕೃತಿಯೇ ನಿಜವಾದ ಆತ್ಮೋದ್ಧಾರವೆಂದು ಹೇಳುತ್ತದೆ. ತನು ಸಂಸ್ಕೃತಿಯು ಇಷ್ಟಲಿಂಗ ಪೂಜೆಯಿಂದಲೂ, ಮನ ಸಂಸ್ಕೃತಿಯು ಪ್ರಾಣಲಿಂಗಾನುಸಂಧಾನದಿಂದಲೂ, ಭಾವ ಸಂಸ್ಕೃತಿಯು ಭಾವಲಿಂಗ ಸಾಮರಸ್ಯದಿಂದಲೂ ಸಾಧಿಸುತ್ತವೆಂದು ನಮ್ಮವರ ಅಭಿಪ್ರಾಯ. ತನು ಬಿಟ್ಟು ಮನವಿಲ್ಲ, ಮನಬಿಟ್ಟು ಭಾವವಿಲ್ಲ. ಅವು ಒಂದಕ್ಕೊಂದು ಹೊಂದಿಕೊಂಡಿವೆ. ತನು ಮನಭಾವವುಳ್ಳಾತನೇ ಜೀವನು, ಅಂಗನು ಅಥವಾ ಪಿಂಡಾಂಡಿಯು. ತನು ಸಂಸ್ಕೃತಿಗೆ ಇಷ್ಟಲಿಂಗವೂ, ಮನ ಸಂಸ್ಕೃತಿಗೆ ಪ್ರಾಣಲಿಂಗವೂ, ಭಾವ ಸಂಸ್ಕೃತಿಗೆ ಭಾವಲಿಂಗವೂ ಅತ್ಯಾವಶ್ಯಕ ಸಾಧನಗಳಗಿರುತ್ತವೆ. ಆದರೆ ಇವು ಮೂರು ಭಿನ್ನ ಲಿಂಗಗಳಲ್ಲ. ಕರಸ್ಥಲದಲ್ಲಿ ಪೂಜಿಸುವ ಇಷ್ಟವೇ ಉರಸ್ಥಲದಲ್ಲಿ ಪ್ರಾಣಲಿಂಗವೆನಿಸಿದೆ. ಶಿರಸ್ಥಲದಲ್ಲಿ ಭಾವಲಿಂಗವೆನಿಸಿದೆ. ಇಷ್ಟ ಪ್ರಾಣ ಭಾವ ಲಿಂಗಪೂಜೆಯು ಏಕಕಾಲಕ್ಕೆ ನಡೆಯುವದೇ ಪೂರ್ಣ ಲಿಂಗ ಪೂಜೆಯೆನಿಸುತ್ತದೆ.

ಬಾಹ್ಯದಲ್ಲಿ ಮಾಡುವ ಸ್ನಾನ ಅಷ್ಟ ವಿಧಾರ್ಚನೆಗಳು ಮನಶುದ್ಧಿಗಾಗಿಯೇ ಇವೆ. ಆ ಮನಶುದ್ಧಿಯಿಂದ ಮಾಡುವ ಮಾನಸಪೂಜೆಯು ಭಾವಶುದ್ಧಿಗಾಗಿಯೇ ನೇರ್ಪಟ್ಟಿದೆ. ಭಾವಸಂಶುದ್ಧಿಯಿಂದಲೇ ಪರವಸ್ತುವಿನಲ್ಲಿ ತಾದಾತ್ಮ್ಯ ಅಥವಾ ತಲ್ಲೀನತೆಯುಂಟಾಗುತ್ತದೆ. ಇದಕ್ಕೇ ನಮ್ಮವರು ಸಾಮರಸ್ಯವೆಂಬ ಬೇರೆ ಹೆಸರಿನಿಂದ ಕರೆದಿರುವರು. ಆದ್ದರಿಂದ

ಕರಸ್ಥಲದಲ್ಲಿ ಮಾಟಭಕ್ತಿ, ಉರಸ್ಥಲದಲ್ಲಿ ನೋಟಭಕ್ತಿ, ಶಿರಸ್ಥಲದಲ್ಲಿ ಕೂಟಭಕ್ತಿಯನ್ನಾಚರಿಸುವದೇ ನಿಜವಾದ ಲಿಂಗಪೂಜೆಯು. ಆದರೆ ಕೇವಲ ಬಹಿರಂಗದಲ್ಲಿ ಮಾಡುವ ಪೂಜೆಯು ಢಾಂಬಿಕ ಪೂಜೆಯೆನಿಸುವದು. ಇದಕ್ಕೆ ಸಾಕಷ್ಟು ಫಲಪ್ರಾಪ್ತಿಯಾಗಲಾರದು.

ಇಷ್ಟಲಿಂಗವು ಕ್ರಿಯಾಭೇದದಿಂದ ಆಚಾರಲಿಂಗ ಗುರುಲಿಂಗವೆಂದೂ ಪ್ರಾಣಲಿಂಗವು ಶಿವಲಿಂಗ, ಜಂಗಮಲಿಂಗವೆಂದೂ, ಭಾವಲಿಂಗವು ಪ್ರಸಾದ ಲಿಂಗ ಮಹಾಲಿಂಗವೆಂದೂ ಎರಡೆರಡು ತೆರನಾಗಿರುವವು. ಆಚಾರಲಿಂಗ ಗುರುಲಿಂಗಗಳೆರಡು ಸ್ಥೂಲತನುವಿನ ಸಂಸ್ಕೃತಿಗಾಗಿ ನೇಮಿಸಲ್ಪಟ್ಟಿವೆ. ಶಿವಲಿಂಗ ಜಂಗಮಲಿಂಗಗಳೆರಡೂ ಸೂಕ್ಷ್ಮತನುವೆನಿಸಿದ ಮನಸ್ಸಿನ ಸಂಸ್ಕೃತಿಗಾಗಿ ಕಲ್ಪಿಸಲ್ಪಟ್ಟಿವೆ. ಪ್ರಸಾದಲಿಂಗ ಮಹಾಲಿಂಗಗಳೆರಡೂ ಕಾರಣಶರೀರವೆನಿಸಿದ ಭಾವದ ಸಂಸ್ಕೃತಿಗೆ ಗ್ರಹಿಸಲ್ಪಟ್ಟಿವೆ. ತನು-ಮನ-ಭಾವ ಸಂಸ್ಕೃತಿಯೇ ನಿಜವಾದ ಶಿವಾನುಭವವು. ಶಿವಾನುಭವವೆಂದರೆ ಕೇವಲ ಜ್ಞಾನವಲ್ಲ. ಅಥವಾ ಕೇವಲ ಕ್ರಿಯೆಯಲ್ಲ. ಆದರೆ ಕ್ರಿಯಾ ಜ್ಞಾನ ಸಮುಚ್ಚಯವು.

ಇಷ್ಟಲಿಂಗವು ಆಚಾರಲಿಂಗ-ಗುರುಲಿಂಗವೆಂದು ಎರಡುತೆರನಾಗಿರುವದೆಂದು ಮೇಲೆ ಹೇಳಿದೆಯಷ್ಟೇ. ಇಷ್ಟಲಿಂಗವು ಇಡೀ ಸ್ಥೂಲ ತನುವಿಗೆ ಸಂಬಂಧಿಸಿದಾಗ ಅದರ ರಕ್ಷಣೆ ಪೋಷಣೆಗಾಗಿ ಆಚಾರಲಿಂಗ, ಗುರುಲಿಂಗಗಳು ನೇರ್ಪಟ್ಟಿವೆ. ಅದು ಹೇಗೆಂದರೆ ಆಚಾರಲಿಂಗವೇ ಮೂಗು, ಗುರುಲಿಂಗವೇ ನಾಲಿಗೆಯೆಂದು ಹೇಳಿದ್ದಾರೆ. ಮೂಗು ವಾಯುವನ್ನು ಸೇವಿಸುವದರಿಂದ ಶರೀರವು ಬಾಳುತ್ತದೆ. ಶ್ವಾಸೋಚ್ಛ್ವಾಸದಿಂದ ಶುದ್ಧ ಹವೆಯು ಒಳಸೇರಿ, ಅಶುದ್ಧ ಹವೆಯು ಹೊರಗೆ ಹೋಗುತ್ತದೆ. ಶುದ್ಧ ಹವೆಯಿಂದ ರಕ್ತ ವೀರ್ಯಗಳೂ ಪುಪ್ಪುಸಗಳೂ ಸ್ವಚ್ಛವಾಗುತ್ತವೆ. ಹವೆಯ ಒತ್ತಡದಿಂದ ಮಲವು ಗುದದ್ವಾರದಿಂದ ಹೊರಹೊಮ್ಮುತ್ತದೆ. ನಾಸಿಕವು ಪ್ರಾಣವಾಯುವನ್ನು ಸ್ವೀಕರಿಸುತ್ತದೆ. ಗುದವು ಅಪಾನ ವಾಯುವನ್ನು ವಿಸರ್ಜಿಸುತ್ತದೆ. ವಾಯುವು ಪ್ರಾಣಧಾರಣೆಗೆ ಅತ್ಯಾವಶ್ಯಕ. ಕೂಳು ನೀರಿಲ್ಲದೆ ಕೆಲವು ದಿನ ನಾವು ಬಾಳಬಹುದು. ಆದರೆ ವಾಯುವನ್ನು ಬಿಟ್ಟು ನಾವು ಅರಗಳಿಗೆ ಸಹ ಜೀವಿಸಿರುವದು ಶಕ್ಯವಿಲ್ಲ. ಆದ್ದರಿಂದಲೇ ವಾಯುವು ಜೀವ ಅಥವಾ ಪ್ರಾಣವೆನಿಸಿದೆ. ಸಹಜ ಶ್ವಾಸೋಚ್ಛ್ವಾಸದಿಂದ ಮಾನವ ಯಂತ್ರವು ಕೆಲಸ ಮಾಡುತ್ತದೆ. ನಾಸಿಕ ಎಂಬ ಯಂತ್ರದಿಂದ ಈ ಕೆಲಸ ನಡೆಯುವದರಿಂದ ನಾಸಿಕಕ್ಕೆ ಆಚಾರಲಿಂಗವೆಂಬ ಹೆಸರು ಬಂದಿದೆ. ಆದರೆ

ಇಷ್ಟ ಲಿಂಗ ಪೂಜೆ ನಡೆದಾಗ ಮನಸ್ಸನ್ನು ಏಕಾಗ್ರ ಮಾಡಿ, ಅಂತರ್ಮುಖವಾದಬಳಿಕ ಮನಸ್ಸಿನ ದಿಶೆಯನ್ನು ಪ್ರಾಣಲಿಂಗದ ಕಡೆಗೆ ಅದನ್ನು ಹೊರಳಿಸಬೇಕಾಗುತ್ತದೆ. ಆ ಕಾಲಕ್ಕೆ ನಾವು ಎಷ್ಟು ಕಾಲ ವಾಯುವನ್ನು ಬಂಧಿಸುವೆವೋ ಅಷ್ಟು ಕಾಲ ಅದು ಏಕಾಗ್ರವಾಗುತ್ತದೆ. ವಾಯು ಬಂಧನವಾದಷ್ಟು ಶರೀರವು ದೃಢವಾಗುವದಲ್ಲದೆ ಆಯುಷ್ಯವೂ ವರ್ಧಿಸುತ್ತದೆ. ಶರೀರವು ಬಹಳ ದಿವಸ ಉಳಿದರೇನೇ ಧರ್ಮವನ್ನು ಸಾಧಿಸಲು ಶಕ್ಯವಾಗುತ್ತದೆ. ಆದ್ದರಿಂದಲೇ "ಶರೀರಮಾದ್ಯಂ ಖಲು ಧರ್ಮ ಸಾಧನಂ"ಎಂದು ಹೇಳಿದ್ದಾರೆ. ಯೋಗಶಾಸ್ತ್ರವು ಆಯುಷ್ಯ ವರ್ಧನೆಗಾಗಿ ಪ್ರಾಣಾಯಾಮವನ್ನು ಕಲ್ಪಿಸಿದೆ. ಆದರೆ ಇಷ್ಟ ಲಿಂಗ ಪೂಜೆಯಿಂದ ಪ್ರಾಣಾಯಾಮವೂ ಸಾಧಿಸುವದಲ್ಲದೆ ಶಿವನ ಅನುಗ್ರಹವೂ ಪ್ರಾಪ್ತವಾಗುತ್ತದೆ. ಕಾರಣ ಕೇವಲ ಪ್ರಾಣಾಯಾಮಕ್ಕಿಂತಲೂ ಇಷ್ಟಲಿಂಗ ಪೂಜೆಯು ಹೆಚ್ಚು ಫಲದಾಯಕವಾಗಿರುವದು. ಆದ್ದರಿಂದ ವೀರಶೈವರು ವಾಯುವನ್ನು ನಿಗ್ರಹಿಸುವ ಕೆಲಸವನ್ನು ನಾಸಿಕವು ಮಾಡುವದರಿಂದ ಅದಕ್ಕೆ ಆಚಾರಲಿಂಗವೆಂಬ ಹೆಸರನ್ನು ಕೊಟ್ಟಿದ್ದಾರೆ.

ನಾಸಿಕವು ಆಚಾರಲಿಂಗವಾದರೆ ನಾಲಿಗೆಯು ಗುರುಲಿಂಗವೆನಿಸಿದೆ. ನಾಲಿಗೆಯಿಂದ ಅನ್ನಪಾನ ಕ್ರಿಯೆಗಳು ನಡೆಯುತ್ತವೆ. ಶರೀರ ಧಾರಣೆಗೆ ವಾಯುವು ಅವಶ್ಯವಾದಂತೆ ಅದರ ಪೋಷಣೆಗೆ ಅನ್ನ ನೀರುಗಳೂ ಅವಶ್ಯವಾಗಿವೆ. ಅನ್ನ ನೀರುಗಳನ್ನು ಪಶುಪಕ್ಷಿಗಳಂತೆ ಅಕ್ರಮವಾಗಿ ಸೇವಿಸುವದರಿಂದ ನಾಲಿಗೆಯು ಗುರುಲಿಂಗವೆನಿಸದು. ಮಿತಾಹಾರವನ್ನು ಲಾಲಾರಸ ಸಹಿತ ಸಾವಕಾಶವಾಗಿ ಜಗಿಯುವದು ಶರೀರ ಪೋಷಣೆಗೆ ಅವಶ್ಯವೆಂದು ಆರೋಗ್ಯಶಾಸ್ತ್ರವು ಹೇಳಿದರೆ ಇದಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ ವೀರಶೈವ ತತ್ವವು ಭಕ್ತಿಪೂರ್ವಕವಾಗಿ ನೀರನ್ನು ಪಾದೋದಕವೆಂದೂ ಅನ್ನವನ್ನು ಪ್ರಸಾದವೆಂದೂ ಸಾವಕಾಶವಾಗಿ ಶಿವಧ್ಯಾನಪರರಾಗಿ ಸೇವಿಸಿದರೆ ಅದರಿಂದ ಶರೀರಶಾಸ್ತ್ರಕ್ಕಿಂತಲೂ ಅಧಿಕ ಫಲಗಳಾಗುತ್ತವೆ. ಮೈಯ್ಯಲ್ಲಿ ಕಾಂತಿಯು ಮಿಂಚುತ್ತದೆ. ಅಂಗವು ಲಿಂಗಮಯವಾಗುತ್ತದೆ. ಮಾಂಸಪಿಂಡವು ಮಂತ್ರಪಿಂಡವಾಗುತ್ತದೆ. ತುತ್ತಿಗೊಮ್ಮೆ ಶಿವಾ ಶರಣೆನ್ನುತ್ತ ತೆಗೆದುಕೊಂಡಾಗ ಕರಣವೃತ್ತಿಗಳು ಅಡಗಿಹೋಗುತ್ತವೆ.

ಪ್ರಾಣಲಿಂಗವು ಶಿವಲಿಂಗ— ಜಂಗಮಲಿಂಗ ಎಂದು ಎರಡು ತೆರನಾಗಿರುವದೆಂದು ಮೇಲೆ ಹೇಳಿದೆಯಷ್ಟೇ. ಪ್ರಾಣಲಿಂಗವು ಮನೋವ್ಯಾಪಾರ

ಗಳ ಸಂಸ್ಕಾರ ಮಾಡುತ್ತದೆ. ಮನಸ್ಸಿಗೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ವಿಕಾರಗಳು ಅಂಟಿಕೊಂಡಿರುತ್ತವೆ. ಈ ವಿಕಾರಗಳು ಸಹಜವಾಗಿರುತ್ತವೆ. ಅವನ್ನು ಹತ್ತಿಕ್ಕಲು ಶಕ್ಯವಿಲ್ಲ. ಆದರೆ ಅವುಗಳ ದಿಶೆಯನ್ನು ಮಾತ್ರ ಉದಾತ್ತಗೊಳಿಸುವದು ಶಕ್ಯವಿದೆ. ವೀರಶೈವ ತತ್ವವು ಕಾಮಾದಿ ವಿಕಾರಗಳನ್ನು ಪ್ರತಿಬಂಧಿಸಬೇಕೆಂದು ಹೇಳುವದಿಲ್ಲ. ಅವುಗಳ ದಿಶೆಯನ್ನು ಉದಾತ್ತಗೊಳಿಸಬೇಕೆಂದು ಹೇಳುತ್ತದೆ. ಕಾಮ ವಿಕಾರ ವನ್ನು ಪರಸ್ತ್ರೀಯರ ಕಡೆಗೆ ಹರಿಯಗೊಡದೆ ಸ್ವ ಸ್ತ್ರೀಯಲ್ಲಿ ನೆಲಿಸಿದರೆ ಅಥವಾ 'ಶರಣ ಸತಿ, ಲಿಂಗ ಪತಿ' ಎಂಬ ತತ್ವದಂತೆ ತಾನು ಸತಿಯಾಗಿ ಲಿಂಗವೇ ಪತಿಯಾಗಿ ಆಚರಿಸಿದ್ದಾದರೆ, ಆ ಕಾಮ ವಿಕಾರವು ಉದಾತ್ತ ವಾಗುವದು. ಅದರಂತೆ ಕ್ರೋಧವನ್ನು ಸ್ವಾರ್ಥ ಲಾಭಗಳಿಗಾಗಿ ಉಪ ಯೋಗಿಸಿಕೊಳ್ಳದೆ ದುರ್ಮಾರ್ಗ ದುರಾಚಾರ ಪಾಪಗಳ ಉಚ್ಚಾಟನೆಗಾಗಿ ಉಪಯೋಗಿಸಿಕೊಂಡರೆ ಕ್ರೋಧವು ಉದಾತ್ತವಾಗುವದು. ಇದೇ ರೀತಿ ಯಾಗಿ ಉಳಿದ ವಿಕಾರಗಳನ್ನು ಐಹಿಕ ಲಾಭಗಳಿಗೆ ಉಪಯೋಗಿಸಿದರೆ ಆತ್ಮದ ವಿನಾಶವಾಗುವದು. ಆದರೆ ಅವುಗಳನ್ನು ಆತ್ಮೋದ್ಧಾರಕ್ಕಾಗಿ ಉಪಯೋಗಿಸಿಕೊಂಡರೆ ಅದೇ ಪ್ರಾಣಲಿಂಗಾನುಸಂಧಾನವೆನಿಸುವದು. ಅರ್ಥಾತ್ ಅದೇ ಪ್ರಾಣಲಿಂಗ ಪೂಜೆಯು.

ಶಿವಲಿಂಗವೆಂದರೆ ಕಣ್ಣು. ಕಣ್ಣಿನಿಂದ ಪರಸ್ತ್ರೀ, ಪರದ್ರವ್ಯಾದಿಗಳನ್ನು ನೋಡಿ ಆಶೆಮಾಡದಿರುವದೇ ಮನಸ್ಸಿನ ಸಂಸ್ಕೃತಿ. ಕಣ್ಣು ಎಳೆದತ್ತ ಕಾಲುಗಳು ಹೋಗುವದು ಸ್ವಾಭಾವಿಕ. ದುರ್ವ್ಯಸನ, ದುರ್ವ್ಯಾಪಾರ, ಪಾಪಗಳ ಕಡೆಗೆ ಕಣ್ಣುಗಳ ನೋಟವನ್ನು ಹರಿಬಿಡದೆ ಸದಾಚಾರ, ಲಿಂಗ ನಿರೀಕ್ಷಣೆಯಲ್ಲಿ ನೋಟವನ್ನು ತೊಡಗಿಸಿದರೆ ಆ ಕಣ್ಣೇ ಶಿವಲಿಂಗ ವಾಗುವದು. ಕಣ್ಣುಗಳಿಂದ ಬಾಹ್ಯ ವಿಷಯಗಳ ಜ್ಞಾನವಾಗುವದೇನೋ ನಿಜ. ಆ ಜ್ಞಾನವು ವಿಜ್ಞಾನವೆನಿಸುತ್ತದೆ ಆದರೆ ವೀರಶೈವ ತತ್ವವು ಅದಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ ಭಕ್ತಿಯಿಂದ ಲಿಂಗದಲ್ಲಿ ಏಕಾಗ್ರ ದೃಷ್ಟಿ ಯನ್ನಿರಿಸಿ ನೇತ್ರವನ್ನು ಶಿವಲಿಂಗವನ್ನಾಗಿ ಮಾಡಿದರೆ ಅದರ ಪ್ರಕಾಶದಿಂದ ನಾವು ನೋಡುವ ವಸ್ತುಗಳೆಲ್ಲ ಲಿಂಗಮಯವಾಗಿ ತೋರುವವು. ಪರಸ್ತ್ರೀ ಪರಧನಗಳು ಕೂಡ ಲಿಂಗ ರೂಪಾಗಿ ಕಂಡರೆ ಪಾಪಕ್ಕೆ ಎಡೆಯೇ ಇಲ್ಲ. ಈ ಸಂಸ್ಕಾರ ಪಡೆಯುವದೇ ಶಿವಲಿಂಗ. ಕಣ್ಣು ಪರಿಶುದ್ಧವಾದವರ ಪಾದ ದಿಂದ ಪವಿತ್ರ ಕಿರಣಗಳು ಹೊರಹೊಮ್ಮುತ್ತವೆ. ಅಂಥವರ ಪಾದೋದಕ

ವನ್ನು ಭಕ್ತನು ಸ್ವೀಕರಿಸಿದರೆ ಅವನಲ್ಲಿ ಶಿವಕಾಂತಿಯು ಬೆಳೆದು ದುರ್ಮಾರ್ಗದ ಕಡೆಗೆ ಪ್ರವೃತ್ತಿಯಾಗುವದಿಲ್ಲ.

ಕಣ್ಣು ಶಿವಲಿಂಗವಾದರೆ ತ್ವಚವು ಜಂಗಮಲಿಂಗವೆನಿಸಿಕೊಂಡಿದೆ. ತ್ವಚದ ಗುಣವೆಂದರೆ ಮುಟ್ಟಿ ಭೋಗ ಹೊಂದುವದು. ಸ್ತ್ರೀಯರ ಅಂಗ ಸುಖ, ಚಂದನಾದಿಗಳನ್ನು ತೊಡೆದುಕೊಳ್ಳುವ ಸುಖ, ವಸ್ತ್ರಭೂಷಣಗಳನ್ನು ಮೈಗೆ ಧರಿಸುವ ಸುಖ, ಹಂಸತೂಲಿಕಾ ತಲ್ಪದಲ್ಲಿ ಮಲಗುವ ಸುಖ, ಇವೆಲ್ಲ ಅಂಗಸುಖಗಳು ತ್ವಚಕ್ಕೆ ಸಂಬಂಧಿಸಿವೆ. ಈ ಸುಖಕ್ಕೆ ಮುಟ್ಟಿದ ಸಾಮಾನ್ಯ ಜನರು ಪಾಪಕೃತ್ಯಕ್ಕೆಳಸುವದುಂಟು. ಸುಖೋಪಭೋಗದ ವಸ್ತುಗಳನ್ನು ಕೈಯಿಂದ ಮುಟ್ಟಿ ಮುಟ್ಟಿ ಪಾಪಕ್ಕೆಳಸುವದಕ್ಕಿಂತ ಭಸ್ಮ, ಪತ್ರಿ, ಹೂ, ಧೂಪ, ದೀಪಗಳನ್ನು ಮುಟ್ಟಿ ಕರಸ್ಥಲದಲ್ಲಿ ಲಿಂಗನ್ನು ಮುಟ್ಟಿ ಪೂಜಿಸಿ ಈ ಸುಖದಲ್ಲಿ ಲೋಲಾಡುವದೇ ಜಂಗಮಲಿಂಗ ಪೂಜೆಯು. ಅಂಗೆ ಸುಖಕ್ಕೆ ಸ್ತ್ರೀಸಂಪರ್ಕವಲ್ಲ, ಆದರೆ ಲಿಂಗಪೂಜೆಯೇ ಸರ್ವೋತ್ಕೃಷ್ಟ ಉಪಾಯವು. ತ್ವಚವು ಈ ರೀತಿಯಾಗಿ ಸಂಸ್ಕೃತಿ ಹೊಂದಿದರೆ ಅದೇ ಜಂಗಮಲಿಂಗವೆನಿಸಿಕೊಳ್ಳುತ್ತದೆ. "ಲಿಂಗ ಮುಟ್ಟ ಪೂಜಿಸಿದ ಕೈ ಮಿಸಲು" ಎಂದು ಹೇಳಿರುವದರಿಂದ ಅಪವಿತ್ರ ಹಸ್ತದಿಂದ ಅಪವಿತ್ರ ಕೆಲಸಗಳಾಗಬಾರದಷ್ಟೇ. ಆ ಪವಿತ್ರ ಹಸ್ತವೇ ಪರುಷ ಹಸ್ತ. ಆ ಹಸ್ತವು ಭಕ್ತನ ಮಸ್ತಕದ ಮೇಲಿರಿಸಿದ್ದಾದರೆ ಅದರ ಪವಿತ್ರ ಕಿರಣಗಳು ಒಳಸೇರಿ ಭಕ್ತನ ಅಜ್ಞಾನರೂಪಿ ಕಶ್ಮಲಗಳೆಲ್ಲ ನಾಶವಾಗಿ ಜ್ಞಾನವು ಜಾಗೃತವಾಗುವದು. ಅಂಗಸುಖಕ್ಕಾಗಿ ಹಂಬಲಿಸುವ ತ್ವಚವನ್ನು ಲಿಂಗ ಭೋಗೋಪಭೋಗಿಯಾಗಿ ಮಾಡುವದೇ ಜಂಗಮಲಿಂಗ ಪೂಜೆಯು.

ಭಾವಲಿಂಗವು ಪ್ರಸಾದಲಿಂಗ ಮಹಾಲಿಂಗವೆಂಬೆರಡು ತೆರನಾಗಿದೆಯಷ್ಟೇ. ಭಾವಲಿಂಗವು ಆತ್ಮವನ್ನು ಸಂಸ್ಕೃತಗೊಳಿಸುತ್ತದೆ. ಆತ್ಮಕ್ಕೆ ಮಾಯಾ ಮಳವುಗಳೆಂಬೆರಡು ದೋಷಗಳು ಅಂಟಿಕೊಂಡಿರುತ್ತವೆ. ಇವು ಜನ್ಮ ಜನ್ಮಾಂತರದಿಂದ ಆತ್ಮನಲ್ಲಿ ಬೆರತು ಹೋಗಿರುತ್ತವೆ. 'ನಾನು ಯಾರು ನನ್ನ ಧ್ಯೇಯವೇನು ?" ಎಂಬ ಅರಿವು ಆತನಿಗಿರುವದಿಲ್ಲ. ಪರವಸ್ತುವು ತಾನೆಂಬ ಮರವುಂಟಾಗಿ ಜೀವಾತ್ಮನು ತಾನು ಬೇರೆಯೆಂಬ ಭ್ರಾಂತಿಯಿಂದ ನಾಮ ರೂಪ ಕ್ರಿಯೆಗಳುಳ್ಳ ಈ ಪ್ರಪಂಚದಲ್ಲಿ ವ್ಯವಹರಿಸುತ್ತಿದ್ದಾನೆ. ಯಾಕಂದರೆ ಅವನಿಗೆ ಪ್ರಪಂಚದ ಸಂಪರ್ಕದಿಂದ ಅಜ್ಞಾನವು

ಆವರಿಸಿಬಿಟ್ಟಿರುತ್ತದೆ. ಈ ಮರವನ್ನು ಹೋಗಲಾಡಿಸಿಕೊಂಡು ಅರಿವನ್ನು ಜಾಗ್ರತಗೊಳಿಸಿಕೊಳ್ಳುವದೇ ಭಾವಲಿಂಗ ಪೂಜೆಯು. ಮರವು ಅರಿವಾಗಿ ಪರಿಣಮಿಸಬೇಕಾದರೆ ಶ್ರವಣ, ಮನನ, ನಿಧಿಧ್ಯಾಸಗಳು ಅವಶ್ಯವಾಗಿ ಬೇಕು. ಶ್ರವಣೇಂದ್ರಿಯವೇ ಪ್ರಸಾದಲಿಂಗವೆನಿಸಿದೆ. ಸುಸಂಸ್ಕೃತವಾದ ಮನವೇ ಮಹಾಲಿಂಗ. ಪ್ರಣವ ಪಂಚಾಕ್ಷರಿ ಮಂತ್ರವನ್ನು ಕಿವಿಯು ಶ್ರವಣ ಮಾಡುತ್ತದೆ. ನಾಲಿಗೆಯು ಅದನ್ನು ಪಠಿಸುತ್ತ ವಿಸರ್ಜಿಸುತ್ತದೆ. ಈ ಪ್ರಕಾರ ಶ್ರವಣ ಪಠಣಗಳ ಅಭ್ಯಾಸದಿಂದ ಮನಸ್ಸಿನ ಚಾಂಚಲ್ಯವೃತ್ತಿಯು ಹೋಗಿ ಅದು ಒಂದು ಸ್ತಿಮಿತಕ್ಕೆ ಬಂದು ನಿಲ್ಲುತ್ತದೆ. ಮನಸ್ಸಿನ ಈ ಸ್ತಿಮಿತ ವೃತ್ತಿಗೆ ಭಾವವೆನ್ನುತ್ತಾರೆ. ಭಾವವು ಈ ಸ್ಥಿತಿಯಲ್ಲಿದ್ದಾಗ ಅದು ಪ್ರಾಪಂಚಿಕ ಬಾಹ್ಯ ಸ್ವರೂಪವನ್ನೆಲ್ಲ ಮರೆತು ತಾನೇ ತಾನಾಗಿಬಿಡುತ್ತದೆ. ಇದೇ ನಿಧಿಧ್ಯಾಸ. ಈ ರೀತಿಯಾಗಿ ತನು ಮನ ಭಾವಗಳ ಲಿಂಗತ್ವವಳಿದು ಲಿಂಗತ್ವವಳವಡುವದೇ ಶಿವಾನುಭವ.

"ತನ್ನ ಬಿಟ್ಟು ದೇವರಿಲ್ಲ ಮಣ್ಣು ಬಿಟ್ಟು ಮಡಿಕೆಯಿಲ್ಲ" ಎಂಬಂತೆ ತನುಮನೋಭಾವಗಳೂ ಪಂಚೇಂದ್ರಿಯ ಮನಸ್ಸುಗಳೂ ನಮ್ಮಲ್ಲಿಯೇ ಇವೆ. ಇವು ಸಹಜ ಸ್ಥಿತಿಯಲ್ಲಿದ್ದಾಗ ಅಂಗಗುಣಗಳೆನಿಸುವವು. ಸುಸಂಸ್ಕೃತವಾದಾಗ ಲಿಂಗರೂಪವಾಗುವವು. ಆದ್ದರಿಂದ ಅಂಗನ ಮೂಗು, ನಾಲಿಗೆ, ಕಣ್ಣು, ತ್ವಚ, ಕಿವಿ, ಮನಸ್ಸುಗಳೆಲ್ಲ ಸಂಸ್ಕಾರದಿಂದ ಲಿಂಗಗುಣಗಳನ್ನಳವಡಿಸಿಕೊಂಡರೆ ಅವೇ ಷಡ್ಲಿಂಗಗಳಾಗುವವು.

---

# ಅಸ್ಪೃಶ್ಯತೆ

(ಜ್ಞಾನೋಪಾಸಕ ಜ್ಞಾನಮಂದಿರ ಹಲಗೂರು.)



ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ।
ಜಲವೊಂದೇ ಶೌಚಾಚಮನಕ್ಕೆ।
ನಿಲುವೊಂದೇ ತನ್ನ ತಾನಂದವಂಗೆ।
ಫಲಪೊಂದೇ ಷಡುದರ್ಶನ ಮುಕ್ತಿಗೆ।
ನಿಲವು ಒಂದೇ ಕೂಡಲಸಂಗಮದೇವಾ ನಿಮ್ಮನರಿದವಂಗೆ।

—ಬಸವಗೀತೆ

ಅಸ್ಪೃಶ್ಯತಾನಿವಾರಣೆಯು ನಮ್ಮ ಧರ್ಮವೆಂದು ಮಾಡಬೇಕೇ ಹೊರತು ಆದಿಜನರಿಂದ ನಮ್ಮ ಹಿತಸಾಧಿಸಿ ಕೊಳ್ಳಬೇಕೆಂದು ಈ ಕಾರ್ಯವನ್ನು ಮಾಡಕೂಡದು. ನಾನು ಈ ಕಾರ್ಯವನ್ನು ನನ್ನ ಧರ್ಮವೆಂದೇ ಮಾಡುತ್ತಿದ್ದೇನೆ. ಇದು ಶುಭದಾಯಕವಾಗಿ ಪರಿಣಮಿಸಿದರೆ ಮುಂದೆ ನನ್ನ ಸಮಾಧಿಗೆ ಪೂಮಾಲೆಯನ್ನು ಹಾಕಬೇಕೇ ಹೊರತು ಈಗಲೇ ನನ್ನನ್ನು ಮರ್ಯಾದೆ ಮಾಡಬೇಕಾಗುವದಿಲ್ಲ.

—ಡಾ. ಕುರ್ತಕೋಟಿ ಶಂಕರರಾಚಾರ್ಯ.

'ಅಸ್ಪೃಶ್ಯತೆ' ಎಂಬ ಪದವು ಭಾರತೀಯರೆಲ್ಲರಿಗೂ ತಿಳಿದ ಮನೆ ಮಾತಾಗಿದೆ. 'ಸ್ಪೃಶ್ಯತೆ' ಎಂಬ ಪದಕ್ಕೆ ಮುಟ್ಟಲು ಯೋಗ್ಯತೆ ಎಂದೂ 'ಅಸ್ಪೃಶ್ಯತೆ' ಎಂಬ ಪದಕ್ಕೆ ಮುಟ್ಟಲು ಯೋಗ್ಯನಾಗದಿರುವಿಕೆ ಎಂದೂ ಅರ್ಥವು ಆಗುತ್ತದೆ. ಈ ಅಸ್ಪೃಶ್ಯತೆ ಬಹಳ ಹಿಂದಿನಿಂದಲೂ ಭಾರತದಲ್ಲಿ ನಿರ್ದುಷ್ಟವಾದ ಒಂದು ಜಾತಿಯು ಮುಂದಿಗೆ ತಗುಲಿ, ಅವರು ಅಸ್ಪೃಶ್ಯರೆನಿಸಿಕೊಂಡು ಇಲ್ಲಿಯುವರೆಗೂ ಬಂದಿದ್ದಾರೆ. ಇದು ಇಡೀ ಮನುಜ ಕುಲದ ಹೆಸರಿಗೆ ಕಲಂಕ ತರುತ್ತಿರುವ ಒಂದು ಅಭಿಶಾಪವೇ ಸರಿಯು. ತನ್ನಂತೆಯೇ ಕೈ, ಕಾಲು, ಕಿವಿ, ಮೂಗು, ಕಣ್ಣು, ಮಿದುಳು, ನಾಲಿಗೆ, ಬಾಯಿ–ಇವೆಲ್ಲವನ್ನೂ ಉಳ್ಳ ಮತ್ತೊಬ್ಬ ಮನುಷ್ಯನನ್ನು ಮನು

ಸ್ಯನೊಬ್ಬನು ಅಸ್ಪೃಶ್ಯನೆಂದೆನ್ನುವುದು ಮನುಷ್ಯ ಮನುಷ್ಯರ ಮಧ್ಯ ಕೃತ್ರಿಮವನ್ನು ತಂದು ಒಡ್ಡಿದಂತಲ್ಲವೇ? ಒಬ್ಬ ತಾಯಿಯ ಮಕ್ಕಳಲ್ಲಿಯೇ ಪರಸ್ಪರ ಪ್ರೇಮವು ಇಲ್ಲದಿದ್ದರೆ ತಾಯಿಗೆ ಸಹನೆಯು ಬರುವುದೇ? ಶಾಂತಿಯು ಸಿಗುವುದೇ? ಒಕ್ಕಲತನ ಮಾಡುವ, ಕೈಕೂಲಿ ಎಸಗುವ, ವ್ಯವಹರಿಸುವ, ಅಧಿಕಾರದಲ್ಲಿ ಇರುವ- ನಾಲ್ಕು ಜನ ಮಕ್ಕಳು ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ್ದಾರೆ. ಇವರಲ್ಲಿ ವ್ಯವಹಾರ ವ್ಯತ್ಯಾಸವನ್ನು ತಾಯಿ ಮಾಡುವಳೇ? ತಾಯಿಗೆ ಎಲ್ಲರೂ ಒಂದೇ ಅಲ್ಲವೇ? ನಾಲ್ಕು ಕಾಲಿನ ಪ್ರಾಣಿಗೆ ಮಾತ್ರ ಜಾಗವನ್ನು ಕೊಡಬಹುದು. ಈ ಅಸ್ಪೃಶ್ಯನನ್ನು ಮುಟ್ಟಲು ಯೋಗ್ಯವಿಲ್ಲವೆಂದು ದೂರತಳ್ಳುವುದು ಉಚಿತವೇ? ಮುಟ್ಟಲು ಅಯೋಗ್ಯವಾದ ವಸ್ತುಗಳು ಹಲವನ್ನು ಸ್ವೀಕರಿಸುತ್ತಿರುವಲ್ಲಿ ಒಂದೇ ದೇಶದ ರಕ್ತದಲ್ಲಿ ಜನಿಸಿದ ವ್ಯಕ್ತಿಯನ್ನು ದೂರ ಇರ, ಎಂದು ಹೊರಗೆ ಹಾಕುವುದು ಎಲ್ಲಿಯ ನ್ಯಾಯ?

ಜಾತಿಹೀನರ ಮನೆಯ ಜ್ಯೋತಿ ತಾ ಹೀನವೇ ।
ಜಾತಿ ವಿಜಾತಿ ಎನಬೇಡ. ದೇವನೊಲಿದಾತನೇ ।
ಜಾತ ಸರ್ವಜ್ಞ ॥

ಅಸ್ಪೃಶ್ಯರನ್ನು ಅಪ್ಪಿದ ಮತ್ತು ಅಳವಡಿಸಿಕೊಂಡ ಸಂಗತಿಯು ಇತಿಹಾಸದಲ್ಲಿ ಇಲ್ಲದೆ ಇಲ್ಲ. ಹೊಸನೀರು ಬಂದು ಹಳೆಯ ನೀರನ್ನು ಕೊಚ್ಚುವುದು ಸಹಜವಲ್ಲವೇ? ಭಾರತದಲ್ಲಿ ಮೊದಲು ನೆಲಸಿದ್ದ ಜನಾಂಗವನ್ನು ಹೊರಗಿನಿಂದ ಗುಂಪುಗುಂಪಾಗಿ ಬಂದ ಆರ್ಯರು ಇಲ್ಲಿ ನೆಲೆಸಿ ಗರಿಗಟ್ಟಿ ತಮ್ಮ ಶ್ರೇಷ್ಠತೆಯನ್ನು ತೋರಿಸಿಕೊಳ್ಳಲು ಮೂಲನಿವಾಸಿಗಳನ್ನು ಕಡೆಗಂಡು ಅಸ್ಪೃಶ್ಯರನ್ನಾಗಿ ಮಾಡಿಲ್ಲವೇ? ಹಿಂದಿನ ಜನ್ಮಗಳಲ್ಲಿ ಮಾಡಬಾರದಂತಹ ಮಹಾ ಪಾತಕವನ್ನು ಮಾಡಿರುವುದರಿಂದಲೇ ಚಂಡಾಲಯೋನಿಯಲ್ಲಿ ಜನಿಸಿ ಅಸ್ಪೃಶ್ಯರಾಗಿರುತ್ತಾರೆ ಎಂಬ ಕೂಗೇ ಸನಾತನಿಗಳದಾಗಿದೆ. ಮುಂದೆ ಸಾಗಿದವರು ಮುಂದೆಯೇ, ಹಿಂದೆಬಿದ್ದವರು ಹಿಂದೆಯೇ ಎಂಬ ತತ್ವದಂತೆ ಶಕ್ತಿವಂತರಾದ ಹಲವರು ರಾಜ್ಯಗಳನ್ನು ಸ್ಥಾಪಿಸಿಕೊಂಡು ಹಿಂದುಳಿದವರನ್ನು ಹಿಂದಕ್ಕೆ ಓಡಿಸುವುದರಲ್ಲಿಯೇ ಅವರ ಸ್ವಾರ್ಥವು ಅಡಗಿ ಅವರಿಂದ ತಮ್ಮ ಮನಸ್ಸಿಗೆ ಬಂದಂತಹ ಸೇವೆಯನ್ನು ಸ್ವೀಕರಿಸಿ ಆ ಜನಾಂಗವನ್ನು ಹೀನದೆಸೆಯಲ್ಲಿಯೇ ಇಟ್ಟು ಅಸ್ಪೃಶ್ಯತೆಗೆ ಜನ್ಮವನ್ನು ಏತಕ್ಕೆ

ಕೊಟ್ಟಿರಬಾರದು ಎಂಬುದೇ ರಾಜಕೀಯ ಪಟುಗಳ ವಾದವಾಗಿದೆ. ದುಡಿಮೆ ಕೀಳು ಜನರದಾಗಲೀ, ಕುಡಿದ ನೀರು ಅಲ್ಲಾಡದೆ ದುಡ್ಡು ನಮ್ಮ ಚೀಲಕ್ಕೆ ಬರಲಿ ಎಂಬ ಗುರಿಯಿಂದ ಧನಿಕರು ಆ ದುಡಿಮೆಗಾರರನ್ನು ಅಧಃಪತನಕ್ಕೆ ತಳ್ಳಿ, ಅವರಿಗೆ ಅಸ್ಪೃಶ್ಯರು ಎಂದು ಹೆಸರಿಟ್ಟರು, ಎಂಬ ವಾದವು ಆರ್ಥಿಕ ಪ್ರವೀಣರದಾಗಿದೆ. ಸಮಾಜದ ಸೌಖ್ಯಕ್ಕಾಗಿ ಕೊಳಕಾದಿ ಹೀನ ವೃತ್ತಿಗಳನ್ನು ಮಾಡುವವರೇ ಅಸ್ಪೃಶ್ಯರು ಎಂಬುದೇ ಸಾಮಾಜಿಕ ವ್ಯವಸ್ಥಾಪಕರ ವಾದ. ನ್ಯಾಯವಾದ ವಿಚಾರಶೀಲರ ತಲೆಯನ್ನು ಇವೆಲ್ಲವೂ ಗಿರಗಿರನೆ ತಿರುಗಿಸುತ್ತಿವೆ. ಸಾವಿರಾರು ವರ್ಷಗಳಿಂದ ಹಿಂದುಳಿದವರನ್ನು ದಾಸ್ಯಪಂಕದಲ್ಲಿ ತುಳಿದು ಯಾವ ಯೋಗ್ಯತೆಯೂ ಇಲ್ಲದೆ ಬರೀ ಜನ್ಮದಿಂದ, ಅಧಿಕಾರಪ್ರತಿಷ್ಠೆ ಧನಗಳನ್ನು ಅನುಭವಿಸಿದವರು ಈ ಅಸ್ಪೃಶ್ಯತೆಗೆ ಅವಕಾಶಕೊಟ್ಟಿರವದರಲ್ಲಿ ಯಾವ ಸಂಶಯವೂ ಇಲ್ಲ. ಗೋಹತ್ಯೆ ಮಾಡಿರುವುದರಿಂದಲೋ, ಮತ್ತೆ ಮಾಡಿದ ಯಾವ ಪಾಪದಿಂದಲೋ ಆತನು ಚಂಡಾಲನಾಗಿ ಜನಿಸಬೇಕಾಯಿತು.

— ಮನುಸ್ಮೃತಿ

ಅಸ್ಪೃಶ್ಯತೆಯನ್ನು ಎಣಿಸುವದು ಪಾಪಕರವಲ್ಲವೇ ? ತಮಿಳುನಾಡಿನ ಭಕ್ತಾಗ್ರ ಶಿರೋಮಣಿ ನಟರಾಜ ಭಕ್ತನಂದನ ಶಕ್ತಿಸಾಮರ್ಥ್ಯವನ್ನು ನೋಡಿದರೆ ಮತ್ತೆ ಇನ್ಯಾವ ಉತ್ತಮ ಕುಲಜನೂ ಕೂಡ ಈತನಂತೆ ಪರಮಾತ್ಮನನ್ನು ಒಲಿಸಿಕೊಳ್ಳಬಲ್ಲನು? ಹನ್ನೆರಡನೆ ಶತಮಾನದಲ್ಲಿ ಕರ್ನಾಟಕದ ಶಿವಶರಣರು ಅಸ್ಪೃಶ್ಯತೆಯನ್ನೇ ಅಳಿಸಿರುವುದು ಯಾರಿಗೆ ತಾನೇ ಗೊತ್ತಿಲ್ಲ? ಶಿವಶರಣರ ಮುಂದಾಳಾದ ಬಸವಣ್ಣನವರು ತಮ್ಮ ಅಸಾಧ್ಯವಾದ ಧೈರ್ಯ ಸಾಹಸಗಳಿಂದ ಅಂತ್ಯಜರನ್ನು ಅಪ್ಪಿ ಆಕರ್ಷಿಸಿಕೊಂಡಿದ್ದಾರೆ. ವಿಪ್ರನಿಂದ ಹಿಡಿದು ಅಂತ್ಯಜನ ವರೆಗೆ ಒಂದೇ ಒಂದು ಸಮಭಾವ ಇವರದು. ಅಸ್ಪೃಶ್ಯನಾದ ಕಂಬಳಿಯ ನಾಗಿದೇವನನ್ನು 'ಹಿರಿಯ ಭಕ್ತ'ನ ಸ್ಥಾನದಲ್ಲಿ ಬಸವಣ್ಣನವರು ಕುಳ್ಳಿರಿಸಿದರು. ಮಧುವರಸನೆಂಬ ಬ್ರಾಹ್ಮಣರ ಮಗಳನ್ನು ಹರಳಯ್ಯನೆಂಬ ಮಾದಿಗರ ಮಗನಿಗೆ ಕೊಟ್ಟು ಮದುವೆ ಮಾಡಿಸಿದರು. ಎಲ್ಲರಿಗೂ ಹೃದಯವನ್ನು ಬಸವಣ್ಣನವರು ಬಿಚ್ಚಿತೋರಿಸಿ ಮನುಜ ಶ್ರೇಷ್ಠರಾದರು. ಅಸ್ಪೃಶ್ಯತಾ ನಿರ್ಮೂಲ ಕಾರ್ಯದಲ್ಲಿ ಬಸವಣ್ಣನವರು ತಮ್ಮ ಪ್ರಾಣಾರ್ಪಣೆಯನ್ನು ಮಾಡಿರುವುದು ಇತಿಹಾಸ ಸಿಂಹಾವಲೋಕನಕಾರರಿಗೆ ತಿಳಿಯದೆ ಇದ್ದಿರದು ! ಮನುಜನಿಗೆ ಅಸ್ಪೃಶ್ಯ ಎಂದು

ಬಸವಣ್ಣನವರು ಎಂದೂ ಹೇಳಲಿಲ್ಲ.. ದ್ವೇಷಭಾವನೆ ಎಂಬುದನ್ನು ಕನಸಿನಲ್ಲಿಯೂ ಕೂಡ ಕಾಣರು.. ಅನುಕಂಪಸನದಿ ದ ಎಲ್ಲರನ್ನೂ ಕರೆದರು.

"ಎಲವೋ ಪಾಪ ಕರ್ಮವ ಮಾಡಿದವನೇ ಒಮ್ಮೆ ಶರಣೆನ್ನೆಲವೋ" ಮೂಢತನ, ಕ್ರೂರತನ, ಅಜ್ಞಾನ, ಅನಾಚಾರಗಳಲ್ಲಿ ಕೊಳೆಯುತಿದ್ದ ಅಸ್ಪೃಶ್ಯರ ಜೀವನದಲ್ಲಿ ಅತ್ಯಾಶ್ಚರ್ಯಕರವಾದ ಕ್ರಾಂತಿಯನ್ನು ಬಸವಣ್ಣನವರು ಮಾಡಿದರು. ಅವರ ವೈಯಕ್ತಿಕ, ಸಾಂಸಾರಿಕ, ಸಾಮಾಜಿಕ, ಜೀವನದಲ್ಲಿ ಇದು ಮಹತ್ತರವಾದ ಕ್ರಾಂತಿಯು ಕಲ್ಯಾಣವನ್ನೇ ಉಂಟು ಮಾಡಿತು. ಮನುಷ್ಯನ ಹೃದಯದಲ್ಲಿ ಆರಂಭವಾದ ಪರಿಶುದ್ಧಿಯು ಆತನ ಆಚಾರದಲ್ಲಿಯೂ, ಕುಟುಂಬದಲ್ಲಿಯೂ ಹಬ್ಬಿ ಇಡೀ ಸಮಾಜವನ್ನೇ ಶುದ್ಧೀಕರಿಸಿ ಬಿಡುತ್ತದೆ. ಇದೇ ನಿಜವಾದ ಪರಿಶುದ್ಧಿ ಸಂಘಟನೆಯು ಮಾದಾರಚೆನ್ನಯ್ಯ, ಡೋಹರ ಕಕ್ಕಯ್ಯ, ಶಿವನಾಗಮಯ್ಯ, ಕಲ್ಯಾಣಮ್ಮ ಇತ್ಯಾದಿಯುವರು ಒಮ್ಮೆ ಅಸ್ಪೃಶ್ಯರಾಗಿದ್ದವರು ಬಸವಣ್ಣನವರ ಪರುಷ ಹಸ್ತ ಸ್ಪರ್ಶ ಬಲದಿಂದ ಹಿರಿಯರಾಗಿ ಶರಣರಾಗಿ ದೇದೀಪ್ಯಮಾನರಾದರು. ಪಾರತಂತ್ರ್ಯದಿಂದ ಅಂತರಿಾತ್ಮನು ಸ್ವತಂತ್ರನಾದನಂತರ ಅದ್ಭುತಬದಲಾವಣೆಯಾಗುವುದು ಸುಳ್ಳೇ? ತಮಗಿಂತಲೂ ಹೆಚ್ಚಿನಸ್ಥಾನದಲ್ಲಿ ಇವರನ್ನು ಇರಿಸಿದ್ದೇ ಶಿವಶರಣರ ಜೀವನದ ವೈಶಿಷ್ಟ್ಯವು. ಇದರಿಂದಲೇ ಬಸವೇಶ್ವರರ ಯಥಾರ್ಥತೆ, ನಮ್ರತೆ, ನಿರಹಂಕಾರ, ಅನುಪಮಭಕ್ತಿ, ಸಮದರ್ಶಿತ್ವ ಇತ್ಯಾದಿ ಸದ್ಗುಣಗಳು ಮುಪ್ಪುರಿಗೊಂಡು ಬೆಳಗುತ್ತಿವೆ, ಅಂದು ಅಸ್ಪೃಶ್ಯರಿಗೆ ಬಸವನವರು ಕೊಟ್ಟಿದ್ದರು.

"ಅಪ್ಪನು ಡೋಹರ ಕಕ್ಕಯ್ಯನಾಗಿ, ಮುತ್ತಯ್ಯ ಚೆನ್ನಯ್ಯನಾದರೆ ನಾನು ಬದುಕುವೆ. ಮತ್ತಾ ಶ್ವಪಚಯ್ಯನ ಸನ್ನಿಧಿಯಿಂದ ಭಕ್ತಿಸದ್ಗುಣವನರಿವೆನಯ್ಯ ಕೂಡಲಸಂಗಮದೇವ॥

ಭಾರತದ ಪ್ರಾಚೀನ ಇತಿಹಾಸದಲ್ಲಿ ಅಪ್ರತಿಮ ಸನ್ನಿವೇಶವಾಗಿದ್ದು ಬಸವೇಶ್ವರ ಮೂಲಕ ಉತ್ಪತ್ತಿರುವ ಈ ಝರಿಯ ಜಲವು ಸಕಲರಿಗೂ ಸಿಗುವಂತಾಗಲಿ. ನಡೆನುದಗಳು ಎರಡನ್ನೂ ಎರಕಮಾಡಿದರೂ ಕರ್ಮಠರರೂ ಆದ ಬಸವಣ್ಣನವರ ಅಗಾಧಕಾರ್ಯವು ಅರಿವಾಗಲಿ.

ಇಪ್ಪತ್ತನೆಯ ಶತಮಾನದ ಅಸ್ಪೃಶ್ಯೋದ್ಧಾರಕ ಬಸವಣ್ಣನವರು ಮಹಾತ್ಮಾಗಾಂಧೀಜಿಯೆಂದರೆ ಸಮಂಜಸವಾಗದೆ ಇರದು. ಮಹಾತ್ಮಗಾಂಧೀ

ಜಿಯವರು ಶಸ್ತ್ರ ರಚನಾತ್ಮಕ ಕಾರ್ಯದಲ್ಲಿ ಮೊದಲನೆಯದಾಗಿ ಅಸ್ಪೃಶ್ಯೋದ್ಧಾರವನ್ನು ಕೈಕೊಂಡರು. ಹರಿಜನರೆಂದು ಅವರನ್ನು ಕರೆಯತೊಡಗಿದರು. ಎಲ್ಲಿ ಹರಿಜನರಿಗೆ ಅವಕಾಶವಿಲ್ಲವೋ ಅಲ್ಲಿಗೆ ನಾನು ಬರಲಾರೆನು ಎಂದು ಹಠಹಿಡಿದು, ಉಪವಾಸ ಮಾಡತೊಡಗಿದರು. ಅಸ್ಪೃಶ್ಯರಿಗುಂಟಾದ ಅಧೋಗತಿಯನ್ನು ತಿಳಿದು ಉಪವಾಸವನ್ನು ಕೈಗೊಂಡ ಗಾಂಧೀಜಿಯವರ ವಿಚಾರವಾಗಿ ದೀನಬಂಧು ಅಂದ್ರ್ಯೂಸರವರು ಹಾಗೆಯೇ ಹೇಳಿದರು.

ಅಸ್ಪೃಶ್ಯತಾ ನಿವಾರಣ ವಿಚಾರವಾಗಿ ಗಾಂಧೀಜಿಯವರಿಗೆ ಇದ್ದ ಅಭಿಲಾಷೆಯನ್ನು ಕೊನೆಗಾಣಿಸುವುದು ಗಾಂಧೀಭಕ್ತರ ಆದ್ಯ ಕರ್ತವ್ಯವಲ್ಲವೇ? ನಡೆದುನುಡಿದ ಮಹಾತ್ಮ ಗಾಂಧೀಜಿಯು ಹರಿಜನೋದ್ಧಾರವನ್ನು ಹೃದಯಪೂರ್ವಕವಾಗಿ ಮಾಡಿ ಉಪದೇಶಮಾಡಿ ಉಪದೇಶಿಸಿದರು. ಧರ್ಮದ ಹೆಸರಿನಿಂದ ಕೋಟ್ಯಾನುಕೋಟಿ ಜನರ ಪರಿಸ್ಥಿತಿಯನ್ನು ಗುಲಾಮರನ್ನಾಗಿ ಅಸ್ಪೃಶ್ಯತೆಯು ಮಾಡಿಬಿಟಿದ್ದು ಇವರ ಮನಸ್ಸನ್ನು ಕರಗಿಸಿ ಹಿಂದೂ ಧರ್ಮದ ಕೊಳೆಯೇ ಅಸ್ಪೃಶ್ಯತೆ ಎಂದರು. ಪ್ರಾಣಿಮಾತ್ರಗಳ ವಿಷಯಕ್ಕೆ ಸಂಪೂರ್ಣ ಪ್ರೇಮಪ್ರದರ್ಶನ ಮಾಡುವುದೇ ಅಹಿಂಸೆ, ಪ್ರಪಂಚದ ಸಂಗಡ ಸ್ನೇಹವನ್ನು ಬೆಳೆಯಿಸಿ ತಾನು ಅದರ ಸೇವಕನಾಗುವುದೇ ಅಸ್ಪೃಶ್ಯತೆಯ ಅಳಿವು, ಎಂದು ಗಾಂಧೀಜಿಯು ಸಾರಿದರು. ಸತ್ಯವ್ರತಧಾರಿಯಂತೆ ಅಸ್ಪೃಶ್ಯತಾ ನಿವಾರಕನು ತನ್ನ ಧರ್ಮವನ್ನು ಶರೀರಕ್ಕೆ ಅಂಟಿಸಿಕೊಂಡಿರುವಂತಿರಬೇಕು ಎಂಬುದೇ ಗಾಂಧೀಜಿಯ ಗುರಿಯು. ತಿಳಿವಳಿಕೆಯುಳ್ಳ ಸವರ್ಣೀಯರು ಅಸ್ಪೃಶ್ಯರೆನಿಸಿಕೊಳ್ಳುವವರನ್ನು ತಮ್ಮವರಂತಾಗಿ ಕಂಡು ಮಮತೆಯಿಂದ ಸ್ಪರ್ಶಿಸಿ ಅವರ ದುಃಖದುಗುಡವನ್ನು ದೂರಮಾಡಬೇಕು ಎಂದರು ಗಾಂಧೀಜಿಯು. ಅಸ್ಪೃಶ್ಯರಲ್ಲಿ ಅಂಟಿಕೊಂಡಿರುವ ಅಜ್ಞಾನಾದಿ ದೋಷಗಳನ್ನು ತೆಗೆದು ಹಾಕಲಿಕ್ಕೆ ತಾಳ್ಮೆಯಿಂದ ಸಹಾಯಮಾಡುವುದಲ್ಲದೆ ಇತರರಿಗೂ ಅದರಂತೆ ಆಚರಿಸುವುದನ್ನು ತಿಳಿಸಬೇಕು, ಎಂದು ಗಾಂಧೀಜಿಯು ಸಾರಿದರು. ಆತ್ಮವು ಒಂದೇ ಆಗಿದ್ದರೆ ಈಶ್ವರನು ಒಬ್ಬನೇ ಇದ್ದರೆ ಅಸ್ಪೃಶ್ಯರೇ ಇಲ್ಲವೆಂದು ಹೇಳಿ ಬೇರೆ ಬೇರೆ ಧರ್ಮಗಳ ಹೆಸರಿನಿಂದ ನೆಪದಿಂದ ಅಸ್ಪೃಶ್ಯತೆಯು ಹಲವು ತೊಂದರೆಗಳನ್ನು ಉಂಟುಮಾಡಿ ಧರ್ಮವನ್ನು ಕಲುಷಿತ ಮಾಡುತ್ತಿರುವುದನ್ನು ಜನತೆಗೆ ಗಾಂಧೀಜಿಯು ಎತ್ತಿತೋರಿಸಿದರು.

ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು ।
ಸುಡವಗ್ನಿ ಯಾವದೇ ಇರುತಿರಲು ಕುಲಗೋತ್ರ ।
ನಡುವೆ ಯತ್ತಣದು ಸರ್ವಜ್ಞ ॥

ಹರಿಜನರ ಸಂಬಂಧವನ್ನು ಬೆಳೆಯಿಸಿ, ಅವರ ಸಂಗಡ ಊಟ ಉಪಚಾರ ಕೊಟ್ಟು ತರುವುದು ಇವುಗಳನ್ನು ಅನುಷ್ಠಾನಕ್ಕೆ. ಗಾಂಧೀಜಿಯವರು ತಂದರು. ತಾವು ಎಲ್ಲಿಯೇ ಹೋಗಲಿ ಹರಿಜನರನ್ನು ಕೂಡಿಕೊಂಡು ಹೋಗುತ್ತಿದ್ದರು.

ಅಸ್ಪೃಶ್ಯತೆಯು ಇರುವುದು ಎಲ್ಲಿ ? ಅದು ಹೊರಗೆ ಎಲ್ಲಿಯೂ ಏತರಲ್ಲಿಯೂ ಇಲ್ಲ. ಅದು ಇರುವುದು ಮನುಜರ ಮನಸ್ಸಿನಲ್ಲಿ ಮಾತ್ರ. ತಾನು ಪಡೆಯುವ ಸಂಸ್ಕಾರಗಳಿಗೆ ಅನುಗುಣವಾಗಿ ಮನಸ್ಸು ಬದಲಾವಣೆಯನ್ನು ಪಡೆಯುತ್ತದೆ. ಮನಸ್ಸು ಛಾಯಾಗ್ರಾಹಿಯ ಫಿಲ್ಮು ಅದರ ಎದುರಿಗೆ ಯಾವ ರೂಪನಿಲ್ಲುವುದೋ ಅದೇ ಪ್ರತಿಛಾಯೆಯನ್ನು ತನ್ನ ಮೇಲೆ ಚಿತ್ರಿಸಿಕೊಳ್ಳುತ್ತದೆ. ಅದೇ ಬಗೆಯಾಗಿ ಮನಸ್ಸು ಕೂಡ ಮನುಷ್ಯನು ಬಾಳುವ ಸನ್ನಿವೇಶ ಹಾಗೂ ಸಮಾಜದಲ್ಲಿ ನಡೆಯುವ ವ್ಯವಹಾರಗಳ ಸಂಸ್ಕಾರ ಇಲ್ಲವೇ ಪ್ರಭಾವಗಳನ್ನು ತನ್ನ ಮೇಲೆ ರೂಢಿಸಿಕೊಳ್ಳುತ್ತ ಹೋಗುತ್ತದೆ. ಇದು ಏಕಪ್ರಕಾರವಾಗಿ ಬಹುಕಾಲ ನಡೆಯುತ್ತ ಹೋದಲ್ಲಿ ಅತಿ ಗಾಢವಾದ ಸಂಸ್ಕಾರವಾಗಿ ನಿಂತುಬಿಡುತ್ತದೆ. ಅಸ್ಪೃಶ್ಯತೆಯೂ ಕೂಡ ಈ ಪರಿಯಾಗಿಯೇ ಪರಿಣಮಿಸಿವೆ, ಎಂಬುದರಲ್ಲಿ ಸತ್ಯಾಂಶವಿಲ್ಲದೆ ಇಲ್ಲ. ಹೊಲೆಯ ಹೊರಗಿಹನೆ ಊರೊಳಗಿಲ್ಲವೇ ಎಂದು ಪುರಂದರದಾಸರು ಹೇಳಿರುವುದು ಮನಸ್ಸಿಗೆ ಬರಲಿ ! ನಮ್ಮ ಹೃದಯದಲ್ಲಿ ಅಡಗಿರುವ ಹೊಲೆತನವು ಗೊತ್ತಾಗಲಿ.

ಶೀಲವನು ಕೈಕೊಂಡು ನಡೆಸದಾತ ಹೊಲೆಯ
ಸೂಳೆಯನು ಕಾಮಿಸುವ ಶುದ್ಧ ಹೊಲೆಯ
ಉಂಡ ಮನೆಗೆ ಎರಡನ್ನು ಬಗೆವಾತನೇ ಹೊಲೆಯ
ಇದ್ದಾಗ ದಾನಧರ್ಮ ಮಾಡದವ ಹೊಲೆಯ
ಆಸೆ ಮಾತನು ಕೊಟ್ಟು ಭಾಷೆ ತಪ್ಪುವ ಹೊಲೆಯ
ಹುಸಿ ಬೊಗಳುವನೊಬ್ಬ ಹುಚ್ಚ ಹೊಲೆಯ
ಅರಿತು ಆಚಾರವ ನಡೆಸದಾತನೇ ಹೊಲೆಯ

ಪರಸತಿಗೆ ಅಳುಕದವ ಪಾಪಿ ಹೊಲೆಯ
ಗುರುಹಿರಿಯರನು ಕಂಡು ನಮಿಸದಾತನೇ ಹೊಲೆಯ

ಈ ಕೊಲೆತನದ ಹೊಲಸನ್ನು ತಿಳಿಯಲಾರದೆ ಯಾವುದೋ ಒಂದು ವರ್ಗದ ಮೇಲೆ ಹಾಕಿರುವುದು ಯೋಗ್ಯವೇ? ನಮ್ಮ ನಮ್ಮ ಹೃದಯವನ್ನು ಪರೀಕ್ಷೆ ಮಾಡಿಕೊಂಡು ನಮ್ಮ ನಡತೆಯಲ್ಲಿ ಕೆಟ್ಟ ಗುಣಗಳು ಕಂಡು ಬರದಂತೆ ನೋಡಿಕೊಂಡಾಗ ಮಾತ್ರ ನಮ್ಮ ನಮ್ಮ ಮನೆಗೆ ಹೊಲೆತನವು ಹೋಗದು. ತಮ್ಮ ಮನಸ್ಸಿನಲ್ಲಿಯೂ, ಕೃತಿಗಳಲ್ಲಿಯೂ ಕೋಪ, ತಾಪ, ಕೃತ್ರಿಮತೆ ಪರದ್ರೋಹಾದಿ ಕೆಟ್ಟ ಗುಣಗಳನ್ನು ಇಟ್ಟುಕೊಂಡು ಕೇವಲ ತಮ್ಮ ಗುಂಪಿನಲ್ಲಿದ್ದ ಕೀಳು ಜಾತಿಯವನೊಬ್ಬನನ್ನು ಹೀನಾಯವಾಗಿ ಕಾಣುತ್ತಿದ್ದ ಮೇಲ್ತರದವರ ಚರ್ಯೆಯನ್ನು ಎಲ್ಲ ಕಾಲದಲ್ಲಿಯೂ ಎಲ್ಲ ಸಜ್ಜನರೂ ಆಲೋಚಿಸಿದ್ದಾರೆ.

ಇದು ಸ್ವಾತಂತ್ರ್ಯಯುಗ. ಎಲ್ಲರೂ ಸ್ವತಂತ್ರ ಜೀವಿಗಳು. ನೂರಾರು ವರ್ಷಗಳಿಂದ ನರಳುತ್ತಿದ್ದ ಗುಲಾಮಗಿರಿಯ ರೋಗವೇ ಗುಣಮುಖಿಯಾಗಿ ಹೋಗಿಬಿಟ್ಟಿದೆ. ಭಾರತಾಂಬೆಯು ಪರಕೀಯರ ದಾಸ್ಯ ಎಂಬ ಬಂಧನದಿಂದ ಬಿಡುಗಡೆಯಾಗಿದ್ದರೂ, ನಾವು ಇನ್ನು ಮಾತ್ರ ಭಾರತೀಯರೆಂಬ ಅರಿವಿಲ್ಲದೆ ಜಾಡ್ಯಾಂಧತೆಯ ಶೃಂಖಲೆಯಿಂದ ಬಂಧಿತರಾಗಿರುವೆವಲ್ಲಾ! ಇಂತಿರುವಲ್ಲಿ ನಮ್ಮನ್ನು ನಾವು ಸ್ವತಂತ್ರರು ಎನ್ನುವುದು ಎಂತು? 'ಕಂಡೂ ಕಂಡು ಭಾವಿಯಲ್ಲಿ ಬಿದ್ದ' ಎಂಬಂತೆ ವಿಚಾರಪರರಾಗಿದ್ದರೂ ಶರೀರವನ್ನೇ ಸತ್ಯವೆಂದು ನಾವು ನಂಬುತ್ತಾ ಜಾತಿಭ್ರಾಂತಿ ಎಂಬ ಹಾಳುಭಾವಿಯಲ್ಲಿ ಬಿದ್ದು ದುಃಖಪಡುತ್ತಿರುವೆವಲ್ಲಾ! ಯಾದವರೆಲ್ಲರೂ ಒಂದೇ ಕುಲದವರಾಗಿದ್ದರೂ ಕೊನೆಗೆ ತಮ್ಮನ್ನೇ ತಾವು ತಿಳಿಯದೆ ಯಾದವೀಕಲಹದಿಂದ ಅವರು ನಾಶವಾದಂತೆ ನಾವೂ ಸಹಜಾತ್ಯಂಧತೆ ಎಂಬ ತಾಮಸೀ ಪ್ರಕೃತಿರೂಪ ರಾಕ್ಷಸಿಗೆ ತುತ್ತಾಗಿ ವೈರೋಧ್ಯದಿಂದ ಬಳಲುತ್ತಿರುವೆವು. ಪರಮಾತ್ಮನ ಪ್ರೇಮಕಡಲಲ್ಲಿ ಅಲೆಗಳಂತಿರುವ ಈ ಜೀವಕೋಟಿಗಳಲ್ಲಿ ಉಚ್ಚನೀಚ ಭಾವಕ್ಕೆ ಎಡೆಯುಂಟೆ? ನಾವೆಲ್ಲರೂ ಸಮರಸವಾಗಿ ಜೀವಿಸ ತೊಡಗಿದರೆ ನಮ್ಮ ರಾಷ್ಟ್ರವು ಕಡುಗಲಿಯಾಗುತ್ತದೆ. ದೇಶದ ಅಭ್ಯುದಯಕ್ಕೆ ನಾಡಿನ ಕಲ್ಯಾಣಕ್ಕೆ ಸ್ವಾತಂತ್ರ್ಯದ ಸ್ಥಾಯಿತ್ವಕ್ಕೆ ಧರ್ಮ ರಕ್ಷಣೆಗೆ ಸಮಭಾವನೆಯೇ ಅಡಿಗಲ್ಲು. ಭಾರತೀಯರಾದ ನಾವು ಸ್ವಾತಂತ್ರ್ಯದ ಸವಿ

ಯನ್ನು ಅನುಭವಿಸಬೇಕಾದಲ್ಲಿ ಜಾತ್ಯಂಧತೆಯು ಬಿಟ್ಟುಹೋಗಿ ಸಮುದ ಶೀಲತ್ವವು ಸಾವರಿಸಬೇಕು. ನಮ್ಮ ಶರೀರದ ಅವಯವಗಳಾದ ಹರಿಜನ ರನ್ನು ಕೀಳಾಗಿ ಕಾಣುವುದು ನಮ್ಮ ಶ್ರೇಯಸ್ಸಿಗೆ ಕುಂದು.

ನಮ್ಮ ತಾಯಿಯ ಉದರದಲ್ಲಿ ಹುಟ್ಟಿ ಪ್ರತಿ ನಿತ್ಯವೂ ನಮ್ಮ ಸೇವೆ ಯನ್ನು ಕೈಗೊಂಡು ಬಾಳಿ ಹೋರಾಟದಲ್ಲಿ ದಿನವಹಿ ಸಹಕಾರಿಗಳಾಗಿದ್ದು ನಮ್ಮ ಒಡಹುಟ್ಟಿದಂತಿರುವ ಈ ಅಸ್ಪೃಶ್ಯರೆನಿಸಿಕೊಂಡಿರುವ ದೇಶಬಾಂಧ ವರನ್ನು ಪ್ರಾಣಿಗಳಿಗಿಂತ ಹೀನಾಯ ದೃಷ್ಟಿಯಲ್ಲಿ ನೋಡುವುದು ನಮಗೆ ಯೋಗ್ಯವೇ? ನಾಯಿನರಿಗಳು, ಬೆಕ್ಕುಇಲಿಗಳು ಪ್ರವೇಶಿಸಬಹುದು, ಆದರೆ ಈ ಬಡಪಾಯಿಗಳು ಏನು ತಾನೇ ಮಾಡಿದ್ದರು? ಪ್ರಾಚೀನರು ಕೊಟ್ಟಷ್ಟು ಅನುಕೂಲಗಳನ್ನು ಕೊಡದಿದ್ದರೂ ಕೊನೆಯ ಪಕ್ಷ ಕೆರೆ, ಭಾವಿ, ಬೀದಿ, ಪೇಟೆ, ಸಭೆ, ದೇವಾಲಯ, ಪಾಠಶಾಲೆ ಮುಂತಾದ ಸಾರ್ವಜನಿಕ ಸ್ಥಳ ಗಳಲ್ಲಿ ಯಾರಾದರೂ ಅವರನ್ನು ಮನುಷ್ಯರನ್ನಾಗಿ ಕಾಣುವುದು ಯೋಗ್ಯ ವಾಗಿದೆ. ಸಮಾಜದ ಅಭಿವೃದ್ಧಿಗಾಗಿ ಆತುರ ಪಡುತ್ತಿರುತ್ತ, ಆಶ್ರಯ ವಿಹೀನರಾಗಿ ಅಲೆನಾಡುತ್ತಿರುವ ಅಂತ್ಯಜರಲ್ಲಿ ಆತ್ಮವಿಶ್ವಾಸವು ನೆಲೆಗೊಳ್ಳಲಿ. ಪರರ ಬಂಧನದಿಂದ ಬಿಡುಗಡೆಯಾಗಿರುವ ನಾವು ನಮ್ಮ ಸಹೋದರರನ್ನು ಅಸ್ಪೃಶ್ಯರು ಎಂದು ಎಣಿಸಿ ಅವರನ್ನು ಯಾವಾಗಲೂ ಗುಲಾಮ ವೃತ್ತಿ ಯಲ್ಲಿ ಇಟ್ಟಿದ್ದರೆ ನಿಜವಾದ ಸ್ವಾತಂತ್ರ್ಯವು ಬಂದ ಹಾಗಾಯಿತೇ? ಸ್ವಾತಂತ್ರ್ಯ ವಿಚಾರವಾಗಿ ಅಬ್ರಾಮುಲಿಂಕನ್ನನು ಹೇಳಿರುವುದು ಈ ವೇಳೆ ಯಲ್ಲಿನ ಅನ್ವಯವಾಗದೆ ಇರದು

"ಯಾವದೇಶವು ಮತ್ತೊಂದು ದೇಶದ ಸ್ವಾತಂತ್ರ್ಯವನ್ನು ನಿಷ್ಕಾರ ಣವಾಗಿ ಕಸಿದುಕೊಳ್ಳುವುದೋ ಅಂತಹ ದೇಶವು ಸ್ವತಃ ಸ್ವಾತಂತ್ರ್ಯ ವನ್ನು ಸವಿಯುವುದಕ್ಕೆ ಎಷ್ಟು ಮಾತ್ರವೂ ಉಚಿತವಾಗಿರದು- ಈ ಬಗೆಯ ಆಟವು ನ್ಯಾಯ ಪಕ್ಷಪಾತಿಯಾದ ಭಗವಂತನ ಪರಿಪಾಲನೆಯಲ್ಲಿ ಬಹಳ ಕಾಲದವರೆಗೆ ನಡೆಯಿತು"

ವಿದೇಶಿಯರಿಂದ ನಾವು ನಮ್ಮ ಸ್ವಾತಂತ್ರ್ಯವನ್ನು ತೆಗೆದುಕೊಂಡಿ ರುವಾಗ ನಮ್ಮಿಂದ ಅಸ್ಪೃಶ್ಯರು ಮಾನವತ್ವದ ಹಕ್ಕುಗಳನ್ನು ಕೇಳು ವುದು ಯೋಗ್ಯವಲ್ಲವೇ? ಪ್ರತಿಗಳಿಗೆಯಲ್ಲಿಯೂ ಬದಲಾಯಿಸುತ್ತಿರುವ ಜಗ ತ್ತಿನ ಇತಿಹಾಸದಲ್ಲಿ ಜಾತಿಭೇದಗಳು ಅವರವರ ಸ್ವಂತ ವಿಷಯಗಳಾರ

ಬೇಕೆಂದೂ, ಮನೆಯಿಂದ ಹೊರಗೆ ಸಾರ್ವಜನಿಕರ ಸಂಗಡ ನಡೆಯಬೇಕಾದ ವ್ಯವಹಾರಿಕ ಜೀವನದಲ್ಲಿ ಜಾತಿಮತ ಪ್ರಶ್ನೆಯು ಅಷ್ಟು ಹೆಚ್ಚಾಗಿ ಪ್ರವೇಶಮಾಡಬಾರದು. ನೀತಿಗೆ ಪ್ರಧಾನವಾಗಿಯೂ, ಜಾತಿಗೆ ಗೌಣವಾಗಿಯೂ ಸ್ಥಾನವನ್ನು ಕೊಡುವುದು ಯುಕ್ತವು. ನೀತಿಯಿಂದ ಮನುಜನ ಶ್ರೇಷ್ಠತೆಯು.

ಕುಲವೇನೋ? ಆವಂದಿರ ಕುಲವೇನೋ?
ಕೊಲ್ಲುವಾತನೇ ಮಾದಿಗ, ಹೊಲಸುತಿಂಬುವನೇ ಹೊಲೆಯ
ಸಕಲ ಜೀವಾತ್ಮಗಳಿಗೆ ಲೇಸನೇಬಯಸುವ ಕೂಡಲಸಂಗನ
ಶರಣರೇ ಕುಲಜರು. — ಬಸವಗೀತೆ

ಆತ್ಮಯಾವಕುಲ? ಜೀವಯಾವಕುಲ?
ತತ್ವೇಂದ್ರಿಯಗಳ ಕುಲವಪೇಳಿರಯ್ಯ!
ಆತ ಮಹಾತ್ಮನು ನೆಲೆಯಾದಿಕೇಶವ!
ಆತನೊಲಿದ ಮೇಲೆ ಯಾತರ ಕುಲವಯ್ಯ॥
— ಕನಕದಾಸರು.

ನಮ್ಮ ನಮ್ಮ ಹೃದಯ ಪರಿಶೋಧನೆಯನ್ನು ಮಾಡಿಕೊಂಡು ವಿಶಾಲ ಹೃದಯದಿಂದ ಅಸ್ಪೃಶ್ಯರಲ್ಲಿ ವರ್ತಿಸುವದು ಸರ್ವಶ್ರೇಯಸ್ಕರವು. ಪರಸ್ಪರ ಮಾತುಕತೆ, ಲೆಕ್ಕಾಚಾರ, ವ್ಯವಹಾರಗಳನ್ನು ಪ್ರೀತಿವಿಶ್ವಾಸಗಳಿಂದ ನಡೆಯಿಸಿ ಎಲ್ಲರೂ ಒಗ್ಗಟ್ಟಿನಿಂದ, ಸಹಕಾರ ಸಹಾನುಭೂತಿಯಿಂದ ಸುಖವಾಗಿ ಜೀವಿಸಲು ಜಾತಿಕುಲಗಳು ಏತಕ್ಕೆ ವಿಘ್ನ ಕಾರಿಯಾಗಬೇಕು? "ಮನುಷ್ಯರಲ್ಲಿ ಯಾರೂ ಕೂಡ ದೊಡ್ಡವರಲ್ಲ. ಯಾರೂ ಕೂಡ ಚಿಕ್ಕವರಲ್ಲ; ಯಾರೂ ಕೂಡ ಸಾಮಾನ್ಯರಲ್ಲ. ಎಲ್ಲರೂ ಉತ್ಸಾಹದಿಂದ ಅಡ್ಡಿಗಳನ್ನು ಪರಿಹರಿಸಿ ಮುಂದುವರಿಯತಕ್ಕವರೇ. ಜನ್ಮದಿಂದ ಸರ್ವರೂ ಭೂತಾಯಿಯ ಮಕ್ಕಳಾದ ಕಾರಣ ಶ್ರೇಷ್ಠ ಕುಲಜರೇ ಆಗಿದ್ದಾರೆ. ದಿವ್ಯ ಮಾನವರೇ! ಸರ್ವರೂ ಒಕ್ಕಟ್ಟಾಗಿ ಬನ್ನಿರಿ."

— ಋಗ್ವೇದ.

ಈ ತತ್ವವನ್ನು ತಿಳಿದುಕೊಂಡು ಮನುಜ ಸಮಾಜ ರಥದ ಸಾಗುವಿಕೆಯನ್ನು ಸಲೀಲಾಗಿ ಸಾಗಿಸಬೇಕು. ಅಸ್ಪೃಶ್ಯತೆ ಎಂಬುದು ದೇಶದ ಒಂದು ಕಡೆ ಇಲ್ಲ; ಮೂಲೆ ಮೂಲೆಯಲ್ಲಿಯೂ ವ್ಯಾಪಿಸಿಕೊಂಡಿದೆ. ಉತ್ತಮರು

ಎನಿಸಿಕೊಳ್ಳುವರ ಹೃದಯವು ಹಿರಿದಾಗಿ ಯಾರಿಗೂ ಅಸ್ಪೃಶ್ಯರು ಎನ್ನದ ಭದ್ರ ಭಾವನೆಯು ಬೇರೂರಿ ಆಳುವಡುವಂತಾಗಬೇಕು. "ಹರಿಜನರಿಗೆ ದೇವಸ್ಥಾನದ ಬಾಗಿಲುಗಳು ತೆರೆದಿವೆ. ಆದರೆ ಮನಜ ಹೃದಯದ ಬಾಗಿಲು ಗಳು ತೆರೆದಿಲ್ಲ."

—ಗೃಹಮಂತ್ರಿ ಪಟೇಲ.

ಸರಕಾರವು ಅಸ್ಪೃಶ್ಯತೆಯ ಅಳಿವಿಗೆ ಅನೇಕ ಕಾನೂನು ಕಟ್ಟಳೆಗ ಳನ್ನು ತಯಾರು ಮಾಡಿ ಕಾರ್ಯಗತ ಮಾಡಿದ್ದಿರಬಹುದು. ಅವಕ್ಕೆ ಮೊದಲು ಹರಿಜನರು ತಮ್ಮ ತಮ್ಮ ಸ್ಥಾನಮಾನವನ್ನು ಕಾನೂನಿಗಿಂತಲೂ ಸಮಾಜದಲ್ಲಿ ಯೋಗ್ಯ ರೀತಿಯಲ್ಲಿ ಇರುವುದನ್ನು ಚಾಚೂ ತಪ್ಪದೆ ಪರಿಪಾ ಲಿಸಬೇಕು. ಪರಿಪೂರ್ಣ ಅದ್ವೈತ ಸಾಧನೆಯು ಏಕದಂ ಸಾಧ್ಯವಾಗದ ಮಾತು. ಕ್ರಮಶಃ ಅದಂಷ್ಟಕ್ಕೆ ಅದೇ ಬರುತ್ತದೆ. 'ಬಳಸದಿರು ಬಾಹ್ಯದೊಳು ಅದ್ವೈತವನು ?'

—ನಿಜಗುಣ ಶಿವಯೋಗಿ.

ಜನತೆಯ ಹೃದಯ ಪರಿವರ್ತನೆಯು, ಮನಸ್ಸಿನ ತಿದ್ದಲ್ಪಡುವಿಕೆಯು ಆಗದೆ ಯಾವ ಕಾರ್ಯವನ್ನೂ ಎಂತಹ ಕಾನೂನನ್ನೂ ಮಾಡಿರೂ ಫಲ ವಾಗದು. ಮನಸ್ಸನ್ನು ಇಕ್ಕಟ್ಟಾದ, ಸ್ವಾರ್ಥದ ಮತ್ತು ರೂಢಿ ವಾತದ ಸಂದಿಯಿಂದ ಹೊರತಂದು ವಿಶಾಲವಾದ ರಾಜಮಾರ್ಗದಲ್ಲಿ ಸಂಚರಿಸುವ ದಕ್ಕೆ ಯೋಗ್ಯವಾಗುವಂತೆ ಧರ್ಮವು ಮಾಡಬೇಕು. ಅಲ್ಲಿಯ ವರೆಗೆ ಅಸ್ಪೃಶ್ಯರೆನಿಸಿಕೊಂಡಿರುವವರು ಸಹನೆ ಮತ್ತು ಶಾಂತಿಯಿಂದ ಕ್ರಮವರಿತು ಗಡಿಯನ್ನು ಮೀರಿ ಹೋಗದೆ ಸಾಗಿದರೆ ಗುರಿ ಮುಟ್ಟಲು ಸುಗಮ ಹಾದಿಯು ಸಿಗುತ್ತದೆ. ಏತ್ತಿದರಕ್ಷಣವೇ ಅನುಕೂಲ ಸಿಂಧುವು ಬೇಕೆಂದು ಛಲ ಸಾಧಿಸುವುದು ತರವಲ್ಲ. ಜಯದ ಬೀಗದ ಕೈಯು ಮರಳಿ ಯತ್ನ ದಲ್ಲಿ ಖಂಡಿತ ಸಾಧ್ಯವು. ಸೋತು ಗೆಲ್ಲುವುದು ಬುದ್ಧಿವಂತನ ಲಕ್ಷಣ ವಂತೆ ! ಸ್ವಾತಂತ್ರ್ಯ ಸಂಪಾದನೆಗೆ ಶ್ರಮಿಸಿದ ಮಹಾತ್ಮರನ್ನು ಮರೆಯದೆ ಕೆಲಸ ಮಾಡಿದರೆ ವೈರಿಯೂ ಕೂಡ ಪಶ್ಚಾತ್ತಾಪ ಬುದ್ಧಿಯಿಂದ ಜೊತೆಸೇರಿ ಆಪ್ತಮಿತ್ರನಾಗದೆ ಇರನು !

# ಮಹಾತ್ಮಾ ಬಸವಣ್ಣನವರು ಜಗದಣ್ಣನೇ ಹೌದು.

[ಲೇಖಕಃ- ಶ್ರೀ ಶಿವಾನಂದಸ್ವಾಮಿ ಗವಿಮಠ, ತೆಗ್ಗಿಹಳ್ಳಿ. ತಾ॥ ಇಂಡಿ]

"ಧರ್ಮವಳಿದು ಅಧರ್ಮ ಬೆಳೆದಾಗ ಧರ್ಮವನ್ನು ಸ್ಥಾಪಿಸಿ ಅಧರ್ಮವನ್ನು ಓಡಿಸಲು ಮೇಲಿಂದ ಮೇಲೆ ಪರಮಾತ್ಮನು ಅವತಾರ ತಾಳಿ ಬರುವೆನೆಂದು" ವಚನ ಕೊಟ್ಟಂತೆ ಶ್ರೀ ಬಸವ ಮಹಾತ್ಮನು ಧರ್ಮಸ್ಥಾಪಿಸ ಲೋಸುಗ ಬಾಗೇವಾಡಿಯಲ್ಲಿ ಅವತರಿಸಿದ್ದು ಸರ್ವಶ್ರುತವದೆ. ಆನೇ ವರ್ಷಕ್ಕೆ ಮುಂಜಿವೆಯು ಬಂಧನವನ್ನು ಸ್ವೀಕರಿಸದೆ ಮನೆಬಿಟ್ಟು ಗುರುಗಳನ್ನು ಹುಡುಕುತ್ತ ಊರೂರ ತಿರುಗಹತ್ತಿದನು. ಆಗ ಕೂಡಲಸಂಗಮದಲ್ಲಿ ಜಾತವೇದ ಮುನಿಯ ಹೆಸರನ್ನು ಕೇಳಿ, ಅಲ್ಲಿಗೆ ಹೋದನು. ಅವರ ಗುರುತ್ವವನ್ನು ಸ್ವೀಕರಿಸಿ ಅವರ ಶಿಷ್ಯನಾಗಿ ಅಲ್ಲಿಯೇ ಸಮಗ್ರ ೧೮ವರ್ಷ ಸಾಧನ ಮಾಡಿ ವೀರಶೈವ ಷಟ್ಸ್ಥಲ ಜ್ಞಾನವನ್ನು ಪಡೆದು ಮಹಾ ಶರಣನಾಗಿ ಜ್ಞಾನಿಗಳಾದರು. ಜೀವನ್ಮುಕ್ತರಾದರು. ಇಲ್ಲಿಯ ಸಾಧನ ಮುಗಿಸಿಕೊಂಡು ಕಲ್ಯಾಣಕ್ಕೆ ಹೋಗಿ ನಾಡ ನುಡಿ ಧರ್ಮಗಳ ಸೇವೆಗೈಯ್ಯಲು ಬಿಜ್ಜಳನಲ್ಲಿ ಮಂತ್ರಿಪದವನ್ನು ಸ್ವೀಕರಿಸಿದರು. ಈ ಕಾಯಕದೊಂದಿಗೆ ವೀರಶೈವ ತತ್ವಗಳನ್ನೂ ಧರ್ಮವನ್ನೂ ಪ್ರಚಾರ ಮಾಡುತ್ತಿದ್ದರು. ಇವರ ಇಡೀ ಜೀವನವು ಅನಂತ ಪವಾಡಮಯ ಘಟನೆಗಳಿಂದ ಕೂಡಿರುವದು. ಅದರ ಚರ್ಚೆಯು ಈ ಲೇಖನದಲ್ಲಿ ಬೇಕಾಗಿಲ್ಲ. ಆದರೆ ಶ್ರೀ ಬಸವಣ್ಣನು ಜಗದಣ್ಣನು ಯಾಕೆ ? ಹೇಗೆ ಆದನೆಂದು ತೋರಿಸಿ ಕೊಡುವದೇ ಈ ಲೇಖನದ ಉದ್ದೇಶವಾಗಿದೆ. ಇವರು ಅಂಥ ಯಾವ ಮಹತ್ವದ ಕಾರ್ಯಗಳನ್ನು ಮಾಡಿದರು ? ಅವರ ಆಚಾರ ವಿಚಾರಗಳು ಹೇಗೆ ಇದ್ದವು ? ಅವರ ದಿವ್ಯ ತತ್ವಗಳು ಯಾವವು ? ಇಲ್ಲಿಯ ವರೆಗೆ ಜನಿಸಿದ ಅನೇಕ ಋಷಿ, ಅವತಾರ, ತ್ಯಾಗಿ, ಯೋಗಿ, ಸಿದ್ಧಪುರುಷ ಮೊದಲಾದ ಯಾವತ್ತರಲ್ಲಿಯೂ ಇವನು ಹೆಚ್ಚಿನವನೆಂದು ಈ ಕೆಳಗಿನ ವಿವೇಚನೆಯಿಂದ ಸಹಜ ಗೊತ್ತಾಗುವದರಲ್ಲಿ ಸಂದೇಹವಿಲ್ಲ. ಶ್ರೀ ಬಸವಣ್ಣನವರು ಅದಕ್ಕಂತೇ ಜಗದಣ್ಣನೆಂದು ನಾನು ಹೇಳಹೊರಟಿದ್ದೇನೆ. ವಿಮರ್ಶಕರು ಇದರ ಮರ್ಮವನ್ನು ಸಹೃದಯದಿಂದ ಅರಿಯಬೇಕು.

(೧) "ದೇವನೊಬ್ಬ ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ" "ಸ್ವಾಮಿ ನೀನು. ಶಾಶ್ವತ ನೀನು ಮಹಾದೇವ. ಇಲ್ಲಿಂದ ಮೇಲೆ ಶಬ್ದವಿಲ್ಲ. ಪಶುಪತಿ ಜಗಕೆ ಏಕೋದೇವ ಸ್ವರ್ಗ ಮೃತ್ಯು ಪಾತಾಳದೊಳಗೆ ಒಬ್ಬನೇ ಕೂಡಲಸಂಗಮದೇವಾ." "ನಂಬಬಲ್ಲ ಭಕ್ತಂಗೆ ದೇವನೊಬ್ಬ ಕಾಣಿರೋ" ಈ ಪ್ರಕಾರ ಏಕೇಶ್ವರೀ ತತ್ವವನ್ನು ಬೋಧಿಸಿದನು.

(೨) ಯಜ್ಞಯಾಗಾದಿಗಳ ನೆವದಿಂದ ಜನರು ಪ್ರಾಣಿಗಳ ವಧೆಯನ್ನು ಮಾಡುತ್ತಿದ್ದರು. ನಿರಪರಾಧಿ ಪ್ರಾಣಿಗಳ ವಧೆ ಮಾಡಿ ಬಲಿ ಕೊಡುವದು ಮಹಾ ಪಾಪವೆಂದು ಇವರು ತಿಳಿಸಿದರು. ಈ ವಧೆಯನ್ನು ನೋಡಿ ಇವರು ಕಣ್ಣೀರಿಡುತ್ತಿದ್ದರು. ಅದರಂತೆ ಉಪದೇಶಿಸುತ್ತಿದ್ದರು. "ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು ಎಲೆ ಹೋತೆ ಅಳು ಕಂಡ್ಯಾ? ವೇದವನೋದಿದವರ ಮುಂದೆ ಅಳು ಕಂಡ್ಯಾ ? ಶಾಸ್ತ್ರವನೋದಿದವರ ಮುಂದೆ ಅಳು ಕಂಡ್ಯಾ ? ನೀ ಸತ್ತುದಕ್ಕೆ ತಕ್ಕುದ ಮಾಡುವ ಕೂಡಲ ಸಂಗಮದೇವಾ." ಈ ಪ್ರಕಾರ ಬಸವಣ್ಣನವರು ಯಜ್ಞದ ಕುರಿಯು ಕೊರಳಿಗೆ ತನ್ನ ತೋಳುಗಳಿಂದ ತಿಕ್ಕಿ ಹೊಡೆದು ಕಣ್ಣೀರಿಟ್ಟ ವಚನವಿದು. ಇದರಲ್ಲಿ ಎಂಥ ಕರುಣೆ ದಯೆಗಳು ಅಡಕವಾಗಿರುವವು ವಿಚಾರಿಸಿರಿ. ಭೂತ ದಯದ ಅವತಾರಿಕನೇ ಸರಿ.

(೩) ಮಾರಿ ಮಸಣಿಗಳಿಗೆ ಅಂಜಿ ಭಕ್ತಿ ಮಾಡುವ ಅಜ್ಞಾನಿಗಳಿಗೆ ಇವರ ಉಪದೇಶ ಹೀಗೆ ಇರುವದು. "ಮಾರಿ ಮಸಣಿ ಎಂಬುದು ಬೇರಿಲ್ಲ ಕಾಣಿರೋ. ಮಾರಿ ಎಂಬುದೇನು? ಕಂಗಳ ತಪ್ಪಿ ನೋಡಿದರೆ ಮಾರಿ, ನಾಲಿಗೆ ತಪ್ಪಿ ನುಡಿದರೆ ಮಾರಿ, ನಮ್ಮ ಕೂಡಲಸಂಗಯ್ಯನ ನೆನಹು ಮರೆದರೆ ಮಾರಿ." ಈ ಪ್ರಕಾರ ಭಯಭೀತಿಯಿಂದ ಮಾಡುವ ಭಕ್ತಿಯನ್ನು ಹೇಳಿದ್ದಾರೆ. ಮಾರಿ ಹೊರಗೆ ಇಲ್ಲ. ಅದೆಲ್ಲ ನಮ್ಮೊಳಗೇ ಇರುವದು. ನೀಚ ದೃಷ್ಟಿಯಲ್ಲಿ, ನೀಚ ವಚನದಲ್ಲಿ, ನೀಚ ವಿಚಾರದಲ್ಲಿ, ನೀಚ ಕೃತಿಯಲ್ಲಿ, ಮಾರಿ, ಮಸಣಿ, ವಿಧಿ, ಮಾಯೆಗಳೆಲ್ಲ ಅಡಕವಾಗಿವೆ. ಇವೆಲ್ಲ ಶುದ್ಧವಾದಲ್ಲಿ ಯಾವ ಮಾರಿ, ಮಸಣಿ, ವಿಧಿ, ಮಾಯೆಗಳಿಲ್ಲೆಂದು ಧಾರಾಳವಾಗಿ ಹೇಳಿದ್ದಾರೆ. ಬರೀ ಅವುಗಳನ್ನು ಅಂಜಿ ಪೂಜಿಸಿದರೆ ಲಾಭವಿಲ್ಲ. ಆದರೆ ಸರಿಯಾದ ನಡೆನುಡಿಗಳಿರಬೇಕು. ಅಂದರೆ ಅವುಗಳ ಬಾಧೆಯಾಗುವದಿಲ್ಲೆಂದು ಹೇಳಿದ್ದಾರೆ. ಜಗತ್ತಿಗೆ ಇದೊಂದು ದಿವ್ಯ ಔಷಧವನ್ನು ಕೊಟ್ಟಿದ್ದಾರೆ.

(೪) ಪಾಪ-ಪುಣ್ಯ ಸ್ವರ್ಗ ನರಕಗಳ ನಿಜವಾದ ಅರ್ಥವನ್ನು ಜಗಕೆ ಬೋಧಿಸಿದ್ದಾರೆ. "ಪುಣ್ಯ ಪಾಪಗಳು ತಮ್ಮ ಇಷ್ಟ ಕಂಡರೇ. ಅಯ್ಯಾ ಎಂದಡೆ ಸ್ವರ್ಗ, ಎಲವೊ ಎಂದಡೆ ನರಕ. ದೇವಾ, ಭಕ್ತ ಜಯ ಜೀಯಾ ಎಂಬ ನುಡಿಯೊಳಗೆ ಕೈಲಾಸವೇ ಇದೆ ಕೂಡಲ ಸಂಗಮದೇವಾ." "ನೀನೊಲಿಯಿತ್ತೆ ಪುಣ್ಯ. ನೀ ಒಲ್ಲದುದೇ ಪಾಪ. ನೀನೊಲಿದವನೇ ನಿಮ್ಮನರಿವನು ಅವನೇ ಧನ್ಯ, ಜಗಕ್ಕೆ ಪಾವನ ಕೂಡಲಸಂಗಮದೇವಾ." ಜಗಕೆ ವಿನಯ ನಮ್ರತೆಗಳನ್ನು ಈ ಪ್ರಕಾರ ಬೋಧಿಸಿ, ಸ್ವರ್ಗ ನರಕಗಳ ಅರ್ಥವನ್ನು ತಿಳಿಸಿದ್ದಾರೆ. ಅಲ್ಲದೇ ದೇವರನ್ನು ಬಿಟ್ಟು ಏನನ್ನೂ ಬೋಧಿಸಿಲ್ಲ. ಎಲ್ಲವೂ ಅವನಲ್ಲಿಯೇ ಹೊರತು ಹೊರಗೆ ಏನೂ ಇಲ್ಲ. ದೇವನನ್ನು ಹಿಡಿಯುವದೇ ಪುಣ್ಯ ಅವನನ್ನು ಬಿಡುವದೇ ಪಾಪವೆಂದು ಒಳ್ಳೇ ಸಮಂಜಸವಾಗಿ ಹೇಳಿದ್ದಾರೆ. ಅದರಲ್ಲಿಯೇ ಎಲ್ಲ ನೀತಿ ತತ್ವಜ್ಞಾನಗಳು ಅಡಕವಾಗಿವೆ ಎಂದು ಗಂಭೀರವಾಗಿ ಹಾಡಿದ್ದಾರೆ.

(೫) ಮೃತ್ಯುಲೋಕ, ಪಾತಾಳಲೋಕ, ಸ್ವರ್ಗಲೋಕ ಅಲ್ಲದೆ ಹದಿನಾಲ್ಕು ಲೋಕಗಳು ಬೇರೆ. ಸೂರ್ಯಲೋಕ, ಮಂಗಳಲೋಕ, ಚಂದ್ರಲೋಕ ಹೀಗೆ ಇನ್ನೂ ಅನಂತ ಲೋಕಗಳುಂಟೆಂದು ಬೋಧಿಸಿದವರಿಗೆ ಬಸವಣ್ಣನವರು ಹೀಗೆ ಹೇಳುತ್ತಾರೆ. "ದೇವಲೋಕ ಮೃತ್ಯುಲೋಕ ಬೇರಿಲ್ಲ ಕಾಣಿರೋ. ಸತ್ಯವ ನುಡಿಯುವದೇ ದೇವಲೋಕ. ಮಿಥ್ಯವ ನುಡಿಯುವದೇ ಮೃತ್ಯುಲೋಕ. ಆಚಾರವೇ ಸ್ವರ್ಗ, ಅನಾಚಾರವೇ ನರಕ. ಈ ಲೋಕದೊಳಗೆ ಮತ್ತನಂತ ಲೋಕ. ಶಿವಲೋಕ, ಶಿವಾಚಾರ ಶಿವಭಕ್ತನಿದ್ದ ಠಾವೇ ದೇವಲೋಕ. ಭಕ್ತನಂಗಣವೇ ವಾರಣಾಸಿ. ಕಾಯಕವೇ ಕೈಲಾಸ. ಇದು ಸತ್ಯ ಶಿವನಾಣೆ ಕೂಡಲಸಂಗಮದೇವಾ." ನಮ್ಮ ಆಚಾರ ವಿಚಾರಗಳಿಂದ ನಮ್ಮ ನಡೆನುಡಿಗಳಿಂದ ನಮ್ಮಷ್ಟಕ್ಕೆ ನಾವೇ ಇಲ್ಲೇ ಅನೇಕ ಜನ್ಮಗಳನ್ನು ಅಂದರೆ ಲೋಕಗಳನ್ನು ನಿರ್ಮಿಸಿಕೊಳ್ಳಬಲ್ಲೆವು. ಬೇರೆ ಬೇರೆ ಲೋಕಗಳು ಅಂತರಿಕ್ಷದಲ್ಲಿ ಇಲ್ಲವೇ ಇಲ್ಲೆಂದು ಹೇಳಿದ್ದಾನೆ. ಈ ಲೋಕದೊಳಗೇ ಎಲ್ಲ ಬಗೆಯ ಲೋಕಗಳುಂಟೆಂದು ಜನರ ಇರುವಿಕೆಯ ಮೇಲಿಂದ ಸಹಜ ತಿಳಿದುಬರುವಂತಿದೆ. ಈ ಬೋಧೆಯಿಂದ ಜನರು ಸ್ವಾಭಾವಿಕವಾಗಿ ನೀತಿ, ಸತ್ಯ ಅಹಿಂಸೆ, ನ್ಯಾಯ, ಧರ್ಮ ಮೊದಲಾದವುಗಳಂತೆ ನಡೆಯಹತ್ತುವರು.

(೬) ಕ್ಷೇತ್ರಗಳಿಗೂ ತೀರ್ಥಗಳಿಗೂ ಜನರು ವ್ಯರ್ಥ ತಿರುಗಿ, ಉದ್ಯೋಗ ಹಾಳುಮಾಡಿಕೊಳ್ಳುವರು. ಹೀಗೆ ತಿರುಗುವದರಿಂದ ಯಾವ ಲಾಭಗಳೂ ಆಗುವದಿಲ್ಲೆಂದು ಘಂಟಾಘೋಷವಾಗಿ ಸಾರಿದ್ದಾನೆ. " ನೀರ ಕಂಡಲ್ಲಿ ಮುಳುಗುವರಯ್ಯಾ ! ಮರನ ಕಂಡಲ್ಲಿ ಸುತ್ತುವರಯ್ಯಾ ! ಬತ್ತುವ ಜಲವ, ಒಣಗುವ ಮರನ ನೆಚ್ಚಿದವರು ನಿಮ್ಮನೆತ್ತಬಲ್ಲರು ಕೂಡಲ ಸಂಗಮದೇವಾ. " ಪಂಥನ, ಪರಪಧುವಿನ ಅಮಿಷವ ತೊರೆಯದೆ ಹೋಗಿ ತೆರೆಯ ಮಿಂದರೆ ಬರುದೊರೆ ಹೋಹುದು ಕೂಡಲಸಂಗಮದೇವಾ. ಹೇಸಿ ಗುಣಗಳ ತನ್ನ ಬದಿಯಲ್ಲಿ ಇಟ್ಟುಕೊಂಡು ಕಾಶಿಗೆ ಹೋದರೆ ಏನಿದೆ ಎಂದು ಹಾಡಿದ್ದಾರೆ. ಇದರಿಂದ ನೀತಿಗೆ ಮಹತ್ವ ಉಂಟಾಗುವದರಿಂದ ಹುಚ್ಚನಂತೆ ಧನ, ಕಾಲ, ಉದ್ಯೋಗ ಹಾಳಾಗುವದರ ಉಳಿತಾಯವಾಗಿ ನೀತಿವಂತರಾಗಲು ಹೆಚ್ಚಿಗೆ ಆಸ್ಪದವಾಗುವದು.

(೭) ಜ್ಯೋತಿಷ್ಯದಲ್ಲಿ ಹುರುಳಿಲ್ಲ. ಅದನ್ನು ನಂಬಬಾರದು. ಕೇಳಬಾರದು. ಇದರಿಂದ ಮಾನವನು ಹೇಡಿಯಾಗುವನು. ಪ್ರಯತ್ನವಾದಿಯಾಗದೆ ಬರೀ ದೈವವಾದಿಯಾಗಿ ತನ್ನ ಜೀವಿತವನ್ನೇ ಹಾಳು ಮಾಡಿಕೊಂಡು ಕೂಡ್ರುವನೆಂದು ತಿಳದೇ ಬಸವಣ್ಣನವರು ಜ್ಯೋತಿಷ್ಯದ ಬಗ್ಗೆ ಹೀಗೆ ಹೇಳಿದ್ದಾರೆ- "ಎಮ್ಮವರು ಬೆಸಗೊಂಡರೆ ಶುಭವೆನ್ನಿರಯ್ಯಾ. ನಾಳಿನ ದಿನಕ್ಕಿಂತ ಇಂದಿನ ದಿನವೇ ಲೇಸೆಂದು ಹೇಳಿರಯ್ಯಾ- ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯಾ- ರಾಶಿ ಕೂಟ ಋಣ ಸಂಬಂಧ ಉಂಟೆಂದು ಹೇಳಿರಯ್ಯಾ. ಕೂಡಲಸಂಗಮ ದೇವನ ಪೂಜಿಸಿದ ಫಲ ನಿಮ್ಮದಯ್ಯಾ. " "ಅಂದು ಇಂದು ಮತ್ತೊಂದೆನಬೇಡ. ದಿನ ಒಂದೇ ನಮ್ಮ ಕೂಡಲ ಸಂಗನ ಮಾಣದೆ ನೆನೆವಂಗೆ." "ಲಗ್ನವೆಲ್ಲಿಯದೋ ವಿಘ್ನವೆಲ್ಲಿಯದೋ ಸಂಗಯ್ಯಾ ? ದೋಷವೆಲ್ಲಿಯದೋ ದುರಿತವೆಲ್ಲಿಯದೋ ಸಂಗಯ್ಯಾ ? ನಿಮ್ಮ ಮಾಣದೆ ನೆನೆವಂಗೆ ಭವಕರ್ಮವೆಲ್ಲಿಯದೋ ಕೂಡಲಸಂಗಮ ದೇವ ?" ಇದರಿಂದ ಜ್ಯೋತಿಷ್ಯವು ಮಾನವನ ಸರ್ವಸ್ವವನ್ನೂ ಹಾಳು ಮಾಡುವದೆಂದು ಧಾರಾಳವಾಗಿ ಹೇಳಿದ್ದಾರೆ. ಇದರಿಂದ ದೇವಭಕ್ತಿ ಹೆಚ್ಚಾಗಿ ನೀತಿ ಬೆಳೆದು ಮಾನವನು ಒಳ್ಳೆಯವನಾಗುವನು.

(೮) ಹೋಮ ಹವನಗಳನ್ನು ಮಾಡಿ ಅನ್ನ ತುಪ್ಪಗಳನ್ನು ಅಗ್ನಿಯಲ್ಲಿ ಹಾಕಿ ವ್ಯರ್ಥ ಸುಡುವದು ಒಳಿತಲ್ಲ. ಇದರಿಂದ ಹವೆಯೂ ಕೂಡ ಕೆಡುವದು. ಜನರ ಹೊಟ್ಟೆಯಲ್ಲಿ ಅಗ್ನಿ ಅದೆ. ಅದಕ್ಕೆ ಬೇಕಾ

ವರೆ ಅನ್ನ ತುಪ್ಪಗಳನ್ನು ಹಾಕಲಿಕ್ಕೆ ತಿಳಿಸಿದ್ದಾರೆ. ಅದಕ್ಕಾಗಿಯೇ ವೀರ ಶೈವರಲ್ಲಿ ಪ್ರತಿಯೊಂದು ಮಠಮಾನ್ಯಗಳಲ್ಲಿ ಅನ್ನಸಂತರ್ಪಣೆ ನಡೆಯು ತ್ತಿರುವದು. ಅಲ್ಲದೆ ಪ್ರತಿ ವೀರಶೈವರಿಗೂ ಅನ್ನಸಂತರ್ಪಣೆಯೇ ಮಹತ ದಾನವಾಗಿ ಬಿಟ್ಟಿರುವದು. "ಕಿಚ್ಚ ದೈವವೆಂದು ಹವಿಯನಿಕ್ಕುವ ಹಾರು ವರ ಮನೆಯಲು ಕಿಚ್ಚೆದ್ದು ಸುಡುವಾಗ ಬಚ್ಚಲ ನೀರು, ಬೀದಿಯ ಧೂಳವ ಹೊಯ್ದು ಬೊಬ್ಬಿಟ್ಟೆಲ್ಲರ ಕರೆವರಯ್ಯಾ ಕೂಡಲಸಂಗಮದೇವ, ವಂದನೆಯ ಮರೆದು ನಿಂದಿಸುತಿರ್ದರಯ್ಯಾ ?" ಹೋಮ ಹವನಗಳಿಂದ ಅನ್ನವು ವ್ಯರ್ಥ ಹಾಳಾಗಿ ಸುಟ್ಟು ಹೋಗುವದೆಂದು ತಿಳಿದೇ ಈ ತತ್ವವನ್ನು ಅವನು ಬೋಧಿಸಿದನು. ಇದರ ಮಹತ್ವವು ಜನರಿಗೆ ಈಗೀಗ ಹೆಚ್ಚಾಗಿ ತಿಳಿಯ ಹತ್ತಿದೆ. ರಾಮತೀರ್ಥ ವಿವೇಕಾನಂದ, ರಾಮಕೃಷ್ಣ ಮೊದಲಾದ ಆಧುನಿಕ ದೇಶಭಕ್ತ ಸನ್ಯಾಸಿಗಳು ಸಹ ಈ ತತ್ವವನ್ನು ಜನರಿಗೆ ಬೋಧಿಸಿದ್ದಾರೆ.

(೯) ಜಾತಿಭೇದವನ್ನು ಕುಲಮದವನ್ನು ಅಳಿಸಿ ಸಮಾಜದಲ್ಲಿ ಎಲ್ಲರಿಗೂ ಸರಿಸಮಾನ ಸ್ಥಾನಗಳನ್ನು ಕಲ್ಪಿಸಿಕೊಟ್ಟರು. ಎಲ್ಲರಲ್ಲಿ ಅನ್ನೋದಕ ಲಗ್ನ ವ್ಯವಹಾರವನ್ನು ನಡಿಸಿದರು. ಇದು ಧರ್ಮದಲ್ಲಿ ಸರಿಸಮಾನತೆಯ ಸಮಾಜಸತ್ತಾವಾದವನ್ನು ಪ್ರಚಾರ ಮಾಡಿದರು. "ಶಿವಭಕ್ತರನ್ನೆಲ್ಲ ಒಂದೇ ಎಂಬೆ. ಎಂತವನಾದಡೇನು ಲಿಂಗ ಮುಟ್ಟದವನೇ ಕೀಳುಜಾತಿ. ಕುಲವಹುದು ತಪ್ಪದು ಲಿಂಗವ ಮುಟ್ಟಲೊಡನೆ. ಜಲಬಿಂದು ವಿನ ವ್ಯವಹಾರ ಒಂದೇ. ಆಶಿಯಾಮಿಷ ರೋಷ ಹರುಷ, ವಿಷಯಾದಿಗಳೆಲ್ಲ ಒಂದೇ. ಸಪ್ತಧಾತು ಸಮಾಪಿಂಡಂ। ಸಮಯೋನಿ ಸಮುದ್ಭವ। ಆತ್ಮ ಜೀವ ಸಮಾಯುಕ್ತಾಂ । ವರ್ಣಾನಾಂಕಿಂ ಪ್ರಯೋಜನಂ ಜನ್ಮಾನಾ ಜಾಯತೆ ಶೂದ್ರಾಃ ಕ್ರಿಯಾನಾಮುಚ್ಚತೆ ಬ್ರಾಹ್ಮಣಃ" ಎಂಬಂತೆ ಜನಿಸುವಾಗ ಎಲ್ಲರೂ ಹೊಲೆಯರು. ಆದರೆ ಕ್ರಿಯೆಗಳ ಮೇಲಿಂದ ಅವ ನಿಗೆ ಉಚ್ಚ ನೀಚತ್ವಗಳು ಬರುವವು. ಕುಲನೋಡದೆ ಆಚಾರವ ನೋಡಿ ಬೇಕಾದ ಹೆಣ್ಣು ತಕ್ಕೊಂಡು ಬೇಕಾದ ಹೆಣ್ಣು ಕೊಟ್ಟು ಈ ಕ್ರಮವ ನರಿಯದವರ ಭಕ್ತಿ ಹೊಲೆಯ ಶುದ್ಧ ನೀರ ಮಿಂದಂತಾಯಿತಯ್ಯಾ ಕೂಡಲ ಸಂಗಮದೇವಾ" ಮಾನವ ಕುಲವೆಲ್ಲ ಒಂದೇ ತಂದೆತಾಯಿಯ ಮಕ್ಕ ಳೆಂಬ ಭಾವ ಬರುವದು. ಎಲ್ಲರಲ್ಲಿ ಸಮಾನತೆ ನೆಲಿಸುವದು. ರಕ್ತಸಂಬಂಧ ವಾಗುವದರಿಂದ ಪ್ರೀತಿ ಎಲ್ಲರಲ್ಲಿ ವಿಶೇಷ ನೆಲಿಸುವದು ಸಮಾಜವು ಸುರಕ್ಷಿತ ಬಾಳುವದು.

(೧೦) ಉದ್ಯೋಗದಲ್ಲಿ ಉಚ್ಚ ನೀಚ ತತ್ವಗಳಿಲ್ಲ. ಯಾವ ಉದ್ಯೋಗ ಮಾಡಿದರೂ ಅದರದ ಬರೇ ಹೊಟ್ಟೆಬಟ್ಟೆ ಮೆಟ್ಟು ದೊರಕುವದು. ಇದಕ್ಕಿಂತಲೂ ಹೆಚ್ಚಿಗೆ ಏನೂ ಸಿಗುವದಿಲ್ಲ. ಅದಕ್ಕೆ ಎಲ್ಲ ಉದ್ಯೋಗಗಳು ಸಮಾನವೆಂದು ಸಾರಿದರು. "ಸೆಟ್ಟಿ ಎಂಬೆನೆ ಶಿರಿಯಾಳನ? ಮಡಿವಾಳನೆಂಬೆನೆ ಮಾಚಯ್ಯನ? ಡೋಹರನೆಂಬೆನೆ ಕಕ್ಕಯ್ಯನ? ಮಾದಾರನೆಂಬೆನೆ ಚನ್ನಯ್ಯನ? ಆನು ಹಾರುವನೆಂದಡೆ ಕೂಡಲಸಂಗಯ್ಯ ನಗುವನು. "ಜಾತಿವಿಜಾತಿಯಾದರೇನು ಅಜಾತಂಗೆ ಶರಣೆನ್ನದವನೇ ಹೊಲೆಯ ಕೂಡಲಸಂಗಮದೇವ." "ಭಕ್ತರಲ್ಲಿ ಕುಲವನರಸಿದಡೆ ನಿಮ್ಮ ರಾಣಿವಾಸದಾಣೆ ಕೂಡಲಸಂಗಮದೇವ." ಇದು ಎಂಥ ಉಚ್ಚ ತತ್ವ ನೋಡಿರಿ. ಎಂಟುನೂರು ವರ್ಷದ ಹಿಂದೆ ಇವನು ಸಮಾಜದಲ್ಲಿ ದೇಶದಲ್ಲಿ ಎಂಥ ಕ್ರಾಂತಿ ಮಾಡಿದನು ವಿಚಾರಿಸಿರಿ.

(೧೧) ಹಿಂದೂ ಧರ್ಮಕ್ಕೆ ಮಹಾಕಲಂಕವಾದ ಅಸ್ಪೃಶ್ಯತೆಯನ್ನು ಬಹುಮಾಗಿ ಖಂಡಿಸಿ ಆಗಿನ ಕಾಲಕ್ಕೆ ನುಡಿದವರು ಇವರೇ. ಇದರಂತೆ ಎಲ್ಲ ಸಮಾಜಕ್ಕೆ ಅಷ್ಟಾವರಣಗಳನ್ನು ಒದಗಿಸಿಕೊಟ್ಟು ಎಲ್ಲರನ್ನೂ ಸಮಾನವಾಗಿ ಉದ್ಧಾರ ಮಾಡಿ ಕೀರ್ತಿಶಾಲಿಗಳಾಗಿಹೋಗಿದ್ದಾರೆ. "ಹೊಲೆಹೊಳಗೆ ಹುಟ್ಟಿ ಕುಲವನರಸುವೆ. ಎಲೆ ಮಾತಂಗಿಯ ಮಗ ನೀನು. ಸತ್ತುದ ಸೆಳೆವವ ನೆತ್ತಣದ ಹೊಲೆಯ? ಹೋತು ತಂದು ಕೊಲುವಿರಿ. ಶಾಸ್ತ್ರವೆಂಬುದು ಹೋತಿಂಗೆ ಮಾರಿ. ವೇದವೆಂಬುದು ನಿಮಗೆ ತಿಳಿಯದು. ನಮ್ಮ ಕೂಡಲಸಂಗನ ಶರಣರು ಕರ್ಮವಿರಹಿತರು. ಶರಣಸನ್ನಿಹಿತರು. ಅನುಪಮ ಚರಿತರು. ಹೊಲೆಯುಂತೆ ಲಿಂಗವಿದ್ದೆಡೆಯಲ್ಲಿ ಕುಲ ಉಂಟೆ? ಲಿಂಗವಿದ್ದೆಡೆಯಲ್ಲಿ ಆವ ಕುಲವಾದರೇನು, ಲಿಂಗವಿದ್ದವನೇ ಕುಲಜನು." ಈಗಿನ ಒಳ್ಳೇ ಸುಧಾರಿಸಿದ ಕಾಲದಲ್ಲಿಯೂ ಕೂಡ ಹೊಲೆಯರನ್ನು ಮುಟ್ಟಲಿಕ್ಕೆ ಅಡ್ಡಿ ಇಲ್ಲೆಂದು ಚಳವಳಿ ನಡಿಸಿದ್ದಾರೆ. ಆದರೆ ಬಸವಣ್ಣನು ಅವರನ್ನು ಎಲ್ಲ ಬಗೆಯಿಂದ ಸರಿಸಮಾನವೆಂದು ಧಾರಾಳವಾಗಿ ಹೇಳಿದ್ದಾನೆ. ಅದಕ್ಕೆ ಅನ್ನೋದಕ, ಲಗ್ನ ಮೊದಲಾದ ವ್ಯವಹಾರಗಳನ್ನೂ ಕೂಡ ಮಾಡಬೇಕೆಂದು ಬೋಧಿಸಿ ಅದರಂತೆ ನಡೆದುಹೋಗಿದ್ದಾರೆ. ಈಗಿನ ಅಸ್ಪೃಶ್ಯತೆ ನಿವಾರಣೆಯು ಬರೇ ತೋರಿಕೆಯದೇ ಇರುವದು. ಬರೇ ಘೋಷಣೆಯಾಗಿರುವದು. ಬಸವನಂತೆ ಮಾದರಿಯದಾಗಿರುವದಿಲ್ಲ.

(೧೨) ಸ್ತ್ರೀಯರೂ ಕೂಡ ಆಗಿನ ಕಾಲಕ್ಕೆ ಇನ್ನೂ ಶೂದ್ರರೆಂದು ಭಾವನೆ ಇತ್ತು. ಗೀತೆಯಲ್ಲಿ ಇದಕ್ಕೆ ಅಲ್ಪ ಸ್ವಲ್ಪ ವಿರೋಧವು ಕಾಣು ವದು. ಶಾಸ್ತ್ರ ಮುಂತಾದವುಗಳನ್ನು ಓದಲಿಕ್ಕೆ ಕೇಳಲಿಕ್ಕೆ ಅಧಿಕಾರ ವಿದೆಯೆಂದು ಮಾತ್ರ ಹೇಳಿದ್ದಾರೆ. ಆದರೆ ಎಲ್ಲ ರೀತಿಯಿಂದ ಸ್ತ್ರೀಸಮಾ ಜಕ್ಕೆ ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟಿದ್ದಾರೆ. ಆದರೆ ಈಗಿನ ಕಾಲದ ಸ್ವೇಚ್ಛಾಚಾರಿಯಾದ ಸ್ವಾತಂತ್ರ್ಯವಲ್ಲ. ಇದು ನಮ್ಮ ದೇಶದ್ದಲ್ಲ- ಪರ ದೇಶದಿಂದ ಕಡವಾಗಿ ತಂದ ರೀತಿಯದು. ಸ್ತ್ರೀಯರಿಗೆ ಮಹತ್ವದ ಮಾತೃಸ್ಥಾನವನ್ನು ಸರಿಸಮಾನತೆಗಳನ್ನು ಕಲ್ಪಿಸಿಕೊಟ್ಟವರಲ್ಲಿ ಇವರು ಮೊದಲಿಗರು. 'ಮಾತೆಯೆಂಬ ಭಾವ ತಪ್ಪಿ ಅಪ್ಪಿದರೆ ತಿಕೊಂಬ ಕೂಡಲಸಂಗಮದೇವಾ." "ಪರವಧುವ ಮಹಾದೇವಿ ಎಂಬೆ" "ಅನ್ಯ ವಧು ವೆಂಬುದು ನಿಮ್ಮ ರಾಣಿ ವಾಸ" "ಹರಿಗ ಹಾವಿಗಂಜೆ ಉರಿವ ನಾಲಿಗೆ ಗಂಜೆ ಸುರಗಿಯ ಮನೆಗಂಜೆ ಪರಸ್ತ್ರೀಯೆಂಬ ಜೂಲಿಂಗಗಂಜುವೆ"ಎಂದು ಹೇಳಿದ್ದಾರೆ. ಲಿಂಗಧಾರಿಗಳಾದ ಸ್ತ್ರೀಯರಿಗೆ ವೈಲಿಗೆ ಮುಡಚಿಟ್ಟು ಸತ್ತ ಸೂತಕ ಪ್ರಸೂತಿ ಸೂತಕ ಮೊದಲಾದ ದೋಲಗಳಲ್ಲಿ ಅವರೆಲ್ಲ ಪುರುಷ ರಂತೆಯೇ ಎಂದು ಹೇಳಿದ್ದಾರೆ. ಪುರುಷರಂತೆ ಸ್ತ್ರೀಯರಿಗೂ ಲಿಂಗಧಾ ರಿಗಳನ್ನಾಗಿ ಮಾಡಿ ಅಷ್ಟಾವರಣ ಪಂಚಾಚಾರ ಷಟ್ಸ್ಥಲಗಳನ್ನು ಒದಗಿಸಿ ಕೊಟ್ಟರು- ಈ ಪ್ರಕಾರ ಯಾವ ಸಮಾಜದಲ್ಲಿ ಇದೆ ಹೇಳಿ ನೋಡುವಾ. ಪೂರ್ವ ಕಾಲದಲ್ಲಿ ಇಂಥ ಉಚ್ಚ ವಿಚಾರಗಳನ್ನು ಬಳಕೆಯಲ್ಲಿ ಯಾರೂ ತಂದಿಲ್ಲ. ಅದೇಕೆ ಇಂಥ ಸುಧಾರಿಸಿದ ಕಾಲದಲ್ಲಿಯೂ ಕೂಡ ಬಹು ಸಮಾಜಗಳು ಹಳೇ ರೂಢಿಗೆ ಅಂಟಿಕೊಂಡಿದ್ದಾರೆ. ಗಂಡ ಸತ್ತರೆ ಕೆಲವು ಸಮಾಜದವರು ಸ್ತ್ರೀಯರು ತಲೆಯನ್ನು ಬೋಳಿಸಿ ಕೆಂಪು ಅರಿವೆಯನ್ನು ಉಡಿಸುವರು. ಕುಪ್ಪಸವನ್ನೂ ಬಳೆಗಳನ್ನೂ ಬಿಡಿಸುವರು ಇವರು ಬರೇ ಅಡಿಗೆಯ ಕೆಲಸಗಳನ್ನು ಮಾಡಬೇಕೆಂದು ವಿಧಿಸಿರುವರು. ಇದು ಸ್ತ್ರೀಯ ರಿಗೆ ಬಹು ಹೇಯವಾದುದು. ಅವರಿಗೆ ಮುಂದಿನ ಜೀವನೋದ್ಧಾರದ ಕಾರ್ಯಕ್ಕೆ ಹೋಗಗೊಡುವದೇ ಇಲ್ಲ. ಗಂಡ ಸತ್ತರೆ ಪುನರ್ವಿವಾಹ ಆಗಗೊಡುವದಿಲ್ಲ. ಅಲ್ಲದೆ ಸನ್ಯಾಸಿಯಾಗಿ ತ್ಯಾಗ ಜೀವನ ಸಾಗಿಸಲಿಕ್ಕೂ ಅಧಿಕಾರವಿಲ್ಲ. ಈಗೀಗ ಕೆಲ ಸುಧಾರಿಸಿದವರು ಈ ತತ್ವವನ್ನು ಸಾವಧಾ ನವಾಗಿ ಭೋಧಿಸುತ್ತಿರುವರು. ಆದರೂ ಕಾರ್ಯ ರೂಪದಲ್ಲಿ ಇನ್ನೂ ಬಂದಿಲ್ಲ. ಇದನ್ನು ಬಸವನು ಯಾವ ಪ್ರಕಾರ ಬಳಕೆಯಲ್ಲಿ ತಂದನು ವಿಚಾರಿಸಿ ನೋಡಿರಿ.

(೧೩) ಅಡಿಯಿಂದ ಮುಡಿಯ ವರೆಗೆ ಬೇಕಾಗುವ ಎಲ್ಲ ಪದಾರ್ಥಗಳನ್ನು ಶಿವಶರಣರೇ ಶಿವಭಕ್ತರೇ ವೀರಶೈವರೇ ಮಾಡಿದವುಗಳಿರಬೇಕೆಂದು ಒಂದು ಹಿರೇ ನಿಯಮ. ಅನ್ಯ ಧರ್ಮದವರು ಮಾಡಿದವುಗಳನ್ನು ಎಂದೂ ಉಪಯೋಗಿಸಬಾರದು. ಸೂಕ್ಷ್ಮವಾದ ದೋಷವು ತಗಲುವದೆಂದು ಧಾರಾಳವಾಗಿ ಹೇಳುತ್ತಿದ್ದರು. ಅದರಂತೆ ವೀರಶೈವರಲ್ಲಿ ಪ್ರತಿಯೊಂದು ಉದ್ಯೋಗದವರು ಇದ್ದಾರೆ. ಅಗಸ, ಜಾಡ, ಕುಂಬಾರ, ಕಂಬಾರ, ಉಪ್ಪಾರ, ಸಮಗಾರ, ಬಡಿಗ, ನಾಯಿದ ಮೊದಲಾದವರೆಲ್ಲ ಲಿಂಗಾಯತರೇ ಇದ್ದಾರೆ. ಇದರಿಂದ ವೀರಶೈವರ ಧನವು ಪರರ ಪಾಲಾಗುತ್ತಿರಲಿಲ್ಲ. ಆರ್ಥಿಕ ಸ್ಥಿತಿಯು ಒಳ್ಳೇ ಉತ್ತಮ ಮಟ್ಟಕ್ಕೆ ಬರುವದು. ಬಡತನವು ಸಮಾಜದಲ್ಲಿ ತಲೆದೋರದೆ ಸುಸ್ಥಿತಿಯಲ್ಲಿ ಇರುವದು. ಇದರಿಂದ ಭಕ್ತಿ ಮಾಡಲಿಕ್ಕೆ ಪ್ರತಿಯೊಬ್ಬರಿಗೆ ಅನುಕೂಲವಾಗುವದು. ಖಾದಿ ಮೊದಲಾದ ಕೈಗಾರಿಕೆಯ ಒಡವೆಗಳನ್ನೇ ಧರಿಸಬೇಕೆಂದು ಧಾರಾಳವಾಗಿ ಹೇಳಿದೆ. ಕೈಗಾರಿಕೆಗೆ ಮಹತ್ವ ಕೊಡಲಾಗಿದೆ. ಇದರಿಂದ ಕಲೆಯು ಬಾಳಿ ಬೆಳೆದು ಉಳಿಯುವದು.

(೧೪) ಸತ್ಯ ಈಗಿನ ಕಾಲದಲ್ಲಿ ಮಹಾತ್ಮರು ಹಾಕಿಕೊಟ್ಟ ಮಹಾವ್ರತಗಳು. ಇವುಗಳನ್ನು ಆಗ ಬಸವಣ್ಣನವರು ಚನ್ನಾಗಿ ಪಾಲಿಸಿ ಸರ್ವರಿಗೂ ಬೋಧಿಸಿದ್ದು ಕಂಡುಬರುವದು. “ಸ್ವಾಮಿ ಭೃತ್ಯ ಸಂಬಂಧಕ್ಕೆ ಆವುದು ಪಥವೆಂದರೆ ದಿಟವ ನುಡಿವುದು, ನುಡಿದಂತೆ ನಡೆವುದು. ನುಡಿದು ಹುಸಿವ ನಡೆದು ತಪ್ಪುವ ಪ್ರಪಂಚಿಯನೊಲ್ಲ ಕೂಡಲಸಂಗಮದೇವಾ.” ಇದರಂತೆ ಹಿಂಸೆ ಮಾಡಬಾರದೆಂಬ ಬಗೆಗೆ ಮೇಲೆ ವಚನಗಳು ಬಂದಿವೆ.

(೧೫) ಬಸವಣ್ಣನವರು ನೀತಿಗೆ ಬಹು ಮಹತ್ವ ಕೊಟ್ಟದ್ದು ಕಂಡು ಬರುವದು. ಇದೇ ಆಧ್ಯಾತ್ಮ ಕಟ್ಟಡದ ಅಡಿಗಲ್ಲೆಂದು ತಿಳಿದು ಬೋಧಿಸಿದ್ದಾರೆ. “ಕಳಬೇಡ ಕೊಲಬೇಡ ಹುಸಿಯ ನುಡಿಯಲುಬೇಡ ಇದಿರು ಹಳಿಯಲುಬೇಡ ತನ್ನ ಬಣ್ಣಿಸಬೇಡ ಅನ್ಯರಿಗೆ ಅಸಹ್ಯ ಪಡಬೇಡ ಇದೇ ಅಂತರಂಗದ ಶುದ್ಧಿ ಇದೇ ಬಹಿರಂಗದ ಶುದ್ಧಿ ಇದೇ ನಮ್ಮ ಕೂಡಲಸಂಗಮನ ಒಲಿಸುವ ಪರಿ ಕಾಣಿರೋ.” ಇದರಲ್ಲಿ ಸರ್ವ ಬಗೆಯ ನೀತಿ ಹೇಳಿದ್ದಾಗಿದೆ. ನೀತಿಯ ನೆಲಗಟ್ಟೇ ಇಷ್ಟರಲ್ಲಿಯೇ ಅಡಕವಾಗಿದೆ. ಇವುಗಳಂತೆ ನಡೆದರೆ ಮಾನವನು ದೇವನಾಗುವನು.

(೧೬) ಸತ್ಯವು ಎಲ್ಲರ ಸೊತ್ತು ಅದನ್ನು ಬಚ್ಚಿಡಬಾರದು. ನ್ಯಾಯ ನಿಷ್ಠುರನಾಗಿರಬೇಕೆಂದು ಧಾರಾಳವಾಗಿ ಹೇಳಿದ್ದಾರೆ. "ನ್ಯಾಯನಿಷ್ಠುರ ಪರ ನಾನು ಶರಣ, ನಾನಾರಿಗಂಜುವವನಲ್ಲ. ಲೋಕವಿರೋಧಿ ಕೂಡಲ ಸಂಗಮನ ರಾಜತೇಜದಲ್ಲಿಪ್ಪವನ ಶ್ವಾನ ಕಚ್ಚಬಲ್ಲುದೇ" ಇಂಥ ನ್ಯಾಯ ನಿಷ್ಠುರ ವೃತ್ತಿಯು ನಿಜವಾಗಿ ಸತ್ಯವಂತರಿಗೆ ಶಕ್ಯವಿದೆ ಹೊರತು ಉಳಿದ ಸಾಮಾನ್ಯರಿಗೆ ಅಶಕ್ಯವಾದ ಮಾತು. ಇಂಥವರೇ ಮಾತ್ರ ಒಳ್ಳೇ ಸತ್ಯವಾದ ಬೋಧೆಗಳನ್ನು ಜನರಿಗಂಜದೆ ಬೋಧಿಸುವರು. ಉಳಿದವರಿಗೆ ಶಕ್ಯವಿಲ್ಲ. ಅದಕ್ಕಂತೆ ಬಸವಣ್ಣನು ಜಗದಣ್ಣನೆಂದು ಹೇಳುವದರಿಂದ ಮಾತ್ರ ಇಂಥದೆಲ್ಲವೂ ಅವನಿಗೆ ಸಾಧಿಸಿತ್ತು.

(೧೭) ಪ್ರತಿಯೊಬ್ಬ ಶಿವಭಕ್ತ, ಶರಣ, ಜಂಗಮ, ಗುರು, ಮೊದಲಾದ ಎಲ್ಲರೂ ತಮಗನುಗುಣವಾದ ಕಾಯಕವನ್ನು ಮಾಡೇತೀರಬೇಕೆಂದು ಒಂದು ಒಳ್ಳೇ ಕಟ್ಟಳೆಯನ್ನು ವಿಧಿಸಿದ್ದರು. "ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತ. ಲಿಂಗವಾದಡೂ ಕಾಯಕದಿಂದಲೇ ಶಿಲೆಯ ಕುಲ ಹರಿವುದು. ಜಂಗಮವಾದಡೂ ಕಾಯಕದಿಂದಲೇ ವೇಷದ ಪಾಶವು ಹರಿವುದು. ಕಾಯಕದಲ್ಲಿ ನಿರತನಾದಡೆ ಗುರು ದರುಶನವಾದರೂ ಮರೆಯಬೇಕು. ಲಿಂಗಪೂಜೆಯಾದಡೂ ಮರೆಯಬೇಕು. ಜಂಗಮ ಮುಂದಿದ್ದಡೆಯೂ ಹಂಗುಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ ಅಮಳೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು" ಎಂದು ಕಾಯಕದ ಮಹಿಮೆಯನ್ನು ಬಹು ಸರಸಾಗಿ ಸರಾಗವಾಗಿ ಹೇಳಿದ್ದಾರೆ. ಗುರು ಜಂಗಮವಾದರೆ ದುರಭಿಮಾನದಿಂದ ಕೊಬ್ಬಿ ಯಾವ ಕಾಯಕವನ್ನು ಮಾಡದೆ ಬರೇ ಪೂಜೆ ಮೆರೆವಣಿಗೆಗಳನ್ನೇ ಮಾಡಿಸಿಕೊಳ್ಳುತ್ತಾ ಮೆರೆಯಬಾರದು. ಇವರೆಲ್ಲರೂ ಮೊದಲು ಸರಿಯಾಗಿ ಕಾಯಕಮಾಡಿದರೆ ಉಳಿದವರು ಸಹಜ ತಾವೇ ಮಾಡುವರೆಂದು ಹೇಳಿದ್ದಾರೆ.

(೧೮) ಬೇಡಿಕೊಳ್ಳಬಾರದೆಂದು ಬಹು ಕಟುತರವಾಗಿ ಹೇಳಿದ್ದಾರೆ. ಬೇಡಿಕೊಂಡು ಹೊಟ್ಟೆ ಹೊರಕೊಳ್ಳುವದು ಮಹಾಪಾಪವೆಂದು ಎಲ್ಲರಿಗೂ ವಿಧಿಸಿದ್ದಾರೆ. ಬೇಡಲಾಗದು ಜಂಗಮ, ಬೇಡಿಸಲಾಗದು ಭಕ್ತ, ಬೇಡುವವ ಜಂಗಮನೇ ? ಬೇಡುವಾತ ಜಂಗಮನಲ್ಲ. ಬೇಡಿಸಿಕೊಂಬುವವ ಭಕ್ತನೇ" ಇದರ ಮರ್ಮವನ್ನು ಅರಿಯದವರು

ನರಮಾಂಸ ಭಕ್ಷಕರು ಎಂದು ನಿರ್ಭಿಡೆಯಿಂದ ಹೇಳಿದ್ದಾರೆ. ಇದರಿಂದ ಸಮಾಜದಲ್ಲಿ ವ್ಯರ್ಥಸುಲಿಗೆ ನಿಂತು ಎಲ್ಲರೂ ಸರಿಯಾದ ಕಾಯಕ ಮಾಡು ವದರಿಂದ ಆರ್ಥಿಕ ಅಭಿವೃದ್ಧಿಯಾಗಿ ಸಮಾಜವು ಒಳ್ಳೇ ಸುಸ್ಥಿತಿಯಲ್ಲಿ ಬರುವದೆಂದು ತಿಳಿದು ಈ ತತ್ವಗಳನ್ನು ಹಾಕಿದ್ದಾನೆ. ಸುಧಾರಿಸಿದ ಈಗಿನ ಕಾಲದಲ್ಲಿಯೂ ಕೂಡ ಇನ್ನೂ ಈ ಸುಧಾರಣೆಯಾಗಿಲ್ಲ. ಒಳ್ಳೇ ರಾಜ್ಯ ದಲ್ಲಿ ಇರುವ ಎಲ್ಲವ್ಯವಸ್ಥೆ ತತ್ವ ನಿಯಮ ಮೊದಲಾದವುಗಳನ್ನು ಧರ್ಮ ದಲ್ಲಿ ಹಾಕಿ ಒಳ್ಳೇ ಸುಸಂಘಟಿತ ಸಮಾಜದ ನಿರ್ಮಾಣವನ್ನು ಮಾಡಿದ್ದಾನೆ.

(೧೯) ಜಗತ್ತಿನ ಯಾವ ಧರ್ಮದಲ್ಲಿಯೂ ಇಲ್ಲದಂಥ ಅನುಭವ ಮಂಟಪವನ್ನು ಎಂಟುನೂರು ವರ್ಷಗಳ ಹಿಂದೆ ಸ್ಥಾಪಿಸಿ ಸರ್ವರಿಗೂ ಧರ್ಮದ ತಿರುಳನ್ನು ತಿಳಿಸಿಕೊಡುತ್ತಿದ್ದನು. ಅಲ್ಲಿ ಎಲ್ಲ ಜಾತಿಯವರಿಗೂ ಸ್ತ್ರೀಪುರುಷರಿಗೂ ಸರಿಯಾಗಿ ಪ್ರವೇಶವಿತ್ತು. ಅದಕ್ಕೆ ಅಧ್ಯಕ್ಷ ಉಪಾಧ್ಯಕ್ಷ ಸೆಕ್ರೆಟರಿ ಮೆಂಬರರು ಮೊದಲಾದವುಗಳು ಸರಿಯಾದ ಪದ್ಧತಿಯಿಂದ ನಡಿ ಸಿದ್ದರು. ಅಲ್ಲಿ ಪಂಚಾಚಾರ ಅಷ್ಟಾವರಣ ಹಾಗೂ ಷಟ್ಸ್ಥಲಗಳ ಬಗ್ಗೆ ಅಂಜದೆ ಅಳುಕದೆ ಎಲ್ಲರಿಗೂ ಚರ್ಚೆಮಾಡಲಿಕ್ಕೆ ಆಸ್ಪದ ಕೊಟ್ಟಿದ್ದರು. ಇದು ಜಗದಣ್ಣನ ಹಿರೇ ಮತ್ತು ಉದಾತ್ತ ಹಾಗೂ ಮಹತ್ವದ ವಿಚಾ ರವೇ ಸರಿ. ಇದು ಪ್ರತಿಸೋಮವಾರ ಕೂಡುತ್ತಿತ್ತು. ಎಲ್ಲಬಗೆಯ ವಚನಗಳು ಇಲ್ಲಿ ಚರ್ಚೆಯಾಗಿ ಪಾಸಾದಬಳಿಕ ಬರೆದಿಡುತ್ತಿದ್ದರು. ಅಲ್ಲಮಪ್ರಭು ಗಳಾದ ಸನ್ಯಾಸಿ ಜ್ಞಾನಿಗಳು ಇದರ ಅಧ್ಯಕ್ಷರಿದ್ದರು. ಇದನ್ನು ತಿಳಿದು ದೇಶದ ಎಲ್ಲ ಭಾಗಗಳಿಂದ ರಾಜ ಮಹಾರಾಜರೂ ಕೂಡ ಬಂದು ಇದ ರಲ್ಲಿ ಭಾಗವಹಿಸುತ್ತಿದ್ದರು.

(೨೦) ಧಾರ್ಮಿಕ ಕಾಂಗ್ರೇಸ ಸಂಸ್ಥೆಯನ್ನು ಏರ್ಪಡಿಸಿದ್ದರು. ಕಲ್ಯಾಣದಲ್ಲಿ ಅದರ ಕೇಂದ್ರವಿತ್ತು. ಆದರೆ ಹಳ್ಳಿಹಳ್ಳಿಗಳಲ್ಲಿ ಅದರ ಸ್ವರೂ ಪದ್ದೇ ಆದಂಥ ಮಠಗಳನ್ನು ಸ್ಥಾಪಿಸಿ ಅಲ್ಲಿ ಸತ್ಯಾಗ್ರಹಿಗಳನ್ನು ಇಟ್ಟಿ ದ್ದರು. ಇವರೆಲ್ಲ ಆ ಸಂಸ್ಥೆಗೆ ಮೆಂಬರರೇ ಇದ್ದರು. ಧರ್ಮದಲ್ಲಿ ಅನ್ಯಾಯ ಕಂಡರೆ ಜನರಿಗೆ ಸತ್ಯಾಗ್ರಹ ತತ್ವದಿಂದಲೇ ಅವರನ್ನು ಹಾದಿಗೆ ತರುತ್ತಿ ದ್ದರು. ಈಗ ಇದಕ್ಕೆ ಕಾಯಕವೆಂದು ಹೆಸರು ಬಂದಿದೆ. ಮುಳ್ಳಾವಿಗೆಯ ಮೇಲೆ ನಿಲ್ಲುವದು, ಉಪವಾಸ ಕೂಡ್ರುವದು, ಕಂಬಕ್ಕೆ ತೆಕ್ಕಿಹೊಡಿದು ನಿಲ್ಲುವದು. ಇವುಗಳಿಂದ ಧರ್ಮದಲ್ಲಿ ಜಾಗ್ರತೆಗೊಳಿಸುತ್ತಿದ್ದರು. ಅಯ್ಯಗಳು

ಇವುಗಳನ್ನು ಈಗ ಹೊಟ್ಟೆಪಾಡಿಗಾಗಿ ಮಾಡುವರು. ಇಂಥ ಕಾಂಗ್ರೇಸ ಮೆಂಬರರು ೧ ಲಕ್ಷ ೯೬ ಸಾವಿರ ಇದ್ದರು. ಅವರೆಲ್ಲ ಹೆಚ್ಚಾಗಿ ಹಳ್ಳಿಯ ಮಠಗಳಲ್ಲಿ ವಾಸಿಸುತ್ತಿದ್ದರು. ಕಲ್ಯಾಣವಲ್ಲಿ ಊಟಹೊಡೆಯುತ್ತ ಕೂಡುವ ವ್ಯಕ್ತಿಗಳಲ್ಲ. ಇವರಲ್ಲಿ ೧೫೦೦ ಹೆಚ್ಚಿನವರು ಮತ್ತು ಇವರಲ್ಲಿ ೭೭೦ ಅಮರಗಣಂಗಳು ಹೆಚ್ಚಿನವರು ಹೀಗೆ ಇದ್ದರು. ಪ್ರಸಂಗ ಬಂದಾಗ ಎಲ್ಲರೂ ಕೂಡುತ್ತಿದ್ದರು. ಆದರೂ ಎಲ್ಲರೂ ಉದ್ಯೋಗ ಮಾಡುತ್ತಿದ್ದರು. ಇವರಲ್ಲಿ ಎಲ್ಲ ಜಾತಿಯವರೂ ಇದ್ದರು.

(೨೧) ಕನ್ನಡ ನುಡಿಗೆ ಬಹು ಕಳೆತಂದು ಕೊಟ್ಟರು. ಪ್ರತಿಯೊಂದು ಗ್ರಂಥಗಳನ್ನು ಮೊದಲು ಸಂಸ್ಕೃತದಲ್ಲಿ ಆಗ ಬರೆಯುತ್ತಿದ್ದರು. ಆದರೆ ಜನಸಾಮಾನ್ಯರಿಗೆ ತಿಳಿಯಲೋಸುಗ ಅಚ್ಚ ಕನ್ನಡದಲ್ಲಿ ಬರೆಯಲಿಕ್ಕೆ ಹತ್ತಿದರು. ಅದರಂತೆ ಅನುಭವ ಮಂಟಪದಲ್ಲಿ ಇದೇ ಭಾಷೆಯಲ್ಲಿ ಚರ್ಚಿಸುತ್ತಿದ್ದರು. ವಚನವಾಙ್ಮಯವನ್ನು ಹೊಸದಾಗಿ ರಚಿಸಿ ಕನ್ನಡನಾಡಿನ ಹಿರಿಮೆ ನುಡಿಯ ಹಿರಿಮೆಯನ್ನು ತಂದು ಕೊಟ್ಟರು. ಇಂಥ ವಚನ ವಾಙ್ಮಯವನ್ನು ಯಾವ ಭಾಷೆಯಲ್ಲಿಯೂ ಯಾರೂ ಇನ್ನೂ ಹುಡುಕಿಲ್ಲ ಬರೆದಿಲ್ಲ. ಯಾವದೃಷ್ಟಿಯಿಂದ ವಿಚಾರಿಸಿದರೂ ಜಗದಣ್ಣನೆಂದು ಹೇಳಬಹುದು.

(೨೨) ಎಲ್ಲಕ್ಕೂ ಹಿರೇ ಕಾಣಿಕೆ ಎಂದರೆ ಷಟ್‌ಸ್ಥಲ ಸಿದ್ಧಾಂತವೇ ಸರಿ ಇಂಥ ದಿವ್ಯಭವ್ಯಪೂರ್ಣ ಕಾಣಿಕೆಯನ್ನು ಯಾವ ಅವತಾರಿಗಳೂ ಋಷಿಗಳೂ ಮುನಿಗಳೂ ಕವಿಗಳೂ ಯೋಗಿಗಳೂ ಜಗತ್ತಿಗೆ ಕೊಟ್ಟಿಲ್ಲೆಂದರೂ ಅಡ್ಡಿ ಇಲ್ಲ. ಇಂಥಕಾಣಿಕೆಯ ಧರ್ಮವನ್ನು ಅದೆಷ್ಟು ವೀರಶೈವರು? ಅದೆಷ್ಟು ಜಂಗಮರು? ಅದೆಷ್ಟು ಗುರುಗಳು? ಅರಿತಿದ್ದಾರೆ ಹೇಳುವದು ಬಹುಕಠಿಣವದೆ. ನಮ್ಮ ಹಿರಿಯರು ನಮಗೆ ಅರ್ಥವಾಗದೆ ಹೋಗಿದ್ದಾರೆ. ಇಂಥ ಕಾರ್ಯವು ಯಾವ ಗುರುವರ್ಗದವರೂ ಮಾಡದೆ ರಾವಬಹಾದ್ದೂರ ಹಳಕಟ್ಟಿಯವರ ಪುಣ್ಯಪ್ರಭಾವದಿಂದ ಮಾಡಲ್ಪಡುತ್ತಿರುವದು ನಮ್ಮ ಗುರುವರ್ಗದವರು ಬರೇ ಪೂಜೆ ಮಾಡಿಸಿಕೊಳ್ಳುವದಕ್ಕೆ ಜಗಳಾಡುವರು. ಆದರೆ ಯಾವ ಕಾರ್ಯವೂ ಅವರಿಗೆ ಬೇಡ. ಇಂಥ ಇವರ ಕಾಯಕಕ್ಕೆ ಧನದಿಂದ ನೆರವನ್ನು ಸಹ ಈಯಬಾರದೆ? ಇದರಮೇಲಿಂದ ಇವರೇ ಗುರುಗಳಲ್ಲವೇನು?

(೧) **ಭಕ್ತಸ್ಥಲಃ—** ವೇದಾಂತದ ಭಕ್ತಿಯೋಗ ಹೃದಯಕ್ಕೆ ಸಂಬಂಧಿಸಿದೆ. ಭಾವಯುಕ್ತವಾದುದು ಪರಮಾತ್ಮನ ಮೇಲೆ ತ್ರಿಕರಣಪೂರ್ವಕ

ಮಾಡುವ ಭಕ್ತಿ. ಅಂದರೆ ಪ್ರೀತಿಯೇ ಸರಿ. ಇದು ಕೂಡ ನಿಷ್ಕಾಮವಾಗಿರಬೇಕು. ವಚನಗಳಲ್ಲಿ ನಾವಗಾವ್ಯೃತ ತುಂಬಿ, ನಯನದಲ್ಲಿ ಮೂರುತಿ ತುಂಬಿ ಕರ್ಣದಲ್ಲಿ ಕೀರುತಿ ತುಂಬಿ ಮನದಲ್ಲಿ ನೆನಹು ತುಂಬಿ, ಸರ್ವಾಂಗದೊಳ ಹೊರಗ ನೀವೇ ತುಂಬಿ ನಿಮ್ಮ ಪಾದ ಕಮಲದೊಳಗಾನು ತುಂಬಿ, ಎಂದು ಸರ್ವಕಡೆ ಸರ್ವದರಲ್ಲಿ ಪರಮಾತ್ಮನನ್ನೇ ತುಂಬಿಕೊಳ್ಳುವದೇ ದಿವ್ಯ ಭಕ್ತಿಯಾಗುವದು.

(೨) **ಮಹೇಶಸ್ಥಲಃ**— ವೇದಾಂತದಲ್ಲಿ ಜ್ಞಾನಯೋಗವು ವಿಚಾರಕ್ಕೆ ಸಂಬಂಧಿಸಿದ್ದುಬುದ್ಧಿಗಮ್ಯವಾದದು ನೀತಿ. ನೀತಿಪೂರ್ಣ ಭಕ್ತಿಯಲ್ಲಿ ಮುಂದುವರಿದ ಸಾಧಕನು ಪರಮಾತ್ಮನ ಮಹಿಮೆ ಲೀಲೆ ಶಕ್ತಿ ಸ್ವರೂಪಗಳ ಜ್ಞಾನವಾಗುವದು. ಬ್ರಹ್ಮಸತ್ಯ, ಜಗನ್ಮಿಥ್ಯವೆಂದು ಹೇಳುವದು. "ಸಾವಿಲ್ಲದ ಕೇಡಿಲ್ಲದ ಚಲುವಾಂಗನೊಲಿದೆನವ್ವಾ. ಎಡೆಇಲ್ಲದ ಕಡೆಇಲ್ಲದ ತೆರಹಿಲ್ಲದ ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೊಲಿದೆ. ಕುಲಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ" ಇದು ಜ್ಞಾನಯೋಗಿಯ ನಿಲಯವು.

(೩) **ಪ್ರಸಾದಿಸ್ಥಲಃ**— ಭಕ್ತಸ್ಥಲ (ಭಾವಕ್ಕೆ) ಹೃದಯಕ್ಕೆ ಮಹೇಶಸ್ಥಲ (ವಿಚಾರಕ್ಕೆ) ಬುದ್ಧಿಗೆ ಪ್ರಸಾದಿಸ್ಥಲವು ಕ್ರಿಯಗೆ ಅಂದರೆ ಕರ್ಮಯೋಗಕೆ ಶರೀರಕ್ಕೆ ಸಂಬಂಧಿಸಿದೆ. ಭಾವಕ್ಕೂ ವಿಚಾರಕ್ಕೂ ಹೊಳೆದ ಸತ್ಯಾನುಭವಗಳನ್ನು ಆಚರಣೆಯಲ್ಲಿ ತಂದರೆ ಅದು ಸತ್ಯವೆಂದು ತಿಳಿಸುವದು ಇವು ಮೂರು ಕೂಡಿದರೇ ಪೂರ್ಣ ಯೋಗವಾಗುವದು. ವೇದಾಂತದಲ್ಲಿ ಕ್ರಿಯೆ ಭಕ್ತಿ ಜ್ಞಾನವೆಂದು ಕ್ರಮವಾಗಿ ಹೇಳಿದ್ದಾರೆ. ಇದು ಸರಿ ಎನಿಸುವದಿಲ್ಲ. ಮೊದಲು ಭಕ್ತಿ, ಜ್ಞಾನ, ಕ್ರಿಯೆ ಹೀಗಾದರೆ ಸರಿಯಾಗುವದು. ತಾನು ಮಾಡುವ ಪ್ರತಿಯೊಂದು ಕರ್ಮಫಲ ಪ್ರಾಪ್ತಿಯನ್ನು ಗುರುಲಿಂಗ ಜಂಗಮಕ್ಕೆ ಅಂದರೆ ನರರೂಪದಲ್ಲಿರುವ ಹರನಿಗೆ ಅರ್ಪಿಸುವದು. ಮಿಕ್ಕ ಪ್ರಸಾದವನ್ನು ಅಂದರೆ ಹೊಟ್ಟೆಬಟ್ಟೆಯ ಪೂರ್ತೆ ಸ್ವೀಕರಿಸುವದು ಪ್ರಸಂಗಬಂದರೆ ಅದನ್ನೂ ಕೂಡ ಅನ್ಯರಿಗೆ ಕೊಡುವದೇ ಪ್ರಸಾದಿಸ್ಥಲವೆನಿಸುವದು. ಶರಣರೆಲ್ಲ ಇದನ್ನು ಸಾಧಿಸಿದ್ದರು. ಎಲ್ಲರೂ ನುಡಿಯುವವರೇ ಇರುವರು. ಆದರೆ ನಡೆದು ತೋರಿಸುವವರು ಸಿಗುವದು. ವಿರಳ. ಎಲ್ಲರೂ ಗುರುಗಳಾಗಬೇಕೆನ್ನುವರು ಶಿಷ್ಯರಾಗುವದು ಬೇಡ.

(೪) **ಪ್ರಾಣಲಿಂಗಿಸ್ಥಲ:**— ಹಿಂದಿನ ಮೂರು ಸ್ಥಲಗಳಲ್ಲಿ ಆತ್ಮ ಲಿಂಗಬೇರೆ, ಪರಮಾತ್ಮ ಬೇರೆ, ಜೀವ ಬೇರೆ, ಶಿವಬೇರೆ, ಎಂಬಭಾವವು ಇನ್ನೂ ತಲೆದೋರುತ್ತಿರುವದು. ಸಾಧನವು ಹೆಚ್ಚಾದಂತೆ ಸಾಧಕನಿಗೆ ಈ ಸ್ಥಲದಲ್ಲಿ ಶಿವೋ ಹಂ ಭಾವವು ಅಳವಡುವದು. ಹೊರಗೆ ಹುಡುಕುವ ಪರಮಾತ್ಮನು ತನ್ನೊಳಗೆ ತಾನೇ ಇರುವನೆಂದು ತಿಳಿಯುವದು. ಅದರಂತೆ ಅನುಭವವು ಆಗುವದು. ಇದು "ಅಹಂ ಬ್ರಹ್ಮಾಸ್ಮಿ" ತತ್ವವನ್ನೇ ಬೋಧಿಸುವದು.

(೫) **ಶರಣಸ್ಥಲ:**— ಇದು ಜೀವನ್ಮುಕ್ತಿ ಸ್ಥಿತಿ. ಸ್ಥಿತ ಪ್ರಜ್ಞನ ಸ್ಥಿತಿ. ತಾನೇಶಿವನಾದಬಳಿಕ ಜೀವಕೋಟಿಯನ್ನು ಮುಕ್ತ ಮಾಡುವ ಹೊಣೆಯನ್ನು ಹೊತ್ತುಕೊಂಡು ಪ್ರಪಂಚದಲ್ಲಿ ಬಾಳುವನು. ಇವನಿಗೆ ಎಲ್ಲರಲ್ಲಿಯೂ ಪರಮಾತ್ಮನು ಕಾಣುವನು. "ಸರ್ವಂ ಖಲ್ವಿದಂ ಬ್ರಹ್ಮಂ" ಸರ್ವವೂ ಬ್ರಹ್ಮಮಯವಾಗಿ ತೋರುವದರಿಂದ ಜಗದ ಸೇವೆಯಿಂದ ಪರಮಾತ್ಮನ ಪೂಜೆಯನ್ನು ಮಾಡುತ್ತಿರುವನು. ಇಂಥವನೇ ನಿಜವಾದ ದೇಶಧರ್ಮಸೇವಕನಾಗಬಲ್ಲನು. ಇವನು ಸೇವೆಯನ್ನ ಒಳ್ಳೇ ಕಳಕಳಿಯಿಂದಲೇ ಮಾಡುವನು. ತೋರಿಕೆಗೆ ಸೇವೆ ಮಾಡಲಾರನು. ಇವನಿಗೆ ಕರ್ಮದ ಕಟ್ಟಳೆಇಲ್ಲ. ಎಲ್ಲರಲ್ಲಿ ಇವನು ದೇವನನ್ನೇ ಕಾಣುವದರಿಂದ ಭವಿಯ ಮುಖವನ್ನು ಎಂದೂ ನೋಡನೆಂದು ಹೇಳುವದರ ಸ್ವಾರಸ್ಯವೇ ಇದಾಗಿದೆ. ಇವದೇ ನಿಜವಾದ ಶರಣನು. ಜಗವೇ ಶಿವಮಯವಾಗಿ ತೋರುವದು. ಸರ್ವತ್ರ ಸಮ ದೃಷ್ಟಿಯು ಬರುವದು. ಎಲ್ಲವನ್ನೂ ಎಲ್ಲರನ್ನೂ ಪರಮಾತ್ಮ ಭಾವನೆಯಿಂದ ನೋಡಿ ಪ್ರೀತಿಸುವನು. ಸುಖದುಃಖ ಮೊದಲಾದ ದ್ವಂದ್ವಗಳಲ್ಲಿ ನಿಮಗಾಗಿ ಇರುವನು.

(೬) **ಐಕ್ಯಸ್ಥಲ:**— ಇದು ಕಡೆಯ ಸ್ಥಲ. ಶಿವ ಜೀವರು ಒಂದಾಗುವ ಸ್ಥಿತಿ. ಲಿಂಗಾಂಗ ಸಾಮರಸ್ಯ ಪಡೆದ ಸ್ಥಿತಿ. ಸಾಧಕನು ಏರುತ್ತ ಏರುತ್ತ ತನ್ನ ಕರ್ತವ್ಯ ಕರ್ಮಗಳನ್ನು ನಿಷ್ಠೆಯಿಂದ ಪಾಲಿಸಿ ಅನಂತದಲ್ಲಿ ಲೀನವಾಗುವ ಸ್ಥಿತಿ. ಇದೇ ಮುಕ್ತಾವಸ್ಥೆ. ಭಕ್ತಿ ಎಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ ಲಿಂಗವೆಂಬ ಎಲೆಯಾಯಿತು ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯಿತು. ಆಚಾರವೆಂಬ ಕಾಯಾಯಿತ್ತು. ನಿಷ್ಪತ್ತಿ (ಸ್ವರೂಪ ಜ್ಞಾನ) ವೆಂಬ ಹಣ್ಣಾಯಿತ್ತು. ನಿಷ್ಪತ್ತಿ

ಎಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ ಕೂಡಲಸಂಗಮದೇವ ತನಗೆ ಬೇಕೆಂದೆತ್ತಿಕೊಂಡ." ಇದರಲ್ಲಿ ಮೇಲಿನ ಆರುಸ್ಥಲಗಳ ವರ್ಣನೆಯು ಸಾಮಾನ್ಯವಾಗಿ ಬಂದಿದೆ. ಇಲ್ಲಿ ಎಲ್ಲ ಪೂಜೆ, ಭಕ್ತಿ, ಕ್ರಿಯಾ, ಧ್ಯಾನ ಸಾಧನೆಗಳೆಲ್ಲ ತಮಗೆ ತಾವೇ ನಿಂತು ಬಿಡುವವು. ಇವು ಆರೂ ಕೂಡಿದರೆ ಶಿವಯೋಗವಾಗುವದು. ಇದರಲ್ಲಿ ಒಂದು ಕಡಿಮೆಯಾದರೆ ಶಿವಯೋಗವಾಗಲಾರನು. ವೇದಾಂತದಲ್ಲಿ ಕರ್ಮ ಭಕ್ತಿ ಜ್ಞಾನ ಕ್ರಮವಾಗಿ ಕೂಡಿದರೆ ಪೂರ್ಣಯೋಗ ವಾಗುವದು. ಆದರೂ ಕರ್ಮ, ಜ್ಞಾನ, ಭಕ್ತಿ, ರಾಜ, ಹಠ, ಲಯ, ಮೊದಲಾದ ಯೋಗಗಳಲ್ಲವೂ ಸರ್ವಸ್ವತಂತ್ರವಾಗಿರುವವೆಂದೇ ಹೇಳುವರು. ಪ್ರತಿಯೊಂದರಿಂದ ಮುಕ್ತಿ ಸಿಗುವದೆಂದು ಹೇಳುತ್ತಾರೆ. ಆದರೆ ಬಸವಣ್ಣನವರ ಶಿವಯೋಗವು (ಷಟ್‌ಸ್ಥಲವು) ಎಂದು ಮುಂದುವರಿದಿದೆ. ನೋಡಿರಿ ಈ ಆರೂ ಸ್ಥಲಗಳನ್ನು ಕ್ರಮಾಂಕವಾಗಿಯೇ ಸಾಧಕನು ಏರದೆ ಗತ್ಯಂತರವಿಲ್ಲ. ಇದರಮೇಲಿಂದ ಬಸವಣ್ಣನು ಜಗಣ್ಣನೆಂದು ಹೇಳಲಿಕ್ಕೆ ಏನೂ ಅಡ್ಡಿಯಿಲ್ಲ. ಇವರ ವಿಚಾರ ಇವರು ಮಾಡಿದ ಕ್ರಾಂತಿ ಇವರ ಜೀವನ ಇವರ ಆಚಾರ ವಿಚಾರ ನಡೆನುಡಿ ಆಗುಹೋಗುಗಳನ್ನು ವಿಚಾರಿಸಿದರೆ ಎಲ್ಲ ಅವತಾರಿಕರಲ್ಲಿ ಹೆಚ್ಚಿನವರೆಂದು ಸಹಜ ಕಂಡುಬರುವದು.

(೨೩) ಈ ಪ್ರಕಾರ ಷಟ್ಸ್ಥಲ ಸಿದ್ಧಾಂತವನ್ನು ಜಗಕೆ ದಾನವಾಗಿ ನೀಡಿದ್ದಾರೆ. ಅಲ್ಲದೆ ವೇದಾಂತದಲ್ಲಿ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ, ಆಜ್ಞೇಯ ಎಂದು ಆರು ಚಕ್ರಗಳನ್ನು ಸಹಸ್ರಾರವೆಂಬ ಕಮಲವನ್ನು ಕಲ್ಪಿಸಿದ್ದಾರೆ. ಇದಕ್ಕೂ ಮುಂದೆ ಇವರು ಹೋಗಿ ಪಾಶ್ಚಿಮೋತ್ತರ ಚಕ್ರ, ಶಿಖಾಚಕ್ರ, ಅಣುಚಕ್ರಗಳನ್ನು ದಾಟಿ ಈಡಾಪಿಂಗಳಗಳ ಗುಂಟ ಶಕ್ತಿ ಇಳಿದು ಬಂದು ಹೆಬ್ಬೆರಳುಗಳ ತನಕ ಬರುವದು. ಇದಕ್ಕಂತೆ ವೀರಶೈವರಲ್ಲಿ ಕರಣತೀರ್ಥ, ಕರಣ ಪ್ರಸಾದ, ಪಾದೋದಕ ಪ್ರಸಾದಗಳನ್ನು ತಕ್ಕೊಳ್ಳುವ ರೂಢಿಯಾಗಿದೆ. ಇದು ಯಾವ ಧರ್ಮದಲ್ಲಿಯೂ ಇಲ್ಲ. ಇದರ ಅರ್ಥವನ್ನು ಈಗ ನಮ್ಮವರು ತಿಳಿದುಕೊಂಡವರು ಬಹು ಕಡಿಮೆ ಇದ್ದಾರೆ. ಇದನ್ನು ವಿಚಾರಿಸಿದರೆ ಬಸವಣ್ಣನು ಜಗಣ್ಣನೇ ಹೌದೆಂದು ಎಲ್ಲರಿಗೂ ಅನಿಸದೆ ಇರದು.

(೨೪) ಧರ್ಮ:— ಅಹಿಂಸಾಮಯ ಧರ್ಮವನ್ನೇ ಬೋಧಿಸಿದ್ದಾರೆ. ಎಲ್ಲ ಪ್ರಾಣಿಗಳಲ್ಲಿ ದಯ ತೋರುವದೇ ಧರ್ಮವೆಂದು ಹೇಳಿದ್ದಾರೆ.

"ದಯವಿಲ್ಲದ ಧರ್ಮವಾವುದಯ್ಯಾ? ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ ದಯವೇ ಧರ್ಮದ ಮೂಲವಯ್ಯಾ. ಕೂಡಲಸಂಗಯ್ಯ ನಂತಲ್ಲದೊಲ್ಲನಯ್ಯಾ" ಎಂದು ಎಷ್ಟು ಮಧುರವಾಗಿ ಹಾಡಿದ್ದಾರೆ. ಹೀಗೆ ಯಾವ ಧರ್ಮದವರು ಹಾಡಿರುವರು ವಿಚಾರಿಸಿರಿ.

(೨೫) ಹಿಂಸೆ ಮಾಡಲೇಬಾರದೆಂದು ಬಹು ಕಡುತರವಾಗಿ ಹೇಳಿದ್ದಾನೆ. "ಕೊಲ್ಲೆನಯ್ಯಾ ಪ್ರಾಣಿಗಳ, ಮೆಲ್ಲೆನಯ್ಯಾ. ಬಾಯಿ ಇಚ್ಛೆಗೆ. ಒಲ್ಲೆನಯ್ಯಾ ಪರಸತಿಯರ ಸಂಗವ. ಒಲ್ಲೆನಯ್ಯಾ ಮುಂದೆ ತೊಡಕುಂಟೆಂಬುದ. ಒಳ್ಳದ ಬಾಯಿಯಂತೆ ಒಂದೆ ಮನವ ಮಾಡಿ ನಿಲ್ಲೆಂದು ನಿಲ್ಲಿಸಯ್ಯಾ ಕೂಡಲಸಂಗಮದೇವ."

(೨೬) ಇಹ-ಪರಗಳೆರಡನ್ನೂ ಕೂಡಿ ನಡಿಸಿದ್ದಾರೆ. ಅದರಂತೆ ಅನ್ಯರಿಗೂ ದಾರಿಯನ್ನು ತೋರಿಸಿದ್ದಾರೆ. ಇದರಂತೆ ಎಲ್ಲ ಶರಣರೂ ಇದ್ದರು. ಪೂರ್ವ ಭಾಗದಲ್ಲಿ ಸಾಧನೆ ಬಲಿಯುವದಕ್ಕಿಂತ ಮೊದಲು ಅಲ್ಪ ಸ್ವಲ್ಪ ಸಂಸಾರ ಮಾಡಿ ಒಂದೆರಡು ಮಕ್ಕಳನ್ನು ಕೂಡ ಹಡೆದು ಹಿಂದಿನಿಂದ ಹೆಂಡತಿಯನ್ನು ಗೆಳತಿ, ಮಾತೆಯೆಂದು ಸಂಬೋಧಿಸಿ ವಿಷಯ ಕೂಪದಲ್ಲಿ ಬೀಳದೆ ನಿರ್ವಿಷಯಿಗಳಾಗಿ ಪಾರಮಾರ್ಥ ಸಂಸಾರಗಳೆರಡನ್ನೂ ಸಾಗಿಸಿಕೊಂಡು ಹೋಗಿದ್ದಾರೆ. ಸನ್ಯಾಸಿಯಾಗಿ ಹೆಣ್ಣನ್ನು ಬಿಟ್ಟು ಅರಣ್ಯಕ್ಕೆ ಓಡಿ ಹೋಗಲಿಲ್ಲ. "ಬಳಸಿ ಬ್ರಹ್ಮಚಾರಿಗಳಾಗಿದ್ದರು." ಅಂದರೆ ಹೆಣ್ಣಿನ ಕೂಡ ಮನೆ ಮಠಗಳಲ್ಲಿ ಇದ್ದರೂ ವಿಷಯವನ್ನು ಭೋಗಿಸದೆ ಪಕ್ಕಾ ಬ್ರಹ್ಮಚಾರಿಗಳಾಗಿಯೇ ಇದ್ದರು. "ಉಂಡು ಉಪವಾಸಿ". ಉಪವಾಸವಿದ್ದರೂ ಚನ್ನಾಗಿ ಉಂಡವನಂತೆ ಸಂತೃಪ್ತರಾಗಿಯೇ ಇದ್ದರು. ಏನೂ ಭೋಗಿಸದೆ ಇದ್ದರೂ ಭೋಗಿಸಿದವನಿಗಿಂತ ಸದಾ ಸಂತೃಪ್ತರಾಗಿದ್ದರು. ನಮ್ಮವರು ಈಗ ಅರ್ಥವನ್ನು ಕೂಡ ತಿಳಿಯಲಾರದ ಸ್ಥಿತಿಯಲ್ಲಿ ಇದ್ದಾರೆ. ಇದಕ್ಕೆ ವಿಪರೀತ ಅರ್ಥವನ್ನು ಮಾಡಿ ನಮ್ಮವರು ಕೆಡುತ್ತಿರುವರು. ಬಸವನಿಗೆ ಇಬ್ಬರು ಹೆಂಡರಿದ್ದರೂ ಒಂದು ದಿನ ಕೂಡ ವಿಷಯ ತೃಪ್ತಿ ಮಾಡಿಕೊಳ್ಳಲಿಲ್ಲೆಂದು ಅವರ ಚರಿತೆಯಿಂದ ಗೊತ್ತಾಗುವದು. ಇವರು ಬಳಸಿ ಬ್ರಹ್ಮಚಾರಿಯಾಗಿದ್ದರು. ಅಂದರೆ ಇವರು ಸದಾ ದೇವಭಕ್ತಿ, ಜ್ಞಾನ, ಚರ್ಚೆ, ವಚನಚರ್ಚೆ, ಮಂತ್ರಿಕೆಲಸ, ದಾಸೋಹ, ಧರ್ಮಪ್ರಚಾರ ಮೊದಲಾದ ಅನೇಕ ಕೆಲಸಗಳಲ್ಲಿಯೇ ಸದಾ ಕಾಲ ಕಳೆಯುತ್ತಿದ್ದರು. ಆತನ

ಹೆಂಡತಿಯಾದ ನೀಲಲೋಚನೆಯು ವಿಷಯಕ್ಕೆ ಎಳಿಸಿದಾಗ ಪ್ರಭುದೇವರು ಜಂಗಮ ರೂಪದಿಂದ ಬಂದು ಅದನ್ನು ತಡೆದರು. ಅವಳು ಹೀಗೆ ಕೆಲವು ದಿನ ಕಳೆದ ಮೇಲೆ ನಿತ್ಯದಂತೆ ಪ್ರಭುದೇವರು ಬರಲು ಮನೆಯಲ್ಲಿ ಬಸವಣ್ಣನಿಲ್ಲೆಂದು ಹೇಳಿದಾಗ ಪ್ರಭು ತಿರುಗಿ ಹೋಗಲು ಅವನ ಕೂಡ ಬಸವನ ಪ್ರಾಣವೇ ಹೋಗಿ ಬಿಟ್ಟಿತು. ಇದನ್ನು ತಿಳಿದು ಪ್ರಭುದೇವರಿಗೆ ಕ್ಷಮೆ ಬೇಡಲು ಬಸವನ ಜೀವವು ಬಂದಿತು. ಮೊದಲಿನ ಹೆಂಡತಿ ಗಂಗಾಂಬಿಕೆಯಂತೂ ಕಾಮವನ್ನು ಎಳ್ಳಷ್ಟು ಬಯಸದೆ ಗೆಳತಿಯಂತೆ ಇದ್ದಳು ಎಂದು ಕೆಲವು ಪುರಾಣಗಳಲ್ಲಿ ಬಂದಿದೆ. ಇದನ್ನು ವಿಚಾರಿಸುವದು ಅತಿ ಅವಶ್ಯವೇ ಇದೆ. ಇಂಥ ಕಾಮ ಕಾಂಚನ ರಹಿತ ಜೀವನವೆಂದರೆ ಎಷ್ಟು ಜನಕ್ಕೆ ಸಾಧಿಸಿದೆ, ವಿಚಾರಿಸಿ ಹೇಳಿರಿ. ಆದಕ್ಕಂತೆ ಇವರು ಜಗದಣ್ಣನೆಂದು ಮೇಲಿಂದ ಮೇಲೆ ಹೇಳಬೇಕಾಗಿದೆ.

(೨೭) ಸಾಧಕನು ತನ್ನ ಸಾಧನದಲ್ಲಿ ಚ್ಯುತಿ ತಂದುಕೊಳ್ಳಬಾರದೆಂಬ ಬಗ್ಗೆ ಬಹು ಕಾಳಜೀ ತಕ್ಕೊಂಡಿದ್ದಾನೆ. ಸಾಧನೆಯ ಕಾಲಕ್ಕೆ ಬೇರೆ ಯಾವದನ್ನೂ ಮಾಡಹೋದರೆ ದೇವನ ದರ್ಶನ ಕೆಡುವದೆಂದು ಅಭಿಪ್ರಾಯ- ಪರಿಪೂರ್ಣನಾದಮೇಲೆ ಪರಸೇವೆಯನ್ನು ಮಾಡಬೇಕೆಂದು ಧಾರಾಳವಾಗಿ ಹೇಳಿದ್ದಾರೆ. "ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ತನುವ ಸಂತೈಸಿಕೊಳ್ಳಿರಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿರಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿರಿ. ನೆರೆಮನೆಯ ದುಃಖಕ್ಕೆ ಅಳುವರ ಕಂಡರೆ ಮೆಚ್ಚ ಕೂಡಲಸಂಗಮದೇವ." ಸಾಧಕನು ತನ್ನ ಆಧ್ಯಾತ್ಮ ಸಾಧನೆಯನ್ನು ಕೊನೆಗಳನ್ನು ಕೊನೆಗಾಣಿಸುವ ತನಕ ಪರಸೇವೆ ಮಾಡಬಾರದು. ಒಂದು ವೇಳೆ ಮಾಡಿದರೆ ಹೆಸರು ಕೀರ್ತಿ ಮೊದಲಾದವುಗಳಿಗೆ ಆಸೆಬಿಟ್ಟು ಮಾಡುವದೆಂದು ಹೇಳಿದ್ದಾರೆ.

(೨೮) ಇವರೇ ಮುಂದೆ ಪರಸೇವೆಯನ್ನು ಸಮರ್ಥಿಸಿದ್ದಾರೆ. ಮಾಡುವದೆಲ್ಲ ಪರರಿಗಾಗಿ ಗಳಿಕೆಯೆಲ್ಲ ಪರರಿಗಾಗಿ ಎಂದು ಹೇಳಿದ್ದಾರೆ. ಆರಂಬವ ಮಾಡುವೆನು ಗುರುಪೂಜೆಗೆಂದು. ಬೇವಹಾರವನ್ನು ಮಾಡುವೆನು ಲಿಂಗಾರ್ಚನೆಗೆಂದು. ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು. ನಾನಾವ ಕರ್ಮಗಳ ಮಾಡಿದರೂ ಆ ಕರ್ಮದ ಫಲಭೋಗವ ನೀ ಕೊಡುವೆ ಎಂಬುದು ನಾ ಬಲ್ಲೆ. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ

ಮಾಡೆನು. ನಿಮ್ಮ ಸೊಮ್ಮು ನಿಮಗೆ ಸಲಿಸುವೆನು. ನಿಮ್ಮಾಣೆ ಕೂಡಲ ಸಂಗಮದೇವಾ" ಒಳ್ಳೇ ಸ್ಥಿತಿಗೆ ಹೋಗದೆ ಪರಸೇವೆ ಚನ್ನಾಗಿ ಆಗುವದಿಲ್ಲ. ಮೊದಲಿಗೆ ಪರಸೇವೆ ಮಾಡಹತ್ತಿದರೆ ಅದು ಸರಿಯಾಗಿ ಆಗುವದಿಲ್ಲ. ಅದಕ್ಕೆ ಮನೆ ಗೆದ್ದು ಮಾರು ಗೆದಿ ಎಂದು ಗಾದೆಯಾಗಿರುವದು. ಈ ಶರೀರವನ್ನು ದಯಿಸಿ ಪರಸೇವೆ ಮಾಡಬೇಕೆಂದು ಹೇಳಿದ್ದಾರೆ. ಈಗ ಹೀಗಾಗಿ ಪರ ಸೇವೆಯು ನಟನೆ ಪಾಶರ್ವಗಳು ಹೆಚ್ಚಾಗಿ ಹೋಗಿರುವವು. ಆಧಾರ ಶುದ್ಧಿ ಮಾಡಿಕೊಂಡ ಮೇಲೆ ಪರರ ದುಃಖ ಕೇಳಿ ನೋಡಿ ಹೃದಯ ಕರಗುವದು. ಆಗ ಸೇವೆ ಕಳಕಳಿಯಿಂದ ಬಹಳ ಚನ್ನಾಗಿ ಆಗುವದು. ನಿಷ್ಕಾಮಸೇವೆ ಯಾಗುವದು. ಇವರು ಪರಸೇವೆಯ ಉತ್ತಮ ರೀತಿಯನ್ನು ಹೇಳಿದ್ದಾರೆ. ಅದರಂತೆ ನಡೆದರೆ ಬಹು ಚನ್ನಾಗಿ ಆಗುವದು.

(೨೯) ತ್ರಿಕರಣಪೂರ್ವಕ ಪರಸೇವೆ ಮಾಡಿ ಇಹಪರದಲ್ಲಿ ಸಮಾ ಜದಲ್ಲಿ ಧರ್ಮದಲ್ಲಿ ನೀತಿಯಲ್ಲಿ ಉದ್ಯೋಗದಲ್ಲಿ ಆರ್ಥಿಕ ಸ್ಥಿತಿಯಲ್ಲಿ ಜಾತಿಯಲ್ಲಿ ಸಮತಾವಾದವನ್ನು ನೆಲೆಗೊಳಿಸಿದವರು ಇಲ್ಲಿಯ ವರೆಗೆ ಯಾವ ದೇಶದಲ್ಲಿ ಯಾವ ಕಾಲದಲ್ಲಿಯೂ ಆಗಿಲ್ಲ. ಈ ತರದ ಸಮಾಜ ಸಮತಾವಾದವನ್ನು ಯಾರೂ ಇಲ್ಲಿಯತನಕ ಪ್ರಚಾರ ಮಾಡಿ ಬೋಧಿ ಸಿಲ್ಲ. ಇಂಥ ಇಹಪರಕ್ಕೆ ಸಂಬಂಧಿಸಿದ ಸಮತಾವಾದದಿಂದ ಮಾತ್ರ ಜಗದ ದುಃಖವು ನಿಜವಾಗಿ ಹೋಗುವದರಲ್ಲಿ ಯಾವ ಸಂದೇಹವೂ ಇಲ್ಲ.

ಈ ಪ್ರಕಾರ ಬಸವಣ್ಣನವರ ಇನ್ನೂ ಎಷ್ಟೋ ತತ್ವಗಳುಂಟು. ಅವು ಬಹು ವಿಶಾಲ ವ್ಯಾಪಕವಾದವುಗಳುಂಟು. ಮೇಲೆ ವಿವರಿಸಿದ ೨೯ ತತ್ವ ಗಳು ಎಲ್ಲಕ್ಕಿಂತ ಮಹತ್ವವಾದವುಗಳೂ ಹೆಚ್ಚಿನವುಗಳೂ ಎಂದು ಬಗೆದು ವಿವರಿಸಲಾಗಿದೆ. ಇವುಗಳಲ್ಲಿ ಕೆಲವು ಜಗತ್ತಿನಲ್ಲಿಯೇ ಅತಿ ಹೊಸವು ಇರುವವು. ಇದರಮೇಲಿಂದ ಶ್ರೀಬಸವಣ್ಣನವರು ಜಗದಣ್ಣನೆಂದು ಅಂಜಿಕೆ ಇಲ್ಲದೆ ಹೇಳಬಹುದು. ಇವರು ೭೭೦ ಅಮರಗಣಂಗಳ ಪೂಜೆಯನ್ನು ವಿಶಾಲ ತತ್ವದ ಮೇಲೆ ಮಾಡಿದರು. ಇವರೆಲ್ಲ ಬೇರೆ ಬೇರೆ ಜಾತಿಯ ಶರಣರು. ಜಂಗಮಸ್ಥಲಕ್ಕೆ ನಿಜವಾಗಿ ಮುಟ್ಟಿ ಜಂಗಮರಾದವರು. ಜಗ ಭರಿತರಾಗಿ ಜಂಗಮರಾದವರು. ಈಗಿನಂತೆ ಅಯ್ನಗಳ ಹೊಟ್ಟೆಯಿಂದ ಹುಟ್ಟಿದ ಕೇಳ ಜಂಗಮರಲ್ಲ. ಹೆಸರಿಗೆ ಜಂಗಮರ ವೇಷಹಾಕಿದವರಲ್ಲ. ನಿಜವಾದ ಜ್ಞಾನಿಗಳು. ಇದರಲ್ಲಿ ಎಲ್ಲ ಕೀಳ ಜಾತಿಯವರೇ ಹೆಚ್ಚಾಗಿ ಇದ್ದರು. ಅವರೆಲ್ಲ ಜಂಗಮರಾಗಿದ್ದರು. ಅವರ ಪೂಜೆಯನ್ನು ವಿಶಾಲ

ತತ್ವದ ಮೇಲೆ ಪೂಜೆ ಮಾಡಿದ್ದಾರೆ. ಇದೇನು ಸಾಮಾನ್ಯ ಕೆಲಸವಲ್ಲ. ಹೊಲೆಯ ಮಾದಿಗರೆನಿಸಿಕೊಳ್ಳುವವರ ಪೂಜೆಯನ್ನೂ ಮಾಡಿದರು. ಅವರೆಲ್ಲ ಜಂಗಮಸ್ಥಲಕ್ಕೆ ಹೋಗಿದ್ದರು. ಈಗಿನಂತೆ ಬರೀ ಅಯ್ಯಗಳ ಪೂಜೆಯನ್ನು ಮಾಡಲಿಲ್ಲ. ಇದೇನು ಸಾಮಾನ್ಯ ಕೆಲಸವಲ್ಲ. ಇದು ಸಮಾಜದಲ್ಲಿ ಮಹಾಕ್ರಾಂತಿಯೇ ಸರಿ. ಯಾರು ಇಂಥ ಕ್ರಾಂತಿಯನ್ನು ಮಾಡಿದ್ದಾರೆ, ವಿಚಾರಿಸಿರಿ. ಈ ಎಲ್ಲ ಇವರ ವಿಚಾರ ಸ್ಮೃತಿಗಳನ್ನು ನೋಡಲಾಗಿ ಶ್ರೀಬಸವಣ್ಣನವರು ಎಲ್ಲ ಮಹಾತ್ಮರ ಎಲ್ಲ ಋಷಿಗಳ ಎಲ್ಲ ತ್ಯಾಗಿಗಳ ಎಲ್ಲ ಯೋಗಿಗಳ ಎಲ್ಲ ಸಿದ್ಧರ ಎಲ್ಲ ಅವತಾರಿಗಳ ಅಣ್ಣನೆಂದು ಧಾರಾಳವಾಗಿ ಹೇಳಬಹುದು. ಬಸವಣ್ಣನನ್ನು ಅರಿಯುವದು ಬಹುಕಠಿಣ. ಹಿಂದೇದ ಕನ್ನಡನಾಡಿನ ವೀರಶೈವ ಸಮಾಜದಲ್ಲಿ ಬಸವನು ಅವನ ತತ್ವಗಳು ಇದ್ದುದರಿಂದ ಅವನ ಬಗ್ಗೆ ಜಗತ್ತಿಗೆ ಇನ್ನೂ ಏನೂ ತಿಳಿದಿಲ್ಲ. ಬಂಗಾಲದಲ್ಲಿ ಇವನು ಜನಿಸಿದ್ದರೆ ಜಗತ್ತಿನ ಬಸವನೆಂದು ಕೊಂಡಾಡುತ್ತಿದ್ದರೆಂದು ಹೇಳಬಹುದು. ಬಸವನ ಕಾಲಕ್ಕೆ ಮೋಟಾರ, ರೇಡಿಯೋ, ವಿಮಾನ, ತಾರ, ಹಡಗ, ಟೆಲಿಪೋನ, ಲಾವುಡಸ್ಪೀಕರ, ವಾಯರಲೆಸ್ ಮೊದಲಾದ ಸಾಧನಗಳಿದ್ದರೆ ಅವರ ತತ್ವವು ಜಗತ್ತನ್ನೇ ಮುತ್ತುತ್ತಿತ್ತು. ಜಗದಲ್ಲಿ ವೀರಶೈವರ ರಾಜಗಳೇ ಇರುತ್ತಿದ್ದವು. ಈಗಾಗುವ ಜಾತಿಮತ್ಸರವು ಇರುತ್ತಿದ್ದಿಲ್ಲ. ಶಾಂತತೆಯು ನಿಜವಾಗಿ ನೆಲಿಸುತ್ತಿತ್ತು. ಹೀಗಿದ್ದ ಬಸವ ಹಾಗು ಬಸವನ ತತ್ವಗಳನ್ನು ಕೆಲವು ಗುರುವರ್ಗದವರು ಹೀಯಾಳಿಸಿ ಅವನ ವಿರುದ್ಧ ಕತ್ತಿಯನ್ನು ಎತ್ತಿ ಸೋತಿದ್ದಾರೆ. ಸೋಲುತ್ತಲೂ ಇದ್ದಾರೆ. ಆದರೂ ಈ ಜನರು ತಮ್ಮ ದುರಭಿಮಾನವನ್ನು ಬಿಡುವದೇ ಇಲ್ಲ. ಇವರ ವಿರೋಧದಿಂದ ಬಸವಣ್ಣನವರ ಕೀರ್ತಿ ವಿಶೇಷವಾಗಿ ಹಬ್ಬಿದೆ. ಹಬ್ಬುತ್ತಲೂ ಇದೆ ಇಂಥ ಮಹಾತ್ಮನ ಜಯಂತಿಯನ್ನು ಮುಂದಿನ ತಿಂಗಳ ಎಪ್ರಿಲ್ ೨೫ನೇ ತಾರೀಖಿನ ದಿವಸ ಸಂಭ್ರಮದಿಂದ ದೇಶದ ತುಂಬ ಆಚರಿಸಿ ಅವನ ತತ್ವಗಳನ್ನು ಪ್ರಚಾರ ಮಾಡಬೇಕೆಂದು ಎಲ್ಲರಿಗೂ ವಿನಂತಿಸಿಕೊಳ್ಳುವೆವು. ಇವರು ಮಾಡಿದ ನುಡಿಯ ಸೇವೆ ನಾಡ ಸೇವೆ ಧರ್ಮಸೇವೆ ಆಧ್ಯಾತ್ಮಸೇವೆ ಸಮಾಜ ಸೇವೆಗಳನ್ನು ಅರಿತುಕೊಂಡು ಅದರಂತೆ ತಾವೂ ನಡೆಯಲಿಕ್ಕೆ ಯತ್ನಿಸಬೇಕೆಂದು ಕೋರುತ್ತೇವೆ.

---

# ಸಾಮಾಜಿಕ ಸಭ್ಯತೆ

(ಬರೆದವರು: ಶ್ರೀ ಅನ್ನದಾನೀಶ್ವರ ವಿರಕ್ತಮಠ, ಬಿ. ಎ. ಆನರ್ಸ, ಬಿ. ಟಿ, ಇತ್ಯಾದಿ.)



ಮನುಷ್ಯನಿಗೆ ಕೇವಲ ಬೌದ್ಧಿಕ ಶ್ರೇಷ್ಠತೆಯಿದ್ದರೆ ಸಾಲದು. ಹಾರ್ದಿಕ ಪ್ರಭಾವವೂ ಬೇಕು. ಹೃದಯದ ಸಂಸ್ಕೃತಿಯಿಲ್ಲದೆ ಮಾನವ ಜನಾಂಗದಲ್ಲಿ ಪ್ರಗತಿ, ಶಾಂತಿ ಸುಖಸಮೃದ್ಧಿಗಳು ವಿಕಾಸಗೊಳ್ಳಲಾರವು. ತರ್ಕಶಾಸ್ತ್ರಗಳು ಶಾಂತಿಯ ದೂತರಲ್ಲ. ಹೃದಯದ ಅನುಭಾವಗಳು, ಮನದುಂಬಿ ಮಾತನಾಡುವ ಎದೆಮಾತುಗಳು, ಸಹಾನುಭೂತಿಯ ಸಭ್ಯತೆಯ ವ್ಯವಹಾರಗಳು. ಸಮಾಜದಲ್ಲಿ ಶಾಂತಿಯನ್ನು ಸ್ಥಾಪಿಸಲು ಸಹಾಯಕಾರಿಗಳು. ಕೇವಲ ತರ್ಕಮಾಡುತ್ತ ಹೊರಟರೆ ಅಹಂಮನ್ಯತೆಯು ಬೆಳೆಯುತ್ತ ಹೋಗುವದು. ದ್ವೇಷದ ವಾತಾವರಣಕ್ಕೆ ಆಸ್ಪದ ಸಿಗುವದು.

ಸಮಾಜದಲ್ಲಿ ಬೇರೊಬ್ಬರ ಕೂಡ ಮಾತನಾಡುವಾಗ ಖಂಡಿಸುವ ಧೋರಣವನ್ನು ಇಟ್ಟುಕೊಂಡು ಸಾಗಬಾರದು. ನನ್ನ ಭಾವನೆಗಳು, ವಿಚಾರಗಳು, ಅನುರಾಗಗಳು, ಸಹಜ ಸ್ವಭಾವಗಳು, ಇತ್ಯಾದಿಗಳ ಬಗೆಗೆ ನನಗೆ ಅಭಿಮಾನವಿರುವಂತೆ ಅನ್ಯರಿಗೂ ಅವರವರ ಭಾವನೆಗಳು, ವಿಚಾರಗಳ ಬಗೆಗೆ ಅಭಿಮಾನವಿರಲೇ ಬೇಕಷ್ಟೇ. ನನ್ನಂತೆಯೇ ಅನ್ಯರು ಭಾವಿಸಬೇಕು. ಎನ್ನುವದಕ್ಕೆ ನನಗೆ ಅಧಿಕಾರವೇ ಇಲ್ಲ. ಪರಿಸ್ಥಿತಿಗನುಸರಿಸಿ ಕೆಲಕೆಲ ಅನುಭಾವಗಳು ಮನುಷ್ಯನಲ್ಲಿ ಉದಯವಾಗಬಹುದು. ಅದೇ ಪರಿಸ್ಥಿತಿಯಲ್ಲಿದ್ದರೆ ಆ ತರದ ಅನುಭವವು ನನಗೂ ಉಂಟಾಗುತ್ತಿತ್ತು ಎನ್ನುವದೇ ಸಹಾನುಭೂತಿಯ ಲಕ್ಷಣವು. ಭಾರತದೇಶದಲ್ಲಿ ಧಾರ್ಮಿಕ ಭಾವನೆಯು ಹೆಚ್ಚಾಗಿದೆ. ಆಯಾಯ ದೇಶಗಳ ಪರಿಸ್ಥಿತಿಗಳನುಸರಿಸಿ ಹಾಗೆ ಆಗಿದೆ. ಪಾಶ್ಚಾತ್ಯ ದೇಶದವರು ಪೌರ್ವಾತ್ಯರನ್ನು ಧಿಕ್ಕರಿಸಬಾರದು. ಪೌರ್ವಾತ್ಯರು ಪಾಶ್ಚಿಮಾತ್ಯರನ್ನು ಖಂಡಿಸಬಾರದು. ಸಹಾನುಭೂತಿಯ ಕಲ್ಪನಾಶಕ್ತಿಬೇಕು. ಪಾಶ್ಚಿಮಾತ್ಯರಲ್ಲಿ ಧಾರ್ಮಿಕ ಭಾವನೆಯಿಲ್ಲವೆಂದಲ್ಲ. ಪೌರ್ವಾತ್ಯರಲ್ಲಿ ವೈಜ್ಞಾನಿಕ ವಿಚಾರಶಕ್ತಿಯಿಲ್ಲವೆಂದಲ್ಲ. ಪ್ರಮಾಣದಲ್ಲಿ ಹೆಚ್ಚು ಕಡಿಮೆಯಿರಬಹುದು ಇಷ್ಟೇ.

ಔಟ್ಟಿನ, ಅಹಂಮನ್ಯತೆಯು, ಮತಾಂಧತೆಯು, ಅವಿವೇಕದ, ಮಾತು ಗಳನ್ನು ಒಬ್ಬಮನುಷ್ಯನು ಆಡುತ್ತಿದ್ದರೆ ಘನವಂತನಾದ ಅಕಬರನಂತೆ ಉದಾರ ಧೋರಣವನ್ನು ತಾಳಬೇಕು. ನಾನೂ ಮತಾಂಧನಾದರೆ ಸಮಾಜದಲ್ಲಿ ಶಾಂತಿಸ್ಥಾಪನೆಯ ಕಾರ್ಯದಲ್ಲಿ ನನ್ನ ಪಾಲಿನ ಕೆಲಸವನ್ನು ಮಾಡಿದಂ ತಾಗಲಿಲ್ಲ. ವಿವೇಕದ ಮತಶ್ರದ್ಧೆಯಿರಲಿ- ಮತಾಂಧತೆಬೇಡ. ಮತಶ್ರ ದ್ಧೆಯು ಕೇವಲ ವೈಯಕ್ತಿಕ ವಿಷಯ. ಮತಶ್ರದ್ಧೆಯು ರಾಷ್ಟ್ರದ ಪುನ ರುಸ್ಥಾನಕ್ಕೆ ಅಡ್ಡಬರುವದಾದರೆ ಅದು ಘಾತಕವೇ ಸರಿ. ಜನಾಂಗದಲ್ಲಿ ರಾಷ್ಟ್ರೀಯ, ವಿಶ್ವಬಾಂಧವ್ಯದ ವಿಚಾರ, ಭಾವನೆಗಳುಳ್ಳ ಮತವು ಬೆಳೆಯು ವದಾದರೆ ಅದು ಶಾಂತಿಗೆ ಸಾಧಕವೇ ಸರಿ.

ಔರಂಗಜೇಬನಂಥ ಮತಾಂಧನನ್ನು ಕಂಡು ಕೋಪಿಸಬೇಡ. ಕನಿ ಕರ ಪಡು. ಔರಂಗಜೇಬನಲ್ಲಿದ್ದ ಅನ್ಯ ಸದ್ಗುಣಗಳಿಗೆ ಕುರುಡನಾಗಬೇಡ. ವಿಮರ್ಶಾತ್ಮಕ ವಿಚಾರಶಕ್ತಿಯಿಂದ ಸಾಗುವಾಗ ಏಕ ಪಕ್ಷೀಯ ವಾದಕ್ಕೆ ಸ್ಥಾನವೇ ಇಲ್ಲ. ಅನ್ಯರಿಗೆ ಸಹಾನುಭೂತಿಯನ್ನು ತೋರಿಸಿದರೆ ಅವರು ನಮ್ಮನ್ನು ಸೇರುವದಿಲ್ಲ. ಸಮಾಜದಲ್ಲಿ ಸಹಾನುಭೂತಿಯನ್ನು ಬಯಸುವ ಜನಗಳೇ ಅತ್ಯಧಿಕ. ಅದು ಸ್ವಾಭಾವಿಕ.

ದ್ವೇಷವನ್ನು ಪ್ರೇಮದಿಂದಲೂ, ಅಸತ್ಯವನ್ನು ಸತ್ಯದಿಂದಲೂ, ಹಿಂಸೆ ಯನ್ನು ಅಹಿಂಸೆಯಿಂದಲೂ, ಅನಾಚಾರವನ್ನು ಆಚಾರದಿಂದಲೂ ಗೆಲ್ಲಬೇ ಕೆಂದು ಭಗವಾನ್ ಬುದ್ಧ, ಸಾಧುವರ್ಯ ಕ್ರೈಸ್ತ, ಮಹಾನುಭಾವಿ ಬಸ ವಣ್ಣ, ಮಹಾತ್ಮಾಗಾಂಧಿ ಮುಂತಾದವರು ಬೋಧಿಸಿದರು. ಅದರಂತೆ ನಡೆ ದರು. ಆ ದಕಾರಣ ಅವರು ಸಮಾಜ ಕಟ್ಟಿದರು. ಸುಧಾರಿಸಿದರು. ತಿದ್ದಿದರು. ತೀಡಿದರು. ಸಾಮಾಜಿಕ ಸಭ್ಯತೆಯು ಸತ್ಯ, ಅಹಿಂಸೆ ಪ್ರೇಮ ಗಳಿಂದ ಬೆಳಗುವದು.

ವಾಗ್ಮಿಯು ತಪ್ಪು ಮಾತನಾಡಿದರೆ, ಲೇಖಕನು ತಪ್ಪು ವಿಚಾರ ಪ್ರಕ ಟಿಸಿದಾಗ, ವಾದಿಯು ತಪ್ಪು ವಾದಿಸಿದಾಗ, ವೈರಿಯು ದ್ವೇಷ ಸಾರಿಸಿದಾಗ, ಆತ್ಮನಿಗ್ರಹವು, ವಿವೇಕ ಬುದ್ಧಿಯು ಜಾಗ್ರತವಾಗಬೇಕು. ತಪ್ಪಿಗೆ ತಪ್ಪು ಕೂಡಿದರೆ, ತಪ್ಪುಗಳ ಮಾಲೆಯೇ ಬೆಳೆಯುತ್ತ ಹೋಗಿ ಸಮಾಜದಲ್ಲಿ ತಪ್ಪು ವಿಚಾರಸರಣಿಯು ಹಬ್ಬುವದು. ತನ್ನ ತಪ್ಪುಗಳನ್ನು ಒಪ್ಪಿಕೊಳ್ಳು ವದು ಸಾಮಾಜಿಕ ಸಭ್ಯತೆಯು. ತಾನು ಜೀವಿಸಿ ಅನ್ಯರಿಗೆ ಜೀವಿಸಲಿಕ್ಕೆ ಆಸ್ಪದ ಕೊಡುವದು ಸಾಮಾಜಿಕ ಸಭ್ಯತೆಯು. ಈ ಸಾಮಾಜಿಕ ಸಭ್ಯತೆ

ಯಿಲ್ಲದ್ದರಿಂದಲೇ ಜಾಗತಿಕ ಯುದ್ಧಗಳು ಸಂಭವಿಸುತ್ತವೆ. ಸಾಮಾಜಿಕ ಸಭ್ಯತೆಯಲ್ಲಿ ವೈಯಕ್ತಿಕ ವಿಕಾಸ ಮತ್ತು ಸಮಾಜದ ಪ್ರಗತಿ ಭದ್ರತೆಗಳು ಸಮಾವೇಶವಾಗಿವೆಯೆಂದು ಹೇಳಬಹುದು.

ವ್ಯಾಥ್ಯು ಅರ್ನಾಲ್ಡರು ಹೇಳುವಂತೆ ಸಮಾಜದಲ್ಲಿ ಸುಮಧುರ ಬಾಂಧವ್ಯವು ಸ್ಥಾಪಿತವಾಗಬೇಕಾದರೆ ಸ್ವೇಚ್ಛಾವೃತ್ತಿಯೇ ಸ್ವಾತಂತ್ರ್ಯವೆಂದು ತಿಳಿಯಬಾರದು. ಗುಲಾಮಗಿರಿಯೇ ವಿಧೇಯ ವೃತ್ತಿಯೆಂದೂ ತಿಳಿಯಬಾರದು. ಮಾಧುರ್ಯ ಮತ್ತು ಪ್ರಕಾಶಗಳು ( *Sweetness and light* ) ಮಾನವರನ್ನು ಒಂದುಗೂಡಿಸಬಲ್ಲವು. ಇದೇ ಸಾಮಾಜಿಕ ಸಭ್ಯತೆ !

ಪಾರ್ಲಿಮೆಂಟಿನಲ್ಲಿ, ಲೇಜಿಸ್ಲೇಟಿವ್ ಅಸೆಂಬ್ಲಿಗಳಲ್ಲಿ, ಸಮ್ಮೇಲನಗಳಲ್ಲಿ, ತರ್ಕಗೋಷ್ಠಿಗಳಲ್ಲಿ ಕಂಡುಬಾರದ ಸುಮಧುರ ಬಾಂಧವ್ಯವು ಬಸವಣ್ಣನ ಅನುಭಾವ ಮಂಟಪದಲ್ಲಿ, ಗಾಂಧಿಯ ಪ್ರಾರ್ಥನಾಸಭೆಯಲ್ಲಿ, ಬುದ್ಧನ ವಿಹಾರದಲ್ಲಿ, ಆತ್ಮಜ್ಞಾನಿಗಳ ಚರ್ಚೆಯಲ್ಲಿ ಶೋಭಿಸುತ್ತಿತ್ತು. ಅಲ್ಲಿ ಸಾಮಾಜಿಕ ಸಭ್ಯತೆಯಿತ್ತು. ಸಹಾನುಭೂತಿಯುಳ್ಳ ಡಾಯರೆಕ್ಟರನು ಫಿಲ್ಮಕಂಪನಿಯನ್ನು ಬೆಳೆಯಿಸಬಲ್ಲನು. ಉದ್ವೇಗ ಭಾವನೆಯ, ತಾಳ್ಮೆಯಿಲ್ಲದ ಡಾಯರೇಕ್ಟರನ ಹತ್ತರ ಸಿನಿಮಾ ತಾರೆಗಳು ಹೊರಳಿ ನೋಡುವದಿಲ್ಲ. ಗಿರಣಿ ಮಾಲಿಕ-ಕೂಲಿಕಾರ, ಜಮೀನದಾರ-ರೈತ, ಬಂಡವಳಶಾಹಿ-ಬಡವ, ಗುರು-ಶಿಷ್ಯ, ಸ್ವಾಮಿ-ಸೇವಕ ಇವರಲ್ಲಿ ಸಾಮಾಜಿಕ ಸಭ್ಯತೆಯು ಪ್ರಕಾಶಿಸಬೇಕು. ವರ್ಗದ ತಿಕ್ಕಾಟವುಳ್ಳ ಸಮಾಜರಚನೆಗಿಂತ ವರ್ಗರಹಿತ ಸಮಾಜರಚನೆಯು ಮೇಲು. ಬಂಡವಳಶಾಹೀ ಸಮಾಜರಚನೆಗಿಂತ ಸಾಮ್ಯವಾದೀ ಸಮಾಜರಚನೆ ಮೇಲು. ವರ್ಣಾಶ್ರಮ ಜಾತಿಬಂಧನ ಸಮಾಜ ವ್ಯವಸ್ಥೆಗಿಂತ ವರ್ಣರಹಿತ, ಜಾತಿರಹಿತ, ಸಮಾನತೆಯ, ಸ್ವಾತಂತ್ರ್ಯದ, ಸಹೋದರತೆಯ, ಉದ್ಯೋಗಶೀಲ, ಗುಣಗ್ರಾಹಕ ಸಮಾಜ ವ್ಯವಸ್ಥೆಯು ಮಿಗಿಲಾದುದು. ಅಂಥ ಸಮಾಜ ರಚನೆಗೆ ಸಾಮಾಜಿಕ ಸಭ್ಯತೆಯು ಬೇಕು. ಸಹಾನುಭೂತಿಯ ವಾತಾವರಣ ಬೇಕು.

ಮನುಷ್ಯ ಸ್ವಭಾವವನ್ನರಿಯುವದು ಮೊದಲನೆಯ ಕೆಲಸ. ಆ ಸ್ವಭಾವದಲ್ಲಿಯ ಲೋಪದೋಷಗಳನ್ನು ಖಂಡಿಸದೇ ಸಾಗುವದು ಎರಡನೆಯ ಕೆಲಸ. ಸದ್ಗುಣಗಳನ್ನು ಪ್ರೋತ್ಸಾಹಿಸುವದು ಮೂರನೆಯ ಕೆಲಸ. ಲೋಪದೋಷಗಳಿಗೆ ಪ್ರತಿಯಾಗಿ ತುಂಬು ಗುಣಗಳನ್ನು ಪ್ರಕಾಶಿಸುವದು ಐದನೆಯ

ಕೆಲಸ. ಕೊನೆಯದಾಗಿ ಪ್ರತಿಭಾವಂತ ವ್ಯಕ್ತಿಗಳಿಂದ, ಸಂಭಾಷಣೆಗಳಿಂದ, ಅನುಭಾವಿಯುತ ಸ್ನೇಹಸಮ್ಮೇಲನಗಳಿಂದ, ಸ್ನೇಹಪೂರ್ಣ ವಾತಾವರಣ ನಿರ್ಮಿಸುವದು ಶ್ರೇಷ್ಠವು. ಈ ಪರಿವಿಡಿಯಿಂದ ಸಾಗಿದಾಗ ಮಾನವಸ್ವಭಾವವು ಉದಾತ್ತತೆಯನ್ನು ಹೊಂದುವದರಲ್ಲಿ ಸಂದೇಹವಿಲ್ಲ. ಶೈಕ್ಷಣಿಕ ಮಾನಸಶಾಸ್ತ್ರವು ಇದೇ ಮಾತನ್ನು ಹೇಳುವದು.

ನನ್ನ ಚಿರಂಜೀವಿ ಗುರುಸಿದ್ಧಯ್ಯನು ಮನೆಯಲ್ಲಿ ಗಣಿತ ಬಿಡಿಸುವಾಗ ನಾನು ಸ್ವಲ್ಪ ಸಿಟ್ಟಿಗೆದ್ದೆನು. ಅವನಲ್ಲಿ ಭಯವು ಹುಟ್ಟಿತು. ವಿಚಾರಶಕ್ತಿಯು ಕಡಿಮೆಯಾಯಿತು. ಗಣಿತ ಬಿಡಿಸುವದಾಗಲಿಲ್ಲ. ನನ್ನ ಸ್ವಭಾವದಲ್ಲಿ ತಿದ್ದುಪಡಿ ಮಾಡಿಕೊಂಡೆನು. ಅವನಿಗೆ ಪ್ರೇಮದ ಮಾತುಗಳನ್ನು ಆಡುತ್ತಿರುವೆನು. ಅವನ ಭಯವು ಹೋಯಿತು. ವಿಚಾರಶಕ್ತಿಯು ಸ್ವತಂತ್ರ ವಾತಾವರಣದಲ್ಲಿ ಬೆಳೆಯಹತ್ತಿತು. ೨—೩ ದಿನಗಳ ನಂತರ ಅವನು ಆ ಕಠಿಣ ಲೆಖ್ಖವನ್ನು ಸುಲಭವಾಗಿ ಬಿಡಿಸಿದನು. ಇಷ್ಟೇ ಅಲ್ಲ, ಅವನು ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದುತ್ತ ಸಾಗಿರುವನು. ಮಾನಸಶಾಸ್ತ್ರವನ್ನು ಕೇವಲ ಅರಿತರೆ ಸಾಲದು. ಅದನ್ನು ಬಳಕೆಯಲ್ಲಿ ತರಬೇಕು. ವ್ಯವಹಾರದಲ್ಲಿ ಉಪಯೋಗಿಸಬೇಕು. ಅದು ಸಭ್ಯತೆಯನ್ನು ಕಲಿಸಬಹುದು.

ನಮ್ಮ ಕನ್ನಡನಾಡಿನಲ್ಲಿ ಗಾಯನ ಕಲೆಯ ಮೂಲಕ ಮಾದರಿಯ ಸೇವೆಯನ್ನು ಮಾಡಿ ಲಿಂಗೈಕ್ಯರಾದ ಶ್ರೀ. ಪಂಚಾಕ್ಷರ ಗವಾಯಿಗಳು ಸಾಮಾಜಿಕ ಸಭ್ಯತೆಯ ಮೂರ್ತಿಗಳಾಗಿದ್ದರು. ಅವರಿಂದ ಸಾವಿರಾರು ಗವಾಯಿಗಳು ತಯಾರಾದರು. ಈಗಲೂ ಅವರ ಪಟ್ಟ ಶಿಷ್ಯರು ಅಲ್ಲಲ್ಲಿ ಬೆಳಗುತ್ತಿರುವರು. ಗದಗಿನ ಶ್ರೀ. ಪುಟ್ಟಯ್ಯಸ್ವಾಮಿಗಳು ಗುರುವಿನ ದಾರಿಯನ್ನೇ ತುಳಿಯುತ್ತ ಮಹತ್ತರವಾದ ಸಂಸ್ಥೆಗಳನ್ನೇ ಕಟ್ಟುತ್ತಿರುವರು. ಇದು ಸಾಮಾಜಿಕ ಸಭ್ಯತೆಯ ಪ್ರಭಾವ!

ಡಾ. ಆರ್ಥರ ಗೇಟ್ಸರು ತಮ್ಮ ಶೈಕ್ಷಣಿಕ ಮನಶ್ಶಾಸ್ತ್ರದಲ್ಲಿ ಹೇಳಿರುವದೇನಂದರೆ।—

"ವಿಶ್ವದಲ್ಲಿ ಮಾನವ ಜನಾಂಗವು ಸಹಾನುಭೂತಿಯನ್ನೇ ಬಯಸುವದು. ಕೂಸಿಗೆ, ಪ್ರೌಢರಿಗೆ—ಎಲ್ಲರಿಗೂ ಸಹಾನುಭೂತಿಯು ಬೇಕು. ತಮಗೊದವಿದ ಆಧಿವ್ಯಾಧಿ, ದುರಿತದುಮ್ಮಾನಗಳು, ಕಷ್ಟಕಾರ್ಪಣ್ಯಗಳು, ಇತ್ಯಾದಿಗಳನ್ನು ವ್ಯಕ್ತಪಡಿಸುವಾಗ ಸಹಾನುಭೂತಿಯನ್ನೇ ಬೀರಬೇಕು."

ನನ್ನ ದೃಷ್ಟಿಕೋನದ ಜಂಭದ ಕೋಳಿಯನ್ನೇ ಕೂಗಿಸುವದಕ್ಕಿಂತ ಅನ್ಯರ ದೃಷ್ಟಿಕೋನದ ಕಡೆಗೂ ದೃಷ್ಟಿಯನ್ನು ಹರಿಸುವ ಗುಣವು ಸ್ವಭಾವ ದಲ್ಲಿ ಸೇರಬೇಕು. ಜಗದ್ಗುರು ಮಾಯಾಕೋಲಾಹಲ ಪ್ರಭುದೇವರು ತಮ್ಮ ಅಮೃತಮಯ ವಚನಗಳಲ್ಲಿ ಹೇಳುವಂತೆ "ಉಭಯ ದೃಷ್ಟಿ ಯಿಂದ ದೃಷ್ಟವ ಕಾಂಬ" ಸ್ವಭಾವವು ಮಾನವಜನಾಂಗದಲ್ಲಿ ಬೆಳೆಯಲಿ! ಸತಿ-ಪತಿ, ಗುರು-ಶಿಷ್ಯ, ಸ್ವಾಮಿ-ಸೇವಕ ಇತ್ಯಾದಿ ದ್ವಂದ್ವಗಳ ಜಂಜಾ ಟವು ಹರಿಯಲಿ! ಸಾಮಾಜಿಕ ಸಭ್ಯತೆಯ ಬೆಳಕು ಸುತ್ತಲೂ ಪಸರಿಸಲಿ!!!

———

# ಶಿವಶರಣರ ತತ್ವಮಾರ್ಗ

(ಲೇ:-ಶ್ರೀ ಗಿರಿಜಾತನಯರು ಹಿರೇರೂಗಿ ಕಮರೀಮಠ ಶಿವಯೋಗಾಶ್ರಮ)



ಒಂದು ಕ್ಷೇತ್ರದಲ್ಲಿ ಅನಂತ ಜನರು ಕೂಡುವರು. ಅವರಲ್ಲಿ ಕೆಲ ವರು ದೇವರ ದರ್ಶನಕ್ಕೆಂದು, ಹಲವರು ಆಟನೋಟ ನಾಟಕಗಳಿಗಾಗಿ ಹೀಗೆ ಒಂದೊಂದು ಕಾರ್ಯದುದ್ದ್ಯುಕ್ತರಾಗಿ ಸರ್ವರು ಕೂಡುವರು.

ಇದರಂತೆ ಕರ್ಮಭೂಮಿಯೆಂಬ ರಂಗಸ್ಥಲಕ್ಕೆ ಸರ್ವರು ಬಂದಿದ್ದಾರೆ. ಇಲ್ಲಿಗೆ ಬಂದವರಲ್ಲಿ ತಮಗಾಗಿ ಹಲವರು, ಅನ್ಯರಿಗಾಗಿ ಕೆಲವರು ಇರು ವರು. ಯಾರು ಮೋಹಕರವಾದ ಜಗತ್ತಿನ ವಿಷಯಗಳಲ್ಲಿ ಮರುಳಾಗು ವರು, ಷಡ್ರಿಪುಗಳ ವಶವಾಗಿ ಸಂಕುಚಿತ ಭಾವನೆ ಅಹಂಕಾರ ಮಮಕಾ ರಗಳಿಂದ ಕೂಡಿಕೊಂಡಿರುವರು. ಇವರಿಗೇನೇ ದ್ವೈತಿಗಳು, ಜೀವರು, ಅಜ್ಞಾನಿಗಳೆಂದು ಅನ್ನುವರು.

ಹೃದಯಸ್ಥ ಆತ್ಮನಲ್ಲಿ ಜಗವನ್ನು ಕಂಡು, ನಾಮ ರೂಪಾತ್ಮಕ ಜಗತ್ತು ತನ್ನಾತ್ಮದಂತೆ ಭಾವಿಸಿ ಪರಮಶಾಂತಿಯೊಂದಿರಿಸಿ ಅಸೂಯ ಅಹಂಕಾರಗಳಿಗೆ ಆಸ್ಪದಕೊಡದೆ ಆತ್ಮದ ಬೆಳಗಿನಲಿ ಸುಳಿವರು ಇವರಿಗೇನೇ ಅದ್ವೈತಿಗಳು, ಶಿವಾನುಭವಿಗಳೆಂದು ಅನ್ನುವರು. ಇವರೇ ನಿತ್ಯಸುಖಿಗಳು. ಇವರೇ ಅಮರರು.

ಈ ಕರ್ಮಭೂಮಿಯಲಿ ಉದ್ಭೈಸಿದ ದ್ವೈತಿ, ಅಥವಾ ಅದ್ವೈತಿ ಇರಲಿ, ಎಲ್ಲರಿಗೂ ಕರ್ಮವಾತ್ರ ತಪ್ಪಿದುದು ಅಲ್ಲ. ಉದಾ:- ಒಬ್ಬ ಮಾಗಾರ್ಯಾಸದಿಂದ ಬಳಲಿದ ಮನುಷ್ಯನಿಗೆ, ಅವನ ಕೈಕಾಲು ಸರ್ವೇಂದ್ರಿಯಗಳು ಕಾರ್ಯದಲ್ಲಿ ತೊಡಕಿದ್ದರೂ, ಅವನ ಕಾಲುಗಳು ಮಾತ್ರ ನೋಯುವವಲ್ಲದೆ, ಯಾವಾಗಲೂ ಬೀಸುವ ಕರಗಳು ಮಾತ್ರ ಎಂದೂ ನೋಯುವದಿಲ್ಲವೆಂಬಂತೆ ದ್ವೈತಾದ್ವೈತಿಗಳು ಕರ್ಮಾಸಕ್ತರಾದರೂ ಕೂಡಾ ಸಕಾಮನಾ ಕರ್ಮದಿಂದ ಕೂಡಿದ ದ್ವೈತಿಗಳು (ಜೀವರು) ಮಾತ್ರ ದುಃಖಪಡುವರು. ಆದರೆ ದ್ವೈತಿಯು ಅದ್ವೈತಿಯು ಆಗದವಿನಹ ಇವರಿಗೆ ದುಃಖ ದೂರಾಗುವದಿಲ್ಲ. ಅದುಕಾರಣವೇ ಮಹಾತ್ಮಾಜಿಯವರು ನಮ್ಮ ಭಾರತವು ರಾಮರಾಜ್ಯವಾಗಬೇಕು. ಒಂದೇ ಸೂತ್ರದಮೇಲೆ ನಿಲ್ಲಬೇಕೆಂದು ಸತ್ಯಸಂಕಲ್ಪ ಮಾಡಿದರು. ಯಾಕಂದರೆ ಮನದಲ್ಲಿ ಭೇದವಲ್ಲದೆ ವಸ್ತುವಿನಲ್ಲಿ ಭೇದವಿಲ್ಲ. ಕ್ರಿಯಕ್ರಿಯಗಳಲ್ಲಿ ಭೇದವಲ್ಲದೆ ಶಾಸ್ತ್ರದಲ್ಲಿ ಭೇದವಿಲ್ಲ. ರೂಪರೂಪದಲ್ಲಿ ಭೇದವಲ್ಲದೆ ಚೈತನ್ಯದಲ್ಲಿ ಭೇದವಿಲ್ಲ. ಎಂಬ ಶಿವಾನುಭವಿಗಳ ತತ್ವಶಿರಸಾವಾನ್ಯಮಾಡಿ ಅದನ್ನು ತಲೆಯಮೇಲೆ ಹೊತ್ತುಕೊಂಡು ನಡೆದು ನಮಗೆ ಮಾರ್ಗದರ್ಶಕರಾದರು. ಗಡ್ಡಮೀಸೆಗಳು ಬಂದರೆ ಗಂಡೆಂಬರು ಮೊಲೆಮುಡಿ ಬಂದರೆ ಹೆಂಣೆಂಬರು ನಡುವೆ ಸುಳಿವಾತ್ಮನು ಒಬ್ಬನೆಂದು ಶಿವಶರಣರ ತಿಳಿದಳಿದರು. ಶಿವಾನುಭವಿಗಳು ಯಾರಕೂಡ, ವಿಚಾರ ವಿನಿಮಯ ನಡಿಸಿದರೂ, ಶರಣವಾದ ಲಿಂಗದನಾಡು ಶರಣರವಾದ ಕಳಿಂಗದೇವನು ಮಾಡಿದ ಮಾಯಿಯಕೇಡುಯಂಬಂತೆ ಅವರು ಶಿವನುಡಿ ಶಿವಾಚಾರದ ವಿಚಾರ ಮಾಡಿದರೆ ಹೊರತು, ವರ್ಣಕುಲಗೋತ್ರದ ವಿಚಾರ ಎಂದೂ, ಯಾರೂ ಮಾಡಿಲ್ಲ. ನಾನು ನನ್ನದು ಎಂಬುವ ಭ್ರಾಂತಿಯೇ ಭವದಬೀಜವೆಂದು ಶರಣರು ಇಂಥ ಭಾವನೆಯನ್ನು ಶಿವನಿಗೆ ಅರ್ಪಿಸಿ ಶಿವನ ಆಳಾಗಿ ಬಾಳಿಬೆಳಗಿದರು. ಇಳೆ ನಿಮ್ಮದಾನ, ಬೆಳೆ ನಿಮ್ಮದಾನ, ಸುತ್ತಿಸುಳಿಯುವ ವಾಯು ನಿಮ್ಮದಾನ, ಕಾಯನಿಮ್ಮ ದಾನ ಕರಣನಿಮ್ಮ ದಾನವೆಂದು ಸರ್ವಸ್ವವು ಶಿವನದು ಎಂಬ ಭಾವನೆಯೇ ಅವರದು. ಇಂಥ ಪವಿತ್ರಭಾವನೆಯೇ ವಿಶಾಲವಾಗಿ ವಿಶ್ವಕುಟುಂಬಿಗರಾದರು.

ಇಂಥ ಶಿವಾನುಭವಿಗಳು (ಅದ್ವೈತಿಗಳು) ಯಾವ ತತ್ವದಮೇಲೆ ನಡೆದರು, ಅಂಥ ಸನ್ಮಾರ್ಗದ ಮೇಲೆ ನಡೆದು ತನುಗೊದಗಿದ ಜೀವಾನುಭವವನ್ನು ತೊಲಗಿಸಿ ಶಿವಾನುಭವಿಗಳು ಆಗಿ ನಿತ್ಯಸುಖಿಗಳು ಆಗಬೇಕು.

ತ್ರಿಗುಣಾತ್ಮಕನಾದ ಜಗಜ್ಜೀವರು ತ್ರಿಕರಣ ಶುದ್ಧರಾಗಿ ತ್ರೀನೇತ್ರ ತೆರೆಯಬೇಕು. ಗುರುಮುಖದಿಂದ ವೇದಾಗಮಗಳಸಾರ ಸುಖದಸ್ವಾದ ಸವಿಯಲು ಶ್ರದ್ಧೆಯನ್ನಿರಿಸುವದು ಮದಲನೇ ಮಾತಾಗಿದೆ. ಅಂತಃಕರಣ ಭೂಮಿಕೆಯು ಪವಿತ್ರಗೊಳಿಸಿ ಯಮನಿಯಮಾಂಗ ದಶದಶರಗಳು. (ಸತ್ಯ, ಅಹಿಂಸೆ, ಆಸ್ತೇಯ, ಬ್ರಹ್ಮಚರ್ಯ, ಕ್ಷಮೆ, ದಯ, ಧೃತಿಮೊದಲಾದ ಸದ್ಗುಣಗಳು) ಬೀಜರೂಪವಾಗಿ, ಹೃದಯದಲ್ಲಿ ನೆಲೆಗೊಂಡು, ಶಿವಭಾವದ ಬೆಳಗಿನ ಬೆಳೆಯು ರೂಪಗೊಳ್ಳುವದು. ಹಲವುಕಾಲಗಳಿಸಿದ ದ್ರವ್ಯ ನಶಿಸದಂತೆ ಚೋರರನ್ನು ಕಾಯ್ದಿರಿಸಿದಂತೆ ಕಾಮಕ್ರೋಧಾದಿ ಚೋರರನ್ನು ಸದಾವಕಾಲ ಕಾಯಲು ಜ್ಞಾನದ ಬೆಳೆಯು ಬಂದು ನಿತ್ಯ ಸುಖಿಯಾಗುವನು. ಇಂಥ ಸಶ್ಶೀಲ ಶಿವಾಚಾರ ಸಂಪನ್ನನಾದಲ್ಲಿ ದ್ವೈತಭಾವವಳಿದು ಅದ್ವೈಯದಲ್ಲಿ ನಿಂತು ಅಮರನಾಗುವನು. ಇಂಥ ಶಿವಶರಣರ ತತ್ವ ಮಾರ್ಗದಮೇಲೆ ಪ್ರತಿಯೊಬ್ಬ ಸ್ತ್ರೀಪುರುಷರು ನಡೆದು ಧನ್ಯರಾಗಬೇಕೆಂಬ ಮಹದಾಶ.

---

# ಗುರುದರ್ಶನ

[ಲೇಖಕರುಃ- ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ]



ಮಡಿಕೆಯ ಮಾಡುವರೆ, ಮಣ್ಣೇ ಮೊದಲು
ತೊಡಿಗೆಯ ಮಾಡುವರೆ, ಹೊನ್ನೇ ಮೊದಲು
ಶಿವಪಥವನರಿವಡೆ, ಗುರುಪಥ ಮೊದಲು
ಕೂಡಲಸಂಗಮ ದೇವರನರಿವಡೆ ಶರಣರ ಸಂಗವೆ ಮೊದಲು ||

ಮೇಲಿನ ಈ ವಚನದಲ್ಲಿ ಬಸವಣ್ಣನವರ ತಿಳಿಯಾದ ಬೋಧೆಯು ಎಂತಹ ಮನುಷ್ಯನಿಗೂ ಕೂಡ ತಿಳಿಯದೇ ಇರದು. ಯಾವ ವಸ್ತುವೇ ಆಗಲಿ ರೂಪುಗೊಳ್ಳಬೇಕಾದರೆ ಮೊದಲು ಅದರ ಅಣುಗಳು ಬೇರೆ ಬೇರೆಯಾಗಿದ್ದು ಅದನ್ನು ಒಟ್ಟುಗೂಡಿಸಿ ರೂಪುಗೊಳಿಸಲು ಆ ರೂಪುಗೊಂಡ ವಸ್ತುವಿಗೆ ಅಗ್ಗೆ ಯೋಗ್ಯತೆಯು ಬರುವದೇ ಹೊರತು ತನ್ನಿಂದ ತಾನಾಗಿಯೇ

ಆ ಯೋಗ್ಯತೆಯನ್ನು ಮುಟ್ಟದು. ಹಾಗೆ ಮಾನವನು ಶಿವಪಥವನ್ನು ಅರಿಯ್ಯ ಬೇಕಾದರೆ ಮೊದಲು ಗುರುಪಥವೇ ಬೇಕು. ಗುರುದರ್ಶನವೇ ಮಾನವಗೆ ಮೊದಲಾಗಬೇಕು. ಆವಾಗ್ಗೆ ಮಾತ್ರ ಮಾನವನಿಗೆ ಮಾನವತ್ವದ ಯೋಗ್ಯತೆ ಆವರಿಸುವದು.

ಗುರುದರ್ಶನದಿಂದಲೇ ಅನೇಕರು ಯೋಗಿಗಳಾಗಿದ್ದಾರೆ, ತ್ಯಾಗಿಗಳಾಗಿದ್ದಾರೆ. ಕೇವಲ ಗುರುದರ್ಶನವೇ ಇಷ್ಟೊಂದು ಮಹಾ ಶಕ್ತಿಯನ್ನು ಸಂಪಾದಿಸಿದಮೇಲೆ ಅವರ ಅಮೃತಮಯ ಬೋಧೆಯು ಇನ್ನೆಷ್ಟು ಹಿತವಾಗಬಹುದು ! ಆದುದರಿಂದಲೇ ಪುರಂಧರದಾಸರು ಸಹ "ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ" ಎಂದು ತಿಳಿಯಾದ ಶೈಲಿಯಲ್ಲಿ ಹಾಡಿದ್ದಾರೆ. ಇದರಂತೆ ನಮ್ಮ ಹಿಂದೂ ಸಂಸ್ಕೃತಿಯು ಇದೇ ಪಥದಲ್ಲಿ ನಡೆದಿದೆ. ಆದರೆ ಇಂದು ಮಾತ್ರ ಆ ಪಥವನ್ನು ತ್ಯಜಿಸಿದುದು ಬಹುಜನ. ಇರಲಿ. ಆದರೂ ಸಹ ಅನೇಕ ಜನರು ಯಾವದೇ ಕಾರ್ಯವನು ಕೈಕೊಳ್ಳಬೇಕಾದರೆ ಮೊದಲು ಗುರೂಪದೇಶಪಡೆಯದೆ ಯಾವದೊಂದು ಕಾರ್ಯ ಕೈಕೊಳ್ಳುವದಿಲ್ಲ. ಗುರುವೇ ದೇವಸಮಾನವೆಂದು ಗುರುಸೇವೆಯೇ ಈಶಸೇವೆಯೆಂದು ತಿಳಿದು ಅನೇಕ ಜನ ಗುರುಪೀಠಾಶ್ರಮದಲ್ಲಿ ಗುರುಗಳ ಬೋಧಾಮೃತವನ್ನು ಸವಿಯುತ್ತ ಕಾಲಹರಣ ಮಾಡುತ್ತಿರುವದನ್ನು ನೋಡಿದರೆ ನಮ್ಮ ಸಾಂಸ್ಕೃತಿಯ ಹಾಗೂ ಜ್ಞಾನಾಭಿವೃದ್ಧಿಯ ಹಿಂದಿನ ಉಚ್ಚ ಮಟ್ಟದ ಶಿಕ್ಷಣದ ನೆನಪಾಗದೇ ಇರದು. ಸರ್ವಗುಣಸಂಪನ್ನತೆಯ ಸುಲಕ್ಷಣತೆಯ ಸೌಮ್ಯ ತೇಜ ಹಾಗು ಹಿತನುಡಿಗಳು ಎಂಥ ಕಠಿಣ ಹೃದಯವನ್ನು ಸಹ ಮೃದು ಮಾಡಬಲ್ಲವು. ಆದರೆ ಇದು ಅಸತ್ಯ ಎಂಬವರಿಗೆ ನಮ್ಮ ಸ್ವಾಮಿ ವಿವೇಕಾನಂದರ ಹಾಗು ಇನ್ನಿತರರ ಚರಿತೆಯೇ ಸಾಕ್ಷಿ.

ಸ್ವಾಮಿ ವಿವೇಕಾನಂದರು ಕಲಕತ್ತಾ ರಾಜಧಾನಿಯ ಸಮೀಪದಲ್ಲಿರುವ ಹೌರಾ ಎಂಬ ಸ್ಥಳದಲ್ಲಿ ಜನ್ಮತಾಳಿದರು. ಅವರು ಜನ್ಮತಾಳಿದುದು ೧೮೬೩ರಲ್ಲಿ. ಅಂದರೆ ಇಂದಿಗೆ ಸುಮಾರು ೯೨ ವರ್ಷಗಳ ಹಿಂದೆ. ಇವರ ಪೂರ್ವಾಶ್ರಮದ ಹೆಸರು ನರೇಂದ್ರನಾಥ ಎಂಬುದಾಗಿತ್ತು. ಇವರು ಬಾಲ್ಯದಿಂದಲೂ ಯಾವದೇ ವಿಷಯವಾಗಿ ಸೂಕ್ಷ್ಮರೀತಿಯಿಂದ ವಿಚಾರಿಸಿ ಶೋಧಕ ದೃಷ್ಟಿಯಿಂದಲೇ ಪರೀಕ್ಷಿಸಿ ತಿಳಿದುಕೊಳ್ಳುವವೇ ಇವರ ಆಶ್ಯಾನುಭವವಾಗಿದ್ದಿತು. ಇವರು ಎಷ್ಟೋ ವಿಚಾರಿಗಳಿದ್ದರೂ ಇನ್ನಿತರ

ಜನರಿಂದ ಯಾವಾಗಲೂ ಯಾವನೇ ಗಹನವಾದ ವಿಷಯದ ಬಗೆ ಆಗಾಗ್ಗೆ ಕೇಳುತ್ತಲಿದ್ದರು. ಸರಿಯಾದ ಉತ್ತರ ಸಿಕ್ಕದಿದ್ದಲ್ಲಿ ಮನಸ್ಸು ವ್ಯಥೆಗೊಂಡು ಯಾವದಾದರೂ ಪ್ರಶಾಂತ ಸ್ಥಳದಲ್ಲಿ ಕುಳಿತು, ನಾನಾ ತರನಾಗಿ ವಿಚಾರ ಮಾಡುವರು. ನರೇಂದ್ರನಾಥರ ತಂದೆಯವರು ವಕೀಲ ಶ್ರೇಷ್ಠರಿದ್ದರು. ವಕೀಲಿ ವೃತ್ತಿಯಿಂದ ಸಾಕಷ್ಟು ಹಣ ಸಂಪಾದಿಸಿದ್ದರು. ಅವರ ವಿಚಾರವು ತಮ್ಮ ಮಗನೂ ತಮ್ಮಂತೆ ಒಬ್ಬ ವಕೀಲನಾಗ ಬೇಕೆಂಬುದೇ ಇತ್ತು. ಅದಕ್ಕಾಗಿ ಅವರು ತಮ್ಮ ಮಗುವನ್ನು ಶಾಲೆಗೆ ಕಳುಹಿದರು. ಬುದ್ಧಿ ಚುರುಕರಾದ ನರೇಂದ್ರರು ಶಾಲೆಯಲ್ಲಿ ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾಗುತ್ತ ಬೆಳೆದರು. ಕಾಲೇಜವನ್ನು ಸೇರಿದರು. ಇವರ ಆಧ್ಯಾತ್ಮೀಯ ವಾದವನ್ನು ಶಿಕ್ಷಕರು ಮನಗಂಡಿದ್ದರು. ಇವರ ನಡಾವಳಿಯನ್ನು ನೋಡಿ ಗುರುಗಳಾದರೂ ನರೇಂದ್ರರು ಒಬ್ಬ ಮಹಾನ್ ಯೋಗಿಯಾಗಬಹುದೆಂದು ಎಣಿಸಿದ್ದರು. ಅದರಂತೆ ಒಂದು ಸಲ ನರೇಂದ್ರರು ತಮ್ಮ ಮಾತೆಯ ಜೊತೆಯಾಗಿ ಕುಳಿತಿರುವಾಗ್ಗೆ ಒಬ್ಬ ಜೋಯಿಸಿಯು ಮನೆಯ ಮುಂಭಾಗದಲ್ಲಿ ಬಂದು ಮಾತೆಯ ಜೊತೆಯಲ್ಲಿಯೇ ಕುಳಿತ ಮಗುವಿನ ಮುಖಲಕ್ಷಣವನ್ನರಿತು— "ಅಮ್ಮಾ ನಿಮ್ಮ ಪುತ್ರನು ಒಬ್ಬ ಯೋಗಿಯಾಗುವನೇ ಹೊರತು ಗೃಹಸ್ಥಾಶ್ರಮದಲ್ಲಿ ಉಳಿಯ" ಎಂದು ಹೇಳಿದನು. ಇದನ್ನು ಕೇಳಿ ನರೇಂದ್ರರ ತಾಯಿಯ ಹೃದಯವು ಝಲ್ಲೆಂದಿತು. ತನ್ನ ಮಗುವಿಗೆ ಓರ್ವ ಸುಂದರ ಕನ್ನೆಯನ್ನು ತಂದು ಮದುವೆ ಮಾಡಬೇಕೆಂಬ ವಿಚಾರವು ವಿಚಾರವಾಗಿಯೇ ಉಳಿಯಿತು. ನರೇಂದ್ರರ ತಂದೆಯವರು ಮಾತ್ರ ಇಂಥ ವಿಚಾರಗಳಿಗೆ ಎಡೆಗೊಡದೇ ಕೆಲಕಾಲ ಕಳೆದರು.

ನರೇಂದ್ರರಿಗೆ ಯೋಗ್ಯ ಗುರುಗಳು ಸಿಕ್ಕಲಿಲ್ಲ. ಆಧ್ಯಾತ್ಮೀಯ ವಿಚಾರಗಳಾದ ನರೇಂದ್ರರ ಸಹಪಾಠಿಗಳೂ ಕಾಲೇಜ ಶಿಕ್ಷಣದವರೇ ಆದ ಮೇಲೆ ಇನ್ನಾರಿಗೆ ಕೇಳುವದು? ಒಂದು ಸಲ ಗೆಳೆಯರೊಂದಿಗೆ ಅವ ರಂದುದು— " ದೇವನಿದ್ದಾನೆಯೆ?" ಆದಕ್ಕೆ ಗೆಳೆಯರೆಲ್ಲರೂ ನಕ್ಕು "ದೇವನಿರದೇ ನೀನಿರುವೆಯಾ? ಈ ಜಗತ್ತು ಇದೆಯೋ?" ಇಷ್ಟೇ ನುಡಿಗಳಿಗೆ ಸುಮ್ಮನಿರದೆ ನರೇಂದ್ರರು–"ಹಾಗಾದರೆ ತೋರಿಸಿರಿ ಎಲ್ಲಿರುವಾ?" ಎಂದು ಕೇಳಲು ಹೇಳಲಾರದ ತನ್ನ ಜೊತೆಗಾರರನ್ನು ಕಂಡು ದೇವನಿಲ್ಲ ಎಂದು ನಾಸ್ತಿಕರಾದರು.

ನರೇಂದ್ರರು ೨೦ ವರ್ಷದೊಳಗಾಗಿಯೇ ಬಿ. ಎ. ಪರೀಕ್ಷೆ ಪಾಸಾ ಗಿದ್ದರು ವಿದ್ಯಾಮದವು ಅವರಲ್ಲಿ ಅಲ್ಪಮಟ್ಟಿಗೆ ಬೆಳೆಯತೊಡಗಿದ್ದಿತು. ಅವರ ತಂದೆಯವರು ನರೇಂದ್ರರನ್ನು ಒಬ್ಬ ವಕೀಲ ಕಾರಕೂನನನ್ನಾಗಿ ನಿಯ ಮಿಸಿದರು. ಏಕೆಂದರೆ ಮೊದಲು ಒಂದೊಂದೇ ಮೆಟ್ಟಲುಗಳನ್ನೇರಿದರೆ ಮಾನವನು ಸರ್ವಗುಣ ಸಂಪನ್ನನಾಗುವನೆಂಬುದು ಅವರ ತಂದೆ ಮನ ಗಂಡಿದ್ದರು. ಹಾಗೂ ವಕೀಲನಾಗುವ ತನ್ನ ಮಗು ವಕೀಲಶ್ರೇಷ್ಠನಾಗ ಲೆಂಬುದೇ ಅವರ ಉದ್ದೇಶ. ಹೀಗಿರಲು ಒಂದು ದಿನ ನರೇಂದ್ರರ ವಿಚಾ ರವು ಅವರ ಚಿಕ್ಕಪ್ಪನ ಕಡೆ ಸೆಳೆಯಿತು. ಇವರ ಚಿಕ್ಕಪ್ಪನು ಯಾವಾಗಲು ದೇವರ ನಾಮಸ್ಮರಣೆ ಹಾಗು ಗುರೂಪದೇಶಕ್ಕಾಗಿ ಹಾತೊರೆಯುವವ ರಾಗಿದ್ದರು. ತಮ್ಮೂರಿನ ಸಮೀಪದಲ್ಲಿಯೇ ಸ್ವಾಮಿ ರಾಮಕೃಷ್ಣ ಪರಮ ಹಂಸರ ಆಶ್ರಮವಿತ್ತು. ಅಲ್ಲಿಗೆ ದಿನಾಲೂ ಹೋಗಿ ಬರುವ ತನ್ನ ಕಕ್ಕನ ಈ ಪರಿಪಾಠವನ್ನು ಕಂಡು ನರೇಂದ್ರರು ತಮ್ಮ ಕಕ್ಕನಿಗೆ ಅಂದದ್ದು— "ನೀವು ದಿನಾಲು ಆ ಅಕ್ಷರಶೂನ್ಯರಾದ ರಾಮಕೃಷ್ಣರಲ್ಲಿಗೆ ಏಕೆ ಹೋಗು ವಿರಿ? ಅವರಿಂದ ನಿಮಗೆ ದೊರೆಯಬೇಕಾದ ಬೋಧೆಯಾದರೂ ಯಾವದು?" ಎಂದು ಕೇಳಲು ಗುರುಪ್ರಿಯರಾದ ಅವರ ಕಕ್ಕಂದಿರು ಸ್ವಲ್ಪ ರೇಗಿಗೆದ್ದು— "ನಿನಗೇನು ಗೊತ್ತಾಗುತ್ತೆ? ಮನೆಯಲ್ಲಿ ಕುಳಿತು ಹಾಗೆ ಹೀಗೆ ಎಂದು ನುಡಿಯಲು ಸರ್ವರಿಗೂ ಬರುತ್ತೆ. ಆದರೆ ಒಮ್ಮೆ ಆಗಮಿಸಿ ನೋಡು. ಕಬ್ಬಿಣವು ಪರುಷ ಮುಟ್ಟಲು ಚಿನ್ನವಾಗುವಂತೆ ಆಗುತ್ತೆ." ಎಂದು ನುಡಿಯಲು ಹಠಯೋಗಿಗಳಾದ ನರೇಂದ್ರರು ಆ ಗುರುಗಳ ದರ್ಶನಕ್ಕಾಗಿ ಹಾತೊರೆದು ಹಾಗು ಶಿಕ್ಷಣವಿಲ್ಲದ ಅಕ್ಷರಶೂನ್ಯರ ಮಹಿಮೆಯನ್ನು ನೋಡಿಯೇತೀರಬೇಕೆಂದು ನಿಶ್ಚಯಿಸಿ— "ಹಾಗಾದರೆ ನಾನಿಂದು ಗುರುಗಳಲ್ಲಿಗೆ ಬರುವೆ. ನನ್ನ ಪ್ರತಿಯೊಂದು ಪ್ರಶ್ನೆಗೆ ಸಂ ಯಾದ ಉತ್ತರ ಕೊಟ್ಟಲ್ಲಿ ಅವರ ದಾಸಾನುದಾಸನಾಗುವೆ"ನೆಂದು ತಮ್ಮ ಕಕ್ಕನಿಗೆ ವಚನವನ್ನಿತ್ತು ನಡೆದರು. ಗುರುದರ್ಶನದಿಂದ ನರೇಂದ್ರರ ಉಕ್ಕಿಬರುವ ಕೇಳಬೇಕೆಂಬ ಪ್ರಶ್ನೆಗಳು ಗುರುಗಳಿಗೆ ಆಗಲೇ ತಿಳಿದು ಅವರಾಗಿಯೇ ನರೇಂದ್ರರು ಕೇಳಬೇಕೆಂದಿರುವ ಸರ್ವ ಪ್ರಶ್ನೆಗಳಿಗೆ ಉತ್ತರವೀಯಲು ನರೇಂದ್ರರ ದೃಷ್ಟಿಯು ಹಾಗು ಅವರ ಸರ್ವ ಮನಸ್ಸು ಕೇವಲ ಗುರುಗಳಲ್ಲಿಯೇ ಲೀನವಾಗಿತ್ತು. ಅವರಿನ್ನು ಕೇಳಬೇಕಾಗಿರುವ ಪ್ರಶ್ನೆಗಳೇ ಉಳಿಯಲಿಲ್ಲ. ಕೇವಲ ಗುರುದರ್ಶನದಿಂದಲೇ ಯೋಗಿಯಾಗ ಬೇಕೆಂಬ ಹಂಬಲವು ನರೇಂದ್ರರಿಗೆ ಆವರಿಸಿತು. ಕೊನೆಗೆ ಯೋಗಿಗಳಾ

ದರೇ ಹೊರತು ಗೃಹಸ್ಥಾಶ್ರಮದಲ್ಲುಳಿಯಲಿಲ್ಲ. ತಾಯಿತಂದೆಗಳ ಮನೋ ಮಂದಿರ ಉರುಳಿತು. ಯೋಗಿವರ್ಯರಾದ ನರೇಂದ್ರರು ಜರ್ಮನ್, ಅಮೇರಿಕಾ ಮುಂತಾದ ಪಾಶ್ಚಿಮಾತ್ಯ ದೇಶಗಳಿಗೂ ಕೂಡ ಹೋಗಿ ಆಯಾ ದೇಶಭಾಷೆಗಳಲ್ಲಿ ನಮ್ಮ ಬೋಧಾಮೃತವನ್ನು ಬೀರಿದರು. ಇಂದಿಗೂ ಅಮೇರಿಕಾ ದೇಶದಲ್ಲಿ ಪರಕೀಯರನೇಕರು ನರೇಂದ್ರರುಪದೇಶಿಸಿದ ತತ್ವಗಳಂತೆ ನಡೆದು ತ್ಯಾಗಿಗಳಾಗಿರುವದನ್ನು ನೋಡಿದರೆ ನಮಗೆ ಹೆಮ್ಮೆಯೆನಿಸದೆ ಇರದು. ಸ್ವಾಮಿ ನರೇಂದ್ರರು ವಿವೇಕವೃತ್ತಿಯಲ್ಲಿಯೇ ಆನಂದಿತರಾದುದನ್ನು ಗುರುಗಳು ತಿಳಿದು ಪ್ರೀತಿಯಿಂದ "ವಿವೇಕಾನಂದ" ಎಂದು ಅಂದುದೇ ಮುಂದೆ ವಿವೇಕಾನಂದ ಎಂದು ಪ್ರಚಾರವಾಯಿತು.

ಸ್ವಾಮಿ ವಿವೇಕಾನಂದರು ಬಿ. ಏ. ಪದವೀಧರರೂ ಮೊದಲಿನಿಂದಲೂ ಆಧ್ಯಾತ್ಮೀಯ ವಿಚಾರಿಗಳೂ ಆದ ಮೂಲಕ ಅವರು ಈ ಯೋಗಾಭ್ಯಾಸದಲ್ಲಿ ಮುಂದುವರೆದರೇ ಹೊರತು ಕೇವಲ ಗುರುದರ್ಶನ ಹಾಗು ಅವರ ಉಪದೇಶದಿಂದ ಸಾಧ್ಯವಲ್ಲವೆಂದು ತಿಳಿಯಬಹುದು. ಆದರೆ ಇದು ತೀರ ತಪ್ಪು ತಿಳುವಳಿಕೆ. ಹೀಗನ್ನುವವರು ನನ್ನಯ್ಯನ ಚರಿತೆಯನ್ನೋದಿದರೆ ತಿಳಿಯದೇ ಇರದು. ಅಕ್ಷರಶೂನ್ಯ ಹಾಗು ದರೋಡೆಖೋರನೇ ಗುರೂಪದೇಶದಿಂದ ಮುಂದೆ ಯಾವ ಅವಸ್ಥೆಯನ್ನು ಮುಟ್ಟಿದನೆಂಬುದನ್ನು ಶಿವಶರಣರ ಚರಿತ್ರೆಯನ್ನು ಓದಿ ತಿಳಿದರೆ ಸಾಕು.

ಆಯಾ ಧರ್ಮಗುರುಗಳು ಬೇರೆ ಬೇರೆ ತರದ ವಿಚಾರಿಗಳಿರುವರೆಂಬುದು ಕೆಲವರ ಅಭಿಪ್ರಾಯದರಬಹುದು. ಆದರೆ ಅವರುಗಳಿಗೆ ನಮ್ಮ ಧರ್ಮವೂ ಸತ್ಯ ಅಹಿಂಸಾ ಧರ್ಮವಾಗಿದೆಂದೂ, ಶಾಂತಿಯೇ ಜೀವನ ಪಥವಾಗಿದೆಂದೂ, ದೇವನಾಮೋಚ್ಚಾರಕ್ಕಿಂತಲೂ ಪ್ರಥಮದಲ್ಲಿ "ಓಂ ಶಾಂತಿ ಶ್ಶಾಂತಿ ಶ್ಶಾಂತಿಹಿ" ಎಂಬ ಸರ್ವಧರ್ಮದ ಮೂಲ ವಾಕ್ಯವನ್ನು ತಿಳಿದರೆ ಸಾಕು. ಆದರೆ ಧರ್ಮದ ತಿರುಳು ಬೇರಿರಬಹುದು. ಅದರತ್ತ ಲಕ್ಷ್ಯಹಾಕುವದು ತೀರ ತಪ್ಪು. ತಮ್ಮ ತಮ್ಮ ಧರ್ಮದ ಲೋಪದೋಷಗಳನ್ನು ತಾವೇ ತಿದ್ದಿಕೊಳ್ಳಬೇಕಲ್ಲದೆ ಅನ್ಯಧರ್ಮದ ತಪ್ಪು ಎಣಿಸಬಾರದು. ಹೀಗಾದಲ್ಲಿ ಮಾತ್ರ ಸರ್ವಧರ್ಮಗಳು ಶಾಂತಿಯುತ ಸಹಜೀವನದಲ್ಲಿ ಸಾಗುವವೆಂದು ನಿಸ್ಸಂದೇಹವಾಗಿ ಹೇಳಬಹುದು.

ಗುರುಗಳೆಂದರೆ ಶಾಂತಿಸಾಧಕರು, ಹೊಗಳಿಕೆ ತೆಗಳಿಕೆಗಳನ್ನು ಸಮವೆಂದರಿತವರು, ವಿದ್ಯಾಸಂಪನ್ನರು ಹಾಗು ತಮ್ಮ ಜ್ಞಾನಜ್ಯೋತಿಯಿಂದ

ಇನ್ನಿತರ ಜ್ಞಾನಶೂನ್ಯ ಜ್ಯೋತಿಗನ್ನು ತೇಜಸ್ಸಿಗೆ ತರುವವರು, ಬೆಳಗುವವರು ಎಂಬುದಕ್ಕೆ ಮಹಾತ್ಮಾ ಏಸೂಕ್ರಿಸ್ತರ ಒಂದು ಚಿಕ್ಕ ದೃಷ್ಟಾಂತ ತಿಳಿದುಕೊಳ್ಳುವದವಶ್ಯ.

ಮಹಾತ್ಮಾ ಏಸೂಕ್ರಿಸ್ತರ ನಡೆನುಡಿ, ಆಚಾರ ವಿಚಾರಗಳಿಗೆ ಮನಸ್ಸು ಸೆಳೆದು ಅನೇಕ ಜನ ಅವರ ಶಿಷ್ಯರಾದರು. ಆ ಶಿಷ್ಯರಲ್ಲಿ ನಗರಾಧಿಪತಿಯಾದ ಜೇಕ್ಸನೂ ಒಬ್ಬನು. ಜೇಕ್ಸನು ಮೊದಲು ಎಷ್ಟು ಶ್ರೀಮಂತಿಕೆಯನ್ನು ಭೋಗಿಸಿದವನು ಹಾಗು ಯಾವ ಅತ್ಯಾಚಾರಕ್ಕೆ ಗುರಿಯಾದವನು, ಮುಂದೆ ಹೇಗೆ ಏಸುವಿನ ಶಿಷ್ಯನಾದನೆಂಬುದನ್ನು ತಿಳಿದುಕೊಳ್ಳುವದವಶ್ಯ.

ನಗರಾಧಿಪತಿಯಾದ ಜೇಕ್ಸನು ವಿಲಾಸಿಯೂ, ದುರಾಚಾರಿಯೂ ಆಗಿದ್ದನು. ಕಂದಾಯ ವಸೂಲು ಮಾಡಲು ತೆರಳಿದನೆಂದರೆ ಆತನ ಅತ್ಯಾಚಾರಕ್ಕೆ ಮಿತಿಯಿರುತ್ತಿರಲಿಲ್ಲವಾದುದರಿಂದ ಆತನನ್ನು ನೋಡಿದೊಡನೆಯೇ ಜನರು ಎಲ್ಲಿಗಾದರೂ ಅಡವಿ ಅರಣ್ಯ, ಗಿರಿ ಗಂಹ್ವರಗಳಲ್ಲಿ, ಗಿಡಗಳ ಹೊದರುಗಳಲ್ಲಿ ಅಂಜಿ ಕೂಡ್ರುತ್ತಿದ್ದರು. ಇಂಥ ದುರಾಚಾರಿಯ ನಗರಕ್ಕೆ ಒಮ್ಮೆ ಏಸುವಿನ ಆಗಮನವಾಯಿತು. ನಾವಿಂದು ಗುರುಗಳು ಊರಲ್ಲಿ ಬಂದರೆ ಇಲ್ಲವೆ ಸಮೀಪದೂರಿಗೆ ಬಂದರೆ ಬೇಕಾದಷ್ಟಾದರೂ ಕಷ್ಟಕರ ಜೀವನವಿದ್ದರೂ ಸಾಲಮಾಡಿಯಾಗಲಿ ಹಣ ವೆಚ್ಚ ಮಾಡಿ, ಗುರುದರ್ಶನ ಪಡೆಯುವೆವೋ ಹಾಗೆ ಅಲ್ಲಿಯ ಜನ ಹಾಗು ಸುತ್ತುಮುತ್ತಿನ ಊರಿನ ಜನರು ತಂಡುತಂಡಾಗಿ ಬಂದು ಮಹಾತ್ಮರ ದರ್ಶನ ಪಡೆದರು. ಆದರೆ ಏಸುವಿಗೆ ಜನಗಳತ್ತ ಲಕ್ಷ್ಯವೇ ಇಲ್ಲ. ಕೇವಲ ಅವರ ದೃಷ್ಟಿಯು ಜೇಕ್ಸನು ಎಲ್ಲಿರುವನೆಂಬ ಶೋಧದಲ್ಲಿದೆ.

ಜೇಕ್ಸನು ತಾನೂ ಸಹ ಮಹಾತ್ಮರ ದರ್ಶನ ಪಡೆಯಬೇಕೆಂಬ ಉತ್ಸುಕತೆಯಿಂದ ತೆರಳುವವನಾಗಿದ್ದಾನೆ. ಆದರೆ ತಾನು ಕೈಕೊಂಡ ಕ್ರೂರ ಅತ್ಯಾಚಾರವು ಗಮನಕ್ಕೆ ಬಂದು ಹಾಗೂ ಅಂಥ ಜನಸಮುದಾಯಕ್ಕೆ ನನ್ನ ಮುಖವನ್ನು ಹೇಗೆ ತೋರಿಸಲಿ ಎಂಬ ಭಯದಿಂದ ಒಂದು ಮರವನ್ನೇರಿ, ಮರದ ಹೊದರಿನಲ್ಲಿ ತನ್ನ ಶರೀರವನ್ನು ಮುಚ್ಚಿಕೊಂಡು ಗಿಳಿಯ ಮರಿಯಂತೆ ಗೋಣು ಹೊರಹಾಕಿ ಕೇವಲ ಮಹಾತ್ಮಾ ಏಸುವನ್ನೇ ನೋಡುತ್ತಿರಲು ಆತನ ನೀಚ ಭಾವವೇ ಅಳಿಯಿತು. ಏಸುಗಳು ಆ ಮರದ ಸಮೀಪದಲ್ಲಿಯೇ ಬಂದು ನಿಂತು, ಮರದ ಮೇಲೆ ಹೊದರಿನಲ್ಲಿ ಕುಳಿತಿರುವ ಜೇಕ್ಸನನ್ನು ಕಂಡು—"ಬಾ, ಮಿತ್ರಾ, ಕೆಳಗಿಳಿದ

ಬಾ. ನಾನು ಇಷ್ಟೊಂದು ಸಮಯ ಹುಡುಕುತ್ತಿರುವದು ಕೇವಲ ನಿನ್ನನ್ನು. ಬಾ, ಕೆಳಗಿಳಿದು ಬಾ." ಎನ್ನಲು ಜೇಕ್ಸನು ಕಂಪಿಸುತ್ತ ಆಗಮಿಸಿ ಮಹಾತ್ಮರ ಪಾದಕಮಲಕ್ಕೆ ನಮಸ್ಕರಿಸಲು ಜೇಕ್ಸನ ಕಣ್ಣೀರಿನಿಂದ ಮಹಾತ್ಮರ ಪಾದಗಳು ತೊಳೆಯಲ್ಪಟ್ಟವು. ಆ ಕಣ್ಣೀರಾದರೂ ಮಲಿನತೆ ಇಲ್ಲದ ಕೇವಲ ಆನಂದದಿಂದ ತುಂಬಿದ ಹೃದಯಾಗ್ನಿಯಿಂದ ಕಾದಂತಹ ನೀರು. ಮಹಾತ್ಮರು ಆನಂದ ಭರಿತರಾಗಿ ಜೇಕ್ಸನನ್ನು ಕೈಹಿಡಿದೆಬ್ಬಿಸಿ "ಬಾ ಗೆಳೆಯಾ. ನಾನೀಗ ಬಂದಿರುವುದು ನಿನ್ನ ಪುರಕ್ಕೆ. ನಿನ್ನ ಪುರ ವೆಂದರೆ ನಿನ್ನ ಮನೆಗಲ್ಲವೇ? ನಿನ್ನ ಪುರಜನರು ನಿನ್ನ ಮಕ್ಕಳು. ಆ ನಿನ್ನ ಮಕ್ಕಳು ನನಗೆ ಇಷ್ಟೊಂದು ವಿನಯ ಆದರಾತಿಥ್ಯವನ್ನು ತೋರು ತ್ತಿರಲು ನೀನೇಕೆ ಹೆದರಿ ಕುಳಿತಿರುವೆ? ನೀನು ಮಾಡಿದ ಅಪರಾಧವಾದರೂ ಯಾವದು? ನಿನ್ನಂತಹ ಭಾಗ್ಯಶಾಲಿಗೆ ಇಷ್ಟೊಂದು ಹೆದರಿಕೆಯೆ? ನನ್ನಂಥ ನಿರ್ಭಾಗ್ಯಶಾಲಿಗೆ ನಿನ್ನ ಮಕ್ಕಳು ಆದರಾತಿಥ್ಯ ಕೈಕೊಳ್ಳುತ್ತಿರಲು ಸಹಿಸದೆ ಸಿಟ್ಟಿನಿಂದ ಕುಳಿತಿರುವೆಯಾ?" ಎಂದು ಕೇಳಲು ಜೇಕ್ಸನು ಸ್ವಲ್ಪ ಮೌನತಾಳಿ ತನ್ನ ಸರ್ವ ನೀಚಕೃತ್ಯವನ್ನು ಮಹಾತ್ಮರಿಗೆ ತಿಳಿಸಿ ಕ್ಷಮೆನೀಡಿರೆಂದು ಮಹಾತ್ಮರಿಗರುಹಲು ಮಹಾತ್ಮರು ಜೇಕ್ಸನನ್ನಪ್ಪಿ ಆನಂದಭಾಷ್ಪಗಳನ್ನುದುರಿಸಿದರು. ಇದೆಲ್ಲವನ್ನು ಕಂಡ ಉಳಿದ ಜನ ಜನಸಮುದಾಯದ ನುಡಿಯಲ್ಲಿ ಅವರೀರ್ವರ ನುಡಿಗಳು ಕೇಳಿಬರದೇ ಹಲವು ಜನ ಏಸುವನ್ನು ನಿಂದಿಸಿದರು.—"ನಾವಿಷ್ಟು ಜನ ಭಕ್ತಿಯಿಂದ ಬಂದಿರಲು ನಮ್ಮನ್ನು ಸಂತೈಸದೆ ಆ ಪಾಪಿ, ನೀಚ, ದುರಾಚಾರಿಯೊಂದಿಗೆ ಇಷ್ಟೇಕೆ ವಿನಯ?" ಎಂದು ತೆಗಳಿದರು. ಮಹಾತ್ಮರಿಗೇನು ಹೊಗಳು ತೆಗಳಿಕೆಗಳು ಸರಿಸಮಾನ.

ಮುಂದೆ ಜೇಕ್ಸನು ತನ್ನ ಸರ್ವ ಸಂಪತ್ತು ಪ್ರಜೆಗಳದೆಂದರಿತು ಬಡಬಗ್ಗರಿಗಿತ್ತು ಎಲ್ಲವನ್ನೂ ತ್ಯಜಿಸಿ ಏಸುವಿನ ಶ್ರೇಷ್ಠ ಶಿಷ್ಯನಾದನು.

ಜೇಕ್ಸನು ಯಾವ ಪ್ರಕಾರ ಕಠಿಣ ಹೃದಯಿಯಾಗಿದ್ದನೋ ಅಷ್ಟೇ ಮಹಾತ್ಮಾ ಪೈಗಂಬರರ ಶಿಷ್ಯನಾದ ಅಲಿಯು ಕಠಿಣ ಹೃದಯಿ ಹಾಗೂ ಧರ್ಮದ ಮೇಲಿನ ಅಂಧಶ್ರದ್ಧೆಯುಳ್ಳವನಾಗಿದ್ದನು. ಮಹಾತ್ಮಾ ಪೈಗಂಬರರು ತಮ್ಮ ಸಮಾಜದ ಜನತೆ ಇತರ ದೇವತೆಗಳ ಪೂಜನೆ ಮಾಡು ವದನ್ನು ಕಂಡು ಆ ಮೂರ್ತಿಪೂಜಕರ ಮನವಿರುದ್ಧ ವರ್ತನೆಯನ್ನು ನಡೆಸಿದರು. "ದೇವನೊಬ್ಬನಿರುವ. ಆತನಿಗೆ ಅನೇಕ ರೂಪವೇಕೆ? ಅನೇಕ

ಕಾಣಾಗಳೇಕೆ?" ಎಂಬ ನುಡಿಯಿಂದ ಅನೇಕ ಜನರಲ್ಲಿ ಬೋಧೆಬೀರಿದರು ಅವರದೊಂದು ದೊಡ್ಡ ಸಂಗಡವೇ ಆಯಿತು. ಆದರೆ ಹಲವರಿಗೆ ಪೈಗಂಬರರ ನುಡಿಗಳಲ್ಲಿ ಅರ್ಥವಿಲ್ಲ, ಅವರು ನಮ್ಮ ಸಮಾಜ ವಿರೋಧಿಗಳೆಂದು ಭಾವಿಸತೊಡಗಿದರು. ಹಾಗೆ ಭಾವಿಸುವವರಲ್ಲಿ ಅಲಿಯೂ ಒಬ್ಬನಾಗಿದ್ದನು ಅಲಿಯು ಒಂದು ಸಲ ವಿಚಾರಿಸಿ, ಈ ಮುಹಮ್ಮದ ಪೈಗಂಬರರನ್ನು ಉಳಿಸಿದರೆ ನಮ್ಮ ಧರ್ಮ ನಾಶವಾಗುವದು ಖಂಡಿತವೆಂದು ತಿಳಿದು, ಒಂದು ಚೂರಿಯನ್ನು ಕೈಯಲ್ಲಿ ಹಿಡಿದು ವೀರಾವೇಶದಲ್ಲಿ ಮಹಾತ್ಮರನ್ನು ಇರಿದು ಕೊಲ್ಲಲು ಹೊರಟನು. ಮಹಾತ್ಮರು ಆದೇ ಆಗ್ಗೆ ನಮಾಜು ಮಾಡುತ್ತಿರುವದು ಕಂಡು ಬಂದಿತು. ಅಲಿಯು ಅವರಿಗೆ ಕಾಣದಂತೆ ಮರೆಯಾಗಿ ನಿಂತುಕೊಂಡನು. ಮಹಾತ್ಮರ ಬಾಯಿಂದ ದೇವರ ಪ್ರಾರ್ಥನೆ ಆರಂಭವಾಯಿತು—"ಹೇ ದೇವಾ, ನಿನ್ನ ಮಗನಾದ ಅಲಿಯು ನಿನ್ನ ಮಹಿಮೆಯನ್ನರಿಯದೆ ಮೂಢ ಭಾವನೆಯಲ್ಲಿರುವಾ. ಆತನಿಗೆ ಬುದ್ಧಿಗಲಿಸು" ಎಂಬ ನುಡಿಯು ಹೊರಡುವದರಲ್ಲಿಯೇ ಅಲಿಯ ಕೈಯೊಳಗಿನ ಚೂರಿಯು ತಾನಾಗಿಯೇ ಕೈ ನಡುಗಿ ಬಿದ್ದಿತು. ಅಲಿಯ ಮುಖವು ವೀರಾವೇಶವಾದದ್ದು ಭಕ್ತಿ ಪ್ರೀತಿಯು ಆವೇಶವಾಯಿತು. ತಾನು ನಿಂತ ಸ್ಥಳದಿಂದ ಓಡುತ್ತ ಹೋಗಿ ಪೈಗಂಬರನನ್ನು ಗಟ್ಟಿಯಾಗಿ ಅಪ್ಪಿಕೊಳ್ಳುವವನಾಗಿದ್ದಾನೆ. ಹಾಗ್ಯೆ ಪೈಗಂಬರರಿಗೆ ತನ್ನ ತಪ್ಪನ್ನು ಕ್ಷಮಿಸಲು ಬೇಡಿಕೊಳ್ಳುವವನಾಗಿದ್ದಾನೆ. ಪೈಗಂಬರರು ಅಲಿಯನ್ನು ಕಂಡು ಆನಂದಭಾಷ್ಪಗಳನ್ನದುರಿಸಿ ಸಂತೈಸಿದರು. ಮುಂದೆ ಅಲಿಯು ಪೈಗಂಬರರ ತತ್ವ ಪ್ರಚಾರ ಮಾಡುತ್ತಲೂ ಅವರ ಅನುಮತಿಯಂತೆ ನಡೆಯುತ್ತಲೂ ಪೈಗಂಬರರ ಒಬ್ಬ ಶ್ರೇಷ್ಠ ಶಿಷ್ಯನೆನಿಸಿಕೊಂಡಿದ್ದಾನೆ.

ಗುರುವಿನ ದರ್ಶನ ಹಾಗೂ ಅವರ ಬೋಧವನ್ನು ಅರಿತಾಗಲೇ ಮಾನವ ಜನ್ಮ ಸಾರ್ಥಕವೆಂದು "ಸ್ವಾಮಿವಿವೇಕಾನಂದರ" ಹಾಗು "ಜೇಕ್ಸ" ಮತ್ತು "ನನ್ನಯ್ಯ" ಮುಂತಾದವರ ಚರಿತೆಗಳು ಅತ್ಯವಶ್ಯವಾಗಿ ತಿಳಿದುಕೊಳ್ಳಬೇಕು. ಗುರುದರ್ಶನ ಹಾಗು ಅವರ ಬೋಧೆಯು ಎಷ್ಟು ಮಹತ್ತರವಾದವುಗಳೋ ಅಷ್ಟೇ ಅವರ ಪ್ರಸಾದದಿಂದಲೂ ಸದ್ಭಕ್ತರಾಗುವರೆಂಬುದು ನಮ್ಮ ಪುರಾಣಾದಿಗಳು ಸಾರುತ್ತವೆ. ಆದುದರಿಂದಲೇ ಇಂದಿಗೂ ಅನೇಕ ಮಠಗಳ ಮಠಾಧಿಕಾರಿಗಳಾದ ಗುರುಗಳು ಆಗಾಗ್ಗೆ ಪ್ರಸಾದ ಸಂತರ್ಪಣೆಯನ್ನು ಕೈಕೊಳ್ಳುವದುಂಟು.

# ಸ್ಫುಟವಿಷಯುಗಳು.

(ಶ್ರೀಯುತ ರಾ|| ಬ|| ಫ. ಗು. ಹಳಕಟ್ಟಿ, ಸಂಪಾದಕ-ಶಿವಾನುಭವ.)

---

ಕೆಲವೊಂದು ತಾತ್ವಿಕ ವಿಷಯದ ಮೇಲೆ ನಿರರ್ಗಳವಾಗಿ ವಿಚಾರಗಳನ್ನು ಹರಿಸಬಹುದು. ಇಂಥವುಗಳಿಗೆ ನಿಯಂತ್ರಣ ವಿರಲಾರದು. ಆದರೆ ಐತಿಹಾಸಿಕ ವಿಚಾರಗಳಿಗೆ ಈ ತೆರೆದ ಸ್ಥಿತಿಯು ಇರುವದು ಶಕ್ಯವಿಲ್ಲ. ಯಾಕಂದರೆ ಇತಿಹಾಸವು ನಿಜವಾಗಿ ಆಗಿ ಹೋದ ವಿಷಯಗಳನ್ನು ನಿರೂಪಿಸುವದು ಇರುತ್ತದೆ. ಇಲ್ಲಿ ನಿರರ್ಗಳ ವಿಚಾರಗಳಿಗೆ ಆಸ್ಪದವಿಲ್ಲ. ಆದುದರಿಂದ ಇತಿಹಾಸ ಮತ್ತು ಚರಿತ್ರೆಗಳನ್ನು ಬರೆಯುವದು ಯಾವಾಗಲೂ ದುಸ್ತರವಾದದ್ದು.

ವೀರಶೈವ ಸಮಾಜದಲ್ಲಿ ೮೦೦ ವರ್ಷಗಳ ಹಿಂದೆ ಅನೇಕ ಮಹಾನುಭಾವರೂ ಐತಿಹಾಸಿಕ ಪುರುಷರೂ ಆಗಿ ಹೋಗಿದ್ದಾರೆ. ಅವರ ಚರಿತ್ರೆಗಳು ಬಹು ಮಹತ್ವವಾದವುಗಳು ಆದರೆ ನಮ್ಮ ದೇಶದಲ್ಲಿ ಇತಿಹಾಸವನ್ನು ಬರೆದಿಡುವ ಪದ್ಧತಿಯು ಇರುವದಿಲ್ಲ. ಧಾರ್ಮಿಕ ಮಹಾ ಪುರುಷರಂತೂ ತಾವು ಮಾಡಿದ ಕೃತಿಗಳ ನಿರೂಪಣೆಯನ್ನು ಅವರು ಎಷ್ಟು ಮಾತ್ರವೂ ಮಾಡುವದಿಲ್ಲ. ಇದರಿಂದ ನಮ್ಮ ದೇಶದಲ್ಲಿ ಚರಿತ್ರೆಗಳು ಅಪೂರ್ಣವಾಗಿ ಉಳಿದಿರುತ್ತದೆ.

ಬಸವೇಶ್ವರನ ಕಾಲದಲ್ಲಿ ನಮ್ಮ ನಾಡಿನಲ್ಲಿ ನೂರಾರು ಜನ ಶಿವಶರಣರು ಆಗಿ ಹೋದರು. ಆದರೆ ಅವರ ಸಾದ್ಯಂತ ವೃತ್ತಾಂತಗಳು ನಮಗೆ ದೊರೆಯುವದಿಲ್ಲ. ಆದರೆ ಅವರ ವಿಷಯುವಾಗಿ ಅವರ ತರುವಾಯು ಅನೇಕ ಕಥಾಂತರಗಳೂ, ಅವರ ವಿವಾದಗಳ ವರ್ಣನೆಗಳೂ ಪುರಾಣಗಳೂ ಉಂಟಾಗಿರುತ್ತದೆ. ಆದರೆ ಅವುಗಳಲ್ಲಿ ಇತಿಹಾಸದ ಅಂಶಗಳು ಬಹಳ ಕಡಿಮೆ ಇರುತ್ತವೆ. ಇದರಿಂದ ನಮ್ಮ ನಾಡಿನ ಚರಿತ್ರೆಯನ್ನು ಬರೆಯುವದು ಬಹಳ ದುಸ್ತರವಾಗಿರುತ್ತದೆ.

ವೀರಶೈವರಲ್ಲಿ ಬಸವ, ಅಲ್ಲಮಪ್ರಭು, ಚನ್ನಬಸವ, ರೇವಣಸಿದ್ಧ, ಸಿದ್ಧರಾಮ ಪಂಡಿತರಾಧ್ಯ, ಮರುಳಾರಾಧ್ಯ, ಏಕೋರಾಮ ಇವರು ಮಹಾ ಪುರುಷರಾಗಿದ್ದಾರೆ. ಇದರ ಬಗ್ಗೆ ದಂಡ ಕಥೆಗಳು ಮಾತ್ರ ಉಪಲಬ್ಧವಿರುತ್ತದೆ. ಆದ್ದರಿಂದ ಅವುಗಳಲ್ಲಿರುವ ಐತಿಹಾಸಿಕ ಅಂಶಗಳನ್ನು ಕಂಡು ಹಿಡಿಯುವದು ಕಠಿಣವಾಗಿರುತ್ತದೆ. ಆದ್ದರಿಂದ ಅವುಗಳನ್ನು ಮೊದಲು ಇದ್ದಕ್ಕಿದ್ದ ಹಾಗೆ ವರ್ಣಿಸಿ ಅವುಗಳಲ್ಲಿ ಹುದುಗಿರುವ ಚರಿತ್ರೆಗಳನ್ನು ಶಿಲಾಶಾಸನಗಳು, ಅವರ ಬಗ್ಗೆ ಇರುವ ಸ್ಥಾನಿಕ ಕುರುಹುಗಳು ಇವುಗಳನ್ನು ಅವಲಂಬಿಸಿ ನಿಜವಾದ ಸಂಗತಿಗಳನ್ನು ಕಂಡು ಹಿಡಿಯಬೇಕಾಗುತ್ತದೆ.

ಇದರಿಂದ ಈ ಮಹಾನುಭಾವರ ಬಗ್ಗೆ ನಾಡಿನಲ್ಲಿ ಅನೇಕ ತರದ ವಿವರಣೆಗಳು ಉಂಟಾಗಿರುತ್ತದೆ. ರೇವಣಸಿದ್ದನ ಚರಿತ್ರೆಯ ವಿಷಯುವಾಗಿ ಮೊದಲು ಹರಿಹರನು ಬರೆದಿದ್ದಾನೆ. ಆ ಮೇಲೆ ರೇವಣಸಿದ್ದನ ಪುರಾಣವೂ ಉಂಟಾಯಿತು. ಮಹಾದೇವಿಯಕ್ಕನ ವಿಷಯವಾಗಿ ಹೀಗೆಯೇ ಇರುತ್ತದೆ. ಒಂದು ಕಡೆಗೆ ಮಹಾದೇವಿಯಕ್ಕನು ಕಡೆಯವರೆಗೂ ವಿರಕ್ತೆಯಾಗಿ ಆಚರಿಸಿದಳೆಂದು ಇದ್ದರೆ ಮತ್ತೊಂದೆಡೆಗೆ ಅವಳು ಕೌಶಿಕನನ್ನು ಲಗ್ನವಾದಳೆಂದು ಹೇಳಿದೆ. ಇದೇ ಪ್ರಕಾರ ಅಲ್ಲಮಪ್ರಭುವು ಒಂದು ಗ್ರಂಥದಲ್ಲಿ ಮಾಯೆಯನ್ನು ಜಯಿಸಿದನೆಂದು ಹೇಳದ್ದರೆ ಇನ್ನೊಂದು ಕಡೆಗೆ ಅವನು ಅವಳ ಅರಮನೆಯಲ್ಲಿ ಅವಳ ಕೂಡ ವಾಸವಾಗಿದ್ದನೆಂದು ಹೇಳಿದೆ ಒಂದೆಡೆಯಲ್ಲಿ ನಾಗಲಾಂಬಿಕೆಯು ಶಿವಸ್ವಾಮಿ ಎಂಬವನನ್ನು ಲಗ್ನವಾಗಿದ್ದಳೆಂದು ಹೇಳಿದೆ. ಆದರೆ ಮತ್ತೊಂದೆಡೆಯಲ್ಲಿ ಅವಳಿಗೆ ಲಗ್ನವಾಗಿರಲಿಲ್ಲೆಂದು ಹೇಳಿದೆ ಬಸವನ ವಿಷಯವಾಗಿಯೂ ಈ ತೆರವ ವಾತ್ಯಾಸಗಳು ಅವನ ಚರಿತ್ರೆಗಳಲ್ಲಿ ತುಂಬಿವೆ. ಈ ಸ್ಥಿತಿಯಲ್ಲಿ ಈ ವ್ಯತ್ಯಾಸಗಳನ್ನು ಇದ್ದಕ್ಕಿದ್ದ ಹಾಗೆ ನಾನು ವಿವರಿಸಿ ಹೊಸ ಶೋಧಗಳು ಆದ ಹಾಗೆ ಅವುಗಳನ್ನು ಸರಿಪಡಿಸುತ್ತ ಹೋಗುವದೊಂದೇ ನಾವು ಕೈಕೊಳ್ಳತಕ್ಕ ಉಪಾಯವಾಗಿ ಉಳಿದಿದೆ.

ಮರುಳಸಿದ್ಧೇಶ್ವರನ ವಿಷಯವಾಗಿಯೂ ಹೀಗೆಯೇ ಸ್ಥಿತಿಯು ಇದೆ. ಅವನು ಅಸ್ಪೃಶ್ಯರ ಕುಟುಂಬದಲ್ಲಿ ಜನಿಸಿದನೆಂಬ ವಿವರಣೆಯು

ಇದೆ. ಆದರೆ ನಮ್ಮಲ್ಲಿಯು ಸನಾತನಿಗಳು ಅವನು ಪುರಾತನ ಕಾಲದವನೆಂದು ನಂಬದೆ ಅವನು ಅಸ್ಪೃಶ್ಯರಲ್ಲಿ ಜನಿಸಿಲ್ಲವೆಂದು ಹೇಳುತ್ತಾರೆ. ಈ ಸ್ಥಿತಿಯಲ್ಲಿ ನಾವು ಬೇರೆಬೇರೆ ಚರಿತ್ರೆಗಳಲ್ಲಿ ಬಂದ ವಿಷಯಗಳನ್ನು ಅವುಗಳು ಇದ್ದಂತೆಯೇ ನಿವ್ವರಿಸುವದೊಂದೇ ನಾವು ಕೈಕೊಳ್ಳಬೇಕಾದ ಈಗಿನ ಮಾರ್ಗವಾಗಿರುತ್ತದೆ ಮುಂದೆ ಹೆಚ್ಚಿನ ಆಧಾರಗಳು ದೊರೆದ ಹಾಗೆ ಅವುಗಳನ್ನು ತಿದ್ದುತ್ತ ಹೋಗಬೇಕಾಗುವದು.

ಸಿದ್ಧನಂಜೇಶನ ಗುರುರಾಜ ಚಾರಿತ್ರ್ಯದಲ್ಲಿ ಮರುಳುಸಿದ್ಧೇಶ್ವರನು ದೇಶಾಂತರ ಮಾಡುತ್ತಿರಲು ಕಗ್ಗಲ್ಲ ರೇವುಗೌಡನು ಮಕ್ಕಳಿಲ್ಲದೆ ಕೊರಗುತ್ತಿರಲು ಅವನಿಗೆ ಶಿಶುವೇಷತಾಳಿ ಪ್ರತ್ಯಕ್ಷನಾದನೆಂತಲೂ, ಅವನು ಮರುಳನಂತಿದ್ದು ರೇವುಗೌಡನಿಗೆ ಸಕಲ ಸಿದ್ಧಿಗಳನ್ನು ಕೊಟ್ಟು ಉಜ್ಜಯಿನಿಯಲ್ಲಿ ಲಿಂಗೈಕ್ಯನಾದನೆಂತಲೂ ಹೇಳಿದೆ. ಕರ್ನಾಟಕ ಕವಿಚರಿತೆಯಲ್ಲಿಯೂ ಇದೇ ತೆರದ ಉಲ್ಲೇಖವಿದೆ.

ದೇವಿ ಕವಿಯು ತನ್ನ ಮರುಳುಸಿದ್ಧ ಕಾವ್ಯದಲ್ಲಿ ಮರುಳುಸಿದ್ಧನ ಚರಿತ್ರೆಯನ್ನು ವಿಸ್ತಾರವಾಗಿ ಹೇಳಿದ್ದಾನೆ. ಇದರಲ್ಲಿ ಕೂಚಿಮಾರನೆಂಬ ಮಾದಿಗನಿಗೆ ಅವನು ಪುತ್ರನಾಗಿ ಜನಿಸಿ ಅನೇಕ ಪವಾಡಗಳನ್ನು ಮಾಡಿದ್ದರ ಉಲ್ಲೇಖವಿದೆ. ಇದರಲ್ಲಿ ಈತನು ಚಿನ್ಮೂಲಗಿರಿಯಲ್ಲಿ ರೇವಣಸಿದ್ಧೇಶ್ವರನಿಂದ ಮಂತ್ರೋಪದೇಶ ಹೊಂದಿದನೆಂದು ಹೇಳಿದೆ. ಅವನು ವಚನಗಳನ್ನು ರಚಿಸಿದಹಾಗೆಯೂ ಪ್ರತೀತಿ ಇದೆ. ರೇವಣ್ಣ ಪ್ರಭು ಎಂಬುದೇ ಅವನ ಮುದ್ರಿಕೆಯು.

ಈತನು ತೆಲಗುಬಾಳ, ಉಜ್ಜಯಿನಿ, ತೂಲಳ್ಳಿ, ಅಸಗೋಡು, ಬೇಕೂರು ಮುಂತಾದ ಸ್ಥಳಗಳಲ್ಲಿ ಸಂಚರಿಸಿ ಅನೇಕ ಪವಾಡಗಳನ್ನು ಮಾಡಿದ್ದರ ಬಗ್ಗೆ ಈ ಕಾವ್ಯದಲ್ಲಿ ಉಲ್ಲೇಖಗಳಿವೆ. ಈ ಸ್ಥಳಗಳನ್ನು ಶ್ರೀಯುತ ಜೀರಗೆ ಕಟ್ಟೀ ಬಸಪ್ಪನವರು ಸಂದರ್ಶಿಸಿ ಒಂದು ವಿಸ್ತಾರವಾದ ಲೇಖವನ್ನು ಪ್ರಸಿಸಿದ್ದಾರೆ. ಈ ಸ್ಥಳಗಳಲ್ಲಿ ಈ ಮಹಾತ್ಮನ ಕುರುಹುಗಳು ಈಗಲೂ ಇವೆ.

ಮರುಳುಸಿದ್ಧನು ಒಬ್ಬ ಅಸ್ಪೃಶ್ಯನಿಗೆ ಸಂಬಂಧ ಪಟ್ಟವನೆಂದು ಇಲ್ಲಿ ಹೇಳಿದ್ದಾಗಿರುವದರಿಂದ ಈ ವೃತ್ತಾಂತವು ನಿಜವಲ್ಲ ವೆಂದು ಕೆಲವರ ಅಭಿ

ಪ್ರಾಯವದೆ ಆದರೆ ಈತನು ಬಸವೇಶ್ವರನ ಕಾಲದಲ್ಲಿದ್ದು ಈ ಕಾಲದಲ್ಲಿ ವೀರಶೈವರಲ್ಲಿ ಒಬ್ಬನು ಮಂತ್ರೋಪದೇಶವನ್ನು ಹೊಂದಿದಬಳಿಕ ಅವನಲ್ಲಿ ಕುಲಭೇದವನ್ನು ಎಣಿಸುವ ಪದ್ಧತಿಯು ಇರಲಿಲ್ಲ. ಅವನಲ್ಲಿ ಪೂರ್ವಾಶ್ರಯವು ಅಳಿದು ಹೋಗುತ್ತದೆ. ಆದ್ದರಿಂದ ಅನೇಕ ಅಸ್ಪೃಶ್ಯ ಶಿವಶರಣರು ವೀರಶೈವರಲ್ಲಿ ಆಗಿ ಹೋಗಿರುತ್ತಾರೆ.

ವೀರಶೈವ ಗ್ರಂಥ ಸಂಶೋಧನ ಕಾರ್ಯವು ನಡೆದಹಾಗೆ ಹೊಸ ಹೊಸ ಶಿವಶರಣರ ಹೆಸರುಗಳೂ ಅವರ ಚರಿತ್ರೆಗಳೂ ಗೊತ್ತಾಗಬಹುದು. ಅವು ದೊರೆತಹಾಗೆ ಅವುಗಳನ್ನು ಸಂಗ್ರಹಿಸುತ್ತ ಹೋಗಬೇಕು. ಇದರಿಂದ ಅವರ ಚರಿತ್ರೆಗಳ ಮೇಲೆ ಹೊಸ ಪ್ರಕಾಶವು ಬೀಳುತ್ತ ಹೋಗುವದು. ಆ ವರೆಗೆ ನಾವು ನಮ್ಮ ನಮ್ಮ ಅಭಿಪ್ರಾಯಗಳನ್ನು ಹೊರಪಡಿಸುವದು ಸರಿಎನಿಸಲಾರದು.

**ಬಸವೇಶ್ವರನ ಚರಿತ್ರೆ:—** ಶ್ರೀ ಬಸವೇಶ್ವರನ ವೃತ್ತಾಂತಗಳು ಇನ್ನೂ ಐತಿಹಾಸಿಕವಾಗಿ ಸಂಶೋಧಿಸಲ್ಪಟ್ಟಿರುವದಿಲ್ಲ. ಆದರೆ ಈಚೀಚೆಗೆ ಅವನ ವಿಷಯವಾಗಿ ಹೆಚ್ಚಿಗೆ ವೃತ್ತಾಂತಗಳು ದೊರೆಯುಹತ್ತಿವೆ. ಹೊಸ ಹೊಸ ಶಿಲಾಶಾಸನಗಳೂ ಉಪಲಬ್ಧವಾಗಹತ್ತಿವೆ. ಅವುಗಳನ್ನು ಪರೀಕ್ಷಿಸಿ ನಿಜವಾದ ಸಂಗತಿಗಳನ್ನು ನಾವು ಪ್ರಕಟಮಾಡುವ ಕಾಲವು ಬೇಗನೆ ಬರಬಹುದು. ಆ ವರೆಗೆ ನಾವು ನಮ್ಮ ಅಭಿಪ್ರಾಯಗಳನ್ನು ಪ್ರಕಟಿಸುವದು ಉಚಿತವೆಂದು ತೋರಲಾಗದು. ಆದ್ದರಿಂದ ನಾವು ಬಸವೇಶ್ವರ ಚರಿತ್ರೆಯನ್ನು ಯಾವಾಗಲೂ ಪ್ರಕಟಗೊಳಿಸಿರುವದಿಲ್ಲ.

**ಹರಭಕ್ತ ಹರಳಯ್ಯನ ಏಕಾಂಕ ನಾಟಕ:—** ಈ ನಾಟಕಕ್ಕೆ ವಿಜಾಪೂರ ಜಿಲ್ಹೆಯಲ್ಲಿ ಪ್ರಥಮ ಬಹುಮಾನವು ದೊರೆತದ್ದಕ್ಕೋಸ್ಕರ ನಾವು ಇದರ ಚಾಲಕರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ. ಸರಕಾರದವರು ವಿದ್ಯಾರ್ಥಿಗಳಲ್ಲಿ ಅಭಿನಯ ಚಾತುರ್ಯವನ್ನು ಹೆಚ್ಚಿಸಲು ಈಚೆಗೆ ಬಹಳ ಪ್ರಯತ್ನಿಸುತ್ತಲಿದ್ದಾರೆ. ಈ ಜಿಲ್ಹೆಯಲ್ಲಿ ಬೇರೆ ಬೇರೆ ತಾಲೂಕ್ಯಗಳಿಂದ ಸ್ಪರ್ಧೆಗಾಗಿ ಅನೇಕ ನಾಟಕಗಳು ಬಂದಿದ್ದವು. ಅವುಗಳಲ್ಲಿ ಈ ನಾಟಕವು ಒಂದನೇ ನಂಬರವನ್ನು ಪಡೆಯಿತು. ಹರಳಯ್ಯನ ನಾಟಕವನ್ನು ಜಮಖಂಡಿ ತಾಲೂಕಿನ ಬನಹಟ್ಟಿ ಗ್ರಾಮದ ವಿದ್ಯಾರ್ಥಿಗಳು

ಅಭಿನಯಿಸಿದರು. ಅವರು ಬಹು ಶ್ಲಾಘನೀಯವಾದ ರೀತಿಯಿಂದ ತಮ್ಮ ತಮ್ಮ ಪಾರ್ಟುಗಳನ್ನು ನೆರವೇರಿಸಿದರು. ಹರಳಯ್ಯನ ಪಾರ್ಟ ತೆಗೆದು ಕೊಂಡ ಬಾಲಕನು ಅತ್ಯುತ್ತಮ ರೀತಿಯಿಂದ ತನ್ನ ಕೆಲಸವನ್ನು ಮಾಡಿದನು. ಈ ನಾಟಕವನ್ನು ಬರೆದವರು ಶಾಲೆಯ ಶಿಕ್ಷಕರಾದ ಶ್ರೀ ಲಿಂಗಣ್ಣ ಬಾಣದ ಇವರು ಇರುತ್ತಾರೆ. ಅವರು ಈ ನಾಟಕವನ್ನು ಶಿವಾನುಭವ ಪತ್ರಿಕೆಯಲ್ಲಿ ಈ ಮೊದಲಿಗೆ ಪ್ರಸಿದ್ಧಿಸಿದ್ದಾರೆ. ಅವರು ಅಲ್ಲಲ್ಲಿ ವಚನಕಾರರ ವಚನಗಳನ್ನು ನಾಟಕದಲ್ಲಿ ಸೇರ್ಪಡೆ ಮಾಡಿದ್ದಾರೆ. ಅವು ಸಂದರ್ಭಕ್ಕೆ ಅನುಸರಿಸಿ ಇರುವದರಿಂದ ಅವು ಬಹು ಆಕರ್ಷಕವಾಗಿರುತ್ತವೆ. ನಾಟಕದಲ್ಲಿ ಇದ್ದ ಏಳೆಂಟು ಜನ ವಿದ್ಯಾರ್ಥಿಗಳು ಉತ್ತಮ ರೀತಿಯಿಂದ ತಮ್ಮ ತಮ್ಮ ಕಾರ್ಯಗಳನ್ನು ಮಾಡಿದರು. ಶಿವಶರಣರ ತತ್ವಪ್ರಚಾರ ಕಾರ್ಯದಲ್ಲಿ ಇಂಥ ನಾಟಕಗಳು ಬಹು ಪ್ರಯೋಜನಕಾರಿಗಳಾಗಿವೆ. ವಿದ್ಯಾರ್ಥಿಗಳೆಲ್ಲರು ಉಕ್ತಿಗಳನ್ನು ಬಹು ಸರಸಾಗಿ ಹಾಡಿದರು. ಶಿವಶರಣರ ಕಥೆಗಳು ಅಸಂಖ್ಯಾತವಾಗಿವೆ. ಶಾಲಾಶಿಕ್ಷಕರ ವರ್ಗದವರು ಅವುಗಳನ್ನು ರಂಗಭೂಮಿಗೆ ತಂದಲ್ಲಿ ನಾಡಿನಲ್ಲಿ ನಿಜವಾದ ಧಾರ್ಮಿಕ ಚಳವಳಿಯನ್ನು ಅವರು ಮಾಡಿದಂತಾಗುವದು.

**ವೀರಶೈವ ಮಹಾಸಭೆ:—** ವೀರಶೈವ ಮಹಾಸಭೆಯ ನಿರ್ಣಯಗಳನ್ನು ಪ್ರಚಾರದಲ್ಲಿ ತರಲಿಕ್ಕೆ ಅದರ ಅಧ್ಯಕ್ಷರಾದ ಶ್ರೀ ಬಂಥನಾಳ ಮಹಾಸ್ವಾಮಿಗಳವರು ಈಗ ವಿಶೇಷ ಪ್ರಯತ್ನ ಮಾಡುತ್ತಲಿದ್ದಾರೆ. ಅವರು ಇಷ್ಟರಲ್ಲಿ ನಿರಂತರ ಕಾರ್ಯಮಾಡತಕ್ಕ ಮಧ್ಯವರ್ತಿ ಕಮೀಟಿಯನ್ನೂ ಕಾರ್ಯಕಾರಿಕಮೀಟಿಯನ್ನೂ ಏರ್ಪಡಿಸಿದ್ದಲ್ಲದೆ ಅವರು ಇದೇ ೧೩ ನೇ ತಾರೀಖಿನ ದಿವಸ ಈ ಕಮೀಟಿಯನ್ನು ಸಹ ಕರೆದಿದ್ದಾರೆ. ಶ್ರೀ ಮಹಾಸ್ವಾಮಿಗಳೂ ಕಮೀಟಿಯ ಸಭಾಸದರೂ ಸಮಾಜದಲ್ಲಿ ಕಾರ್ಯಮಾಡಲು ಬಹಳ ಉತ್ಸುಕರಾಗಿದ್ದಾರೆ. ಅವರು ಬೇಗನೇ ಯಾವಯಾವ ಕಾರ್ಯಗಳನ್ನು ಮಾಡಬೇಕೆಂಬುದನ್ನು ನಿರ್ಧರಿಸತಕ್ಕವರಿದ್ದಾರೆ. ಈಗ ಸುದೈವದಿಂದ ಸಮಾಜದಲ್ಲಿ ಐಕ್ಯತೆಯು ತಲೆದೋರಹತ್ತಿದೆ. ಮೊದಲಿನ ಕಾಲದ ಸಾಮಾಜಿಕ ಮತ್ತು ರಾಜಕೀಯ ಮತಭೇದಗಳು ಹಿಂದೆ ಬೀಳಹತ್ತಿವೆ. ಶಿವಾನುಭವ ಪತ್ರಿಕೆಯ ಮೂಲಕ ಶಿವಶರಣ ಅನೇಕ ವಚನ ಗ್ರಂಥಗಳೂ ಐತಿಹಾಸಿಗ ಗ್ರಂಥಗಳೂ ಹೊರಬಿದ್ದಿರುತ್ತವೆ. ಈ ಸನ್ನಿವೇಶಗಳಿಂದ ಸಮಾಜದಲ್ಲಿ ಹೊಸವಾತಾವರಣಗಳು ಉಂಟಾಗಹತ್ತಿವೆ. ಇದ

ರಿಂದ ಸಮಾಜದಲ್ಲಿ ಧಾರ್ಮಿಕ ನೈತಿಕ ಮತ್ತು ವಾಙ್ಮಯಾತ್ಮಕ ಚಟುವಟಿಕೆಗಳನ್ನು ಮಾಡಲಿಕ್ಕೆ ಹೊಸ ಹುರುಪು ಉಂಟಾಗಹತ್ತಿದೆ. ಸಭಾಸದರು ದಿಶೆಯಿಂದ ಕಾರ್ಯಮಾಡಿದಲ್ಲಿ ಸಮಾಜದಲ್ಲಿ ಒಂದು ಬಲವಾದ ಶಕ್ತಿಯು ಉಂಟಾಗುವದರಲ್ಲಿ ಸಂದೇಹವಿಲ್ಲ. ಇಂಥ ಸುಧಾರಣಾ ಕಾರ್ಯಗಳ ಕಡೆಗೆ ಸಮಾಜವು ತನ್ನ ಲಕ್ಷವನ್ನು ಪೂರೈಸುವದೆಂದು ನಾವು ಭಾವಿಸಿದ್ದೇವೆ.

---

# ನೂರೊಂದರ ಹಾಡುಗಳು.

## ೧. ಪಿಂಡಸ್ಥಲ.

**ಸೂತ್ರ:—** ಶ್ರೀಮದನಾದಿ ಸದ್ಭಕ್ತನ ಹೃದಯದಲ್ಲಿಪ್ಪ ಶ್ರೀಮನ್ನಿರಂಜನ ಜಂಗಮ ಮಹಾಸ್ವಾಮಿಯ ಕರಸ್ಥಲದಲೊಪ್ಪುವ ಶ್ರೀಮಚ್ಛೂನ್ಯಲಿಂಗವು ಶ್ರೀಮನ್ನಿರವಯಾಂಗದಲ್ಲಡಗಿರಲು ಪಿಂಡಸ್ಥಲವಾದುದು.

ಪದ— ರಾಗ ನಾಟಿ

ಬಿಂದು ಬಿನ್ನಾಣದೊಳಗಂದವಿಟ್ಟಿಹ ಕಳಾ। ನಂದ ಪಿಂಡೋದಯದ ಜ್ಞಾನ ನಿರತಾ ॥ಪಲ್ಲವಿ॥

ಕಾರ ಮೇಘದೊಳು ಮಿಂಚಡಗಿ ತೋರದ ತೆರದಿ-ನೀರೊಳಡಕಂಗೈದ ಕಿಚ್ಚಿನಂತೆ। ಬೇರುತಿಹ ಫಲ ರಸವೊಳಿಪ್ಪ ನವರುಚಿಯಂತೆ-ವಾರಣದ ಮಸ್ತಕದ ಮುತ್ತಿನಂತೆ ॥೧॥

ಶಶಿಕಾಂತದೊಳಗುದಕ ಒಸರದಡಗಿ ನಿಂದಂತೆ-ಹಸುಳೆಯೊಳಗಣ ಸ್ವಪ್ನದೋರದಂತೆ। ನಸು ನನೆಯೊಳಡಗಿರ್ದ ನವಸುಗಂಧದ ತೆರದಿ—ಯುಸುರ್ಕೊಳಡಗಿರ್ದ ಚೈತನ್ಯದಂತೆ ॥೨॥

ಕ್ಷೀರದೊಳು ಘೃತವಡಗಿ ನೀರು ಮುತ್ತಿನೊಳಡಗಿ-ಆರೈದು ನೋಡೆ ಬೀಜದೊಳು ವೃಕ್ಷ। ಸೇರಿರ್ದು ಮೊಳೆದೋರದಂತಿಪ್ಪ ಮಹಾ ಘನವನಾರು ಭೇದಿಸಿ ಕಾಣಲರಿದು ನೋಡಾ ॥೩॥

ಪಾಷಾಣದೊಳಗಗ್ನಿ ಸೂಸದ ಜಿಡಂಗು ಪ್ರತಿ-ಭಾಷೆದೋರದ ಜಲದ ನಿಲವಿನಂತೆ। ನೇಸರೊಳಡಗಿರ್ದ ಮರೀಚನಂದದಲಿ ವಿಲಾ-ಸಿಸುವ ಪಿಂಡ ವೈದೋರದಿಹುದು ॥೪॥

ರೂಪು ರೂಪಿನೊಳಡಗಿ ರೂಪಿಸದೆ ನಿಂದ ನಿಜ-ರೂಪು ನಿಶ್ಚಲವಾಗಿ ಸಂಚಲಿಸದೆ। ತಾ ಪರಾತ್ಪರನಾಗಿ ನಿಂದ ನಿಜಪದವು ಚಿ-ದ್ರೂಪ ಕೂಡಲ ಚನ್ನಸಂಗಯ್ಯನು. ॥೫॥

## ೨. ಪಿಂಡಜ್ಞಾನಸ್ಥಲ.

**ಸೂತ್ರ:—** ಇಂತಪ್ಪ ಮಹತ್ಪಿಂಡಸ್ಥಲವು, ತನ್ನ ಲೀಲೆಯಿಂ ತನ್ನೊಳ ಹಗಿದ ಸಕಲ ನಿಷ್ಕಲಾತ್ಮ ತತ್ವಗಳನುಂಟು ಮಾಡಿ ತೋರಿಸಬೇಕೆಂದಿಚ್ಛೈಸಲು ಅಲ್ಲಿ ಜ್ಞಾನೋದಯವಾಯಿತ್ತಾಗಿ, ಮುಂದೆ ಪಿಂಡ ಜ್ಞಾನಸ್ಥಲವಾದುದು.

**ಪದ ರಾಗ-ಜಂಝೂಟಿ**

ಸ್ವಾನುಭಾವದುದಯದಿಂದೆ ಜ್ಞಾನನೇತ್ರ ಮುಸುಕ ತೆಗೆದು - ತಾನು ತನ್ನ ನಿಜವ ನೋಡಿ ತಿಳಿದ ಮಹಿಮನು ॥ಪಲ್ಲವಿ॥

ಚಿತ್ತಬಿಂದು ಪ್ರಕೃತಿ ಹಿಂಗಿ ನಿತ್ಯಾನಿತ್ಯ ವಿವೇಕದಿಂದ-ಲತ್ತ ನಿಲುಕಿನೋಡಿ ಕಂಡ ಸಕಲದಳಿವನು । ತತ್ವದಲಿ ವಿವೇಕಿಯಾಗಿ ನಿಶ್ಚಲದ ನಿಜಾಂತರಂಗ-ತತ್ವಚಯವನೈದಿ ಸುಖದ ಮುಖವನರಿದನು. ॥೧॥

ಜ್ಞಾನ ಮುಕುರದೊಳಗೆ ನೋಡಿ ತಾನು ತನ್ನ ಕುರುಹವಿಡಿದು— ತಾನು ತನಗೆ ಅನ್ಯವಿಲ್ಲೆಂಬ ಭೇದವಾ । ತಾನೆಯರಿದು ಮಾಯೆ ಮಿಥ್ಯವಂ ನಿವೃತ್ತಿಮಾಡಿ ಶಿವ-ಧ್ಯಾನದಲ್ಲಿ ಮನವನಿತ್ತ ಸೌಖ್ಯ ಶರಣನು ॥ ೨ ॥

ಹಿಂದ ಹರಿದು ಹರಿದ ಹಿಂದನೊಂದು ಮಾಡಿ ಬೆಸರದಾ - ನಂದದಿಂದಲೈದಿ ಮನೋಭಾವಿಯಾಗಿ । ಬಿಂದು ನಾದ ಕಲತ್ರಯದ ಸಂದನಳಿದು ಚಿತ್‌ಸ್ವರೂಪ-ಬಿಂದುವಿನೊಳು ನಿಂದು ಮೆರೆದ ಸೌಖ್ಯ ಶರಣನು ॥೩॥

ಶಕ್ತಿಯೊಳು ಶಿವಾತ್ಮವಡಗಿ ಶಕ್ತಿರಹಿತನೆಂಬ ಬೆಡಗ-ಶಕ್ತಿ ಮುಖದೊಳರಿದು ಶಕ್ತಿಸಂಗ ಭಂಗವಿ । ಶಕ್ತಿಯಿಂದ ಗೆಲಿದು ಪರಮ ಶಕ್ತಿಸುಖವ ಕಂಡ ಸುಖಿಯ-ಚಿತ್ತದರಿವು ಜಗವ ನುಂಗಿಯುಗುಳದಿರ್ದುದು ॥ ೪ ॥

ಆದಿ ಮಧ್ಯ ಅಂತ್ಯವೆಂಬ ಭೇದವಾಕ್ಯದೊಳಗೆ ಪುಗದ-ನಾದಿ ಸಿದ್ಧವಾಗಿ ತನ್ನ ತಾನೆ ಕಂಡುಯ । ಭೇದ್ಯಪದವನೈದಿ ಕೂಡಲ ಚನ್ನಸಂಗವಲ್ಲಿ-ಭೇದವಿಲ್ಲದಿಪ್ಪ ದಿವ್ಯ ಜ್ಞಾನಿ ನೋಡಾ ॥ ೫ ॥

---

## ೩ ಸಂಸಾರ ಹೇಯಸ್ಥಲ.

ಸೂತ್ರ:— ಇಂತಪ್ಪ ಶ್ರೀ ಪಿಂಡಜ್ಞಾನೋದಯವಾದ ಮಹಂತನು ನಿತ್ಯಾನಿತ್ಯ ವಸ್ತು ವಿವೇಕವನರಿದು ಅನಿತ್ಯವಾದ ಸಂಸಾರ ಹೇಯೋಪಾಯವ ಕಂಡು ತಾನು ನಿರಸನವ ಮಾಡುತ್ತಿರಲು ಮುಂದೆ ಸಂಸಾರ ಹೇಯ ಸ್ಥಲ ವಾದುದು.

ಪದ-ರಾಗ ಧನ್ಯಾಸಿ

ಏಕೆ ಸಂಸಾರ ಮಾಯಾಮಯದಭಯ ತನುವ | ನಾವರಿಸಿ ನುಂಗುತಿದೆ ನಾನಾ ಭವದ ದುಃಖ ಧಾವತಿಗೆ ಹೇವರಿಸಿ ಮರೆಯೊಕ್ಕೆ ಮದನಾರಿ ಕಾಯೋ ಕಾರುಣ್ಯ ನಿಧಿಯೇ ॥ ಪಲ್ಲವಿ ॥

ಶುಕ್ಲ ಶೋಣಿತ ಬದ್ಧ ಮಲದಿಂದಲಾದಂಗ | ಪ್ರಕೃತಿ ಕಾಯಕೆ ಸತ್ಯ ಮಾಯಾಮಲತ್ರಯದ | ಸಕಲ ಪ್ರಪಂಚು ಮೋಹಾನುಬಂಧನವೆ ವ್ಯಾಪ್ತಿಯಾಗಿ ನಿಮ್ಮಾ || ಸಕೃತ ಚಿಂತನೆ ಮಾಡಲೀಯದಿದನೆ ತೋರಿ| ವಿಕಳನೆನಿಸದೆ ಕರುಣದಿಂ ಬಂದು ಭಕ್ತದೇ | ಹಿಕ ದೇವನೆಂಬುದುಂಟಿದ ನೋಡಿ ಪರಿಹರಿಸು ಮಾಯಾ ವಿಡಂಬನವನು ||೧॥

ಆಶಿಯಾಮಿಷದ ಸಂಸಾರ ತಾಮಸದ ವಾ | ರಾಶಿಯೊಳಗಾಳುತೇಳು ತಲದಕೆ ಕಡೆಗಾಣ | ದಾಸತ್ತ್ವಳಲು ತೊಡಲ ಹೊರೆವ ಮಾಯಾ ಭ್ರಮೆಯು ಕ್ಲೇಶದಂಡಲೆ ತನುವನು ॥ ಗಾಸಿಮಾಡಿ ಹಿತೇ ಷಣತ್ರಯದ ಮೋಹಿನಿಯ | ಪಾಶಪಾಣಿಯೊಳು ಸಿಲುಕಿದ ಶಿಶುವಿಗಭಯಕರ | ದಾಶಿದೋರೆಳೆದುಕೋ ನಿವೃತ್ತ ದುರಿತಾರಿ ಪಾಶ ನಿರ್ಮುಕ್ತ ಶಿವನೆ ॥೨॥

ಆವಾವ ಮುಖ ಮುಖದೊಳಲ್ಲಿಗಲ್ಲಿಗೆ ತಾನೆ | ಭಾವಿ ತಾ ಭಾವ ದೊಳು ನಿಮ್ಮ ಭ್ರಮೆಯಂ ಬೀರು | ತಾವಲೋಕಿಸುತವಗ್ರಹಿಸಿಪ್ಪ ಸಂಸಾರ ಸರ್ವತೋಮುಖವೆನ್ನನು ॥ ಆವ ಕಡೆಗಡಿಯಿಡಲು ತೆರಹುಗೊಡದಯ್ಯ ಮಹ | ದೇವ ನಿಮ್ಮಯ ನೆನೆಯಲೀಯ್ಯದಿನ್ನೇವೆ ನೀ | ಧಾವತಿಯ ಪಂಹಂಪುದೇನರಿದು ಮದನಾರಿ ಮಾಯಾರಿ ದುರಿತಾರಿ ಗುರುವೆ ||೩॥

ಹುಟ್ಟಿ ಹೊಂದುವ ಹೊಂದಿ ಹುಟ್ಟುತಿಹ ಭವಮಾಲೆ | ಯಟ್ಟೆಳಯ ಕ್ಲೇಷ ನಾನಾ ಕರ್ಮ ರೋಗಭಯ| ಕಷ್ಟವ್ಯಸನಂಗಳೆಂಬಿವ ದುಷ್ಟತದ ತಾಮಸದ ತವಕದ ಮಾಯಾ ಮನವಾ ॥ ಮೆಟ್ಟಿ ಕೂಗಿಡೆ ಕೊಲು

ತಲಿದೆಯದರ ದೆಸೆಯಿಂದ । ಕೆಟ್ಟಿ ಶಿವಧೋ ಶಿವನೇ ದಂದುಗ ದಾಟಿಯರೆ ! ಯಟ್ಟುತಿದೆ ಸಿಲಲಾರೆ ನಿಮ್ಮಡಿಯ ಕೃಪೆಯೋಳಿಂಬಿಟ್ಟುಕೋ ರಕ್ಷಾಮಣಿಯೇ ॥೪॥

ಭವಪಾಶಬಂಧದಿಂ ಬಿಗಿದು ಕವಿಲೆಯ ಹುಲಿಯ । ಗವಿಯೊಳಗೆ ಕಟ್ಟಿದಂತದೆ ಸಂಸಾರವೆಂ । ಬ ವಿಚಾರ ಸರ್ವ ಸರ್ವ ಗ್ರಾಸ ಗೊಂಡುದಿದ ನೋಡಿ ಪರಿಹರಿಸಿ ವ್ಮಾ ॥ ಅವಿರಳ ಪಾದದೊಳು ಮನಮಗ್ನವಾಗಿಮ । ತ್ರವಿಕಲ್ಪ ಪನು ಸುಖಾನಂದದೊಳಗೆಂದಿಹೆನು । ಭವವಿರಹಿತ ಪರಮೇಶ ಪಾಲಿಸೈ ಮಗ್ಗರುವೆ ಉಳಿಯುಮೇಶ್ವರ ಲಿಂಗವೆ. ॥೫॥

---

## ೪. ಗುರು ಕಾರುಣ್ಯ ಸ್ಥಲ.

**ಸೂತ್ರ**— ಈಂತಪ್ಪ ಸಂಸಾರ ಹೇಯಸ್ಥಲಮಂ ನಿರಸನಮಂ ಮಾಡಿದ ಮಹಂತನು ತನ್ನ ನಿಜವ ತಾ ನೋಡಿಹೆನೆಂದರೆ, ಇದಿರಿಟ್ಟಲ್ಲದೆ ತನ್ನ ಕಾಣಬಾರದು. ಅದೆಂತೆಂದೊಡೆ ತನ್ನ ಮುಖವ ತಾ ನೋಡಿಹೆನೆಂಬುದನು ಇದಿರ ಕನ್ನಡಿವಿಡಿದಲ್ಲದೆ ತನ್ನ ತಾ ಕಾಣನೆಂದು ಇದಿರ ಕನ್ನಡಿಯನುಂಟುಮಾಡಿಕೊಂಡು ತನ್ನ ಕಾಣುವಂತೆ, ತನ್ನಿದಿರೆ ಶ್ರೀ ಗುರುವನುಂಟುಮಾಡಿಕೊಂಡು ಉಪಾವಸ್ಥೆಯಂ ಮಾಡುತ್ತಿರಲು ಮುಂದೆ ಶ್ರೀ ಗುರುಕಾರುಣ್ಯ ಸ್ಥಲಮಾದುದು.

॥ಪದ॥ ರಾಗ. ಮುಲಹರಿ

ನಾನಾ ಭವ ಭಯ ಸಂಸಾರದ ಅಜ್ಞಾನ ಜಡವ ಪರಿಹರಿಸಿ । ಜ್ಞಾನಾನುಗ್ರಹ ಜನ್ಮಜನಿತನನು ಮಾಡಿದುದೆನ್ನಯ ಗುರುಕರುಣಾ ॥ಪಲ್ಲವ॥

ಕರ್ಮಜಾತ ಜನಿತೇಂದ್ರಿಯದ ದುಷ್ಕರ್ಮಂಗಳ ಪೂರ್ವಾಶ್ರಯವ । ನಿರ್ಮೂಲನಂಗೈದು ಶಿವಜ್ಞಾನದ ಮಾರ್ಗವ ತೋರಿದ ಗುರು ಶರಣು ॥೧॥

ಕರಕಮಲವ ಶಿರದೊಳು ಕರುಣದೊಳಿಟ್ಟು ದುರಿತ ದುಷ್ಕೃತ ಲಿಪಿಯನೆ ತೊಡೆದು । ನರಜನ್ಮದ ಪೂರ್ವಾಶ್ರಯದೋಷವ ಪರಿಹರಿಸಿದೆನ್ನಯ ಗುರುಕರುಣಾ ॥೨॥

ಅಂಗದೊಳಗೆ ಲಿಂಗವ ನಿಲಿಸಿ ಸರ್ವಾಂಗವ ಲಿಂಗಸ್ಥಲವೆನಿಸಿ। ಮಂಗಳ ಮಯ ಪರಮ ಜ್ಞಾನದ ನಿಜದಂಗವ ತೋರಿದ ಗುರು ಶರಣು ॥೩॥

ಒಳಹೊರಗೆನ್ನದೆ ಎನ್ನೊಳು ತನ್ನಯ ಹೊಳೆವ ಜ್ಞಾನ ಜ್ಯೋತಿಯ ಬೆಳಗ ತಿಳಿವಂತೆನ್ನಯ ಕಣ್ದೆರೆವೆಯ ಪುಟ್ಟಿಸಿ ಸಲಹಿದ ಗುರು ಶರಣು ॥೪॥

ಉರಿ ಕರ್ಪೂರವ ಸೋಂಕಿದಂತೆನ್ನೊಳು ಬೆರಸಿಪ್ಪ ಮಹಾ ಘನವನು ತೋರಿ । ಪರಮ ಸುಖದೊಳಿರಿಸಿದ ಸಿದ್ಧ ಸೋಮೇಶ ಕರುಣಾಮೃತ ಗುರು ಶರಣು ॥೫॥

---

## ೫. ಲಿಂಗಧಾರಣಸ್ಥಲ.

**ಸೂತ್ರ**:— ಇಂತಪ್ಪ ಗುರುಕಾರುಣ್ಯಮಂ ಪಡೆದ ಮಹಾಮಹಿಮನು ತನ್ನ ಸ್ಥೂಲತನುವಿನ ವ್ಯವಹಾರಮಂ ಕೆಡಿಸಿ ಸದಾಚಾರ ಸತ್ಕ್ರಿಯಾವರ್ತನೆಗೆ ಸಾಧನವೆನಿಸಿ ತನ್ನ ಅಂಗದ ಮೇಲೆ ನಿರಂತರ ಶ್ರೀಮದಿಷ್ಟಲಿಂಗ ಸ್ವಾಯತವಾದ ಭೇದವೆಂತಿರ್ದುದೆಂದೊಡೆ, ಮುಂದೆ ಶ್ರೀ ಲಿಂಗಧಾರಣ ಸ್ಥಲವಾದುದು.

॥ಪದ॥ ರಾಗ ಘೂರ್ಜರಿ.

ಗುರು ಪರಮಾರ್ಥವ ರೂಹಿಸಿ ಪ್ರಾಣನ। ಕರದೊಳು ಕರುಣಿಸಲಾತನು ಲಿಂಗದ । ಶರಿರವಹುದು ಎನಲನವರತಂ ಶಿವಲಿಂಗವ ಧರಿಸುವುದು ॥ಪ॥

ಲಿಂಗ ಸಹಿತ ನಡೆ ಲಿಂಗ ಸಹಿತ ನುಡಿ । ಲಿಂಗ ಸಹಿತ ಸರ್ವೇಂದ್ರಿಯ ಮುಖವು । ಲಿಂಗಾಲಿಂಗಿತವಾಗಿಹ ಇಂಥಾ ಲಿಂಗಾಂಗಿಯೆ ಸಹಜಾ ॥ ಅಂಗದಿ ಸತಿಸುತ ಮಿತ್ರರುಗಳು ಶಿವ । ಲಿಂಗವ ಧರಿಸಿಹುದದು ಕರಣದಿಂ । ಅಂಗ ಸುಸಂಗತದಂತ ಗ್ರಹಣವೆಂಬ ಶ್ರುತಿಯ ಮತವು ॥೧॥

ತ್ರಿಕರಣ ಶುದ್ಧತೆಯಿಂದವಧಾನದಿ । ಪ್ರಕೃತಿಯ ಪಲ್ಲಟಿಸದೆ ಯಾಪೇಕ್ಷಯ। ವಿಕಳತೆಯಿಂ ಕಾಂಚನಕೆ ಕೈಯಾನದೆ ನಿಶ್ಚಯ ದೃಢದಿಂ ॥ ಅಕಳಂಕ ಚರಿತ್ರದೊಳಣು ಮಾತ್ರವೀ। ರಕತಿಗೆಡದೆ ನಿಜನೈಷ್ಠೆಯ ಭಕುತಿ। ಯುಕುತಿಯುಳ್ಳೊಡೆ ಶಿವಲಿಂಗವ ಕರಸ್ಥಲದಲ್ಲಿಯೆ ಧರಿಸುವದು. ॥೨॥

ಏನೇನುಂಟಾದಖಿಳ ಸುಖಂಗಳ। ನಾನಾ ಮುಖ ಭೋಗಾಭೋಗಂಗಳ। ತಾನೇ ಕಾಮಿಸಿ ತನಗದು ಬೇಕೆಂಬತಿ ಕಾಂಕ್ಷೆಯ ವಶದ ॥ ಜ್ಞಾ

ಕೇಂದ್ರಿಯಂಗಳ ಮುಖವ್ಯೋಗಲೀಯದೆ । ಸ್ವಾನುಭಾವ ನಿಜಮುಳ್ಳೊಡೆ ಕಕ್ಷ । ಸ್ಥಾನದೊಳವಧರಿಸುವದು ನಿರಂತರ ಶಿವಲಿಂಗವನೊಲಿದು ॥೩॥

ಉರಸೆಜ್ಜೆಯೊಳಗೆ ಲಿಂಗವ ಧರಿಸುವ । ಪರಿಯೆಂತೆದೆನಲಂಗ ವಿಕಾ ಕದ । ವಿರಹದೊಳಂಗನೆಯರ ಸಂಗವ ಮಾಡದೆ ನಿರ್ಮಲನಾಗೀ ॥ ಶರಿರವಿಡಿದು ಸೋಂಕುವ ಸೌಖ್ಯಂಗಳ । ನಿರದಾ ಲಿಂಗದೊಳಗೆ ಸಮವೇ ದಿಸಿ । ಪರಮ ಸುಖದ ಸುಗ್ಗಿಯೊಳಿರಬಲ್ಲಡೆ ತಾನದು ಸತ್ಪಥವು ॥೪॥

ಅನೃತವಪಶಬ್ದವನು ಕುತರ್ಕವ । ಮನಸೂತಕ ನಿಂದೆಯು ನಿಷ್ಠು ರವ । ನನುಮಿತ್ಯಾದಿ ವಿಕಾರದ ಭ್ರಾಂತನು ಮದನುತ್ಸರಗಳನು ॥ ಅನುಕರಿಸದೆ ಜಿಹ್ವಾಲಂಪಟತನ । ವನು ತಲೆದೋರಲೀಯದೆ ಲಿಂಗವ । ಸನುದಿನ ಮುಖ ಸೆಜ್ಜೆಯೊಳಗೆ ಧರಿಸಿದೊಡದು ಸದ್ಗುರು ಮಾರ್ಗ ॥೫॥

ಕರಣಾದಿ ಗುಣಗಳ ಸಂಚುವ ಸಂ । ಹರಿಸಿ ಶಿವಜ್ಞಾನದೊಳಂತ ರ್ಮುಖ । ವೆರಡರಿಯದೆ ನವನಾಳದೊಳಗೆ ಬೀಸುವ ಪ್ರಾಣನ ಗುಣವಾ ॥ ಪರಿಹರಿಸಿ ಮಹಾ ಸುವಿಚಾರದೊಳಗೆ । ಪರಿಪಕ್ವಸದ ಸನ್ನಿಹಿತ ಸುಖದೊ । ಳರಿಯುವಳೋಕ್ಯದೊಳಗೆ ಲಿಂಗವ ಧರಿಸುವಡದು ಸತ್ಪಥವು ॥೬॥

ಅವಿಚಾರತೆಯಿಂ ಲೋಕದ ಜಡವಾ । ನವರಿಗೆ ರಾಗದಿಹದುಳ್ಳೊಡೆ ಶಿವಲಿಂ । ಗವ ಮಸ್ತಕದಲಿ ಧರಿಸುದೀ ಕ್ರಮವರಿದು ಧರಿಸಿದವರು ॥ ಶಿವತತ್ವದ ಮೂಲಜ್ಞಾನದ ಸಂ । ಭವ ಸಂಬಂಧಿಗಳೆನಿಸುವನಾ ನಿಜ । ಸುವಿ ಚಾರದಿ ಭಕ್ತರ ಪದಕೆ ಶರಣೆಂಬೆ ಗುರುಪುರದ ಮಲ್ಲಯ್ಯ ॥೭॥

———

## ೬. ವಿಭೂತಿಸ್ಥಲ.

**ಸೂತ್ರ:—** ಇಂತಪ್ಪ ಶ್ರೀಲಿಂಗಧಾರಣದಿಂ ಸದಾಚಾರ ಸತ್ಕ್ರಿಯಾ ಸಮ್ಯಜ್ಞಾನ ಸದ್ಭಾವ ಸಂಪನ್ನನಾದ ಮಹಿಮಂಗೆ ಶ್ರೀಶಿವನ ಮಹದೈ ಶ್ವರ್ಯ ಸ್ವರೂಪಮಪ್ಪ ಶ್ರೀವಿಭೂತಿಯು ಧರಿಸಬೇಕಾದ ಕಾರಣ ಮುಂದೆ ವಿಭೂತಿಸ್ಥಲವಾದುದು.

॥ಪದ॥ ರಾಗ ಭೈರವಿ.

ಶ್ರೀ ವಿಭೂತಿಯನೊಲಿದು ಧರಿಸಿದೊ । ಡಾವ ಕರ್ಮವು ಹೊದ್ದಲ ಮ್ಮವು । ಪಾವನವ ಮಾಡುವದು ಪರಮ ಪದವಿಯ ತೋರುವದು ॥ಪಲ್ಲವಿ॥

ಶಿವನ ಪರಮ ಜ್ಞಾನ ಮೂಲಾಧಾರ ಶಕ್ತಿಯು ಸರ್ವಾಂಗ ಮಂಗಳ ಭೂಷಣದ। ಸಾರೋದ್ಧಾರದ ಸುಖದ ಮಹದೈಶ್ವರ್ಯದನಾದಿ ಸಂಸಿದ್ಧವಾದ ವಿಭೂತಿ ॥೧॥

ಪಂಚ ಬ್ರಹ್ಮಾತ್ಮಕದಿಂದುದಯವಾದ ಪಂಚ ಗವ್ಯ ಗೋಮಯವನು ಆಗಮ। ಮತದಿಂದ ದಹಿಸಿ ಸಮಸ್ತ ಮುನಿ ಜನಂಗಳು ಧರಿಸುವ ಭಸಿತವು ॥೨॥

ಶ್ರೀ ಗುರು ವಿಭೂತಿಯಂ ಶಿಷ್ಯನ ಹಣೆಯೊಳಿಡೆ ಆಗಳೆ ಮಾಂಸ ಪಿಂಡದ ಗುಣವಳಿದು। ಮಂತ್ರ ಪಿಂಡವ ಮಾಡಿ ದುರ್ಲಿಖಿತವ ತೊಡೆದು ಒಪ್ಪುತಿಪ್ಪುದು ॥೩॥

ಆಣವ ಮಲ ಮಾಯಾ ಮಲ ಕಾರ್ಮಿಕ ಮಲವೆಂಬ ಮಲತ್ರಯಂಗಳ ಕುಲವ ಜಲದೊಳ। ಗಲೆದು ದೊಳೆವಂತೆ ತೊಳೆದು ಎನ್ನಂತರಂಗದಲಿ ತೊಳಗುತಿಹ ಭಸ್ಮವು ॥೪॥

ಸಕಲ ಕ್ರಿಗಳಿಗಿದು ಕವಚ ಸಕಲವಶ್ಯಕ್ಕಿದು ಶುಭತಿಲಕ ಸಕಲ ಸಂಪದಕ್ಕೆ ಕಾಣವಿದು। ಅಘಟಿತ ಘಟಿತವೆನಿಸುವ ಅನುಪಮ ಮಹಾ ತ್ರಿಪುಂಡ್ರವಿದು ॥೫॥

ಆಗಮಕ್ಕೆ ಮೊದಲಿದು ಆಚಾರದ ಸುಗತಿಯ ಪಥವಿದು ಕಾಲಕರ್ಮದ ಮೂಲ ನಾಶನ। ವಿದು ಜನನ ಮರಣದ ಭಯವೆಂಬ ದುಷ್ಕೃತವ ದೂರವ ಮಾಡುವದು ವಿಭೂತಿ ॥೬॥

ಅಣುಮಾತ್ರ ವಿಭೂತಿಯ ಹಣೆಯೊಳಿಡೆ ಎಣಿಕೆಯಿಲ್ಲದ ಭವಪಾಶ ಹರಿವುದು। ತ್ರಿಣಯನೊಲಿದು ಧರಿಸಿದನೆಂದೆನೆ ಅನು ಬದುಕಿದೆನು ಕೂಡಲಸಂಗಯ್ಯ ॥೭॥

———

## ೭. ರುದ್ರಾಕ್ಷಿ ಸ್ಥಲ.

**ಸೂತ್ರ:**— ಇಂತಪ್ಪ ಮಹಾಜ್ಞಾನ ಭಸ್ಮವಂ ಸತ್ಕ್ರಿಯಾ ಮುಖದಿಂದ ಧರಿಸಿದ ಶ್ರೀಲಿಂಗ ಕ್ರಿಯಾ ಸಂಪನ್ನಂಗೆ ಶಿವನ ಮಹಾಜ್ಞಾನ ಚಕ್ಷುವಿನಿಂದುದಯಿಸಿದ ರುದ್ರಾಕ್ಷಿಯ ಧರಿಸಬೇಕಾದ ಕಾರಣ ಮುಂದೆ ರುದ್ರಾಕ್ಷಿಯ ಸ್ಥಲವಾದುದು.

॥ಪದ॥ ರಾಗ ಮಂಗಳಕಾ೨

ಮಂತ್ರ ಮೂಲ ಗೂಢ ಪದದ ಚಿಂತಾಮಣಿ ರುದ್ರಾಕ್ಷಿಗಳನವ ರಂತುವರಿದುಧರಿಸಬಲ್ಲಡಾತ ರುದ್ರನು ॥ಪಲ್ಲವ॥

ಮಾರ ಮಥನ ತ್ರಿಪುರ ದಹನ ಕಾರಣದೊಳು ನೋಡೆ ನಯನ ವಾರಿ ಬಿಂದು ಬೀಳಲುದಯವಾಗಿ ಮರ್ತ್ಯದಾ ॥ ಘೋರ ಪಾತಕಂಗ ಳನ್ನು ಉರುಹಿ ಭಕ್ತ ಜನದೊಳೊಪ್ಪಿ । ತೋರುತಿರ್ಪ ರುದ್ರಾಕ್ಷಿಯು ಪುಣ್ಯ ಪುಂಜವು ॥೧॥

ಸ್ಮರಿಸಿ ದುರಿತ ಹರವು ಈಕ್ಷಿಸಲ್ಕೆ ಕರ್ಮವಳಿವು ಒಲಿದು । ಸ್ಪರ್ಶ ನವನು ಮಾಡೆ ಜನ್ಮ ಪಾಪ ನಾಶನಾ ॥ ಧರಿಸೆ ರುದ್ರಪದವಿಯುರಿದು ಧರಿಸಿ ಜಪಿಸೆ ಸದ್ಯೋನ್ಮುಕ್ತಿ । ಪರಮ ವೀರಶೈವ ಸಮಯ ಮೂಲ ಭೂಷಣಾ ॥೨॥

ಹಸ್ತದಲ್ಲಿ ಬಾಹು ಕಂಠದಲ್ಲಿ ಕರ್ಣಯುಗಳದಲ್ಲಿ । ಉತ್ತಮಾಂಗದಲ್ಲಿ ಶಿಖಿಯ ಮೂಲದಲ್ಲಿ ॥ ವಿಸ್ತರಿಸಿ ಮನೋನುರಾಗದಿಂದ ತಿಳಿದು ನೋಡೆ ಯಾಗ । ಮೋಕ್ತಿಯಿಂದ ಧರಿಸಿದಾತ ಸತ್ಯ ನಿತ್ಯನು ॥೩॥

ಎಸೆವ ಹಲವು ಮುಖದ ಭೇದವರಿದು ಧರಿಸೆ ಬ್ರಹ್ಮಹತ್ಯ । ಶಿಶುವಿ ಘಾತ ಭ್ರೂಣಹತ್ಯ ಪಾಪ ವಿನಾಶನಾ ॥ ಒಸೆದು ಚಿತ್ತಶುದ್ಧದಿಂದ ಧರಿಸಿ ದಾತ ರುದ್ರನೆಂದು । ವಸುಧೆಯೊಳಗೆ ಸಾರುತಿಹವು ವೇದ ವಾಕ್ಯವು ॥೪॥

ಪರಮ ಶಿವನ ಪರಬ್ರಹ್ಮ ದೇಹದಲ್ಲಿ ತೊಡಿಗೆಯಾಗಿ । ಪರಮ ಪುಣ್ಯ ಪುಂಜ ಮಾಲೆಯೆನಿಸಿಯೊಪ್ಪುವಾ ॥ ಶರಣ ಜನ ಮನೋರಥವೆನಿಪ್ಪ ರುದ್ರಾಕ್ಷಿಗಳನು । ಧರಿಸಿ ಯಾನು ಬದುಕಿದೆನು ಸಂಗ ನಿಮ್ಮೊಳು ॥೫॥

---

## ೮. ಮಂತ್ರಸ್ಥಲ.

**ಸೂತ್ರ**:— ಇಂತು ಅಂಗದ ಮೇಲೆ ಲಿಂಗವ ಸಂಬಂಧಿಸಿ ವಿಭೂತಿ ರುದ್ರಾಕ್ಷಂಗಳಂ ಧರಿಸಿ ನಿತ್ಯ ಲಿಂಗಾರ್ಚನೆಯಂ ಮಾಡುವ ಲಿಂಗಕ್ರಿಯಾ ಸಂಪನ್ನಂಗೆ ಶ್ರೀಮತ್ಪ್ರಣವ ಮೂಲ ಪಂಚಾಕ್ಷರಿಯ ಜಪಿಸಬೇಕಾದ ಕಾರಣ ಮುಂದೆ ಪಂಚಾಕ್ಷರ ಮಂತ್ರಸ್ಥಲವಾದುದು.

।ಪದ। ರಾಗ ಮಧುಮಾಧವಿ

ಸುರಿದು ಕರುಣಾಮೃತವ ಹೊರೆವುದೈ ಭಕ್ತರನು । ಗುರುಪುರದ ಮಲ್ಲನ ನಾಮ ಪಂಚಾಕ್ಷರೀ ॥ಪ॥

# ಶಿವಾನುಭವ

ಸಂಪುಟ ೨೯ ಅಗಸ್ಟ ೧೯೫೫ ಸಂಚಿಕೆ ೮


## ಸ್ಫುಟ ವಿಷಯಗಳು.

**ಆಡಳಿತೆಯ ಧೋರಣಗಳು:—** ಪ್ರತಿಯೊಂದು ರಾಜ್ಯದಲ್ಲಿ ಆಡಳಿತೆಯ ಕೆಲವು ವಿಶಿಷ್ಟ ಧೋರಣಗಳಿರುತ್ತವೆ. ಅವುಗಳನ್ನನುಸರಿಸಿ ಕೇಂದ್ರದಲ್ಲಿಯ ಅಧಿಕಾರಿಗಳು ತಮ್ಮ ರಾಜ್ಯ ಶಕಟವನ್ನು ನಡಿಸುತ್ತಿರುತ್ತಾರೆ. ಆದರೆ ನಮ್ಮ ಭಾರತ ಸರಕಾರವು ಮಾತ್ರ ಯಾವ ಧೋರಣಗಳನ್ನು ಹಿಡಿದು ನಡೆಯುತ್ತಿದೆ ಎಂಬುದು ಸ್ಪಷ್ಟವಾಗಿ ತಿಳಿದುಬರುವದಿಲ್ಲ. ಈ ಕಾಲದಲ್ಲಿ ಆಡಳಿತೆಗಳಲ್ಲಿ ಸಮಾಜವಾದೀ ಧೋರಣ ಮತ್ತು ಬಂಡವಲುಶಾಹೀ ಧೋರಣ ಎಂಬ ಎರಡು ಭೇದಗಳಿವೆ. ಅಮೇರಿಕ ಮತ್ತು ಇಂಗ್ಲಂಡ ದೇಶಗಳು ಬಂಡವಲುಶಾಹೀ ಧೋರಣವುಳ್ಳವು ಎಂದು ಹೇಳುವದುಂಟು. ಇವುಗಳಲ್ಲಿ ವ್ಯಕ್ತಿ ಸ್ವಾತಂತ್ರ್ಯವಿರುತ್ತದೆ. ಆದರೆ ವ್ಯಕ್ತಿಗಳು ಸತ್ವಹರಣ ಧೋರಣವನ್ನು ಅನುಸರಿಸಿದಲ್ಲಿ ದುರ್ಬಲರು ಸಾಮೂಹಿಕವಾಗಿ ಚಳವಳಿಯನ್ನು ನಡಿಸಲು ಸ್ವತಂತ್ರರಿರುತ್ತಾರೆ. ಅವರ ಪ್ರತಿನಿಧಿಗಳು ಸತ್ವಹರಣದ ಧೋರಣಕ್ಕೆ ಕಾರಣವಾದ ಕಾನೂನುಗಳನ್ನು ದೂರಮಾಡಲು ಪ್ರಯತ್ನಿಸುವರು. ಇಂಥ ರಾಜ್ಯಗಳಲ್ಲಿ ಪ್ರಜಾಪ್ರತಿನಿಧಿಗಳು ಸತ್ವಶಾಲಿಗಳಾಗಿರಬೇಕಾಗುತ್ತಿದೆ. ಇದು ಪ್ರಜಾಪ್ರಭುತ್ವ ರಾಜ್ಯವೆಂದೆನಿಸಿಕೊಳ್ಳುತ್ತಿದೆ. ಭಾರತ ಸರಕಾರವು ಈ ಪದ್ಧತಿಯನ್ನು ಈವರೆಗೂ ಪುರಸ್ಕರಿಸುತ್ತ ಬಂದಿರುತ್ತದೆ. ಆದ್ದರಿಂದ ಅಮೇರಿಕ ಇಂಗ್ಲಂಡಗಳು ಭಾರತವು ಪ್ರಜಾಪ್ರಭುತ್ವ ತತ್ವವನ್ನು ಅನುಸರಿಸುತ್ತ ಬಂದಿದೆಂದು ಭಾವಿಸಿ ಅದು ತಮ್ಮೊಳಗಿನ ಒಂದು ರಾಜ್ಯವೆಂದು ಪ್ರತಿಪಾದಿಸುವದುಂಟು.

ಆದರೆ ಸಮಾಜವಾದೀ ಸರಕಾರದ ಆಡಳಿತೆಯ ಪದ್ಧತಿಗಳು ತೀರ ಭಿನ್ನತೆರನಾಗಿರುತ್ತವೆ. ಅಲ್ಲಿ ವ್ಯಕ್ತಿ ಸ್ವಾತಂತ್ರ್ಯವೆಂಬುದು ಇರಲಾರದು. ವ್ಯಕ್ತಿಗೆ ಸ್ವಾತಂತ್ರ್ಯವನ್ನು ಕೊಟ್ಟರೆ ಈ ವ್ಯಕ್ತಿಯು ಅಪಹರಣ ಬುದ್ಧಿಯುಳ್ಳವನಾಗುವನೆಂದು ಭಾವಿಸಿ ಅವನನ್ನು ನಿರ್ಬಂಧದಲ್ಲಿಡಲು ಶಾಸನಗಳನ್ನು ರಚಿಸುವ ಪ್ರಯತ್ನಗಳು ಅಲ್ಲಿ ನಡಿಯುತ್ತವೆ. ಆದರೆ ಅವನನ್ನು ನಿರ್ಬಂಧಿಸುವ ಹಾದಿಗಳಾವವು ಎಂಬುದನ್ನು ತಿಳಿಯಲಾರದೆ ಈ ಸಮಾಜವಾದಿಗಳು ಈ ಕಾರ್ಯವನ್ನು ಕೆಲವೊಂದು ಸಂಘ, ಸಂಸ್ಥೆ ಇವುಗಳ ಕಡೆಗೆ ಕೊಡುವ ಧೋರಣವುಳ್ಳವರಾಗಿರುತ್ತಾರೆ. ಭಾರತ ಸರಕಾರವು ಇನ್ನುಮೇಲೆ ಈ ಧೋರಣವನ್ನು ಅನುಸರಿಸಬೇಕೆಂಬ ಇಚ್ಛೆಯುಳ್ಳದಾಗಿ ಪಂಚಾಯತಿಗಳು, ಸಹಕಾರಿ ಸಂಘಗಳು, ಮುನಿಸಿಪಾಲಿಟಿಗಳು, ರೂರಲ್ ಡೆವಲಪ್‌ಮೆಂಟ ಬೋರ್ಡುಗಳು, ಈ ಬಗೆಯ ಸಮಿತಿಗಳಿಗೆ ಅಧಿಕಾರಕೊಡುವ ಧೋರಣವನ್ನು ತಳೆದವರಾಗಿರುತ್ತಾರೆ- ಆದರೆ ಆಡಳಿತೆಯನ್ನು ನಡಿಸುವದು ಬಹಳ ಕಠಿಣವೂ ಜವಾಬುದಾರಿಯುಳ್ಳದ್ದೂ ಇರುತ್ತದೆ. ನಮ್ಮ ದೇಶದಲ್ಲಿ ಪ್ರೌಢಮತದಾನ ಅಧಿಕಾರವಿರುವದರಿಂದ ಅನುಭವವಿಲ್ಲದ ಯಾವನಾದರೂ ಕೂಡ ತನ್ನಂಥ ಕೆಲವು ಜನರೊಂದಿಗೆ ಕೂಡಿಕೊಂಡು ಬೇರೆ ಬೇರೆ ಸಂಸ್ಥೆಗಳಲ್ಲಿ ಅಧಿಕಾರ ಗ್ರಹಣ ಮಾಡುವ ಪ್ರಯತ್ನದಲ್ಲಿ ತೊಡಗುವದು ಈಗ ಕಂಡುಬರಹತ್ತಿದೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ರಾಜಕೀಯ ಜ್ಞಾನವು ಜನರಲ್ಲಿ ಹೆಚ್ಚಾಗಿರುವದರಿಂದ ಸಿಕ್ಕವರು ಅರಿಸಿಬರುವದಿಲ್ಲ- ಒಂದು ಕಾಲದಲ್ಲಿ ರಶಿಯದಲ್ಲಿ ಸಹಕಾರಿ ಸಂಘಗಳು ಬಹು ಪ್ರಬಲವಾಗಿದ್ದವು. ಆದ್ದರಿಂದ ಸಮಾಜವಾದೀ ಧೋರಣದ ಪ್ರಕಾರ ಈ ಸಂಘಗಳಿಗೆ ಅಧಿಕಾರ ಕೊಡುವ ಪ್ರಯತ್ನಗಳು ಮೊದಲು ಅಲ್ಲಿ ನಡೆದವು. ಇದರಿಂದ ಸಮಾಜದಲ್ಲಿ ಅವ್ಯವಸ್ಥೆಯಾಗುವದೆಂದು ತಿಳಿದ ಕೂಡಲೇ ಸ್ಟಾಲಿನ್ನನು ಸರ್ವಾಧಿಕಾರತ್ವವನ್ನು ತನ್ನೊಬ್ಬನ ಕಡೆಗೆ ಇಟ್ಟುಕೊಂಡು ಬಿಟ್ಟನು! ಈ ಪದ್ಧತಿಯು ರಶಿಯ ದೇಶದಲ್ಲಿ ಈಗಲೂ ಇದೆ. ಇದರಿಂದ ವ್ಯಕ್ತಿಸ್ವಾತಂತ್ರ್ಯವು ಅಲ್ಲಿ ಹೋಗಿಬಿಟ್ಟದೆ. ಆದ್ದರಿಂದ ಸರಕಾರೀ ಅಧಿಕಾರಿಗಳ ನಿಯಂತ್ರಣದಲ್ಲಿ ಅಲ್ಲಿಯ ಎಲ್ಲ ಕಾರ್ಯಗಳು ನಡಿಯುತ್ತಲಿವೆ. ವ್ಯಕ್ತಿಗಳಲ್ಲಿ ಕೆಲಸ ಹಂಚುವದು, ವೇತನಗಳನ್ನು ಗೊತ್ತುಪಡಿಸುವದು, ಕೂಲಿಯವರನ್ನು ನಿಯಮಿಸುವದು ಇವೆಲ್ಲ

ವುಗಳನ್ನು ಸರಕಾರಿ ಅಮಲದಾರರು ಹಳ್ಳಿಹಳ್ಳಿಗೆ ಮಾಡಹತ್ತಿದ್ದಾರೆ! ಹೀಗೆ ರಶಿಯದಲ್ಲಿ ಪ್ರಜಾಪ್ರಭುತ್ವವಿರದೆ ಏಕತಂತ್ರೀ ರಾಜ್ಯಾಧಿಕಾರಿಗಳ ರಾಜ್ಯವು ರೂಢಿಯಲ್ಲಿ ಒಂದಿದೆ.

ಭಾರತ ದೇಶದಲ್ಲಿ ಇನ್ನೂ ಆಡಳಿತೆಗಾರರು ಯಾವ ಧೋರಣವನ್ನೂ ನಿರ್ಧರಿಸಿಲ್ಲ. ಮುಂಚಿನ ಬ್ರಿಟಿಷ್ ಧೋರಣಗಳ ಪ್ರಕಾರ ರಾಜ್ಯವು ನಡಿಯುತ್ತದೆ. ಪಂಡಿತ ನೆಹರು ಇವರು ಇನ್ನುಮುಂದೆ ಸಮಾಜವಾದೀ ತತ್ವವನ್ನು ಅನುಸರಿಸಬೇಕೆಂದು ಈಚೆಗೆ ಅಭಿಪ್ರಾಯ ಪಡಹತ್ತಿದ್ದಾರೆ. ಆದರೆ ಇದರ ರೀತಿಯನ್ನು ಅವರಾಗಲಿ ಅವರ ಬೆಂಬಲಿಗರಾಗಲಿ ನಿರ್ಧರಿಸಿದಂತೆ ತೋರುವದಿಲ್ಲ. ಈ ವಿಷಯವನ್ನು ಕುರಿತು ಯಾವ ನಿಶ್ಚಿತ ಕಾರ್ಯಕ್ರಮವನ್ನು ಅವರು ಈ ವರೆಗೂ ಕೈಕೊಂಡಿಲ್ಲ. ಜನತೆಯು ಯಾವದನ್ನೂ ತಿಳಿಯದೆ ಅಂಧತೆಯಿಂದ ವರ್ತಿಸಹತ್ತಿದೆ. ಅವರಿಗೆ ವಿಭೂತಿ ಪೂಜೆಯು ಒಂದು ಮಾತ್ರ ಗೊತ್ತು. ಸುಶಿಕ್ಷಿತರು ಅಂಧತೆಯಿಂದ ವರ್ತಿಸಹತ್ತಿದ್ದಾರೆ! ಈ ಕಾಲದಲ್ಲಿ ಯಾರೂ ಸ್ಪಷ್ಟ ಶಬ್ದಗಳನ್ನು ಆಡುವದಿಲ್ಲ. ಶಾಸನ ಸಭೆಗಳಲ್ಲಿ ಜನರ ಪ್ರತಿನಿಧಿಗಳು ಆಡಳಿತೆಯ ಲೋಪದೋಷಗಳನ್ನು ತಿಳಿದುಕೊಂಡು ತಮ್ಮ ವಿಚಾರಗಳನ್ನು ಬಹಿರಂಗವಾಗಿ ಜನತೆಯ ಮುಂದೆ ಇಡುವದಿಲ್ಲ. ಇದರಲ್ಲಿ ಅವರು ಭಯಪಡುತ್ತಲಿದ್ದಾರೆ! ವೃತ್ತಪತ್ರಿಕೆಗಳು ಇದ್ದುದನ್ನು ಹೊಗಳುತ್ತ ನಡೆದಿವೆ. ಈ ತರದ ಮನೋವೃತ್ತಿಯು ಭಾರತ ದೇಶದಲ್ಲಿ ಪಸರಿಸಹತ್ತಿದೆ. ಇದರ ಅಂತ್ಯಪರಿಣಾಮವೇನೆಂಬುದು ತಿಳಿಯದಾಗಿದೆ.

**ಸ್ವರಾಜ್ಯಕ್ಕೆ ಅರ್ಹತೆ:—** ಬ್ರಿಟಿಷರು ಇದ್ದ ಕಾಲದಲ್ಲಿ ಎರಡು ಬೇರೆ ಬೇರೆ ಪಕ್ಷಗಳು ತಲೆದೋರಿದ್ದವು. ಒಂದು ರಾಷ್ಟ್ರೀಯ ಪಕ್ಷವು. ಇದಕ್ಕೆ ಲೋ. ಮಾ. ಟಿಳಕ, ಲಜಪತರಾಯ ಇವರೇ ಮೊದಲಾದವರು ಅಧ್ವರ್ಯುಗಳಾಗಿದ್ದರು. ಈ ಪಕ್ಷವನ್ನು ಆಗಿನ ಅನೇಕ ಕಾಂಗ್ರೆಸ್ ಸದಸ್ಯರೂ ಪುರಸ್ಕರಿಸುತ್ತಿದ್ದರು. ಎರಡನೆಯ ಪಕ್ಷವು ಪ್ರಾಗತಿಕರದೆಂದು ಹೇಳಲ್ಪಡುತ್ತಿತ್ತು. ಇದಕ್ಕೆ ಗೋಪಾಳಕೃಷ್ಣ ಗೋಖಲೆ, ಸುರೇಂದ್ರನಾಥ ಬ್ಯಾನರ್ಜಿ, ಶ್ರೀನಿವಾಸ ಶಾಸ್ತ್ರಿ ಇವರು ಅಧ್ವರ್ಯುಗಳು. ಅವರು ಸಮಾಜ ಸುಧಾರಣಾವಾದಿಗಳು. ಟಿಳಕ ಪಕ್ಷದವರು ಮೊದಲು ತಮಗೆ ರಾಜಕೀಯ ಹಕ್ಕುಗಳು ಪ್ರಾಪ್ತವಾಗಲಿ, ಆಮೇಲೆ ಸಾಮಾಜಿಕ, ಆರ್ಥಿಕ, ಶೈಕ್ಷ

ಣಿಕ ಉನ್ನತಿಗಳನ್ನು ತಾವು ಹಗುರಾಗಿಯೂ ತೀವ್ರವಾಗಿಯೂ ಮಾಡ ಬಲ್ಲೆವೆಂದು ಅಭಿಪ್ರಾಯಪಡುತ್ತಿದ್ದರು. ಪ್ರಾಗತಿಕರು ಸಮಾಜ ಸುಧಾರಣೆಯು ಹಗುರಾದದ್ದಲ್ಲ, ಇದನ್ನು ಮೊದಲು ಮಾಡಿರಿ, ಇದರಿಂದ ಮುಂದೆ ರಾಜಕೀಯ ಸಾಧಾರಣೆಯು ತಾನೇ ಆಗುವದೆಂದು ಹೇಳುವರು. ರಾಷ್ಟ್ರೀಯ ಪಕ್ಷದವರು ಹೇಳುವರು. ರಾಷ್ಟ್ರೀಯ ಪಕ್ಷದವರು ಇದನ್ನು ಲಕ್ಷಿಸದೆ ಆಡಳಿತೆಯ ವಿರುದ್ಧ ಹೋರಾಡುವ ಭಾವವನ್ನು ದೇಶದಲ್ಲಿ ಉಂಟು ಮಾಡುವದರಲ್ಲಿ ತತ್ಪರರಾಗಿದ್ದರು. ಆದರೆ ಮಹಾತ್ಮಾ ಗಾಂಧಿಯವರು ಈ ಎರಡೂ ಪಕ್ಷಗಳನ್ನು ಬಿಟ್ಟುಕೊಟ್ಟು ಅಸಹಕಾರ, ಸತ್ಯಾಗ್ರಹ, ಪ್ರತಿ ಸರಕಾರ ಸ್ಥಾಪನೆ, ಇವುಗಳನ್ನು ಮುಂದೆ ಮಾಡಿ ಬೇರೊಂದು ತರದ ಚಳವಳಿಯನ್ನು ಪ್ರಾರಂಭಿಸಿದರು. ಭಾರತದ ಸುದೈವದಿಂದ ಮಹಾತ್ಮ ಗಾಂಧಿಯವರ ಈ ಚಳವಳಿಗೆ ಯಶಸ್ಸು ಉಂಟಾಯಿತು.

ಇದೇ ಕಾಲಕ್ಕೆ ಅಂತರರಾಷ್ಟ್ರೀಯ ಗೊಂದಲಗಳೆದ್ದು ಜಾಗತಿಕ ಸಮಸ್ಯೆಗಳು ಉಂಟಾದವು. ರಶಿಯಾದ ಬಗ್ಗೆ ಭೀತಿಗಳು ಉತ್ಪನ್ನವಾದವು. ಆಗ ಬ್ರಿಟಿಷರು ಇಂಥ ಸ್ಥಿತಿಯಲ್ಲಿ ಹಿಂದುಸ್ಥಾನವನ್ನು ತಾವು ರಶಿಯಾದ ವಿರುದ್ಧ ರಕ್ಷಿಸುವದು ಸಾಧ್ಯವಿಲ್ಲೆಂದು ಅವರಿಗೆ ತೋರಿತು. ಆದ್ದರಿಂದ ಅವರು ಇಜಿಪ್ತ, ಬ್ರಹ್ಮದೇಶ, ಹಿಂದುಸ್ಥಾನ, ಇವು ರಶಿಯಾದ ಆಘಾತದಗಳನ್ನು ಬಿಟ್ಟುಕೊಟ್ಟು ಹೊರಗೆ ಹೋದರು! ಆದ್ದರಿಂದ ಭಾರತದಲ್ಲಿ ಆಡಳಿತೆಯ ಯಾವ ಧೋರಣವನ್ನು ಅನುಸರಿಸಬೇಕೆಂಬುದು ಯಾರಿಗೂ ತಿಳಿಯದೆ ಹೋಯಿತು. ಈಸಲೂ ತಿಳಿದಿಲ್ಲ. ಮ. ಗಾಂಧಿಯವರು ಕಾಂಗ್ರೆಸ್ ಪಕ್ಷವನ್ನು ಪೂರ್ಣವಾಗಿ ವಿಸರ್ಜಿಸಬೇಕು, ಹೀಗೆ ವಿಸರ್ಜಿಸಿ ಮುಂದೆ ಯಾವ ಧೋರಣವನ್ನು ಕೈಕೊಳ್ಳಬೇಕೆಂಬುದನ್ನು ಅವರು ನಿರ್ಧರಿಸುವವರಿದ್ದರು. ಅಷ್ಟರಲ್ಲಿಯೇ ಭಾರತದ ದುರ್ದೈವದಿಂದ ಅವರ ಕೊಲೆಯಾಯಿತು.

**ಮುಂಬಿನ ಧೋರಣವೇನು?:—** ಈ ಮಹತ್ವದ ವಿಷಯದ ಬಗ್ಗೆ ವಿಚಾರಗಳು ಎಲ್ಲಿಯೂ ನಡೆದಿಲ್ಲ. ಈಗಲೂ ಬ್ರಿಟಿಷರ ಪದ್ಧತಿಯು ನಡಿಯುತ್ತ ಬಂದಿದೆ. ಆದರೆ ಮೊದಲಿನ ಪ್ರಜಾಪ್ರಭುತ್ವ ತತ್ವಗಳು ದೇಶದಲ್ಲಿ ಭರದಿಂದ ನಷ್ಟವಾಗಹತ್ತಿವೆ. ಅವುಗಳ ಬದಲು ಏಕತಂತ್ರೀ ಅಧಿಕಾರದ ಒಲವುಗಳು ಕಾಂಗ್ರೆಸ ಸರಕಾರದಲ್ಲಿ ಬಲಗೊಳ್ಳ

ಹತ್ತಿವೆ. ಒಂದು ಸಣ್ಣ ಸಂಸ್ಥೆಯಿಂದ ಹಿಡಿದು ಉಚ್ಚ ಶಾಸನ ಸಭೆಯ ವರೆಗೆ ಜನರ ಪ್ರತಿನಿಧಿಗಳು ಅನಿಯಂತ್ರಿತವಾಗಿ ತಮ್ಮ ಸ್ಥಾನದ ಉಪಯೋಗ ಮಾಡಿಕೊಳ್ಳುವದರಲ್ಲಿ ತೊಡಗಿದ್ದಾರೆ. ಕೆಳಗಿನ ಅಧಿಕಾರಿಗಳಾದ ಮಾಮಲೇದಾರ, ಅಸಿಸ್ಟಂಟ ಕಲೆಕ್ಟರ, ಕಲೆಕ್ಟರ ಮೊದಲಾದ ಅಧಿಕಾರಿಗಳು ನಿಷ್ಕ್ರಿಯರಾಗಿ ಕೇಂದ್ರದ ಹುಕುಮುಗಳು ಏನಿದ್ದರೂ ಅವುಗಳನ್ನು ಪ್ರಚಾರದಲ್ಲಿ ತರುವದೇ ತಮ್ಮ ಕರ್ತವ್ಯವೆಂದು ಅವರು ತಿಳಿದಿರುವರು. ಶಾಸನ ಸಭೆಯ ಸಭಾಸದರು ತಮ್ಮ ಸ್ಥಾನವನ್ನು ಇಟ್ಟುಕೊಳ್ಳುವದರಲ್ಲಿ ಮಾತ್ರ ತತ್ಪರರಾಗಿರುವರು. ಇದರಲ್ಲಿ ಅವರಿಗೆ ಮೇಲಧಿಕಾರಿಗಳಾದ ಮಂತ್ರಿಗಳ ಸಹಾನುಭೂತಿಗಳೂ ಇವೆ. ಹೀಗೆ ಚುಕ್ಕಾಣಿ ಇಲ್ಲದ ಹಡಗು ಬಿರುಗಾಳಿಯಲ್ಲಿ ಸಮುದ್ರದಲ್ಲಿ ಹೊಯ್ದಾಡುತ್ತಿರುವಂತೆ ಈಗಿನ ದೇಶದ ಸ್ಥಿತಿಯಾಗಿದೆ.

**ವಿರೋಧೀ ಪಕ್ಷಗಳು:**— ಈಗ ದೇಶದಲ್ಲಿ ಅನೇಕ ಬಗೆಯ ವಿರೋಧೀ ಪಕ್ಷಗಳು ಉಂಟಾಗಿವೆ. ಅವುಗಳಲ್ಲಿ ಯಾವತರದ ಧ್ಯೇಯ ಧೋರಣಗಳಿಲ್ಲ. ಅವು ವೈಯಕ್ತಿಕವಾಗಿರುತ್ತವೆ. ಯಾರಿಗೆ ಕಾಂಗ್ರೆಸಿನಲ್ಲಿ ಸ್ಥಾನವು ದೊರೆಯದೇ ಹೋಯಿತೋ, ಅಂಥ ವ್ಯಕ್ತಿಗಳು ಅಸಮಾಧಾನಹೊಂದಿ ಹೊಸ ಹೆಸರಿನಿಂದ ಈ ಪಕ್ಷಗಳನ್ನು ನಿರ್ಮಾಣ ಮಾಡಿದ್ದಾರೆ. ಇನ್ನೂ ಮಾಡುತ್ತಲೂ ಇದ್ದಾರೆ. ಹೋದ ಚುನಾವಣೆಯಲ್ಲಿ ಹೀಗೆ ಹತ್ತುಹನ್ನೆರಡು ಪಕ್ಷಗಳು ಉಂಟಾದವು. ಅವೆಲ್ಲವೂ ವೈಯಕ್ತಿಕ ಪಕ್ಷಗಳು. ಅವು ಶಾಸನ ಸಭೆಗಳಲ್ಲಿದ್ದರೂ ಅವುಗಳಿಂದ ರಾಜ್ಯದಲ್ಲಿ ಯಾವ ಉಪಯೋಗವಾಗಿಲ್ಲ.

**ಈಗ ದೇಶಕ್ಕೆ ಬೇಕಾದುದೇನು?:**— ಇದು ಈಗ ಬಹು ಮಹತ್ವದ ಪ್ರಶ್ನೆಯಾಗಿದೆ. ಇದಕ್ಕೆ ಸರಿಯಾಗಿ ಉತ್ತರ ಕೊಟ್ಟು ಅದನ್ನು ನಿರ್ವಹಿಸಲಿಕ್ಕೆ ಬೇಕಾಗುವ ಮಾರ್ಗವನ್ನು ಆಡಳಿತೆಗಾರರು ತೋರಿಸಿಕೊಡಬೇಕು. ಪಂ. ಜವಾಹಿರಲಾಲರು ಸಮಾಜವಾದವನ್ನು ಪುರಸ್ಕರಿಸಹತ್ತಿದ್ದಾರೆ. ಅವರು ಗೊಂದಲದಲ್ಲಿ ಬೀಳುವಂತೆ ತೋರುತ್ತದೆ. ಅವರಿಗೆ ಹಳ್ಳಿಗಳ ಮತ್ತು ಸಮಾಜದ ಪರಿಸ್ಥಿತಿಯ ಅರಿಕೆಯು ಇರುವದಿಲ್ಲ. ಅವರು ಅಂತರರಾಷ್ಟ್ರೀಯ ವಿಚಾರಗಳನ್ನು ಹೇಳುತ್ತ ಆಕಾಶದಲ್ಲಿ ಭ್ರಮಿಸುತ್ತಲಿದ್ದಾರೆ. ಕೆಳಗಿನ ಕೊಳಚೆಯು ಅವರಿಗೆ ಗೊತ್ತು ಇಲ್ಲ. ಈ ಕೊಳಚೆಯು ಹೋದ ಏಳು ವರ್ಷಗಳಲ್ಲಿ ಹೆಚ್ಚೆಚ್ಚು ಬೆಳೆಯುತ್ತ

ಬಂದಿದೆ. ಮೇಲಧಿಕಾರಿಗಳು ಅಂದರೆ ಮಾಮಲೇದಾರ, ಕಲೆಕ್ಟರ, ಪೋಲೀಸ ಈ ಉಚ್ಚ ಅಧಿಕಾರಿಗಳಿಗೆ ಈ ಕೊಳಚೆಯ ಸ್ಥಿತಿಯು ಪೂರ್ಣ ಗೊತ್ತಿದೆ. ಆದರೆ ಆಡಳಿತೆಗಾರರಿಗೆ ಸ್ಪಷ್ಟವಾಗಿ ಹೇಳುವಂಥ ಪರಿಸ್ಥಿತಿಯು ಅವರಿಗಿಲ್ಲ. ಶಾಸನ ಸಭಾಸದರು ಆಡಳಿತೆಗಾರರ ಕಣ್ಣಮೇಲೆ ಮಣ್ಣು ಎರಚುವದರಲ್ಲಿ ತೊಡಗಿದ್ದಾರೆ. ನಿಜಸ್ಥಿತಿಯನ್ನು ತಾವು ಹೊರಗೆಡವಿದರೆ ಚುನಾವಣೆ ಕಾಲಕ್ಕೆ ಪಾರ್ಲಮೆಂಟರಿ ಬೋರ್ಡಿನವರು ತ ್ಮನ್ನು ಎಲ್ಲಿ ಬಿಟ್ಟುಬಿಡುವರೋ ಎಂಬ ದೊಡ್ಡ ಭೀತಿಯು ಅವರಲ್ಲಿದೆ. ಒಟ್ಟಿಗೆ ನಾಡಿಗೆ ಏನುಬೇಕು ಎಂಬುದೆನ್ನು ನಿರ್ಭೀತಿಯಿಂದ ಹೇಳುವ ಪರಿಸ್ಥಿತಿಯು ದೇಶದಲ್ಲಿ ಹೊರಟುಹೋಗಿದೆ.

**ನಾಡಿನ ಕೊರತೆಗಳು:—** ಈಗ ನಾಡಿಗೆ ಆರ್ಥಿಕ ಸುಧಾರಣೆಯ ಪ್ರಯತ್ನಗಳೂ ಹೊಸ ಹೊಸ ಶಾಸ್ತ್ರೀಯ ಸಂಶೋಧನೆಗಳೂ, ಯೋಗ್ಯ ಸ್ತ್ರೀ ಪುರುಷ ಶಿಕ್ಷಣವೂ, ಸಾಂಸ್ಕೃತಿಕ ಪ್ರಗತಿಕಪರ ವಿಚಾರಗಳೂ, ಉಚ್ಚ ನೈತಿಕ ಮಟ್ಟವೂ ಬೇಕಾಗಿವೆ. ಇವು ಲೋಪವಾಗಿವೆ. ಇವುಗಳ ಬಗ್ಗೆ ಯಾರ ಲಕ್ಷವೂ ಇರುವದಿಲ್ಲ. ಇವುಗಳ ವಿಷಯವಾಗಿ ಶಾಲೆ ಕಾಲೇಜಗಳಲ್ಲಿ ವಾಗ್ವಾದಗಳು ಮಾತ್ರ ನಡಿಯುತ್ತವೆ. ಆದರೆ ಅವು ರಾಜಕೀಯ ಕ್ಷೇತ್ರದಲ್ಲಿರುವವರ ಮೇಲೆ ಯಾವ ಪರಿಣಾಮವನ್ನೂ ಮಾಡಲಾರವು. ಉಚ್ಚ ಆಡಳಿತೆಯಲ್ಲಿ ರಾಜಗೋಪಾಲಾಚಾರ್ಯ, ಶ್ರೀ ರಾಧಾಕೃಷ್ಣನ್, ಶ್ರೀ. ಕೆ. ಎಮ್. ಮುನಿಷಿ, ಈ ಮೊದಲಾದವರು ಇದ್ದಾರೆ. ಆದರೆ ಅವರ ತತ್ವಗಳನ್ನು ಯಾರೂ ಪುರಸ್ಕರಿಸುವದಿಲ್ಲ. ಅವರು ನುಡಿಯುವ ವಿಚಾರಗಳನ್ನು ಜನತೆಯ ಅಧ್ವರ್ಯುಗಳು ಯಾರೂ ಲಕ್ಷಿಸುವದಿಲ್ಲ. ಆದ್ದರಿಂದ ಅವರು ಹೇಳುವದನ್ನು ಈಚೆಗೆ ಬಿಟ್ಟಿದ್ದಾರೆ.

ಪ್ರಕೃತ ಕಾಲದಲ್ಲಿ ಜನತೆಯನ್ನು ಎಚ್ಚರಿಸುವಂಥ ಒಂದು ಮಹತ್ತರವಾದ ಸಾಂಸ್ಕೃತಿಕ ಆಂದೋಲನವು ಬೇಕು. ಮಹಾರಾಷ್ಟ್ರದಲ್ಲಿ ಶಿವಾಜಿಯ ಕಾಲಕ್ಕೆ ಇಂಥ ಒಂದು ಆಂದೋಲನವು ತಲೆದೋರಿತು. ಆಗ ಅಸಂಖ್ಯ ಸಂತರು ನಾಡಿನಲ್ಲಿ ಮೂಲೆಮೂಲೆಗಳಲ್ಲಿ ಉಗಮಿಸಿ ಒಂದು ಮಹತ್ವದ ನೈತಿಕ ಮತ್ತು ಧಾರ್ಮಿಕ ಆಂದೋಲನವನ್ನು ಮಾಡಿದರು. ಇದರ ಮೂಲಕ ಮಹಾರಾಷ್ಟ್ರದ ವರ್ಚಸ್ಸು ಹಿಂದುಸ್ತಾನದ

ತುಂಬೆಲ್ಲ ಪಸರಿಸಿತು: ಒಂದು ಕಡೆಗೆ ಗ್ವಾಲ್ಹೇರದಿಂದ ಅಟಕಿನ ವರೆಗೆ ಮತ್ತೊಂದು ಕಡೆಗೆ ನಾಗಪೂರದಿಂದ ಕಲಕತ್ತೆಯ ವರೆಗೆ ಇನ್ನೊಂದು ಕಡೆಗೆ ತುಂಗಭದ್ರಾ ತೀರದಿಂದ ತಂಜಾವರದ ವರೆಗೆ ಹಬ್ಬಿತು. ಹನ್ನೆರಡನೆಯ ಶತಮಾನದಲ್ಲಿ ಶಿವಶರಣರಿಂದ ಉಂಟಾದ ಚಳವಳಿಯು ಇದೇ ರೀತಿಯಾಗಿ ಇಡೀ ದಕ್ಷಿಣ ದೇಶವನ್ನು ವ್ಯಾಪಿಸಿತು. ಹಾಗೆಯೇ ಬೌದ್ಧ ಧರ್ಮದ ದರ್ಶಸ್ಸು ಪೃಥ್ವಿಯುಲ್ಲೆಲ್ಲ ವ್ಯಾಪಿಸಿತು. ಇದು ಉಚ ವಾಙ್ಮಯುದ ಪರಿಣಾಮವು. ಇಂಥ ವಾಙ್ಮಯುವು ಉದಾರ ವಿಚಾರಗಳನ್ನು ಪ್ರಸ್ತಾಪಿಸುತ್ತ ಮಾನವೀ ಪ್ರಾಣಿಯ ಉದ್ಧಾರಕ್ಕಾಗಿ ಇರುತ್ತದೆ. ಭಾವದಿಂದ ಬೇರೆ ಬೇರೆ ಕಾಲಗಳಲ್ಲಿ ರಾಜಕೀಯು ಕ್ರಾಂತಿಗಳು ಸಹ ಉದ್ಭವಿಸಿದವು. ಆದರೆ ಹಿಂದೂ ಧರ್ಮಹಲ್ಲಿ ಮೊದಲು ಇದ್ದ ವ್ಯಾಪಕತೆಯು ಈಗ ಹೊರಟು ಹೋಗಿರುತ್ತದೆ. ಬಸವಾದಿ ಪ್ರಮಥರು ಈ ಶರದ ವ್ಯಾಪಕ ಸ್ವರೂಪವನ್ನು ಧರ್ಮಕ್ಕೆ ತಂದುಕೊಟ್ಟರೂ ವೀರಶೈವಕ್ಕೆ ಜಾತಿವಿಶಿಷ್ಟ ಅಕುಂಚಿತ ಸ್ವರೂಪವು ಪ್ರಾಪ್ತವಾಗಿದೆ. ಈ ಸ್ಥಿತಿಯನ್ನು ದೂರಮಾಡಿದ್ದಾದರೆ ಮಾತ್ರ ವೀರಶೈವರ ಉದ್ಧಾರ ಮಾತ್ರವಲ್ಲ, ಇಡೀ ಕರ್ನಾಟಕದ ಉದ್ಧಾರವೂ ಆಗಬಹುದು.

**ಅಧ್ಯಾತ್ಮಿಕ ಶಿಕ್ಷಣದ ಮಹತ್ವ:—** ಅಧ್ಯಾತ್ಮಿಕ ಶಿಕ್ಷಣದ ಮಹತ್ವವನ್ನು ನಾಡಿನಲ್ಲಿರುವ ರಾಜಕೀಯು ಪ್ರಮುಖರು ಈಚೆಗೆ ತಿಳಿಯಹತ್ತಿರುವದು ಸುಚಿನ್ಹವಾಗಿದೆ. 'ಬುದ್ಧದೇವರ ಉಪದೇಶಗಳು' ಎಂಬ ವಿಷಯುದ ಬಗ್ಗೆ ವಿಚಾರ ಸಂಕೀರ್ಣವನ್ನು ಕೆಲವು ದಿವಸಗಳ ಹಿಂದೆ ಮುಂಬಯಿಯಲ್ಲಿ ಶ್ರೀ ಹರೆಕೃಷ್ಣ ಮೆಹತಾಬ ಮುಂಬಯಿ ಗವ್ಹರ್ನರರ ಅಧ್ಯಕ್ಷತೆಯಲ್ಲಿ ಏರ್ಪಡಿಸಿದ್ದರು. ಈ ಸಮಯದಲ್ಲಿ ಡಾ. ರಾಧಾಕುಮಾರ ಮೂಕರ್ಜಿ ಪಾರ್ಲಿಮೆಂಟರಿ ಸಭಾಸದರು, ಪ್ರೊ. ಎನ್. ಕೆ. ಭಾಗವತ, ಡಾ. ಫೆಲಿಕ್ಸ್ ಮೊದಲಾದವರು ಉಪಸ್ಥಿತರಿದ್ದರು. ಆಗ ಗವ್ಹರ್ನರರು ಅಧ್ಯಾತ್ಮಿಕ ಶಿಕ್ಷಣದಿಂದ ಮನುಷ್ಯರು ತಮ್ಮ ಸ್ವಂತ ಸಾಮಾಜಿಕ ಮತ್ತು ರಾಷ್ಟ್ರೀಯ ಸಮಸ್ಯೆಗಳನ್ನು ಬಿಡಿಸಬಲ್ಲರೆಂದು ಬುದ್ಧದೇವನು ತೋರಿಸಿರುವನೆಂದು ಹೇಳಿ ಅವರು ಮುಂದುವರಿಯುತ್ತ ಅಧ್ಯಾತ್ಮಿಕ ಶಿಕ್ಷಣವು ಅವಶ್ಯವಾಗಿ ಬೇಕೆಂತಲೂ ಜಗತ್ತಿನಲ್ಲಿ ಉದ್ಭವಿಸುವ ತೊಂದರೆಗಳನ್ನು ಅದು ಸರಿಪಡಿಸಬಲ್ಲದೆಂತಲೂ ಅವರು ವಿಶದಪಡಿಸಿದರು. ಬುದ್ಧದೇವನು

ಧಾರ್ಮಿಕ ಜ್ಞಾನದ ಮೂಲಕ ಜನರ ಅಸಂತೋಷವನ್ನು ಹೋಗಲಾಡಿಸಿ ತ್ರಾಸದಾಯಕವಾದ ಎಲ್ಲ ವಿಷಯಗಳನ್ನು ಸಮತೋಲ ಬುದ್ಧಿಯಿಂದ ಸರಿಪಡಿಸಬಹುದೆಂದು ಉಪದೇಶಿಸಿದ್ದಾನೆಂತಲೂ ಹೇಳಿದರು. ಬುದ್ಧದೇವನ ವಾರ್ಷಿಕೋತ್ಸವವು ಮುಂದಿನ ವರ್ಷ ವೈಶಾಖ ಹುಣ್ಣಿವೆಯ ದಿವಸ ಇದ್ದು ಅದನ್ನು ಆದಷ್ಟು ವಿಜೃಂಭಣೆಯಿಂದ ನಡಿಸಲು ತಾವು ಶಕ್ಯವಿದ್ದಷ್ಟು ಸಹಾಯವನ್ನು ಮಾಡುವೆವೆಂತಲೂ ಶ್ರೀ ವೇ.ಹೆತಾಬ ಇವರು ಆಶ್ವಾಸನವಿತ್ತರು. ಹೀಗೆ ರಾಜಕೀಯ ಮುಂದಾಳುಗಳು ಆಧ್ಯಾತ್ಮಿಕ ಶಿಕ್ಷಣಕ್ಕೆ ಮಹತ್ವ ಕೊಡಹತ್ತಿರುವದು ಸುಲಕ್ಷಣವೆಂತಲೇ ನಾವು ತಿಳಿಯಬೇಕು.

**ಬಸವಜಯಂತಿ:—** ಕರ್ನಾಟಕವು ಶಿವಶರಣರ ಕೇಂದ್ರಸ್ಥಾನವಾಗಿದ್ದು ಇಲ್ಲಿ ಅವರ ತತ್ವಗಳ ಅಭ್ಯಾಸ ಮತ್ತು ಆಚರಣೆಗಳು ಅತ್ಯಂತ ಅವ್ಯವಸ್ಥೆಯಿಂದ ನಡಿದಿರುತ್ತವೆ. ಈ ಉತ್ಸವವು ಪ್ರಾಂತದ ಎಲ್ಲ ಸಣ್ಣ ದೊಡ್ಡ ಪಟ್ಟಣಗಳಲ್ಲಿ ಆಚರಿಸಲ್ಪಡುತ್ತಿದೆ. ಆದರೆ ಅವುಗಳ ಕಾರ್ಯಕ್ರಮಗಳಲ್ಲಿ ಗ್ರಾಮದಲ್ಲಿಯ ವೀರಶೈವರು ಯಾವ ಉತ್ಸಾಹವನ್ನೂ ತೋರಿಸುವದಿಲ್ಲ. ಆ ಕಾಲದಲ್ಲಿ ಪಟ್ಟಣದಲ್ಲಿಯ ಪ್ರಮುಖರು ಮನಃಪೂರ್ವಕವಾಗಿ ಅಂಗವಹಿಸುವದಿಲ್ಲ. ಆದರೆ ಮುಸಲ್ಮಾನರು ಬ್ರಾಹ್ಮಣರು ಮೊದಲಾದ ಸಮಾಜಗಳನ್ನು ನೋಡಿದರೆ ಅವರು ತಮ್ಮ ತಮ್ಮ ಜಯಂತಿಯ ಸಮಯಗಳು ಪುಣ್ಯ ದಿವಸಗಳೆಂದು ಭಾವಿಸಿ ಅವುಗಳನ್ನು ಜರಗಿಸುತ್ತಾರೆ. ನಮ್ಮ ಮುಸಲ್ಮಾನ ಬಂಧುಗಳು ಮಹಮ್ಮದನ ಜಯಂತಿಯ ಕಾಲದಲ್ಲಿ ಕೆಲವು ದಿವಸಗಳ ವರೆಗೂ ನಿರ್ದಿಷ್ಟ ವೇಳೆಗಳಲ್ಲಿ ಅಸಂಖ್ಯಾತವಾಗಿ ಕೂಡಿಕೊಂಡು ಅವನ ತತ್ವಗಳ ಬಗ್ಗೆ ವಿವೇಚನೆ ಮಾಡುತ್ತಾರೆ. ಅದರಂತೆಯೇ ಬ್ರಾಹ್ಮಣರು ತಮ್ಮ ಗೀತಾ ಜಯಂತಿಯನ್ನು ಉತ್ತಮ ರೀತಿಯಿಂದ ನಡಿಸುತ್ತಾರೆ. ಶಿವಶರಣರ ವಾಙ್ಮಯ ಗ್ರಂಥಗಳು ಉಚ್ಚ ಮಟ್ಟದ್ದಾಗಿವೆ. ಅವುಗಳು ಈಚೆಗೆ ಬಿ. ಏ. ಎಮ್. ಏ. ಪರೀಕ್ಷೆಗಳಲ್ಲಿ ಪಠ್ಯಪುಸ್ತಕಗಳಾಗಿ ನಿಯಮಿಸಲ್ಪಡುತ್ತವೆ. ಈ ಗ್ರಂಥಗಳ ಪರಿಶೀಲನೆಯು ನಿತ್ಯ ಗ್ರಾಮಾಂತರಗಳಲ್ಲಿ ನಡೆಯಬೇಕು. ಈಗ ಈ ಗ್ರಂಥಗಳ ಅಭ್ಯಾಸ ಮಾಡಿದವರು ಅಲ್ಲಲ್ಲಿ ಮಾತ್ರ ಕಂಡುಬರುತ್ತಿದ್ದಾರೆ. ಆದರೆ ಇವುಗಳ ಪರಿಶೀಲನೆಯು ಇಲ್ಲ. ನಿತ್ಯ ಮನೆಯಲ್ಲಿ ಇದು ನಡಿಯಬೇಕು. ಆದರೆ

ಈ ಕಾಲದಲ್ಲಿ ಧಾರ್ಮಿಕ ವಿಷಯಗಳ ಜ್ಞಾನವು ವೀರಶೈವರಲ್ಲಿ ಬಹುಶಃ ನಿಂತುಹೋಗಿದೆ. ಅವರು ಗುಡಿಗಳನ್ನು ಕಟ್ಟುವದರಲ್ಲಿ ಮತ್ತು ಜಾತ್ರೆಗಳನ್ನು ಮಾಡುವದರಲ್ಲಿ ತೊಡಗಿರುತ್ತಾರೆ. ಇವು ಜನರಲ್ಲಿ ಅಂಥ ಶ್ರದ್ಧೆಯನ್ನು ಹುಟ್ಟಿಸಲು ಬಹಳ ಸಹಾಯಕಾರಿಯಾದವುಗಳು. ಈ ಸ್ಥಿತಿಯು ಮೂಲಕ ವೀರಶೈವರ ಜಯಂತಿಯ ಉತ್ಸವಗಳು ಸಮಾಜದಲ್ಲಿ ಉಚ್ಚ ವಾತಾವರಣ ವನ್ನು ಹುಟ್ಟಿಸಿಲ್ಲ. ವೀರಶೈವರಲ್ಲಿ ಧರ್ಮೋದ್ಧಾರ ಮಾಡಿದ ಮಹಾತ್ಮರು ಅನೇಕರಿದ್ದಾರೆ. ಅವರು ಅಲ್ಲಮಪ್ರಭು, ರೇವಣಸಿದ್ಧೇಶ್ವರ, ಮಹಾದೇವಿ ಯಕ್ಕ, ಹರಳಯ್ಯ. ದೇವರದಾಸಿಮಯ್ಯ, ಮಡಿವಾಳಮಾಚಿದೇವ ಹೀಗೆ ಅಸಂಖ್ಯ ಜನರು ಇದ್ದಾರೆ. ಮರುಳಾರಾಧ್ಯ ಮತ್ತು ಉರಿಲಿಂಗಪೆದ್ದಿ ಇವರು ಅಸ್ಪೃಶ್ಯರು. ಆದರೂ ಇವರಿಗೆ ಸಮಾಜದಲ್ಲಿ ಉಚ್ಚಸ್ಥಾನವು ದೊರೆತಿದೆ. ಇವರೆಲ್ಲರ ಜಯಂತಿಯ ದಿನಗಳನ್ನು ವೀರಶೈವರು ಪಾಲಿ ಸುವದು ಅವಶ್ಯವದೆ. ಆ ದಿನಗಳಲ್ಲಿ ಈ ಮಹಾನುಭಾವರು ರಚಿಸಿದ ಗ್ರಂಥಗಳನ್ನು ಓದಿ ಜನರಿಗೆ ತಿಳಿಸಿ ಹೇಳುವ ಏರ್ಪಾಡಾಗಬೇಕು. ಈ ಕಾರ್ಯಗಳಿಗೋಸ್ಕರ ಹೆಚ್ಚು ಹಣ ಖರ್ಚು ಮಾಡುವ ಅವಶ್ಯಕತೆ ಇಲ್ಲ. ಅವರ ಉಕ್ತಿಗಳನ್ನೂ ಚರಿತ್ರೆಗಳನ್ನೂ ಆಧಾರವಾಗಿಟ್ಟುಕೊಂಡು ವ್ಯಾಖ್ಯಾನಗಳನ್ನು ಜರಗಿಸಿದರೆ ಸಾಕು. ಅವರ ಉಕ್ತಿಗಳನ್ನು ಪಠಿಸು ವದೂ ಹಾಡುವದೂ ಮುಂತಾದವುಗಳು ಆಗ ನಡಿಯಬೇಕು. ಈ ಮಹಾ ತ್ಮರ ಬಗ್ಗೆ ರಗಳೆಗಳನ್ನೂ ಸಾಂಗತ್ಯಗಳನ್ನೂ ಹಿಂದಿನವರು ರಚಿಸಿದ್ದಾರೆ. ಅವುಗಳನ್ನು ರಾಗದಿಂದ ಅನ್ನುವದನ್ನು ಕಲಿಯಬೇಕು. ಈ ರೀತಿ ಒಂದು ಉಚ್ಚ ಆಂದೋಲನವು ಸಮಾಜದಲ್ಲಿ ಆಗಿಂದಾಗ್ಗೆ ನಡಿಯುತ್ತಿರಬೇಕು. ಈ ತರದ ವ್ಯಾಪಕವಾದ ಧಾರ್ಮಿಕ ಗ್ರಂಥಗಳು ಬೇರೆ ಯಾವ ಸಮಾ ಜದಲ್ಲಿಯೂ ಇರುವದಿಲ್ಲ. ಆದರೂ ಇಂಥ ಕಾರ್ಯಗಳನ್ನು ವೀರಶೈವ ಸಮಾಜದವರು ಈಗ ದುರ್ಲಕ್ಷಿಸುವದು ಬಹು ಶೋಚನೀಯವಾಗಿದೆ.

**ಶಿವಾನುಭವ ಗ್ರಂಥಗಳು:—** ಈ ವರೆಗೆ ಪ್ರಕಟವಾದ ಶಿವಾನು ಭವಗ್ರಂಥಗಳ ಒಟ್ಟು ಸಂಖ್ಯೆಯು ಒಂದು ನೂರಕ್ಕಿಂತಲೂ ಹೆಚ್ಚಿಗಿರು ತ್ತವೆ. ಇವುಗಳನ್ನು ಶಿವಾನುಭವ ಪತ್ರಿಕೆಯ ಸಂಪಾದಕರು ಸಂಶೋ ಧಿಸಿ ಅಚ್ಚುಹಾಕಿಸುತ್ತ ಬಂದಿದ್ದಾರೆ. ಕರ್ನಾಟಕದಲ್ಲಿಯ ಎಲ್ಲ ಜಾತಿಯ ವಿದ್ವಜ್ಜನರು ಅವುಗಳಿಗೆ ಮನ್ನಣೆಯನ್ನು ಕೊಡಹತ್ತಿದ್ದಾರೆ. ಇಷ್ಟು ಗ್ರಂಥಗಳು ೨೦।೩॥ ಹಳಕಟ್ಟಿ ಇವರ ಪ್ರಯತ್ನಗಳ ಫಲವಾಗಿರುತ್ತವೆ.

ಆದರೆ ಈ ಒಂದುನೂರು ಗ್ರಂಥಗಳಲ್ಲಿ ಕೆಲವು ಮಾತ್ರ ಉಪಲಬ್ಧವಿರುತ್ತವೆ. ಉಳಿದ ಗ್ರಂಥಗಳು ಸಿಕ್ಕುವದಿಲ್ಲ. ಒಂದು ಗ್ರಂಥವನ್ನು ಅಚ್ಚು ಹಾಕಿಸುವದು ಬಹಳ ಶ್ರಮದ ಕೆಲಸವೆಂಬುದನ್ನು ವಾಚಕರು ಲಕ್ಷಿಸಬೇಕು. ಹಳೇ ಗ್ರಂಥಗಳನ್ನು ಮೊದಲು ಹುಡುಕಬೇಕು. ಆಮೇಲೆ ಅವುಗಳನ್ನು ಬರಿಸಿ ಶುದ್ಧಪಡಿಸಬೇಕು. ಇಷ್ಟಾದಮೇಲೆ ಮುದ್ರಣ ಖರ್ಚನ್ನು ವಹಿಸಬೇಕು. ಅವು ಮುದ್ರಣವಾದ ಬಳಿಕ ಅವುಗಳ ಮಾರಾಟ ಮಾಡಬೇಕು. ಇಷ್ಟೆಲ್ಲ ಕಾರ್ಯಗಳು ಜರಿಗಿದಾಗ ಗ್ರಂಥ ಪ್ರಕಾಶಕನ ಕಾರ್ಯವು ಪೂರ್ತಿಯಾಗುತ್ತದೆ. ಈ ಕಾರ್ಯವನ್ನು ನಿರ್ವಹಿಸುವಲ್ಲಿ ವೀರಶೈವ ಸಮಾಜದಿಂದ ಯಾವತರದ ಸಹಾಯ ಸಹಾನುಭೂತಿಗಳು ದೊರೆಯುವದಿಲ್ಲ. ಆದರೆ ಮುಂಬಯಿ ಪುಣೆ ತಮಿಳುದೇಶಗಳು ಇಂಥ ಕಾರ್ಯಮಾಡುತ್ತಿರುವ ಮಹತ್ವದ ಸಂಸ್ಥೆಗಳು ನಿರ್ಮಾಣವಾಗಿವೆ. ಆರ್ಯಸಮಾಜ, ರಾಮಕೃಷ್ಣಮಿಶನ್, ಥಿಯಾಸಫಿ ಸಂಸ್ಥೆ, ಕ್ರಿಶ್ಚನ್ ಮಿಶನಗಳು ಅದ್ಭುತ ಕಾರ್ಯಮಾಡುತ್ತಲಿವೆ. ಈ ಸಂಸ್ಥೆಯ ಚಾಲಕರು ಬಹುಜನ ವಿದ್ವಾಂಸರನ್ನು ಪೋಷಿಸುತ್ತಿದ್ದಾರೆ. ಇವುಗಳಲ್ಲಿ ನಿರ್ಮಾಣವಾದ ಬೋಧಕರೂ ವ್ಯಾಖ್ಯಾನಕಾರರೂ ನಾಡಿನಲ್ಲೆಲ್ಲ ಧರ್ಮಬೋಧೆಮಾಡುತ್ತ ಈಗಲೂ ಸಂಚರಿಸುತ್ತಿದ್ದಾರೆ. ಆದರೆ ವೀರಶೈವರಲ್ಲಿ ಈ ಬಗೆಯ ಪ್ರಯತ್ನಗಳು ನಡೆದಿರುವದಿಲ್ಲ. ಇಷ್ಟೇಅಲ್ಲ, ಹಲಕೆಲವು ವ್ಯಕ್ತಿಗಳು ತಮ್ಮ ಸ್ವಂತ ಹಣಹಾಕಿ ಪ್ರಯತ್ನಮಾಡುತ್ತಲಿದ್ದರೂ ಅವರಿಗೆ ಯಾವತರದ ಸಹಾಯ ಸಹಾನುಭೂತಿಗಳಿಲ್ಲ. ಅವರಿಗೆ ಭಯಂಕರ ಹಾನಿಯಾಗಿದೆ. ಸಾರ್ವಜನಿಕ ಕಾರ್ಯಕರ್ತರು ವಿಚಾರ ಮಾಡತಕ್ಕ ವಿಷಯವು ಇದಾಗಿದೆ.

**ಮಹಾಸಭೆ ಮತ್ತು ಕಾಂಗ್ರೆಸಿನ ಅಧಿವೇಶನಗಳು:**—ಶಿವಾನುಭವ ಪತ್ರಿಕೆಯಲ್ಲಿ ಕಾಂಗ್ರೆಸ ಅಧಿವೇಶನಗಳ ಚರ್ಚೆ ಏಕೆ ಎಂದು ಅನೇಕರು ಪ್ರಶ್ನೆಮಾಡಬಹುದು. ಇದು ಅವಶ್ಯವೆಂದು ನಮಗೆ ತೋರಹತ್ತಿದೆ. ದೇಶದಲ್ಲಿ ಅನೇಕತರದ ಪರಿಷತ್ತುಗಳು ಎಲ್ಲ ಸಮಾಜಗಳಲ್ಲಿ ನಡಿಯುವದು ಕಂಡುಬರುತ್ತದೆ. ಅವೆಲ್ಲವು ಕಾಂಗ್ರೆಸ್ಸಿನ ಅನುಕರಣ ಮಾಡುತ್ತ ಬಂದಿವೆ. ಇದು ಕಾಂಗ್ರೆಸ್ಸಿನ ಪ್ರಭಾವವೇ ಸರಿ. ಉದಾಹರಣಾರ್ಥವಾಗಿ ೧೯೨೦ ರಲ್ಲಿ ಧಾರವಾಡದಲ್ಲಿ ಪ್ರಾಂತಿಕ ರಾಜಕೀಯ ಪರಿಷತ್ತು ಕೂಡಿತ್ತು. ಅದರ ಮರುವರುಷ ಅಂದರೆ ೧೯೨೧ ನೆಯ ಇಸ್ವಿಯಲ್ಲಿ ಮೊದ

ಲನೆಯ ವೀರಶೈವ ಮಹಾಸಭೆಯು ಧಾರವಾಡದಲ್ಲಿ ನೆರವೇರಿತು. ರಾಜಕೀಯ ಪರಿಷತ್ತಿನಲ್ಲಿ ವಾಡಿಕೆಯ ಪ್ರಕಾರ ಆಗಿನ ಆಡಳಿತೆಯ ಬಗ್ಗೆ ಚರ್ಚೆಗಳು ನಡೆದವು. ಈ ಕಾಲಕ್ಕೆ ಪ್ರಾಗತಿಕರೂ ರಾಷ್ಟ್ರೀಯ ಪಕ್ಷದವರೂ ಒಮ್ಮತವಾಗಿ ಕಾರ್ಯಮಾಡುತ್ತಿದ್ದರು. ಅವರಲ್ಲಿ ಇನ್ನೂ ಎರಡು ಪಕ್ಷಗಳಾಗಿದ್ದಿಲ್ಲ. ೧೯೦೭ ರಲ್ಲಿ ಸುರತ ಕಾಂಗ್ರೆಸ್ಸಿನ ತರುವಾಯ ಉಭಯತರಲ್ಲಿ ಸ್ಪಷ್ಟವಾಗಿ ಎರಡು ವಿಭಾಗಗಳಾದವು. ಟಿಳಕರೂ ಅವರ ಅನುಯಾಯಿಗಳೂ ರಾಷ್ಟ್ರೀಯ ಪಕ್ಷವನ್ನು ಸ್ಥಾಪಿಸಿದರು. ಪ್ರಾಗತಿಕರು ಮೊದಲಿನ ಕಾಂಗ್ರೆಸ್ಸನ್ನು ಮುಂದುವರಿಸಿದರು. ಆಡಳಿತೆಯ ಸುಧಾರಣೆಯೇ ಈ ಪ್ರಾಗತಿಕರ ಧ್ಯೇಯವಾಗಿತ್ತು.

ಇದೇ ಕಾಲದಲ್ಲಿ ಭಾರತದಲ್ಲಿಯ ಬಹುಶಃ ಎಲ್ಲ ಜಾತಿಯ ಜನರು ತಮ್ಮ ತಮ್ಮ ಪರಿಷತ್ತುಗಳನ್ನು ಕೂಡಿಸಿ ಸಮಾಜ ಸುಧಾರಣೆಯ ಕಾರ್ಯಗಳನ್ನು ಕೈಕೊಳ್ಳುತ್ತ ಬಂದರು. ವೀರಶೈವರು ತಮ್ಮ ಮಹಾಸಭೆಯ ಮುಖಾಂತರ ಶಿಕ್ಷಣ ಪ್ರಸಾರದ ಕಾರ್ಯಗಳನ್ನು ಮುಖ್ಯವಾಗಿ ಕೈಕೊಂಡರು. ಇದರಿಂದ ಸೊಲ್ಲಾಪುರ, ಬೆಂಗಳೂರು, ಬಳ್ಳಾರಿ ಈ ಜಿಲ್ಲೆಗಳಲ್ಲಿ ಶಿಕ್ಷಣ ಸಂಸ್ಥೆಗಳು ಉಂಟಾದವು. ಅವು ಈ ವರೆಗೂ ಉತ್ತಮ ರೀತಿಯಿಂದ ಶಿಕ್ಷಣ ಕಾರ್ಯವನ್ನು ಮಾಡುತ್ತಬಂದಿವೆ.

ಹೇಗೆ ಕಾಂಗ್ರೆಸ್ಸಿನಲ್ಲಿ ಒಡಕು ಉತ್ಪನ್ನವಾಯಿತೋ ಹಾಗೆಯೇ ಈ ಕಾಲದಲ್ಲಿ ವೀರಶೈವರಲ್ಲಿಯೂ ಕೆಲವು ಭೇದವಿಭೇದಗಳು ಉಂಟಾಗಿ ಅವರ ಮಹಾಸಭೆಗಳು ನಿಂತುಹೋದವು. ಆರಂಭದಲ್ಲಿ ವೀರಶೈವರಲ್ಲಿ ವರ್ಣಗಳಿವೆ, ಎಂದು ಹೇಳುವ ಪಕ್ಷ ಒಂದು ಮತ್ತು ಇದನ್ನು ವಿರೋಧಿಸುವ ಪಕ್ಷ ಬೇರೊಂದು, ಹೀಗೆ ಇವು ಪ್ರತಿಸ್ಪರ್ಧಿಗಳಾಗಿ ಹೋರಾಡಹತ್ತಿದವು. ಪಂಚಾಚಾರ್ಯ ಪಕ್ಷದವರು ವರ್ಣಾಶ್ರಮಗಳಿವೆ, ಎಂದು ಪುರಸ್ಕಾರ ಮಾಡುವವರಾದರು. ವಿರಕ್ತ ಪಕ್ಷದವರು ಕೆಲವು ಕಾರಣಗಳ ಮೂಲಕ ಪ್ರಮಥರನ್ನು ಹಿಂಬಾಲಿಸುವವರಾದರು. ಹಲವರು ಭಕ್ತರು ಬೇರೆ ಜಂಗಮರು ಬೇರೆ ಎಂದೂ ಬೇರೆ ಕೆಲವರು ಅವರಲ್ಲಿ ಭಿನ್ನತೆಗಳು ಇಲ್ಲವೆಂದೂ ಮತಭೇದಗಳು ಉಂಟಾದವು. ಈ ಕಲಹವು ಸೊಲ್ಲಾಪುರ ಮಹಾಸಭೆಯಲ್ಲಿ ಪ್ರಾರಂಭಿಸಿ ಮುಂದೆ ಬಳ್ಳಾರಿ ಮಹಾ

ಸಭೆಯಲ್ಲಿ ವಿಕೋಪಕ್ಕೆ ಬಂದಿತು. ಈ ಸ್ಥಿತಿಯು ಮೂಲಕ ಮಹಾಸಭೆಯು ಜಗಳದ್ದೆಂದು ತಿಳಿದು ಯಾರೂ ಇದರ ಗೊಡವೆಗೆ ಹೋಗಲಿಲ್ಲ. ಅದು ನಿಂತುಹೋಯಿತು.

ಮುಂದೆ ರಾಜಕೀಯ ಪಕ್ಷಗಳು ವೀರಶೈವ ಸಮಾಜದಲ್ಲಿ ತಲೆದೋರಿದವು. ಅವು ಕೇವಲ ವೈಯ್ಯಕ್ತಿಕ ಪಕ್ಷಗಳು. ಈ ಪಕ್ಷಗಳನ್ನು ಅನುಸರಿಸುವವರು ಸಮಾಜದಲ್ಲಿ ತಮ್ಮ ವರ್ಚಸ್ಸು ಬೆಳೆಯಬೇಕೆಂದು ಮಹಾಸಭೆಗೋಸ್ಕರ ಪ್ರಯತ್ನಿಸಹತ್ತಿದರು ! ಧಾರವಾಡ ಮಹಾಸಭೆಯು ಹುಲಕೋಟಿ ಪಕ್ಷದವರದೂ ರಾಯಚೂರ ಮಹಾಸಭೆಯು ಕಂಬಳಿ ಪಕ್ಷದವರದೂ ಎಂಬ ತಿಳುವಳಿಕೆಯಾಯಿತು. ಕಾಂಗ್ರೆಸ್ಸನ್ನು ವಿಲ್ಲಿಂಗಡನ್ ವ್ಹಾಯಿಸರಾಯರ ಕಾಲದಲ್ಲಿ ಹತ್ತಿಕ್ಕಲಾಗಿ ಅದರ ಚಳವಳಿಗಳು ನಿಂತುಹೋದವು. ಆಗ ಕರ್ನಾಟಕದಲ್ಲಿ ಇದ್ದ ಕಾಂಗ್ರೆಸ್ಸ ಪಕ್ಷದವರು ಕಾಂಗ್ರೆಸ್ಸಿನ ಬದಲಾಗಿ ವೀರಶೈವ ಮಹಾಸಭೆಯನ್ನು ತಮ್ಮ ಅಂಕಿತದಲ್ಲಿ ತೆಗೆದುಕೊಂಡು ತಮ್ಮ ವರ್ಚಸ್ಸನ್ನು ಬೆಳಿಸಲು ಮುಂದಾದರು. ಇಂಥ ಪ್ರಯತ್ನಗಳು ಹುಬ್ಬಳ್ಳಿ ಮಹಾಸಭೆಯಲ್ಲಿ ನಡೆದು ಅದರಲ್ಲಿ ಅವರು ಯಶಸ್ವಿಗಳಾದರು. ಮಹಾಸಭೆಯ ಮೊದಲಿನ ಧೋರಣಗಳಲ್ಲಿ ಬದಲಾವಣೆಗಳಾದವು. ಮೊದಲು ಮಹಾಸಭೆಯು ರಾಜಕೀಯ ವಿಷಯಗಳನ್ನು ಎಂದೂ ಚರ್ಚಿಸುತ್ತಿದ್ದಿಲ್ಲ. ಈಗ ಅವುಗಳನ್ನು ಚರ್ಚಿಸಬಹುದೆಂದು ಹುಬ್ಬಳ್ಳಿಯ ಮಹಾಸಭೆಯಲ್ಲಿ ಗೊತ್ತಾಯಿತು ಮತ್ತು ಆ ರೀತಿ ಅದರ ನಡವಳಿಕೆಗಳೂ ಜರಗಿದವು. ಇದರಿಂದ ವೀರಶೈವ ಮಹಾಸಭೆಯು ಒಂದು ಪ್ರಬಲ ಸಂಸ್ಥೆಯಾಗುವದೆಂದು ಎಲ್ಲರೂ ಭಾವಿಸಿದ್ದರು. ಆದರೆ ಆ ಸ್ಥಿತಿಯು ಮುಂದೆ ಉಂಟಾಗಲಿಲ್ಲ. ಈಗಲೂ ಕೂಡ ಉಂಟಾಗಿರುವದಿಲ್ಲ. ಇದಕ್ಕೆ ಕಾಂಗ್ರೆಸ್ಸಿನವರಲ್ಲಿ ಉಂಟಾದ ಪರಸ್ಪರ ವಿರೋಧ ಭಾವಗಳೂ ಮಾತ್ಸರ್ಯ ಬುದ್ಧಿಯೂ ಇವುಗಳೇ ಕಾರಣ ಹೊರ್ತು ಬೇರಾವ ಕಾರಣಗಳಿಲ್ಲ.

ಅಂತಸ್ಥ ಕಲಹಗಳು ಬೆಳೆಯುತ್ತ ಬಂದದ್ದರಿಂದ ಮಹಾಸಭೆಯು ಮುಂದುವರಿಯಲಿಲ್ಲ. ಮಧ್ಯದಲ್ಲಿ ಕೈ. ವಾ. ಹುಲಕೋಟಿಯವರು ಆರ್ಥಿಕ ಅಭಿವೃದ್ಧಿಗಾಗಿ ಪ್ರಯತ್ನಿಸಿದರು. ಅದು ಸಿದ್ಧಿಗೆಹೋಗಲಿಲ್ಲ. ಮುಂದೆ ಬ್ಯಾರಿಷ್ಟರ ಸರದಾರರು ಸಮಾಜದಲ್ಲಿ ಒಂದು ಸಂಘಟನೆಯನ್ನು ಮಾಡಲು ಪ್ರಯತ್ನಿಸಿದರು. ಆದರೆ ಅವರು ಮಾಡಿದ ಕಮೀಟಿ

ಗಳು ಸಮಾಜದ ಪರಿಸ್ಥಿತಿಯಲ್ಲಿ ಕಾಗದದಲ್ಲಿ ಉಳಿದವೇ ಹೊರ್ತು ಕಾರ್ಯಮಾಡುವ ಕಮೀಟಿಗಳಾಗಲಿಲ್ಲ. ಹೀಗೆ ಮಹಾಸಭೆಯು ದುರ್ಬಲವಾಯಿತು.

**ಶಿವಶರಣರ ವಾಙ್ಮಯ:—** ಇದರ ತರುವಾಯ ಶಿವಶರಣರ ವಾಙ್ಮಯವನ್ನು ರಾ॥ ಬ॥ ಹಳಕಟ್ಟಿಯವರು ಪ್ರಸಿದ್ಧಿಸಹತ್ತಿದರು. ಇದು ಸಮಾಜದಲ್ಲಿ ಬಹುಕಡೆಗೆ ಪ್ರಸಾರವಾಯಿತು. ಇದರ ಮೂಲಕ ಸಮಾಜದಲ್ಲಿ ಒಂದು ಸಂಘಟನೆಯಾಗಬಹುದೆಂದು ಬಹು ಜನರು ಹೋದ ವರ್ಷ ನಿರೀಕ್ಷಿಸಿದ್ದರು. ಆದರೆ ಈ ವಿಷಯದ ಬಗ್ಗೆ ಕಲ್ಯಾಣ ಮಹಾಸಭೆಯಲ್ಲಿ ಸರಿಯಾದ ನಿರ್ಣಯಗಳು ಆಗಲಿಲ್ಲ. ಈ ಸಂಸ್ಕೃತಿಯ ಕಾರ್ಯವನ್ನು ಮುಂದುವರಿಸುವ ಬಗ್ಗೆ ಈಗಲೂ ಯಾವ ಕಾರ್ಯಗಳು ನಡಿದಿರುವದಿಲ್ಲ.

ಈ ಸ್ಥಿತಿಯಲ್ಲಿ ಶಿವಾನುಭವ ಪತ್ರಿಕೆಯು ತನ್ನ ಮೊದಲಿನ ಧೋರಣದಂತೆಯೇ ಮತ್ತಿಷ್ಟು ಬಲವಾದ ರೀತಿಯಿಂದ ಪ್ರಯತ್ನಿಸಬೇಕೆಂಬ ಸಂಕಲ್ಪವುಳ್ಳದ್ದಾಗಿದೆ. ಅದು ಶರಣರ ವಾಙ್ಮಯ, ಶಿವಶರಣರ ಚರಿತ್ರೆಗಳು, ಇವುಗಳ ಸಂಶೋಧನ ಮಾಡುವದರಲ್ಲಿಯೂ ಶರಣರು ಮಾಡಿದ ಪದ ಪದ್ಯ ಸಾಂಗತ್ಯ ತ್ರಿಪದಿ ಶತಕಗಳನ್ನು ಸಂಗ್ರಹಿಸಿ ಅವುಗಳನ್ನು ಪ್ರಕಾಶಪಡಿಸುವದರಲ್ಲಿಯೂ ತೊಡಗುವದು. ಅದು ಎಲ್ಲ ಶಿವಾನುಭವಿಗಳ ನೆರದವರ, ವಿರಕ್ತರ, ಯಾವ ಸಹಾಯವಿಲ್ಲ. ಈ ಸ್ಥಿತಿಯಲ್ಲಿ ಅದು ಶಕ್ಯವಿದ್ದಷ್ಟರಮಟ್ಟಿಗೆ ಎಂದಿನಂತೆ ಇದ್ದುದನ್ನು ಕಾಯ್ದುಕೊಂಡು ಹೋಗಲು ವನ್ನು ಬೇಡುತ್ತದೆ.

# ಶ್ರೀ ಷಣ್ಮುಖಸ್ವಾಮಿಗಳು ಸಾಧಿಸಿದ ಶಿವಯೋಗ.

[ ಮುಂದುವರಿದಿದ್ದು ]

(ಲೇ.:—ಶ್ರೀಯುತ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ )

---

## ಪ್ರಸಾದಿಸ್ಥಲ.

ಇವರ ಪ್ರಸಾದಿಸ್ಥಲವನ್ನು ವಿಚಾರಿಸುವೆನು. ಭಕ್ತಿಜ್ಞಾನಗಳಿಗೆ ಅಂದರೆ ಹೃದಯಕ್ಕೆ ( ಭಾವಕ್ಕೆ ) ಮತ್ತು ಮೆದುಳಿಗೆ ( ವಿಚಾರಕ್ಕೆ ) ಹೊಳೆದ ಸತ್ಯಾನುಭವಗಳನ್ನು ಕಾರ್ಯಗತ ಮಾಡಿದರೆ ಅವನೇ ನಿಜವಾದ ಜ್ಞಾನಿಯು. ಕಾರ್ಯಗತವಾಗದ ಜ್ಞಾನವು ಶುಷ್ಕಜ್ಞಾನವಾಗುವದು. ಇದು ದುರುಳ ಮರುಳ ವೇದಾಂತವಾಗುವದು. ಇದೆಲ್ಲ ಬಾಯಿ ಬ್ರಹ್ಮಗಳಂತೆ ನಿರೂಪ ಯೋಗವಾಗುವದರಲ್ಲಿ ಸಂದೇಹವಿಲ್ಲ. ಕಾರಣ ಭಕ್ತಿ ಜ್ಞಾನ ಕ್ರಿಯೆಗಳು ಕೂಡಿದರೆ ಇವನ್ನು ಸಾಧಿಸಿದವನೇ ಲಿಂಗಾಂಗ ಸಾಮರಸ್ಯಕ್ಕೆ ಶಿವಯೋಗಕ್ಕೆ ಷಟ್‍ಸ್ಥಲ ಸಿದ್ಧಾಂತಕ್ಕೆ ತಕ್ಕವನಾಗುವನು. ಇಲ್ಲವಾದರೆ ಇದೆಲ್ಲ ಬರಿ ಒಣ ಜ್ಞಾನವಾಗುವದು.

ಮುಂದಿನ ಮೂರು ಸ್ಥಲಗಳು ಇವುಗಳ ಮೇಲೆ ನಿಂತಿವೆ. ಇಲ್ಲವಾದರೆ ಇವಕ್ಕೆ ಯಾರೂ ಬೆಲೆ ಮಾಡುವದಿಲ್ಲ. "ಕ್ರಿಯುವೇ ಅಧಿಕವೆಂಬ ದೊಡ್ಡ ಸಿದ್ಧಾಂತಗಳ ಮಾತು ಸೊಗಸದಯ್ಯಾ ಎನಗೆ. ಅದೇನು ಕಾರಣವೆಂದರೆ ಅವುದೊಂದು ಪಕ್ಷಿ ಉಭಯ ರೆಕ್ಕೆಯಿಂದ ಗಗನಕ್ಕೆ ಹಾರುವಂತೆ ಅಂತರಂಗದಲ್ಲಿ ಸಮ್ಯಜ್ಞಾನ, ಬಹಿರಂಗದಲ್ಲಿ ಶಿವಸತ್ಕ್ರಿಯೂ ಸನ್ನಿಹಿತವಿಲ್ಲದೆ ಪರವಸ್ತುವ ಕೂಡಬಾರದಾಗಿ ಇದು ಕಾರಣ ಸತ್ಕ್ರಿಯು ಸಮ್ಯಜ್ಞಾನ ಸಂಪನ್ನರಾದ ಶರಣರ ತೋರಿಸಿ ಬದುಕಿಸಯ್ಯ ಎನ್ನ ಅಖಂಡೇಶ್ವರ"

ಬರೇ ಕ್ರಿಯಯಾಗಲಿ ಬರೇ ಜ್ಞಾನವಾಗಲಿ ಬರೇ ಭಕ್ತಿಯಾಗಲಿ ಒಂದೊಂದೇ ಆದರೆ ಪೂರ್ಣ ಸ್ಥಿತಿಗೆ ಮುಟ್ಟಲಾರವು. ಇವು ಮೂರು ಕೂಡಿದರೆ ಬಹು ಸರಸಾಗುವದು. ರೂಪವತಿ ಸ್ತ್ರೀ, ಒಳ್ಳೇ ಗುಣವತಿ ಹಾಗೂ ಅಲಂಕಾರದಿಂದ ಸಿಂಗರಿಸಿದರೆ ಹೇಗೆ ಮಹಾದೇವಿಯಾಗುವಳೋ ಅದರಂತೆ ಸತ್ಯ ಸೌಂದರ್ಯ ಶಕ್ತಿಗಳು ಕೂಡಿದರೆ ಹೇಗೆ ಒಪ್ಪುವದೋ ಅದರಂತೆ ಇವು ಮೂರೂ ಕೂಡಿದರೆ ಒಪ್ಪುವದು.

"ಕ್ರಿಯಯಲ್ಲಿ ಬಲ್ಲಿದರು । ಜ್ಞಾನದಲ್ಲಿ ಸಂಪನ್ನರು । ಎಂದು ಹೇಳಲೇತಕೊ । ನಡೆನುಡಿಯಲ್ಲಿ ಕಾಣಬಹುದು । ನಡೆ ನುಡಿ ಶುದ್ಧವಿಲ್ಲದಲ್ಲಿ ಇರಲೊಲ್ಲದು ಅಖಂಡೇಶ್ವರಾ ॥ ಮಾಡುವ ಭಕ್ತನು ನೀನೇ । ಮಾಡಿಸಿಕೊಂಬುವ ದೇವನು ನೀನೇ ಎಂದರಿದೆ ಇದು ಕಾರಣ ಅಖಂಡೇಶ್ವರ ॥

ನಿಮ್ಮ ಫಲಪದವ ನೋಡಲಿಲ್ಲ । ನೀವು ಒಲಿದು ಎನಗೆ ಕೊಡಲಿಲ್ಲ ॥ ಫಲಪದವಿಯ ಆಶೆ ಮಾಡಲಾಗದು ಕ್ರಿಯೆಯಲ್ಲಿ । ಬಯಕೆಯ ಕ್ರಿಯೆಯನ್ನು ಪೂರ್ವ ಪುರಾತನರು ಮೆಚ್ಚರು । ನಮ್ಮ ಅಖಂಡೇಶ್ವರ. ದೇವರು ಹಂಗಿನ ಭಕ್ತರನೊಲ್ಲ ನೋಡಾ ನಿಷ್ಕಾಮ ಸೇವೆಯೇ ಭಕ್ತನಿಗೆ ಆನಂದವನ್ನುಂಟುಮಾಡುವದು. ಅವನು ಯಾವ ಪದದ ಆಶೆಯನ್ನು ತನ್ನ ಕ್ರಿಯೆಯಲ್ಲಿ ಮಾಡುವದಿಲ್ಲ. ಇಂಥ ನಿಷ್ಕಾಮ ಕ್ರಿಯೆಗಳು ಬರಬೇಕಾದರೆ ಅವನು ಭಕ್ತನಾಗಿ ಜ್ಞಾನಿಯಾಗಿ ಇದ್ದರೆ ಶಕ್ಯವಿದೆ. ಉಳಿದ ಸಾಮಾನ್ಯರಿಗೆ ಶಕ್ಯವಿಲ್ಲ. ನಿಷ್ಕಾಮವಾಗಿ ಕರ್ಮಗಳನ್ನು ಮಾಡಿ ಬಂದ ಪ್ರಾಪ್ತಿಯನ್ನೆಲ್ಲ ನರರೂಪದಲ್ಲಿರುವ ಹರನಿಗೆ ಅರ್ಪಿಸಿ ಉಳಿದ ಅಲ್ಪಮಾತ್ರವನ್ನೇ ಪ್ರಸಾದ ರೂಪದಿಂದ ಸೇವಿಸುವದೇ ಪ್ರಸಾದಿ ಸ್ಥಲವು. ಇಂಥ ಫಲಾಶಾರಹಿತ ಕರ್ಮವೇ ಶ್ರೇಷ್ಠ. ಮಿಕ್ಕ ಕರ್ಮಗಳೆಲ್ಲ ಬಂಧನಕಾರಿಗಳು. ಶುದ್ಧ, ಅರ್ಪಿತ, ನಿಷ್ಕಾಮ ಫಲಾಶಾರಹಿತ ಕರ್ಮಮಾಡಿ ಭಕ್ತನು ಸದಾ ಮುಕ್ತನಿರುವನು. ಕರ್ಮವು ಅಹಂಕಾರ ವಿರಹಿತವೂ ನಿಷ್ಕಾಮವಾದುದೂ ಇರಬೇಕು. "ನಾನು ಮಾಡಿದೆನು" ಎಂಬ ಭಾವವೂ ಕೂಡ ಒಳ್ಳೇ ಘಾತುಕವಾದುದು. ನಿಜವಾದ ಭಕ್ತನು ಕರ್ಮಮಾಡುವಾಗ ಮುಕ್ತಿಯ ಆಶೆಯನ್ನು ಕೂಡ ಮಾಡುವದಿಲ್ಲ. ಇದೇ ಪ್ರಸಾದಿಸ್ಥಲದ ಮಹಿಮೆ. ಹಿರಿಯ ನಿಷ್ಕಾಮ ಕರ್ಮದ ಪರಮಾವಧಿಯು. ಇದನ್ನು ಷಣ್ಮುಖದೇವರು ಚನ್ನಾಗಿ ಸಾಧಿಸಿದ್ದರಿಂದಲೇ ಅವರ ಮುಖದಿಂದ ಇಂಥ ದಿವ್ಯ ವಚನಗಳು ಬಂದಿರುವವು. ಇವರು ತ್ರಿವಿಧ ದಾಸೋಹದ ಬಗ್ಗೆ ಬಹಳ ಹೇಳಿದ್ದಾರೆ. ತನು ಮನ ಧನಗಳನ್ನು ಗುರುಲಿಂಗ ಜಂಗಮಕ್ಕೆ (ಹರರೂಪದಲ್ಲಿರುವ ನರರಿಗೆ) ಅರ್ಪಿತ ಮಾಡುವದರ ಮಹತ್ವವನ್ನು ನುಡಿದಿದ್ದಾರೆ. ಇದೇ ನಿಷ್ಕಾಮ ಸೇವೆ ಅಥವಾ ಭಕ್ತಿ, ಜ್ಞಾನ, ಕ್ರಿಯೆಗಳ ಸಮನ್ವಯ, ಮೇಲೆ ಬಣ್ಣಿಸಿದಂತೆ ಇದೇ ಪ್ರಸಾದಿಯ ನಿಲಯವು.

## ಪ್ರಾಣಲಿಂಗಿಸ್ಥಲ.

ಪ್ರಾಣಲಿಂಗಿಯ ಸ್ಥಲವನ್ನು ಇವರು ಎಷ್ಟು ಅರಿತದ್ದರೆಂದು ವಿಚಾರಿಸುವಾ. "ಎನ್ನ ಕರಸ್ಥಲದ ಮಧ್ಯದಲ್ಲಿ ಪರಮ ನಿರಂಜನ ಕುರುಹು ದೋರಿದ । ಆ ಕುರುಹಿನ ಮಧ್ಯದಲ್ಲಿ ಅರುಹಿನ ಕಳದೋರಿದ । ಆ ಕಳೆಯ ಮಧ್ಯದಲ್ಲಿ ಮಹಾಜ್ಞಾನದ ಬೆಳಗು ತೋರಿದ । ಆ ಬೆಳಗಿನ ನಿಲುವಿನೊಳಗೆ ಎನ್ನ ತೋರಿದ । ಎನ್ನೊಳಗೆ ತನ್ನ ತೋರಿದ । ತನ್ನೊಳಗೆ ಎನ್ನನಿಂಬಿಟ್ಟುಕೊಂಡ ಮಹಾ ಗುರುವಿಗೆ ನಮೋ ನಮೋ ಎನುತಿರ್ದೆನಯ್ಯಾ ಅಖಂಡೇಶ್ವರ ॥ ಗಗನಮಂಟಪದಲ್ಲಿ ಅಘಹರನ ಪೂಜೆ ಒಗುಮಿಗು ಲಾಗುತಿರ್ಪುದು ನೋಡಾ॥ ಅಲ್ಲಿ ದಿಗಿಬುಗಿಲೆಂಬ ಶಬ್ದ ಸೊಗಸು ನೋಡಾ॥ ಅಖಂಡೇಶ್ವರಾ ॥ ಉತ್ತರಗಿರಿಯ ಚಿತ್ರಮಂಟಪದೊಳಗೆ ರತ್ನ ತೋರಣ ಪರಿಪರಿಯ ನೋಡಾ । ಮುತ್ತಿನ ಗದ್ದುಗೆಯ ಮೇಲೆ ಛತ್ತೀಸ ಕೋಟಿ ಸೂರ್ಯ ಚಂದ್ರರ ಬೆಳಗನೊಳಗೊಂಡು ನಿತ್ಯಪರಿಪೂರ್ಣ ವಸ್ತುವ ಕೂಡಬಲ್ಲಾತ ಅಖಂಡೇಶ್ವರ ॥ ತ್ರಿಕೂಟ ಗಿರಿಯಲ್ಲಿ ತ್ರಿಣಯನ ಕುಳ್ಳಿರಿಸಿ ತ್ರಿಕಾಲ ಪೂಜೆಯ ಮಾಡಬಲ್ಲಾತನೇ ತ್ರಿಲೋಕದ ಒಡೆಯ ಅಖಂಡೇಶ್ವರ ॥ ಚಂದ್ರಶಿಲೆಯ ಮಂಟಪದಲ್ಲಿ ಇಂದುಧರನ ವಿಸ್ತಾರವ ನೋಡಿ ಬಂದು ನೆರೆದಿರ್ಪರು ಚಂದ್ರಜ್ಯೋತಿಯ ಸಾಲುಸಾಲಿನ ಬೆಳಗು ನೋಡಾ । ಅಲ್ಲಿ ಚಂದಚಂದದ ದುಂದುಭಿನಾದ । ಇದರ ರಭಸ ಏನು ಹೇಳುವೆನಯ್ಯಾ ಅಖಂಡೇಶ್ವರ ॥ ಸಾಸಿರದಳ ಕಮಲಮಂಟಪದೊಳಗೆ । ಈಶ್ವರನ ಓಲಗದ ಸೊಬಗನೇನು ಹೇಳಲಿ । ಮೂಜಗದವರೆಲ್ಲ ವೈಮರೆದಿರ್ಪರು । ಭಾಸ್ಕರ ಸೋಮ ಬೆಳಗು ಕಂಗಳ ತುಂಬಿತು ನೋಡಾ ಅಖಂಡೇಶ್ವರಾ ॥ ದೇಹವೆಂಬ ದೇಗುಲದೊಳಗೆ ಭಾವ ಸಿಂಹಾಸನವ ಮಾಡಿ । ಜೀವದೊಡೆಯನ ಪೂಜಿಸಬಲ್ಲ ದೇವರಿಗೆ ದೇವನೆಂಬೆನಯ್ಯಾ ಅಖಂಡೇಶ್ವರ ॥ ಸಹಸ್ರದಳದ ಚಕ್ರದಲ್ಲಿ ಮಂಡಲತ್ರಯದ ಮಧ್ಯದಲ್ಲಿ ಪ್ರಣವ ಪೀಠದಲ್ಲಿ ಮುಹೂರ್ತಗೊಂಡು ಬೆಳಗುವ ನಿಮ್ಮ ದಿವ್ಯ ಶ್ರೀಮೂರ್ತಿಯ ಕಂಡು ಸಾಲಿನ ಬೆಳಗು ನೋಡಾ । ಅಲ್ಲಿ ಚಂದಚಂದದ ದುಂದುಭಿನಾದ ಇದರ ರಭಸ ಏನು ಹೇಳುವೆನಯ್ಯಾ ಅಖಂಡೇಶ್ವರ ॥ ಸಾಸಿರದಳ ಕಮಲಮಂಟಪದೊಳಗೆ । ಈಶ್ವರನ ಓಲಗದ ಸೊಬಗೇನು ಹೇಳಲಿ । ಮೂಜಗದವರೆಲ್ಲ ವೈಮರೆದಿರ್ಪರು । ಭಾಸ್ಕರ ಕೋಟಿ ಬೆಳಗು ಕಂಗಳ ತುಂಬಿತು ನೋಡಾ ಅಖಂಡೇಶ್ವರ ॥ ದೇಹವೆಂಬ ದೇಗುಲ

ದೊಳಗೆ ಭಾವ ಸಿಂಹಾಸನವ ಮಾಡಿ। ಜೀವದೊಡೆಯನ ಪೂಜಿಸಬಲ್ಲ ದೇವರಿಗೆ ದೇವನೆಂಬೆನಯ್ಯಾ ಅಖಂಡೇಶ್ವರ ॥ ಸಹಸ್ರ ದಳದ ಪಂಚ ಪತ್ರದಲ್ಲಿ ಮಂಡಲತ್ರಯದ ಮಧ್ಯದಲ್ಲಿ ಪ್ರಣವ ಪೀಠದಲ್ಲಿ ಮೂರ್ತಿಗೊಂಡು ಬೆಳಗುವ ನಿಮ್ಮ ದಿವ್ಯ ಶ್ರೀ ಮೂರ್ತಿಯ ಕಂಡು ಹರುಷಿತನಾದೆನಯ್ಯಾ ಅಖಂಡೇಶ್ವರ॥ ಅಖಂಡ ಅದ್ವಯ ಅವಿರಳ ಪರಶಿವನ ಬೆಳಕಿನೊಳಗೆ ನಾ ನನ್ನ ಮರೆದು ಪರವಶನಾಗಿರ್ದೆನಯ್ಯಾ ಅಖಂಡೇಶ್ವರ॥ ಈ ಪ್ರಕಾರ ಶಿವೋಹಂ ತತ್ವವನ್ನು ಚನ್ನಾಗಿ ಹೇಳಿದ್ದಾರೆ. ಹೊರಗೆ ಹುಡುಕುವ ಶಿವನು ತನ್ನೊಳಗೇ ತಾನೇ ಇರುವೆನೆಂಬ ಅನುಭವವು ಬೇಕಾದವರು ಇವರ ಪ್ರಾಣಲಿಂಗಿಯ ಸ್ಥಲದಲ್ಲಿಯ ವಚನಗಳನ್ನು ನೋಡಬಹುದು. ಇದರಲ್ಲಿ ಲಿಂಗಾಂಗ ಸಾಮರಸ್ಯವನ್ನು ಹೇಳಲಾಗಿದೆ. ಲಿಂಗ ಮನ ಭಾವಗಳೆಲ್ಲ ಲಿಂಗಮಯವಾದವು. ಲಿಂಗ ಗುಣವನ್ನು ಹೊಂದಿದವೆಂದು ಹೇಳಲಾಗಿದೆ. ಇಷ್ಟಲಿಂಗ ಪೂಜೆ ನಿಂತು ಹೋದ ಸ್ಥಿತಿಯನ್ನು ಹೇಳಲಾಗಿದೆ. ತಾನೇ ಶಿವನೆಂಬ ಭಾವವು ಅಳವಟ್ಟವನೇ ಜಂಗಮನು. ಷಣ್ಮುಖ ದೇವರು ಬರೇ ಜಾತಿಯಿಂದ ಜಂಗಮರಾಗಿದ್ದಿಲ್ಲ ಭಕ್ತಿ ಜ್ಞಾನಕ್ರಿಯೆಗಳಿಂದ ಜಂಗಮರಾಗಿದ್ದರು ತಾವೇ ದೇವರಾಗಿದ್ದರು. ಇವರೇ ನಿಜವಾದ ಗುರುಲಿಂಗ ಜಂಗಮರು.

### ಶರಣಸ್ಥಲ

ಇವರ ಶರಣಸ್ಥಲವನ್ನು ಅವಲೋಕಿಸುವಾ. ಇವರು ಸರ್ವರಲ್ಲಿ ದೇವರನ್ನು ಕಂಡವರಿದ್ದರು. ಇವರು ಜೀವನ್ಮುಕ್ತರಿದ್ದರು. ಸ್ಥಿತ ಪ್ರಜ್ಞರಿದ್ದರು. ಅದಕ್ಕಂತೆ ಯಾವ ಆಶೆ ಆಧಿ ವ್ಯಾಧಿ ಸುಖ ದುಃಖ ಚಿಂತೆಕ್ಲೇಶಗಳಿದ್ದಿದ್ದಿಲ್ಲ. ಸರ್ವದೃಷ್ಟಿಯಿಂದಲೇ ನೋಡುತ್ತಿದ್ದರು. ದ್ವಂದಾತೀತರಾಗಿದ್ದರು. ಕುಂಭ ಸಹಸ್ರ ಉದಕ ದೊಳಗೆ ಬಿಂಬಿಸಿ ತೋರುವ ಸೂರ್ಯನೊಬ್ಬನಲ್ಲದೆ ಮತ್ತೆ ಹಲಬರುಂಟೆ ? ಸಕಲ ದೇಹದೊಳಗೆ ಭ್ರಮಿಸಿ ತುಂಬಿಪ್ಪ ಪರವಸ್ತು ನೀನೊಬ್ಬನಲ್ಲದೆ ಮತ್ತಾರನೂ ಕಾಣೆನಯ್ಯಾ ಅಖಂಡೇಶ್ವರ ॥ ಎಲ್ಲಿ ನೋಡಿದಲ್ಲಿ ನೀನೇ ದೇವಾ । ಎಲ್ಲಿ ಮುಟ್ಟಿದಲ್ಲಿ ನೀನೇದೇವ ॥ ಎಲ್ಲ ಭಾವಿಸಿದಲ್ಲಿ ನೀನೆದೇವ । ಎಲ್ಲೆಡೆಯಲ್ಲಿ ನಿಮ್ಮ ಮಹಾ ಪ್ರಭೆಯೆ ಮಸುಕಿತಾಗಿ ಅಖಂಡೇಶ್ವರ ನಾನು ನೀನೆಂಬುದಕ್ಕೆ ತೆರಹಿಲ್ಲ ದೇವಾ ॥ ಅನಂತ ಸಾಧನಂಗಳ ಕಲಿತು ಪಿಗಾರನು (ಶಿಕ್ಷಕನು) ಅಭ್ಯಾಸವ ಕಲಿಸುವನಲ್ಲದೆ, ಆತ ಮರಳಿ ಅಭ್ಯಾಸವ ಮಾಡುವನೇಅಯ್ಯಾ ॥ ಅಖಂಡಪರಿಪೂರ್ಣ ಪರಬ್ರಹ್ಮವ ನೊಡಗೂಡಿ ಮಹಾಘನಪರ ಶಿವಶರಣನು ಸತ್ಕ್ರಿಯೆಯನಾಚರಿಸಿದಡೆಯೂ

ಘೃತಸೋಂಕದ ರಸನೆಯಂತೆ ನಿರ್ಲೇಪ ನಾಗಿಪ್ಪನಯ್ಯಾ ಅಖಂಡೇಶ್ವರ॥ ಶರಣರಾದಡೆ ಚಿತ್ತದ ಕೊನೆಯ ಕತ್ತಲೆ ಕಳೆಯಬೇಕು ಆತ್ಮನ ಸುತ್ತಿದ ಅಷ್ಟ ಮದಂಗಳ ಕಡಿಯಬೇಕು। ಹರಿದಾಡುವ ಮನವ ಲಿಂಗದಲ್ಲಿ ನಿಕ್ಷೇಪ ಮಾಡಬೇಕು। ನಿತ್ಯಾನಿತ್ಯವನರಿದು ತತ್ವಾತತ್ವಂಗವ್ಯತಿಕರಿಸಿ ಮಹಾಜ್ಞಾನ ಮೊತ್ತದಲ್ಲಿ ಸುಳಿಯಬೇಕು। ಇಂತೀ ಭೇದವನರಿಯದೆ, ತುತ್ತುಸವಿದುಂಡು ಮರ್ತ್ಯದ ವಿಷಯ ಪ್ರಪಂಚ ಸುಖದಲ್ಲಿ ವ್ಯವಹರಿಸಿ ಅಜ್ಞಾನದಲ್ಲಿ ಸಿಕ್ಕಿಸಿಕ್ಕು ಮುಂದುಗಾಣದೆ ಮುಕ್ತಿಯ ಹೊಲಬು ತಪ್ಪಿಹೋಗುವ ವ್ಯರ್ಥ ಜೀವಿಗಳ ಕಂಡು ನಗುತಿರ್ದನಯ್ಯಾ ಅಖಂಡೇಶ್ವರ॥ ಶರಣರು ಸರ್ವರಲ್ಲಿ ದೇವನನ್ನೇ ಕಂಡು ಎಲ್ಲರ ಸೇವೆಯನ್ನು ದೇವಪೂಜೆ ಎಂದು ಮಾಡುವನು. ಇಂಥ ಸತ್ಕ್ರಿಯೆಗಳು ಬಂಧನವಲ್ಲ. ಮುಕ್ತಿಯದಾರಿ ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಇಲ್ಲಿ ಶರಣನ ನಿಲಯವನ್ನು ಕರ್ತವ್ಯ ಕರ್ಮಗಳನ್ನೂ ಚನ್ನಾಗಿ ವಿವರಿಸಿದ್ದಾರೆ. ಇದರಂತೆ ಶ್ರೀ ಷಣ್ಮುಖದೇವರು ಇದ್ದುದರಿಂದಲೇ ಅವರ ಮನದಿಂದ ಇಂಥ ಪರಿಪೂರ್ಣ ವಚನಗಳೇ ಸ್ವಾಭಾವಿಕವಾಗಿ ಹೊರಹೊಮ್ಮುವದು ಸಹಜವದೆ. ಶರಣನು ಪ್ರತಿ ಪದಾರ್ಥದಲ್ಲಿ ದೇವನನ್ನೆ ಕಾಣುವದು 'ಸರ್ವಂ ಖಲ್ವಿದಂ ಬ್ರಹ್ಮಂ' ಎಂಬ ಸ್ಥಿತಿಗೆ ಬರುವನು. ಇದೇ ಶರಣಸ್ಥಲದ ದಿವ್ಯ ನಿಲಯವು.

## ಐಕ್ಯಸ್ಥಲ

ಐಕ್ಯಸ್ಥಲವನ್ನು ಹಿಂದಿನ ಸ್ಥಲಗಳ ಮೇಲಿಂದ ಇವರು ಮುಟ್ಟಿದ್ದಾರೆಂದು ಧಾರಳವಾಗಿ ಹೇಳಲಿಕ್ಕೆ ಆತಂಕವಿಲ್ಲ ಇದು ಕಡೆಯಸ್ಥಲ ಶಿವ ಜೀವರು ಶಿವಪಾರ್ವತಿಯು ಸತ್-ಚಿತ್ ಲಿಂಗಾಂಗಗಳು ಒಂದಾಗುವದು. ಸಾಧಕನು ಏರುತ್ತ ಏರುತ್ತ ತನ್ನ ಕರ್ತವ್ಯ ಕರ್ಮಗಳನ್ನು ನಿಷ್ಠೆಯಿಂದ ಪಾಲಿಸಿ ಅನಂತ ಪಾಲಿಸಿ ಅನಂತ ಪರಮಾತ್ಮನಲ್ಲಿ ಲೀನವಾಗುವ ಸ್ಥಿತಿ ಇದೇ ಮುಕ್ತಾವಸ್ಥೆಯು. ಇಲ್ಲಿ ಸಾಧಕನ ಪರಿಪೂರ್ಣ ಸ್ಥಿತಿಯನ್ನು ಒಂದೇ ಒಂದಾಗುವ ಪರಿಯನ್ನು ಹೇಳಲಾಗಿದೆ. ಇದನ್ನೇ ಎಲ್ಲರೂ ಬಯಸುವರು. ನಿಮ್ಮ ಪೂಜಿಸಿದನೆಂದಡೆ ತನುವಿಲ್ಲಯ್ಯಾ ಎನಗೆ। ಅದೇನು ಕಾರಣನೆಂದಡೆ ಉನ್ನತ ತನುವೆ। ನೀವಾದಿರಾಗಿ। ನಿಮ್ಮ ನೆನೆದಿಹನೆಂದರೆ ಅರುಹಿಲ್ಲವಯ್ಯಾ ಎನಗೆ। ಅದೇನು ಕಾರಣವೆಂದಡೆ ಆ ಅರುವೇ ನೀವಾದಿರಾಗಿ। ಅಖಂಡೇಶ್ವರ ನಿಮ್ಮೊಳಗೆ ನಾನು ಉರಿಗೊಂಡ ಕರ್ಪುರದಂತಿರ್ದೆನಯ್ಯಾ॥ ( ಬ್ರಹ್ಮದಲ್ಲಿ ನೆನಹು

ದೋರಿ ಚಿತ್ತೆನಿಸಿತು ಆ ಚಿತ್ತಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳು। ಆ ಮೂಲ ಚಿತ್ಸ್ವರೂಪವಾದ ಶರಣಂಗೆ ದೇಹ ಪ್ರಾಣ ಆತ್ಮಗಳಾಗಿ ಅಂಗಕ್ಕೆ ಪದಾರ್ಥಂಗಳಾಗಿ ಇರ್ಪವು। ಆ ಪದಾರ್ಥವು ಲಿಂಗ ಮುಖಕ್ಕೆ ಸಮರಸ ವೇಧಿಸಿ। ಆ ಚಿತ್ತು ಚಿದ್ಘನವ ಬೆರೆಯಲು ಮುನ್ನಿನಂತೆ ಐಕ್ಯವಾಯಿತು ಅಖಂಡೇಶ್ವರ!! ಸಗುಣ ನಿರ್ಗುಣನಲ್ಲಿ। ಸಾಕಾರ ನಿರಾಕಾರನಲ್ಲಿ। ಶೂನ್ಯ ನಿಃ ಶೂನ್ಯನಲ್ಲಿ। ಕಾಮಿ ನಿಃಕಾಮಿಯಲ್ಲಿ। ದ್ವೈತಾದ್ವೈತನಲ್ಲಿ। ನೋಡಾ। ಲಿಂಗೈಕ್ಯನು। ಇಂತಿ। ತೆರನಲ್ಲಿ ತೋರುವ ತೋರಿಕೆ ಎಲ್ಲವೂ ತಾನೆಯಾಗಿ। ಇಹ ಪರಗತಿಗೆಡಿಸಿ ಪರಿಪೂರ್ಣ ಬ್ರಹ್ಮವಾಗಿ ತನ್ನ ಕುರುಹಡಗಿಸಿ। ನಿರ್ವಯಲಾಗಿರ್ಪ ನಿಜಲಿಂಗೈಕ್ಯವ ಏನೆಂದುಪಮಿಸಬಹುದಯ್ಯ ಅಖಂಡೇಶ್ವರ ?॥ ಇಲ್ಲಿ ಎಲ್ಲ ಪೂಜೆ ಧ್ಯಾನ ನೆನಹು ನಿಂತುಹೋದ ಸ್ಥಿತಿಯನ್ನು ಬಣ್ಣಿಸಲಾಗಿದೆ. ಸತ್ ಪರಶಿವನಿಂದ ಚಿತ್‌ಪಾರ್ವತಿ ಹೇಗೆ ಹೊರಗೆ ಬಂದು ಸ್ಥಾನಗಳ ಮೂಲಕ ಪುನಃ ಸತ್‌ದಲ್ಲಿ ಚಿತ್ ಲಿಂಗಾಂಗ ಸಮರಸ ಹೇಗಾಯಿತೆಂದು ಒಳ್ಳೇ ಹೃದಯಂಗಮವಾಗಿ ವಚನಕಾರರು ಬಣ್ಣಿಸಿದ್ದಾರೆ. ಲಿಂಗೈಕ್ಯನು ಕುರುಹು ಇಲ್ಲದ ನಿರ್ವಯಲಾಗಿರ್ಪನೆಂದು, ದ್ವಂದ್ವಗಳ ಮಧ್ಯದಲ್ಲಿ ಇರುವನೆಂದು, ಬಹು ವಿಚಿತ್ರವಾಗಿ ಹೇಳಲಾಗಿದೆ. ಶ್ರೀ ಷಣ್ಮುಖದೇವರು ಇದರ ಮೇಲಿಂದ ಎಂಥ ಐಕ್ಯ ಸ್ಥಲಕ್ಕೆ ಏರಿ ಹೋಗಿದ್ದರೆಂದು ಸ್ಪಷ್ಟ ಕಾಣುವದು.

೧೭ನೇ ಶತಮಾನದಲ್ಲಿ ಆಗಿಹೋದ ಇವರು ಏಕಾಕಿಯಾಗಿ ಯೋಗ ಸಾಧನೆಮಾಡಿದಂತೆ ಕಾಣುವದು. ಹಿಂದೆ ೧೨ನೇ ಶತಮಾನದಲ್ಲಿ ಶರಣರ ತಂಡವೇ ಇತ್ತು. ಒಬ್ಬರಿಗೊಬ್ಬರು ನೆರವಾಗುತ್ತಿದ್ದರು. ಅದೇ ಅವರಿಗೆ ಸತ್ಸಂಗವಾಗಿತ್ತು. ಇತ್ತಿತ್ತಲಾಗಿ ಈ ಶಿವಶರಣರು ಆಗಿದ್ದು ಅವರಿಗೆ ವಿಶೇಷ ಬಹುಜನ ಶರಣರ ಸಂಗವಿಲ್ಲೆಂದು ತೋರುವದು ಈ ಪ್ರಕಾರ ಸಾಧನಮಾಡಿ ಸರ್ವ ತರದ ಅನುಭವಗಳನ್ನು ಸರ್ವತರದ ಸಾಧನೆಗಳನ್ನು ಸರ್ವಯೋಗಗಳನ್ನು ಸಮರಸಮಾಡಿ ಶಿವಯೋಗವನ್ನು ಸಾಧಿಸಿದ್ದರು. ಇವರು ಪಕ್ಕಾ ವಿರಕ್ತರು ಅದರಂತೆ ಇವರಿಗೆ ಹೆಚ್ಚಾಗಿ ಶಿವಯೋಗದಲ್ಲಿ ಅನುಭವವಾಗಿರಲಿಕ್ಕೇಬೇಕು ಇವರ ವಚನ ಗ್ರಂಥಕ್ಕೆ ಅಖಂಡೇಶ್ವರನ ವಚನವೆಂದುಹೆಸರು. ಇದರಿಂದ ಇವರ ನಿರಭಿಮಾನ ನಿರಹಂಕಾರಗಳು ವ್ಯಕ್ತವಾಗುವವು. ಕೀರ್ತಿಗೂ ಕೂಡ ಇವರು ಆಶೆ ತೋರಿರಲಿಲ್ಲೆಂದು ಧಾರಾಳವಾಗಿ ಹೇಳಬಹುದು. ಇವರು ನಿಜವಾಗಿ ಗುರುವರ್ಗದವರು ಜಾತಿಯಿಂದ

ಗುರುಗಳಾಗಲಿಲ್ಲ ಜ್ಞಾನದಿಂದ ಗುರುಗಳೆನಿಸಿಕೊಂಡರು. ಆದರೂ ತಮ್ಮ ಷ್ಟಕ್ಕೆ ತಾವೇ ಮುಕ್ತರಾಗಲಿಲ್ಲ. ಅನ್ಯರೂ ಮುಕ್ತರಾಗಲಿ ಎಂದು ಬಗೆದು ವಚನಗಳನ್ನು ಬರೆದರು ಅಲ್ಲದೆ ಸಮಾಧಿಸ್ಥರಾಗಿ ಸೂಕ್ಷ್ಮ ಶರೀರದಿಂದ ಜನರ ಉದ್ಧಾರವನ್ನು ಕೂಡ ಮಾಡುತ್ತ ಲಿಂಗೈಕ್ಯರಾಗಿದ್ದಾರೆ. ಗುರುಗಳು ಜಂಗಮರು ಆಗಬೇಕೆನ್ನುವವರು ಇವರನ್ನು ಆದರ್ಶವಾಗಿಟ್ಟುಕೊಂಡು ಸಾಯೋಗ್ಯ ಸಾಧನಮಾಡಿ ಉಚ್ಚಸ್ಥಿತಿಯನ್ನು ಸಂಪಾದಿಸಿ ಜೀವನ್ಮುಕ್ತ ಶರಣರಾಗಬೇಕು ಅಂದರೆ ನಿಜವಾದ ಗುರುಗಳಾಗಲಿಕ್ಕೆ ಅಡ್ಡಿ ಇಲ್ಲ. ಇಂಥ ವರಿಗೆ ಮಂಟಪಗಳಲ್ಲಿ ಕೂಡ್ರಿಸಿ ಬೇಕಾದಂತೆ ಪೂಜಿಸಿದರೆ ಒಳ್ಳೇ ಫಲ ಪ್ರಾಪ್ತಿಯಾಗುವದರಲ್ಲಿ ಸಂದೇಹವೇ ಇಲ್ಲ.



## ಓ ಕನ್ನಡಿಗ ನಿನ್ನ ಕರ್ತವ್ಯವ ಕುರಿತು ಆಲೋಚಿಸು.

(ಲೇ.:—ಸಾಹಿತ್ಯರತ್ನ ಶ್ರೀ. ಷ. ಬ್ರ. ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳು ಬೃಹನ್ಮಠ—ಗುರುವಿನಪುರ.)

---

ಕಾಲಗತಿಯಿಂದಾಗಿ, ಕರ್ತವ್ಯಪಥದಲ್ಲಿ ಎಡವಿಬಿದ್ದು ಸಜ್ಜಾದ ಆತ್ಮಾಭಿಮಾನವನ್ನು ಮೊದಲು ಪುನರುಜ್ಜೀವನಗೊಳಿಸಲು ಹವಣಿಸಬೇಕು. "ನಮ್ಮ ನಾಡು" ಎಂಬ ಅಭಿಮಾನವಿದ್ದರೆ ಸಾಲದು. ನಮ್ಮ ನಾಡಿಗೆ ನಮ್ಮಿಂದಾಗಿ ಏನಾಗಬೇಕು ಎಂಬ ಅರಿವಿಲ್ಲದೆ ನಾವು ಪ್ರಜ್ಞಾಹೀನರಂತಾಗಿರುವೆವು. ಪ್ರಾಚೀನ ಇತಿಹಾಸವನ್ನು ಕಂಡು ಹೆಮ್ಮೆಗೊಂಡು ಕುಳಿತರೆ ಸಾಲದು. ಗತವೈಭವವ ನೆನೆದು ಮುಂದೂ ನಾವು ಹೀಗಾಗಬೇಕು ಎಂಬ ಸತ್ಸ್ಫೂರ್ತಿಯನ್ನು ಕಳೆದು ಆತ್ಮವಿಶ್ವಾಸದಿಂದ ಕಾರ್ಯತತ್ಪರರಾಗಬೇಕು. ಪ್ರತಿಯೊಬ್ಬ ಕನ್ನಡಿಗನೂ ತನ್ನ ನಾಡಿಗೆ, ನುಡಿಗೆ ಸಲ್ಲಿಸಬೇಕಾದ ಸೇವೆಯು ಇದ್ದೇ ಇರುವಾಗ, ಆ ಸೇವೆ ಮಾಡಲು ಪ್ರವರ್ತರಾಗದೆ ತಟಸ್ಥರಾಗಿದ್ದಲ್ಲಿ ಅದು ಗುರುತರವಾದ ಅಪರಾಧವೆನಿಸುತ್ತದೆ. ನಮ್ಮ ನಾಡು, ಕೃತವಿಕೃತವಾಗಿದೆ ಅಯ್ಯೋ— ಎಂದು ಪರಿತಪಿಸುವುದರಿಂದ ಬಂದ ಲಾಭವೇನು? ಅದಕ್ಕೆ• ರಚನಾತ್ಮಕವಾದ ಅಂಜನದ ಲೇಪನವಾಗಬೇಕು. "ಏಕೀಕರಣ"ದ

ಅರ್ಥವನ್ನೇ ಅರಿಯದ ಎಷ್ಟೋ ಕನ್ನಡ ಬಾಂಧವರಿದ್ದಾರೆ. ಅರಿತಿರುವ ಹಲಕೆಲವರು ಅಪಾರ್ಥ ಕಲ್ಪಿಸುವವರಾಗಿದ್ದಾರೆ. ಇವರಿಗೆಲ್ಲ ವಿವೇಚನೆ ಕೊಡಬಲ್ಲ ಹಾಗೂ ಹುರಿದುಂಬಿಸುವವರಾರು? "ನನ್ನ-ನಾಡು; ನನ್ನ ಭಾಷೆ-ನನ್ನ ಕಾರ್ಯ" ಎಂಬ ಉಜ್ವಲ ಭಾವನೆಯುಳ್ಳ ನಾಡಿನ ಹಿತೈಷಿಗಳು ಮುಂದೆ ಬರಬೇಕು.

**ಆಧುನಿಕ ವಿದ್ಯೆ:—** ಇಂದು ಕಾಲೇಜು ಮೆಟ್ಟಿಲನ್ನು ಹತ್ತಿ ಇಳಿದು ಬಂದರೆ ಪುರುಷ ವಿದ್ಯಾವಂತನೆನಿಸುತ್ತಾನೆ. ಅದರಿಂದ ಪ್ರಾಪ್ತವಾದ ಜ್ಞಾನವು ನಾಡಿನ-ನುಡಿಯ ಏಳಿಗೆಗೆ ಎಷ್ಟರಮಟ್ಟಿಗೆ ಸಹಾಯ ಮಾಡಬಲ್ಲುದು ಎಂಬುದನ್ನು ವಿವೇಚಿಸುವ ಬದಲು, ಊಹಿಸುವದು ಒಳಿತಾಗಿ ಕಾಣುತ್ತದೆ! ಆಧುನಿಕ ವಿದ್ಯೆಪಡೆದ ಇಂದಿನ ಯುವಕ ತಾನು ಸುಸಂಸ್ಕೃತನೆಂದು ತನಗೆ ತಾನೇ ಹೆಮ್ಮೆಪಟ್ಟುಕೊಳ್ಳುತ್ತಾನೆ. ಪಾಶ್ಚಾತ್ಯ ರೀತಿನೀತಿಗೊಪ್ಪುವಂತಹ ಉಡಿಗೆ ತೊಡಿಗೆಗಳಿಂದ ತನ್ನನ್ನು ಅಲಂಕರಿಸಿಕೊಳ್ಳುತ್ತಾನೆ ಯಾರಲ್ಲಿಯೂ ನಿರರ್ಗಳವಾಗಿ (ತಪ್ಪೋ ಒಪ್ಪೋ,) ಇಂಗ್ಲೀಷವನ್ನು ಮಾತನಾಡುತ್ತಾನೆ. ರಾಜಕೀಯ, ಸಾಮಾಜಿಕ ವಿಷಯಗಳ ಬಗ್ಗೆ ಚೇತನವಿರುವಷ್ಟು ಚರ್ಚಿಸುತ್ತಾನೆ. ಹಳ್ಳಿಯ ತನ್ನ ಬಾಂಧವರನ್ನು ಕಂಡು "ನಾನ್ಸೆನ್ಸ್" ಎನ್ನುತ್ತಾನೆ. ಇದಕ್ಕಿಂತಲೂ ಇನ್ನೇನುಬೇಕು? ಇಷ್ಟೆಲ್ಲ ಗುಣಗಳಿದ್ದವನು ಸುಧಾರಿಸಿದಂತಾಗಲಿಲ್ಲವೆ? ಪರಕೀಯ ಸಂಸ್ಕೃತಿಗೆ ಮೋಹಕಿದ್ದು ತನ್ನ ಸಂಸ್ಕೃತಿಯು, ತನ್ನ ಮಾತೃಭಾಷೆಯಿಂದ ದೂರ ಜಿಗಿದುನಿಂತಿರುವನೆಂದು-ತನ್ನ ಸಂಸ್ಕೃತಿಯ ಅರಿವಿಲ್ಲದ ಅಜ್ಞಾನಿಯೆಂದಾಗ—ಮನಗಂಡಾಗ ಆತ ಅದೆಂತಹ ವಿದ್ಯಾವಂತ! ಇನ್ನೆಷ್ಟುಮಟ್ಟಿಗೆ ಸುಧಾರಣೆ ಹೊಂದಿದ್ದಾನು! ನಾಡಿನ ಸಂಸ್ಕೃತಿಯನ್ನು ಪುನರಜ್ಜೀವನಗೊಳಿಸಲು ಟೊಂಕಕಟ್ಟಿ ದುಡಿಯುವ ಸತ್ಯ ಮನೋಭಾವವು ಯಾರಿಗಿದೆಯೋ ಅವರೇ ಜ್ಞಾನಿಗಳು, ಯಾವವಿದ್ಯಾವಂತರು ಅಂತಹ ಜ್ಞಾನವನ್ನೊದಗಿಸುವ ವಿದ್ಯೆಯೇ ವಾಸ್ತವಿಕ ವಿದ್ಯೆಯೆನಿಸುತ್ತದೆ. ನಾಡವರಲ್ಲಿ ಪರಸ್ಪರ ಸಹಕಾರವಿರಬೇಕು. ಜ್ಞಾನಿ-ಅಜ್ಞಾನಿಯೆಂಬ ಭೇದ ಭಾವಕ್ಕೆಡೆಯಿರಬಾರದು. ಜ್ಞಾನಿಗಳಾದವರು ತಮ್ಮರಿವಿನ ಪರಿಚಯುವನು. ಅಜ್ಞಾನಿಗಳಿಗೆ ಮಾಡಿಕೊಡಬೇಕು. ಅಜ್ಞಾನಿಗಳು ಅದರ ಪರಿಚಯುವನ್ನು ಪಡೆಯಬೇಕು. ಆಗ ವಿದ್ಯೆಯ ನಿಜವಾದ ಉದ್ದೇಶವು ಸಫಲವಾಗುತ್ತದೆ. ವಿದ್ಯಾವಂತ ಕೃತಕೃತ್ಯನೆನಿಸುತ್ತಾನೆ.

ಆಧುನಿಕ ವಿದ್ಯೆಯು ಆದೇಕೆ ನಮ್ಮಲ್ಲಿ ಅಂತಹ ಭಾವನೆಯನ್ನು ಮೂಡಿಸುತ್ತದೆ? ಪರಕೀಯರ ಆಡಳಿತ ಪ್ರಭಾವದಿಂದ ಇಂಗ್ಲೀಷು ರಾಜ ಭಾಷೆಯೆನಿಸಿತು. ದೀರ್ಘಕಾಲ ಇಂಗ್ಲೀಷರು ರಾಜ್ಯಭಾರ ಮಾಡಿದುದ ರಿಂದ ಅವರ ಸಂಸ್ಕೃತಿಯು ನಮ್ಮಲ್ಲಿ ಅನಾಯಾಸವಾಗಿ ಕಲೆಹಾಕಲ್ಪಿ ಸಿತು. ಹೊಸದರ ಹುಚ್ಚು ಯಾರನ್ನೂ ಬಿಟ್ಟಿದ್ದಲ್ಲ. ಅದರ ಅನುಕರಣ ವನ್ನು ಮಾಡುವಾಗ ನಮ್ಮ ನಾಡಿನ ಸಂಸ್ಕೃತಿಗೆ ಕುಠಾರ ಘಾತವಾಗು ತ್ತದೆಯೆಂದು ಯಾರಿಗೂ ತೋರಿಬರಲಿಲ್ಲ. ಅದರ ಮೋಹಕ ಆಕರ್ಷಣೆಗೆ ಮಾರುಹೋದ ಜನ ತನ್ನ ಸಂಸ್ಕೃತಿಯ ರಕ್ಷಕರಾಗುವ ಬದಲು ರಾಕ್ಷಸ ರಾದರು, ಭಕ್ಷಕರಾದರು. ಆ ಸಂಸ್ಕೃತಿಯ ಸಂಘಾತದಿಂದ ವಿದ್ಯಾಪ್ರಗತಿ ಯನ್ನೇನೋ ಹೊಂದಿತು. ಆದರೆ ಅದು ನಮ್ಮ ನಾಡಿನ ಸಂಸ್ಕೃತಿಯನ್ನು ಧ್ವಂಸಮಾಡುವುದಕ್ಕಾಗಿ ಅವತಾರ ಮಾಡಿತು. ಜನರಿಗೆ ತಮ್ಮ ಕರ್ತವ್ಯದ ಮರವೆಯಾಗತೊಡಗಿತು. ವಿಲಾಸೀ ಜೀವನವು ಪ್ರಿಯವೆನಿಸಿತು, ವಿಹಿತ ವಾಯಿತು. ನಾಗರೀಕತೆಯೆಂದರೆ ಪರದೇಶೀಯರ ಅನುಕರಣವೆಂಬ ಭಾವ ಉದಯಿಸಿತು. ಎಲ್ಲೆಲ್ಲೂ ಇಂಗ್ಲೀಷ್ ಉಪಯೋಗಿಸುವುದೇ ಪ್ಯಾಶನ್ ಎನಿಸಿತು. ಮಕ್ಕಳುಗಳಿಗೆ ಬೇಬಿ, ಸ್ವೀಟೀ, ಕರ್ಲೀ ಎಂಬ ನಾಮಕರಣ ವಾಯಿತು. ಅಭ್ಯಾಗತರಿಗೆ ನಮಸ್ಕಾರ ಹೋಗಿ ಗುಡ್-ಮಾರ್ನಿಂಗ್, ಡೇ, ನೈಟ್ ಬಂತು. ಪ್ರಾಚೀನ ಭಾರತೀಯರ ಸುಸಂಸ್ಕೃತಿಯೆತ್ತ! ಇಂದಿನವರ ನವೀನ-ಹಾಗೂ ಸುಧಾರಿಸಿದ ಸಂಸ್ಕೃತಿಯೆತ್ತ! ಎಲ್ಲಿಂದ ಎಲ್ಲಿಂದ ಎಲ್ಲಿಗೆ ಎಷ್ಟು ಅಂತರ!

## ಶಿಕ್ಷಣವು ಎಂತಿರಬೇಕು?

ನಮಗೆ ನಮ್ಮ ಉತ್ತರದಾಯಿತ್ವದ ಅರಿವನ್ನುಂಟುಮಾಡಿ ಅದನ್ನು ಪೂರ್ಣಗೊಳಿಸುವ ತಾಳ್ಮೆಯನ್ನು ಉಂಟುಮಾಡುವಂಥ ಶಿಕ್ಷಣವು ದೊರೆಯ ಬೇಕು. ಯಾವ ಚಳವಳಿಗೂ ಮೊದಲು ಶಿಕ್ಷಣವನ್ನು ಪಡೆದಿರಲೇಬೇಕು. ಚಳುವಳಿಯು ಚೇತನವನ್ನು ಹೊಡೆದೆಬ್ಬಿಸಿದರೂ ತಾಳ್ಮೆಯು ಶಿಕ್ಷಣದಿಂದಲೇ ಉಂಟಾಗುತ್ತದೆ ಏಕೆಂದರೆ, ಚಳುವಳಿಯಿಂದ ಜಾಗ್ರತವಾದ ಚೇತನವು ಸಾಮಾನ್ಯವಾಗಿ ಕ್ಷಣಿಕ ಆವೇಶವನ್ನು ಪಡೆದಿರುತ್ತದೆ. ಶಿಕ್ಷಣವಿಲ್ಲದೆ ಅದರ ಸಂಸ್ಕಾರವು ಸ್ಥಿರರೂಪದಿಂದ ನಮ್ಮ ನೆನಹಿನಲ್ಲಿ ನೆಲಸಲಾರದು. ನಮ್ಮ ದೇಶದಲ್ಲಿ ಅಧಿಕಾಂಶರು ಅಶಿಕ್ಷಿತರು, ಏಕೆ ನಿರಕ್ಷರಿಗಳೆಂದರೂ ಸಲ್ಲು

ವುದು. ಚಳುವಳಿಯಿಂದ ಪ್ರಗತಿಯುಂಟಾಗುತ್ತದೆ. ಆ ಪ್ರಗತಿಯ ದಿಕ್ಕಿಗಿಡುವ ಮೊದಲ ಹೆಜ್ಜೆಯೆಂದರೆ ಶಿಕ್ಷಣವನ್ನು ಹೆಚ್ಚಿಸುವುದು. ಉಚಿತ ಶಿಕ್ಷಣವನ್ನು ಪಡೆವಾಗಲೇ ನಿಜವಾದ ಸಭ್ಯತೆಯ ಕಲ್ಪನೆಯಾಗುತ್ತದೆ. ತಮ್ಮ ಜನ್ಮಸಿದ್ಧವಾದ ಅಧಿಕಾರ-ಸ್ವಾತಂತ್ರ್ಯಗಳ ಅನುಭವವನ್ನುಂಟು ಮಾಡಿ ಅದರ ರಕ್ಷಣೆಗಾಗಿ ಹೋರಾಡುವ ಲವಲವಿಕೆಯುಂಟಾಗುತ್ತದೆ. ನಾಡಿಗೆ ಸಲ್ಲಿಸಬೇಕಾದ-ತನ್ನತನದ ಜ್ಞಾನೋದಯವಾಗುತ್ತದೆ.

ವಿವೇಕವು ಮನುಷ್ಯನ ಸ್ವಾಭಾವಿಕ ಗುಣವಾಗಿದೆ, ಅವನು ತನ್ನ ತರ್ಕಬುದ್ಧಿಯಿಂದಾಗಿ ಪ್ರತಿಯೊಂದು ವಿಷಯದ ಯಥಾರ್ಥವನ್ನರಿಯಲು ಅಪೇಕ್ಷಿಸುತ್ತಾನೆ. ಅನ್ವೇಷಣ, ಅವಿಷ್ಕಾರಕ್ಕಾಗಿ ಸದಾ ಹಾತೊರೆಯುತ್ತಾನೆ. ಮನುಷ್ಯನಲ್ಲಿ ಸ್ವಾಭಾವಿಕವಾಗಿ ನೆಲಸಿರುವ ಅನೇಕ ಗುಣಗಳು ವಿಕಸಿತವಾಗಬೇಕಾದರೆ ಶಿಕ್ಷಣವು ಅತ್ಯವಶ್ಯಕ. ಅದರಿಂದ ಮನುಷ್ಯನಲ್ಲಿ ಹುದುಗಿರುವ ಗುಣಗಳ ಸಂಕೇತ ದೊರೆಯುತ್ತದೆ. ಅದು ದೊರೆತಾಗಲೇ ಶಿಕ್ಷಣದ ಸಫಲತೆಯುಂಟಾಗುವುದು. ಆದುದರಿಂದ ಶಿಕ್ಷಣ ಪ್ರಣಾಲಿಯು ಸುಧಾರಿಸಬೇಕು. ಪ್ರಕೃತಸಿಗುತ್ತಿರುವ ಶಿಕ್ಷಣವು ಜ್ಞಾನವನ್ನು ಬೆಳಗಿಸದೆ ಇದ್ದ ಅರಿವಿಗೆ ಬೂದಿಯನ್ನು ಮುಚ್ಚುತ್ತದೆ. ಈಗ ಮೈಸೂರು ಸರಕಾರ ವಿದ್ಯಾ ಸುಧಾರಣೆ ಕೈಕೊಂಡಿದೆ. ಇದೇ ರೀತಿ ಇತರ ಪ್ರಾಂತೀಯ ಸರಕಾರಗಳು ಮುಂದೆಬಂದು ಸಮಗ್ರ ಭಾರತದಲ್ಲಿ-ಜನ-ಜೀವನಕ್ಕೆ ಬೇಕಾದ ಜ್ಞಾನ ಹೊದಗಿಸಿದರೆ ಜನತೆಯ ಅಜ್ಞಾನ ನಾಶವಾಗುವುದರಲ್ಲಿ ಸಂಶಯ ವಿಲ್ಲ. ) ಇಂಗ್ಲೀಷಿಗೆ ಪ್ರಾಶಸ್ತ್ಯವೇ ಹೊರತು, ಕಸ್ತೂರಿಯಂತಹ ಕನ್ನಡವು ಕನ್ನಡ ನಾಡಿನಲ್ಲಿ, ಕನ್ನಡಿಗರ ಮನೆಯಲ್ಲಿ ಕನ್ನಡಿಗರಿಂದ ಕಡೆಗಣಿಸಲ್ಪಡುತ್ತಿದೆ. ಇದನ್ನು ನೆನೆದರೆ ಅತ್ಯಂತ ದುಃಖವೂ ಖೇದವೂ ಉಂಟಾಗುತ್ತದೆ. ಹಾಯ್ ! ಭುವನೇಶ್ವರಿ ನಿನ್ನ ಮಕ್ಕಳಿಗೆ ಸರಿಯಾದ ಬುದ್ಧಿಗಲಿಸಲಾರೆಯಾ ?

ಕನ್ನಡನಾಡಿನ ಇತಿಹಾಸದ ಹಾಳೆಗಳನ್ನು ಮಗುಚಿದರೆ ನಮಗೆ ನಮ್ಮ ನಾಡಿನ ಗತವೈಭವದ ಹಿರಿಮೆ ಪರಿಚಯವಾಗುತ್ತದೆ. ನಮ್ಮದು ಅತಿ ಪುರಾತನದ ನಾಡು "ಕರ್ನಾಟಕ" ಎಂದರೆ ಅತಿ ಪುರಾತನವಾದುದು ಎಂದು ಅರವರಲ್ಲಿ ಪ್ರಚಾರದ ಮಾತಿದೆ. ಅಂತಹ ನಮ್ಮನಾಡಿನ ಗೌರವವನ್ನು ಕಾಪಾಡುವುದೇ ನಮ್ಮ ಆದ್ಯಕರ್ತವ್ಯವಾಗಿರುವಾಗ-ಕೇವಲ ಸುಧಾರಣೆಯ ಸೋಗಿನಿಂದ ಅವನ್ನು ಇನ್ನೂ ಅದಃಪತನಕ್ಕೆ ಗುರಿಪಡಿಸು

ವುದು ಕ್ಷಮಿಸಲಾಗದಂತಹ ದ್ರೋಹವೆನಿಸುವುದು. ಯಾವ ಶಿಕ್ಷಣದಿಂದ ನಮ್ಮ ನಾಡಿನ ಪ್ರಾಚೀನ ಸಂಸ್ಕೃತಿಯನ್ನು ಪುನರುಜ್ಜೀವಿಸಿ, ಅದನ್ನು ಶಾಶ್ವತಗೊಳಿಸಿ ನಮ್ಮ ಕರ್ನಾಟಕತ್ವವನ್ನು ಮೆರೆಸಬಹುದೋ ಅಂತಹ ಸಾತ್ವಿಕ ಜ್ಞಾನವನ್ನು ಬೋಧಿಸುವ ಶಿಕ್ಷಣವು ಪ್ರಕೃತ ನಮಗೆ ಬೇಕಾಗಿದೆ.

## ನಾಡಿನ ಸಂಪತ್ತು ಅಭಿವೃದ್ಧಿಯಾಗಬೇಕು

ಅತ್ಯಂತ ಸಂಪತ್ಸಮೃದ್ಧವಾಗಿದ್ದ ನಮ್ಮ ನಾಡಿಗೆ ಇಂದು ರಾಹು ಗ್ರಾಸವಾಗಿದೆ. ಕಾರಣ ಪರಕೀಯರು ನಮ್ಮ ದೇಶದ ಆಡಳಿತ ನಡೆಸುತ್ತಿದ್ದಾಗ ಅವರ ಆಡಳಿತಕ್ಕನುಕೂಲವಾಗುವಂತೆ ಒಂದಾಗಿದ್ದ ಕರ್ನಾಟಕ ಹರಿದು ಹಂಚಿ ಹೋಯಿತು. ನಾಡಿನ ಹೇರಳವಾದ ಸಂಪತ್ತು ಆಯಾಯ ಭಾಗಗಳಿಗೆ ಸೇರಿತಲ್ಲದೆ ಸಂಪತ್ತು ಅಭಿವೃದ್ಧಿಯಾಗುವ ಯಾವ ಯೋಜನೆಯನ್ನೂ ಕರ್ನಾಟಕದ ಪಾಲುದಾರರು ಕೈಕೊಳ್ಳಲಿಲ್ಲ. ಈ ಬಗೆಗೆ ಆಲೋಚಿಸುವವರಾರು ? ಒಟ್ಟಾರೆ ಹೇಳುವುದಾದರೆ ಪರಕೀಯರ ಆಡಳಿತಾನುಕ್ರಮದಿಂದ ಕರ್ನಾಟಕ ಸಂಪತ್ತು ಕುಂಠಿತವಾಯಿತು. ಈಗ ನಮ್ಮವರೆ ನಮ್ಮ ದೇಶದ ಆಡಳಿತ ನಡೆಸುತ್ತಿರುವಾಗ ದೇಶದ ಹಿತದ ಕಡೆಗೆ ಸರ್ವರೂ ಗಮನವೀಯುವದಲ್ಲದೆ ಕಾರ್ಯತತ್ಪರರಾಗಬೇಕು. ವಿದ್ಯೆಯಂತೆಯೇ ಸಂಪತ್ತೂ ನಾಡಿನ ಹೇಳಿಗೆಗೆ ಸಹಕಾರಿಯಾಗುತ್ತದೆ. ಸಂಪತ್ತು ಹೆಚ್ಚಬೇಕಾದರೆ ವ್ಯಾಪಾರೋದ್ಯಮಗಳು ಹೆಚ್ಚಬೇಕು. ಕೈಗಾರಿಕೆ, ಚಿತ್ರಕಲೆಗಳಿಗೆ ಹೆಚ್ಚಿನ ಪ್ರೋತ್ಸಾಹ ದೊರೆಯಬೇಕು. ಕುಟುಂಬಕ್ಕೆ ಬೇಕಾಗುವ ಕೆಲವು ಸಾಮಾನ್ಯ ವಸ್ತುಗಳನ್ನು ಕುಟುಂಬದವರೇ ತಯಾರಿಸಿಕೊಳ್ಳಬೇಕು. ಅದರಿಂದ ಕೈಗಾರಿಕೆಯು ಮನೆಮನೆಯಲ್ಲಿ ಅಭಿವೃದ್ಧಿಯಾಗಿ ಕುಟುಂಬದ ಸಂಪತ್ತು ಹೆಚ್ಚುವುದು. ಕುಟುಂಬದ ಸಂಪತ್ತೇ ನಾಡಿನ ಸಂಪತ್ತು. ನಮ್ಮ ನಾಡಿನಲ್ಲಿ ಸಂಪತ್ತು ಇಲ್ಲವೆಂದಲ್ಲ. ವಾರ್ಷಿಕ ಸುಮಾರು ೨೦ಕೋಟಿ ರೂಪಾಯಿ ಉತ್ಪತ್ತಿಯಾಗುತ್ತಿದೆ. ಆದರದು ಹಿಂದೆಯೇ ತಿಳಿಸಿದಂತೆ ನಾಡಿನ ಉಪಯೋಗಕ್ಕೆ-ಅಭಿವೃದ್ಧಿಗೆ ಸಹಾಯಕವಾಗದೆ ಆಯ-ವ್ಯಯದ ಪಟ್ಟಿಯಲ್ಲಿ ಲೀನವಾಗುತ್ತಿದೆ. ಕನ್ನಡಿಗರು ಡಾಂಭಿಕ ತನಕ್ಕೆ ಮರುಳಾಗಿ ಹೇರಳವಾಗಿ ಹಣ ವ್ಯಯಮಾಡುವುದನ್ನು ನಿಲ್ಲಿಸಬೇಕು. ಪಾಶ್ಚಾತ್ತ ಜೀವನಕ್ರಮವನ್ನು ಅನುಸರಿಸುತ್ತಿದ್ದರೆ ನಿಶ್ಚಯವಾಗಿಯೂ ಅದನ್ನು ಬಿಟ್ಟು ನಿಜವಾದ ಸುಧಾರಣೆಯನ್ನು ಮಾಡಿಕೊಳ್ಳಬೇಕು. ತಮ್ಮ ಹಣದಿಂದ ನಾಡನ್ನು ಸಮೃದ್ಧ

ಗೊಳಿಸಲು ಸಹಾಯಕರಾಗಬೇಕು. ಹಣಕಾಯುವ ಕಾವಲುಗಾರರಾಗದೆ ತಮ್ಮ ಜ್ಞಾನ-ಹಣ, ದೇಶದ ಸರ್ವತೋಮುಖ ಅಭಿವೃದಿಗೆ ವ್ಯಯಮಾಡುವ ಉದಾರ ಗುಣ ಮಾಡಬೇಕು.

ಜಡವಾದ ಸಂಪತ್ತು ಚೇತನಗೊಂಡಾಗ ನಾಡಿನಲ್ಲಿ ಬಳಕೆಗೆ ಬರುವುದು. ಹಣವು ಹೇರಳವಾಗಿ ಬಳಕೆಯಲ್ಲಿದ್ದರೆ ವ್ಯಾಪಾರೋದ್ಯಮಗಳು ತನ್ನಷ್ಟಕ್ಕೆ ತಾವೇ ಹೆಚ್ಚುವವು. ಆದರಿಂದ ಹಣವು ಅಭಿವೃದ್ಧಿಗೊಳ್ಳುವುದು. ಕಲೆ, ಕೈಗಾರಿಕೆಗಳಿಗೆ ಪ್ರೋತ್ಸಾಹ ದೊರೆಯುವುದು. ನಮ್ಮಲ್ಲಿ ಅನೇಕ ಕಲಾಕಾರರಿರುತ್ತ ಯೋಗ್ಯ ಪ್ರೋತ್ಸಾಹವಿಲ್ಲದೆ ಪರರಾಷ್ಟ್ರಗಳಿಗೆ ಶರಣುಹೋಗಿ-ಇಲ್ಲವೆ ತಮ್ಮಲ್ಲಿ ಹುದುಗಿರುವ ಕಲೆಯನ್ನು ಚೇತನಗೊಳಿಸದೆ ಜಡಕಾರಿಗಳಾಗಿ ಕಾಲನ ಗರ್ಭದಲ್ಲಿ ಲೀನರಾಗುತ್ತಿರುವುದನ್ನು ನಾವು ಕಣ್ಣಾರ ಕಾಣುತ್ತಿರುವೆವು. ನಮ್ಮ ನಾಡಿನ ಕಲಾಕಾರರ ಪರಿಚಯ ಕೂಡ ನಮಗಾಗದಂತೆ ನಮ್ಮೀ ಸುಷುಪ್ತಾವಸ್ಥೆಯು ಕಡೆದಿರಿಪದೆ. ಪರದೇಶೀ ಬೆರಗುಗೊಳಿಸುವ ವಸ್ತುಗಳನ್ನು ಉಪಯೋಗಿಸುವುದರಿಂದ, ಯಂತ್ರ ಯುಗದಲ್ಲಿ ಮೊದಲೇ ಹಿಂದೆಬಿದ್ದ ನಮ್ಮ ದೇಶೀಯ ಕೈಗಾರಿಕೆಗಳು ಸಂಪೂರ್ಣ ನಷ್ಟಹೊಂದಬಹುದು. ಸುಧಾರಣಾಯುಗದ ಆದಿಯಲ್ಲಿ ಪ್ರಸಿದ್ಧರಾದವರು ಗ್ರೀಕರು. ಅಂತಹವರೂ ಕೂಡ ಎರಡನೆ ಶತಮಾನದಲ್ಲಿ ಕರ್ನಾಟಕದೊಂದಿಗೆ ವ್ಯಾಪಾರ ವಹಿವಾಟುಗಳನ್ನು ನಡೆಸಿದ್ದರಂತೆ. ಅಂದಮೇಲೆ ಕರ್ನಾಟಕದ ಹಿರಿಮೆ, ವ್ಯಾಪಾರೋಧ್ಯಮದ ಮುಂದುಗಾರಿಕೆ, ಓದುಗರಿಗೆ ವೇಧ್ಯವಾಗದಿರದು. ಅಷ್ಟೇಅಲ್ಲ; ಅಲೆಗ್ಝಾಂಡ್ರಿಯಾದಲ್ಲಿ ಕನ್ನಡಿಗರ ವಸಾಹತೂ ಕೂಡ ಇದ್ದಿರಬಹುದೆಂದು ನಮ್ಮಲ್ಲಿಯ ಪ್ರಸಿದ್ಧ ಐತಿಹಾಸಿಕ ಸಂಶೋಧಕರಾದ ಶ್ರೀಯುತ ಗೋವಿಂದ ಪೈಗಳವರು ಧೈರ್ಯದಿಂದ ಹೇಳಿರುವುದು ನಮಗೆ ಹೆಮ್ಮೆಯ ಸಂಗತಿಯಲ್ಲವೆ?

ನಮ್ಮ ನಾಡಿನ ವ್ಯಾಪಾರೋದ್ಯಮಗಳು ಹೆಚ್ಚಿ ತನ್ಮೂಲಕ ನಾಡು ಶಾಲೆ, ಸೌಹಾರ್ದದಿಂದ ಬಹುಕಾಲ ಬಾಳುವಂತೆ ನಮ್ಮ ನಾಡವರು ಹೆಚ್ಚಿಗೆ ಗಮನವೀಯಬೇಕು. ಪ್ರತಿಯೊಂದು ವಿಷಯದಲ್ಲೂ ಕರ್ನಾಟಕತ್ವಕ್ಕೆ ಆತಂಕಬಾರದಂತೆ ಪ್ರಯತ್ನಿಸಬೇಕು. ವಿದ್ಯಾವಂತರಾದ ಕನ್ನಡಿಗರು ನಾಡು-ನುಡಿಯ ವಿಶ್ವಾಸದಿಂದ ತಮ್ಮ ನಾಡಿನ ಇಂದಿನ ದುಸ್ಥಿ

ತಿಯ ಕುರಿತು ಭಾಷಣ, ಲೇಖನಾದಿಗಳ ದ್ವಾರ ಕನ್ನಡಿಗರನ್ನು ಹುರಿದುಂಬಿಸಿ ಆ ಮೂಲಕ ನಾಡಿನ ಒಕ್ಕೂಟಕ್ಕೆ ನೆರವು ನೀಡುವಂತೆ ಪ್ರೇರೇಪಿಸಬೇಕು.

**ಸ್ತ್ರೀಯ ಕರ್ತವ್ಯಃ**— ಪ್ರಪಂಚದಲ್ಲಿ ಇಂದಿನತನಕ ಆಗಿಹೋದ, ಇಂದಿಗೂ ಇರುವ, ಮುಂದೆಯೂ ಆಗಲಿರುವ ಪ್ರತಿಯೊಬ್ಬ ಮಹಾನ್ ವ್ಯಕ್ತಿಯ ಅದ್ಭುತವ್ಯಕ್ತಿತ್ವವೆಲ್ಲಾ ಸ್ತ್ರೀಯ ಉಪದೇಶದ ಫಲದಿಂದ ರೂಪುಗೊಂಡುದೆಂಬುದನ್ನು ವಿಚಾರಾಂತ್ಯದಲ್ಲಿ ಯಾರೂ ಅಲ್ಲಗಳೆಯುವಂತಿಲ್ಲ. ಸ್ತ್ರೀಯು ಜನ್ಮತಃ ಉಪದೇಶಮಾಡುವ ಶಕ್ತಿಯನ್ನು ದೇವರಿಂದ ಪಡೆದಿರುತ್ತಾಳೆ. ಮಾತೆಯಾಗಿ ಆಕೆ ಅನಾದಿ ಕಾಲದಿಂದಲೂ ಪ್ರಪಂಚಕ್ಕೆ ಉಪದೇಶವೀಯುತ್ತಿದ್ದಾಳೆ. ಅಲ್ಲದೆ ಪುರುಷರಿಗಿಂತ ಸ್ತ್ರೀಯರೇ ಬುದ್ಧಿಯಲ್ಲಿ ಮಿಗಿಲೆಂಬುದನ್ನು ವಿಜ್ಞಾನಿಗಳು ಸಾರುತ್ತಿದ್ದಾರೆ.

ಸ್ತ್ರೀಯರಿಂದ ಕಠಿಣವಾದ ದೈಹಿಕ ಶ್ರಮವು ಅಸಾಧ್ಯ. ಆದುದರಿಂದ ಮುಂಬರುವ ಕರ್ನಾಟಕದ ಅಭ್ಯುದಯಕ್ಕೆ ತಮ್ಮ ಬುದ್ಧಿ ಶಕ್ತಿಯಿಂದ ಪೂರ್ಣಾಧಿಕಾರಿಗಳಾಗಬೇಕು. ಅವರೇ ನಾಡಿನ ಬೌದ್ಧಿಕ ಶಿಕ್ಷಣದ ಭಾರವನ್ನು ಹೊರುವಂತಾಗಬೇಕು. ಸ್ತ್ರೀಯ ಸ್ವರದಲ್ಲಿ ಮಾಧುರ್ಯವಿದೆ. ವಿನಂತಿಯಲ್ಲಿ ಕೋಮಲತೆಯಿದೆ. ತ್ಯಾಗದಲ್ಲಿ ಹೆಸರುವಾಸಿಯಾಗಿದ್ದಾಳೆ. ಪ್ರೇಮ ಮತ್ತು ಸೇವೆಯ ಹಿನ್ನಲೆಯಲ್ಲಿ ಐಕ್ಯತೆಯಿದೆ. ವಿವೇಕವಿದೆ, ವಿಚಾರಣಾ ಶಕ್ತಿಯಿದೆ. ಮನೋಧೈರ್ಯವಿದೆ. ಪ್ರಯತ್ನಿಸುವ ಚೇತನವಿದೆ ಸಾಧಿಸುವ ಸಾಮರ್ಥ್ಯವಿದೆ. ಸ್ತ್ರೀಸ್ವಾತಂತ್ರ್ಯದ ಕಹಳೆಯ ಕೂಗು ಇಂದು ಎಲ್ಲೆಲ್ಲೂ ಕೇಳ ಬರುತ್ತಿವೆ. ಸ್ವಾತಂತ್ರ್ಯವೆಂದರೆ ಕೇವಲ ಆಧುನಿಕ ವಿದ್ಯಾವ್ಯಾಸಂಗಮಾಡಿ, ಉದ್ಯೋಗವಿಡಿದು ಮನಬಂದಂತೆ ವ್ಯವಹರಿಸಿ ತನ್ನಷ್ಟಕ್ಕೆ ಬಾಳಿದರೆ ಅದು ಸ್ವಾತಂತ್ರ್ಯವಾಗಬಹುದೆ? ಇಲ್ಲ. ಅದು ಸ್ವಾರ್ಥತಂತ್ರ; ಕುತಂತ್ರ! ಸ್ವತಂತ್ರ ವ್ಯಕ್ತಿಯು ಯಾವ ಅಡ್ಡಿ ಅಂತಕವಿಲ್ಲದೆಯೆ ತನ್ನ ಕರ್ತವ್ಯವನ್ನು ಸಾಧಿಸುವಂತಿರಬೇಕು. ಧನೋಪಾರ್ಜನೆಗಾಗಿ ಶನ್ನಿಚ್ಛೆಯಂತೆ ಇದ್ದು ತಿರುಗಿದರೆ ಅಷ್ಟರಲ್ಲಿ ಸ್ತ್ರೀಯರ ಕರ್ತವ್ಯ ಮುಗಿದಿಲ್ಲ. ಅದು ಯಾವ ಹಿಂದೂ ಸ್ತ್ರೀಯ ಕರ್ತವ್ಯವೂ ಆಗಲಾರದು. ಹಿಂದು ಧರ್ಮದ ಸಮ್ಮತಿಯೂ ದೊರೆಯಲಾರದು. ಬಿಡಗಿನ ಬಿನ್ನಾಣಕ್ಕೆ ಮಾರುಹೋದ ಸ್ತ್ರೀ ತನ್ನ ಧರ್ಮ ಮರೆತರೆ ಗುರುತರವಾದ ಅಪರಾಧವಾಗುತ್ತದೆ. ಸ್ವಾತಂತ್ರ್ಯದ ಕೂಗೆಬ್ಬಿಸುವ ಮಹಿಳಾ ಸಮಾಜ

ಪೂರ್ಣ ಪಾಶ್ಚಾತ್ತರ ಅನುಕರಣೆಯಲ್ಲಿದೆ. ಅವರ ಅನುಕರಣೆಯಿಂದಾಗಿ ಸ್ವಾತಂತ್ರ್ಯಲಭಿಸಿದಂತಾಗಲಾರದು. ಪಾಶ್ಚಾತ್ತರು ತಮ್ಮ ದೇಶದ ರೀತಿ ನೀತಿಗಳನ್ನು ಪ್ರಪಂಚದ ಯಾವೆಡೆಯಲ್ಲಿದ್ದರೂ ಅನುಸರಿಸುತ್ತಾರಲ್ಲದೆ ಪರರ ರೀತಿ ನೀತಿಗಳನ್ನು ಅನುಸರಿಸುವರೆ ? ಇದನ್ನು ನಮ್ಮ ಸಮಾಜದ ಪುರುಷರು ಹಾಗೂ ಸ್ತ್ರೀಯರು ಆಲೋಚಿಸ ಬೇಕಾಗಿದೆ. ನಾವು ಇನ್ನೊಂದು ಸಂಸ್ಕೃತಿಯ ಅನುಕರಣೆ ಮಾಡಿದರೆ ನಮ್ಮ ಸಂಸ್ಕೃತಿಯಲ್ಲಿ ಹುರುಳಿಲ್ಲ ವೆಂದು ಅವರು ಭಾವಿಸಲು ನಾವೇ ಅನುವು ದೊರಕಿಸಿಕೊಟ್ಟಂತಾಗಲಿಲ್ಲವೆ? ನಮ್ಮ ನಾಡಿನ ಸ್ತ್ರೀಯರು ತಮ್ಮ ಪ್ರಾಚೀನ ದೇವಿಯರಾದ ತಂತ್ರಿ ನೀಲಮ್ಮ ಹೊನ್ನಮ್ಮ ಅಕ್ಕ ಮಹಾದೇವಿ. ಚಂದ್ರಮತಿ, ದಮಯಂತಿ, ಸೀತೆ ಮೊದಲಾದ ಮಹಾ ಮಾತೆಯರು ತೋರಿದ ಧೈರ್ಯ, ಶಾಂತಿ, ಸೌಹಾರ್ದ, ನಾಡಪ್ರೇಮ, ಪಾತಿವ್ರತ್ಯ ಮೊದಲಾದ ಮಹದ್ಗುಣಗಳ ಅನುಕರಿಸಿ ತಮ್ಮ ಕರ್ತವ್ಯಪಾಲನೆಯಲ್ಲಿ ನಿರತರಾಗಬೇಕು. ತಮ್ಮ ಮಕ್ಕಳಿಗೆ ಬೇಬೀಸ್ ಫುಡ್‌ಗಳನ್ನು ಬೀಪಿಸುವ ಬದಲು ಅಮೃತಕ್ಕೆ ಸಮಾನವಾದ ಎದೆ ಹಾಲನ್ನು ಉಣ್ಣಿಸಿ ಶಕ್ತಿಯು ತರನ್ನಾಗಿ ಮಾಡಿ ಧೈರ್ಯ ಸಾಹಸ ತುಂಬಿ ಜೀವಂತರಾಗಿ ಬಾಳುವಂತೆ ಮಾಡಿ, ಹಾಗೂ ಕರ್ತವ್ಯ ಪಥದಲ್ಲಿ ಎಡವಿಬಿದ್ದು ಮುಂದುಗಾಣದೆ ಬಳಲುವ ಸೋದರ ಸೋದರಿಯರಿಗೆ ಅವರ ಹೊಣೆಗಾರಿಕೆಯ ಸ್ಮರಣೆಯನ್ನುಂಟು ಮಾಡುವುದು ನಿಜವಾದ ಸ್ವಾತಂತ್ರ್ಯವೆನಿಸುತ್ತದೆ. ಮಧುರಮಯತಾಯ್ತನವೆನಿಸುತ್ತದೆ. ತಮ್ಮ ತಾಯ್ತನದ ಕರ್ತವ್ಯ ಪಾಲನೆಗೆ ಸ್ವಾತಂತ್ರ್ಯ ಬೇಕೆ? ವಿದ್ರೋಹದ ಸ್ಥಾನದಲ್ಲಿ ಸ್ವಾಭಾವಿಕಗುಣ, ಸ್ನೇಹ, ತ್ಯಾಗ, ತಪಸ್ಸು ಕೊನೆಗೆ ಕೋಮಲಕೆ ಮತ್ತು ದೈನ್ಯತೆಯೆಂಬ ಗುರಿ ತಪ್ಪದ ಅಸ್ತ್ರಗಳಿಂದ ಪಥಭ್ರಾಂತರಾದ ಪಥಕರಿಗೆ ಅವರ ಸುಮಾರ್ಗ್ರವನ್ನು ತೋರಿಸಿ ಅವರಿಗೆ ಆತ್ಮೋತ್ಸಾಹವುಂಟಾಗುವಂತೆ ಹುರಿದುಂಬಿಸುವಲ್ಲಿದೆ ಸ್ವಾತಂತ್ರ್ಯ ಈಗಾಗುವುದಾದರೆ ಸ್ತ್ರೀಯರ ಸ್ವಾತಂತ್ರ್ಯ ಬೇಡಿಕೆ ಸಫಲವಾಗುವದರಲ್ಲಿ ಸಂಶಯವಿಲ್ಲ.

**ವಿನಂತಿ:—** ಕೊನೆಯದಾಗಿ ನಮ್ಮ ನಾಡಬಾಂಧವರಲ್ಲಿ ಹಾಗೂ ಸಹೋದರಿಯಲ್ಲಿ ವಿನೀತ ವಿನಂತಿಯೆಂದರೆ ಕರ್ನಾಟಕದ ಪ್ರಶ್ನೆ ಇತ್ಯರ್ಥಗೊಳ್ಳುವ ಈ ಶುಭ ಸಮಯದಲ್ಲಿ ವಿಮುಖರಾಗುವುದಲ್ಲದೆ “ಅಖಂಡ ಕರ್ನಾಟಕ” ರಾಜ್ಯೋದಯ ಬೇಗ ಆದಷ್ಟು ಬೇಗ ಉದಯಗೊಳ್ಳು

ವಂತೆ ಪರಮ ಪಾವನನಾದ ಪರಮೇಶ್ವರನನ್ನು ಪ್ರಾರ್ಥಿಸಬೇಕು. ವಿಜಯ ದೊರೆಯಬೇಕಾದರೆ ಕೆಲಸಮಾಡಬೇಕು. ನಾವು ಒತ್ತಿ ಹೇಳಲಿ ವುದೆಂದರೆ ಕನ್ನಡಿಗರು ವರ್ಣ ಭೇದವ ತೊಲಗಿಸಿ ವಿದ್ಯಾವಂತರೇ ಯಿರು ಅವಿದ್ಯಾವಂತರೇ ಯಿರಲಿ ಸೌಹಾರ್ದಭಾವದಿಂದ ಒಬ್ಬರನ್ನೊಬ್ಬರು ಕೂಡಿ ಕಲೆತು, ವಿಚಾರ ವಿನಿಮಯ ಮಾಡಿ ಪರಸ್ಪರ ಬುದ್ಧಿಯ ಪ್ರಯೋಜ ನವನ್ನು ಪಡೆದು ಕೊಳ್ಳಬೇಕು. "ಹನಿಗೂಡಿದರೆ ಹಳ್ಳ, ಕಾಳುಕೂಡಿ ದರೆ ಬಳ್ಳ" ಎಂಬ ನಾಣ್ಣುಡಿ ಕನ್ನಡ ಬಾಂಧವರು ನೆನಿಸಬೇಕು ಹೃದ ಯಕ್ಕೆ ಕಂಡುಕೊಳ್ಳಬೇಕು. ಒಂದು ಸಂಸ್ಥೆಗೆ ಸಂಸ್ಥೆಯ ನಾಯಕರ ಅಧೀ ಸದಲ್ಲಿರಬೇಕು. ನಾಡಿನ ಹಿರಿಯರ ಕಡೆಗೆ ಓ' ಗೊಡಬೇಕು. ದೇಶಸೇವೆ ಜನಾರ್ಧನನಸೇವೆಯೆನಿಸಿದೆ. ಪ್ರಾಂತಿಕ ಏಕೀಕರಣದೊಂದಿಗೆ ಸಾಂಸ್ಕೃ ವಿಕ ಏಕೀಕರಣವೂ ಉಂಟಾಗಬೇಕು. ಸಿದ್ಧಿಸಬೇಕು. ಕನ್ನಡ ಬಾವು ಟವನ್ನು ಡೌಲಿನಿಂದ ಎತ್ತಿಹಿಡಿಯುವಲ್ಲಿ ಪುರುಷರಷ್ಟೇ ಸ್ತ್ರೀಯರೂ ಸಹಾಯ ಮಾಡಬೇಕು. ಮುಂದುವರಿಯಬೇಕು. ಕನ್ನಡಿಗರ ಹಿರಿಯ ಗುಣಗಳನ್ನು ಮತ್ತೊಬ್ಬರು ಅನುಕರಣ ಮಾಡುವಂತೆ ವರ್ತಿಸಬೇಕು. ಸಂಘ ಶಕ್ತಿ ಹೊರ ಹೊಮ್ಮಬೇಕು. ಸತ್ಯಸಂಕಲ್ಪಕ್ಕೆ ಬರುವ ಸಾವಿರಾರು ಎಡರು ತೊಡರುಗಳನ್ನು ಸಹಿಸಬೇಕು. ಕಡಿದೊಗೆಯಬೇಕು. ಹಿಂದೆ ಮಹಾನ್ಮಹಾನ್ ಪ್ರಭುವೆಗಳಿಗೂ ಕೂಡ ತಮ್ಮ ಕರ್ತವ್ಯ ಪಥದಲ್ಲಿ ಅನಂತ ವಿಘ್ನಗಳುಂಟಾಗಿ ಕೊನೆಗೆ ಜಯಶಾಲಿಗಳಾಗಲಿಲ್ಲವೇ? ಅದನ್ನು ನೆನೆದು ನಿನ್ನ ಕರ್ತವ್ಯದಲ್ಲಿ ವಿಮುಖನಾಗು ಕನ್ನಡ ಬಾಂಧವ! ನಿನಗೆ ಜಯ ಕಟ್ಟಿಟ್ಟ ಬುತ್ತಿಯಾಗುವುದು.

# ವಿವಿಧ ವಿಷಯಗಳು

(ಬರೆದವರು:— ಶ್ರೀ. ಶಿವಾನಂದಸ್ವಾಮಿ ಗವಿಮಠ, ತೆಗ್ಗಿಹಳ್ಳಿ.)

---

(೧)

**ಪುರಾಣ ಹೇಳುವವರಿಗೆ ಸೂಚನೆ:—** ಪುರಾಣಿಕರು ಸಮಾಜದ ರೀತಿ ನೀತಿಗಳನ್ನು ಚನ್ನಾಗಿ ಅರಿತಿರಬೇಕು. ಸರ್ವ ಧರ್ಮಗಳ ಮರ್ಮವನ್ನು ತಿಳಿದಿರಬೇಕು. ವಿಶ್ವ ಧರ್ಮವನ್ನು ಬೋಧಿಸುತ್ತಿರಬೇಕು, ಕಾಲಪರಿಸ್ಥಿತಿ ದೇಶಗಳನ್ನರಿತು ಪುರಾಣ ಹೇಳಬೇಕು. ಸರ್ವರಿಗೂ ಮಾನ್ಯವಾಗುವಂತೆ ಬೋಧಿಸಬೇಕು. ಭರದಿಂದ ಬೆಳೆಯುವ ವಚನ ಸಾಹಿತ್ಯದ ಸದುಪಯೋಗವನ್ನು ಮಾಡಿಕೊಳ್ಳಬೇಕು. ಭಕ್ತಿಯ ಚಿಕ್ಕ ಪುಟ್ಟ ಬೋಧಪರ ಕಥೆಗಳನ್ನು ಉಧಹರಿಸಬೇಕು. ನಿಜವಾಗಿ ಗಾಯನದ ಅವಶ್ಯಕತೆ ಇಲ್ಲ. ಅದರೂ ಜನಕ್ಕು ಪುರಾಣಿಕನಿಗೂ ವಿಶ್ರಾಂತಿ ಸಿಗುವದಕ್ಕಾಗಿ ಭಕ್ತಿಯ ಗೀತೆಗಳನ್ನಾಗಲಿ ಶ್ರೇಷ್ಠ ವಚನಗಳನ್ನಾಗಲಿ ನಡುನಡುವೆ ಸುಶ್ರಾವ್ಯವಾಗಿ ಹಾಡಬೇಕು. ನೀತಿ, ವ್ಯವಹಾರ, ರಾಜಕಾರಣ, ಅಧ್ಯಾತ್ಮ, ಸಮಾಜ, ಧರ್ಮ ಮೊದಲಾದವುಗಳನ್ನು ಸಂಬಂಧಿಸಿ ಪುರಾಣ ಹೇಳಬೇಕು. ಬ್ರಹ್ಮಾಂಡದಂತೆ ಪಿಂಡಾಂಡವೆಂಬ ತತ್ವವನ್ನು ಮೇಲಿಂದಮೇಲೆ ಸದಾ ಸಂಬಂಧಪಡಿಸುತ್ತ ಹೋಗಬೇಕು. ಪ್ರತಿಯೊಂದಕ್ಕೂ ಒಂದು ವಿಶೇಷತರದ ಉಚ್ಚವಾದ ಗೂಢ ಅರ್ಥವಿರುವದು; ಅದನ್ನು ಪುರಾಣಿಕನು ಹೊರಗೆಡಹಬೇಕು. ಅಂತು ಸಮಾಜವನ್ನು ಎತ್ತರ ಎತ್ತರವಾಗಿ ಕರೆದೊಯ್ದು ದೇವದರ್ಶನ ಮಾಡಿಸಿದರೆ ಪುರಾಣ ಹೇಳಿದ್ದು ಕೇಳಿದ್ದು ಸಾರ್ಥಕವಾದಂತೆ ಆಯಿತು. ಅಂದರೆ ನೀತಿ ಭಕ್ತಿ ಜ್ಞಾನ ತ್ಯಾಗ ಸೇವೆ ಕಾಯಕಗಳು ಹೆಚ್ಚಾಗಿ ಪುರಾಣದಿಂದ ಬೆಳೆಯಬೇಕು.

ಆದರೆ ಪುರಾಣಿಕರು ಇದನ್ನೆಲ್ಲ ಬಿಟ್ಟು; ಜನರ ಒಲವಿನಂತೆ; ಜನರನ್ನು ರಮಿಸಲೋಸುಗ ಅವನ ಮನಸ್ಸಿನ ಓಘದಂತೆ 'ಅದರ ಬೆನ್ನ ಹತ್ತುವ ಚಟವು ಈಗಿನ ಪುರಾಣಿಕರಲ್ಲಿ ಹೆಚ್ಚಾಗಿದೆ. ಅವರನ್ನು ನಗಿಸಲೋಸುಗ ಅಶ್ಲೀಲ ಕಲ್ಪಿತ ಕಥೆಯನ್ನಾಗಲಿ ಅಶ್ಲೀಲ ಮಾತುಗಳ

ನ್ನಾಗಲಿ ಹಾವಭಾವ ಮಾಡಿ ಹೇಳುವರು. ಶ್ರಿಂಗಾರ ರಸವನ್ನು ಕಾವು ಕೇಳಿಯನ್ನು ಹೆಚ್ಚಾಗಿ ಬಣ್ಣಿಸಿ ಹೇಳುವರು. ಇದರಿಂದ ಜನರು ಬಹು ವಾಗಿ ಪುರಾಣಿಕನನ್ನು ಮೆಚ್ಚುವರೆಂದು ತಿಳಿಯುವರು. ನೆರೆದವರಲ್ಲಿ ಅನೇಕ ಬಗೆಯ ಅನೇಕ ಮನಸ್ಸಿನವರಿರುವದುಂಟು. ಜನರನ್ನು ಮೆಚ್ಚಿ ಸಲಿಕ್ಕೆ ಅವರಿಂದ ಜಯಜಯಕಾರ ಮಾಡಿಸಿಕೊಳ್ಳಲಿಕ್ಕೆ ಈ ಪ್ರಕಾರ ಪುರಾಣಿಕನು ಸೋಗುಹಾಕುವದು ಎಳ್ಳಷ್ಟೂ ಸರಿಯೆನಿಸದು. ಜನರನ್ನು ಮೆಚ್ಚಿಸುವದು ಪುರಾಣಿಕನು ಸೋಗುಹಾಕುವದು ಎಳ್ಳಷ್ಟೂ ಸರಿಯೆನಿ ಸದು. ಜನರನ್ನು ಮೆಚ್ಚಿಸುವದು ಪುರಾಣಿಕನ ಕೆಲಸವಲ್ಲ. ದೇವನನ್ನು ಮೆಚ್ಚಿಸುವದೇ ಅವನ ಕೆಲಸ. ಶೃಂಗಾರ ಅಶ್ಲೀಲಗಳನ್ನು ಬಳಿಸಹತ್ತಿ ದರೆ ಗೀ ಗೀ ಹಾಡುವವನಿಗೂ ಇವನಿಗೂ ಏನು ಅಂತರವಾಗುವದು. ಹೇಳಿನೋಡುವಾ ? ಅಂದರೆ ಹರದೇಶಿ ನಾಗೇಶಿ ಪದಗಳಲ್ಲಿ ಸದಾ ಹೆಣ್ಣಿನ ನಿಂದೆ ಗಂಡು, ಗಂಡಿನ ನಿಂದೆ ಹೆಣ್ಣು ಮಾಡಿ; ಒಳ್ಳೇ ಅಶ್ಲೀಲ ಬೈಗಳನ್ನೂ, ಅಶ್ಲೀಲ ಶ್ರಿಂಗಾರವನ್ನೂ, ಗುಪ್ತ ಅವಯವಗಳ ವರ್ಣನೆಗಳನ್ನೂ ಹಾಡುತ್ತ ಸಮಾಜವನ್ನು ಹೆಚ್ಚಾಗಿ ಕೆಡಿಸುತ್ತಿರುವರು. ಇದರಂತೆ ಪುರಾಣಿಕರೂ ಹೇಳುವದು ಒಳಿತಲ್ಲ.

ಒಬ್ಬ ಪುರಾಣಿಕನು ಇನ್ನೊಬ್ಬ ಪುರಾಣಿಕನ ನಿಂದೆಯನ್ನು ಪುರಾಣ ಹೇಳುವಾಗ ಮಾಡುವದು ಎಷ್ಟುಮಾತ್ರಕ್ಕೂ ಸರಿ ಎನಿಸದು, ಇವರು ತಮ್ಮ ವಿದ್ವತ್ತನ್ನು ತಾವೇ ಹೊಗಳಿಕೊಳ್ಳುವದಕ್ಕಾಗಿ ಅನ್ಯರ ನಿಂದೆಯನ್ನು ಮಾಡುತ್ತಿರುವರು. ಇದು ನಮ್ಮ ಸ್ವಾಮಿಗಳಲ್ಲಿ ವಿಶೇಷವಾಗಿ ಕಂಡು ಬರುತ್ತಿರುವದು. ಸ್ವಾಮಿಗಳೇ ಸಮಾಜದಲ್ಲಿ ಒಬ್ಬರ ನಿಂದೆ ಇನ್ನೊ ಬ್ಬರು ಮಾಡಿದರೆ ಜನರು ಏನು ತಿಳಿದುಕೊಳ್ಳಬೇಕು? ಜನರನ್ನು ಮುಂದೆ ಕೂಡಿಸಿಕೊಂಡು ಹೆಣ್ಣುಮಕ್ಕಳು ಒಬ್ಬರನ್ನೊಬ್ಬರು ಬೈಯುಂತೆ ಇವರ ಗತಿಯಾಗುವದಿಲ್ಲವೇನು ? ತನ್ನ ಬಣ್ಣಿಸಿಕೊಳ್ಳಬೇಡ, ಅನ್ಯರ ನಿಂದಿಸಬೇಡ ಎಂದು ಬಸವಣ್ಣನವರು ಹೇಳಿದ್ದನ್ನು ಮರೆಯಬಾರದು.

ಕೀರ್ತಿಗೇನಬೇಕೆಂದು ಪುರಾಣಿಕನ ಉದ್ದೇಶವಿರಕೂಡದು ಇದ ರಿಂದ ಅಂತರಂಗದ ಆಚರಣೆಗೂ ಬಹಿರಂಗದ ಆಚರಣೆಗೂ ತಾಳಮೇಳ ವಿಲ್ಲೆಂದು ತಾವೇ ಢಂಗುರ ಹೊಡೆದಂತೆ ಆಗುವದು. ಪುರಾಣಿಕನು ಸಮಾಜಕ್ಕೆ ಹೆಚ್ಚಿನ ವ್ಯರ್ಥ ಖರ್ಚನ್ನು ತರಕೂಡದು. ದಾನದ ಸದು ಪಯೋಗವಾಗುವಂತೆ ಯತ್ನಿಸಬೇಕು. ಅಂತು ಸಮಾಜದ ಆರ್ಥಿಕ,

ನೈತಿಕ, ಸಾಮಾಜಿಕ, ಮಾನಸಿಕ, ವ್ಯವಹಾರಿಕ, ಧಾರ್ಮಿಕ ಉನ್ನತಿಯಾಗುವಂತೆ ಯತ್ನಿಸಬೇಕು. ಅಂದರೆ ಪುರಾಣಿಕನು ಪುರಾಣ ಹೇಳಿದ್ದು ಸಾರ್ಥಕವಾಗುವದು. ಬರೇ ನಾನು ಹೆಚ್ಚು, ನೀನು ಹೆಚ್ಚು ಎಂದು ಅಹಂಕಾರ ಮಮಕಾರಗಳಿಂದ ಕೂಡಿ ಪುರಾಣ ಹೇಳುವದನ್ನಾಗಲಿ ಸಮಾಜ ಸೇವೆಯನ್ನು ಮಾಡುವದಾಗಲಿ ಮಾಡಬಾರದೆಂದು ಸೂಚಿಸದೆ ಇರಲಾರೆವು.

(೨)

**ಎಮ್. ಎಲ್. ಎ ಜನರನ್ನು ಆರಿಸುವವರಿಗೆ:-** ಹಿಂದುಸ್ಥಾನವು ಆಧ್ಯಾತ್ಮದ ನಾಡು, ಶರಣ, ಸಂತ, ತ್ಯಾಗಿ, ಯೋಗಿ, ಸಿದ್ಧ ಜ್ಞಾನಿಗಳ ನಾಡು, ರಾಜಕ್ಕೂ ರಾಜಕಾರಣಕ್ಕೂ ಅವರೇ ಆಧಾರ ಸ್ಥಂಭಗಳು ಪ್ರತಿರಾಜ್ಯ ಉಳಿಯಲಿಕ್ಕೂ, ಕಳಕೊಂಡ ರಾಜ್ಯಗಳಿಸಲಿಕ್ಕೂ, ಹೊಸ ರಾಜ್ಯ ಸ್ಥಾಪಿಸಲಿಕ್ಕೂ ರಾಜ್ಯ ಕಾರಭಾರಕ್ಕೆ ಯೋಗ್ಯ ಸೂಚನೆಗಳನ್ನಾಗಲಿ ಸಲಹೆಗಳನ್ನಾಗಲಿ ಕೊಡಲಿಕ್ಕೂ ಗುರುಗಳೆನಿಸಿಕೊಳ್ಳುವ ತ್ಯಾಗಿ ಯೋಗಿಗಳಾದ ಶರಣ ಸಂತರೇ ಕಾರಣರಾಗಿದ್ದಾರೆಂದು ಪೂರ್ವಕಾಲದಿಂದ ಇಲ್ಲಿಯ ವರೆಗೆ ಆದ ಇತಿಹಾಸವನ್ನು ಚನ್ನಾಗಿ ವಿಮರ್ಶೆ ಮಾಡಿದರೆ ಹೊಳೆಯುವದು. ಇಂಥ ತ್ಯಾಗಿಗಳಿಲ್ಲದೆ ನಮ್ಮ ಯಾವ ಕಾರ್ಯಗಳೂ ಎಂದೂ ಸಾಗವು. ಆದರೆ ಕಾಂಗ್ರೆಸ್‌ದಲ್ಲಿ ಈಗ ಹೆಚ್ಚಾಗಿ ಸೇರಿದ ಬಹಿರಂಗ ತ್ಯಾಗಿಗಳೂ, ಅಂತರಂಗ ಸ್ವಾರ್ಥಿಗಳೂ ಬಹಿರಂಗ ಯೋಗಿಗಳೂ ಅಂತರಂಗ ಭೋಗಿಗಳೂ ಯಾತಕ್ಕೂ ಉಪಯೋಗವಿಲ್ಲೆಂದು ದೇಶದ ಜನರು ಆಡಿಕೊಳ್ಳುತ್ತಿರುವದು ಸರ್ವಶ್ರುತವಿದೆ. ಈ ಇವರು ಹತ್ತು ವರ್ಷಗಳಲ್ಲಿ ಏನು ಎಷ್ಟು ಹೊಲಸನ್ನು ಮಾಡಿದ್ದಾರೆಂದು ದೇಶಕೂಡಿಕೊಳ್ಳುತ್ತಿದೆ. ಸ್ವಾರ್ಥ, ಅಧಿಕಾರಮದ, ಲಂಚ, ನಿರೂಪಯೋಗಿಯಾದ ಕಾಯದೆ, ಜಾತೀಯತೆ, ಪ್ರಾಂತೀಯತೆ, ಮೊದಲಾದವುಗಳು ಇಂಗ್ಲೀಷರಿಗಿಂತ ಹೆಚ್ಚಾಗಿವೆ ಎಂದು ಎಲ್ಲರೂ ಘಂಟಾ ಘೋಷವಾಗಿ ಹೇಳುತ್ತಿರುವರು ಈಗಿನ ಮೆಂಬರರಲ್ಲಿಯಾಗಲಿ ಮಂತ್ರಿಗಳಲ್ಲಿಯಾಗಲಿ ಧಾರ್ಮಿಕ ಪ್ರವೃತ್ತಿ ಇಲ್ಲದವರೇ ಹೆಚ್ಚಾಗಿದ್ದಾರೆ. ಹೀಗೆ ಇದ್ದವರನ್ನು ಆರಿಸಬಾರದು ಆರಿಸಿದರೂ ಅವರ ಆಟ ನಡೆಯಗೊಡಬಾರದು ಪರದೇಶದವರೂ ಕೂಡ- "ರಾಜಕಾರಣ ಪಟುಗಳಾಗಲಿ ಪಾರ್ಲಿಮೆಂಟ ಮೆಂಬರರಾಗಲಿ ಮಂತ್ರಿಗಳಾಗಲಿ ಎಮ್. ಎಲ್. ಎ ಗಳಾಗಲಿ ನಿಜವಾಗಿ

ತ್ಯಾಗಿ ಯೋಗಿ ಯಾದ ಧರ್ಮಾತ್ಮನೇ ಇದ್ದರೆ ರಾಜ್ಯವು ಸರ್ವ ಸಂಪನ್ನವಾಗುವದೆಂದು" ಹೇಳುತ್ತಿರುವರು "ಆಧ್ಯಾತ್ಮದ ದೇಶವೆಂದು ಹೆಸರು ಪಡೆದ ನಮ್ಮ ದೇಶದಲ್ಲಿ ನಮ್ಮ ನಾಡಿನಲ್ಲಿ ಅನೀತಿ, ಅಧರ್ಮದುರಾತ್ಮ ಸ್ವಾರ್ಥಿಗಳೆನಿಸಿಕೊಳ್ಳುವವರ ಕೈಯಲ್ಲಿ ರಾಜಕಾರಣ ಕೊಟ್ಟಿದ್ದರ ಕಟು ಫಲವನ್ನು ಈಗ ನಾವು ಉಣ್ಣಬೇಕಾಗಿದೆ. ಒಳ್ಳೇ ದೈವಮಾನತ್ಮರಾದ ತ್ಯಾಗಿ ಯೋಗಿಗಳಾದ ಸ್ವಲ್ಪ ಜನರನ್ನಾದರೂ ನಾವು ರಾಜಕಾರಣದಲ್ಲಿ ಸೇರಿಸಿದರೆ ನಮ್ಮ ದೇಶವು ನಿಜವಾದ ಉನ್ನತಿ ಪಥದಲ್ಲಿ ಹೆಜ್ಜೆ ಹಾಕುವದರಲ್ಲಿ ಸಂದೇಹವಿಲ್ಲ. ಈಗ ಎಮ್. ಎಲ್ ಎ ಹಾಗೂ ಎಮ್ ಪಿ. ಗಳಿಗೆ ಕಾಂಗ್ರೆಸವತಿಯಿಂದ ನಿಲ್ಲುವ ಟಿಕೇಟುಗಳನ್ನು ಕೊಡುವ ದಿನಗಳು ಸಮೀಪಿಸಿವೆ. ಅದಕ್ಕೆ ಸಂಬಂಧಿಸಿದ ಅಧಿಕಾರಿಗಳಾಗಲಿ ಸಲ್ಲಾಗಾರರಾಗಲಿ ಹಿತಚಿಂತಕರಾಗಲಿ ಹಿಂದೆ ಮಾಡಿದ ತಪ್ಪನ್ನು ಪುನ: ಮಾಡಿ ದೇಶವನ್ನೂ ನಾಡನ್ನೂ ಹೀನ ಸ್ಥಿತಿಗೆ ಎಳೆಯಲು ಯತ್ನಿಸಬಾರದು. ನೀತಿವಂತ ಚಟಗಳುಳ್ಳ ಆಧ್ಯಾತ್ಮಭಾವವುಳ್ಳ ನಿಸ್ವಾರ್ಥ ಧರ್ಮಾತ್ಮರಿಗೆ ಆರಿಸಿ ಟಿಕೇಟನ್ನು ಕೊಟ್ಟು ದೇಶದ ಕಲ್ಯಾಣ ಮಾಡಬೇಕೆಂದ ಕೋರುವೆವು. ಹೀಗಾದರೆ ನಮ್ಮ ದೇಶದ ಉನ್ನತಿಯು ನಿಜವಾಗಿ ಆಗುವದರಲ್ಲಿ ಸಂದೇಹವಿಲ್ಲ. ಇದೇ ವಿಚಾರವನ್ನು ದೇಶಭಕ್ತ ತ್ಯಾಗವೀರ ಸನ್ಯಾಸಿಗಳಾದ ಶ್ರೀ ವಿವೇಕಾನಂದ ಸ್ವಾಮಿಗಳವರು ಜಗತ್ತಿಗೆ ಸಾರಿದ್ದಾರೆ. ಬಿಜ್ಜಳನಿಗೆ ಮಹಾ ಧರ್ಮಾತ್ಮನಾದ ಮಹಾತ್ಮಾ ಜಗದಣ್ಣ ಬಸವಣ್ಣನು ಆರು ವರ್ಷ ಮಂತ್ರಿ ಇದ್ದುದರಿಂದ ಕನ್ನಡನಾಡಿನ ಸರ್ವತೋಮುಖ ಏಳಿಗೆಯು ಆಗ ಆಗಿತ್ತೆಂದು ಎಲ್ಲರಿಗೂ ತಿಳಿದ ವಿಷಯವೇ ಸರಿ. ಅದಕ್ಕೆ ಮೇಲೆ ಸೂಚಿಸಿದಂತೆ ಯೋಗ ತ್ಯಾಗ ವೀರ ಸನ್ಯಾಸಿ ಯೋಗಿ ಶರಣರಿಗೆ ಎಮ್. ಎಲ್. ಎ; ಎಮ್. ಪಿ. ಗಳ ಟಿಕೇಟನ್ನು ಕೊಟ್ಟು ಆರಿಸಿಬರುದಂತೆ ಜನರು ಯತ್ನಿಸಬೇಕೆಂದು ಪುನಃ ಸರ್ವರಿಗೆ ಸೂಚಿಸದೆ ಇರಲಾರೆವು.

( ೩ )

**ಅಕ್ಕನ ಬಳಗ-ಶಿವಾನುಭವ ಮಂಟಪ-ಬಸವನ ಬಳಗಗಳಿಗೆ ಸೂಚನೆ:**— ಇವುಗಳನ್ನು ಪ್ರತಿ ಊರುಗಳಿಗೆ ಅವಶ್ಯತೆಗೆಯುವದು. ಇವು ಅತಿ ಅವಶ್ಯವಿದೆ. ಇವುಗಳನ್ನು ನಿಜವಾಗಿ ಬೆಳದಷ್ಟು ಜನತೆಯಲ್ಲಿ ನಿಜವಾದ ಜಾಗ್ರತೆಯಾಗುವದು ಸುಧಾರಣೆಯು ಬೇರು ಬೊಡೆ

ಗಳಿಂದ ಪ್ರಾರಂಭವಾಗಿ ಟೊಂಗೆ ಎಲೆ ಹೂ ಕಾಯಿಗಳವರೆಗೆ ಹೋಗಿ ಮುಟ್ಟಿದರೆ ಮಾತ್ರ ನಿಜವಾದ ಸುಧಾರಣೆ ನಿಜವಾದ ಸಮಾಜ ವಿಕಾಸ ವಾಗುವದು, ಅಲ್ಲದೆ ಅದು ಸ್ಥಿರವಾಗಿ ಶಾಶ್ವತವಾಗಿ ಉಳಿಯ ಬಲ್ಲದು. ಮಾನವನಿಗೆ ಅಂತರಂಗದಲ್ಲಿ ವಿಕಾಸವಾಗುತ್ತ ಹೋಗಬೇಕು, ಅಂದರೆ ಆಧ್ಯಾತ್ಮ ಸುಧಾರಣೆ ಮುಂದೆ ಉಳಿದವುಗಳ ವಿಕಾಸ ತಾನೇ ಆಗುವದು. ನೀತಿ ಮಟ್ಟವು ಹೆಚ್ಚಾದರೆ ಎಲ್ಲ ಬಗೆಯ ನಿಜವಾದ ಸುಧಾರಣೆ ಯಾಗು ವದರಲ್ಲಿ ಸಂದೇಹವಿಲ್ಲ. ಇದೆಲ್ಲ ಸುಧಾರಣೆಯ ವಿಕಾಸವು ನಿಜವಾಗಿ ಮೇಲೆ ಹೇಳಿದ ಸಂಘ ಸಂಸ್ಥೆಗಳಿಂದಾಗುವದು ಅಶಕ್ಯ ಹೊರತು ಬಾಹ್ಯ ಕೃತ್ರಿಮ ಉಪಾಯಗಳಿಂದ ಅದು ಶಕ್ಯವಿಲ್ಲೆಂದು ಧಾರಳವಾಗಿ ಹೇಳಬಹುದು.

ನಾನು ಅನೇಕ ಕಡೆಗೆ ಈ ಸಂಘ ಸಂಸ್ಥೆಗಳನ್ನು ನೋಡಿದ್ದೇನೆ. ಮಹಾಸ್ವಾಮಿಗಳೆನಿಸುವವರು ತಮ್ಮ ಮಠಗಳಲ್ಲಿ ತೆರೆದವುಗಳನ್ನೂ ನೋಡಿ ತಿದ್ದೇನೆ. ಇವೆಲ್ಲವುಗಳು ಬರೇ ಹೆಸರಿಗೆ ಮಾತ್ರ ಇರುವವೆಂದು ತೋರು ವಾರ ಪತ್ರಿಕೆ ಮಾಸಪತ್ರಿಕೆಗಳಲ್ಲಿ ಮಾತ್ರ ಇವುಗಳು ಬಹು ವಿಶಾಲವಾಗಿ ಇರುವವೆಂದು ಒಳ್ಳೇ ವರ್ಣನೆಯ ಸುದ್ದಿಗಳನ್ನು ಕಳಿಸಿ ಕೃತಕೃತ್ಯರಾದರೆ ಇವುಗಳ ಕೆಲಸ ತೀರಲಿಲ್ಲ. ಇವುಗಳನ್ನು ಒಳ್ಳೇ ಕಳಕಳಿಯಿಂದ ಜನಾನು ರಾಗಕ್ಕೆ ಪಾತ್ರವಾಗುವಂತೆ ನಡಿಸಿಕೊಂಡು ಹೋಗಬೇಕು. ಬರೇ ಅಪ ಪ್ರಚಾರಗಳನ್ನು ಪತ್ರಿಕೆಗಳ ಮುಖಾಂತರ ಮಾಡಿದರೆ ಅಪಹಾಸ್ಯಕ್ಕೆ ಕಾರಣವಾಗುವದು. ಈಗ ಬರೇ ಹೆಸರಿನ ಕೀರ್ತಿಯದಾಸರೇ ಹೆಚ್ಚಾಗಿ ದ್ದಾರೆ. ಕಾರ್ಯ ಆಗದಿದ್ದರೂ ಚಿಂತೆಇಲ್ಲ; ಪತ್ರಿಕೆಗಳಿಗೆ ವರ್ಣನೆಯ ಸುಂದರ ಅದ್ಭುತವಾದ ಸುದ್ದಿಗಳನ್ನುಕಳಿಸಿ ಈಗಿನ ಕಾಲದಲ್ಲಿ ಪ್ರಸಿದ್ಧಿಗೆ ಬಂದರೆ ತೀರಿತು ಅವರೇ ಮಹಾ ಸ್ವಾಮಿಗಳು ಮಹಾಭಕ್ತಿಮಹೇಶ್ವರರೂ ಮಹಾ ಮಹಾ ಧರ್ಮಾಭಿಮಾನಿಗಳೂ ಆದರೆಂದು ಜಯ ಜಯಕಾರ ಗಳನ್ನುಹೊಂದಿ ಸಂತೋಷಪಡುವರು. ಇದನ್ನಿಷ್ಟು ಮಾಡಿದರೆ ಜನ್ಮದ ಸಾರ್ಥಕವಾಯಿತೆಂದು ಅವರ ಪೂರ್ಣನೆಂಬಿಗೆಯಾಗುವದು ಇಂಥವರೇ ಜೀವನ್ಮುಕ್ತರೆಂದು ಅರಿಯದವರು ಕೊಂಡಾಡುವರು. ಇದಕ್ಕಾಗಿಯೇ ಜನಮೆಚ್ಚಿನಡಕೊಂಡರೇನುಂಟು ಲೋಕದಿ ಮನಮೆಚ್ಚಿನಡಕೊಂಬುವದೇ ಚಂದ» ಎಂದು ಸರ್ಪಭೂಷಣ ಶಿವಯೋಗಿಗಳು ಹಾಡಿದ್ದು ತಿಳಿದು ಧರ್ಮದ ಸೇವೆ ಮಾಡಿರಿ. ಪತ್ರಿಕೆಗಳಲ್ಲಿ ಪ್ರಸಿದ್ಧಿಸಿದ ಹೆಸರುಗಳನ್ನು ಓದಿ ತೃಪ್ತಿಪಡಬೇಡಿರಿ.

"ಅರದೆಲೆಯಂತೆ ಹೊರಗೊಂದು ಒಳಗೊಂದಾದರೆ ಮೆಚ್ಚ ನಮ್ಮ ಕೂಡಲಸಂಗಮದೇವ." ಎಂಬುದನ್ನು ತಿಳಿದು ಒಳಹೊರಗೂ ಒಂದೇ ರೀತಿಯಿಂದ ನಡೆದು ಧರ್ಮದ ಸುಧಾರಣೆ, ಶರಣರ ತತ್ವ ಪ್ರಚಾರಗಳನ್ನು ಮಾಡಿ ಕೃತಕೃತ್ಯರಾಗಬೇಕು. ದೇವರನ್ನು ಮೆಚ್ಚಿಸುವದು ಒಳ್ಳೇ ಮಹತ್ವವಿರುತ್ತದೆ. ಕಾರಣ ಮೊದಲು ಮೇಲೆ ಹೇಳಿದ ಕಾರ್ಯಗಳನ್ನು ಚನ್ನಾಗಿ ಮಾಡಿರಿ. ಆಮೇಲೆ ತಾನೇ ಅದರ ಗಂಧವು ಸುತ್ತಲೂ ಪಸರಿಸುವದು. ಕಾರ್ಯವಾಗುವದಕ್ಕಿಂತ ಮೊದಲೇ ಅದರ ಪ್ರಸಾರವಾಗ ಹತ್ತಿದರೆ, ಅದು ನಿಜವಾಗಿ ಪ್ರಸಾರವಾಗುವದಿಲ್ಲ. ಹುಲ್ಲು ಉರಿಯಂತೆ ಭಗ್ಗ ಎಂದು ಒಮ್ಮೆಲೆ ದೊಡ್ಡದಾಗಿ ಒಮ್ಮೆಲೆ ಆರಿಹೋದಂಥ ಅಪಹಾಸಕ್ಕೆ ಕಾರಣವಾಗುವದು ಕುಸುಮವು ಅರಳಿದರೆ ಭ್ರಮರಗಳಿಗೆ ನಾವೇನು ಪತ್ರಗಳ ಮುಖಾಂತರ ಹೇಳಿ ಕಳಿಸುವ ಕಾರಣವೇ ಇಲ್ಲ. ಭ್ರಮರಗಳಿಗೆ ಕುಸುಮಗಳರಳಿದ್ದು ಸ್ವಾಭಾವಿಕವಾಗಿ ತಿಳಿದೇ ತಿಳಿಯುವದು. ಆಗ ಅವು ತಾವಾಗಿಯೇ ನಾ ಮುಂದೆ ನೀ ಮುಂದೆ ಎಂದು ಬಂದು ನೆರೆದು ಅವುಗಳ ಮಧುರ ರಸವನ್ನು ಈಂಟಿ ಒಂಕಾರ ಗಾಯನ ಮಾಡುತ್ತ ನಲಿಯುವವು. ಅದರಂತೆ ಮೊದಲು ಒಳ್ಳೇ ಕಾರ್ಯಗಳನ್ನು ಕೀರ್ತಿಗಾಸೆಪಡದೆ ಕಾರ್ಯ ಮಾಡಿದರೆ ಇಂದಿಲ್ಲ ನಾಳೆಯಾದರೂ ಜನರು ತಾವೇ ಮೆಚ್ಚುವರು. ಸಾವಧಾನದಿಂದ ಕಾರ್ಯವನ್ನು ಕಾಯಾ ವಾಚಾ ಮನಸಾ ಮಾಡುತ್ತ ಹೋದರಾಯಿತು. ಜನರು ಮೆಚ್ಚಲಿ, ಮೆಚ್ಚದಿರಲಿ ನಮ್ಮ ಕಾರ್ಯ ಮಾಡುತ್ತಿರಬೇಕು. ಆದರೆ ಜನರನ್ನು ಮೆಚ್ಚಿಸಲಿಕ್ಕೆ ಮೊದಲೇ ಸೋಗುಹಾಕಿಕೊಂಡು ನಿಲ್ಲಬಾರದು. ಇದರಿಂದ ಸರ್ವ ರೀತಿಯಿಂದ ಕೆಡಕಾಗುವದರಲ್ಲಿ ಸಂದೇಹವಿಲ್ಲ.

ಅದಕ್ಕಾಗಿ ಅಕ್ಕನ ಬಳಗ, ಬಸವನ ಬಳಗ, ಗೆಳೆಯರ ಗುಂಪು, ಶಿವಾನುಭವ ಮಂಟಪ ಶಿವಾನುಭವ ಸಂಘ ಮೊದಲಾದವುಗಳನ್ನು ಸರಿಯಾಗಿ ಯೋಗ್ಯ ರೀತಿಯಿಂದ ಕಳಕಳಿಯಿಂದ ನಿಸ್ವಾರ್ಥವಾಗಿ ಸಾಗಿಸಿಕೊಂಡು ಹೋಗಬೇಕು. ಕೇಳುವವರು ಮೊದಲು ಒಬ್ಬರಿದ್ದರೂ ಅಡ್ಡಿ ಇಲ್ಲ. ಅದರಂತೆ ನಡೆಯುವದರಲ್ಲಿ ಪ್ರಯತ್ನಶೀಲರಾಗಿರಬೇಕು. ಇದೇ ಮುಂದೆ ಬೀಜವು ಮರವಾಗುವಂತೆ ಬೆಳೆಬೆಳೆದು ಇಡೀ ಊರ ಜನರೇ ಮೆಚ್ಚುವಂತೆ ಆಗುವದು. ಮೊದಲು ಅವುಗಳನ್ನು ಸ್ಥಾಪಿಸುವವರು ಒಳ್ಳೆಯವರು ನುಡಿದಂತೆ ನಡೆಯುವವರೂ ನಿಃಸ್ವಾರ್ಥಿಗಳೂ ಇರಬೇಕು.

ಅಂದರೆ ಎಲ್ಲರೂ ತಾವೇ ಬೆನ್ನುಹತ್ತುವರು. ಆದರೆ ಜನರನ್ನು ಕೂಡಿಸ ಲಿಕ್ಕೆ ಕೃತ್ರಿಮ ಉಪಾಯಗಳನ್ನು ಮಾಡಬಾರದು. ಇದರಿಂದ ನಿಜವಾದ ಕಾರ್ಯವಾಗುವದಿಲ್ಲ. ಆ ಕೃತ್ರಿಮ ಉಪಾಯಗಳನ್ನು ಬಿಟ್ಟರೆ ಜನರು ಬರುವದು ಕೂಡ ಅವುಗಳ ಕೂಡ ಬಿಟ್ಟುಬಿಡುವರು.

ಆದರೆ ಸಾವಧಾನವಾದರೂ ಚಿಂತೆಯಿಲ್ಲ. ಆದಷ್ಟು ಕಾರ್ಯವು ಒಳ್ಳೇ ಚೊಕ್ಕವಾಗಿ ಆಗಬೇಕು. *"Well begun is half done"* ಅಂದರೆ ಒಳ್ಳೇ ಚೊಕ್ಕಟವಾಗಿ ಪ್ರಾರಂಭವಾದದ್ದು ಅರ್ಧಕೆಲಸವಾದಂತೆ ಎಂದು ಗಾದೆ ಇದೆ. ಅದಕ್ಕೆ ಸುಳ್ಳುಬಳಗ ಸಂಘಗಳಿಂದ ಏನೂ ಪ್ರಯೋಜನವಿಲ್ಲ. ನಿಜವಾದವುಗಳನ್ನು ಒಳ್ಳೇ ರೀತಿಯಿಂದ ಸಾಗಿಸಬೇಕೆಂದು ವಿನಂತಿಸುವೆವು. ಪತ್ರಿಕೆಗಳಿಗೆ ಅವುಗಳ ಬಗ್ಗೆ ಹಲವು ಸುಳ್ಳುಸುದ್ದಿಗಳನ್ನು ಬರೆದು ಬೇಗಕ್ಕೆ ಬಂದವರ ಬಾರದವರ, ಸಿರಿವಂತರ ನೋಡಿದವರ ನೋಡದವರ, ಕೇಳಿದವರ ಕೇಳದವರ, ಮೊದಲಾದ ಅನೇಕ ಹೆಸರುಗಳು ಹಾಕಿ ಪತ್ರಿಕೆಗಳ ಸ್ಥಿತಿಯನ್ನೂ ಕೆಡಿಸಬಾರದೆಂದು ವಿನಯದಿಂದ ಸೂಚಿಸುವೆವು.

(೪)

**ಸ್ವಾಮಿಗಳ ಗಮನಕ್ಕೆ:—** ಇದೇ ವರ್ಷ ಜಾನೇವಾರಿ ಸಂಚಿಕೆಯಲ್ಲಿ ಕನ್ನಡಿಗರ ಹಾಗೂ ವೀರಶೈವರ ಆದ್ಯಕರ್ತವ್ಯದ ಬಗ್ಗೆ ಒಂದು ಲೇಖ ಬರೆದು ವಿನಂತಿಸಿಕೊಂಡಿದ್ದೆವು. ಶಿವಾನುಭವ ಸಂಘಟನೆ, ಶಿವಾನುಭವ ಪ್ರಚಾರ, ಶಿವಶರಣರ ವಚನಗಳ ಪ್ರಸಾರದ ಅವಶ್ಯಕತೆ ಕುರಿತು ಬರೆದುದಾಯಿತು. ಹೇಳಿದುದೂ ಆಯಿತು. ೭೭೦ ಅಮರಗಣಂಗಳ ಕಾಲಕ್ಕೆ ಇದರ ಬಗ್ಗೆ ಒಂದು ಕಮೀಟಿ ಸ್ಥಾಪಿಸುದ್ದಾಯಿತು. ಶ್ರೀ ಬಂಥನಾಳ ಶಿವಯೋಗಿಗಳ ೫೦೦೦ ರೂಪಾಯಿ ವಾಗ್ದಾನವೂ ಆಯಿತು. ಅದರಂತೆ ಬೇರೆ ೩-೪ ಜನರೂ ವಾಗ್ದಾನವನ್ನು ಮಾಡಿದರು. ಇದರ ಬಗ್ಗೆ ರಾವಬಹಾದ್ದೂರ ಹಳಕಟ್ಟಿಯವರನ್ನು ವಿಚಾರಿಸಲಾಗಿ ಎಲ್ಲಕ್ಕೂ ನಕಾರದಲ್ಲೇ ಉತ್ತರ ಕೊಟ್ಟರು. ಇದನ್ನು ಕೇಳಿ ನಮಗೂ ಧರ್ಮಪ್ರೇಮಿಗಳಿಗೂ ಬಹು ಕೆಡಕೆನಿಸದೆ ಇರಲಾರದು. ವಾಗ್ದಾನಕ್ಕಾಗಿ ನಾವು ಅವರನ್ನು ಅಭಿನಂದಿಸಿ ಆಭಾರ ಮನ್ನಿಸಿದ್ದೂ ಆಯಿತು. ಶಾಲೆ ಕಾಲೇಜದ ಕಾರ್ಯದಂತೆ ಶಿವಾನುಭವ ಕಾರ್ಯ ಪ್ರಚಾರವನ್ನು ಕೈಕೊಂಡರೆ ನಮ್ಮ ಸಮಾಜ ಹಾಗೂ ನಮ್ಮ ನಾಡು ಹೆಚ್ಚು ಉನ್ನತ ಮಟ್ಟಕ್ಕೆ

ಹೋಗುವವೆಂದು ವಿನಂತಿಸಿ ಬೇಡಿಕೊಂಡದ್ದೂ ಆಯಿತು. ಆದರೆ ಯಾರೂ ಇಲ್ಲಿಯ ವರೆಗೆ ವಾಗ್ದಾನದ ಮುಂದೆ ಹೆಜ್ಜೆಯನ್ನೇ ಇಟ್ಟಿಲ್ಲೆಂದು ತಿಳಿದ್ದು ಸಖೇದಾಶ್ಚರ್ಯಗಳಾಗದೇ ಇರಲಾರವು. ಹಳಕಟ್ಟಿಯವರ ಸ್ಥಿತಿಯನ್ನು ಸ್ವತಃ ಅವರ ಮನೆಗೆ ಹೋಗಿ ನೋಡಿದರೆ ಕಟುಕನ ಕಲ್ಲೆದೆಯೂ ಕೂಡ ಕರಗುವದರಲ್ಲಿ ಸಂದೇಹವಿಲ್ಲ. ನಾನು ಅನೇಕ ಸಲ ಭೆಟ್ಟಿಯಾಗುತ್ತಿರುವೆನು. ಒಂದು ಸಲ ಅವರು ಒಂದು ಹರಕ ದೋತರವನ್ನು ಸೂಜಿದಾರದಿಂದ ತಾವೇ ಸ್ವತ: ಹೊಲಿಯುತ್ತ ಕುಳಿತಿದ್ದರು. ಇದನ್ನು ನೋಡಿ ನನಗೆ ಬಹು ಕೆಡಿಕೆನಿಸಿತು. ಬಿ. ಎ. ಎಲ್. ಎಲ್. ಬಿ. ವಕೀಲರೂ, ಸಂಪಾದಕರೂ, ಧರ್ಮಕ್ಕಾಗಿ ಸಮಾಜಕ್ಕಾಗಿ ಸದಾ ಕಾಯಾ ವಾಚಾ ಮನಸಾ ದುಡಿಯುವವರೂ, ಸುತ್ತೆಲ್ಲ ಸಿರಿವಂತ ಸಮಾಜವುಳ್ಳವರೂ ಹೀಗಿದ್ದು ಹೀಗೆ ನೆರಳಬೇಕಾಯಿತಲ್ಲಾ ? ಕಲಿಯ ಕಾಲ ! ವಿಚಿತ್ರ! ಎಂದು ಮನದಲ್ಲೇ ಅಂದುಕೊಂಡೆ. ಇವರು ಮಾಡುವ ಕೆಲಸವನ್ನು ಯಾವ ಪುಣ್ಯಾತ್ಮರೂ ತಿಳಿಯಲಿಲ್ಲವಲ್ಲ ? ಮುಂಟಿಸ, ಮೆರವಣಿಗೆ, ಜಾತ್ರಿ, ಪುಣ್ಯತಿಥಿ, ಲಗ್ನ, ಪ್ರವಾಸ, ಅಗ್ಗಿ, ೬೩ ಪುರಾತನರ ಪೂಜೆ ಮೊದಲಾದವುಗಳಿಗೆ ನೀರಿನಂತೆ ಜನರು ಖರ್ಚುಮಾಡುತ್ತಿರುವರು. ಮಾಡಿಸುತ್ತಲೂ ಇರುವರು. ಇವನ್ನು ಮಾಡಿಸುವವರು ಐಷ ಆರಾಮದಲ್ಲಿ ಲೋಲಾಡುತ್ತಿರುವರು. ಆದರೆ ಇವರ ಕರುಣಾಜನಕ ಸ್ಥಿತಿಯನ್ನು ನೋಡಿ ಸಮಾಜದ ಯಾರಿಗೂ ಕರುಣೆ ಕಳಕಳಿ ಹುಟ್ಟಬಾರದೆ ? ಎಂದು ನೊಂದುಕೊಂಡೆ. "ಶರಣರ ಮನೆ ಬಡವಾದರೂ ಮನ ಘನ ಸಂಪನ್ನ ವಿವೇಕೇಂಬ ತತ್ವದಂತೆ ಅವರು ಬಾಳುತ್ತಿರುವರು. ಈಗ ಅವರಿಗೆ ೭೫ ವರ್ಷ. ದೃಷ್ಟಿ ಮಂದ ಆಗಿದೆ. ಈ ಪ್ರಕಾರ ಇವರು ಗಳಿಸಿದ್ದನ್ನೆಲ್ಲ ಸಮಾಜಕ್ಕೆ ನೀಡುತ್ತ ಬಡವರಂತೆ ಬಾಳುತ್ತಿರುವರು. ಇವರು ಆದರ್ಶ ಶರಣರೇ ಸರಿ. ನಾವು ಇವರ ಐಷ ಆರಾಮಿಗೆ ನೆರವಾಗಲಿಕ್ಕೆ ಇಷ್ಟೊಂದು ಬರೆದು ಕೂಗಿಕೊಳ್ಳುವದಿಲ್ಲ. ಅವರ ಶಿವಾನುಭವ ಕಾರ್ಯಕ್ಕೆ ಶರಣರ ಸಾಹಿತ್ಯಪ್ರಚಾರಕ್ಕೆ ಧರ್ಮಕಾರ್ಯಕ್ಕೆ ನಾಡನುಡಿಯ ಅವರ ಸೇವಾ ಕಾರ್ಯಕ್ಕೆ ಸರ್ವರೂ, ಸರ್ವ ಸ್ವಾಮಿಗಳೂ, ಶಿಕ್ಷಕರೂ, ಅಧಿಕಾರಿಗಳೂ, ಸುಶಿಕ್ಷಿತರೂ, ಶಿರಿವಂತರೂ ಮುಕ್ತಹಸ್ತದಿಂದ ಸಹಾಯ ನೀಡಬೇಕು. ಅಲ್ಲದೆ ಅವರ ಹೊತ್ತಿಗೆಗಳನ್ನೂ ಶಿವಾನುಭವ ಮಾಸಪತ್ರಿಕೆಗಳನ್ನೂ ಹೆಚ್ಚಾಗಿ ಕೊಳ್ಳುವಂತೆ, ಓದುವಂತೆ ಜನರಲ್ಲಿ ಪ್ರತಿಯೊಬ್ಬ ವಿಚಾರವಂ

ತನು ಯತ್ನಿಸಬೇಕೆಂದು ಪುನ: ಸೂಚಿಸುವೆವು. ಎಲ್ಲ ಕಡೆಗೆ ಅಕ್ಕನ ಬಳಗ, ಶಿವಾನುಭವ ಮಂಟಪ, ಬಸವನ ಬಳಗಗಳನ್ನು ಸ್ಥಾಪಿಸಬೇಕೆಂದು ಶ್ರೀ ಹಳಕಟ್ಟಿಯವರ ಮನದ ಆಕಾಂಕ್ಷೆ ಇರುವದು. ಇವುಗಳ ಮುಖಾಂತರ ಧರ್ಮ, ನೀತಿ, ವಚನ ಪ್ರಚಾರ ಕಾರ್ಯಗಳು ನಡೆಯಲೆಂದು ಅವರು ಹಾರೈಸುತ್ತಾರೆ. ಇದನ್ನು ಮಹಾಸ್ವಾಮಿಗಳು ವ್ಯಾಗ್ಯಾನಮಾಡಿ ನಾಂದೀಹಾಕಿದ್ದಾರೆಂದು ಇವರಿಂದ ಶಿವಾನುಭವ ಕಾರ್ಯ ಬಹುಮುಖವಾಗಿ ಬೆಳೆಯುವದೆಂದೂ ನಾವು ಸಂಪೂರ್ಣ ನಂಬಿದ್ದೆವು. ಇದೆಲ್ಲ ಈ ೬-೭ ತಿಂಗಳುಗಳಲ್ಲಿ ಮಾಯವಾಗಿಹೋಯಿತು. ಇನ್ನಾದರೂ ಸಮಾಜದ ಈ ನಂಬಿಗೆಯನ್ನು ಸ್ಥಿರಗೊಳಿಸಿ ಸ್ವಾಮಿಗಳು ನುಡಿದ ಈ ಕಾರ್ಯವನ್ನು ಮಾಡುವರೆಂದು ನಾವು ಆಶಿಸುವೆವು. ಅವರು ಇದಕ್ಕಾಗಿ ಶ್ರಮಿಸಿದರೆ ಹಿಂದುಳಿದ ನಮ್ಮ ಸಮಾಜ, ಧರ್ಮ, ಶರಣಸಾಹಿತ್ಯಗಳೆಲ್ಲವೂ ಉನ್ನತ ಮಟ್ಟಕ್ಕೆ ಹೋಗುವದರಲ್ಲಿ ಸಂದೇಹವಿಲ್ಲ. ಸರ್ವರೂ ಶ್ರೀ ಹಳಕಟ್ಟಿಯವರ ಕಾರ್ಯಕ್ಕೆ ನೆರವಾಗಬೇಕೆಂದು ಎಲ್ಲರಿಗೂ ಅಂಗಲಾಚಿ ಬೇಡಿಕೊಳ್ಳುವೆವು. ಮುಂದಿನ ಕಾರ್ಯದ ದಾರಿಯನ್ನೇ ಸರ್ವರೂ ನೋಡುತ್ತಿರುವರು. ಒಂದು ವ್ಯವಸ್ಥಿತ ರೀತಿಯಲ್ಲಿ ಕಾರ್ಯ ಕೈಕೊಂಡರೆ ಸರ್ವವೂ ಸಾಧ್ಯವಾಗುವದು. ಪ್ರತಿ ಜಿಲ್ಹೆಯ ಮಹಾ ಮಹಾ ಸ್ವಾಮಿಗಳೆಲ್ಲರೂ ಈ ಕಾರ್ಯವನ್ನು ಸರ್ವತೋಮುಖದಿಂದ ಮಾಡಿ ಕೀರ್ತಿ ಗಳಿಸಿರಿ. ಶ್ರೀ ಹಳಕಟ್ಟಿಯವರ ಮನೆಗೆ ಹೋಗಿ ಒಮ್ಮೆಯಾದರೂ ಭೆಟ್ಟಿಕೊಟ್ಟು ನಿಜಸ್ಥಿತಿಯನ್ನು ಕಂಡುಕೊಳ್ಳಿರಿ. ದರ್ಶನದಿಂದ ನಿಜವಾದ ಶರಣರ ಕಲ್ಪನೆ ಬರುವದು. ಮನೆಯಲ್ಲಿ ಶಿಪಾಯಿ ಆಳುಗಳಿಲ್ಲ. ಸಾದಾ ಜೀವನ, ಉದಾತ್ತ ವಿಚಾರವುಳ್ಳ ಶಿವಶರಣರೆಂದು ಕಲ್ಪನೆ ಬರುವದು. ಇವರ ಕಾರ್‍ಯಭಾರವನ್ನು ಎಲ್ಲರೂ ಕೂಡಿ ಕಡಿಮೆಮಾಡಿ ಅವರ ಕಾರ್ಯಗಳು ಕಡೆತನಕ ನಡೆಯುವಂತೆ ಸಮಾಜದವರು ಏರ್ಪಾಡು ಮಾಡಬೇಕೆಂದು ವಿನಂತಿಸುವೆನು.

# ದೇವನಿಗೆ ಬೇಡುವದೊಳಿತೆ?

( ಬರೆದವರು:— ಶ್ರೀ ಶಿವಾನಂದ ಸ್ವಾಮಿಗಳು, ತೆಗ್ಗಿಹಳ್ಳಿ ಗವಿಮಠ.)

(೧)

ರಕ್ಷಿಸ್ವ ರಕ್ಷಿಸ್ವ ಎಂದು ।
ಅಕ್ಷರನ ಕರೆಯುವದದೇಕೆ?
ರಕ್ಷಿಸದೆ ಬದುಕಿಹುದೆ ಜಗವೆಲ್ಲತಾನು? ॥೧॥

ಜೋಕೆ ಮಾಡ್ವೆ ಎಂದು?
ಯಾಕೆ ಒರಲುವಿ ಮನುಜ?
ಜೋಕೆಗಾಗಿಯೆ ಇಹವು ಸರ್ವಸಾಧನವ ॥೨॥

ಸಂಪದವ ನೀಯೆಂದು ।
ಕಂಪನವ ದೇಕಯ್ಯ?
ಸೊಂಪಾದ ಜಗವಿದಾರಿಗಿದೆ ಹೇಳು ॥೩॥

ಲಕ್ಷಿಸ್ವೆ ಲಕ್ಷಿಸ್ವೆ ಎಂದು ।
ರಕ್ಷಕನ ಕರೆಯುವದೇಕೆ?
ಅಲಕ್ಷ ಮಾಡಲು ಲಕ್ಷದಲಿ ಕುಂದೆ ॥೪॥

ಅದು ಇದನು ಕೊಡು ಎಂದು ।
ಕದನ ಮಾಡುವದೇಕೆ!
ಆವುದನು ತನಗಾಗಿ ಇಟ್ಟುಕೊಂಡಿಹನು? ॥೫॥

ಧರೆ ಶಿರಿಯ ಕೊಡು ಎಂದು
ಕರೆಕರೆದು ವರಲುವಿಯಾಕೆ? ।
ಧರೆ ಶಿರಿಗಳನ್ನೆನು ತನಗಿಟ್ಟುಕೊಂಡಿಹನೆ? ॥೬॥

ದಯವ ತೋರ್ಯೆ ಎಂದು ।
ಭಯದಿ ಕರೆಯು ಯಾಕೆ?
ದಯವ ತೊರೆದಾ ಕಟಕರವನೇನಾತನು? ॥೭॥

ಸಿಕ್ಕವರು ಸಿಕ್ಕಂತೆ ।
ಒರಲಿದರೆ ಆವನೆಂತು ?
ಆರಾವ ವಿಶ್ರಾಂತಿ ಪಡೆವುದೆಂತು ? ॥೮॥

ಎಲ್ಲರೂ ತಮತಮಗೆ ।
ಒಗ್ಗುತಿಹ ಕಾಯಕವ ।
ಸತ್ಯದಿಂದಲಿಮಾಡೆ ಶಾಂತಿ ಸುಖವು ॥೯॥

ಚಿತ್ತದಲಿ ದೇವನನು ।
ಮತ್ತೆ ನೆನೆಯುತ ಮುದದಿ ।
ಸತ್ಯದಿಂ ಬಾಳುವದು ಶರಣರಂತೆ ॥೧೦॥

ಆವುದನು ತನಗಾಗಿ ।
ಗಳಿಸದಲೆ ಪರಹಿತಕೆ
ಈವುತಲಿ ಬಾಳುವದು ಸಮತೆಯಿಂದ ॥೧೧॥

ಜೀವನದ ಹುಟ್ಟನ್ನು
ಅರಿಯುದಕೆ ಶರಣರಾ
ವಚನಗಳನೊದುವದು ಮುದದಿ ನೀವು ॥೧೨॥

—o—

( ೨ )

## ಕೋಕಿಲೆ (ಸದ್ಗುರು)

ಕೂಗು । ಕೂಗುಲೆ ಕೋಕಿ ।
ಕಾಗಿಗಂಜದ ಕೂಗು !
ಕೂಗಿನರ್ಥವದೇನು ?
ಯಾವ ಕೂಗು ? ॥೧॥

ಆತ್ಮಗಾನದ ಕೂಗೊ ?
ಸ್ವಾತಂತ್ರ್ಯದಾ ಕೂಗೊ ?
ಮಾನುಷತ್ವದ ಕೂಗೊ?
ಯಾವ ಕೂಗೊ? ॥೨॥

ಏಸು ದಿನಗಳ ಮೌನ?
ಏಸು ದಿನಗಳ ತಪವು?
ಏಸು ಕಷ್ಟಬಿಟ್ಟ ?
ಕೂಗಿಗಾಗಿ ||೩.||

ಊಟಕೂಟವ ಬಿಟ್ಟ
ಆಟ ನೋಟವ ಬಿಟ್ಟ
ಅಷ್ಟು ಎಲ್ಲವ ಬಿಟ್ಟ
ಕೂಗಿಗಾಗಿ ||೪.

ಜ್ಞಾನ ಕದಲಲಿ ಮಿಂದು ।
ಸತ್ಯ ಬೆಳಕವ ಕಂಡು ।
ಸ್ವಾನುಭವದಲಿ ಇಂದು
ಕೂಗು ತಿರುವಿ ||೫||

ಆತ್ಮಸೂರ್ಯನ ಕಂಡು
ನಿಜಸುಖದ ಅರಿವಾಗಿ
ಸ್ವಾತಂತ್ರ್ಯಗಾನವನು
ಕೂಗುತಿರುವಿ ||೬||

ಕಲ್ಕಿಕಾಗಿಗೆ ನಿನ್ನ ।
ಹಿರಿಕೂಗು ಸೇರದಕೆ
ಜಗಿಜಗಿದು ಬರುತಿಹುದು
ಕೂಗವರಿದೆ ।೭||

ದೇಹಬಲವದು ಕಿರಿದು
ಆತ್ಮಬಲವದು ಹಿರಿದು
ಬಾಹ್ಯಕಂಜದೆ ನೀನು
ಕೂಗು ತಿರುವಿ ||೮||

ಜ್ಞಾನಗಳಿಸಲು ನೀನು
ಜ್ಞಾನಯೋಗಿಯು ಆದಿ
ಕರ್ಮಯೋಗಿಯು ಅಹುದು
ಕೂಗಿಗಾಗಿ ||೯||

ಏನು ಬೇಡದೆ ಮುದದಿ
ಏನು ಕಾಡದೆ ನಿರುತ
ಭೇದ ಬುದ್ಧಿಯ ತೊರೆದು
ಕೂಗುತಿರುವಿ ॥೧೦॥

ಜೀವನದ ಸವಿಗಾನ—
ಜಗವು ಕೇಳಲಿ ಎಂದು
ಇದನು ಕಲಿಯಲಿ ಎಂದು
ಕೂಗುತಿರುವಿ ॥೧೧॥

ನಿಜಗುರುವು ನೀನಹುದು
ಹಿರಿಮಾಹಾತ್ಮ ನೀನಹುದು
ಹಿತದ ಚಿಂತಕನಹುದು
ಕೋಕಿ ನೀನು ॥೧೨॥

ಇಂಪು ಗಾನವ ಕೇಳಿ
ಬಂತು ಜನ ಬೆಂಬತ್ತಿ
ಸಂತಸದಿ ನಿನ್ನಂತೆ
ಕೂಗು ಕಲಿಯಲ್ ॥೧೩॥

—೦—

## (೩)
# ಮನವೆಂಬ ಹಕ್ಕಿ

ಬೆಕ್ಕಿಗೆ ಅಂಜದ ಹಕ್ಕೊಂದು ಇರುವದು ।
ಸಿಕ್ಕಂತೆ ಹಾರುವದು ।
ಗೂಡನು ಬಿಟ್ಟು ಹಾರುತಲಿರುವದು ।
ನೋಡದಂತ್ಯಾರ್‍ಯಾರು ॥೧॥
ಗೂಢಾದ ಗೂಡವು ಕೆಡವುದು ಬಿಡವಲೆ ।
ಎಡವಿಡದೆ ಹಾರುತಿರೆ ।
ಹೀಂಗೊಮ್ಮೆ ಹಾರುವದು ಹಾಂಗೊಮ್ಮೆ ಹಾರುವದು ।
ಹಂಗರಿದ ಮಂಗನಂತೆ. ॥೨॥

ಒಂದೊಂದೆ ಗಳಿಗೆಯಲಿ ಬ್ರಹ್ಮಾಂಡ ಸುತ್ತುವದು ।
ಒಂದನ್ನು ಬಿಡದಂತೆ ।
ಒಂದೊಮ್ಮೆ ಗೂಡನು ಕಾಡದಲೆ ಸೇರುವದು ।
ಮಂದಿಗೆ ಕಾಣದಂತೆ ॥೩॥

ಅಲ್ಲದ್ದು ಕಾಂಬುವದು ಇಲ್ಲದ್ದು ಬಯಸುವದು ।
ಚಲ್ಲಾಟವೆಷ್ಟಿಹುದು ।
ನಲ್ಲೆಯರ ಮೀನಗಳ ಹಿಡಿಯಲು ಓಡುವದು ।
ಗುಲ್ಲವನು ಎಬ್ಬಿಸುತೆ ॥೪॥

ಒಡೆಯನ ಮಾತನು ಕೇಳದೆ ಹಾರುವದು ।
ಗೂಡಿನಿಂದೆದ್ದು ।
ಹೊಲ್ಲಾದ ಸುಖಕಾಗಿ ಗೂಡನ ಕೆಡಿಸಲು ।
ಸಿಕ್ಕಲ್ಲೆ ಹಾರುವದು ॥೫॥

ಒಡೆಯಗೆ ಹಕ್ಕಿಯು ವೈರಿಯು ಆಗುತ ।
ಅಡವಿಗೆ ಧುಮುಕುವದು ।
ಹಕ್ಕಿಯ ಹಿಡಿವುದು ಒಡೆಯಗೆ ಆಗದೆ ।
ಸಿಕ್ಕಂತೆ ಬಳಲುವನು ॥೬॥

ಲೆಕ್ಕಿರದೆ ವೇಗದಿ ಸಿಕ್ಕಲ್ಲಿ ಹಾರುತ ।
ಥಕ್ಕವ ಬಡಿಸುವದು ।
ಸಂಕಲ್ಪ ವಿಕಲ್ಪಬಿಡದಲೆ ಹಾಕುವದು ।
ಅಂಕಿತದಲ್ಲಿರದು ॥೭॥

ಇನಿಯರ ಸುತ್ತಲೆ ಹಾರುತ ಚಲ್ಲಾಟ ।
ಅವರೊಡನಾಡುವದು ।
ವನಿತೆಯರ ಏರಿಳಿತದೊಳಗದು ಹಾರುತ ।
ಶೋಧವ ಮಾಡುವದು ॥೮॥

ತರ್ಕದ ರೆಕ್ಕೆಯು ಮೇಲದು ಹಾರುತ ।
ಸೊಕ್ಕಿಲೆ ಮೆರೆಯುವದು ॥
ಕೇಳುವ ನೋಡುವ ಮೂಸವರೆಂಬೈದು ।
ಆಳುಗಳಾತಂಗೆ ॥೯॥

ನಡಿಯುವ ಹಿಡಿಯುವ ಸೇವಕರೈವರು ।
ಆತಗೆ ನೆರವುಂಟು ।
ಬೇಡಿದ್ದು ಕೊಡದಿರೆ ಗಡಿಬಿಡಿ ಮಾಡುವದು ।
ಕೊಟ್ಟರೂ ಸಾಕೆನ್ನದು ॥೧೦॥

ಒಮ್ಮೆ ಒಮ್ಮೆ ಗೂಡನು ಎಳಕೊಂಡು ಹಾರುವದು ।
ಧರಣಿಯು ಸುಖಕಾಗಿ ।
ಒಡೆಯನ ಗೂಡನು ಲೆಕ್ಕಿಗೆ ತಾರದೆ ।
ಎಡಬಿಡದೆ ಹಾರುವದು ॥೧೧॥

ಹಾರುವ ಹಕ್ಕಿಯೆ ದೇಶಕ್ಕೆ ಬಡತನ ।
ಕೋರುತೆ ತಂದಿಹುದು ।
ಹಿರಿತನ ಒಡೆತನ ಅಧಿಕಾರ ಸಂಪತ್ತು ।
ಹಾರುತೆ ಕಳೆದಿಹುದು ॥೧೨॥

ತಿರುತಿರು ಸತ್ತರು ನಿಟ್ಟುಸಿರನಿಟ್ಟರು ।
ಅಟ್ಟುವದು ಬಿಡದೆಂದು ।
ನಾಚಿಕೆಗೇಚಿಕೆ ಕಳೆದೊಗೆದಾಚಿಗೆ ।
ಸೂಚಿಸದೆ ಹಾರುವದು ॥೧೩॥

ಹೆದರಿಕೆ ಬೆದರಿಕೆ ಅಂಜಿಕೆ ಗಿಂಜಿಕೆ ।
ಹರಿದೊಗೆದಾಚೆಗೆ ।
ಗಾಳಿಗು ಹಗುರಾಗಿ ಮಿಂಚಿಗೂ ಮುಂಚಾಗಿ ।
ತೊಳಲುತ ಹಾರುವದು ॥೧೪॥

ತರತರದ ಎಣಿಸ್ಯಾಟ ಮಂಗನ ಕುಣಿಸ್ಯಾಟ ।
ಬರಿಬರಿಯ ಗುಣಸ್ಯಾಟ ।
ದುಃಖದ ಪರಿವಿಲ್ಲ ನಿಜಸುಖದ ಅರಿವಿಲ್ಲ ।
ಮೀರಿದ ಹಾರಾಟ ॥೧೫॥

ಹೊರಗಿನ ಹುಸಿ ಸುಖಕೆ ಹಾರತ ಹಗಲೆಲ್ಲ ।
ಧರೆಯನ್ನು ಸುತ್ತುವದು ।
ಗೂಡಿನೊಳಿರುತಿಹ ಹಿರಿದಾದ ಸುಖವನ್ನು ।
ಅರಿಯದೆ ಕೆಡುತಿಹವು ॥೧೬॥

ಸುಳ್ಳೆಣಿಕಿ ಬರಿ ಕೆಣಿತ ಒಳಹೊರಗ ಹಣಿಹಣಿಕಿ ।
ಕಳ್ಳನ ಕಳತನವು ।
ಒಳ್ಳೆಯವಗದು ಮಳ್ಳವ ಹಿಡಿಸುವದು ।
ತಳ್ಳಿಯು ಕೋರರಂತೆ ॥೧೭॥

ಹಕ್ಕಿಯು ನಿರುತದಿ ಗೂಡಿನೊಳಿದ್ದರೆ ।
ಲೆಕ್ಕಿರದ ಸುಖವುಂಟು ।
ಒಡೆಯನು ಮಿಕ್ಕಿರ್ದ ಶರಣನು ಅಗುತ ।
ಇಹಪರದಿ ಸುಖಿಸುವನು ॥೧೮॥

ಹಕ್ಕಿಯು ಹಾರಾಟ ಕೋರದೆ ಇದ್ದರೆ ।
ಸ್ವಾತಂತ್ರ್ಯ ಸುಖವುಂಟು ।
ಧೂರೆತನ ಸಿರಿತನ ಹಿರಿತನ ಅಧಿಕಾರ ।
ಜ್ಞಾನದ ಬೆಳಕುಂಟು ॥೧೯॥

ಹಕ್ಕಿಯ ಬಲವಾದ ರೆಕ್ಕೆಯ ಕಡೆದರೆ ।
ಭೇದವೆ ಅಡಗುವದು ।
ಹಕ್ಕಿಯೆ ಒಡೆಯನು ಒಡೆಯನೆ ಹಕ್ಕಿಯು ।
ಒಂದಾಗಿ ಸುಖಿಸುವದು ॥೨೦॥

———

# ಶಿವಾನುಭವ ಪತ್ರಿಕೆಯು ಮುಂದಿನ ವಾಙ್ಮಯ ಕಾರ್ಯಗಳು.

ಶಿವಾನುಭವ ಪತ್ರಿಕೆಯ ಮೂಲಕ ಪ್ರಕಟವಾದ ಪೂರ್ಣ ಗ್ರಂಥಗಳ ಸಂಖ್ಯೆಯನ್ನು ನಾವು ಈಚೆಗೆ ಎಣಿಕೆ ಮಾಡಲಾಗಿ ಅವುಗಳ ಸಂಖ್ಯೆಯು ೧೦೩ ಇರುವದಾಗಿ ಕಂಡುಬಂದಿತು. ಈ ಗ್ರಂಥಗಳು ಈಚಿನವಾಗಿರದೆ ಅವು ಪುರಾತನ ಕಾಲದವು ಇದ್ದು, ಅವುಗಳಲ್ಲಿ ಶಿವಶರಣರ ತತ್ವಗಳ ವಿವೇಚನೆಯ ಹೊರ್ತು ಬೇರೊಂದಿರುವದಿಲ್ಲ. ಇದರ ಮೇಲಿಂದ ಶಿವಾನುಭವ ಪತ್ರಿಕೆಯು ಹೋದ ೩೦ ವರ್ಷಗಳಲ್ಲಿ ಎಂಥ ಮಹತ್ವದ ಕಾರ್ಯವನ್ನು ಮಾಡಿರುತ್ತದೆಂಬುದರ ಅರಿಕೆಯು ವಾಚಕರಿಗೆ ಆಗದೆ ಇರಲಾರದು.

ಆದರೆ ಕೆಲವು ಮಹತ್ವದ ಗ್ರಂಥಗಳು ಇನ್ನೂ ಅಪೂರ್ಣವಾಗಿರುತ್ತವೆ. ಅವುಗಳನ್ನು ನಾವು ಇನ್ನುಮೇಲೆ ಪೂರ್ಣ ಮಾಡಿ ಪ್ರಕಟಿಸುವ ಕಾರ್ಯವನ್ನು ಕೈಕೊಳ್ಳುವೆವು. ಈಗ ನಾವು ಸಕಲಾಗಮಶಿಖಾಮಣಿ ಮತ್ತು ನೂರೊಂದರ ಹಾಡುಗಳು ಎಂಬ ಗ್ರಂಥಗಳ ಮುದ್ರಣವನ್ನು ಕೈಕೊಂಡಿದ್ದೇವೆ. ಇಷ್ಟರಲ್ಲಿ ನಾವು ಬಸವೇಶ್ವರನ ಚರಿತ್ರೆಯ ಸಂಶೋಧನೆಯನ್ನು ಮುಂದುವರಿಸಿ ಅದರ ಮುದ್ರಣವನ್ನು ಕೈಕೊಳ್ಳುವೆವು. ಬಸವೇಶ್ವರನ ವಿಷಯವಾಗಿ ನಿಂದಾಯುಕ್ತ ಲೇಖಗಳು ಈಚೆಗೆ ಪ್ರಕಟವಾಗಹತ್ತಿವೆ. ಅವು ದೂರಾಗಬೇಕಾದರೆ ಅವನ ಚರಿತ್ರೆಯನ್ನು ವೀರಶೈವರು ಆಧಾರಯುಕ್ತವಾಗಿ ಬರೆಯುವದು ಅವಶ್ಯವಿರುತ್ತದೆ.

ಮಧ್ಯದಲ್ಲಿ ನಾವು ಟೀಕಾತ್ಮಕ ಬಸವೇಶ್ವರನ ವಚನಗಳನ್ನು ಪ್ರಸಿದ್ಧಿಸುವ ಕಾರ್ಯವನ್ನು ಕೈಕೊಂಡಿದ್ದೆವು. ಅವನ ಸುಮಾರು ನೂರು ವಚನಗಳಿಗೆ ಸುಲಭ ಭಾಷೆಯಲ್ಲಿ ಟೀಕೆಯನ್ನು ಬರೆದಿದ್ದೇವೆ. ಅದನ್ನು ನಾವು ಇನ್ನುಮೇಲೆ ಮುಂದುವರಿಸುವೆವು. ಅದನ್ನು ಮುಂದುವರಿಸಬೇಕೆಂದು ಬಹು ಜನರ ಅಪೇಕ್ಷೆ ಇದೆ.

ಶಿವಶರಣರ ಚರಿತ್ರೆಗಳು ಭಾಗ ೪. ಇದು ಮುಗಿಯಲಿಕ್ಕೆ ಬಂದಿದೆ. ಅದನ್ನು ಶೀಘ್ರ ಮುಗಿಸುವೆವು. ಮಧ್ಯದಲ್ಲಿ ಸಟೀಕ ಏಕೋತ್ತರ ಷಟ್ಸ್ಥಲ ಗ್ರಂಥವನ್ನು ಪ್ರಾರಂಭಿಸಿದ್ದೆವು ಅದು ವೀರಶೈವ ವಾಙ್ಮಯದಲ್ಲಿ ಬಹು ಶ್ರೇಷ್ಠ ಗ್ರಂಥವಾಗಿದೆ. ಅದರ ಕೆಲವು ಪುಟಗಳು ಮಾತ್ರ ಈ ಮೊದಲು ಪ್ರಸಿದ್ಧವಾದವು ಅದನ್ನು ನಾವು ಮುಂದೆ ಶೀಘ್ರವಾಗಿ ಮುಗಿಸುವೆವು.

ಶೂನ್ಯಸಂಪಾದನೆ ಗ್ರಂಥದಲ್ಲಿಯ ಮೂರು ಸಂಪಾದನೆಗಳು ಪ್ರಕಟವಾಗಿವೆ. ಮುಂದೆ ಮಹಾದೇವಿಯಕ್ಕ, ಗೊಗ್ಗವ್ವೆ, ಆಯ್ದಕ್ಕಿ ಮಾರಯ್ಯ ಮುಂತಾದವರ ಸಂಪಾದನೆಗಳನ್ನು ಮುಗಿಸುವೆವು.

ಈ ವರೆಗೆ ಪ್ರಕಟಿಸಿದ ಗ್ರಂಥಗಳಲ್ಲಿ ಪ್ರಭುದೇವರ ವಚನಗಳು ಅತ್ಯು ಚ್ಚತರದ ಗ್ರಂಥವಾಗಿದೆ. ಇದರ ಮುದ್ರಣದ ವೆಚ್ಚದ ಕೆಲ ಭಾಗವನ್ನು ಶ್ರೀ. ಸಂಗಮನಾಥ ಸ್ವಾಮಿಗಳು ಚನ್ನಗಿರಿ ತಾಲೂಕು ಬಿಲ್ಲಹಳ್ಳಿ ಮಠಾಧೀ ಶ್ವರರು ವಹಿಸಲು ಮುಂದುವರಿದಿದ್ದಾರೆ. ಈ ಗ್ರಂಥವನ್ನು ಪ್ರಕಟಿಸುವ ಕಾರ್ಯವನ್ನು ತತ್ ಕ್ಷಣವೇ ಕೈಕೊಳ್ಳತಕ್ಕವರಿದ್ದೇವೆ. ಈ ಗ್ರಂಥವು ವೀರಶೈವ ವಾಙ್ಮಯದಲ್ಲಿ ಬಹು ಶ್ರೇಷ್ಠತರಗತಿಯ ಗ್ರಂಥವಾಗಿರುತ್ತದೆ. ಈ ಗ್ರಂಥದ ಜ್ಞಾನವಿರದ ಹೊರತು ವಚನಶಾಸ್ತ್ರದ ತಿಳಿವಳಿಕೆಯು ಎಂದಿಗೂ ಪೂರ್ಣವಾಗಲಾರದು.

ನಾವು ದಿಂದಿನ ವಾರದಲ್ಲಿ ಧಾರವಾಡದ ಮುರುಘಾಮಠಕ್ಕೆ ಭೆಟ್ಟಿ ಯನ್ನು ಕೊಟ್ಟಾಗ ಅಲ್ಲಿ ಶ್ರೀ ಮೃತ್ಯುಂಜಯ ಸ್ವಾಮಿಗಳೊಡನೆ ಶಿವ ಶರಣರ ವಾಙ್ಮಯದ ಬಗ್ಗೆ ವಿಚಾರವಿನಿಮಯ ಮಾಡುತ್ತಿರಲಾಗಿ ವಿದ್ಯಾರ್ಥಿ ಗಳಿಗಾಗಿ ಪಠ್ಯಪುಸ್ತಕಗಳನ್ನು ತೀವ್ರ ನಿರ್ಮಾಣ ಮಾಡುವದು ಅವಶ್ಯವೆ ನಿಸಿತು. ನಾವು ಅಲ್ಲಿಂದ ವಿಜಾಪೂರಕ್ಕೆ ಬಂದಬಳಿಕ ಈ ವಿಷಯವನ್ನು ಕುರಿತು ಹೆಚ್ಚಿಗೆ ಆಲೋಚಿಸಲಾಗಿ ಕೆಳಗೆ ಕಾಣಿಸಿದಂತೆ ಪಠ್ಯ ಪುಸ್ತಕ ಮಾಲೆಗಳನ್ನು ಸಿದ್ಧಪಡಿಸುವದು ಅವಶ್ಯವೆಂದು ತೋರಿತು. ಅವು ಯಾವ ವೆಂದರೆ, (೧) ಬಾಲಕರಿಗೋಸ್ಕರ ಚಿಕ್ಕ ಪಠ್ಯಪುಸ್ತಕಗಳನ್ನು ನಿರ್ಮಿ ಸುವದು. ಇವುಗಳಲ್ಲಿ ಶಿವಾನುಭವದ ಸಾಮಾನ್ಯ ವಿವೇಚನೆಯು ಇರತ ಕ್ಕದ್ದು. (೨) ಹೆಚ್ಚಿನ ವಯಸ್ಸಿನವರಿಗೋಸ್ಕರ ಉಚ್ಚತರದ ಪಾಠಗ ಳುಳ್ಳ ಬೇರೊಂದು ಮಾಲೆಯನ್ನು ರಚಿಸತಕ್ಕದ್ದು. (೩) ಕಾಲೇಜದಲ್ಲಿಯ ಪ್ರೌಢ ವಿದ್ಯಾರ್ಥಿಗಳಿಗೋಸ್ಕರವೂ ಹೆಚ್ಚಿನ ತರಗತಿಯ ಗ್ರಂಥಗಳನ್ನು ಬರೆಯತಕ್ಕದ್ದು. (೪) ಗ್ರಾಮಾಂತರಗಳಲ್ಲಿರುವ ವಯಸ್ಕರಾದವರ ಅಭ್ಯಾ ಸಕ್ಕೋಸ್ಕರವೂ ಬೇರೆ ಪುಸ್ತಕಗಳನ್ನು ಸಹ ರಚಿಸತಕ್ಕದ್ದು. ಹೀಗೆ ಪಠ್ಯ ಪುಸ್ತಕಗಳು ಆದಲ್ಲಿ, ಶಿವಶರಣರ ವಿಚಾರಗಳ ತಿಳುವಳಿಕೆಯು ಎಲ್ಲ ಕಡೆಗೂ ತೀವ್ರವಾಗಿ ಪ್ರಸಾರ ಮಾಡಲಿಕ್ಕೆ ಅನುಕೂಲವಾಗುವದು. ಈ ಗ್ರಂಥಗಳಲ್ಲದೆ. ಚರಿತ್ರಾತ್ಮಕ ಗ್ರಂಥಗಳ ಏರ್ಪಾಡೂ ಆಗುವದು ಅವಶ್ಯವು. ಈ ಪ್ರಕಾರ ಪಠ್ಯಪುಸ್ತಕಗಳನ್ನು ನಿರ್ಮಾಣ ಮಾಡುವದು ಅವಶ್ಯ ತೋರುತ್ತದೆ. ಈ ವಿಷಯವಾಗಿ ಸಾರ್ವಜನಿಕರು ತಮ್ಮ ಅಭಿಪ್ರಾಯಗ ಳನ್ನು ತಿಳಿಸಿದಲ್ಲಿ ನಾವು ಆಭಾರಿಯಾಗುವೆವು.

—ಸಂಪಾದಕರು.

# ಎಸ್. ಟಿ. ಇವರ ಪ್ರಕಟನೆ.

ಕೆಲವೊಂದು ವರ್ತಮಾನ ಪತ್ರಗಳಲ್ಲಿ "ಎಸ್. ಟಿ. ಯು ನವಕರರನ್ನು ಕೆಲವು ಭಾಗಗಳಲ್ಲಿ ದೊಡ್ಡ ಪ್ರಮಾಣದಿಂದ ಕಡಿಮೆಮಾಡಲ್ಪಟ್ಟಿದೆ" ಎಂದು ಪ್ರಸಿದ್ಧಿಸಿದ್ದು ಕಂಡುಬಂದಿದೆ. ಇಷ್ಟೇಅಲ್ಲ! ಎಸ್. ಟಿಯು ಆಡಳಿತೆಕ್ಕಿಂತಲೂ ಮೊದಲು ಕೆಲಸ ಮಾಡುತ್ತಿದ್ದ ಖಾಸಗಿ ಕಂಪನಿಗಳಿಂದ ಭರತಿಮಾಡಲ್ಪಟ್ಟ ನವಕರರನ್ನು ಸಹ ಕಡಿಮೆಮಾಡಲ್ಪಟ್ಟಿದೆ. ಹಾಗು ಅವರ ನವಕರಿಯ ಕಾಲಾವಧಿಯನ್ನು ಸಹ ಲೆಕ್ಕಿಸಲಾಗಿಲ್ಲ. ಈ ಪ್ರಕಾರವಾಗಿ ಪ್ರಸಿದ್ಧಿಸಲ್ಪಟ್ಟಿದ್ದು ಕಂಡುಬಂದಿದೆ. ಆದ್ದರಿಂದ ಜನತೆಗೆ ಈ ಬಗ್ಗೆ ಆದ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸಿ ಆ ಬಗ್ಗೆ ಸತ್ಯವಾಗಿದ್ದ ಸಂಗತಿಯನ್ನು ಎಲ್ಲರ ಮುಂದೆ ಸಾದರಪಡಿಸುವದು ಯುಕ್ತವಾಗಿತೋರುತ್ತದೆ. ಮಳೆಗಾಲದಲ್ಲಿ ಎಲ್ಲ ರಸ್ತೆಗಳು ಹೊಳೆಹಳ್ಳಗಳಿಂದ ಕಟ್ಟಾಗಿ ಹೋಗುವವಲ್ಲದೆ ಕಚ್ಚಾ ಮಾರ್ಗಗಳು ಸಾರಿಗೆಯ ಕೆಲಸಕ್ಕೆ ಸಂಪೂರ್ಣ ಬಂದುಬೀಳುವವು. ಹೀಗೆ ಸ್ಟೇಟಟ್ರಾನ್ಸಪೋರ್ಟದ ಸಾರಿಗೆಯೇ ಕಟ್ಟಾಗುವ ಮೂಲಕ ನವಕರರನ್ನು ಕಡಿಮೆ ಮಾಡುವ ಕಾರ್ಯವು ಅತ್ಯವಶ್ಯವಾಗುವದು.

ಮಳೆಗಾಲದ ವೇಳಾಪತ್ರಿಕೆಯನ್ನು ತಯಾರಿಸುವ ಕಾಲಕ್ಕೆ ಈ ಸಾರೆ ಮಾನವಶಕ್ತಿಯು ಸಾಕಷ್ಟು ಉಪಯೋಗವಾಗುವಂತೆ ವ್ಯವಸ್ಥೆ ಮಾಡಿದ್ದು ಆದಷ್ಟು ಜನರನ್ನು ಕಡಿಮೆಮಾಡದಂತೆ ನೋಡಿಕೊಳ್ಳಲಾಗಿದೆ. ಇಷ್ಟಾದರೂ ಕೂಡ ಕೆಲವು ಗಾಡಿಗಳ ಮೇಲೆ ಕೆಲಸ ಮಾಡುತ್ತಿರುವ ನವಕರರು ಹೆಚ್ಚು ಆಗಿರುವರೆಂದು ಕಂಡುಬಂದಿತು. ಹಾಗು ಅವರನ್ನು ಕಡಿಮೆ ಮಾಡುವ ಭಾಗಬಿತ್ತು. ಈ ಕಡಿಮೆ ಮಾಡಲ್ಪಟ್ಟ ಜನರಿಂದ ಈ ಗಲಭೆಯು ಎದ್ದಿದ್ದು ಸ್ಟೇಟ ಟ್ರಾನ್ಸಪೋರ್ಟಕ್ಕೆ ಹೀಗೆ ಮಾಡುವ ಉದ್ದೇಶವೇನೂ ಇರಲಿಲ್ಲವೆಂಬದು ಈ ಸಂಸ್ಥೆಯು ಮಾಡಿದ ಕೆಳಗಿನ ಹುಕುಮಿನ ಮೇಲಿಂದ ಸ್ಪಷ್ಟವಾಗುವದು.

(೧) ಯಾವನೊಬ್ಬ ನವಕರನು ತನ್ನ ವಾರದ ಬಿಡುವು ಹಾಗು ರಜೆಯ ದಿನಗಳನ್ನು ಹೊರ್ತುಪಡಿಸಿ ೨೪೦ ದಿವಸಗಳಿಗಿಂತ ಹೆಚ್ಚಿಗೆ ಕೆಲಸ ಮಾಡಿದ್ದರೆ ಅವನನ್ನು ಕೆಲಸದಿಂದ ಕಡಿಮೆಮಾಡುವ ದಾಗುವದಿಲ್ಲ. ಹಳೇ ಮೋಟರ ಕಂಪನಿಗಳಲ್ಲಿ ದುಡಿಯುತ್ತಿದ್ದ ನವಕ ರನ ನವಕರಿಯು ಕಾಲಾವಧಿಯು ಅಲ್ಲಿ ಅವನು ದುಡಿದಷ್ಟು ದಿವಸಗ ಳನ್ನು ಗ್ರಹಿಸಿ ಒಟ್ಟಿಗೆ ಆಗುವ ಕಾಲಾವಧಿಯನ್ನು ಅವನ ನವಕರಿಯು ಕಾಲಾವಧಿ ಎಂದು ತಿಳಿಯಲಾಗುವದು.

(೨) ನವಕರಿಯಿಂದ ಕಡಿಮೆಮಾಡಲ್ಪಟ್ಟ ನವಕರನನ್ನು ಖಾಲೀ ಜಾಗೆಗಳ ಮೇಲೆ ನೇಮಿಸಿಕೊಳ್ಳಲಾಗುವದು. ಬಳಿಕ ಉಳಿದವರನ್ನು ಮಳೆಗಾಲದ ಸಮಾಪ್ತಿಯಾದನಂತರ ಕೆಲಸದ ಮೇಲೆ ಪುನಃ ತೆಗೆದು ಕೊಳ್ಳಲಾಗುವದು. ಹೀಗೆ ಮಾಡಿದ ನವಕರರನ್ನು ಲೇಬರ ಕಾಯದೆ ಯನ್ವಯ ಬಾಧೆ ಬರುವಂಥ ಹಕ್ಕು ಬಾಧ್ಯತೆಗಳನ್ನು ಕಾಯದೆಯು ಕಕ್ಷ ದಿಂದ ರಕ್ಷಿಸಲಾಗಿದೆ.

(೩) ಯಾವನೊಬ್ಬ ನವಕರನು ೨೪೦ ದಿವಸಗಳ ವರೆಗೆ ಏಕ ಸತತ ಕೆಲಸದ ಮೇಲೆ ಇದ್ದು ಅವನು ಸಹ ಹೆಚ್ಚಿಂದು ಕಂಡುಬಂದರೆ ಅವನನ್ನು ಕೆಲಸದ ಮೇಲೆ ಇಟ್ಟುಕೊಂಡು ಬೇರೆ ಕೆಲಸವನ್ನು ಅವ ನಿಂದ ತೆಗೆದುಕೊಳ್ಳಲಾಗುವದು.

ಮೇಲಿನ · ಸಂಗತಿಯಿಂದ ತಿಳಿಯುವದೇನಂದರೆ:— ಅನಾವಶ್ಯಕ ಕಷ್ಟಗಳಿಗೆ ನವಕರನನ್ನು ಗುರಿಮಾಡದಂತೆ ಶಕ್ಯವಿದ್ದಷ್ಟು ಯತ್ನಿಸಲಾ ಗಿದೆ. ಮತ್ತು ವೃತ್ತಪತ್ರಗಳಲ್ಲಿ ಪ್ರಕಟವಾದಂತೆ ಅನಾವಶ್ಯಕ ತೊಂದರೆ ಗಳನ್ನು ನವಕರರಿಗೆ ಕೊಡಲ್ಪಟ್ಟಿರುವದಿಲ್ಲ.

ಈ ಪ್ರಕಾರವಾಗಿ **ಎಸ್. ಟಿ. ಪಬ್ಲಿಕ ರಿಲೇಶನ್ ಆಫೀಸರ** ರಿಂದ ಪ್ರಕಟನೆಯು ಕೊಡಲ್ಪಟ್ಟಿದೆ.

---

ಅದೀಕ್ಷಿತಸ್ಯ ಅನ್ಯ ದೈವ ಸೇವಕಾ ಸದಾ ಶಿವನಿಗೆ ಅನ್ಯ ದೈವಂಗಳ ನರಿ ಎಂಬವಂಗೆ ಆದ ಭಂಗ ಕೇಳು । ವಿದಿತ ವೀರಭದ್ರ ಮೊದಲಾದ ವರ ಶಾಪದಗ್ಧರಾದ ಅಧಮರಿಗೆ ನಿರ್ಮಲ ಪ್ರಸಾದವು ಸಲ್ಲದಲ್ಲದೆ ॥೮॥

ಶಿವನೇ ಅಧೀಶನು ಶಿವಭಕ್ತನೆ ಕುಲಜನು ಶಿವಪ್ರಸಾದದಿಂದಾವು ದಧಿಕವಿಲ್ಲೆಂದುದು ಶ್ರುತಿಯನರಿದು । ಶ್ರೀ ಸದ್ಗುರು ಸೋಮೇಶ್ವರನ ಭಜಿಸಿ ಪ್ರಸಾದ ಸೇವನೆಯ ಮಾಡದಿರಲು ಅಘೋರ ನರಕ ತಪ್ಪದು ॥೯॥

---

## ೧೭. ಪ್ರಾಣಲಿಂಗಿಸ್ಥಲ.

**ಸೂತ್ರ:—** ಇಂತು ಪ್ರಸಾದಿಯಾದಿ ಪ್ರಸಾದ ಮಹಾತ್ಮ್ಯೆಯಂತ್ಯ ಮಾದ ಪ್ರಸಾದಿಸ್ಥಲದಲ್ಲಿ ಆಚರಿಸಿ ಮಹಾ ಪ್ರಸನ್ನ ಪ್ರಸಾದದೊಳ್ ಸಮ ರಸವಾಗಿ ಬೆರಸಿದ ಮಹಂತನು ಮುಂದೆ ಅನುಭವ ಮುಖದಿಂದ ಆಚರಿಸಿ ಬೆರಸುವ ಭೇದವೆಂತಿರ್ದುದೆಂದಡೆ ಮುಂದೆ ಪ್ರಾಣಲಿಂಗಿಸ್ಥಲವಾದುದು.

॥ಪದ॥ ರಾಗ ಮಧುಮಾಧವಿ.

ನುಡಿಗಡಣದ ಬೆಳಗು ಮರುತ ಪರಿಮಳದಂತೆ ಭಾವವಿಲ್ಲದ ಬಯಲು ಪರವು ತಾನೆ । ಅರುಹು ಕುರುಹಿನ ಮರಹು ತೆರಹಿಲ್ಲದಾ ಘನವು ನಿಂದ ನಿಜಪದದಿಂದ ಪ್ರಭೆಯಾಯಿತು ॥ಪ॥

ಎಳೆಯ ಮಾಣಿಕದಂತೆ ಹೊಳೆವ ಜ್ಞಾನ ಜ್ಯೋತಿ ನವನಾಳದಲಿ ಪ್ರಾಣಲಿಂಗ ಭರಿತಾ । ಪಿಂಡ ಬ್ರಹ್ಮಾಂಡವನು ಮೀರಿ ತೋರುವ ವಚನ ಗಗನದುದಯದ ಮೇಲೆ ಘನಕೆ ಗಮನಾ ॥೧॥

ಆಕಾಶದಿಂದತ್ತಲಾರು ಬಲ್ಲವರಿಲ್ಲ ಪಾತಾಳದ ಪ್ರಮಾಣವ ಕಾಂಬು ರಾರು । ಆತುಮನವಿಡಿದು ವರಮಾತುಮನ ಪರಿಭಾವ ನೊಡ ನೊಡ ನೊಡ ಘನಕೆ ಗಮನಾ ॥೨॥

ಇರುಳು ಮನವನೆ ನುಂಗಿ ಹಗಲು ಘನವನೆ ನುಂಗಿ ಯಾತುಮಧ ನವ ನುಂಗಿದಾತ ಭರಿತಾ । ನೀತಿನಿಜ ನಿಂದಲ್ಲಿ ನಿಜ ನಿರ್ಮಲ ಜ್ಯೋತಿ ಪ್ರಾಣಲಿಂಗದ ಘನಕೆ ಪ್ರಮಾಣಿಲ್ಲವೋ ॥೩॥

ಆರು ದರುಶನದೊಡೆಯನಂತರಂಗದೊಳಿಪ್ಪ ಆದಿಗಾದರು ಗಗನಭುವನ ಒಂದೆ। ಹೃದಯಕಮಲದ ಬೆಳಗು ಪರಬ್ರಹ್ಮದಲಿ ತುಂಬಿ ಪರಿಣಾಮ ಪರ ಪದವಿಯ ತೋರಿತು ॥೪॥

ಧರೆಗೆ ನಿದ್ದೆಯು ಇಲ್ಲ ಉದಕಕ್ಕೆ ಕನಸಿಲ್ಲ ಅಗ್ನಿ ಕಳವಳಕೆ ಒಳಗಾಗದೆಂತೋ। ಸುಳಿವ ಪವನನು ತಾನು ತಾಮಸಕ್ಕೊಳಗಾಗ ಬಯಲಿಂಗೆ ಭ್ರಮೆಯುಂಟೆ ಗುಹೇಶ್ವರಾ ॥೫॥

---

## ೧೮. ಪ್ರಾಣಲಿಂಗಾರ್ಚನೆ ಸ್ಥಲ.

ಸೂತ್ರ:— ಇಂತು ಪ್ರಾಣಲಿಂಗ ಸಂಬಂಧದಲಿ ಅವಿರಳವಾದ ಲಿಂಗ ಪ್ರಾಣಿಯ ಪ್ರಾಣಲಿಂಗದ ಪೂಜೆ ಎಂತಿರ್ದುದೆಂದಡೆ ಮುಂದೆ ಪ್ರಾಣಲಿಂಗಾರ್ಚನೆಯ ಸ್ಥಲವಾದುದು.

॥ಪದ॥ ರಾಗ ಲಲಿತ

ಕಂಗಳ ನೋಟವು ಕಾಯಕದಲಿ । ಲಿಂಗದ ಕೂಟವು ಶಿವ ಶಿವ ಚೆಲುವನು । ಮಂಗಳಮಯ ಮೂರುತಿ ಮಲಯಳ ದೇವಂಗೆತ್ತುವೆನಾರುತಿಯಾ ॥ಪಲ್ಲವ॥

ಜಗವಂದ್ಯಗೆ ಬೇಟವ ಮಾಡಿದೆ ನಾ । ಹಗೆಯಾದೆನು ಸಂಸಾರಕ್ಕೆಲ್ಲ । ನಗುವಂತೈದರೆ ಲಜ್ಜೆ ನಾಚಿಕೆ ತೊರೆದವಳೆಂದೆನ್ನ ॥ ಗಗನ ಗಿರಿಯ ಮೇಲಿದ್ದಿಹೆನೆಂದಡೆ । ಲಗುನಿಯಾಗಿ ನಾನರಸುತ ಬಂದೆನು । ಅಘಹರ ಕರುಣಿಸು ಅನಿಮಿಗೊಲಿದೆನು ಮಿಗೆ ಒಲಿದಾರತಿಯ ॥೧॥

ಭಕುತಿ ರತಿಯ ಸಂಭಾಷಣೆಯಿಂದವೆ । ಮುಕುತಿಯ ಮರೆದೆನು ಕಾಯದ ಭೇದವ। ಪ್ರಕೃತಿಯ ತೊರೆದೆನು ಸುತ್ತಿದ ಮಾಯಾ ಪಾಶವ ಹರಿದೆನಲಾ ॥ ಸುಕೃತಿಯಾಯ್ತು ನಿಮ್ಮಯ ನೆನಹಿಂದವೆ । ಮುಕುತಿಯ ಫಲಗಳ ದಾಂಟಿಯೆ ಬಂದೆನು । ಶಕುತಿಯಾದೆನು ಪ್ರಾಣಲಿಂಗಕ್ಕೆ ಮಿಗೆ ಒಲಿದಾರತಿಯಾ ॥೨॥

ಪೆಚ್ಚಿ ಒಲಿದು ಮನ ವಗಲದ ಭಾವವು । ಬಿಚ್ಚದೆ ಬೇರೊಂದೆನಿಸದೆ ಪ್ರಾಣವು । ಬೆಚ್ಚಂತಿರ್ದುದು ಅಚ್ಚೊತ್ತಿದ ಮಹಾ ಘನ ತಾನೆ ನೆಲೆಗೊಂಡು॥ ಪಶ್ಚಿಮ ಮುಖದಲಿ ಬೆಳಗು ಪ್ರಕಾಶವು । ನಿಚ್ಚ ನಿರಂಜನ ಚನ್ನಮಲ್ಲಿಕಾರ್ಜುನಂ। ಗೆಚ್ಚರದೆತ್ತುವೆ ನಾರತಿಯಂ ಪುನ ಒಲಿದಾರತಿಯಾ ॥೩॥

---

## ೧೯. ಶಿವಯೋಗ ಸಮಾಧಿಸ್ಥಲ.

**ಸೂತ್ರ:**— ಇಂತು ಪ್ರಾಣಲಿಂಗಕ್ಕೆ ಪ್ರಾಣ ಪೂಜೆಯಂ ಮಾಡಿ, ಸಕಲ ಕರಣಂಗಳನು ಲಿಂಗದಲ್ಲಿ ಲಯವ ಮಾಡಿದ ಪ್ರಾಣಲಿಂಗಿಯ ಲಿಂಗಸಂಯೋಗ ಸಮಾಧಿಯ ಭೇದವೆಂತಿದ್ದುದೆಂದಡೆ ಮುಂದೆ ಶಿವಯೋಗ ಸಮಾಧಿಯ ಸ್ಥಲವಾದುದು.

॥ಪದ॥ ರಾಗ ದೇಶಾಕ್ಷಿ

ಶರಣನು ಸ್ವತಂತ್ರನು ಪರತತ್ವವು ತಾನಾಗಿ । ಅವಂಗ ವಿರಹಿತ ಶಿವ ಯೋಗಿ ಆನಂದ ಲೀಲೆಯೊಳಾಡಿದನೂ ॥ಪ॥

ಶುಕ್ಲ ಶೋಣಿತ ಮೂತ್ರದ ಮೇಧ್ಯದ ಶ್ಲೇಷ್ಮದ ತನುವಿಕಾರವ ನತಿ ಗಳೆದು । ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳೆಂಬ ಷಡು ವರ್ಗವ ಮೆಟ್ಟಿಯಾಡಿದನು ॥೧॥

ಇಡೆಪಿಂಗಳ ಸುಷುಮ್ನ ನಾಳದೊಳಗಣ ರೇಚಕ ಪೂರಕ ಕುಂಭಕ ಮುಟ್ಟದೆ । ಪ್ರಾಣೋಪಾನವ್ಯಾನೋದಾನ ಸಮಾನ ನಾಗ ಕೂರ್ಮ ಕೃಕರ ದೇವದತ್ತ ಧನಂಜಯ ಮುಟ್ಟದೆ ಮಾಡಿದನು ॥೨॥

ಪಂಚವಿಂಶತಿ ತತ್ವಂಗಳ ಮೀರಿದ ನಿರಂತರದ ಸ್ವತಂತ್ರ ಷೋಡ ಶದಳದ । ಪುರ ಬೆಳಗಿನಲ್ಲಿ ತಾನು ತಾನೆ ಕೂಡಿ ಸೋಮ ಸೂರ್ಯಾಗ್ನಿ ಪ್ರಕಾಶದೊಳಾಡಿದನು ॥೩॥

ಕುಂಡಲಿಯ ದಂಡನಾಳದೊಳಗಣ ಹೃದಯ ಕಮಲದಲ್ಲಿ ಸ್ವರ ಮುಟ್ಟದೆ । ಭ್ರೂಮಧ್ಯ ಮೇರು ಮಂದಿರದ ಪುರದ ಬೆಳಗಿನಲ್ಲಿ ಸಹಸ್ರದಳ ಮೆಟ್ಟಿಯಾಡಿದನು ॥೪॥

ಬಯಲ ಬೆರಸಿದ ಮಾರುತನಂತೆ ಉರಿಉಂಡ ಕರ್ಪುರದ ತೆರ ನಂತೆ । ಸರ ಉಂಡ ಸಬುದ ಸುಜ್ಞಾನಿ ಕೂಡಲಚನ್ನಸಂಗನಲ್ಲದಿಲ್ಲ ಮಾಣು ॥೫॥

---

## ೨೦. ನಿಜಲಿಂಗಸ್ಥಲ.

**ಸೂತ್ರ:—** ಇಂತು ಶಿವಯೋಗದಲ್ಲಿ ಸಮಾಧಿಯನೈದಿದ ಪ್ರಾಣ ಲಿಂಗಿಯ ಮನಸ್ಥಲದಲ್ಲಿ ಮನೋಮೂರ್ತಿಯಾಗಿ ನಿಂದ ಲಿಂಗದ ಸಹಜ ನಿಲವೆಂತಿರ್ದುದೆಂದಡೆ ಮುಂದೆ ಲಿಂಗ ನಿಜಸ್ಥಲವಾದುದು.

॥ಪದ॥

ಸಾಧ್ಯಾಸಾಧ್ಯಗಳಿಗತೀತವಾದ ಜ್ಯೋತಿ ನಿರಪಯಾ ॥ಪಲ್ಲ॥

ಏನನೊಂದ ಹವಣಿಸುವರೆ ತಾನೆ ಸಹಜ ಘನತರ। ಭಾನುಕೋಟಿ ಕಳೆಗಳೆಂಬವೇನು ನಿಲುಕದನುಪಮಾ ॥೧॥

ಸಚರವಚರ ಶೂನ್ಯ ನಿಚಯವಿಲ್ಲದಂದಿನ। ಅಚಲವಪ್ಪ ಮಹಾಘನದ ರುಚಿರದೂರ್ಧ್ವ ನಿರಾಳ ॥೨॥

ಜಪಸಮಾಧಿ ಹೋಮ ನೇಮದುಪಮೆಗಳಿಗತೀತನು। ನಿಷ್ಪತಿ ನಿರಂಜನ ಸೂಕ್ಷ್ಮದ ಪರವೀತನಕಲ್ಪಿತಾ ॥೩॥

ಅಲ್ಲಿಗಲ್ಲಿಗೆ ಕಾಯಜೀವ ಎಲ್ಲರಳಿವಿನುಳುವಿನ। ಸೊಲ್ಲಿನೊಳಗು ಹೊರಗಣಾತ್ಮದಂಗ ಸಂಗರಹಿತಾ ॥೪॥

ಅಣಿಮಾದಿ ಗುಣರಹಿತನನುಪಮಿತನಗೋಚರ। ಘನಕೆ ಘನಾನಂದ ಪ್ರಭೆಯ ಚಿನುಮಯಾದಿ ನಿರಾಳ ॥೫॥

ಹಲವು ಶಬ್ದಕಿಂಬುಗೊಡದ ಸುಳುಹು ಸೂಕ್ಷ್ಮವೊಳಗಣ ಬೆಳಗಿ ನಿಂದ ನಿಜದ ನಿಲವ ಸ್ಥಲವ ತೋರ ಬಪ್ಪುದೇ ॥೬॥

ಬೆಳಗಿನೊಳಗೆ ತೊಳಗಿ ಬೆಳಗಿ ಹೊಳೆವ ಜ್ಯೋತಿಕಾಂತಿಯು ಬೆಳಗು ಗುಹೇಶ್ವರನ ಘನದ ತಿಳಿಪುಲಿಂಗ ನಿಜಪದ ॥೭॥

---

## ೨೧. ಅಂಗಲಿಂಗಸ್ಥಲ.

**ಸೂತ್ರ:—** ಇಂತು ಲಿಂಗನಿಜ ಮನೋಮೂರ್ತಿಯಾದ ಪ್ರಾಣ ಲಿಂಗಿಯ ಸರ್ವಾಂಗವು ಲಿಂಗವಾದ ಭೇದವೆಂತಿರ್ದುದೆಂದಡೆ ಮುಂದೆ ಅಂಗ ಲಿಂಗಸ್ಥಲವಾದುದು.

॥ಪದ॥ ರಾಗ ಭೂಪಾಳಿ

ಅಂಗದಲಿ ಲಿಂಗ ಸನ್ನಿಹಿತವಾಗಿಹನು ಸ । ರ್ವಾಂಗ ಮುಖವೆಲ್ಲ ಬರಿ ಲಿಂಗಮಯವು ॥ಪ॥

ಮುಟ್ಟನನ್ಯವನಂಗ ಸೋಂಕು ಸಂಬಂಧಗಳ । ಮೆಟ್ಟನಪಶಬ್ದ ಸಂಭ್ರಮಕೆರಗನೂ ॥ ಅಷ್ಟತನು ವ್ಯವಹಾರದಂಗ ಲಿಂಗದೊಳಗಳುವಟ್ಟಿದಾಗಷ್ಟಾವಧಾನಿ ಶರಣಾ ।೧॥

ಶ್ರೋತ್ರ ಮುಖ ನೇತ್ರ ಮುಖ ಘ್ರಾಣ ಮುಖ ಜಿಹ್ವೆ ಮುಖ । ಗಾತ್ರ ಮುಖ ಸ್ಪರ್ಶನದ ಮುಖ ಮುಖದಲಿ ॥ ಓತು ಗ್ರಹಿಸುವವೆಲ್ಲ ಲಿಂಗ ಮುಂತವಲ್ಲದ । ನ್ಯತ್ರೀನುವರಿಯ ಸರ್ವಾಂಗ ಲಿಂಗಿ ॥೨॥

ಜಾತಿಸೂತಕ ಪ್ರೇತ ಸೂತಕಾದಿಗಳೆಂಬ । ಭ್ರಾಂತರೊಳು ಬೆರಸ ದಂಗದ ಲಿಂಗದಾ। ಆ ತನುವಿನೊಳು ತನುವನಂಗೀಕರಿಸಿ । ಇತರ ವಾರ್ತೆಗಳ ಭಾವಿಸನು ಲಿಂಗಸಂಗಿ ॥೩॥

ಲಿಂಗ ಸಹಿತಖಿಳಸುಖ ಲಿಂಗ ಸಹಿತಖಿಳಕ್ರಿ । ಲಿಂಗವಿರಹಿತ ಮಾಡ ನೇನೊಂದುವಾ ॥ ಲಿಂಗದೊಳು ದೇಹವಾಲಿಂಗಿಸಿದ ಬೆಡಂಗರು । ಅಂಗ ಲಿಂಗಾನುಭಾವಲಿಂಗ ಲೀಲೇ ॥೪॥

ಲಿಂಗದೊಳಗಂಗ ಸುಖ ಅಂಗದೊಳು ಲಿಂಗ ಸುಖ । ಲಿಂಗಾಂಗ ವೆರಡರೊಳು ತೆರಹಿಲ್ಲದೆ ॥ ಸಂಗವಾಗಿಹ ನಿಜ ಬೆಡಂಗು ಕೂಡಲಚನ್ನಸಂಗನ ಬೆರಸಿದೈಕ್ಯ ಬಲ್ಲಾ ॥೫॥

---

## ೨೨. ಶರಣಸ್ಥಲ.

**ಸೂತ್ರ:—** ಇಂತು ಪ್ರಾಣಲಿಂಗಿ ಸ್ಥಲಾದಿಯಾಗಿ ಅಂಗಲಿಂಗ ಸ್ಥಲಾಂತ್ಯವಾದೈದು ಸ್ಥಲಂಗಳಿಂ ಕೂಡಿದ ಪ್ರಾಣಲಿಂಗಿಸ್ಥಲದಲ್ಲಿ ಆಚರಿಸಿ ಸರ್ವಾಂಗವು ಲಿಂಗ ಲೀಯ್ಯವಾಗಿ ಬೆರಸಿದ ಮಹಂತನು ಮಹಾಜ್ಞಾನ ಮುಖದಿಂದಲರಿದಾಚರಿಸಿ ಬೆರಸುವ ಭೇದವೆಂತಿರ್ದುದೆಂದಡೆ ಮುಂದೆ ಶರಣ ಸ್ಥಲವಾದುದು

॥ಪದ॥ ರಾಗ ದೇಶಾಕ್ಷಿ

ಪರಮಾನಂದ ಲೀಲೆಯಲಿ ಪರಮ ಗುರು ಪದವನರಿದನು। ಪರಮ ಸುಖದೊಳಗೋಲಾಡುವ ಪರಂಜ್ಯೋತಿ ಪರಾಪರನೂ ॥ಪ॥

ನಿತ್ಯ ನಿರಂಜನ ತಾನೆಂದರಿದನು ಉತ್ತಮ ಸುಜ್ಞಾನದ ಜ್ಯೋತಿಯ ಬೆಳಗಿನ। ಚಿತ್ತದ ಪ್ರಾಣಲಿಂಗದ ಘನದಲಿ ಸತ್ಯಸ್ವರೂಪನಾದಾ ॥ ಸುತ್ತಿದ ಅಷ್ಟಮದಂಗಳನೆಲ್ಲವ। ತತ್ತರ ತರಿದನು ತನುಗುಣಂಗಳ ; ತ್ರತತ್ತ ಸ್ಥಾನಂಗಳಲ್ಲಿ ಸುಸ್ಥಿರನಾದನು ಆತುಮ ಧ್ಯಾನದಿಂದ ಶರಣಾ ॥೧॥

ಒಳಗೆ ಮಾಣಿಕ್ಯದ ಮಣಿ ಮಂಟಪವ ನೋಡಿ। ಬೆಳಗಿನ ಕದಳಿಯ ಬನದೊಳಗಾಡುವ। ದಳಗಳನೆಲ್ಲವ ನಿಲಿಸಿ ಸ್ಥೂಲಕ್ಕೆ ಸ್ಥೂಲ ಪ್ರಳಯ ವಿರಹಿತನಾದಾ ॥ ಮೇಳವಿಸಿದ ತನ್ನ ಸಕಲ ಸದ್ಗುಣ ಗಣಂ। ಗಳ ಎಣಿಕೆಯ ಗುಣಕ್ಕಗಣಿತ ಸುಳುಹಿನ ಕಮಳದ ಪರಿಮಳ ನಿಳಯನುಸುಯಾನಿಯಾದ ಶರಣಾ ॥೨॥

ಒಪ್ಪುವ ಸಮಸ್ತ ಲೋಕವಿಖ್ಯಾತನು। ಅಪ್ರತಿಮ ಮಹಿಮನು ಪ್ರಣವಕ್ಕೆ ರೂಪನು। ಒಪ್ಪುವ ಪಾಪಂಗಳ ವಿವರಿಸಿ ಕಳೆದನು ಬೀಜದೊಳಡಗಿದ ವೃಕ್ಷಂಬೊಲ್ ॥ ಅಪಾರ ವ್ಯಾಪಾರ ಪರಮ ನಿರಾಕಾರ। ಉಪಮಾತೀತನು ವಿಪರೀತ ಚರಿತನು। ಗುಪಿತ ಪ್ರಕಾಶನು ರೂಪಂ ನಿರೂಪನು ಕಾರಣ ಕರ್ತನ್ನೈ ಶರಣಾ ॥೩॥

ತನುಗಮನಾಗಮನದಿಂದನುಭಾವಭರಿತನು । ಅನಾಥನಾಥನು ಅಕಳಂಕ ಚರಿತನು। ಅನಿರ್ನಾಮ ನಿಸ್ಸೀಮ ಜ್ಞಾನ ಸುಜ್ಞಾನ ಭುವನಾದಿ ವಂದಿತನು । ಉನ್ನತ ಪರಶಿವಯೋಗ ಭೋಗದಿಂದ। ತನ್ನ ತಾನೆ ಕಂಡು ಅಪಮಾಕ್ಷನಾದನು। ಅನುಪಮ ಬೆಳಗಿನ ಆದಿಯನಾದನು ಮನಕ್ಕೆ ಮನೋಹರನಾದ ಶರಣಾ ॥೪॥

ಅಮೃತ ಗಿರಿಯ ಮೇಲೆ ಅಮರ ಸಮೂಹ। ಸೋಮನಾಗಮನದ ಸಕಲ ಸನ್ನಿಹಿತನು। ಸಮ್ಯಜ್ಞಾನದಲ್ಲಿ ಸ್ವತಂತ್ರ ಮಹಿಮನು ಸಮಸ್ತ ವಿಸ್ತಾರದಲ್ಲಿ ॥ ನಿರ್ಮಳ ನಿರುಪಮ ಪ್ರಮಥಗಣ ತಿಂಥಿಣಿಯ । ವಿಮಳ ಹೃದಯ ಕಮಳ ವಿಳಾಸ ಪುರನಿಳಯ। ಬ್ರಹ್ಮಾಂಡ ಕೋಟಿಯ ಮೀರಿ ನಿಂದನುಭಾವ ಮಹೇಶ್ವರನಂತೆ ತಾನಾದ ಶರಣಾ ॥೫॥

---

## ೨೩. ತಾಮಸ ನಿರಸನಸ್ಥಲ.

**ಸೂತ್ರ:**— ಇಂತು ಶರಣಸ್ಥಲದಲ್ಲಿ ಮಹಾಜ್ಞಾನ ವಿವೇಕದಿಂ ತನ್ನ ತಾನರಿದ ಶರಣನು ತನ್ನ ತಾನರಿದೆನೆಂಬ ಅರಿವಿನ ಮುಂದೆ ಇದಿರಿಟ್ಟು ತೋರುವ ತಾಮಸವಂ ನಿರಸನವಂ ಮಾಡಿ ನಿರೂಪಿಸುತ್ತಿರಲು ಮುಂದೆ ತಾಮಸನಿರಸನ ಸ್ಥಲವಾದುದು.

||ಪದ||ರಾಗ ಭೂಪಾಳಿ

ಗುರುವಿನಿಂದ ಉದಯಿಸಿ ಗುರುವಿನ ನಿಜವನರಿಯದ । ನರನಿಗೆ ಶಿವ ಪಥವೆಲ್ಲಿಯದೊ ||ಪ||

ಕೋಹಮೆಂದು ಬಂದೆರಗಿದ ಶಿಷ್ಯಂಗೆ । ಸೋಹವೆಂಬ ನಿಜವನರು ಹಿದ ಗುರು । ಸಹಜಾನುಗ್ರಹ ಸಂಬಂಧವ ಮಾಳ್ಪದೀ ಹದನರಿಯದನು ಗ್ರಹ ಸಲ್ಲಾ ||೧||

ಗುರುವಿನಾದಿಯು ಶಿಷ್ಯನರಿಯನಾ । ಗುರು ಶಿಷ್ಯನ ಮೂಲವನ ರಿಯಾ । ಗುರುಶಿಷ್ಯರಿಬ್ಬರು ಕೂಡಿ ಲಿಂಗವನರಿಯದಿಬ್ಬರಂ ಶಿವನೊಲ್ಲಾ ||೨||

ಹಿಂದನಳಿದು ಮುಂದನು ತೊರೆಯದ ಗುರುವಿ । ನಿಂದುಪದೇಶವ ಪಡೆದುದಾದರೇ । ಸಂದುಸಂಶಯವೆಂತಳಿವುದುಭಯ ಅಂಧಕರು ಕೈ ಕೈ ವಿಡಿದಂತೆ ||೩||

ಪರುಷ ಮುಟ್ಟಲು ಲೋಹ ಹೊನ್ನಾಗಿ ಫಲವೇನು । ಪರುಷ ತಾನಾ ಗದನ್ನಕ್ಕರ ಗುರು । ಕರುಣವ ಪಡೆದು ಗುರುವಿನಂತಾಗದಿರೆ ಪರಿಭವ ತಪ್ಪದು ನೋಡಾ ||೪||

ಗುರುಲಿಂಗ ಜಂಗಮಲಿಂಗವ ಕಂಡೆರಡೊಂದೆಂದರಿಯದೆ ಬರು ಮುಖನಾಗಿ । ನಿರಭಿನ್ನವ ಮಾಡಲು ಗುರುಪುರದ ಪ್ರಿಯ್ಯ ಮಲ್ಲಯ್ಯ ನೊಲ್ಲ ||೫||

---

## ೨೪. ನಿರ್ದೇಶಸ್ಥಲ.

**ಸೂತ್ರ:**— ಇಂತು ಶರಣನು ತನಗಿದಿರಿಟ್ಟು ತೋರುವ ತಾಮಸ ನಿರಸನವಂ ಮಾಡಿ ಸುಜ್ಞಾನ ಭೇದವಂ ನಿರ್ದೇಶಿಸಿ ನೆಲೆಗೊಳಿಸಿ ನಿರೂ ಪಿಸುತ್ತಿರಲು ಮುಂದೆ ನಿರ್ದೇಶಸ್ಥಲವಾದುದು.

॥ಪದ॥ ರಾಗ ಧನ್ಯಾಸಿ.

ಆಶೆಯುಟಿಮುಟಿದುದರ ಪೋಷಣಕೆ ಕೆಲ ವಿಕೃತ । ವೇಷಗಳ ಧರಿಸಿ ಬಹಿರಂಗ ಬಳಕೆಯ ಬಯಲ ॥ ಹೂಸತರನೊಲ್ಲ ವಿಶ್ವಾಸ ಭಕ್ತಿಯ ಭಾವ ವೇಷದೊಳು ಶಿವನಿರ್ಪನೂ ॥ಪ॥

ಅಶನ ದೊರ ದೊರಕದೊಡೆ ಉಪವಾಸಿ ಯಾನೆಂದೆಂದು । ವ್ಯಸನ ಗೂಡದಡೆ ನಿಸ್ಸಂಗಿ ತಾನೆಂದೆಂದು । ವಸನಘಟಿಸದೆ ಕೌಪು ಘಟ್ಟಿಯಿಂ ತೊಂದೊಂದ ಕೊಂದೊಂದ ಘಳಿಸಿ ತನಗೆ ॥ ವಶವಲ್ಲ ಪ್ರಾಕೃತದ ಕರ್ಮ ಮೈಶೋಭತೆಯ । ದೆಶೆಯಿಂದ ಲೊಚ್ಚು ಬೋಳಾಗಿ ಜಡೆ ಗಟ್ಟಿ ದೆಶೆ । ದೆಶೆ ಗಳಂ ತಿರುಗಿ ಭಿಕ್ಷಾಂದೇಹಿಯಾದ ಸಂದೇಹಿಗಳ ಶಿವನೊಲ್ಲನೂ ॥೧॥

ಧೃತಿಗೆಟ್ಟು ಕಂಡ ಕಂಡವರ್ಗೆ ವೇಷವದೋರಿ । ಮತಿಗೆಟ್ಟು ಮೂಲ ಮಂತ್ರವನಲ್ಲಿಗಲ್ಲಿ ಸೇರಿ । ಗತಿಗೆಟ್ಟು ದೊರಕಿದಲ್ಲುಂಡು ಲಾಂಛನಾಡಂಬರವ ತೋರಿ ಪೆರತಾ ॥ ಸ್ತುತಿಗೈದು ದೈನ್ಯದಿಂ ಧಾತುಗೆಟ್ಟೊಡಲಾಸೆ । ಯತಿತೃ ಷ್ಣೆಯಿಂದ ಕೆಲ ವ್ರತ ನೇಮ ಛಲಗಳಿಂ । ದಿತರ ಜನ ಮೆಚ್ಚಿಸುವರೊಳ ಗಿರನು ಶಿವನು ವಿಶ್ವಾಸ ವೇಷದೊಳಗಿರ್ಪನು ॥೨॥

ಅರಿತವಾಚಾರ ಜ್ಞಾನಾನುಭಾವ ಪರಿಪೂರ್ಣ । ದೆರಕ ಯೋಗಾಕ್ಷ ರದ ಮಹಿಮೆ ಸಮತಾ ಭಾವ । ಕರಿಗೊಂಡು ಆಶೆ ಎಂಬಜ್ಞಾನವಳಿದು ಮನಬೋಳಾದ ಬೋಳು ಶಿವನಾ ॥ ಕುರುಹಿಂತುಟೆಂದು ತೋರಲು ಸುಳಿವ ಲಾಂಛನದ ॥ ಮರೆಯ ಪರತತ್ವ ಬೋಳಲ್ಲದೆ ವೃಥಾ ಕೇಶ ॥ ದೊರೆದಾಶೆ ಪಾಶದಿಂ ಹೊತ್ತು ತೊಳಲುವ ವೇಷಭಾರವೇಭವದ ಭಾರವೂ ॥೩॥

ಮನ ಸುಚಿತ್ತಿನೊಳಡಗಿದರೆ ದಿಗಂಬರ ಭಾವ ॥ ತನು ಶೂನ್ಯವಾಗಲದು ಬೋಳು ಅವಂಗದಿಂ ॥ ಧನ ಬರಲು ಬಿಡಹವೆ ನಿರಾಶಕತ್ವ ಜಾಗ್ರಸ್ವಪ್ನ ಸು ಷುಪ್ತಿಯೊಳಳುಪಿನಾ ॥ ತನು ಸೋಂಕುರುಚಿ ರೂಪಿನೆರಕವಿಲ್ಲದುದೆ ತಾಂ ॥ ಘನ ಬ್ರಹ್ಮಚರ್ಯವೀ ಚತುರ್ವಿಧದೊಳುಂ ಲಿಂಗ ॥ ದನುವನಂಗೀಕರಿಸಿ ಸುಳಿವುದೇ ಶಿವವೇಷವಲ್ಲಿದುದೇ ಉದ್ದೇಶವೂ ॥೪॥

ತನು ಪ್ರಾಣ ದವಗುಣಾದಿಗಳ ಧಿಕ್ಕರಿಸಿ ತ ॥ ನ್ನನುವಿಂಗೆ ತಂದು ವ್ರತ ಬಂಧನಂಗಳ ಸತ್ಯ ॥ ವನು ತೋರದಖಿಳ ವಿಷಯಂಗಳನು ರೂಹಿಸುವನಲ್ಲಿ ಗಲ್ಲಿದೆ ಹರಿಯದೆ ॥ ಅನುಕರಿಸಿಕೊಂಡು ಪರವೆಂಬಂಗ ಪಾತ್ರೆಯೊಳು । ಮನ ಲೀಯವಾದ ಅರಿವರತು ಪರಮ ಜ್ಞಾನ ॥ ದನುರೂಪವಾದ ಹುಲಿಗೆರೆಯ ವರದ ಸೋಮೇಶನೆಂದೆಂಬೆನು ॥೫॥

---

೨೬೦. ಆತ್ಮವೆ ಅಂಗವಾದ ಐಕ್ಯಂಗೆ, ಭಾವವೆಂಬ ಹಸ್ತದಲ್ಲಿ ಮಹಾ ಲಿಂಗ ಲಿಂಗಕ್ಕೆ ಮನವೆಂಬ ಮುಖದಲ್ಲಿ ಪರಿಣಾಮವ ಸಮರ್ಪಣವ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲಸಂಗಮ ದೇವಾ.

೨೬೧. ||ಸೂ|| ಆತ್ಮಾಂಗೋ ಭಾವಹಸ್ತೇನ ಐಕ್ಯಶ್ಚಾಪಿ ಮಹಾತ್ಮನೆ । ಹೃನ್ಮುತೆ ಅರ್ಪಿತೆ ಪರಿಣಾಮ । ಪದಾರ್ಥಂ ತೃಪ್ತಿಭೂತವಾನ್ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೬೨. ಇನ್ನು ಷಡ್ವಿಧ ಭೂತಂಗಳ ನಿವೃತ್ತಿ ಅದೆಂತೆಂದಡೆ ಪರ ಬ್ರಹ್ಮ ಸ್ವರೂಪವಾಗಿಹ ಪರಮ ಪ್ರಣವದ ತಾರಕಾಸ್ವರೂಪದಲ್ಲಿ ಪೃಥ್ವಿ ಯೆಂಬ ಮಹಾ ಭೂತವಡಗಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ಅಪ್ಪು ವೆಂಬ ಮಹಾ ಭೂತವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ತೇಜ ವೆಂಬ ಮಹಾಭೂತವಡಗಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ವಾಯು ವೆಂಬ ಮಹಾಭೂತವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಆಕಾಶ ವೆಂಬ ಮಹಾಭೂತವಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಆತ್ಮ ವೆಂಬ ಮಹಾಭೂತವಡಗಿತ್ತು ನೋಡಾ ಅಪ್ರಮಾಣ ಕೂಡಲಸಂಗ ಮದೇವಾ.

೨೬೩. ಇನ್ನು ಭಕ್ತಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನ ನಿವೃತ್ತಿಯದೆಂತೆಂದಡೆ, ಆ ಪ್ರಣವದ ತಾರಕಾ ಸ್ವರೂಪದಲ್ಲಿ ಭಕ್ತನಡಗಿ ದನು. ಆ ಪ್ರಣವದ ದಂಡ ಸ್ವರೂಪದಲ್ಲಿ ಮಹೇಶ್ವರನಡಗಿದನು. ಆ ಪ್ರಣ ವದ ಕುಂಡಲಾಕಾರದಲ್ಲಿ ಪ್ರಸಾದಿಯಡಗಿದನು. ಆ ಪ್ರಣವದ ಅರ್ಧ ಚಂದ್ರಕದಲ್ಲಿ ಪ್ರಾಣಲಿಂಗಿಯಡಗಿದನು. ಆ ಪ್ರಣವದ ದರ್ಪಣಾಕಾರದಲ್ಲಿ ಶರಣನಡಗಿದನು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಐಕ್ಯನಡಗಿದನು. ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೬೪. ಇನ್ನು ಷಡ್ವಿಧ ಹಸ್ತಂಗಳ ನಿವೃತ್ತಿಯದೆಂತೆಂದಡೆ, ಆ ಪ್ರಣ ವದ ತಾರಕಾ ಸ್ವರೂಪದಲ್ಲಿ ಸುಚಿತ್ತ ಹಸ್ತವಡಗಿತ್ತು. ಆ ಪ್ರಣವದ ದಂಡ ಸ್ವರೂಪದಲ್ಲಿ ಸುಬುದ್ಧಿ ಹಸ್ತವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ನಿರಹಂಕಾರ ಹಸ್ತವಡಗಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ಸುಮನ

ಹಸ್ತವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಸುಜ್ಞಾನ ಹಸ್ತವಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಸದ್ಭಾವ ಹಸ್ತವಡಗಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೬೫. ಇನ್ನು ಷಡ್ವಿಧ ಲಿಂಗಂಗಳ ನಿವೃತ್ತಿಯದೆಂತೆಂದಡೆ, ಆ ಪ್ರಣವದ ತಾರಕಾಕೃತಿಯಲ್ಲಿ ಆಚಾರಲಿಂಗವಡಗಿತ್ತು. ಆ ಪ್ರಣವದ ದಂಡಕಾಕೃತಿಯಲ್ಲಿ ಗುರುಲಿಂಗವಡಗಿತ್ತು. ಆ ಪ್ರಣವದ ಕುಂಡಲಾಕೃತಿಯಲ್ಲಿ ಶಿವಲಿಂಗವಡಗಿತ್ತು. ಆ ಪ್ರಣವದ ಅರ್ಧಚಂದ್ರಾಕೃತಿಯಲ್ಲಿ ಜಂಗಮವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಪ್ರಸಾದಲಿಂಗವಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಮಹಾಲಿಂಗವಡಗಿತ್ತು, ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೬೬. ಇನ್ನು ಷಡ್ವಿಧ ಮುಖಂಗಳ ನಿವೃತ್ತಿಯದೆಂತೆಂದಡೆ, ಆ ಪ್ರಣವದ ತಾರಕದಲ್ಲಿ ಘ್ರಾಣೇಂದ್ರಿಯವಡಗಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ಜಿಹ್ವೇಂದ್ರಿಯವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ನೇತ್ರೇಂದ್ರಿಯವಡಗಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ತ್ವಗಿಂದ್ರಿಯವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಶ್ರೋತ್ರೇಂದ್ರಿಯವಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಮನೇಂದ್ರಿಯವಡಗಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೬೭. ಇನ್ನು ಷಡ್ವಿಧ ಪರಿಣಾಮದ ನಿವೃತ್ತಿ ಎಂತೆಂದಡೆ, ಆ ಪ್ರಣವದ ತಾರಕ ಸ್ವರೂಪದಲ್ಲಿ ಗಂಧವಡಗಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ರಸವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ರೂಪವಡಗಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ಸ್ಪರ್ಶನವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಶಬ್ದವಡಗಿತ್ತು. ಆ ಪ್ರಣವದ ಜ್ಯೋತಿಸ್ವರೂಪದಲ್ಲಿ ತೃಪ್ತಿಯಡಗಿತ್ತು, ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೬೮. ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶವೆಂಬ ಷಡ್ವಿಧ ಅಂಗವನೊಳಕೊಂಡ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯರೆಂಬ ಷಟ್‌ಸ್ಥಲವನೊಳಕೊಂಡು ಸುಚಿತ್ತ ಸುಬುದ್ಧಿ ನಿರಹಂಕಾರ ಸುಮನ ಸುಜ್ಞಾನ ಭಾವವೆಂಬ ಷಡ್ವಿಧ ಹಸ್ತಂಗಳನೊಳಕೊಂಡು, ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ

ವೆಂಬ ಷಡ್ವಿಧ ಲಿಂಗವನೊಳಕೊಂಡು, ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು ಶ್ರೋತ್ರ, ಹೃದಯವೆಂಬ ಷಡ್ವಿಧ ಮುಖಂಗಳನೊಳಕೊಂಡು, ಗಂಧ ರಸ ರೂಪು ಸ್ಪರ್ಶನ ಶಬ್ದ ತೃಪ್ತಿಯೆಂಬ ಷಡ್ವಿಧ ದ್ರವ್ಯಂಗಳನೊಳಕೊಂಡು, ಕರ್ಮ ತನ್ನ ವಿನೋದಕ್ಕೆ ತಾನು ತನ್ನ ಕಾಲು ಕೈ, ತಲೆ, ಬಾಲವಂ ತೋರಿ ಅಡಗಿಸಿಕೊಂಬುದು. ಅದರ ಹಾಗೆ ನಿಶ್ಶಬ್ದವೆಂಬ ಪರಬ್ರಹ್ಮ ತನ್ನ ವಿನೋದಕ್ಕೆ ತಾನು ತನ್ನ ತಾರಕಾ ಸ್ವರೂಪ ದಂಡ ಸ್ವರೂಪ ಕುಂಡ ಲಾಕಾರ ಅರ್ಧಚಂದ್ರಕ ದರ್ಪಣಾಕಾರ ಜ್ಯೋತಿ ಸ್ವರೂಪ ತೋರಿ ಅಡಗಿಸಿ ಕೊಂಡು ಆದಿ ಮಧ್ಯ ಅಂತ್ಯವಿಲ್ಲದೆ ದಶ ದಿಶೆಗಳಿಲ್ಲದೆ, ಸರ್ವಶೂನ್ಯ ನಿರಾಕಾರವಾಗಿ ಅಖಂಡ ಪರಂಜ್ಯೋತಿರ್ಮಯ ಲಿಂಗವಾಗಿದ್ದುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೬೯. ಷಡಂಗ ಮೊದಲಾಗಿ ಪರಿಣಾಮ ಕಡೆಯಾಗಿ, ಷಟ್ಸ್ಥಲಕ್ಕೆ ಉಂಟಾದ ಸಮಸ್ತವು ಪರಬ್ರಹ್ಮ ಸ್ವರೂಪವಾಗಿಹ ಪರಮ ಪ್ರಣವದಲ್ಲಿಯೇ ಉತ್ಪತ್ತ್ಯ ಲಯವೆಂಬುದು ಆ ಶಿಷ್ಯಂಗೆ ಆ ಸದ್ಗುರುಸ್ವಾಮಿ ನಿರೂಪಿಸಿದ ವಚನ ಸಮಾಪಿ. ಮಂಗಳ ಮಹಾ ಶ್ರೀಗುರುಶಾಂತವೀಶ್ವರಾಯ ನಮಃ. ಇನ್ನು ಷಟ್‌ಸ್ಥಲಬ್ರಹ್ಮದುತ್ಪತ್ತ್ಯವೆಂತೆಂದಡೆ ॥

ಆದಿ ಮಕಾರ ಅಕಾರ, ಉಕಾರ, ಈ ಮೂರು ಬೀಜಾಕ್ಷರ. ಮಕಾರವೇ ಆದಿಕಳೆ, ಅಕಾರವೇ ಆದಿನಾದ, ಉಕಾರವೆ ಆದಿಬಿಂದು, ಮಕಾರವೆ ಆದಿ ಸದಾಶಿವ, ಅಕಾರವೆ ಆದಿರುದ್ರ, ಉಕಾರವೆ ಆದಿಈಶ್ವರ, ಇಂತೀಆದಿ ಮಕಾರ ಅಕಾರ ಉಕಾರಕ್ಕೆ ಆ ಆದಿ ಕಳೆಯು ನಾದ ಬಿಂದುವೇ ಆಧಾರ, ಆ ಆದಿ ಪ್ರಕೃತಿಯೇ ಪ್ರಾಣಮಾತ್ರೆಯೇ ಆಧಾರ, ಆ ಪ್ರಾಣ ಮಾತ್ರೆಗೆ ಅಖಂಡ ಜ್ಯೋತಿರ್ಮಯವಹ ಅಂಗವೇ ಆಧಾರ, ಮಾ ಎಂದಡೆ ಮಹೇಶ್ವರ ಆ ಎಂದಡೆ ಆದಿ ಕಳೆ ಇಳಿಯಿತ್ತು. ಉ ಎಂಬಲ್ಲಿ ಮಹೇಶ್ವರ ಬಂದು ಕೂಡಲು ಶಿವಶಕ್ತಿಗಳೆಂಬ ನಾಮರಹಿತವಾಗಿ ಇಂಥ ಓಂಕಾರವಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೭೦. ಮಕಾರವೆಂಬ ಪ್ರಣವದಲ್ಲಿ ದಂಡಶ್ಚ ತಾರಕಾಕಾರೋಭವತಿ ಓಂ ಆದಿ ಸದಾಶಿವದೇತಾಃ ॥ ಮಕಾರಂ ಚ ಲಯಂ ಪ್ರಾಪ್ತಿಯೊದಶ ಪ್ರಣವಾಂಶಿಕೈಃ । ಅಕಾರವೆಂಬ ಪ್ರಣವದಲ್ಲಿ ಕುಂಡಲಶ್ಚ ಅರ್ಧಚಂದ್ರೋಭವತಿ, ಓಂ ಆದಿ ರುದ್ರೋದೇವತಾಃ । ಅಕಾರಂ ಚ ಲಯಂ ಪ್ರಾಪ್ತಿ

ಚತುರ್ದಶ ಪ್ರಣವಾಂ ಶಿಕ್ಯೈಃ । ಉಕಾರವೆಂಬ ಪ್ರಣವದಲ್ಲಿ ಜ್ಯೋತಿಶ್ಚ ದರ್ಪಣಾಕಾರೋ ಭವತಿ ಓಂ ಆದಿ ಈಶ್ವರೋ ದೇವತಾಃ । ಉಕಾರ ಚ ಲಯಂ ಪ್ರಾಪ್ತಿ । ಪಂಚದಶ ಪ್ರಾಣವಾಂಶಿಕ್ಯೈಃ । ಮಕಾರೈಚ ಆಕಾರೆ ಚ ಉಕಾರೆಚ ಧನಂಜಯಂ । ಇದನೇಕ ಸವತ್ರಸ್ನಂ ಓಂ ಮಹಾ ಜ್ಯೋತಿ ರೂಪಕಂ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ

೨೭೧. ಓಂಕಾರಂ ಚ ಕಳಾ ರೂಪಂ । ಓಂಕಾರಂ ನಾದ ರೂಪಕಂ । ಓಂಕಾರಂ ಬಿಂದು ರೂಪಂಚ । ಓಂಕಾರಂ ಗೋಪ್ಯ ಮಾನಸ್ಯಂ ।।ಓಂಕಾರಂ ನಾದರೂಪೇಣ ಓಂಕಾರಂ ಬಿಂದು ರೂಪಕಂ । ಓಂಕಾರಂ ವ್ಯಾಪಿ ಸರ್ವತ್ರಂ। ಓಂಕಾರಂ ಗೋಪ್ಯ ಮಾನಸಂ । ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೭೨. ಇನ್ನು ಅಖಂಡ ಮಹಾ ಜ್ಯೋತಿ ಪ್ರಣವದ ಲಕ್ಷಣವೆಂತೆಂದಡೆ ಪ್ರಥಮಂ ತಾರಕಾ ಸ್ವರೂಪವಾಗಿಹುದು. ದ್ವಿತಿಯಂ ದಂಡಸ್ವರೂಪವಾಗಿಹುದು. ತೃತೀಯಂ ಕುಂಡಲಾಕರವಾಗಿಹುದು. ಚತುರ್ಥಂ ಅರ್ಧಚಂದ್ರಾಕಾರವಾಗಿಹುದು. ಪಂಚಮಂ ದರ್ಪಣಾಕಾರವಾಗಿಹುದು. ಷಷ್ಠಮಂ ಜ್ಯೋತಿ ಸ್ವರೂಪವಾಗಿಹುದು. ಈಯಾರು ಪ್ರಣವಾಕಾರವಾಗಿಹುದು. ಅಖಂಡಜ್ಯೋತಿ ಮಹಾ ಜ್ಯೋತಿ ಪ್ರಣವ ಅತ್ಯಂತ ಗೋಪ್ಯವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೭೩. ॥ಸಾಕ್ಷಿ॥ ಪ್ರಥಮಂ ತಾರಕಾರೂಪಂ । ದ್ವಿತೀಯಂ ದಂಡ ಉಚ್ಯತೆ । ತೃತೀಯಂ । ಕುಂಡಲಾಕಾರಂ । ಚತುರ್ಥಂ ಚಾರ್ಧ ಚಂದ್ರಕಂ। ಪಂಚಮಂ ದರ್ಪಣಾಕಾರಂ । ಷಷ್ಠಮಂ ಜ್ಯೋತಿರೂಪಕಂ । ಇತಿ ಪ್ರಣವ ವಿಜ್ಞೇಯ ಗೋಪ್ಯ ವರಾನನೆ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೭೪. ಇನ್ನು ಷಟ್‌ಸ್ಥಲ ಬ್ರಹ್ಮದ ಭೇದವೆಂತೆಂದಡೆ । ಅಖಂಡ ಮಹಾ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಾ ಸ್ವರೂಪವೆ ಮೂರ್ತಿ ಬ್ರಹ್ಮವು. ಆ ಪ್ರಣವದ ಕುಂಡಲಾಕಾರವೇ ಕಾಲಬ್ರಹ್ಮವು. ಆ ಪ್ರಣವದ ಅರ್ಧಚಂದ್ರಕವೆ ಬ್ರಹ್ಮಾನಂದ ಬ್ರಹ್ಮವು. ಆ ಪ್ರಣವದ ದರ್ಪಣಾಕಾರವೇ ವಿಜ್ಞಾನ ಬ್ರಹ್ಮವು. ಆ ಪ್ರಣವದ ಜ್ಯೋತಿ ಸ್ವರೂಪವೆ ಪರ ಬ್ರಹ್ಮವು. ಈ ಮೂರು ಷಟ್‌ಸ್ಥಲ ಬ್ರಹ್ಮವೆಂದು ಹೇಳಲ್ಪಟ್ಟಿತ್ತು ನೊಡಾ ಅಪ್ರಮಾಣ ಕೂಡಲಸಂಗಮದೇವಾ.

೨೭೫. ನಿರಂಜನಾತೀತಾಗಮೆ ಸಾಕ್ಷಿ॥ ಓಂಕಾರ ತಾರಕಾರೂಪಂ। ಮೂರ್ತಿಬ್ರಹ್ಮ ಯಥಾ ಭವೇತ್। ಓಂಕಾರ ದಂಡರೂಪೇಚ। ಪಿಂಡ ಬ್ರಹ್ಮಂಚ ಉಚ್ಯತೆ। ಓಂಕಾರ ಕುಂಡಲಾಕಾರಂ। ಕಲಾಬ್ರಹ್ಮ ಚ ಕೀರ್ತಿತಾ:। ಓಂಕಾರ ಅರ್ಧಚಂದ್ರೇಣ ಬ್ರಹ್ಮಾನಂದ ಬ್ರಹ್ಮ ಭವೇತ್। ಓಂಕಾರ ದರ್ಪಣಾಕಾರಂ। ವಿಜ್ಞಾನ ಬ್ರಹ್ಮಮುಚ್ಯತೆ। ಓಂಕಾರ ಜ್ಯೋತಿ ರೂಪೇಣ । ಪರ ಬ್ರಹ್ಮ ಯಥಾಭಾವೇಚ । ಪ್ರಣವಂ ಷಷ್ಠ ಬ್ರಹ್ಮಂ ಚ। ಷಟ್ ಸ್ಥಲ ಬ್ರಹ್ಮ ಉಚ್ಯತೆ। ಇತಿ ಷಟ್‌ಬ್ರಹ್ಮ ವಿಜ್ಞೇಯಂ । ದ್ಯುತ್ತಿರ್ದ್ಯೋಸ್ಯಂ ವರಾನನೆ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೭೬. ಇನ್ನು ಷಟ್‌ಸ್ಥಲ ಬ್ರಹ್ಮದ ಕಾಂತಿ ಅದೆಂತೆಂಪಡೆ, ಅಖಂಡ ಮಹಾಜ್ಯೋತಿ ಸ್ವರೂಪ ಪ್ರಣವದ ತಾರಕಾ ಸ್ವರೂಪವಾಗಿಹ ಮೂರ್ತಿ ಬ್ರಹ್ಮವು. ಅರುವತ್ತುನೂರು ಕೋಟಿ ಮಹಾಜ್ಯೋತಿ ಪ್ರಕಾಶವಾಗಿಹುದು. ಆ ಪ್ರಣವದ ದಂಡ ಸ್ವರೂಪವಾಗಿಹ ಪಿಂಡಬ್ರಹ್ಮವು ಎಪ್ಪತ್ತು ಮೂರು ಕೋಟಿ ಮಹಾಜ್ಯೋತಿ ಪ್ರಕಾಶವಾಗಿಹುದು. ಆ ಪ್ರಣವದ ಕುಂಡಲಾಕಾರವಾಗಿಹ ಕಲಾಬ್ರಹ್ಮವು ಎಂಬತ್ತು ನೂರು ಕೋಟಿ ಮಹಾ ಜ್ಯೋತಿ ಪ್ರಕಾಶವಾಗಿಹುದು. ಆ ಪ್ರಣವದ ಅರ್ಧಚಂದ್ರಕವಾಗಿಹ ಬ್ರಹ್ಮಾನಂದ ಬ್ರಹ್ಮವು ತೊಂಭತ್ತುನೂರು ಕೋಟಿ, ಮಹಾ ಜ್ಯೋತಿ ಪ್ರಕಾಶವಾಗಿಹುದು. ಆ ಪ್ರಣವದ ದರ್ಪಣಾಕಾರವಾಗಿಹ ವಿಜ್ಞಾನ ಬ್ರಹ್ಮವು ನೂರು ಸಾವಿರ ಕೋಟಿ ಮಹಾಜ್ಯೋತಿ ಪ್ರಕಾಶವಾಗಿಹುದು. ಆ ಪ್ರಣವದ ಜ್ಯೋತಿ ಸ್ವರೂಪವಾಗಿಹ ಪರಬ್ರಹ್ಮವು ಅನೇಕ ಕೋಟಿ ಮಹಾಜ್ಯೋತಿ ಪ್ರಕಾಶವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೭೭. ಇನ್ನು ಷಟ್‌ಸ್ಥಲ ಬ್ರಹ್ಮದಲ್ಲಿ ಮೂವತ್ತಾರು ತತ್ವಂಗಳು ತ್ಪತ್ಯ ಅದೆಂತೆಂದಡೆ ಅಖಂಡ ಮಹಾಜ್ಯೋತಿ ಪ್ರಣವದ ಜ್ಯೋತಿಸ್ವರೂಪವಾಗಿಹ ಪರಬ್ರಹ್ಮದಲ್ಲಿ ಶಿವನುತ್ಪತ್ಯವಾದನು. ಕ್ಷೇತ್ರಜ್ಞನುತ್ಪತ್ಯವಾದನು. ಕರ್ತನುತ್ಪತ್ಯವಾದನು. ಭಾವನುತ್ಪತ್ಯವಾದನು. ಚೈತನ್ಯನುತ್ಪತ್ಯವಾದನು. ಆಕಾಶ ಉತ್ಪತ್ಯವಾಯಿತ್ತು. ಈ ಮೂರು ತತ್ವಂಗಳು ಪರಬ್ರಹ್ಮದಲ್ಲಿ ಪುಟ್ಟಿತ್ತು ನೋಡಾ ಅಪ್ರಮಾಣಕೂಡಲಸಂಗಮದೇವಾ.

೨೭೮. ॥ಸಾಕ್ಷಿ॥ ಶಿವಂ ಕ್ಷೇತ್ರಜ್ಞ ಕರ್ತಾರಂ। ಭಾವ ಚೈತನ್ಯ ಮಂತರಂ। ಏವಂ ತು ಷಡ್ವಿಧಂ ಪ್ರೋಕ್ತಂ। ಪರಬ್ರಹ್ಮಂ ಚ ಕಥ್ಯತೆ। ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೭೯. ಅಖಂಡ ಮಹಾ ಜ್ಯೋತಿಪ್ರಣವದ ದರ್ಪಣಾಕಾರವಾಗಿಹ ವಿಜ್ಞಾನ ಬ್ರಹ್ಮದಲ್ಲಿ ಸದಾಶಿವನುತ್ಪತ್ಯವಾದನು. ಮಹಾಕಾಶ ಉತ್ಪತ್ಯವಾಯಿತ್ತು. ಶಬ್ದ ಉತ್ಪತ್ಯವಾಯಿತ್ತು. ಜ್ಞಾನ ಉತ್ಪತ್ಯವಾಯಿತ್ತು. ಶ್ರೋತ್ರ ಉತ್ಪತ್ಯವಾಯಿತ್ತು. ವಾಕ್ಕು ಉತ್ಪತ್ಯವಾಯಿತ್ತು. ಈ ಮೂರು ತತ್ವಂಗಳು ವಿಜ್ಞಾನಬ್ರಹ್ಮದಲ್ಲಿ ಹುಟ್ಟಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೮೦. ॥ಸಾಕ್ಷಿ॥ ಸದಾಶಿವಂ ಮಹಾಕಾಶಂ। ಶಬ್ದಂ ಜ್ಞಾನಂಚ ಶ್ರೋತ್ರಕಂ। ವಾಕ್ತಥಾ ಷಡ್ವಿಧಂ ಪ್ರೋಕ್ತಂ। ವಿಜ್ಞಾನಬ್ರಹ್ಮ ಮುಚ್ಯತೆ ಎಂದುದಾಗಿ। ಅಪ್ರಮಾಣ ಕೂಡಲಸಂಗಮದೇವಾ.

೨೮೧. ಅಖಂಡ ಮಹಾ ಜ್ಯೋತಿ ಪ್ರಣವದ ಅರ್ಧಚಂದ್ರಕ ರೂಪವಾಗಿಹ ಬ್ರಹ್ಮಾನಂದ ಬ್ರಹ್ಮದಲ್ಲಿ ಈಶ್ವರನುತ್ಪತ್ಯವಾದನು. ವಾಯು ಉತ್ಪತ್ಯವಾಯಿತ್ತು. ಸ್ಪರ್ಶನ ಉತ್ಪತ್ಯವಾಯಿತ್ತು. ಮನ ಉತ್ಪತ್ಯವಾಯಿತ್ತು. ತ್ವಕ್ಕು ಉತ್ಪತ್ಯವಾಯಿತ್ತು. ಪಾಣೇಂದ್ರಿಯ ಉತ್ಪತ್ಯವಾಯಿತ್ತು. ಈ ಮೂರು ತತ್ವಂಗಳು ಬ್ರಹ್ಮಾನಂದ ಬ್ರಹ್ಮದಲ್ಲಿ ಉತ್ಪತ್ಯವಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೮೨. ॥ಸಾ॥ ಈಶ್ವರೋ ವಾಯು ಸಂಸ್ಪರ್ಶೇ । ಮನಸ್ತತ್ವಾಣಿ ಉಚ್ಯತೆ। ಷಡು ಸಮ್ಮಿಶ್ರಿತಂ ಯುಸ್ತು। ಬ್ರಹ್ಮಾನಂದೇನ ಉಚ್ಯತೆ। ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೮೩. ಅಖಂಡ ಮಹಾ ಜ್ಯೋತಿ ಪ್ರಣವದ ಕುಂಡಲಾಕಾರ ವಾಗಿಹ ಕಾಲಬ್ರಹ್ಮದಲ್ಲಿ ರುದ್ರನುತ್ಪತ್ಯವಾದನು. ಅಗ್ನಿ ಉತ್ಪತ್ಯವಾಯಿತ್ತು. ರೂಪು ಉತ್ಪತ್ಯವಾಯಿತ್ತು. ಅಹಂಕಾರ ಉತ್ಪತ್ಯವಾಯಿತ್ತು. ನೇತ್ರ ಉತ್ಪತ್ಯವಾಯಿತ್ತು. ಪಾದೇಂದ್ರಿಯ ಉತ್ಪತ್ಯವಾಯಿತ್ತು. ಈ ಮೂರು ತತ್ವಂಗಳು ಪಿಂಡಬ್ರಹ್ಮದಲ್ಲಿ ಉತ್ಪತ್ಯವಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೮೪. ॥ಸಾ॥ ರುದ್ರಂ ತೇಜಸ್ತಥಾ ರೂಪಂ। ಮಹಾನೇತ್ರಂ ಚ ಪಾದಯೋಃ ಷಡಂಗ ಮಿಶ್ರಿತಂಚ ತಂ। ಕಲಾ ಬ್ರಹ್ಮಂ ಚ ಕಥ್ಯತೆ। ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೮೫. ಆ ಅಖಂಡ ಮಹಾ ಜ್ಯೋತಿ ಪ್ರಣವದ ದಂಡ ಸ್ವರೂಪವಾಗಿಹ, ಪಿಂಡ ಬ್ರಹ್ಮದಲ್ಲಿ ವಿಷ್ಣು ಉತ್ಪತ್ಯವಾದನು. ಅಪ್ಪು ಉತ್ಪತ್ಯ

ವಾಯಿತ್ತು. ರಸ ಉತ್ಪತ್ಯವಾಯಿತ್ತು. ಬುದ್ಧಿ ಉತ್ಪತ್ಯವಾಯಿತ್ತು. ಜಿಹ್ವೆ ಉತ್ಪತ್ಯವಾಯಿತ್ತು. ಗುಹ್ಯ ಉತ್ಪತ್ಯವಾಯಿತ್ತು. ಈಯಾರು ತತ್ವಂಗಳು ಪಿಂಡ ಬ್ರಹ್ಮದಲ್ಲಿ ಉತ್ಪತ್ಯವಾಯಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೨೮೬. ॥ಸಾ॥ ವಿಷ್ಣುರಾಪೋ ರಸೋ ಬುದ್ಧಿ, ಜಿಹ್ವೆ ಗುಹ್ಯಸ್ತ ದ್ಯೇವ ಚ। ಷಡುತತ್ವ ಮಿದಂ ಪ್ರೋಕ್ತಂ। ಪಿಂಡ ಬ್ರಹ್ಮಂ ಚ ಕಥ್ಯತೆ। ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೮೭. ಆ ಅಖಂಡ ಮಹಾ ಜ್ಯೋತಿ ಪ್ರಣವದ ತಾರಕಾ ಸ್ವರೂಪವಾಗಿಹ ಮೂರ್ತಿ ಬ್ರಹ್ಮದಲ್ಲಿ ಬ್ರಹ್ಮನುತ್ಪತ್ಯವಾದನು. ಪೃಥ್ವಿ ಉತ್ಪತ್ಯವಾಯಿತ್ತು. ಗಂಧ ಉತ್ಪತ್ಯವಾಯಿತ್ತು. ಚಿತ್ತ ಉತ್ಪತ್ಯವಾಯಿತ್ತು. ಪ್ರಾಣ ಉತ್ಪತ್ಯವಾಯಿತ್ತು. ಗುದ ಉತ್ಪತ್ಯವಾಯಿತ್ತು. ಈಯಾರು ತತ್ವಂಗಳು ಮೂರ್ತಿ ಬ್ರಹ್ಮದಲ್ಲಿ ಉತ್ಪತ್ಯವಾಯಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೨೮೮. ॥ಸಾ॥ ತಥಾ ಧಾತ್ರಿ ಚ ಗಂಧಶ್ಚ। ಚಿತ್ತ ಘ್ರಾಣ ಗುದ ಸ್ತಥಾ। ಏತೆ ಸಮ್ಮಿಶ್ರಿತಂ ಷಟ್ಕಂ ಮೂರ್ತಿ ಬ್ರಹ್ಮಂ ಚ ಕಥ್ಯತೆ। ಎಂದುದಾಗಿ ಅಪ್ರಮಾಣ ಕೂಡಲ ಸಂಗಮದೇವಾ.

೨೮೯. ಇನ್ನು ಷಟ್‌ಶಕ್ತಿಗಳುತ್ಪತ್ಯವ ದೆಂತೆಂದಡೆ ನಿಃಶಬ್ದವೆಂಬ ಪರಬ್ರಹ್ಮದ ಚಿತ್‌ಶಕ್ತಿಯ ಸಹಸ್ರಾಂಶದಲ್ಲಿ ಚಿಚ್ಛಕ್ತಿ ಹುಟ್ಟಿದಳು. ಆ ಚಿಚ್ಛಕ್ತಿಯ ಸಹಸ್ರಾಂಶದಲ್ಲಿ ಪರಾಶಕ್ತಿ ಹುಟ್ಟಿದಳು. ಆ ಪರಾಶಕ್ತಿಯ ಸಹಸ್ರಾಂಶದಲ್ಲಿ ಆದಿಶಕ್ತಿ ಹುಟ್ಟಿದಳು. ಆ ಆದಿಶಕ್ತಿಯ ಸಹಸ್ರಾಂಶದಲ್ಲಿ ಇಚ್ಛಾಶಕ್ತಿ ಹುಟ್ಟಿದಳು. ಆ ಇಚ್ಛಾಶಕ್ತಿಯ ಸಹಸ್ರಾಂಶದಲ್ಲಿ ಜ್ಞಾನಶಕ್ತಿ ಹುಟ್ಟಿದಳು. ಆ ಜ್ಞಾನಶಕ್ತಿಯ ಸಹಸ್ರಾಂಶದಲ್ಲಿ ಕ್ರಿಯಾಶಕ್ತಿ ಹುಟ್ಟಿದಳು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೯೦. ಚಿಚ್ಛಕ್ತಿ, ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ, ಈ ಷಟ್‌ಶಕ್ತಿಗಳು ಸರ್ವ ತತ್ವಕ್ಕು ಕಾರಣವಾಗಿಹುವು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೯೧. ಇನ್ನು ಷಡಂಗದುತ್ಪತ್ಯ ವೆಂತೆಂದಡೆ ಬ್ರಹ್ಮ ವಿಷ್ಣು ರುದ್ರ ಈಶ್ವರ, ಸದಾಶಿವ ಶಿವನು ಈ ಮೂರು ಶಿವಾಂಗವು. ಚಿಚ್ಛಕ್ತಿ ಕಾರಣವಾಗಿ ಹುಟ್ಟಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೯೨. ॥ಸಾ॥ ಬ್ರಹ್ಮ ವಿಷ್ಣು ರುದ್ರಶ್ಚ। ಈಶ್ವರಶ್ಚ ಸದಾಶಿವಃ। ಶಿವಂ ಶಿವಾಂಗ ಮಿತ್ಯೇತೆ। ಚಿಚ್ಛಕ್ತಿಶ್ಚೈವ ಕಾರಣಂ। ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೯೩. ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ಕ್ಷೇತ್ರಜ್ಞನು ಈಯಾರು ಭೂತಾಂಗವು ಪರಾಶಕ್ತಿಯು ಕಾರಣವಾಗಿ ಹುಟ್ಟಿದವು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೯೪. ॥ಸಾಕ್ಷಿ॥ ಭೂ ಜಲಾಗ್ನಿ ಮರುದ್ವ್ಯಾಮ। ಕ್ಷೇತ್ರ ಜ್ಞಾನಶ್ಚ ದೇವ ಹಿ। ಭೂತಾಂಗಂ ಚ ಮಿದಂ ಪ್ರೋಕ್ತಂ। ಪರಾಶಕ್ತಿ ಸುಕಾರಣಂ ಎಂದುದಾಗಿ ಅಪ್ರಮಾಣ ಕೂಡಲ ಸಂಗಮದೇವಾ.

೨೯೫. ಗಂಧ ರಸ ರೂಪು ಸ್ಪರ್ಶ ಶಬ್ದ ಕರ್ತನು ಈಯಾರು ಯೋಗಾಂಗವು. ಆದಿ ಶಕ್ತಿಯೇ ಕಾರಣವಾಗಿ ಹುಟ್ಟಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೯೬. ॥ಸಾಕ್ಷಿ॥ ಗಂಧಂ ಚ ರಸ ರೂಪಂ ಚ ಸ್ಪರ್ಶನಂ ಶಬ್ದ ಮೇಹಿ ಕರ್ತಾರಂ। ಚೇತಿ ಯೋಗಾಂಗಂ। ಆದಿ ಶಕ್ತಿ ಸ್ತು ಕಾರಣಂ। ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೯೭. ಚಿತ್ತ, ಬುದ್ಧಿ, ಅಹಂಕಾರ, ಮನಸ್ಸು. ಜ್ಞಾನ, ಭಾವ, ಈಯಾರು ಕಾಮಾಂಗವು. ಇಚ್ಛಾಶಕ್ತಿಯೇ ಕಾರಣವಾಗಿ ಪುಟ್ಟಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೯೮. ॥ಸಾಕ್ಷಿ॥ ಚಿತ್ತ, ಬುದ್ಧಿ, ಅಹಂಕಾರಂ। ಮನ ಸುಜ್ಞಾನ ಭಾವಕಂ। ಷಡ್ವಿಧ ಕಾಮಾಂಗಂ ಪ್ರೋಕ್ತಂ। ಇಚ್ಛಾಶಕ್ತಿಸ್ತು ಕಾರಣಂ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೯೯. ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಚೇತನನು ಈಯಾರು ದಿವ್ಯಾಂಗವು. ಜ್ಞಾನಶಕ್ತಿಯೆ ಕಾರಣವಾಗಿ ಹುಟ್ಟಿದವು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೦೦. ॥ಸಾಕ್ಷಿ॥ ಘ್ರಾಣ ಜಿಹ್ವೆ ಚ ನೇತ್ರಂಚ। ತ್ವಕ್ಶ್ರೋತ್ರಂ ಚ ತನುಂ ವಿದುಃ ಷಡಂಗ ದಿವ್ಯಾಂಗಮೇಚೇತಿ। ಜ್ಞಾನ ಶಕ್ತಿಸ್ತು ಕಾರಣಂ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

ಸಂಪುಟ ೨೯  ಸಂಚಿಕೆ ೭

# ಶಿವಾನುಭವ




॥ ಸಂಪಾದಕರು ॥

ಫ. ಗು. ಹಳಕಟ್ಟಿ,

ಬಿ. ಎ. ಎಲ್. ಎಲ್. ಬಿ.


ವಾ. ಚ. ೫-೧೨-೦] ವಿಜಾಪೂರ [ಜೂಲೈ ೧೯೫೫

# ಪ್ರಭುದೇವರ ವಚನಗಳ

## ಪುನರ್ಮುದ್ರಣವು.



" **ಪ್ರಭುದೇವರ ವಚನಗಳು** " ಶಿವಶರಣರ ವಾಙ್ಮಯದಲ್ಲಿ ಅತ್ಯುಚ್ಚತರದ ಗ್ರಂಥವಾಗಿರುತ್ತದೆಂಬುದು ಸರ್ವಶ್ರುತವದೆ. ಈ ಗ್ರಂಥದ ಮುದ್ರಣಕ್ಕಾಗಿ ಶಿವಮೊಗ್ಗಾ ಜಿಲ್ಹಾ **ಬಿಲ್ಲಹಳ್ಳಿ ವಿರಕ್ತಮಠದ ಸಂಗಮನಾಥ ಸ್ವಾಮಿಗಳು** ತಮಗೆ ಶಕ್ಯವಿದ್ದಷ್ಟು ಸಹಾಯ ಮಾಡಲು ಒಪ್ಪಿಕೊಂಡಿದ್ದಾರೆ. ಅವರು ೫೦೦-೬೦೦ ರೂಪಾಯಿಗಳ ವರೆಗೆ ಸಹಾಯ ಮಾಡಬಹುದು. ಈ ಗ್ರಂಥವು ಸುಮಾರು ४೦೦ ಪುಟವುಳ್ಳದಾಗುವದು. ಮೂಲ ಗ್ರಂಥದೊಡನೆ ನಮಗೆ ಬೇರೆಯಾಗಿ ದೊರೆದ ಇವರ ವಚನಗಳನ್ನು ಸಹ ಸೇರಿಸುವೆವು. ಇದಕ್ಕೆ ಒಂದು ವಿಸ್ತೃತ ಮುನ್ನುಡಿ ಮತ್ತು ಟಿಪ್ಪಣೆಗಳನ್ನು ಜೋಡಿಸುವೆವು. ಈ ಗ್ರಂಥದ ಮುದ್ರಣಕ್ಕೆ ಸುಮಾರು ೨೫೦೦ ರೂಪಾಯಿಗಳು ಹತ್ತಬಹುದು. ಅದಕ್ಕೆ ಉತ್ತಮತರದ ಕಾಗದ ಗಳನ್ನು ಉಪಯೋಗಿಸುವೆವು. ಬಾಯಿಂಡಿಂಗ್ ಮುಂತಾದ್ದನ್ನು ಉಚ್ಚ ತರಗತಿಯದಾಗಿ ಮಾಡುವೆವು.

ವಚನವಾಙ್ಮಯದ ಗ್ರಂಥಗಳು ಈಚೆಗೆ ದೊರೆಯುವದಿಲ್ಲ. ಅವು ತೀರಿಹೋಗಹತ್ತಿವೆ. ಆದರೆ ಈ ಮಹತ್ವದ ಗ್ರಂಥವು ಸರಿಯಾಗಿ ಅಚ್ಚಾದರೆ ಇದರಲ್ಲಿಯ ಭಾಗಗಳನ್ನು ಕಾಲೇಜುಗಳಲ್ಲಿಯೂ, ಪಾಠಶಾಲೆಗಳಲ್ಲಿಯೂ ಪಠ್ಯಪುಸ್ತಕಗಳನ್ನಾಗಿ ಏರ್ಪಡಿಸುವದು ಶಕ್ಯವಿದೆ. ಇಂಥ ಅಮೋಘವಾದ ಗ್ರಂಥದ ಮುದ್ರಣಕ್ಕೆ ವೀರಶೈವ ಸಮಾಜದವರು ನಮಗೆ ಸಹಾಯ ಮಾಡುವರೆಂದು ನಮ್ಮ ವಿನಂತಿ ಇದೆ.

ಶ್ರೀ ಅಲ್ಲಮ ಮಹಾಪ್ರಭುಗಳು ಎಲ್ಲ ನಿರಂಜನ ಮಠಾಧಿಕಾರಿಗಳಿಗೆ ಮೂಲ ಕರ್ತೃಗಳಾಗಿದ್ದಾರೆ. ಇಂಥವರ ಚರಿತ್ರೆ ಮತ್ತು ಉಕ್ತಿಗಳು ಈಗ ದೊರೆಯದೇ ಇರುವದು ವೀರಶೈವ ಸಮಾಜಕ್ಕೆ ಭೂಷಣವಾದುದಲ್ಲ. ದೊಡ್ಡ ಉತ್ಪನ್ನವುಳ್ಳ ಶ್ರೀ ವಿರಕ್ತಮಠಾಧೀಶ್ವರರು ನಮ್ಮ ಸಮಾಜದಲ್ಲಿ ಅನೇಕರಿದ್ದಾರೆ. ಅವರು ಈ ಕಾರ್ಯದಲ್ಲಿ ನಮಗೆ ಸಹಾಯ ಮಾಡಿದ್ದಾದರೆ ಅವರು ಒಂದು ಮಹತ್ವದ ಸಮಾಜಸೇವೆ ಮಾಡಿದಂತಾಗುವದು.

ವಿಜಾಪುರ
ತಾ॥ ೧೫-೭-೫೫

ಫ. ಗು. ಹಳಕಟ್ಟಿ,
ಸಂಪಾದಕ – ಶಿವಾನುಭವ

# ವಿಷಯಾನುಕ್ರಮಣಿಕೆ







# ಶಿವಾನುಭವ

ಸಂಪುಟ ೨೯ | ಜುಲೈ ೧೯೫೫ | ಸಂಚಿಕೆ ೭.

## ಸ್ಫುಟವಿಷಯುಗಳು.

### ಕಪಿಲಸಿದ್ಧ ಮಲ್ಲಿಕಾರ್ಜುನನ ಬಗ್ಗೆ ಕದಂಬರಾಜರ ಶಿಲಾಶಾಸನಗಳು

ವೀರಶೈವರ ಸಾಮಾಜಿಕ ಮತ್ತು ರಾಜಕೀಯ ಇತಿಹಾಸವು ಇನ್ನೂ ಸಂಶೋಧಿಸಲ್ಪಟ್ಟಿರುವದಿಲ್ಲ. ಈಚೆಗೆ ವೀರಶೈವರಲ್ಲಿ ಅನೇಕ ಪಿ. ಎಚ್. ಡಿ. ಗಳು ಆಗಿ ಡಾಕ್ಟರೆಂದು ತಮ್ಮನ್ನು ಕರೆದುಕೊಳ್ಳುತ್ತಿದ್ದಾರೆ. ಹಾಗೆಯೇ ಎಂ. ಎ. ಪರೀಕ್ಷೆಯಲ್ಲಿಯೂ ತೇರ್ಗಡೆ ಹೊಂದಿದವರ ಸಂಖ್ಯೆಯಾದರೂ ಬಹಳ ದೊಡ್ಡದಿದೆ. ಈ ಎರಡೂ ಪರೀಕ್ಷೆಗಳಲ್ಲಿ 'ಸಂಸ್ಕೃತಿ' ಇದಕ್ಕೆ ಸಂಬಂಧಿಸಿದ ವಿಷಯುಗಳು ನಿಯೋಜಿಸಲ್ಪಟ್ಟಿರುತ್ತವೆ. ಈ ಅಭ್ಯಾಸದಲ್ಲಿ ಹಿಂದಿನ ಕಾಲದಲ್ಲಿ ಆಗಿ ಹೋದ ಗ್ರಂಥಕಾರರ ಕೃತಿಗಳ ಪರಿಶೀಲನೆಯು ಸಮಾವೇಶವಾಗುತ್ತದೆ. ಆದರೆ ಈ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದವರು ಪದವಿಗಳನ್ನು ಪಡೆದ ಬಳಿಕ ಕರ್ನಾಟಕ ಸಂಸ್ಕೃತಿಯನ್ನು ಸಂಶೋಧಿಸುವ ಕಾರ್ಯದಲ್ಲಿ ತೊಡಗಿದ್ದುದು ಮಾತ್ರ ಕಂಡುಬರುವದಿಲ್ಲ. ಇದು ಬಹು ವಿಷಾದಕರವಾದ ಸಂಗತಿಯಾಗಿದೆ.

ಈಗ ಗೋವೆಯ ಚಳವಳಿಯು ವೃತ್ತಪತ್ರಿಕೆಗಳಲ್ಲಿ ಬಹು ಮಹತ್ವದ ವಿಷಯುವಾಗಿರುತ್ತದೆ. ಈ ಗೋವೆಯಲ್ಲಿ ೧೨ನೇ ಶತಮಾನದಲ್ಲಿ ಆಗಿಹೋದ ಅಲ್ಲಮಪ್ರಭುಗಳು ಗುಹೇಶ್ವರ ದೇವಸ್ಥಾನವನ್ನು ಸ್ಥಾಪಿಸಿದ್ದರ ವಿಷಯುವಾಗಿ ನಿರಂಜನ ವಂಶ ರತ್ನಾಕರ ಎಂಬ ಗ್ರಂಥದಲ್ಲಿ ಉಲ್ಲೇಖವಿರುತ್ತದೆ. ಇದನ್ನು ನಾವು ಶಿವಾನುಭವದ ಹಿಂದಿನ ಸಂಚಿಕೆಯಲ್ಲಿ ವಿವರಿಸಿರುತ್ತೇವೆ. ಗೋವೆ

ಯಲ್ಲಿ ಕದಂಬರಾಜರು ಆಳುತ್ತಿದ್ದು ಅವರು ಸೊನ್ನಲಿಗೆಯ ಕಪಿಲಸಿದ್ಧ ದೇವಾಲಯಕ್ಕೆ ಉಂಬಳಿ ಹಾಕಿ ಕೊಟ್ಟಿದ್ದು ಕಂಡುಬರುತ್ತದೆ. ಹೀಗೆ ಉಂಬಳಿ ಕೊಟ್ಟದ್ದರ ಉಲ್ಲೇಖವು ಶಿವಮೊಗ್ಗಿ ಜಿಲ್ಹೆಯಲ್ಲಿರುವ ಕೋಳೀಸಾಲೆ ಎಂಬ ಗ್ರಾಮದಲ್ಲಿರುವ ಶಿಲಾಶಾಸನದಲ್ಲಿದೆ. ಇದು ಎಪಿಗ್ರಾಫಿಕಾ ಕರ್ಣಾಟಿಕಾ ಇದರ ಶಿವಮೊಗ್ಗೆ ಭಾಗದ ಶಾಸನ ಗ್ರಂಥದಲ್ಲಿ ಬಂದಿದೆ. ಈ ಕಪಿಲಸಿದ್ಧ ದೇವಾಲಯದ ಉಲ್ಲೇಖವು ಹಾವೇರಿ ತಾಲೂಕಿನಲ್ಲಿರುವ ಸಂಗೂರ ಶಿಲಾಶಾಸನದಲ್ಲಿಯೂ ಇರುತ್ತದೆ. ಅದರಲ್ಲಿ ಸಿದ್ಧರಾಮನ ಒಂದು ಉಕ್ತಿಯ ಉಲ್ಲೇಖವಿದೆ. ಈಚೆಗೆ ನಮ್ಮ ಬ್ರಾಹ್ಮಣ ಮಿತ್ರರೊಬ್ಬರು ಹುಬ್ಬಳ್ಳಿಗೆ ಸಮೀಪವಿರುವ ಒಂದು ಗ್ರಾಮದಲ್ಲಿ ಕದಂಬರಾಜರು ಸೊನ್ನಲಿಗೆಯ ಕಪಿಲಸಿದ್ಧ ದೇವಾಲಯಕ್ಕೆ ಉಂಬಳಿ ಹಾಕಿಕೊಟ್ಟದ್ದರ ವಿವರಣೆಯಿದ್ದ ಶಾಸನದ ಭಾಗವನ್ನು ಬರೆದು ನಮ್ಮ ಕಡೆಗೆ ಕಳಿಸಿ ಕೊಟ್ಟಿರುತ್ತಾರೆ. ಅದೇ ಸಭ್ಯಗ್ರಹಸ್ಥರು ಕಪಿಲಸಿದ್ಧ ಮಲ್ಲಿಕಾರ್ಜುನನ ಉಲ್ಲೇಖವಿರುವ ಬೇರೊಂದು ಶಾಸನವು ಮುದ್ದೇಬಿಹಾಳ ತಾಲೂಕ ಹುಲ್ಲೂರು ಗ್ರಾಮಕ್ಕೆ ಸಮೀಪವಿರುವ ಕೆಲವೊಂದು ಗ್ರಾಮದಲ್ಲಿರುವದನ್ನು ನಮಗೆ ತಿಳಿಸಿರುತ್ತಾರೆ. ಆದರೆ ಈ ತರದ ಸಂಶೋಧನೆಗಳನ್ನು ನಮ್ಮ ವೀರಶೈವ ಪದವೀಧರರು ಕಂಡುಹಿಡಿಯುವದು ಬಹಳ ಅವಶ್ಯವಿದೆ. ಕೆಲವು ವರ್ಷಗಳ ಹಿಂದೆ ಉಟಕಮುಂಡದಲ್ಲಿಯ ಶಿಲಾಶಾಸನ ಸಂಶೋಧನದ ಅಧಿಕಾರಿಗಳು ಮೇಲ್ಕಂಡ ಭಾಗಗಳಲ್ಲಿರುವ ಗ್ರಾಮಗಳಲ್ಲಿ ಸಂಚರಿಸಿ ಶಿಲಾಶಾಸನಗಳ ಅಚ್ಚನ್ನು ತೆಗೆದುಕೊಂಡು ಹೋಗಿದ್ದರೂ ಅವರಾರು ಈ ಮೇಲಿನ ಶಾಸನಗಳನ್ನು ಎಲ್ಲಿಯೂ ಪ್ರಕಟ ಮಾಡಿರುವದಿಲ್ಲ. ಪರಮತೀಯರು ಹೀಗೆ ಯಾವಾಗಲೂ ಮಾಡುವದು ಕಂಡುಬಂದಿದೆ. ಆದರೆ ಹೀಗೆ ಇಂಥ ಸಂಶೋಧನೆಗಳನ್ನು ನಮ್ಮ ವೀರಶೈವ ಪದವೀಧರರು ಸ್ವತಃ ಕೈಕೊಳ್ಳುವದು ಬಹಳ ಅಗತ್ಯವಾಗಿದೆ. ಈಗ ಹುಬ್ಬಳ್ಳಿ ಮತ್ತು ಮುದ್ದೇಬಿಹಾಳ ಈ ಭಾಗಗಳಲ್ಲಿ ಅನೇಕ ವೀರಶೈವ ವಕೀಲರೂ ಶಿಕ್ಷಣಖಾತೆಯಲ್ಲಿ ಕೆಲಸಮಾಡುತ್ತಿರುವ ಇ. ಆಯ್. ಡಿ. ಅಧಿಕಾರಿಗಳೂ ಇದ್ದಾರೆ. ಅವರು ಮೇಲೆ ಹೇಳಿದ ಗ್ರಾಮಗಳಲ್ಲಿ ಸಂಚರಿಸಿ ಅವುಗಳಲ್ಲಿ ಇಂಥ ಶಾಸನಗಳು ಎಲ್ಲಿವೆ ಎಂಬುದನ್ನು ಗೊತ್ತು ಹಚ್ಚಿ ಅವುಗಳ ಅಚ್ಚನ್ನು ತೆಗೆದು ಪ್ರಕಟಿಸುವದು ಯುಕ್ತವಲ್ಲವೇ ? ಹಾಗೆಯೇ ನಮ್ಮಲ್ಲಿರುವ ಶಾಸ್ತ್ರಿಗಳೂ ಸ್ವಾಮಿ

ಗಳೂ ಪ್ರಯತ್ನಿಸಬೇಕಲ್ಲವೇ ? ಅವರು ಹೀಗೆ ಮಾಡದೆ ಬರೇ ಭಾಷಣ ಮಾಡುತ್ತಿರುವದು ಅವರ ಕರ್ತವ್ಯ ಚ್ಯುತಿ ಎಂದು ಹೇಳಬೇಕಾಗುತ್ತದೆ.

**ಬಿಜ್ಜಳರಾಯ ಚರಿತ್ರೆ:**— ಮದ್ರಾಸ ಗವ್ಹರ್ನಮೆಂಟ ಓರಿಎಂಟಲ್ ಗ್ರಂಥಮಾಲೆಯ ೧೦೩ನೇ ಗ್ರಂಥವಾಗಿ 'ಬಿಜ್ಜಳರಾಯ ಚರಿತೆ' ಎಂಬ ಕನ್ನಡ ಗ್ರಂಥವು ಪ್ರಸಿದ್ಧವಾಗಿರುತ್ತದೆ. ಸರಕಾರವು ಇಂಥ ಗ್ರಂಥಗಳನ್ನು ಪ್ರಕಟಿಸುವಲ್ಲಿ ಅವುಗಳಿಂದ ಜನತೆಗೆ ಉಪಯೋಗವೋ ಹೇಗೆ, ಅವುಗಳಿಂದ ಸಾಂಸ್ಕೃತಿಕ ಸಂವರ್ಧನೆಗೆ ಸಹಾಯವಾಗುವದೋ ಹೇಗೆ, ಎಂಬುದನ್ನು ನಿರೀಕ್ಷಿಸಿ ಅವು ಈ ದೃಷ್ಟಿಯಿಂದ ಉಪಯುಕ್ತವಿದ್ದರೆ ಅವುಗಳನ್ನು ಪ್ರಸಿದ್ಧಿಸುವದು ವಿಹಿತವು. ಆದರೆ ಯಾವ ದೃಷ್ಟಿಯಿಂದಲೂ ಬಿಜ್ಜಳರಾಯ ಚರಿತೆಯು ಪ್ರಕಟನೆಗೆ ಅರ್ಹವಿಲ್ಲೆಂಬುದು ಈ ಗ್ರಂಥಕ್ಕೆ ಮುನ್ನುಡಿ ಬರೆದ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರ ಅಭಿಪ್ರಾಯಗಳಿಂದಲೇ ಸಿದ್ಧವಾಗುತ್ತದೆ. ಅವರು ಈ ವಿಷಯವಾಗಿ ಬರೆದುದು ಏನೆಂದರೆ— ಈ ಗ್ರಂಥವು ಯಾವ ದೃಷ್ಟಿಯಿಂದಲೂ 'ಐತಿಹಾಸಿಕ ರಚನೆ' ಎಂದು ಹೇಳಲು ಬರಲಾರದು. ಇದರಲ್ಲಿಯ ಪದ್ಮಿನಿಯು ಬಸವಣ್ಣನ ಅಕ್ಕನೆಂತಲೂ ಬಿಜ್ಜಳನು ಅವಳನ್ನು ತನ್ನ ರಾಣಿಯನ್ನಾಗಿ ಮಾಡಿದನೆಂತಲೂ ಇದರಲ್ಲಿ ಉಲ್ಲೇಖವಾಗಿದೆ. ಬಸವಣ್ಣನು ದುಷ್ಟ ಜನರಿಗೆ ಲಿಂಗದೀಕ್ಷೆಯನ್ನು ಕೊಟ್ಟು ಅವರನ್ನು ತನ್ನ ಅನುಯಾಯಿಗಳನ್ನಾಗಿ ಮಾಡಿಕೊಂಡನೆಂತಲೂ ಇಂಥ ಅನುಯಾಯಿಗಳು ಪರಮಾತ್ಮನಿಂದ ಪ್ರೇರಿತರಾದವರಿದ್ದರೆಂತಲೂ ಅವನು ಹೇಳಿ, ಒಬ್ಬನು ತಾನು ವೀರಶೈವನೆಂದು ಹೇಳಿದ ಮಾತ್ರಕ್ಕೆ ಅವನು ವೀರಶೈವನೆಂದು ಹೇಳಲು ಅಡ್ಡಿ ಇಲ್ಲವೆಂದು ಬಸವೇಶ್ವರನು ನಾಡಿನಲ್ಲಿ ಪ್ರಚಾರ ಮಾಡಿದನೆಂದು ಈ ಗ್ರಂಥದಲ್ಲಿ ಹೇಳಿದೆ. ಕೊಲ್ಹಾಪುರದ ಶಿಲಾಹಾರರ ಕೂಡ ಬಿಜ್ಜಳನು ಯುದ್ಧಮಾಡಿ ಜಯವನ್ನು ಸಂಪಾದಿಸಿ ಮರಳುವಾಗ ಬಸವೇಶ್ವರನು ಅವನಿಗೆ ಒಂದು ವಿಷಪೂರಿತ ಹಣ್ಣನ್ನು ಕೊಡಲು ಅವನು ಅದನ್ನು ಮೂಸಿಸಲು ಮರಣವು ತನಗೆ ಸಮಿಪಿಸಿತೆಂದು ಅವನಿಗೆ ತೋರಿತು. ಆಗ ಬಿಜ್ಜಳನ ಅನುಯಾಯಿಗಳು ಬಸವಣ್ಣನನ್ನು ಶಿಕ್ಷಿಸಲು ಅವನ ಮೇಲೇರಿ ಹೋಗಲು, ಬಸವಣ್ಣನು ಉಳವಿಗೆ ಓಡಿಹೋಗಿ ಬಾವಿಯಲ್ಲಿ ಬಿದ್ದು ಸತ್ತನೆಂದು ಈ ಚರಿತ್ರೆಯಲ್ಲಿ ಬರೆದಿದೆ. ಈ ವಿಷಯಗಳು ಮುನ್ನುಡಿಕಾರರು ಉಲ್ಲೇಖಿಸಿ ಈ ಸಂಗತಿಗ

ಳಲ್ಲಿ ಐತಿಹಾಸಿಕತೆ ಏನೂ ಇಲ್ಲವೆಂದು ಅವರು ಅಭಿಪ್ರಾಯಪಟ್ಟಿದ್ದಾರೆ. ಈ ಪುರಾಣವು ಕಾವ್ಯದೃಷ್ಟಿಯಿಂದಲೂ ಮಹತ್ವದ್ದಲ್ಲವೆಂದು ಅವರೇ ಹೇಳಿದ್ದಾರೆ. ಈ ಗ್ರಂಥವು ೧೬೫೦ ರಲ್ಲಿ ಬರೆದದ್ದು ಇದ್ದು, ಅದರಲ್ಲಿ ಅಲ್ಲಲ್ಲಿ ಉರ್ದು ಶಬ್ದಗಳು ಬರುತ್ತವೆಂದು ಹೇಳಿ ಈ ಗ್ರಂಥದ ಉದ್ದೇಶವು ಅದನ್ನು ಬರೆದ ಕಾಲದಲ್ಲಿ ಜನತೆಯಲ್ಲಿ ಬಸವಣ್ಣನ ಬಗ್ಗೆ ಯಾವ ತಿಳಿವಳಿಕೆಯು ಇತ್ತೆಂಬುದು ಗೊತ್ತಾಗುತ್ತದೆಂದು ಶ್ರೀ. ಮಾಸ್ತಿಯವರು ಮುನ್ನುಡಿಯಲ್ಲಿ ಬರೆದಿದ್ದಾರೆ. ಆದರೆ ಈ ಗ್ರಂಥವನ್ನು ಬರೆದದ್ದು ೧೬ನೇ ಶತಮಾನದಲ್ಲಿ. ಆಗ ಒಬ್ಬಾನೊಬ್ಬ ಜೈನ ಮತಾನುಯಾಯಿಯು ಇದನ್ನು ಬರೆದಿದ್ದಾನೆ. ಆ ಕಾಲದಲ್ಲಿ ಜೈನ ಸಂಖ್ಯೆಯು ಕರ್ನಾಟಕದಲ್ಲಿ ಅತ್ಯಲ್ಪವಿದ್ದು ಜನತೆಯ ಮತವನ್ನು ತಿಳಿಯಲು ಇಂಥ ಗ್ರಂಥವು ಹೇಗೆ ಸಹಾಯಕವಾದುದೆಂಬುದು ತಿಳಿಯದ ಸಂಗತಿಯು! ಈ ಗ್ರಂಥವು ೧೯೫೪ ರಲ್ಲಿ ಅಂದರೆ ಹೋದ ವರ್ಷ ಪ್ರಸಿದ್ಧವಾಗಿದ್ದು ಈ ಸಮಯದಲ್ಲಿ ಬಸವೇಶ್ವರನ ವಿಷಯವಾಗಿ ಎಲ್ಲೆಲ್ಲಿಯೂ ಜನರಲ್ಲಿ ಸಹಾನುಭೂತಿಗಳು ಉಂಟಾಗುತ್ತಲಿವೆ. ಬಸವನು ಒಬ್ಬ ಮಹತ್ವದ ಸಮಾಜ ಸುಧಾರಕನೆಂತಲೂ ಕನ್ನಡ ವಾಙ್ಮಯದಲ್ಲಿ ಸಿವಾಮಪುರುಷನೆಂತಲೂ ಅನೇಕ ಸಭೆ ಸಮ್ಮೇಲನಗಳು ಸಾರಿ ಸಾರಿ ಹೇಳುತ್ತಲಿವೆ. ಈ ಓಘಕ್ಕೆ ತಡೆಹಾಕುವ ಉದ್ದೇಶದಿಂದಲೋ ಏನೋ ಎಂದೆನ್ನುವಂತೆ ಕುಹಕಿಗಳೂ, ಜಾತ್ಯಂಧರೂ ಈ ಗ್ರಂಥವನ್ನು ಈ ಕಾಲಕ್ಕೆ ಪ್ರಚುರಪಡಿಸುವಲ್ಲಿ ಮುಂದಾಗಿದ್ದಾರೆ. ಬಸವೇಶ್ವರನು ಎಂಥ ಉಚ್ಚ ನೈತಿಕ ವೃತ್ತಿಯವನು ಎಂಬುದು ಅವನ ಉಕ್ತಿಗಳು ದೃಢವಾಗಿ ಹೇಳುತ್ತವೆ. ಈ ಉಕ್ತಿಗಳನ್ನು ಗ್ರಾಮ ಗ್ರಾಮಗಳಲ್ಲಿ ಜನರು ಹಾಡಿ ಹಾಡಿ ಆನಂದ ಪಡುತ್ತಾ ಇದ್ದಾರೆ. ಹೀಗೆ ಒಂದು ಮಹಾ ಪ್ರವಾಹವು ದೇಶದಲ್ಲೆಲ್ಲ ಹರಿಯುತ್ತಿರುವಾಗ ಇದನ್ನು ವೀರಶೈವ ವಿರೋಧಿಗಳು ನೋಡಿ ಸೈರಿಸಲಾರದೆ ಸರಕಾರವನ್ನು ಮುಂದು ಮಾಡಿಕೊಂಡು ಈ ಆಟವನ್ನು ಹೂಡಿದಂತೆ ಕಂಡುಬರುತ್ತದೆ. ಇಂಥವಂಗೆ ಮದ್ರಾಸ ಸರಕಾರವು ಬೆಂಬಲವಾಗಿ ನಿಂತಿದೆ! ಮುನ್ನುಡಿ ಬರೆದ ಶ್ರೀಯುತ ಮಾಸ್ತಿ ವೆಂಕಟೇಶ ಅಯ್ಯಂಗಾರರ ಅಭಿಪ್ರಾಯಗಳನ್ನು ಸರಕಾರದ ಜವಾಬುದಾರೀ ಮೇಲಧಿಕಾರಿಗಳು ನೋಡಿ ಈ ಗ್ರಂಥವನ್ನು ಪ್ರಕಟಿಸಲು ಅವರು ಅನುಮತಿ ಕೊಟ್ಟಿದ್ದಾರೆ. ಹೀಗೆ ಮಾಡುವದು ಹಣದ ಅಪವ್ಯಯವೇ ಸರಿ. ಸರಕಾರವು ಇದನ್ನು

ಲಕ್ಷಿಸಿ ತಪ್ಪಿತರನ್ನು ಶಿಕ್ಷಿಸುವದು ಅದರ ಕರ್ತವ್ಯವಾಗಿದೆ ಇಲ್ಲದೆ ಹೋದರೆ ವೀರಶೈವ ಸಮಾಜವು ಸರಕಾರದ ಮೇಲೆ ಕ್ರಮವನ್ನು ತೆಗೆದುಕೊಳ್ಳುವ ಪ್ರಸಂಗವು ಬರುವದು. ಯಾಕಂದರೆ ಇಂಥ ಗ್ರಂಥಗಳ ಆಧಾರದ ಮೇಲೆ ಸರಕಾರೀ ವಾಚನ ಪುಸ್ತಕಗಳಲ್ಲಿ ವೀರಶೈವರ ಹೆಸರಿಗೆ ಕಲಂಕ ತರುವಂಥ ವಿಧಾನಗಳು ಯಾವಾಗಲೂ ಮಾಡಲ್ಪಡುತ್ತಲಿವೆ. ಆದ್ದರಿಂದ ವೀರಶೈವ ಸಮಾಜದವರು ಸರಕಾರದ ಮೇಲೆ ಮತ್ತು ಈ ಗ್ರಂಥದ ಪ್ರಕಟನೆಗೆ ಕಾರಣರಾದವರ ಮೇಲೆ ಯೋಗ್ಯ ಕ್ರಮ ಕೈಕೊಳ್ಳಬೇಕೆಂದು ನಮ್ಮ ಆಗ್ರಹದ ಸೂಚನೆ ಇದೆ

**ಲಿಂಗೈಕ್ಯರಾದ ಶ್ರೀ ಸಿದ್ಧರಾಮಪ್ಪ ಪಾವಟೆಯವರು:—** ಈ ಸಂದರ್ಭದಲ್ಲಿ ನಾವು ಲಿಂಗೈಕ್ಯರಾದ ಶ್ರೀ ಸಿದ್ಧರಾಮಪ್ಪ ಪಾವಟೆ, ಬಿ. ಎ. ಎಲ್. ಎಲ್. ಬಿ. ವಕೀಲ ಹುಬ್ಬಳ್ಳಿ ಇವರನ್ನು ನಾವು ಸ್ಮರಿಸದೆ ಇರಲಾರೆವು. ಅವರು ಶಿವಶರಣರ ಪ್ರೇಮಿಗಳಾಗಿ ಅವರ ಹೆಸರಿಗೆ ಕಲಂಕ ತರುವಂಥ ಕಾರ್ಯಗಳು ಯಾರಿಂದಾದರೂ ಜರಗಿದರೆ, ಅವರು ಕೂಡಲೆ ಅವರನ್ನು ನ್ಯಾಯಾಸನಕ್ಕೆ ಎಳೆಯದೆ ಬಿಡುತ್ತಿದ್ದಿಲ್ಲ. ಅವರಿದ್ದ ಕಾಲದಲ್ಲಿ ಪಂಚಾಚಾರ ಪೀಠದವರೆಲ್ಲ ಬಸವಾದಿ ಪ್ರಮಥರನ್ನು ನಿಂದಿಸುವದರಲ್ಲಿ ಅತ್ಯಂತ ತತ್ಪರರಾಗಿದ್ದರು. ಪ್ರಮಥರು ವೀರಶೈವ ಸಮಾಜಕ್ಕೆ ಹಾನಿಯನ್ನುಂಟುಮಾಡಿದರೆಂದು ಅವರು ಬಹಿರಂಗ ವ್ಯಾಖ್ಯಾನಗಳನ್ನು ಕೊಡುವರು. ಅವರ ಈ ವರ್ತನೆಯನ್ನು ಖಂಡಿಸುವವರು ಆಗ ಕೆಲವರು ಮಾತ್ರ ಇದ್ದರು. ಶಿವಶರಣರ ವಾಙ್ಮಯದ ಪ್ರಸಾರವು ಆಗ ಅತ್ಯಲ್ಪವಾಗಿತ್ತು. ಇಂಥ ಸಮಯದಲ್ಲಿ ಪಂಚಾಚಾರ್ಯ ಪೀಠದವರಲ್ಲೊಬ್ಬರು ಹುಬ್ಬಳ್ಳಿಯಲ್ಲಿ ಒಂದು ಮೆರವಣಿಗೆಯನ್ನು ಏರ್ಪಡಿಸಲು ಅವರಿಂದ ಸಮಾಜದಲ್ಲಿ ವಿತುಷ್ಟಿಯುಂಟಾಗಿ ದಂಗೆಗಳೇಳುವವೆಂಬ ಕಾರಣವನ್ನು ತೋರಿಸಿ ಶ್ರೀ ಪಾವಟೆಯವರು ಮೆರವಣಿಗೆಗೆ ತಡೆಯನ್ನುಂಟುಮಾಡಿದರು. ಮುಂದೆ ಶ್ರೀ ವಾಸುದೇವಾಚಾರ್ಯ ಕೆರೂರು ಇವರು ಪ್ರಕಟಿಸುತ್ತಿದ್ದ ವಾರಪತ್ರಿಕೆಯಲ್ಲಿ ಪ್ರಮಥರ ನಿಂದಾಯುಕ್ತ ಒಂದು ಲೇಖವು ಬರಲಾಗಿ ಅವರು ಈ ಪತ್ರಿಕೆಯ ಸಂಪಾದಕರು ಮತ್ತು ಮುದ್ರಕರು ಇವರ ಮೇಲೆ ಮಾನಹಾನಿಯ ಖಟ್ಲೆ ಹಾಕಿದರು. ಈ ಖಟ್ಲೆಯಲ್ಲಿ ಸಮಾಜದ ಮುಂದಾಳುಗಳಾದ ಕೈ. ವಾ. ಅರಟಾಳ ಸಾಹೇಬರು ಕೈ. ವಾ. ಶಾಂತವೀರಪ್ಪಣ್ಣ ಮೆಣಸಿನಕಾಯಿ

ಇವರೇ ಮೊದಲಾದ ಮಹನೀಯರ ಸಾಕ್ಷಿಗಳಾದವು. ಅದು ೨-೩ ತಿಂಗಳ ವರೆಗೆ ನಡೆಯಿತು. ಶ್ರೀ ಸಿದ್ಧರಾಮಪ್ಪನವರು ಈ ವ್ಯಾಜ್ಯದಲ್ಲಿ ಅವಿಶ್ರಾಂತವಾಗಿ ದುಡಿದರು. ಇದು ಶಿವಶರಣರ ವಿಷಯವಾಗಿ ಅವರಲ್ಲಿದ್ದ ಅತ್ಯುತ್ಕಟ ಪ್ರೇಮವನ್ನು ತೋರಿಸುತ್ತದೆ. ಆರಂಭದಲ್ಲಿ ಶ್ರೀ ಸಿದ್ಧರಾಮಪ್ಪನವರು ಅದ್ವೈತ ಮಾರ್ಗವನ್ನು ಅನುಸರಿಸಿ ಸಿದ್ಧಾರೂಢರ ಸಾನ್ನಿಧ್ಯದಲ್ಲಿ ಇರುತ್ತಿದ್ದರು. ಆದರೆ ಮುಂದೆ ಶಿವಶರಣರ ಮಾರ್ಗವು ಶಿವಾನುಭವ ಪತ್ರಿಕೆಯ ದ್ವಾರಾ ಪ್ರಕಟವಾಗಹತ್ತಲು ಅವರು ಶರಣ ಮಾರ್ಗದ ಕೇವಲ ಅಭಿಮಾನಿಗಳಾದರು. ಮುಂದೆ ಅವರು ಬಸವೇಶ್ವರ, ಚನ್ನಬಸವೇಶ್ವರ, ಸಿದ್ಧರಾಮ, ಅಲ್ಲಮಪ್ರಭು ಇವರ ತತ್ವಗಳನ್ನು ಪರಿಶೀಲಿಸಿ ಅವುಗಳಲ್ಲಿ ಅವರು ಘನತರವಾದ ಪಾಂಡಿತ್ಯವನ್ನು ಹೊಂದಿದರು. ಈಚೀಚೆಗೆ ಹೈದರಾಬಾದಿನಲ್ಲಿಯ ಶಾಲೆಗಳಲ್ಲಿಯ ಪಠ್ಯ ಪುಸ್ತಕದಲ್ಲಿ ಬಸವೇಶ್ವರನ ಬಗ್ಗೆ ಅತ್ಯಂತ ಹೀನತರವಾದ ಅಭಿಪ್ರಾಯಗಳು ಬಂದವು. ಆದಕಾರಣ ಸಾರ್ವಜನಿಕ ಕ್ಷೋಭೆಯು ಉಂಟಾಯಿತು. ಆದರೆ ಆರಂಭದಲ್ಲಿ ನಡೆದ ಈ ಗಲಭೆಯು ಮುಂದೆ ನಿಂತುಹೋಯಿತು. ಆ ಪಠ್ಯ ಪುಸ್ತಕದಲ್ಲಿಯ ವಿಧಾನಗಳನ್ನು ಹೊಡೆದು ಹಾಕುವ ಬಗ್ಗೆ ಯಾವ ಪ್ರಯತ್ನಗಳು ನಡೆದಂತೆ ತೋರಲಿಲ್ಲ- ಆದ್ದರಿಂದ ಶ್ರೀ ಸಿದ್ಧರಾಮಪ್ಪನವರ ಅನುಕರಣವನ್ನು ಮಾಡುವಂಥ ಶಿವಶರಣ ಪ್ರೇಮಿಗಳು ಸಮಾಜದಲ್ಲಿ ಈಗಲೂ ಬೇಕಾಗಿದೆ. ಆದರೆ ಈಗ ವೀರಶೈವ ಅಭಿಮಾನಿಗಳು ಹಲಕೆಲವು ಬ್ರಾಹ್ಮಣರು ವೀರಶೈವಪರ ಗ್ರಂಥಗಳನ್ನು ಬರೆದದ್ದಕ್ಕೋಸ್ಕರ ಅವರನ್ನು ಮುಂದೆ ಮಾಡಿ ಅವರಿಗೆ ಉಚ್ಚಸ್ಥಾನ ಕೊಡುವ ಪ್ರಯತ್ನಗಳನ್ನು ನಡಿಸಿರುತ್ತಾರೆ. ವೀರಶೈವರು ತಮ್ಮ ಸಮಾಜದಲ್ಲಿರುವ ವಿದ್ವಜ್ಜನರಿಗೆ ಸಹಾಯ ಮಾಡಲು ಎಷ್ಟು ಮಾತ್ರವೂ ಮುಂದುವರಿದಿಲ್ಲ. ಮಂತ್ರಿಗಳು ರಾಜಪ್ರಮುಖರು ಬ್ರಾಹ್ಮಣರಿದ್ದರೆ ತೀರಿತು ಅವರನ್ನು ಪುರಸ್ಕರಿಸುತ್ತ ಅವರಿಗೆ ಮನ್ನಣೆ ಕೊಡುವ ಪ್ರಯತ್ನಗಳು ಮಾತ್ರ ಸಮಾಜದಲ್ಲಿ ನಡೆದದ್ದು ಕಂಡುಬರುತ್ತವೆ.

**ಶಾಕಾಹಾರವು:—** ಶಾಕಾಹಾರದಿಂದ ಮನುಷ್ಯನು ಬಲಗುಂದುತ್ತಾನೆ, ಆದ್ದರಿಂದ ಅವನು ಮಾಂಸಾಹಾರಿಯಾಗುವದು ಅವಶ್ಯವೆಂದು ಬಹುಜನರ ತಿಳಿವಳಿಕೆ ಇದೆ. ಈಚೆಗೆ ಶಾಕಾಹಾರಿಗಳು ಹೆಚ್ಚೆಚ್ಚು ಮಾಂಸಾಹಾರಿಗಳಾಗುತ್ತ ನಡೆದಿದ್ದಾರೆ. ಆದರೆ ಕೆಲವು ದಿವಸಗಳ ಹಿಂದೆ ಒಂದು

ಜರ್ಮನರ ಒಂದು ತಂಡವು ೨೬೭೯೫ ಫೂಟು ಎತ್ತರವಿದ್ದ ಧವಲಗಿರಿಯನ್ನು ಆರೋಹಣ ಮಾಡಲು ಹೊರಟು ೨೬ ಸಾವಿರ ಫೂಟು ಏರಿ ಹೋಗಿ ಮುಂದೆ ಅನಾನುಕೂಲ ಹವೆಯ ಮೂಲಕ ಹಿಂದಿರುಗಬೇಕಾಯಿತು. ಈ ತಂಡದ ಮುಖ್ಯ ನಾಯಕನು ಹೇರ ವೇಯರ ಎಂಬವನು ಹೇಳುವದೇನಂದರೆ:— ನಾನು ಮಾಂಸಾಹಾರ ಬಿಟ್ಟು ಒಂದು ವರ್ಷವಾಯಿತು. ನನ್ನ ಸಂಗಾತಿಗಳು ಪರ್ವತಾರೋಹಣ ಮಾಡುವ ಕಾಲದಲ್ಲಿ ಮಾಂಸಾಹಾರಬಿಟ್ಟು ಶಾಕಾಹಾರಿಗಳಾದರು. ಅದರಿಂದ ಯಾರ ಬಲವೂ ಕುಂದಲಿಲ್ಲ. ಒಜ್ಜೆ ಹೊರುವ ಶೆರ್ಪಾಗಳೂ ಕೂಡ ಶಾಕಾಹಾರಿಗಳಾದರು. ಎಲ್ಲರೂ ಚಟುವಟಿಕೆಯುಳ್ಳವರಾಗಿದ್ದರು. ಹೊಟ್ಟೆಗೆ ಭಾರವೆನಿಸುತ್ತಿದ್ದಿಲ್ಲ. ಕಾಳುಗಳನ್ನು ಬೀಸಿ ಅದರ ಹಿಟ್ಟಿನಲ್ಲಿ ಸಕ್ಕರೆ, ಎಣ್ಣೆ, ಲೋಹದ ಮಿಶ್ರಣ ಇವುಗಳಿಂದ ರೊಟ್ಟೀ ಮಾಡಿ ಊಟ ಮಾಡುತ್ತಿದ್ದೆವು, ಎಂದು ಹೇಳಿದನು. ಮನುಷ್ಯನು ಸ್ವಾಭಾವಿಕವಾಗಿ ಶಾಕಾಹಾರಿಯು. ಅವನು ಮಂಗಗಳ ಜಾತಿಯಿಂದ ಉಗ್ಮಿಸಿದವನು. ಮಂಗವು ಯಾವಾಗಲೂ ಶಾಕಾಹಾರಿಯು. ಭಾರತದಲ್ಲಿ ಹಿಂದಿನಕಾಲದ ಋಷಿಗಳು ಗೆಡ್ಡೆ ಗೆಣಸುಗಳ ಮೇಲೆ ಜೀವಿಸುತ್ತ ಈಗಿನ ಶಾಸ್ತ್ರಜ್ಞರನ್ನು ಬೆರಗುಗೊಳಿಸುವಂಥ ಉಚ್ಚ ಧಾರ್ಮಿಕ ಗ್ರಂಥಗಳನ್ನು ಬರೆದಿದ್ದಾರೆ- ಡಿಕುನ್ಥೆ ಎಂಬ ಜರ್ಮನ ಡಾಕ್ಟರನು ಶಾಹಾಕಾರದಿಂದ ಬೇನೆಗಳು ತಗಲಲಾರವೆಂದು ಹೇಳುತ್ತಾನೆ. ಪ್ರೊ. ರಾಮಮೂರ್ತಿಯವರು ಶಾಕಾಹಾರಿಗಳಾಗಿದ್ದು ಶರೀರದಿಂದ ಬಹು ಬಲಿಷ್ಠರಾಗಿದ್ದರು. ಪುರಾತನಕಾಲದಿಂದ ಶಾಕಾಹಾರಿಗಳಾಗಿದ್ದ ಭಾರತೀಯರು ಈಚೆಗೆ ಈ ಪದ್ಧತಿಯನ್ನು ಬಿಡಹತ್ತಿರುವದು ಖೇದಕರವು.

**ಶ್ರೀ ನಾಗಭೂಷಣ ಘನಮಠ ಸ್ವಾಮಿಗಳವರ ಚರಿತ್ರೆ**:— ಈ ಚರಿತ್ರೆಯನ್ನು ಶ್ರೀ. ಮ. ಮ. ಮಿರ್ಜಿ ಮು. ಹುಬ್ಬಳ್ಳಿ ಇವರು ಬರೆದಿದ್ದಾರೆ ಇದರ ಅಚ್ಚಾದ ಪ್ರತಿಯನ್ನು ನಮ್ಮ ಕಡೆಗೆ ಅಭಿಪ್ರಾಯಕ್ಕಾಗಿ ಕಳಿಸಿದ್ದಾರೆ. ಲೇಖಕರು ಸಂಶೋಧನಾತ್ಮಕವಾಗಿ ಸ್ವಾಮಿಗಳವರ ಸಮಗ್ರ ಚರಿತ್ರೆಯನ್ನು ಬರೆದಿದ್ದಾರೆ. ಇದು ಅಭಿನಂದನೀಯವು. ನಾಗಭೂಷಣರು ತೆಲುಗು ಸೀಮೆಯಾದ ಅತ್ರಾಫಬಲ್ದಾ ಪಟ್ಲೂರು ತಾಲೂಕಿನಲ್ಲಿರುವ ದೊರ್ವಾಡ ಗ್ರಾಮದಲ್ಲಿ ೧೮೨೬ ರಲ್ಲಿ ಜನಿಸಿದರು. ಅವರ ಧಾರ್ಮಿಕ ಪದ್ಯಗಳು ಬಹು ಬೋಧಪ್ರದವಾಗಿವೆ. ಅವು ಬೇರೆ ಸ್ವತಂತ್ರವಾಗಿ ಮುದ್ರಣ

ಹೊಂದಿರುತ್ತವೆ. ಶ್ರೀಗಳವರು ಶಿವಶರಣರ ವಚನ ವಾಙ್ಮಯವನ್ನು ಚನ್ನಾಗಿ ಪರಿಶೀಲಿಸಿದವರಿದ್ದರು. ಅವರು ರಾಯಚೂರ, ವಿಜಾಪುರ ಜಿಲ್ಲೆಗಳಲ್ಲಿಯ ಗ್ರಾಮಗಳಲ್ಲಿ ಬಹಳ ದಿವಸ ವಾಸ ಮಾಡಿದರು. ಅವರು ಕವಿತಾ ಸಾಮರ್ಥ್ಯ ಉಳ್ಳವರು. ಅತ್ಯುತ್ತಮ ರೀತಿಯಿಂದ ಪುರಾಣ ಹೇಳುವರು. ಅತ್ಯಂತ ಸ್ಪಷ್ಟವಾದಿಗಳು. ಅವರು ದೈವೀ ಶಕ್ತಿಯುಳ್ಳವರೆಂದು ನಾಡಿನಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದರು. ಅವರು ಹುನಗುಂದ ಗ್ರಾಮದಲ್ಲಿಯ ಶ್ರೀಮಂತ ದೊಡ್ಡಪ್ಪ ನಾಗರಾಳ ಇವರ ತಂದೆಯವರ ಕಾಲದಲ್ಲಿ ಅವರ ಮನೆಯಲ್ಲಿ ಬಹಳ ದಿವಸ ವಾಸ ಮಾಡಿದರು. ಇದೇ ಕಾಲದಲ್ಲಿ ಶ್ರೀ. ಸ್ವಾಮಿಗಳವರು ಒಕ್ಕಲುತನದ ಮೇಲೆ ಒಂದು ಮಹತ್ವದ ಗ್ರಂಥವನ್ನು ರಚಿಸಿದರು. ಅದು ಅನುಭವ ಪೂರ್ಣವುಳ್ಳದಾಗಿದೆ. ಒಕ್ಕಲಿಗರಿಗೆ ಅದು ಬಹು ಉಪಯುಕ್ತವಾದದ್ದು. ಈ ಗ್ರಂಥವು ಶಿವಾನುಭವ ಗ್ರಂಥಮಾಲೆಯಲ್ಲಿ ನಮ್ಮಿಂದ ಪ್ರಕಟವಾಗಿದೆ. ಶ್ರೀ ಸ್ವಾಮಿಗಳವರು ಮೈಸೂರು ಪ್ರಾಂತದಲ್ಲಿ ಸಂಚರಿಸಿದರೆಂದು ನಮ್ಮ ತಿಳುವಳಿಕೆಯಾಗಿತ್ತು. ಆಗ ಅವರ ಕೆಲವು ಪದ್ಯಗಳು ಒಂದು ಹಳೇ ಕೋರೀ ಕಾಗದದ ಮೇಲೆ ಬರೆದವುಗಳು ನಮ್ಮ ಕಣ್ಣಿಗೆ ಬಿದ್ದವು. ಅವುಗಳಲ್ಲಿರುವ ಸ್ಪಷ್ಟ ಮತ್ತು ನಿರ್ಭಿಡೆ ವಿಚಾರಗಳು ಶ್ರೀ ನಾಗಭೂಷಣರಿರಬಹುದೆಂದು ನಮಗೆ ತೋರಿತು. ಆದ್ದರಿಂದ ಆ ಗ್ರಂಥದ ಪೀಠಿಕೆಯಲ್ಲಿ ಹಾಗೆಯೇ ಬರೆದಿದ್ದೇವೆ. ಆದರೆ ಮುಂದೆ ಮುಳುಗುಂದ ಮಹಾಂತ ಸ್ವಾಮಿಗಳವರ ಪದ್ಯಗಳು ಮತ್ತು ಚರಿತ್ರೆ ಇವು ಪೂರ್ಣವಾಗಿ ಪ್ರಕಟವಾದವು. ಆಗ ಮೈಸೂರು ಮಹಾರಾಜರಿಗೆ ಸಂಬಂಧಿಸಿದ ಈ ಪದ್ಯಗಳು ಮುಳುಗುಂದ ಮಹಾಂತಸ್ವಾಮಿಗಳವರವೆಂದು ನಿಶ್ಚಿತವಾಗಿ ತಿಳಿದು ಬಂದಿತು. ಆ ಪ್ರಕಾರ ನಾವು ಗ್ರಂಥ ಪೀಠಿಕೆಯಲ್ಲಿ ಬರೆದಿದ್ದೇವೆ. ಅದನ್ನು ಆ ಗ್ರಂಥದ ಮುಂದಿನ ಆವೃತ್ತಿಯಲ್ಲಿ ಬದಲಾವಣೆ ಮಾಡುವೆವು. ಸದ್ಯಕ್ಕಿನ ಚರಿತ್ರೆಯು ಮಹತ್ವದ್ದಿದ್ದು ಅದನ್ನು ಕನ್ನಡಿಗರು ಅವಶ್ಯವಾಗಿ ಸಂಗ್ರಹಿಸಬೇಕು. ಈ ಗ್ರಂಥದ ೧೦೦ ಪ್ರತಿಗಳನ್ನು ಲೇಖಕರು ಕಾಣಿಕೆಯಾಗಿ ನಮ್ಮ ಕಡೆಗೆ ಕಳಿಸಿದ್ದಾರೆ. ಅವುಗಳನ್ನು ನಾವು ಅತ್ಯಾದರದಿಂದ ಸ್ವೀಕರಿಸುತ್ತೇವೆ.

ಗ್ರಂಥದ ಬೆಲೆ ೮ ಆಣೆ.

**ಗೋವೆಯ ಸತ್ಯಾಗ್ರಹ**:— ಗೋವೆಯು ಪೂರ್ವಕಾಲದಿಂದಲೂ ಕರ್ನಾಟಕ ಸಂಸ್ಕೃತಿಯುಳ್ಳ ಪ್ರದೇಶವೆಂದು ನಾವು ಶಿವಾನುಭವ ಪತ್ರಿಕೆಯ ಹಿಂದಿನ ಸಂಚಿಕೆಯಲ್ಲಿ ಕಾಣಿಸಿದ್ದೇವೆ. ಇಲ್ಲಿ ಆಳಿದ ಕದಂಬ ರಾಜರು ೧೧ನೇ ೧೨ನೇ ಶತಮಾನಗಳಲ್ಲಿ ಸೊನ್ನಲಿಗೆಯ ಕಪಿಲಸಿದ್ಧ ಮಲ್ಲಿಕಾರ್ಜುನ ದೇವಾಲಯಕ್ಕೆ ದಾನಕೊಟ್ಟ ಶಿಲಾಶಾಸನಗಳನ್ನು ನಾವು ಉಲ್ಲೇಖಿಸಿದ್ದೇವೆ. ಮುಂದೆ ಗೋವೆಯು ಪೋರ್ತುಗೀಜರ ವಶಕ್ಕೆ ಬಂದಿತು. ಆಗ ಅವರು ಬಲಾತ್ಕಾರದಿಂದ ಇಲ್ಲಿ ಕ್ರಿಶ್ಚಿಯನ್ ಧರ್ಮವನ್ನು ಬೆಳಸಿದರು. ಗೋವೆಯು ನಿಜವಾಗಿ ಭಾರತ ದೇಶದ ಒಂದು ಭಾಗವಾಗಿದೆ. ಇದಕ್ಕೂ ಪರಕೀಯರಿಗೂ ಏನೂ ಸಂಬಂಧವಿಲ್ಲ. ಆದರೆ ದೈವವಶಾತ್ ಪೋರ್ತುಗೀಜರ ಆಳಿಕೆಗೆ ಅದು ಒಳಪಟ್ಟಿತು. ಈ ಭಾಗವನ್ನು ಭಾರತದಲ್ಲಿ ಸೇರ್ಪಡೆ ಮಾಡಿಕೊಳ್ಳಬೇಕೆಂಬ ವಿಚಾರವು ಭಾರತ ಸರಕಾರಕ್ಕೆ ಈಗ ಉಂಟಾಗಿದ್ದರಿಂದ ಇಲ್ಲಿ ಕಠಿಣತರವಾದ ಸತ್ಯಾಗ್ರಹ ಕಾರ್ಯಗಳು ನಡಿದಿರುತ್ತವೆ. ಆದರೆ ಪೋರ್ತುಗೀಜರು ಅತ್ಯುಗ್ರ ರೀತಿಯಿಂದ ಅವುಗಳನ್ನು ಪ್ರತಿಭಟಿಸುತ್ತಲಿದ್ದಾರೆ. ನಿಜವಾಗಿ ಸತ್ಯಾಗ್ರಹವು ತಮ್ಮ ಸರಕಾರದ ಪ್ರಜೆಗಳಿಗೆ ಸಂಬಂಧ ಪಡುತ್ತಿದೆಯೇ ಹೊರತು ಪರಕೀಯ ಸರಕಾರಗಳಿಗೆ ಸಂಬಂಧ ಪಡುವದಿಲ್ಲ. ರಾಜ್ಯ ಸುಧಾರಣಾ ಕಾರ್ಯಗಳಲ್ಲಿ ತಮ್ಮ ಸರಕಾರವು ಸಹಕರಿಸದೆ ಹೋದಾಗ ಪ್ರಜೆಗಳು ಸತ್ಯಾಗ್ರಹವನ್ನು ಕೈಕೊಳ್ಳಬಹುದು. ಆದರೆ ಅಶಾಂತ ರೀತಿಯಿಂದ ಅದು ನಡೆಯಬೇಕು. ಅದು ಅಶಾಂತ ರೀತಿಯಿಂದ ನಡೆಯುವ ಚಿನ್ಹಗಳು ತೋರಿದ ಕೂಡಲೆ ಮಹಾತ್ಮಾ ಗಾಂಧಿಯವರು ಅದನ್ನು ನಿಲ್ಲಿಸಿಬಿಡುವರು. ಚೌರಿ ಚೌರಾದಲ್ಲಿ ಅವರು ಹಾಗೆ ಆಚರಿಸಿದರು. ಆದರೆ ಪರದೇಶದವರೊಡನೆ ಭಾರತೀಯರು ಹೀಗೆ ಆಚರಿಸುವದು ಶಕ್ಯವಿಲ್ಲ. ಒಂದುವೇಳೆ ಹಾಗೆ ಆಚರಿಸಿದರೆ ಆ ದೇಶದ ಸರಕಾರವು ಉಗ್ರ ಕ್ರಮವು ಕೈಕೊಳ್ಳುವದು ಸ್ವಾಭಾವಿಕವು. ಅದನ್ನು ಪ್ರತಿಕಾರ ಮಾಡಲಿಕ್ಕೆ ಬೇರೆ ಸರಕಾರಕ್ಕೆ ಬರಲಾರದು. ಆಗ ಅದು ಯುದ್ಧವನ್ನು ಸಾರಬೇಕೇ ಹೊರತು ಬೇರೊಂದು ಉಪಾಯವಿಲ್ಲ. ಪಂಡಿತ ಜವಾಹಿರಲಾಲರು ದೇಶ ದೇಶಗಳಲ್ಲಿ ಮನಸ್ತಾಪವು ಉಂಟಾದರೆ ಅದನ್ನು ಸಂಧಾನದಿಂದ ಹೋಗಲಾಡಿಸಬೇಕೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಅದ್ದರಿಂದ ಅವರು ಸಂಧಾನವನ್ನು ಕೈಕೊಂಡಿರುವರು. ಅವರು ಜಾಗತಿಕ ರಾಜಕಾರಣದಲ್ಲಿ ಈಗ ತಮ್ಮ ವರ್ಚಸ್ಸನ್ನು ಬೆಳಸಿಕೊಂಡಿದ್ದಾರೆ. ಇದರ

ಹೊಂದಿರುತ್ತವೆ. ಶ್ರೀಗಳವರು ಶಿವಶರಣರ ವಚನ ವಾಙ್ಮಯವನ್ನು ಚನ್ನಾಗಿ ಪರಿಶೀಲಿಸಿದವರಿದ್ದರು. ಅವರು ರಾಯಚೂರ, ವಿಜಾಪುರ ಜಿಲ್ಲೆಗಳಲ್ಲಿಯ ಗ್ರಾಮಗಳಲ್ಲಿ ಬಹಳ ದಿವಸ ವಾಸ ಮಾಡಿದರು. ಅವರು ಕವಿತಾ ಸಾಮರ್ಥ್ಯ ಉಳ್ಳವರು. ಅತ್ಯುತ್ತಮ ರೀತಿಯಿಂದ ಪುರಾಣ ಹೇಳುವರು. ಅತ್ಯಂತ ಸ್ಪಷ್ಟವಾದಿಗಳು. ಅವರು ದೈವೀ ಶಕ್ತಿಯುಳ್ಳವರೆಂದು ನಾಡಿನಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದರು. ಅವರು ಹುನಗುಂದ ಗ್ರಾಮದಲ್ಲಿಯ ಶ್ರೀಮಂತ ದೊಡ್ಡಪ್ಪ ನಾಗರಾಳ ಇವರ ತಂದೆಯವರ ಕಾಲದಲ್ಲಿ ಅವರ ಮನೆಯಲ್ಲಿ ಬಹಳ ದಿವಸ ವಾಸ ಮಾಡಿದರು. ಇದೇ ಕಾಲದಲ್ಲಿ ಶ್ರೀ. ಸ್ವಾಮಿಗಳವರು ಒಕ್ಕಲುತನದ ಮೇಲೆ ಒಂದು ಮಹತ್ವದ ಗ್ರಂಥವನ್ನು ರಚಿಸಿದರು. ಅದು ಅನುಭವ ಪೂರ್ಣವುಳ್ಳದಾಗಿದೆ. ಒಕ್ಕಲಿಗರಿಗೆ ಅದು ಬಹು ಉಪಯುಕ್ತವಾದದ್ದು. ಈ ಗ್ರಂಥವು ಶಿವಾನುಭವ ಗ್ರಂಥಮಾಲೆಯಲ್ಲಿ ನಮ್ಮಿಂದ ಪ್ರಕಟವಾಗಿದೆ. ಶ್ರೀ ಸ್ವಾಮಿಗಳವರು ಮೈಸೂರು ಪ್ರಾಂತದಲ್ಲಿ ಸಂಚರಿಸಿದರೆಂದು ನಮ್ಮ ತಿಳುವಳಿಕೆಯಾಗಿತ್ತು. ಆಗ ಅವರ ಕೆಲವು ಪದ್ಯಗಳು ಒಂದು ಹಳೇ ಕೋರೀ ಕಾಗದದ ಮೇಲೆ ಬರೆದವುಗಳು ನಮ್ಮ ಕಣ್ಣಿಗೆ ಬಿದ್ದವು. ಅವುಗಳಲ್ಲಿರುವ ಸ್ಪಷ್ಟ ಮತ್ತು ನಿರ್ಭಿಡೆ ವಿಚಾರಗಳು ಶ್ರೀ ನಾಗಭೂಷಣರಿರಬಹುದೆಂದು ನಮಗೆ ತೋರಿತು. ಆದ್ದರಿಂದ ಆ ಗ್ರಂಥದ ಪೀಠಿಕೆಯಲ್ಲಿ ಹಾಗೆಯೇ ಬರೆದಿದ್ದೇವೆ. ಆದರೆ ಮುಂದೆ ಮುಳುಗುಂದ ಮಹಾಂತ ಸ್ವಾಮಿಗಳವರ ಪದ್ಯಗಳು ಮತ್ತು ಚರಿತ್ರೆ ಇವು ಪೂರ್ಣವಾಗಿ ಪ್ರಕಟವಾದವು. ಆಗ ಮೈಸೂರು ಮಹಾರಾಜರಿಗೆ ಸಂಬಂಧಿಸಿದ ಈ ಪದ್ಯಗಳು ಮುಳುಗುಂದ ಮಹಾಂತಸ್ವಾಮಿಗಳವರವೆಂದು ನಿಶ್ಚಿತವಾಗಿ ತಿಳಿದು ಬಂದಿತು. ಆ ಪ್ರಕಾರ ನಾವು ಗ್ರಂಥ ಪೀಠಿಕೆಯಲ್ಲಿ ಬರೆದಿದ್ದೇವೆ. ಅದನ್ನು ಆ ಗ್ರಂಥದ ಮುಂದಿನ ಆವೃತ್ತಿಯಲ್ಲಿ ಬದಲಾವಣೆ ಮಾಡುವೆವು. ಸದ್ಯಕ್ಕೆ ಈ ಚರಿತ್ರೆಯು ಮಹತ್ವದ್ದಿದ್ದು ಅದನ್ನು ಕನ್ನಡಿಗರು ಅವಶ್ಯವಾಗಿ ಸಂಗ್ರಹಿಸಬೇಕು. ಈ ಗ್ರಂಥದ ೧೦೦ ಪ್ರತಿಗಳನ್ನು ಲೇಖಕರು ಕಾಣಿಕೆಯಾಗಿ ನಮ್ಮ ಕಡೆಗೆ ಕಳಿಸಿದ್ದಾರೆ. ಅವುಗಳನ್ನು ನಾವು ಆತ್ಮಾದರದಿಂದ ಸ್ವೀಕರಿಸುತ್ತೇವೆ.

ಗ್ರಂಥದ ಬೆಲೆ ೮ ಆಣೆ.

**ಗೋವೆಯ ಸತ್ಯಾಗ್ರಹ**— ಗೋವೆಯು ಪೂರ್ವಕಾಲದಿಂದಲೂ ಕರ್ನಾಟಕ ಸಂಸ್ಕೃತಿಯುಳ್ಳ ಪ್ರದೇಶವೆಂದು ನಾವು ಶಿವಾನುಭವ ಪತ್ರಿಕೆಯ ಹಿಂದಿನ ಸಂಚಿಕೆಯಲ್ಲಿ ಕಾಣಿಸಿದ್ದೇವೆ. ಇಲ್ಲಿ ಆಳಿದ ಕದಂಬ ರಾಜರು ೧೧ನೇ ೧೨ನೇ ಶತಮಾನಗಳಲ್ಲಿ ಸೊನ್ನಲಿಗೆಯ ಕಪಿಲಸಿದ್ಧ ಮಲ್ಲಿಕಾರ್ಜುನ ದೇವಾಲಯಕ್ಕೆ ದಾನಕೊಟ್ಟ ಶಿಲಾಶಾಸನಗಳನ್ನು ನಾವು ಉಲ್ಲೇಖಿಸಿದ್ದೇವೆ. ಮುಂದೆ ಗೋವೆಯು ಪೋರ್ತುಗೀಜರ ವಶಕ್ಕೆ ಬಂದಿತು. ಆಗ ಅವರು ಬಲಾತ್ಕಾರದಿಂದ ಇಲ್ಲಿ ಕ್ರಿಶ್ಚಿಯನ್ ಧರ್ಮವನ್ನು ಬೆಳೆಸಿದರು. ಗೋವೆಯು ನಿಜವಾಗಿ ಭಾರತ ದೇಶದ ಒಂದು ಭಾಗವಾಗಿದೆ. ಇದಕ್ಕೂ ಪರಕೀಯರಿಗೂ ಏನೂ ಸಂಬಂಧವಿಲ್ಲ. ಆದರೆ ದೈವವಶಾತ್ ಪೋರ್ತುಗೀಜರ ಆಳಿಕೆಗೆ ಅದು ಒಳಪಟ್ಟಿತು. ಈ ಭಾಗವನ್ನು ಭಾರತದಲ್ಲಿ ಸೇರ್ಪಡೆ ಮಾಡಿಕೊಳ್ಳಬೇಕೆಂಬ ವಿಚಾರವು ಭಾರತ ಸರಕಾರಕ್ಕೆ ಈಗ ಉಂಟಾಗಿದ್ದರಿಂದ ಇಲ್ಲಿ ಕಠಿಣತರವಾದ ಸತ್ಯಾಗ್ರಹ ಕಾರ್ಯಗಳು ನಡಿದಿರುತ್ತವೆ. ಆದರೆ ಪೋರ್ತುಗೀಜರು ಅತ್ಯುಗ್ರ ರೀತಿಯಿಂದ ಅವುಗಳನ್ನು ಪ್ರತಿಭಟಿಸುತ್ತಲಿದ್ದಾರೆ. ನಿಜವಾಗಿ ಸತ್ಯಾಗ್ರಹವು ತಮ್ಮ ಸರಕಾರದ ಪ್ರಜೆಗಳಿಗೆ ಸಂಬಂಧ ಪಡುತ್ತಿದೆಯೇ ಹೊರ್ತು ಪರಕೀಯ ಸರಕಾರಗಳಿಗೆ ಸಂಬಂಧ ಪಡುವದಿಲ್ಲ. ರಾಜ್ಯ ಸುಧಾರಣಾ ಕಾರ್ಯಗಳಲ್ಲಿ ತಮ್ಮ ಸರಕಾರವು ಸಹಕರಿಸದೆ ಹೋದಾಗ ಪ್ರಜೆಗಳು ಸತ್ಯಾಗ್ರಹವನ್ನು ಕೈಕೊಳ್ಳಬಹುದು. ಆದರೆ ಅಶಾಂತ ರೀತಿಯಿಂದ ಅದು ನಡೆಯಬೇಕು. ಅದು ಅಶಾಂತ ರೀತಿಯಿಂದ ನಡೆಯುವ ಚಿನ್ಹಗಳು ತೋರಿದ ಕೂಡಲೆ ಮಹಾತ್ಮಾ ಗಾಂಧಿಯವರು ಅದನ್ನು ನಿಲ್ಲಿಸಿಬಿಡುವರು. ಚೌರಿ ಚೌರಾದಲ್ಲಿ ಅವರು ಹಾಗೆ ಆಚರಿಸಿದರು. ಆದರೆ ಪರದೇಶದವರೊಡನೆ ಭಾರತೀಯರು ಹೀಗೆ ಆಚರಿಸುವದು ಶಕ್ಯವಿಲ್ಲ. ಒಂದುವೇಳೆ ಹಾಗೆ ಆಚರಿಸಿದರೆ ಆ ದೇಶದ ಸರಕಾರವು ಉಗ್ರ ಕ್ರಮನ್ನು ಕೈಕೊಳ್ಳುವದು ಸ್ವಾಭಾವಿಕವು. ಅದನ್ನು ಪ್ರತಿಕಾರ ಮಾಡಲಿಕ್ಕೆ ಭೇರೆ ಸರಕಾರಕ್ಕೆ ಬರಲಾರದು. ಆಗ ಅದು ಯುದ್ಧವನ್ನು ಸಾರಬೇಕೇ ಹೊರ್ತು ಬೇರೊಂದು ಉಪಾಯವಿಲ್ಲ. ಪಂಡಿತ ಜವಾಹಿರಲಾಲರು ದೇಶ ದೇಶಗಳಲ್ಲಿ ಮನಸ್ತಾಪವು ಉಂಟಾದರೆ ಅದನ್ನು ಸಂಧಾನದಿಂದ ಹೋಗಲಾಡಿಸಬೇಕೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಆದ್ದರಿಂದ ಅವರು ಸಂಧಾನವನ್ನು ಕೈಕೊಂಡಿರುವರು. ಅವರು ಜಾಗತಿಕ ರಾಜಕಾರಣದಲ್ಲಿ ಈಗ ತಮ್ಮ ವರ್ಚಸ್ಸನ್ನು ಬೆಳಸಿಕೊಂಡಿದ್ದಾರೆ. ಇದರ

ಉಪಯೋಗವನ್ನು ಅವರು ಈ ಕಾಲದಲ್ಲಿ ಮಾಡಬಹುದು. ಇದರಿಂದ ಗೋವೆಯು ಕೈವಶವಾಗದಿದ್ದರೆ ಯುದ್ಧವನ್ನು ಸಾರುವ ಹೊರತು ಬೇರೊಂದು ಉಪಾಯವಿಲ್ಲ. ಆದರೆ ಅಂತರ ರಾಷ್ಟ್ರೀಯ ಸಂಬಂಧಗಳ ಮೂಲಕ ಪೋರ್ತುಗೀಜರು ತಮ್ಮ ಈ ಪ್ರದೇಶಗಳನ್ನು ಬಿಡುವ ಲಕ್ಷಣ ಕಂಡುಬರುವದಿಲ್ಲ.

ಫ್ರೆಂಚರು ಭಾರತದಲ್ಲಿಯ ತಮ್ಮ ವಸಾಹತುಗಳನ್ನು ಬಿಟ್ಟುಕೊಟ್ಟರು. ಯಾಕಂದರೆ ಇವು ಆಯುಕಟ್ಟಿನ ಪ್ರದೇಶಗಳಾಗಿದ್ದಿಲ್ಲ. ಆದರೆ ಅವರು ತಮ್ಮ ಇಂಡೋಚೀನ ದೇಶವನ್ನು ಬಿಡದೆ ಯುದ್ಧವನ್ನು ಸಾರಿದರು. ಫೋರ್ಮೋಸಾ, ಕೋರಿಯಾ ಪ್ರದೇಶಗಳನ್ನು ಅಮೇರಿಕನ್ನರು ಬಿಡದೆ ಅವುಗಳ ಸಲುವಾಗಿ ಈಗಲೂ ಹೋರಾಟ ನಡಿಸಿರುತ್ತಾರೆ. ಈ ಹೋರಾಟಗಳಿಂದ ಜಾಗತಿಕ ಯುದ್ಧ ಭಯವು ತೋರಿದರೂ ಅವರು ಈ ಪ್ರದೇಶಗಳನ್ನು ಬಿಟ್ಟಿರುವದಿಲ್ಲ. ಯಾಕಂದರೆ ಈ ಪ್ರದೇಶಗಳು ಜಪಾನ, ಇಂಡಿಯಾ, ಆಸ್ಟ್ರೇಲಿಯಾ ದೇಶಗಳಿಗೆ ಹೋಗುವ ಮಾರ್ಗದಲ್ಲಿದೆ. ಒಂದು ವೇಳೆ ಇವು ರಶಿಯಾದ ಕಡೆಗೆ ಹೋದರೆ ಈ ದೇಶಗಳು ತಮ್ಮ ಕೈಬಿಡುವವೆಂದು ಅಮೇರಿಕನ್ನರಿಗೆ ಅನಿಸಿದೆ. ಹಾಗೇ ಗೋವಾ, ದಮನ, ದೀವು ಈ ಪೋರ್ತುಗೀಜ ಪ್ರದೇಶಗಳು ಆಯುಕಟ್ಟಿನ ಸ್ಥಾನದಲ್ಲಿ ಇವೆ. ಭಾರತ ಬಂದರಗಳಾದ ಮುಂಬಯಿ, ಕಾಂಡ್ಲಾ ಇವುಗಳಿಗೆ ಹೋಗುವ ಹಡಗುಗಳ ಮೇಲೆ ಈ ಸ್ಥಾನಗಳಿಂದ ಸುಲಭವಾಗಿ ದಾಳಿಯನ್ನು ಇಡಬಹುದು. ಗೋವೆಯಿಂದ ದಕ್ಷಿಣ ಹಿಂದುಸ್ಥಾನದ ಮೇಲೆ, ದಮನದಿಂದ ಮಧ್ಯ ಹಿಂದುಸ್ಥಾನದ ಮೇಲೆ, ದೀವದಿಂದ ಉತ್ತರ ಹಿಂದುಸ್ಥಾನದ ಮೇಲೆ ಪರ ರಾಷ್ಟ್ರಗಳು ದಾಳಿಯನ್ನು ಸಾಗಿಸಬಹುದು. ಇವು ಇಂಥ ಆಯುಕಟ್ಟಿನ ಸ್ಥಾನಗಳಲ್ಲಿ ಇರುತ್ತವೆ. ಬ್ರಿಟನ್ನ ಮತ್ತು ಪೋರ್ತುಗಾಲ ಇವುಗಳಲ್ಲಿ ಬಹುದಿವಸಗಳ ಹಿಂದೆಯೇ ಒಪ್ಪಂದಗಳಾಗಿವೆ. ಇಷ್ಟರಲ್ಲಿಯೇ ಬ್ರಿಟನ್ನವು ಪೋರ್ತುಗಾಲದ ಮೇಲೆ ತೀವ್ರವಾದ ಆಕ್ರಮಣವನ್ನು ಕೈಕೊಳ್ಳದಿರಲು ಹೋದ ವರ್ಷ ಭಾರತಕ್ಕೆ ಅದು ಎಚ್ಚರು ಕೊಟ್ಟಿದೆ. ಆದ್ದರಿಂದ ಪಂಡಿತ ಜವಾಹರಲಾಲರು ತಮ್ಮ ಜಾಗತಿಕ ವರ್ಚಸ್ಸನ್ನು ಉಪಯೋಗಿಸಿ ಈ ಪ್ರದೇಶಗಳನ್ನು ಭಾರತಕ್ಕೆ ಸೇರಿಸಿಕೊಳ್ಳಬೇಕಾಗುವದು.

---

# ಶ್ರೀ ಷಣ್ಮುಖಸ್ವಾಮಿಗಳು ಸಾಧಿಸಿದ ಶಿವಯೋಗ.

[ಲೇ:- ಶ್ರೀಯುತ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ. ತಾ|| ಇಂಡಿ]

---

## ಶಿವಯೋಗವೆಂದರೇನು?

ಶಿವಯೋಗ ಅಂದರೆ ಶಿವನನ್ನು ಕೂಡುವದು. ಶಿವನನ್ನು ಯಾರು ಕೂಡುವದು ? ಶಿವನನ್ನು ಆದಿಶಕ್ತಿ ಪಾರ್ವತಿಯು ಕೂಡುವಳು. ಇದೇ ಲಿಂಗಾಂಗ ಸಮರಸ. ಇವರಿಬ್ಬರೂ ಕೂಡಿದರೆ ಜ್ಞಾನ, ಬಲ, ಸಿದ್ಧಿ, ಆನಂದ, ಮುಕ್ತಿ ಮೊದಲಾದ ಪಾರಮಾರ್ಥಗಳು ಲಭಿಸುವವು. ಜೀವನದ ಮುಖ್ಯ ಉದ್ದೇಶವೇ ಸತ್+ಚಿತ್‌ಗಳನ್ನು ಕೂಡಿಸುವದು ಆಗಿದೆ. ಆಗ ಆನಂದ ತಾನೇ ಬರುವದು. ಅಂದರೆ ಸಚ್ಚಿದಾನಂದನಾಗುವನು. ಈ ಸತ್ ಆದಿಶಕ್ತಿ ಪಾರ್ವತಿ. ಮೊದಲು ಜಗದುತ್ಪತ್ತಿಯ ಪೂರ್ವದಲ್ಲಿ ಪರಶಿವ, ಸತ್‌ದ ಕೂಡ ಒಂದಾಗಿಯೇ ಇದ್ದಳು. ಇದನ್ನು ಕೆಳಗಿನ ವಚನಗಳಲ್ಲಿ ನೋಡಿರಿ. "ಆದಿ ಅನಾದಿ ಇಲ್ಲದಂದು। ನಾದ ಬಿಂದು ಕಳೆಗಳಿಲ್ಲದಂದು। ವೇದ ಶಾಸ್ತ್ರ ಆಗಮ ತಂತ್ರಗಳಿಲ್ಲದಂದು। ಚೌಷಷ್ಟಿ ವಿದ್ಯಾಕಲೆಗಳಿಲ್ಲದಂದು। ಭೇದಾಭೇದಂಗಳಿಲ್ಲದಂದು। ತೋರುವ ತೋರಿಕೆಗಳೇನು ಇಲ್ಲದಂದು। ಅಖಂಡೇಶ್ವರಾ ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು" "ಪೃಥ್ವಿ ಆಕಾಶವಿಲ್ಲದಂದು। ತತ್ವ ಮಸ್ಯಾಸಿ ವಾಕ್ಯಂಗಳಿಲ್ಲದಂದು। ನಿತ್ಯಾನಿತ್ಯಂಗಳೇನು ಇಲ್ಲದಂದು। ಕಾಲ ಕಲ್ಪಿತಂಗಳಿಲ್ಲದಂದು। ಲೀಲೆ ಇಪ್ಪತ್ತೈದು ನಟಿಸದಂದು। ಕಾಲ ಕಾಮ ಮಾಯೆ ದಕ್ಷಾದಿಗಳಿಲ್ಲದಂದು / ಶಶಿ ರವಿಗಳ ಬೆಳಗು ಪಸರಿಸದಂದು। ಅಜ ಹರಿ ಸುರಾಸುರ ಮನು ಮುನಿಗಳಿಲ್ಲದಂದು। ಜಗದ ಲೀಲಾ ವೈಭವಂಗಳೇನು ಇಲ್ಲದಂದು। ಅಖಂಡೇಶ್ವರಾ ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು॥" ಈ ವಚನಗಳಲ್ಲಿ ಹೇಳಿದಂತೆ ಸಚ್ಚಿದಾನಂದ ನಿತ್ಯ ಪರಿಪೂರ್ಣ ಪರಶಿವನು ಇದೇನೂ ಇಲ್ಲದ ಮೊದಲು ತನ್ನನ್ನು ತಾನೆ ಅರಿಯದೆ ಅನಂತ ಕಾಲ ಬಿದ್ದುಬಿಟ್ಟಿದ್ದನೆಂದು ಬಹು ಸೊಗಸಾಗಿ ಶ್ರೀ ಷಣ್ಮುಖ ಸ್ವಾಮಿಗಳು ಸೃಷ್ಟಿಯ ಪೂರ್ವದಲ್ಲಿ ಪರಮಾತ್ಮನು ಹೇಗೆ ಇದ್ದನೆಂದು ಬಣ್ಣಿಸಿದ್ದು ನೋಡಿದರೆ ಇವರು ಶಿವಯೋಗದಲ್ಲಿ ಬಹು

ಹುಂದುವರಿದಿದ್ದರೆಂದು ಅನಿಸುವದು. ಯಾವ ವಚನಕಾರರೂ " ನಿಮ್ಮ ನೀವರಿಯದೆ ಅನಂತ ಕಾಲವಿರ್ದಿರೆಂದು " ಎಂದು ಹೇಳಿದಂತೆ ತೋರು ವದಿಲ್ಲ.

## ಚಿತ್ ಶಕ್ತಿ

ವೀರಶೈವ ಮತವು ಶಕ್ತಿವಿಶಿಷ್ಟಾದ್ವೈತವೆಂಬುದನ್ನು ಶ್ರೀ ಷಣ್ಮುಖ ಸ್ವಾಮಿಗಳು ಚನ್ನಾಗಿ ಕಂಡುಹಿಡಿದಿದ್ದಾರೆಂದು ಅವರ ವಚನಗಳ ಮೇಲಿಂದ ಕಂಡುಬರುವದು. ಆದಿಶಕ್ತಿ ಪಾರ್ವತಿಯ ತತ್ವವನ್ನು ಅನೇಕರು ಒಪ್ಪುವ ದಿಲ್ಲ. ಇವರು ಜಗದುತ್ಪತ್ತಿಯನ್ನು ಬಹು ಸರಸಾಗಿ ಬಣ್ಣಿಸಿದ್ದಾರೆ. "ನೀವು ನಿಮ್ಮ ಸ್ವಲೀಲೆಯಿಂದ। ಜಗದ ವೈಭವಂಗಳನ್ನು ನಟಿಸಬೇಕೆಂದು ನಿಮ್ಮಲ್ಲಿ ನೆನಹುದೋರಲು। ಆ ನೆನವು ನಿರ್ಧರಿಸಿ ಚಿತ್ತೆನಿಸಿತು। ಆ ಚಿತ್ತಿನಿಂದ ಚಿನ್ನಾದ, ಚಿದ್ಬಿಂದು, ಚಿಕ್ಕಳೆಗಳೊದಗಿದವು। ಆ ಚಿನ್ನಾದ ಚಿದ್ಬಿಂದು ಚಿತ್ಕಳೆ ಆ ಮೂಲ ಚಿತ್ತು ಸಹವಾಗಿ। ಘಟ್ಟಗೊಂಡು ಅಖಂಡ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತು। ಆ ಮಹಾಲಿಂಗವೇ ಪಂಚಮುಖವನ್ನೈದಿ ಸದಾಶಿವನೆಂದೆನಿಸಿತು। ಆ ಸದಾಶಿವನಿಂದ ಬ್ರಹ್ಮ ವಿಷ್ಣು, ರುದ್ರರು (ಸತ್ವ, ರಜ, ತಮ) ಉದಯಿಸಿದರು। ಈ ತ್ರಿಮೂರ್ತಿಗಳಿಂದ ಸ್ವರ್ಗ, ಮೃತ್ಯು, ಪಾತಾಳಂಗಳೆಂಬ ಲೋಕಂಗಳು ಜನಿಸಿದವು। ಆ ತ್ರೈಲೋಕಂಗಳ ಮಧ್ಯದಲ್ಲಿ ಸಚರಾಚರ ಹೆಂಣು, ಗಂಡು, ನಾಮ, ರೂಪು, ಕ್ರಿಯಾದಿ ಸಕಲ ವಿಸ್ತಾರವಾಯಿತು. ಇಂತಿವೆಲ್ಲ ನಿಮ್ಮ ನೆನಹು ಮಾತ್ರದಿಂದ ಆದವಯ್ಯ ಅಖಂಡೇಶ್ವರ." ಸತ್ ನೆನಿಸಿದ ಪರಶಿವನಿಂದ ಚಿತ್ ಪಾರ್ವತಿ ಹೇಗೆ ಹೊರಗೆ ಬಂದು ಕಾರ್ಯಪ್ರವೃತ್ತಳಾದಳೆಂದು ಬಹು ಸ್ಪಷ್ಟವಾಗಿ ಶ್ರೀ ಷಣ್ಮುಖಸ್ವಾಮಿಗಳು ಕಂಡುಹಿಡಿದಿದ್ದಾರೆ. ಇದು ಅವರು ಸಾಧಿಸಿದ ಯೋಗವೆಂದು ಸಹಜ ಹೊಳೆಯುವದು.

## ಪರಶಿವನು ಸಹಸ್ರಾರದಲ್ಲಿರುವನು.

ಈ ಸತ್ ಪರಶಿವನು ನಮ್ಮ ಸಹಸ್ರಾರದಲ್ಲಿ ನೆಲಸಿರುವನು ಚಿತ್ ಆದಿಶಕ್ತಿ ಪಾರ್ವತಿಯು ಜೀವಾತ್ಮನು ವಿಷಯಾದಿಗಳನ್ನು ಭೋಗಿಸಿದ ಫಲದಿಂದ ಸಹಸ್ರಾರದಿಂದ ಜಾರಿ ಬಂದು ಮೂಲಾಧಾರದ ಮೂಲದಲ್ಲಿ ತ್ರಿಕೋಣಾಕಾರದಲ್ಲಿ ಕುಂಡಲಿ ಸರ್ಪನೆನಿಸಿ ಅಧೋಮುಖ ಮಾಡಿ ಬಿದ್ದಿರುವಳು. ಈ ಕುಂಡಲಿ ಸರ್ಪದ ಮುಖವು ಊರ್ಧ್ವ ಮಾಡಿತೆಂದರೆ

ವಿಷಯದಿಂದ ಬಿಡುಗಡೆ ಹೊಂದಿ ಏರಿ ಆರು ಚಕ್ರಗಳನ್ನು ದಾಟಿ ತನ್ನ ಪತಿಯಾದ ಪರಶಿವನನ್ನು ಸಹಸ್ರಾರದಲ್ಲಿ ಕೂಡುವಳು. ಇದೇ ಶಿವಯೋಗ ವೆನಿಸುವದು. ಈ ಶಿವಯೋಗ ಸಾಧಿಸಲಿಕ್ಕೆ ಪಂಚಾಚಾರ, ಅಷ್ಟಾವರಣ, ಸಪ್ತಾಚಾರ, ಷಟ್‌ಸ್ಥಲಗಳೆಂದು ವೀರಶೈವರಲ್ಲಿ ಸಾಧನಗಳಿರುವವು. ಈ ಸಾಧನಗಳನ್ನು ಶ್ರೀ ಷಣ್ಮುಖದೇವರು ಎಷ್ಟು ಮಾಡಿದ್ದರೆಂದು ಅರಿಯುವದೇ ಈ ಲೇಖನದ ಉದ್ದೇಶವಿದೆ. ಇವರ ಸಾಧನದ ಕಥೆಯು ನಮಗೆ ಸಿಗುವ ದಿಲ್ಲ. ಹಿಂದಿನ ಯಾರ ಚರಿತೆಯಲ್ಲಿ ಅವರ ಸಾಧನವನ್ನು ಬಣ್ಣಿಸಿಲ್ಲ. ಚರಿತೆಗಳು ಈ ದೃಷ್ಟಿಯಿಂದ ಅಪೂರ್ಣವಾದವುಗಳೇ ಸರಿ. ಅವರ ಸಾಧ ನಗಳನ್ನು ಸರಿಯಾಗಿ ಬರೆದಿದ್ದರೆ; ಹೊಸ ಸಾಧಕರಿಗೆ ಬಹು ಉಪಯೋಗ ಬೀಳುತ್ತಿತ್ತು. ಕವಿಗಳು ಇನ್ನು ಅವರ ಸಾಧನೆಗಳನ್ನು ಚನ್ನಾಗಿ ಬಣ್ಣಿಸಿ ದರೆ ಮಹದುಪಕಾರವಾಗುವದು.

## ಭರತಖಂಡವು ಯೋಗ ಭೂಮಿಯು.

ಭರತಖಂಡವು ಯೋಗ ಭೂಮಿ, ಪುಣ್ಯ ಭೂಮಿ, ತ್ಯಾಗ ಭೂಮಿ, ದೇವಭೂಮಿಯೆಂದು ಮೊದಲೇ ಪರಶಿವನು ಆರಿಸಿಕೊಂಡಿದ್ದಾನೆ. ಹೀಗಂತ್ಲೆ ನಮ್ಮ ದೇಶದಲ್ಲಿ ಹೇರಳವಾಗಿ ಯೋಗಿಗಳು, ತ್ಯಾಗಿಗಳು, ಸತ್ಪುರುಷರು, ಮಹಾತ್ಮರು, ಅವತಾರಿಗಳು, ಋಷಿಗಳು, ಮುನಿಗಳು, ಶರಣರು, ಸಂತರು, ಜ್ಞಾನಿಗಳು, ಸಿದ್ಧರು ಜನಿಸಿ ದೇಶದಲ್ಲಿ ಭಕ್ತಿಜ್ಞಾನ ಕರ್ಮಗಳನ್ನು ಬೋಧಿ ಸುತ್ತಲೇ ಬಂದಿರುವರು. ಆದರಲ್ಲಿ ನಮ್ಮ ಕನ್ನಡ ನಾಡಂತೂ ಶರಣರ, ದಾಸರ ಸಿದ್ಧಪುರುಷರ ತವರಮನೆ ಎನಿಸಿರುವದು. ಈಗ ಇಂಥವರು ನಮ್ಮ ನಾಡಿನಲ್ಲಿ ಬಹು ವಿರಳವಾಗಿರುವರು. ಪ್ರತಿಯೊಂದು ಊರಿಗೆ ಹಿಂದೆ ಆಗಿ ಹೋದ ಶರಣರ ಮಠ, ಗುಡಿ, ಗದ್ದುಗೆಗಳು ಇರುವವು. ಇನ್ನೂ ಗೊತ್ತಿಲ್ಲದ ಗುಡಿ, ಗದ್ದುಗೆ, ಮಠಗಳು ಅನೇಕವಾಗಿರುವವು. ಇದೆಲ್ಲ ಮೊದಲಿನ ನಮ್ಮ ನಾಡಿನ ಹಿರಿಮೆಯನ್ನೇ ಬೋಧಿಸುವದು. ಸಿದ್ಧರಾಮ, ಶರಣಬಸಪ್ಪ, ಕಾಂತೇಶ, ಕಲ್ಲಿನಾಥ, ಷಣ್ಮುಖದೇವರು, ಸಿದ್ಧಲಿಂಗದೇವರು, ಗೊಲ್ಲಾಳ, ಕೊಡಗೂಸು, ಬಸವೇಶ್ವರ, ಗುಡ್ಡಾಪೂ ರದ ದಾನಮ್ಮ ಮೊದಲಾದ ಅಸಂಖ್ಯ ದೇವರುಗಳೆಲ್ಲ ನಮ್ಮ ಪೂರ್ವದ ವಂಶಜರೇ ಸರಿ. ಅವರೆಲ್ಲ ಶಿವಯೋಗವನ್ನು ಚನ್ನಾಗಿ ಸಾಧಿಸಿದ ಶಿವ

ಸರಣರೀ ಇದ್ದರು. ಈಗ ನಮ್ಮ ನಾಡು ಬಹು ಕೀಳಾಗಿ, ಹೇಡಿಯಾಗಿ ಬಾಳುತ್ತಿರುವದು.

## ಭಕ್ತಿಯುಕ್ತ ಉಪಾಸನೆ ಹೋಗಿದೆ.

ಈಗಿನ ವಿಜ್ಞಾನಯುಗದಲ್ಲಿ ನಮ್ಮ ಜನರು ಭ್ರಮಿಷ್ಟರಾಗಿದ್ದಾರೆ. ಪಾಶ್ಚಿಮಾತ್ಯರ ಅನುಕರಣ ಮಾಡುತ್ತಿದ್ದಾರೆ. ಭಕ್ತಿಯ ಉಪಾಸನೆಯನ್ನು ಬಿಟ್ಟಿದ್ದೇವೆ. ಬರೇ ಶಿಕ್ತಿಯನ್ನು ಭೋಗಿಸುವದರಲ್ಲಿ ನಿರತರಾಗಿದ್ದೇವೆ. ಭೋಗದ ಉಪಾಸಕರಾದರೆ ನಮಗೆ ಶಕ್ತಿ ಲಭಿಸದು. ಶಕ್ತಿ ಲಭಿಸಲಾರದೆ ಶಿವಯೋಗ ಸಾಧಿಸದು. ಪರಿಶ್ರಮವಿಲ್ಲದೆ ಫಲ, ಸಾಧನೆ ಇಲ್ಲದೆ ಸಿದ್ಧಿಗಳನ್ನು ಈಗ ನಾವು ಬಯಸುತ್ತಿರುವೆವು. ಇದು ಎಂದೂ ಯಾವ ಕಾಲಕ್ಕೂ ಶಕ್ಯವಿಲ್ಲ. ಶಕ್ತಿಯ ಸಾಧನೆಗಳನ್ನು ಬಿಟ್ಟಿದ್ದರಿಂದ ಶಕ್ತಿಯೂ ಕೂಡ ನಮ್ಮನ್ನು ಬಿಟ್ಟಿದ್ದಾಳೆ. ವಿಷಯಸುಖದ ಪ್ರೇಮದಲ್ಲಿ ಮುಳಗಿದ್ದೇವೆ. ಇದು ನಿಜವಾದ ಪ್ರೇಮವಲ್ಲ. ನಿಜವಾದ ಪ್ರೇಮದಲ್ಲಿ ಶಕ್ತಿ, ಜ್ಞಾನ, ಆನಂದಗಳುಂಟು. ಈಗಿನ ಕಾಲದಲ್ಲಿ ವಿಷಯವಾಸನೆ, ಬಯಕೆ ತಿಂಡಿಗಳನ್ನು ಬೆಳಿಸುವಂಥ ಕಾವ್ಯ, ಕಾದಂಬರಿ, ನಾಟಕ, ಸಿನೇಮಾ, ಲೇಖನ, ಕಥೆ ಮೊದಲಾದವುಗಳೇ ಹೆಚ್ಚಾಗಿವೆ. ಈ ವಿಷಯ ಸುಖಕ್ಕೆ ಬೇಕಾಗುವ ಚಯನಿಯ ವಸ್ತು ಒಡವೆಗಳೇ ಹೆಚ್ಚಾಗಿವೆ. ಇದಕ್ಕೆಲ್ಲ ಹೊಸ ನಾಗರೀಕತೆಯೆಂದು ಪರದೇಶದಿಂದ ತಂದ ಖೊಟ್ಟಿ ನಾಣ್ಯಕ್ಕೆ ಒಳ್ಳೇ ಹೆಸರನ್ನು ಕೊಟ್ಟು ಬಳಸುತ್ತಿರುವರು. ನಮ್ಮ ಪೂರ್ವಜರಾದ ಶರಣರಾಗಲಿ ಸಂತರಾಗಲಿ, ಋಷಿ, ಮುನಿಗಳಾಗಲಿ ಇದ್ದ ಆಗಿನ ಕಾಲದಲ್ಲಿ ಈಗ ನಡೆದ ತರತರದ ಕೋಲಾಹಲ, ಗದ್ದಲ, ಗಲಾಟೆ, ಓಡಾಟ, ಗಡಿಬಿಡಿ, ಮೋಸ, ಕೊಲೆ, ಸುಳ್ಳು, ಪಾದರ, ದಳ್ಳಾಳಿವೃತ್ತಿ ಮೊದಲಾದವುಗಳು ಇದ್ದಿರಲಿಲ್ಲ. ಇವು ಅವರಿಗೆ ಬೇಕಾಗಿದ್ದಿಲ್ಲ. ಆಗ ಇದ್ದುದು ಬರೇ ಶಕ್ತಿಯ ಪ್ರದರ್ಶನ. ಜ್ಞಾನದ ಪ್ರದರ್ಶನ. ಭಕ್ತಿಯ ಪ್ರದರ್ಶನ. ಧರ್ಮ ಪ್ರದರ್ಶನ. ತ್ಯಾಗ, ಯೋಗ, ಭುಕ್ತಿ, ಮುಕ್ತಿಯ ಪ್ರದರ್ಶನಗಳು. ಈಗ ಮಾತ್ರ ಕೆಲಸಕ್ಕೆ ಬಾರದ ಅಸಂಖ್ಯ ಪ್ರದರ್ಶನಗಳೇ ನಡೆದಿವೆ. ಬ್ಯಾಟ್ರಿ, ಕಪ್ಪು ಬಸಿ, ಫಾವುಂಟನ್‌ಪೆನ್, ಕರವಸ್ತ್ರ, ಬೂಟ, ಚಪ್ಪಲ್, ಬಣ್ಣ, ಪಾವುಡರ, ಸ್ನೋ, ಕಟಿಂಗ, ಕೋಮಿಂಗ, ಈಟಿಂಗ. ಡ್ರಿಂಕಿಂಗ, ಸಿಂಗಿಂಗ, ಡಾನ್ಸಿಂಗ, ಸ್ಮೋಕಿಂಗ, ಕಿಸಿಂಗ, ಡ್ರೆಸಿಂಗ ಮೊದಲಾದ ಚಯನಿಯ ಐಷ ಆರಾಮಿಯ

ಒಡವೆಗಳ ಪ್ರದರ್ಶನಗಳನ್ನೇ ಮಾಡುತ್ತಿರುವರು. ಇದೆಲ್ಲಕ್ಕೆ ಶಕ್ತಿದೇವಿಯ ಉಪಾಸನೆ ಬಿಟ್ಟು, ಶಿವಯೋಗದ ಆರಾಧನೆ ಬಿಟ್ಟು, ಭಕ್ತಿಯ ಸಾಧನೆ ಬಿಟ್ಟು ವ್ಯವಹರಿಸುವದೇ ಕಾರಣವಾಗಿದೆ.

ನಮ್ಮ ಹಿಂದಿನ ಸಂಸ್ಕೃತಿಯು ಅನೇಕ ಶತಮಾನಗಳ ವರೆಗೆ ಬಾಳಿ, ಬದುಕಿ, ಬೆಳೆದು, ಉಳಿಯುವಂಥಾದ್ದು. ಈಗಿನ ಈ ಹೊಸ ಸಂಸ್ಕೃತಿಯು ನಾಲ್ಕು ದಿನ ಸಹ ಬಾಳಲಾರದಷ್ಟು ನಿರುಪಯೋಗಿಯಾಗಿದೆ. ದೇಶಕ್ಕೆ ಸುಖಮಾಡುವದಕ್ಕಾಗಿ ಅನೇಕ ಶಾಸ್ತ್ರಿಯ ಸಂಶೋಧಗಳನ್ನು ಮಾಡಿದರು. ಈಗಿನ ಯಾಂತ್ರಿಕ ಯುಗದಲ್ಲಿ ಅವುಗಳನ್ನು ಬಣ್ಣಿಸುವದು ಅಸಾಧ್ಯ. ಅಂದರೆ ಹೇಳಲಾರದಷ್ಟು ಯಂತ್ರಗಳನ್ನು ಬಳಿಕೆಯಲ್ಲಿ ತಂದರು. ಇದರಿಂದ ಎಲ್ಲ ಕೆಲಸಗಳನ್ನು ಯಂತ್ರಗಳೇ ಮಾಡಹತ್ತಿ ಯಂತ್ರದ ಒಡೆಯರೇ ಶಿರಿವಂತರಾದರು. ಅಸಂಖ್ಯ ಲಕ್ಷ ಜನರು ಬಡತನದಲ್ಲಿ ಬೆಂದು ಬೆಂಡಾಗಿ ಪಾರತಂತ್ರ್ಯದ ದಳ್ಳುರಿಯಲ್ಲಿ ನೋಯಬೇಕಾಯಿತು. ಇದರಿಂದ ಬಹು ಸಂಖ್ಯಾಕ ಜನರು ದುಃಖ ಕಷ್ಟ ಬಡತನದಲ್ಲೇ ಹೊರಳಾಡಬೇಕಾಯಿತು. ಇದರಿಂದ ಬಹುಸಂಖ್ಯಾಕ ಜನರು ದುಃಖ ಕಷ್ಟ ಬಡತನದಲ್ಲೆ ಹೊರಳಾಡಬೇಕಾಬಿತು. ಆದರೂ ಯಂತ್ರಗಳ ಶೋಧವನ್ನು ಬಿಟ್ಟೇ ಇಲ್ಲ. ಇದೆಲ್ಲ ಬುದ್ಧಿಯ ಕುಶಲತೆಯೋ ಸರಿ. ಆಟಮ್ ಬಾಂಬ ಹೈಡ್ರೋಜನ ಬೊಂಬಗಳನ್ನು ಶೋಧಿಸಿ ಕ್ಷಣಮಾತ್ರದಲ್ಲಿ ಒಂದೊಂದು ದೇಶವನ್ನು ನಿರ್ನಾಮಮಾಡುವದರಲ್ಲಿ ತೊಡಗಿದರು. ಇದೆಲ್ಲ ಮಾಡುವದು ಅನ್ಯರನ್ನು ತಮ್ಮ ಗುಲಾಮರನ್ನಾಗಿ ಮಾಡಿಕೊಂಡು, ಮೆರೆಯಬೇಕೆಂದು. ಆದರೆ ತಾವೇ ಹೀಗೆ ಮಾಡುವದರಿಂದ ಅನ್ಯರ ಗುಲಾಮನಾಗುವರೆಂದು ಮರೆಯುವರು. ಯಂತ್ರದಿಂದ ಶಾಸ್ತ್ರೀಯ ಸಂಶೋಧಗಳಿಂದ ನಮ್ಮ ದೇಶಕ್ಕೆ ಎಳ್ಳಷ್ಟೂ ಸುಖ ಸಿಕ್ಕಿಲ್ಲ ಸಿಗುವದಿಲ್ಲ. ಸಿಗಲಾರದೆಂದು ನಮ್ಮ ಶಿವಯೋಗಿಗಳು ಕಂಡುಹಿಡಿದು ಈ ಮಾರ್ಗವನ್ನು ಬಹುವಾಗಿ ಅಲ್ಲಗಳೆದು ಪಾರಮಾರ್ಥದ ಕಡೆಗೆ ಹೋಗಿದ್ದಾರೆ.

## ಭಾರತದ ಮರ್ಮಸ್ಥಾನವು ಆಧ್ಯಾತ್ಮವು.

ಒಂದೊಂದು ದೇಶಕ್ಕೆ ಒಂದೊಂದು ಮರ್ಮಸ್ಥಾನಗಳನ್ನು ನಾಶ ಮಾಡಿದರೆ ದೇಶವೇ ಸತ್ಯಾನಾಶವಾಗುವದು. ರಾಕ್ಷಸರ ಮರಣವು — "ಕಟ್ಟಡವಿಯಲ್ಲಿ ಒಂದು ಗುಹೆಯಲ್ಲಿ ಅದರಲ್ಲಿಯ ಹೊಂಡದಲ್ಲಿ ಅದರಲ್ಲಿಯ

ಗವಿಯೊಳಗೆ ಅದರಲ್ಲಿಯು ನೆಲಮನೆಯೊಳಗಿನ ಕೀಲಿಯು ಮಾಡಿನಲ್ಲಿಯು ಪಿಂಜರದೊಳಗಿನ ಗಿಳಿಯನ್ನು ಕೊಂದರೆ ಈ ಭೂಮಿಯು ಮೇಲಿನ ರಾಕ್ಷಸವು ಸಾಯುವದು. ಇಲ್ಲವಾದರೆ ಇಲ್ಲ." ಈ ಎಲ್ಲ ಸ್ಥಾನಗಳಲ್ಲಿ ಕೆಲವು ರಾಕ್ಷಸರು ಕಾವಲು ಇರುವರು. "ಅವರನ್ನೆಲ್ಲ ಕೊಂದು ಆ ಸ್ಥಳಗಳನ್ನು ಜಯಿಸಿ ಕಡೆಗೆ ಗಿಳಿಯನ್ನು ಕೊಂದಾಗ ಈ ರಾಕ್ಷಸನ ವಧೆ" ಎಂದು ಪುರಾಣದಲ್ಲಿಯ ಕಥೆ ಇರುವವು. ಅದರಂತೆ ಹಿಂದುಸ್ಥಾನದ ಮರ್ಮಸ್ಥಾನವೇ ಆಧ್ಯಾತ್ಮ. ಬೆನ್ನೆಲಬು ಇಂಪಾದ ಗಾಯನಗಳೇ. ಪಾರಮಾರ್ಥ ಅಥವಾ ಶಿವಯೋಗ ಹೊರತು ಬೇರೆ ಇಲ್ಲ. ಇದನ್ನು ಬಿಟ್ಟು ಪರದೇಶದ ಮರ್ಮಸ್ಥಾನ ಬೆನ್ನೆಲಬು ಇಂಪಾದ ಗಾಯನವಾದ ರಾಜಕಾರಣ ಶಾಸ್ತ್ರೀಯ ಸಂಶೋಧನ, ಹೊಸ ನಾಗರಿಕತೆ, ಐಷಆರಾಮ, ಚ ನಿ, ಶಕ್ತಿಯ ಭೋಗ, ವಿಷಯ ಸುಖ, ಇಂದ್ರಿಯ ಸುಖಗಳಲ್ಲೇ ನಾವು ಅವರಂತೆ ಅನುಕರಣ ಮಾಡಿದ್ದಾದರೆ ನಮ್ಮ ದೇಶ. ನಮ್ಮ ಸಂಸ್ಕೃತಿ, ನಮ್ಮ ಶಿವಯೋಗ ಮೊದಲಾದವುಗಳು ಹೇಳಹೆಸರಿಲ್ಲದೆ ಹಾಳಾಗಿ ಹೋಗುವದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಅದಕ್ಕೆ ನಾವು ಈಗಿನಂತೆ ಅವರ ಬೆನ್ನ ಹತ್ತದೆ ನಮ್ಮ ಶರಣರ, ಸಿದ್ಧರ, ಸಂತರ ಋಷಿಗಳ ಅವತಾರಕರ ಮಾರ್ಗಾವಲಂಬಿಗಳಾಗಿ ಭಕ್ತಿ ಜ್ಞಾನ ತಮ್ಮಗಳಲ್ಲಿ ತತ್ಪರರಾದಲ್ಲಿ ಪುನಃ ನಾವು ಹಿರಿಯರಂತೆ ಬಲಿಷ್ಠರೂ ಯೋಗಿಗಳೂ ಆಗುವದರಲ್ಲಿ ಸಂದೇಹವಿಲ್ಲ. ಈ ನಾಲ್ಕು ದಿನದ ಹಾಳುಬಾಳನಲ್ಲಿ ಸುಖವಿಲ್ಲ.

## ಶಿವಯೋಗದ ಸ್ವರೂಪ.

ಇದನ್ನು ತಿಳಿಸುವದಕ್ಕಾಗಿ ನಡೆದು ನುಡಿದು ಬಾಳಿ ಉಳಿದುಹೋದ ಅನೇಕ ಶರಣರ ಚರಿತೆಗಳುಂಟು. ಅವರು ನಮ್ಮಂತೆ ಐಷಆರಾಮದಲ್ಲಿ ಇದ್ದರೆ ಬರುತ್ತಿದ್ದಿಲ್ಲವೇನು? ಅವರೇಕೆ ಇಷ್ಟು ತ್ಯಾಗಮಾಡಿ, ಯೋಗ ಮಾಡಿ, ಶಿವಯೋಗಿಗಳಾದರೂ ಅವರು ದೇಹ ಬಿಟ್ಟರೂ ಅವರು ಇನ್ನೂ ಜೀವಂತರಾಗಿ ಸೂಕ್ಷ್ಮ ರೀತಿಯಿಂದ ನಮ್ಮ ಕಲ್ಯಾಣ ಮಾಡುತ್ತಲೇ ಇರುವರು. ಶ್ರೀ ಷಣ್ಮುಖ ಸ್ವಾಮಿಗಳ ಗದ್ದುಗೆಯು ಜೇವುರಗಿಯಲ್ಲಿ ಇನ್ನೂ ಅದೆ. ಅವರು ಬರೆದ ಅಖಂಡೇಶ್ವರ ವಚನವು ಇನ್ನೂ ನಮಗೆ ಸ್ಫೂರ್ತಿ ಕೊಡುತ್ತಿರುವದು. ಅವರು ಭಕ್ತರ ಕಲ್ಮಷಗಳನ್ನು ಇನ್ನೂ ತೊಳೆಯುತ್ತಿರುವದು ಎಲ್ಲರಿಗೂ ಅನುಭವದ ಮಾತಾಗಿದೆ. ಇದೆಲ್ಲ ಅವರು ಮಾಡಿದ

ತ್ಯಾಗ ಸಾಧಿಸಿದ ಶಿವಯೋಗದ ಮಹಿಮೆಯಲ್ಲವೇನು? ಈ ವಿಜ್ಞಾನ ಯುಗಕ್ಕೆ ಮಣಿಯದವರೇ ಶಿವಯೋಗಿಗಳಾಗಬಲ್ಲರು.

"ಕಾಲಿಲ್ಲದೆ ನಡೆಯಬಲ್ಲಿಯಾದರೆ ಶಿವಯೋಗಿಯೆಂಬೆನು. ಕೈ ಇಲ್ಲದೆ ಮುಟ್ಟ ಬಲ್ಲಿಯಾದರೆ ಶಿವಯೋಗಿ ಎಂಬೆನು ! ಕಣ್ಣಿಲ್ಲದೆ ನೋಡಬಲ್ಲರೆ ಶಿವಯೋಗಿ ಎಂಬೆನು ! ಕಿವಿ ಇಲ್ಲದೆ ಕೇಳಬಲ್ಲಿಯಾದರೆ ಶಿವಯೋಗಿ ಎಂಬೆನು। ಇಂತೀ ಭೇದವರಿಯದೆ ವೇಷ ಧರಿಸಿ ತಿರುಗುವರೆಲ್ಲ ಭವ ರೋಗಿಗಳೆಂಬೆನಯ್ಯ ಅಖಂಡೇಶ್ವರಾ. ತನುವಿನ ಗುಣಗಳ ತಂದೊಟ್ಟಿ ಮನದ ಮಾಯಾವಿಕಾರದ ಬಾಯ ಟೊಣೆದು। ಕಂಗಳ ಕತ್ತಲೆಯ ಕೆಡಿಸಿ ಎಡಬಲಂಗಳ ತಡಹದ ನಡುಮಧ್ಯ ಮಾರ್ಗವ ಹಿಡಿದು ಸುಷುಮ್ನಗಿರಿಯ ನಡರಿ। ಕಡೆ ಮೊದಲಿಲ್ಲದ ಬೆಳಗಿನೊಳಡಗಿ। ಬೆಳಗುತಿರ್ದೆನು ನಾನು ಪರಶಿವಯೋಗಿಯಾದೆನಯ್ಯ ಅಖಂಡೇಶ್ವರ.

ಈಗ ನಡೆಯಲಿಕ್ಕೆ ಮೋಟಾರ, ರೇಲು, ವಿಮಾನಗಳನ್ನು, ಸುದ್ದಿ ಕೇಳಲಿಕ್ಕೆ ರೇಡಿಯೋ, ದೂರಿನ ದೃಶ್ಯಗಳನ್ನು ನೋಡಲಿಕ್ಕೆ ರೇಡಿಯೋ ಫೋಟೋ ಕ್ಯಾಮರಾಗಳನ್ನು ಉಪಯೋಗಿಸುವೆವು. ಶಿವಯೋಗಿಯಾದರೆ ಈ ಯಂತ್ರಗಳಿಲ್ಲದೆ ಬೇಕಾದಲ್ಲಿ ಐಕ್ಯನಾಗಿ ಹೋಗಬಲ್ಲ. ಬೇಕಾದಲ್ಲಿಯ ಸುದ್ದಿ ಗಾಯನ ಕೇಳಬಲ್ಲ, ಬೇಕಾದಲ್ಲಿಯ ದೃಶ್ಯಗಳನ್ನು ಕುಳಿತಲ್ಲೇ ನೋಡಬಲ್ಲ. ಬೇಕಾದಲ್ಲಿಯ ವಾಸನೆಯನ್ನು ಮೂಸಬಲ್ಲ. ಬೇಕಾದನ್ನ ತಾನಿದ್ದಲ್ಲಿಗೆ ತರಿಸಬಲ್ಲ ಎಂದು ಶಿವಯೋಗಿಯ ಮಹಿಮೆಯನ್ನು ಹಾಡಿದ್ದಾನೆ. ಇವರ ಮೇಲಿಂದ ಶ್ರೀ ಷಣ್ಮುಖಸ್ವಾಮಿಗಳು ಎಂಥ ಹಿರಿದಾದ ಶಿವಯೋಗವನ್ನು ಸಾಧಿಸಿದ್ದರೆಂದು ಸಹಜ ಗೊತ್ತಾಗುವದು. ಎರಡನೇ ವಚನದಲ್ಲಿ ಮೇಲಿನದು ಸಾಧಿಸಬೇಕಾದರೆ ಏನುಮಾಡಬೇಕು, ಏನು ಕಳೆಯಬೇಕು ಎಂದು ಬಣ್ಣಿಸಲಾಗಿದೆ. ತನ್ನ ಕುಂಡಲಿ ಶಕ್ತಿಯನ್ನು ಪರಶಿವನಿಂದ ಆಗಲಿದ್ದನ್ನು ಪುನಃ ಅವನನ್ನು ಕೂಡಿಸಿದ್ದು ಹೇಳಲಾಗಿದೆ. ಮೇಲೆ ಹೇಳಿದಂತೆ ಅದೇ ಶಿವಯೋಗವೆಂದು ಇವರ ಅಭಿಪ್ರಾಯವೂ ಕೂಡ ಇದೆ. ಷಟಚಕ್ರದ ಬಗ್ಗೆ ಅದರ ಉತ್ಪತ್ತಿ ಬೆಳವಣಿಗೆ ಮೊದಲಾದವುಗಳ ಬಗ್ಗೆ ಒಂದು ವಚನವು ಪ್ರಾಣಲಿಂಗಿಯ ಸ್ಥಲದಲ್ಲಿ ಇದೆ. ಅದು ಬಹು ದೊಡ್ಡದಿದೆ. ಅದರ ಕಡೆಯ ಭಾಗವನ್ನಷ್ಟೇ ಇಲ್ಲಿ ಕೊಡುವೆನು.

ಗವಿಯೊಳಗೆ ಅದರಲ್ಲಿಯ ನೆಲಮನೆಯೊಳಗಿನ ಕೀಲಿಯು ಮಾಡಿನಲ್ಲಿಯ ಪಿಂಜರದೊಳಗಿನ ಗಿಳಿಯನ್ನು ಕೊಂದರೆ ಈ ಭೂಮಿಯ ಮೇಲಿನ ರಾಕ್ಷಸವು ಸಾಯುವದು. ಇಲ್ಲವಾದರೆ ಇಲ್ಲ." ಈ ಎಲ್ಲ ಸ್ಥಾನಗಳಲ್ಲಿ ಕೆಲವು ರಾಕ್ಷಸರು ಕಾವಲು ಇರುವರು. ಅವರನ್ನೆಲ್ಲ ಕೊಂದು ಆ ಸ್ಥಳಗಳನ್ನು ಜಯಿಸಿ ಕಡೆಗೆ ಗಿಳಿಯನ್ನು ಕೊಂದಾಗ ಈ ರಾಕ್ಷಸನ ವಧೆ" ಎಂದು ಪುರಾಣದಲ್ಲಿಯ ಕಥೆ ಇರುವವು. ಅದರಂತೆ ಹಿಂದುಸ್ಥಾನದ ಮರ್ಮಸ್ಥಾನವೇ ಆಧ್ಯಾತ್ಮ. ಬೆನ್ನೆಲಬು ಇಂಪಾದ ಗಾಯನಗಳೇ. ಪಾರಮಾರ್ಥ ಅಥವಾ ಶಿವಯೋಗ ಹೊರತು ಬೇರೆ ಇಲ್ಲ. ಇದನ್ನು ಬಿಟ್ಟು ಪರದೇಶದ ಮರ್ಮಸ್ಥಾನ ಬೆನ್ನೆಲಬು ಇಂಪಾದ ಗಾಯನವಾದ ರಾಜಕಾರಣ ಶಾಸ್ತ್ರೀಯ ಸಂಶೋಧನ, ಹೊಸ ನಾಗರಿಕತೆ, ಐಷಆರಾಮ, ಚಳುವಳಿ, ಶಕ್ತಿಯ ಭೋಗ, ವಿಷಯ ಸುಖ, ಇಂದ್ರಿಯ ಸುಖಗಳಲ್ಲೇ ನಾವು ಅವರಂತೆ ಅನುಕರಣ ಮಾಡಿದ್ದಾದರೆ ನಮ್ಮ ದೇಶ, ನಮ್ಮ ಸಂಸ್ಕೃತಿ, ನಮ್ಮ ಶಿವಯೋಗ ಮೊದಲಾದವುಗಳು ಹೇಳಹೆಸರಿಲ್ಲದೆ ಹಾಳಾಗಿ ಹೋಗುವದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಅದಕ್ಕೆ ನಾವು ಈಗಿನಂತೆ ಅವರ ಬೆನ್ನ ಹತ್ತದೆ ನಮ್ಮ ಶರಣರ, ಸಿದ್ಧರ, ಸಂತರ ಋಷಿಗಳ ಅವತಾರಿಕರ ಮಾರ್ಗಾವಲಂಬಿಗಳಾಗಿ ಭಕ್ತಿ ಜ್ಞಾನ ಕರ್ಮಗಳಲ್ಲಿ ತತ್ಪರರಾದಲ್ಲಿ ಪುನಃ ನಾವು ಹಿರಿಯರಂತೆ ಬಲಿಷ್ಠರೂ ಯೋಗಿಗಳೂ ಆಗುವದರಲ್ಲಿ ಸಂದೇಹವಿಲ್ಲ. ಈ ನಾಲ್ಕು ದಿನದ ಹಾಳುಬಾಳಿನಲ್ಲಿ ಸುಖವಿಲ್ಲ.

## ಶಿವಯೋಗದ ಸ್ವರೂಪ.

ಇದನ್ನು ತಿಳಿಸುವದಕ್ಕಾಗಿ ನಡೆದು ನುಡಿದು ಬಾಳಿ ಉಳಿದುಹೋದ ಅನೇಕ ಶರಣರ ಚರಿತೆಗಳುಂಟು. ಅವರು ನಮ್ಮಂತೆ ಐಷಆರಾಮದಲ್ಲಿ ಇದ್ದರೆ ಬರುತ್ತಿದ್ದಿಲ್ಲವೇನು? ಅವರೇಕೆ ಇಷ್ಟು ತ್ಯಾಗಮಾಡಿ, ಯೋಗ ಮಾಡಿ, ಶಿವಯೋಗಿಗಳಾದರೂ ಅವರು ದೇಹ ಬಿಟ್ಟರೂ ಅವರು ಇನ್ನೂ ಜೀವಂತರಾಗಿ ಸೂಕ್ಷ್ಮ ರೀತಿಯಿಂದ ನಮ್ಮ ಕಲ್ಯಾಣ ಮಾಡುತ್ತಲೇ ಇರುವರು. ಶ್ರೀ ಷಣ್ಮುಖ ಸ್ವಾಮಿಗಳ ಗದ್ದುಗೆಯು ಜೇವುರಗಿಯಲ್ಲಿ ಇನ್ನೂ ಅದೆ. ಅವರು ಬರೆದ ಅಖಂಡೇಶ್ವರ ವಚನವು ಇನ್ನೂ ನಮಗೆ ಸ್ಫೂರ್ತಿ ಕೊಡುತ್ತಿರುವದು. ಅವರು ಭಕ್ತರ ಕಲ್ಮಷಗಳನ್ನು ಇನ್ನೂ ತೊಳೆಯುತ್ತಿರುವದು ಎಲ್ಲರಿಗೂ ಅನುಭವದ ಮಾತಾಗಿದೆ. ಇದೆಲ್ಲ ಅವರು ಮಾಡಿದ

ತ್ಯಾಗ ಸಾಧಿಸಿದ ಶಿವಯೋಗದ ಮಹಿಮೆಯಲ್ಲವೇನು? ಈ ವಿಜ್ಞಾನ ಯುಗಕ್ಕೆ ಮಣಿಯದವರೇ ಶಿವಯೋಗಿಗಳಾಗಬಲ್ಲರು.

"ಕಾಲಿಲ್ಲದೆ ನಡೆಯಬಲ್ಲಿಯಾದರೆ ಶಿವಯೋಗಿಯೆಂಬೆನು. ಕೈ ಇಲ್ಲದೆ ಮುಟ್ಟ ಬಲ್ಲಿಯಾದರೆ ಶಿವಯೋಗಿ ಎಂಬೆನು ! ಕಣ್ಣಿಲ್ಲದೆ ನೋಡಬಲ್ಲರೆ ಶಿವಯೋಗಿ ಎಂಬೆನು ! ಕಿವಿ ಇಲ್ಲದೆ ಕೇಳಬಲ್ಲಿಯಾದರೆ ಶಿವಯೋಗಿ ಎಂಬೆನು । ಇಂತೀ ಭೇದವರಿಯದೆ ವೇಷ ಧರಿಸಿ ತಿರುಗುವವರೆಲ್ಲ ಭವ ರೋಗಿಗಳೆಂಬೆನಯ್ಯಾ ಅಖಂಡೇಶ್ವರಾ. ತನುವಿನ ಗುಣಗಳ ತರಿದೊಟ್ಟಿ ಮನದ ಮಾಯಾವಿಕಾರದ ಬಾಯ ಟೊಣೆದು । ಕಂಗಳ ಕತ್ತಲೆಯ ಕೆಡಿಸಿ ಎಡಬಲಂಗಳ ತಡಹದ ನಡುಮಧ್ಯ ಮಾರ್ಗವ ಹಿಡಿದು ಸುಷುಮ್ನಾಗಿರಿಯ ನಡರಿ । ಕಡೆ ಮೊದಲಿಲ್ಲದ ಬೆಳಗಿನೊಳಡಗಿ । ಬೆಳಗುತಿರ್ದೆನು ನಾನು ಪರಶಿವಯೋಗಿಯಾದೆನಯ್ಯಾ ಅಖಂಡೇಶ್ವರ.

ಈಗ ನಡೆಯಲಿಕ್ಕೆ ಮೋಟಾರ, ರೇಲು, ವಿಮಾನಗಳನ್ನು, ಸುದ್ದಿ ಕೇಳಲಿಕ್ಕೆ ರೇಡಿಯೋ, ದೂರಿನ ದೃಶ್ಯಗಳನ್ನು ನೋಡಲಿಕ್ಕೆ 'ರೇಡಿಯೋ ಫೋಟೋ ಕ್ಯಾಮರಾಗಳನ್ನು ಉಪಯೋಗಿಸುವೆವು. ಶಿವಯೋಗಿಯಾದರೆ ಈ ಯಂತ್ರಗಳಿಲ್ಲದೆ ಬೇಕಾದಲ್ಲಿ ಐಕ್ಯನಾಗಿ ಹೋಗಬಲ್ಲ. ಬೇಕಾದಲ್ಲಿಯ ಸುದ್ದಿ ಗಾಯನ ಕೇಳಬಲ್ಲ, ಬೇಕಾದಲ್ಲಿಯ ದೃಶ್ಯಗಳನ್ನು ಕುಳಿತಲ್ಲೇ ನೋಡಬಲ್ಲ. ಬೇಕಾದಲ್ಲಿಯ ವಾಸನೆಯನ್ನು ಮೂಸಬಲ್ಲ. ಬೇಕಾದನ್ನ ತಾನಿದ್ದಲ್ಲಿಗೆ ತರಿಸಬಲ್ಲ ಎಂದು ಶಿವಯೋಗಿಯ ಮಹಿಮೆಯನ್ನು ಹಾಡಿದ್ದಾನೆ. ಇವರ ಮೇಲಿಂದ ಶ್ರೀ ಷಣ್ಮುಖಸ್ವಾಮಿಗಳು ಎಂಥ ಹಿರಿದಾದ ಶಿವಯೋಗವನ್ನು ಸಾಧಿಸಿದ್ದರೆಂದು ಸಹಜ ಗೊತ್ತಾಗುವದು. ಎರಡನೇ ವಚನದಲ್ಲಿ ಮೇಲಿನದು ಸಾಧಿಸಬೇಕಾದರೆ ಏನುಮಾಡಬೇಕು, ಏನು ಕಳೆಯಬೇಕು ಎಂದು ಬಣ್ಣಿಸಲಾಗಿದೆ. ತನ್ನ ಕುಂಡಲಿ ಶಕ್ತಿಯನ್ನು ಪರಶಿವನಿಂದ ಅಗಲಿದ್ದನ್ನು ಪುನಃ ಅವನನ್ನು ಕೂಡಿಸಿದ್ದು ಹೇಳಲಾಗಿದೆ. ಮೇಲೆ ಹೇಳಿದಂತೆ ಅದೇ ಶಿವಯೋಗವೆಂದು ಇವರ ಅಭಿಪ್ರಾಯವೂ ಕೂಡ ಇದೆ. ಷಟಚಕ್ರದ ಬಗ್ಗೆ ಅದರ ಉತ್ಪತ್ತಿ ಬೆಳವಣಿಗೆ ಮೊದಲಾದವುಗಳ ಬಗ್ಗೆ ಒಂದು ವಚನವು ಪ್ರಾಣಲಿಂಗಿಯ ಸ್ಥಲದಲ್ಲಿ ಇದೆ. ಅದು ಬಹು ದೊಡ್ಡದಿದೆ. ಅದರ ಕಡೆಯ ಭಾಗವನ್ನಷ್ಟೇ ಇಲ್ಲಿ ಕೊಡುವೆನು.

"ಆಧಾರ ಸ್ವಾದಿಷ್ಠಾನದಲ್ಲಿ । ಸ್ವಾದಿಷ್ಠಾನ ಮಣಿಪೂರಕದಲ್ಲಿ । ಮಣಿಪೂರಕ ಅನಾಹತದಲ್ಲಿ । ಅನಾಹತ ವಿಶುದ್ಧದಲ್ಲಿ । ವಿಶುದ್ಧ ಆಗ್ನೆಯದಲ್ಲಿ । ಆಗ್ನೆಯು ಬ್ರಹ್ಮಚಕ್ರದಲ್ಲಿ । ಬ್ರಹ್ಮಚಕ್ರ ಶಿಖಾಚಕ್ರದಲ್ಲಿ । ಶಿಖಾಚಕ್ರ ಪಶ್ಚಿಮ ಚಕ್ರದಲ್ಲಿ । ಪಶ್ಚಿಮ ಚಕ್ರ ಅಣುಚಕ್ರದಲ್ಲಿ । ಅಣುಚಕ್ರ ನಿರವಯುದಲ್ಲಿ । ನಿರವಯಲು ನಿರ್ಜೀವ ಕೂಡಿ ಸಹಜವಾದಲ್ಲಿ । ಅಖಂಡೇಶ್ವರನೆಂಬ ಶಬ್ಧ ಮುಗ್ಧವಾಯಿತು । ಪಿಂಡದೊಳಗೊಂದು ಜ್ಯೋತಿ ಥಳಥಳಿಸಿ ಬೆಳಗುತಿರ್ಪುದು ನೋಡಾ । ಅಖಂಡ ಜ್ಯೋತಿಯನೊಡಗೂಡಿ ಅವಿರಳ ಶಿವಯೋಗಿಯಾದ ಪಿಂಡದ ಅಖಂಡಿತವು ಕಡೆಗಾಯಿತು ನೋಡಾ । "

ಇದೂ ಕೂಡ ಕೂಂಡಲಿನಿ ಶಕ್ತಿಯು ಏರಿ ಪರಶಿವನ ಕೂಡಲು ಮೇಲೆ ಹೋದುದರ ವರ್ಣನೆ ಇದೆ. ಅವಳು ಅವನನ್ನು ಕೂಡುವದರಿಂದ ಏನಾಯಿತು ಅದೇ ಶಿವಯೋಗವಾಯಿತೆಂದು ವಿಶದಪಡಿಸಿದ್ದಾರೆ. ಇಂಥ ಶಿವಯೋಗಿಯು ಈಗಿನ ವಿಜ್ಞಾನ ಯುಗದ ಯಾವ ಯಂತ್ರಗಳಿಗೂ ಅಸ್ತ್ರಗಳಿಗೂ ನಮ್ಮ ಈ ಶಿವಯೋಗಿಯು ಮಣಿಯಲಾರ, ದಾಸನಾಗಲಾರನೆಂದು ಧಾರಾಳವಾಗಿ ಹೇಳಿದ್ದಾರೆ. ಅಂದರೆ ಶಿವಯೋಗವು ವಿಜ್ಞಾನಕ್ಕಿಂತ ಎಷ್ಟು ಹೆಚ್ಚಿನದು ಶ್ರೇಷ್ಠವಾದುದೆಂದು ಹೇಳಲಿಕ್ಕಾಗದು. ವಿಜ್ಞಾನವು ಬುದ್ಧಿಯ ಕಸಶತ್ತಿಗೆ ಸಂಬಂಧಿಸಿದ್ದು. ಮನ, ಬುದ್ಧಿ, ಚಿತ್ತಗಳ ಆಚೆಗಿನದು ಶಿವಯೋಗ ಹೀಗಿದ್ದ ಬಳಿಕ ಈ ವಿಜ್ಞಾನಕ್ಕೆ ಹೇಗೆ ಮಣಿಯುವದು ಶಿವಯೋಗ ?

## ಶಿವಯೋಗ ಸಾಧನೆ.

ಈ ಶ್ರೇಷ್ಠ ಶಿವಯೋಗಹನ್ನು ಸಾಧಿಸಲು ಕ್ರಮವಾಗಿ ಶ್ರೀ ಷಣ್ಮುಖಸ್ವಾಮಿಗಳು ಏನು ಮಾಡಿದರೆಂದು ವಿಚಾರಿಸುವೆನು. ಸ್ವಾಭಾವಿಕವಾಗಿ ಸಾಮಾನ್ಯ ಮಾನವನು ಆಣವ ಮಲ, ಮಾಯಾಮಲ, ಕಾರ್ಮಿಕ ಮಲಗಳಿಂದ ಕೂಡಿ ಜನಿಸುವನು. ಆದರೆ ಪೂರ್ವ ಸುಕೃತದಿಂದ ಒಳ್ಳೇ ಶಿವಯೋಗಿಯಾಗುವ ಜನ್ಮದಲ್ಲಿ ಜನಿಸಿದ್ದರೆ ಅವನು ಬಾಲ್ಯದಲ್ಲಿ ಸಂಸಾರಿಕ ಬಾಲಕರಂತೆ ಆಚರಿಸನು. ಅವನು ಈ ಸಂಸಾರದಲ್ಲಿ ಹೇಯ ಬುದ್ಧಿಯನ್ನು ಸಹಜ ತಾಳುವನು. ದೇವರ ಕಡೆ ಮನವು ಹೋಗುವದು. ಇವರು ಸಂಸಾರ ಹೇಯದ ಬಗ್ಗೆಯೂ ಕೂಡ ಕುಂಡಲಿ ಶಕ್ತಿಯ ಬಗ್ಗೆ ಹೇಳಿದ್ದಾರೆ.

"ವಿಷಯವೆಂಬ ಕಾಡಗಿಚ್ಚಿನ ಜ್ವಾಲೆಯಲ್ಲಿ ಈರೇಳು ಲೋಕವೆಲ್ಲಾ ಹತವಾಗಪುದು ನೋಡಾ । ಅದೆಂತೆಂದೊಡೆ — ಕುಂಡಲಿ ಎಂಬ ಮಾಯಾ ಸರ್ಪವು ತನ್ನ ಬಾಲ ಬ್ರಹ್ಮರಂಧ್ರಕ್ಕೆ ಸೇರಿಸಿ । ನಾಭಿಚಕ್ರವ ಸುತ್ತಿ ಕೊಂಡು ಅಧೋಮುಖವಾಗಿ ಇಂದ್ರಿಯವೆಂಬ ವಿಷವ ಕಾರುತಿರ್ಪುದು ನೋಡಾ । ಆ ವಿಷಯದ ನಂಜು ತಲೆಗೇರಿಂದಲ್ಲಿ । ಅಸಿಯು ಜವ್ವನೆಯ ಸಂಪತ್ಸುಖವು ಬಹು ಸವಿಯೆಂದು ತಲೆದೂಗುತಿರ್ಪರು ನೋಡಾ । ಸಕಲ ಪ್ರಾಣಿಗಳು ಇದು ಪಶುಪತಿ ಮಾಡಿದ ಮಾಯಾ ವಿಧಿ ಎಂದು ತಿಳಿಯದೆ ಹಸಗೆಟ್ಟು ಹೋಯಿತು ನೋಡಾ ಮೂಜಗವೆಲ್ಲ ಅಖಂಡೇಶ್ವರಾ"

ಕುಂಡಲಿ ಸರ್ಪವು ಅದೋಮುಖ ಮಾಡಿ ರೆ ಮನುಷ್ಯನು ಸದಾ ವಿಷಯಗಳಲ್ಲಿ ಮುಳುಗಿ ಏಳುವನೆಂದು ಚನ್ನಾಗಿ ಹೇಳಿದ್ದಾರೆ. ಇದ ಕ್ಕೇನೇ ಮಾಯಾವಿಧಿ ಎಂದು ಒಳ್ಳೇ ಮಾರ್ಮಿಕವಾಗಿ ಹೇಳಿದ್ದಾರೆ. ಸಂಸಾರವೆಲ್ಲ ಮಾಯಯ ಆಟವೆಂದು ತೋರಿಸಲು,

"ಕಾಲನೆಂಬ ಜಾಲಗಾರನು ಕರ್ಮವೆಂಬ ಬಲೆಯ ಬೀಸಿ ಸಂಸಾರ ಶರಧಿಯಲ್ಲಿರ್ಪ ಸಕಲ ಪ್ರಾಣಿಗಳೆಂಬ ಮೀನುಗಳ ಹಿಡಿದು ಕೊಲ್ಲುತ್ತಿ ದ್ದಾನೆ. ಕಾಮನೆಂಬ ಬೇಂಟೆಗಾರನು ಕಂಗಳ ತೋಹಿನಲ್ಲಿ ನಿಂದು ಕಳವಳದ ಬಾಣವನೆಸೆದು ಭವವೆಂಬ ಬಲೆಯಲ್ಲಿ ಸಕಲ ಪ್ರಾಣಿಗಳ ಕೆಡಹಿಕೊಂಡು ಕೊಲ್ಲುತ್ತಿದ್ದಾನೆ. ಮಾಯೆಯೆಂಬ ರಕ್ಕಸಿ ಸಕಲ ಪ್ರಾಣಿಗಳ ಸಾರವ ಹೀರಿ ಹಿಪ್ಪೆಯ ಮಾಡಿ ಉಃಫೆಂದು ಊದುತಿದ್ದಾಳೆ. ಇಂತೀ ತ್ರಿವಿಧವಾದ ಮುಖದಲ್ಲಿ ನಿಮ್ಮ ಮಾಯೆಯ ಗೆಲುವಡೆ ಆರಳ ವಲ್ಲ ಅಖಂಡೇಶ್ವರ ನೀವು ಕರುಣಿಸದನ್ನಕ್ಕ."

ಕಾಲ, ಕಾಮ, ಮಾಯೆ ಇವು ಮೂರು ಮಾನವನಿಗೆ ಬಗೆ ಬಗೆ ಯಿಂದ ಕೊಲ್ಲುತ್ತಿರುವ ಮಾಯಾ ಶಕ್ತಿಗಳೆಂದು ಹೇಳಿದ್ದಾರೆ. "ಹರಿಯ ಹತ್ತು ಭವದಲ್ಲಿ ಬರಿಸಿತ್ತು ಮಾಯೆ । ಬ್ರಹ್ಮನ ತಲೆ ಹೋಳುಮಾಡಿತ್ತು ಮಾಯೆ । ಇಂದ್ರನ ಅಂಗಕ್ಕೆ ಭಂಗವನಿತ್ತಿತು ಮಾಯೆ । ಸಿದ್ಧ ಸಾಧಕರಿ ಗೆಲ್ಲ ಗುದ್ದಾಟವನಿಕ್ಕಿತು ಮಾಯೆ । ಮನುಮುನಿಗಳಲ್ಲಿ ಮವವನಳಿಸಿ ಕೊಂಡು ಮರಣಕೊಳಗುಮಾಡಿತು ಮಾಯೆ । ಸ್ವರ್ಗ, ಮರ್ತ್ಯ, ಪಾತಾಳ ವೆಂಬ ಮೂರು ಲೋಕದವರೆಲ್ಲ ಯೋನಿ ಮುಖದಲ್ಲಿ । ಹರಿಹರಿಂದು ನುಂಗಿ

ತೊತ್ತಳದುಳಿಯಿತು ಮಾಯೆ । ಮುಕ್ಕಣ್ಣ ನೀ ಮಾಡಿದ ಮಾಯೆಗೆ ಬೆಕ್ಕಸನೆ ಬೆರಗಾದೆನಯ್ಯ ಅಖಂಡೇಶ್ವರ." ಎಂದು ಮಹಾಮಾಯೆಯ ಮಹಿಮೆಯನ್ನು ಹೊಗಳಿದ್ದಾರೆ.

ಇಂಥ ಕಠಿಣವಾದ ಇಂಥ ಭಯಂಕರವಾದ ಮಾಯೆಯನ್ನು ಬ್ರಹ್ಮಮುಖವಾಗಿ ತಿರುಗಿಸಲಿಕ್ಕೆ ಬರುತ್ತದೆ ಹೊರತು ಮಾಯೆಯನ್ನು ನಾಶಗೊಳಿಸಲಿಕ್ಕೆ ಅಥವಾ ಇಲ್ಲ ಮಾಡಲಿಕ್ಕೆ ಬರುವದಿಲ್ಲ. ಶರಣರು ಮಾಯೆಯನ್ನು ತಮ್ಮ ದಾಸಿಯನ್ನಾಗಿ ಮಾಡಿಕೊಂಡಿದ್ದಾರೆ. ಆಗ ಮಾತ್ರ ಶಿವಯೋಗದ ಅನುಭವವಾಗುವದು. ಈ ಮಾಯೆಯಿಂದಲೇ ಈ ಜಗದಲ್ಲಿ ಇಷ್ಟು ಕೋಲಾಹಲ, ಹೆಣಗಾಟ, ಸ್ಪರ್ಧೆ, ಈರ್ಷೆ, ಹೋರಾಟ, ಕಲಹ, ಗದ್ದಲ, ಸುಳ್ಳು, ಮೋಸ, ಕಳವು, ಕೊಲೆ ಹಾದರಗಳು ನಡೆದಿವೆ. ಇದಕ್ಕಾಗಿಯೇ ಜಗತ್ತಿನಲ್ಲಿ ಒಳ್ಳೇ ಚಿತ್ರ ವಿಚಿತ್ರ ಘಟನೆಗಳ ಮೂಲಕ ರುಚಿ, ಲಾಲಸೆ, ಆಸಕ್ತಿ, ಬಯಕೆ, ವಾಸನೆ, ತಿಂಡಿಗಳು ಉಂಟಾಗಿವೆ. ಈ ಮಾಯೆಯು ತನ್ನ ಆಲಿಂಗನದಿಂದ ಪರಮಾತ್ಮನನ್ನು ಬಹು ಬಿಗಿಯಾಗಿ ಅಪ್ಪಿರುವಳು. ಅದಕ್ಕಾಗಿ ಶಿವಶಕ್ತಿಯರು ಅಗಲಿದ್ದಾರೆ. ಈ ಮಾಯೆಯನ್ನು ಓರೆಮಾಡಿದರೆ ಶಿವಶಕ್ತಿಯರು ತಾವಾಗಿಯೇ ಕೂಡುವರು. ಆಗ ಲಿಂಗಾಂಗ ಸಮರಸವಾಗುವದು. ಪಿದಕ್ಕೆಲ್ಲ ಮಾಯೆ ಅಡ್ಡಿಯಾಗಿದ್ದಾಳೆ. ಈ ಮಾಯೆಯನ್ನೇ ಪರಮಾತ್ಮನೆಡೆಗೆ ಸಾಗಿಸಬೇಕು. ಅಂದರೆ ಶಿವಯೋಗವಾಗುವದು. ಮಾಯೆಯು ಅಜಹರಿ ರುದ್ರರಿಗೆ ಕಾಡಿದೆ ಎಂದ ಮೇಲೆ ಉಳಿದ ಮಾನವರ ಬೆಲೆ ಏನು ? ಇದನ್ನು ವಿಚಾರಿಸಿದರೆ ಮಾನವನು ದಿಕ್ಕುಗಾಣದೆ ದಂಗುಬಡಿದು ನಿಂತುಬಿಡುವನು. ಆದರೂ ಶರಣರ ಮಾಯಾತೀತ ಚರಿತೆಯನ್ನು ಸ್ಮರಣೆಗೆ ತಂದು ಪುನ: ದಾರಿಯನ್ನು ನಡೆಯಹತ್ತುವನು. ಷಣ್ಮುಖಸ್ವಾಮಿಗಳು ಇಂಥ ಭಯಂಕರ ಮಾಯೆಯನ್ನು ಬ್ರಹ್ಮಮುಖವಾಗಿ ತಿರುಗಿಸಿದ್ದರು. ಇವರು ಶಿವಯೋಗಿಗಳಾದ ಶಿವಶರಣರಾದುದರಿಂದ ಮಾಯೆಯು ಅವರಿಗೆ ದಾಸಿಯಾಗಿದ್ದಳು. ಅದಕ್ಕಾಗಿ ಇಂದ್ರಿಯಗಳಿಲ್ಲದೆ ರೂಪ, ರಸ, ಗಂಧ, ಸ್ಪರ್ಶ ನಡೆಯುವದು ಕೂಡುವದು ವಿಷಯಗಳನ್ನು ಭೋಗಿಸುತ್ತಿದ್ದರು. ಈ ಮಾಯೆಯೇ ಇಂದ್ರಿಯಾತೀತ ವಿಷಯಗಳನ್ನು ಭೋಗಿಸಲಿಕ್ಕೆ ಸಹಾಯಕಳಾಗಿದ್ದಳು.

## ಪಂಚಾಚಾರಗಳು

ಈ ಸಂಸಾರ ಹೇಯಸ್ಥಲದಲ್ಲಿ ಸಾಮಾನ್ಯವಾಗಿ ಪಂಚಾಚಾರಗಳು ಬರುವವು. ಸದಾಚಾರ, ಗಣಾಚಾರ, ನಿತ್ಯಾಚಾರ, ಶಿವಾಚಾರ, ಲಿಂಗಾಚಾರಗಳೆಂದು ಪಂಚಾಚಾರಗಳು ಸಾಮಾನ್ಯವಾಗಿ ಬಂದು ಹೋಗುವವು. ಸದಾಚಾರವು ನ್ಯಾಯದಿಂದ ನಡೆಯುವದು; ಗಣಾಚಾರವು ಸತ್ಯ ಅಹಿಂಸೆ ಧರ್ಮದಿಂದ ನಡೆಯುವದು; ನಿತ್ಯಾಚಾರವು ನಿತ್ಯ, ನಿಯಮ, ಪೂಜೆ, ವ್ರತಗಳನ್ನು ಮಾಡುವದು; ಶಿವಾಚಾರವು ಶಿವಭಕ್ತರನ್ನೆಲ್ಲ ಪರಮಾತ್ಮನೆಂದು ಸೇವಿಸುವದು; ಲಿಂಗಾಚಾರವು ಇಷ್ಟ, ಭಾವ, ಪ್ರಾಣಲಿಂಗಗಳನ್ನು ಪೂಜೆಮಾಡಿ ನೆಲಗೊಳಿಸುವದು. ಸಾಮಾನ್ಯವಾಗಿ ಇವು ಸಂಸಾರ ಹೇಯಸ್ಥಲದಲ್ಲಿ ಬರುವವು. ಇವುಗಳಿಂದ ತನು, ಮನ, ಪ್ರಾಣ, ಬುದ್ಧಿ, ಇಂದ್ರಿಯ ಮೊದಲಾದವುಗಳು ನಿತ್ಯ ಪರಿಶುದ್ಧವಾಗುವವು. ಪಾರಮಾರ್ಥದ ಕಡೆಗೆ ಮಾನವನು ಸ್ವಾಭಾವಿಕವಾಗಿ ಒಲಿಯ ಹತ್ತುವನು. "ಸದ್ಭಕ್ತರ ನಡೆ ಶುದ್ಧ, ನುಡಿ ಶುದ್ಧ, ತನುಶುದ್ಧ, ಮನಶುದ್ಧ, ಭಾವ ಶುದ್ಧ ಅಖಂಡೇಶ್ವರ" ಎಂದು ಹೇಳಿದ್ದಾರೆ. ಪಂಚಾಚಾರಗಳ ಪಂಚ ಭೂತಗಳ ಪರಿಹರಿಸಿ ಪಂಚ ಪ್ರಾಣ ವಾಯುಗಳಲ್ಲಿ ಪಂಚ ಲಿಂಗಗಳ ಪ್ರತಿಷ್ಠಿಸಿ ಪಂಚ ಬ್ರಹ್ಮದ ಮೂಲವ ತಿಳಿದು ಮೂಲೋಕದೊಡೆಯನಲ್ಲಿ ಮನವನಡಗಿರ್ಪ ಮಹಾ ಶರಣರ ಪಾದಕ್ಕೆ ನಮೊ ನಮೊ ಎಂಬೆನಯ್ಯ ಅಖಂಡೇಶ್ವರಾ ॥ ಮೊದಲು ಪಂಚಾಚಾರಗಳು. ಶಿವಯೋಗ ಅಥವಾ ಲಿಂಗಾಂಗ ಸಮರಸವೆಂಬ ಕಟ್ಟಡಕ್ಕೆ ಅಡಿಗಲ್ಲುಗಳಿದ್ದಂತೆ ಇವುಗಳ ಮೇಲೆ ಈ ಕಟ್ಟಡವು ನಿಂತಿದೆ. ಆದಕ್ಕೆ ಪಂಚಾಚಾರಗಳು ವೀರಶೈವನಿಗೆ ಅವಶ್ಯ ಬೇಕೇಬೇಕು. ಶ್ರೀ ಷಣ್ಮುಖದೇವರು ಇವುಗಳನ್ನು ಚನ್ನಾಗಿ ಸಾಧಿಸಿದ್ದರೆಂದು ಅವರ ವಚನಗಳ ಮೇಲಿಂದ ಸಹಜ ಕಂಡುಬರುವದು.

## ಅಷ್ಟಾವರಣಗಳು

ಅಷ್ಟಾವರಣಗಳು ವೀರಶೈವರಿಗೆ ಅವಶ್ಯ ಬೇಕು. ಗುರು, ಲಿಂಗ ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ, ಜಂಗಮ, ಸದ್ಗುರುವಿನ ಕಡೆಯಿಂದ ಲಿಂಗದ ಜ್ಞಾನವನ್ನು ಪಡಕೊಂಡು ಅಂಗದ ಮೇಲೆ ಧರಿಸಿ, ವಿಭೂತಿ ರುದ್ರಾಕ್ಷಿಗಳನ್ನು ಅಂಗದ ಮೇಲೆ ಧಾರಣ

ಮಾಡಿ ಗುರುಕೊಟ್ಟ ಮಂತ್ರವನ್ನು ಚನ್ನಾಗಿ ನಿತ್ಯ ಧ್ಯಾನಿಸಬೇಕೆಂದು ಹೇಳಲಾಗಿದೆ.

(೧) ಗುರುಗಳು ಎಂಥವರಿರಬೇಕೆಂದು ಕೆಳಗಿನ ವಚನದಲ್ಲಿ ನೋಡಿರಿ. ಬೇಕಾದಂಥವನಿದ್ದರೂ ಗುರು ಹೆಚ್ಚಿನವನೆಂಬ ಭಾವನೆಯು ನಿರಸನ ಮಾಡಿರುವರು. "ಗುರುವಿಗಾದರು ಆಚಾರ, ಸತ್ಕ್ರಿಯವೇ ಬೇಕು. ಜಂಗಮಕ್ಕಾದರೂ ಅರುಹು ಆಚಾರ ಸತ್ಕ್ರಿಯಾ ಸನ್ನಿಹಿತ ಶಿವನಾಗಿರ್ಪನು. ಅರಹುಗೆಟ್ಟು ಆಚಾರ ತಪ್ಪಿ ಸತ್ಕ್ರಿಯಾ ಹೀನರಾಗಿ ರ್ಪವರು ಸಲ್ಲರಯ್ಯಾ ಶಿವಪಥಕ್ಕೆ ಅಖಂಡೇಶ್ವರಾ ॥" ಆಣವ ಮಲ, ಮಾಯಾ ಮಲ, ಕಾರ್ಮಿಕ ಮಲವೆಂಬ ಮಲತ್ರಯಂಗಳಲ್ಲಿ ಬಿದ್ದು ಓಡಾಡುವಾತ ಗುರುವಲ್ಲ. ಜಂಗಮನ ಪಂಚೇಂದ್ರಿಯಗಳಲ್ಲಿ ವ್ಯಸನಕಿದ ಅಜ್ಞಾನ ಅಹಂಕಾರದಲ್ಲಿ ಮುಂದುಗಾಣದೆ ನಡೆಯುವಾತ ಜಂಗಮವಲ್ಲ. ಇವರಿಗೆ ದೇವರೆಂದು ಪೂಜಿಸುವಾತ ಭಕ್ತನಲ್ಲ. ಅರುಹು ಆಚಾರ ಹೀನರಾದ ಗುರು ಲಿಂಗ ಜಂಗಮರ ದೇವರೆಂದು ಪೂಜಿಸುವ ಭಕ್ತಂಗೆ ಭವರಾಟದಲ್ಲಿ ಸತ್ತು ಸತ್ತು ಹುಟ್ಟಿ ಹುಟ್ಟಿ ಸುತ್ತಿ ಸುತ್ತಿ ಇರ್ಪುದು ತಪ್ಪದು ನೋಡಾ ಅಖಂಡೇಶ್ವರಾ ॥ ಗುರುಗಳ ಸ್ಥಿತಿಯು ಒಳ್ಳೇ ಉತ್ತಮ ಇರಬೇಕೆಂದು ಹೇಳಿದ್ದಾರೆ. ಗುರು ಮೂಲ ಋಷಿಮೂಲವನ್ನು ನೋಡಬಾರದೆಂದು ಹೇಳಿರುವದು ತಪ್ಪು. ಭಕ್ತರಿಗೆ ಶಿಷ್ಯರಿಗೆ ನಡೆನುಡಿ ಸರಿ ಇರಬೇಕೆಂದ ಮಾತ್ರಕ್ಕೆ ಗುರುವಿಗೂ ಅವಶ್ಯ ನಡೆನುಡಿ ಆಚಾರ ವಿಚಾರ ಮೊದಲಾದವುಗಳು ಚನ್ನಾಗಿ ಇರಬೇಕಾದುದು ಅತಿ ಅವಶ್ಯವಾಗಿದೆ. ಷಣ್ಮುಖ ಸ್ವಾಮಿಗಳು ಮೊದಲೇ ಗುರುವರ್ಗದವರು ಅವರು ದಿವ್ಯ ಜ್ಞಾನಿಗಳಾಗಿ ಶಿವಯೋಗಿಗಳಾಗಿ ಸಿದ್ಧಪುರುಷರಾಗಿ ಇದ್ದುದರಿಂದ ಅವರ ಗುರುತ್ವವು ಹೆಚ್ಚಿನದೆಂದು ಹೇಳಬೇಕು. ಇಂಥವರೇ ನಿಜವಾದ ಗುರುಗಳು. ಅಯ್ಯಗಳ ಹೊಟ್ಟೆಯಿಂದ ಹುಟ್ಟಿದ ಮಾತ್ರಕ್ಕೆ ಅಯ್ಯಾಚಾರ ದೀಕ್ಷೆಗಳು ಆದಮಾತ್ರಕ್ಕೆ ಎಂದೂ ಗುರುತ್ವ ಬರಲಾರದು. ಮೇಲಿನ ವಚನದಲ್ಲಿ ಹೇಳಿದಂತೆ ಗುರುಗಳು ಜಂಗಮರು ಇರಬೇಕು. ವೇದಾಂತದ ಭಾಷೆಯಲ್ಲಿ ಶ್ರೋತ್ರೀಯ ಬ್ರಹ್ಮನಿಷ್ಠರಿರಬೇಕೆಂದು ಹೇಳಲಾಗಿದೆ. ತಾನ ತೀಲಲಾರದವನು ಅನ್ಯರನ್ನೇನು ತೀಲಿಸಬಲ್ಲನು? ಬಳ್ಳಿಕುರುಡರು ಕೂಡಿ ಹಳ್ಳವನು ಬಿದ್ದಂತೆಯಾಗುವದು. ಕುರುಡನು ಕುರುಡನಿಗೆ ದಾರಿ ತೋರಿದಂತೆ

ಆಗುವದು. ಗುರುಗಳು ಯೋಗ್ಯರಿರಬೇಕು. ಈಗಂತೂ ಗುರುಗಳು ಲಕ್ಷಗಟ್ಟಲೆ ಸಿಕ್ಕುವರು. ಆದರೆ ಒಬ್ಬ ಯೋಗ್ಯ ಶಿಷ್ಯನು ಸಿಗುವದು ಕಠಿಣವೆಂದು ಹೇಳುವರು. ಇದರ ಅರ್ಥವೇನಂದರೆ ಬರೇ ನುಡಿಯುವವರು ಬರೇ ಉಪದೇಶ ಮಾಡುವವರೇ ಸಿಗುವರು. ಆದರೆ ಅದರಂತೆ ನಡೆಯುವವರೇ ಸಿಗುವದಿಲ್ಲ. ಸೊಸೆಯಾಗದೆ ಅತ್ತೆಯಾಗಬೇಕೆನ್ನುವರು. ಶಿಷ್ಯರಾಗದೆ ಗುರುಗಳಾಗಬೇಕೆನ್ನುವರು. ಮೊದಲು ನಡೆದು ಹಿಂದಿನಿಂದ ನುಡಿಯುವವರು ಬೇಕು. ಷಣ್ಮುಖಸ್ವಾಮಿಗಳು ಇದರಂತೆ ಮಾಡಿದ್ದು ಅವರ ವಚನಗಳ ಮೇಲಿಂದ ಸಹಜ ಕಂಡುಬರದೆ ಇರಲಾರದು. ಅವರ ವಚನಗಳು ಒಳ್ಳೇ ಸ್ಪಷ್ಟವಾದವುಗಳೂ, ಅನುಭವಪೂರ್ಣವಾದವುಗಳೂ ಇರುವದಕ್ಕೆ ಇದೇ ಕಾರಣವು.

ಇನ್ನು ವಿಭೂತಿ, ರುದ್ರಾಕ್ಷಿ, ಮಂತ್ರ, ಪ್ರಸಾದ, ಪಾದೋದಕ ಲಿಂಗಗಳ ಮಹತ್ವನನ್ನು ಹೇಳಿದ್ದಾರೆ. ವೀರಶೈವರಿಗೆ ಅವು ಅವಶ್ಯವು. ಇದನ್ನು ಯಾರೂ ಅಲ್ಲಗಳೆಯರು. ಆದರೂ ಅವುಗಳ ಗೂಢಾರ್ಥಗಳ ಕಡೆಗೆ ಲಕ್ಷಹಾಕಬೇಕು. ವಿಭೂತಿ ಅಂದರೆ ದಿವ್ಯಶಕ್ತಿಗಳುಳ್ಳ ಮನುಷ್ಯ ಮಹಾಪ್ರಭಾವಶಾಲಿ. ಮಹಿಮಾವಂತ, ತೇಜಸ್ವಿ, ಕೀರ್ತಿವಂತ ಎಂದು ಅರ್ಥವಿರುವದು. ಬರೇ ಬೂದಿ ಭಸ್ಮಗಳು ಇದರ ಅರ್ಥವಲ್ಲ. ತೋರಿಕೆಗೆ ಇವುಗಳನ್ನು ಧರಿಸಿದರೂ ಕೂಡ ಮೊದಲಿನ ಅರ್ಥದ ಮನುಷ್ಯನಾದಾಗ ಮಾತ್ರ ಮಾನವನು ವಿಭೂತಿಯಾಗುವದರಲ್ಲಿ ಸಂದೇಹವಿಲ್ಲ. ಇದರಂತೆ ರುದ್ರಾಕ್ಷಿಯ ಅರ್ಥವೂ ಇರುವದು. ರುದ್ರ ಅಂದರೆ ವೀರತ್ವ ಉಳ್ಳವ ಅಕ್ಷಿ ಅಂದರೆ ಕಣ್ಣು ರುದ್ರಾಕ್ಷಿ ಅಂದರೆ ಮಹಾವೀರನಾದ ಶಿವನ ಕಣ್ಣು ಎಂದು ಅರ್ಥ, ಅಂದರೆ ಜ್ಞಾನದ ಕಣ್ಣು. ಶಿವನ ಮೂರನೇ ಕಣ್ಣು. ಅಂದರೆ ಜ್ಞಾನಿ ಎಂದು ಅರ್ಥ. ಬರೇ ಗಿಡಗಳ ಬೀಜಗಳನ್ನು ಕಟ್ಟಿಕೊಳ್ಳುವದಲ್ಲ. ಅವುಗಳನ್ನು ಒಂದು ಪದ್ಧತಿಯಿಂದ ಕಟ್ಟಿಕೊಳ್ಳಬೇಕೆಂದು ಇವರು ತಮ್ಮ ವಚನದಲ್ಲಿ ಹೇಳಿದ್ದಾರೆ. ಇದೊಂದು ಧಾರ್ಮಿಕ ಭಾವನೆ.

ಇವರು ಅಖಂಡೇಶ್ವರ ಗ್ರಂಥದಲ್ಲಿ ಹೇಳಿದ ರುದ್ರಾಕ್ಷಿಸ್ಥಲ ಮತ್ತು ವಿಭೂತಿ ಸ್ಥಲಗಳಲ್ಲಿಯ ಇವರ ವಚನಗಳ ಅರ್ಥವನ್ನು ಸೂಕ್ಷ್ಮವಾಗಿ ಅವಲೋಕಿಸಿದ್ದಾದರೆ ಮೇಲೆ ವಿವರಿಸಿದ ಅರ್ಥವೇ ಹೊರಡುವದೆಂದು

ನನ್ನ ಭಾವನೆ. ಜ್ಞಾನಿಗಳ ಬರಹವೇ ಈ ಪ್ರಕಾರ ಇರುವದುಂಟು, ತೋರಿಕೆಯ ವ್ಯಾವಹಾರಿಕ ಅರ್ಥ ಬೇರೆ ಮತ್ತು ಗೂಢವಾದ ಗಂಭೀರವಾದ ಪಾರಮಾರ್ಥದ ಅರ್ಥವು ಬೇರೆ ಇರುವದುಂಟು. ಈ ವಚನಗಳಲ್ಲಿಯೂ ಪಾರಮಾರ್ಥದ ಅರ್ಥವು ಹೊರಡುವದು. ಓದುವವರು ಬರೀ ಹೊರಗಿನ ವ್ಯಾವಹಾರಿಕ ಅರ್ಥ ಮಾಡುತ್ತ ಓದಬಾರದು. ಪ್ರತಿಯೊಂದು ಪುಸ್ತಕವನ್ನು ಗೂಢವಾದ ಗಂಭೀರವಾದ ಪಾರಮಾರ್ಥದ ಅರ್ಥ ಹೊರಡಿಸಿಕೊಂಡು ಓದಿ ತಿಳಿಯಬೇಕು. ಅಂದರೆ ದಾರಿ ಸುಗಮವಾಗಿ ನಿಚ್ಚಳವಾಗಿ ಕಾಣುವದು. ಯಾರೂ ಎಲ್ಲಿಯೂ ಎಡವುವದಿಲ್ಲ. ಮುಗ್ಗುವದಿಲ್ಲ. ಪ್ರತಿಯೊಬ್ಬರು ಸುಜ್ಞಾನದಿಂದ ಓದಿ ಅರ್ಥ ಮಾಡಬೇಕು. ಬ್ರಹ್ಮ ವಿಷ್ಣು ಶಿವನ ಚಿತ್ರಗಳು ರಾಮ ಕೃಷ್ಣ ಮೊದಲಾದ ದೇವರುಗಳ ಚಿತ್ರಗಳು ಪಾರ್ವತಿ ಲಕ್ಷ್ಮಿ ಸರಸ್ವತಿಯರ ಚಿತ್ರಗಳು ಅರ್ಥವನ್ನು ಸಹ ಮಾಡಿಕೊಳ್ಳಬೇಕು. ಎಲ್ಲಕ್ಕೂ ಒಂದು ವಿಶಿಷ್ಟ ಅರ್ಥ ಹೊರಡುವದು. ಅವೆಲ್ಲ ಗುಣಗಳಿಗೆ ಸಂಬಂಧಿಸಿದವುಗಳೇ ಇರುವವು. ತೋರಿಕೆಯ ಅರ್ಥ ಮಾಡಿದರೆ ತಪ್ಪು ಎನಿಸುವದು. ಆದರಂತೆ ಅವರೆಲ್ಲರೂ ನಮ್ಮ ಭಕ್ತಿಗಾಗಿ ರೂಪ ಧಾರಣವನ್ನಾದರೂ ಮಾಡಿ ದರ್ಶನ ಕೊಡಬಹುದು. ಇದನ್ನು ಯಾವ ಜ್ಞಾನಿಯೂ ಅಲ್ಲಗಳೆಯುವಂತೆ ಇಲ್ಲ. ತೋರಿಕೆಯ ಅರ್ಥಮಾಡಿ ಜಗವು ಕೆಡುತ್ತಿರುವದೆಂದು ಅನಿಸಿ ಇದನ್ನು ವಿವರಿಸಬೇಕಾಗಿದೆ. ಈ ಸಂಸ್ಕಾರಕ್ಕೂ ಒಂದು ಗೂಢ ಗಂಭೀರ ಪಾರಮಾರ್ಥಿಕ ಅರ್ಥವೇ ಇರುವದು. ಇದರ ಅರ್ಥ ಈ ಪ್ರಕಾರ ಹೇಳಿದರೆ ಈಗ ಮಾಡುವ ಹೀನತರ ಕಚಿಪಿಚಿ ಸಂಸಾರದ ರೀತಿಯಲ್ಲಿ ಎಷ್ಟೋ ಬದಲಾವಣೆಯಾಗುವದರಲ್ಲಿ ಸಂದೇಹವಿಲ್ಲ. ಈ ಸಂಸಾರವು ವೈರಾಗ್ಯ ಮೂರ್ತಿಗಳಾದ ಶಿವಪಾರ್ವತಿಯರಂತೆ ಪಾರಮಾರ್ಥಿಕ ಸಂಸಾರ ಆಗಿ ಮಾರ್ಪಡುವದರಲ್ಲಿ ಸಂದೇಹವಿಲ್ಲ. ಇವರು ಜೋಡಿಯಾಗಿದ್ದರು. ವೈರಾಗ್ಯದ ಮೂರ್ತಿಗಳು, ತ್ಯಾಗದ ನಿಧಿಗಳು, ಯೋಗದ ಆಗರ, ಭಕ್ತಿಯ ಧಾಮರಾಗಿರುವರು. ಇದನ್ನು ಅನುಲಕ್ಷಿಸಿ ವೀರಶೈವರು. ಶಿವನ ಪರಮ ಭಕ್ತರು, ತಮ್ಮ ಸಂಸಾರವನ್ನು ಹೇಗೆ ಸಾಗಿಸಬೇಕೆಂದು ಅರಿಯಬೇಕು. ಶಿವನು ನಮ್ಮ ಆದರ್ಶ ತಂದೆ, ಪಾರ್ವತಿಯು ನಮ್ಮ ಆದರ್ಶ ತಾಯಿ ಅವರ ಸಂಸಾರದಂತೆ ನಮ್ಮ ಸಂಸಾರ ಮಾಡಿಕೊಳ್ಳುವದೇ ವೀರಶೈವರ ಕರ್ತವ್ಯ. ಶರಣರ ಜೀವನವೆಲ್ಲ ಇದೇ ತೆರನಾಗಿತ್ತೆಂದು ಧಾರಾಳವಾಗಿ ಹೇಳಬಹುದು.

ಶ್ರೀ ಷಣ್ಮುಖಸ್ವಾಮಿಗಳು ಒಳ್ಳೇ ವಿರಕ್ತರು ತ್ಯಾಗಿಗಳೇ ಇದ್ದರು. ತಮ್ಮಲ್ಲಿಯೇ ಪಾರ್ವತಿಯನ್ನು ಶಿವನನ್ನು ಒಂದುಗೂಡಿಸಿ ಲಿಂಗಾಂಗ ಸಾಮರಸ ಮಾಡಿ ಹೋಗಿದ್ದು ಸರ್ವ ಶ್ರುತವಿದೆ. ಇವರಿಗೆ ಹೊರಗಿನ ಹೆಂಡತಿ ಇರಲಿಲ್ಲ. ಹೊರಗಿನ ಹೆಂಡತಿಯಿದ್ದರೂ ಇಬ್ಬರೂ ವೈರಾಗ್ಯ ಮೂರ್ತಿಗಳಾಗಿ ಲಿಂಗಾಂಗ ಸಮರಸ ಸಾಧಿಸಿ ಶಿವಯೋಗಿಗಳಾಗಬೇಕು ಹೊರತು ವಿಷಯಕೂಪದೊಳಗೆ ಬಿದ್ದು ಹಾಳಾಗಬಾರದೆಂದು ಹೇಳಿದ್ದಾರೆ.

"ಯವ್ವನದ ವಯಸ್ಸು ಒದಗಿದಲ್ಲಿ ಕಾಮಕ್ರೋಧದಿಂ ಕರಗಿ। ಮದಮತ್ಸರದಲ್ಲಿ ಮುಂದುಗೆಟ್ಟು । ನಾನಾ ವ್ಯಾಪಾರವನಂಗೀಕರಿಸಿ। ಬಂದ ಯೋನಿಯಂದರಿಯದೆ । ಉಂಡ ಮೊಲೆಯಂದರಿಯದೆ ಕಾಮ ವಿಕಾರ ತಲೆಗೇರಿ । ವಿಷಯಾತುರನಾಗಿ । ಈಗೇರನ ದೆಶೆಯಿಂದ । ಈಚಲಮರ ನಿಸ್ಸಾರವಾದಂತೆ । ಸ್ತ್ರೀಯರ ಸಂಗದಿಂದ ದೇಹದೊಳಗಣ। ಊರ್ಧ್ವ ಬಿಂದು ಜಾರಿ ಜಾರಿ ಇಳಿದು ! ಸೋರಿ ಸೋರಿ ಹೋಗಿ ದೇಹವು ನಿಸ್ಸಾರವಾಗಿ ಯವ್ವನ ಬಲಗೆಟ್ಟು । ಮುಪ್ಪಾಗಿ ಅಚೇತನ ಗೊಂಡು । ಸರ್ವಾಂಗವೆಲ್ಲವೂ ನರೆತೆರೆಗಳಿಂದ ಮುಸುಕಲು । ಪಾಟುತನ ಗಾಗಿ ಆಧಿವ್ಯಾಧಿ ವಿಪತ್ತು ರೋಗ ರುಜೆಗಳಿಂದ । ಬಹು ದುಃಖವಂ ಬಟ್ಟು ಎದೆ ಗೂಡುಗಟ್ಟಿ । ಬೆನ್ನು ಬಾಗಿ, ಕಣ್ಣು ಒಳನಟ್ಟು, ಶರೀರ ಸುಳಿತಿಟಗೊಂಡು । ಕಾಲಮೇಲೆ ಕೈಯನ್ನೂರಿ ಕೋಲವಿಡಿದು ಏಳುತ್ತ । ನಾನಾತರದ ದುಃಖಧಾವತೆಯಿಂದ । ಆತ್ಮನು ಕೆಟ್ಟು ನಷ್ಟವಾಗಿ ಹೋಯಿತು ನೋಡಾ । ಇದ ಕಂಡು ನಾನು ಅಂಜಿ ಮರಳಿ ಜನ್ಮಕ್ಕೆ ಬರಲಾರದೆ ॥ ನಿಮ್ಮ ಮರೆಹೊಕ್ಕೆನಯ್ಯಾ ಅಖಂಡೇಶ್ವರ ॥"

ಈ ವಚನದಲ್ಲಿ ಸ್ವಾಮಿಗಳು 'ಶಿವಯೋಗ ಸಾಧಿಸಲು ಲಿಂಗಾಂಗ ಸಮರಸ ಮಾಡಲು ಶಿವಪಾರ್ವತಿಯರನ್ನು ಕೂಡಿಸಲು ಸತ್ ಚಿತ್‌ಗಳನು ಕೂಡಿಸಲು ಸಾಧಕನು ಏನು ಮಾಡಬೇಕು ಹೇಗೆ ಬಾಳಬೇಕೆಂದ್ದು ಒಳ್ಳೇ ಹೃದಯಂಗಮವಾಗಿ ಹೇಳಿದ್ದಾರೆ. ವಿಧಿ ನಿಷೇಧಗಳನ್ನು ಚನ್ನಾಗಿ ವಿಶದಪಡಿಸಿದ್ದಾರೆ. ಬ್ರಹ್ಮಚರ್ಯ ಪಾಲನದಿಂದಲೇ ವೀರ್ಯ ಊರ್ಧ್ವ ಮುಖವಾಗುವದು. ಇದಾದಾಗ ಕುಂಡಲಿ ಸರ್ಪವು ಮೇಲು ಮುಖ ಮಾಡಿ ಶಿವಸಿದ್ಧ ಬ್ರಹ್ಮರಂಧ್ರದ ಕಡೆಗೆ ಸಾಗುವದೆಂದು ಹೇಳಲಾಗಿದೆ. ಇಲ್ಲವಾದರೆ ಶಿವಯೋಗವಿಲ್ಲೆಂದು ಹೇಳಿದ್ದಾರೆ. ವೀರಶೈವರು ಇದಕ

ಅರ್ಥವನ್ನು ಬಹುಜನರು ವಿಪರೀತ ಮಾಡಿ ಕೆಡುವದುಂಟು. "ಶರಣರಿಗೆಲ್ಲ ಹೆಂಡರಿದ್ದರು. ಕಾಮ ಕೇಳಿಯಲ್ಲಿ ಇದ್ದರು. ಅದನ್ನು ಲಿಂಗ ಭೋಗೋಪಭೋಗದಲ್ಲಿ ಉಪಯೋಗಿಸುತ್ತ ಇದ್ದರು. ಪ್ರಸಾದ ರೂಪದಿಂದ ಭೋಗಿಸುತ್ತಿದ್ದರು. ಶಿವಶರಣರು ಉಂಡು ಉಪವಾಸಿಗಳು, ಬಳಸಿ ಬ್ರಹ್ಮಚಾರಿಗಳು ಎಂದು ಹೇಳಿ ಸಂಸಾರದ ವಿಷಯಕೂಪದಲ್ಲೇ ತಾವೂ ಹೊರಳಾಡುತ್ತ ಅನ್ಯರನ್ನೂ ಹೊರಳಾಡಿಸಲಿಕ್ಕೆ ಹಚ್ಚಿ ಮಹಾ ಅಪರಾಧ ಮಾಡುತ್ತಿರುವರು. ಮೇಲೆ ಹೇಳಿದಂತೆ ತೋರಿಕೆಯ ಅರ್ಥ ಮಾಡಿಯೇ ಹೀಗೆ ಕೆಡುತ್ತಿರುವದು ಕಂಡುಬಂದಿದೆ. ಅಲ್ಲದೆ ನಮ್ಮ ಶ್ರೇಷ್ಠ ಶಿವಯೋಗಿ ಶರಣರ ಬೆಲೆಯನ್ನು ನಾವೇ ಕುಳಿತು ಕಡಿಮೆ ಮಾಡಲಿತ್ತಿಸಿದಂತೆ ಆಗುವದು.

## ಉಂಡು ಉಪವಾಸಿ

"ಉಂಡು ಉಪವಾಸಿ" ಉಂಡು ಉಂಡು ಭೋಗಿಸಿ ಭೋಗಿಸಿ ತಿಂದು ತಿಂದು ಉಪವಾಸ ಇರುವದು ಶಕ್ಯವಿಲ್ಲ. ಉಂಡರೆ ಹೊಟ್ಟೆ ತುಂಬುವದು. ಮಲಮೂತ್ರ ಬರುವವು. ರಕ್ತರೇತುಗಳು ಹುಟ್ಟುವವು. ಉಂಡಬಳಿಕ ಆಗಬೇಕಾದದ್ದು ಎಲ್ಲವೂ ಆಗುವದೆಂದರೆ ಉಪವಾಸ ಹೇಗೆ ಇದ್ದಂತೆ ಆಯಿತು ಹೇಳಿರಿ ನೋಡುವಾ? ಅದರಂತೆ ಬಳಸಿ ಬ್ರಹ್ಮಚಾರಿಯಂತೆ ಬಳಸಿ ಬಳಸಿ ಸೋರಿ ಸೋರಿ ಹೋಗುವದಲ್ಲವೇ? ಸೋರಿ ಹೋದ ಮೇಲೆ ಬ್ರಹ್ಮಚಾರಿಯಾಗುವದು ಹೇಗೆ? ಇವು ಒಂದಕ್ಕೊಂದು ವಿರುದ್ಧ ಕೃತಿಗಳೇ ಸರಿ. ಉಂಡರೂ ಉಪವಾಸ ಇದ್ದವನ ರೀತಿಗಳೆಲ್ಲ ಅವನಲ್ಲಿ ಇರಬೇಕು. ಬಳಸಿದರೂ ಬ್ರಹ್ಮಚಾರಿಯಾಗಿ ಇರುವವನ ರೀತಿಗಳೆಲ್ಲ ಇರಬೇಕು. ಇದು ಅಶಕ್ಯ. ಇವುಗಳ ಅರ್ಥವನು ಪಾರಮಾರ್ಥದಲ್ಲಿ ಗೂಢದಲ್ಲಿ ಇರುವದನ್ನ ಮಾಡಿದರೆ ಹೊಳೆಯುವದು. 'ಉಂಡು ಉಪವಾಸಿ' ಅಂದರೆ ಉಪವಾಸವಿದ್ದರೂ ಬಹಳ ಉಂಡವರಕಿಂತಲೂ ಸಂತೃಪ್ತನಾಗಿರುವದು. ಸದಾ ತೃಪ್ತನಾಗಿ ಶಾಂತನಾಗಿ ಇರುವನು.

## ಬಳಸಿ ಬ್ರಹ್ಮಚಾರಿ.

"ಬಳಸಿ ಬ್ರಹ್ಮಚಾರಿ" ಸ್ತ್ರೀಯರ ಕೂಡ ಮನೆಯಲ್ಲಿ ಮಠದಲ್ಲಿ ಇದ್ದರೂ ಅವಳನ್ನು ಭೋಗಿಸದೆ ಇರುವದು ಬಳಸಿ ಅಂದರೆ ಬೆಂಬತ್ತಿ

ಕೂಡಿಕೊಂಡು, ಒತ್ತಗೂಡಿ ಎರಿದು ಅರ್ಥ. ಅಂದರೆ ಇವನ ನಿಜವಾದ ಬ್ರಹ್ಮಚಾರಿತ್ವವು ಪ್ರಕಟವಾಗುವದು. ಹೆಣ್ಣಿನ ಕೂಡ ಇದ್ದರೂ ನಿರ್ವಿಷಯಿಯಾಗಿ ಇರುವದು ಬಹು ಕಠಿಣ. ಶರಣರೆಲ್ಲ ಈ ತರದವರೇ ಇದ್ದರು. ತಮ್ಮ ಹೆಂಡತಿಯ ಕೂಡ ಮನೆಯಲ್ಲಿಯೇ ಇದ್ದರು. ಸಾಧನೆಯು ಬೆಳೆಯದ ಪೂರ್ವದಲ್ಲಿ ಸಂಸಾರ ಮಾಡಿ ಕೆಲವರು ಒಂದೆರಡು ಮಕ್ಕಳನ್ನೂ ಕೂಡ ಹಡೆದಿದ್ದಾರೆ. ಹಿಂದಿನಿಂದ ಹೆಂಡತಿಗೆ ಗೆಳತಿ, ತಾಯಿ ಎಂದು ಸಂಬೋಧಿಸಿ, ಕೂಡಿಯೇ ಒಳ್ಳೇ! ನಿಷ್ಕಾಮವಾಗಿಯೇ ಇದ್ದರು. ಷಣ್ಮುಖಸ್ವಾಮಿಗಳ ಮೇಲಿನ ವಚನದ ಮರ್ಮವನ್ನು ತಿಳಿದು ನೋಡಿದಲ್ಲಿ ಹೊಳೆಯುವದು. ಕಾಮವಿಕಾರಕ್ಕೆ ಬಹು ಹಳಿದಿದ್ದಾರೆ. ಇದನ್ನು ವಿಚಾರಿಸಿ ಶಿವಯೋಗಿಗಳಾಗಬೇಕೆನ್ನುವವರು ಸರಿಯಾದ ಸರಳ ಮಾರ್ಗವನ್ನು ಹಿಡಿಯಿರಿ ಅಂದರಾಯಿತು. ನಮ್ಮಲ್ಲಿ ವಿರಕ್ತ ಪಟ್ಟದ ದೇವರು ಸನ್ಯಾಸಿಗಳು ಚನ್ನಾಗಿ ಸರಿಯಾಗಿ ಇರುವತನಕ ಪ್ರತಿಯೊಬ್ಬರು ಅವರಿಗೆ ತಕ್ಕ ಮಾನ ಮನ್ನಣೆ ಕೊಡುವರು. ಬೆಲೆ ಮಾಡ್ವುವರು. ಯಾರಾದರೂ ಕಾಮವಿಕಾರಕ್ಕೆ ಎಳಿಸಿ ಕಾಮಕೇಳಿಯಲ್ಲಿ ವಿಹರಿಸಿದರೆ ಮೊದಲಿನ ಅವರ ಸ್ಥಾನದಿಂದ ಕೆಳಗೆ ಉರುಳುವರು. ಆಗ ಯಾರೂ ಅವರಿಗೆ ಬೆಲೆ ಮಾಡುವದಿಲ್ಲ. ಮಾನ ಮರ್ಯಾದೆ ಕೊಡುವದಿಲ್ಲ. ತಿರುಗಿ ಬಡಿಗೆಯನ್ನು ಸಹ ಎತ್ತುವರು. ಕಾರಣ ಇದನ್ನೆಲ್ಲವನ್ನು ಅರಿತು ಶರಣರಾಗಬೇಕೆನ್ನುವವರು ಶಿವಯೋಗಿಗಳಾಗಬೇಕೆನ್ನುವವರು ಜಾಗ್ರತೆಯಿಂದ ನಡೆಯಬೇಕು. ಬಸವೇಶ್ವರ ವಚನಗಳಲ್ಲಿ ಒಂದೆರಡು ವಚನಗಳು ಇಂದ್ರಿಯಗಳನ್ನು ಬಳಲಿಸಬಾರದೆಂಬ ಬಗ್ಗೆ ಮಾತ್ರ ಇರುವವು. ಉಳಿದ ಯಾರ ವಚನಗಳಲ್ಲಿಯೂ ಇಂಥ ವಚನಗಳಿರುವದು ಕಂಡುಬರುವದಿಲ್ಲ. ಇದರ ಮೇಲಿಂದ ಹಿಂದಿನಿಂದ ಯಾರಾದರೂ ಕಾಮುಕರು ಈ ವಚನಗಳನ್ನು ರಚಿಸಿ ಅದರಲ್ಲಿ ಸೇರಿಸಿರಬೇಕು. ಪ್ರತಿಯೊಬ್ಬನು ವಿರಕ್ತನಿರಲಿ, ಸಂಸಾರ ಮಾಡಿ ನಿಷ್ಕಾಮ ಸಂಸಾರ ಸಾಗಿಸಿದವನು ಇರಲಿ, ಯಾವನೇ ಇರಲೊಲ್ಲನೇಕೆ ಅಂಥ ಪ್ರತಿಯೊಬ್ಬ ಶರಣನು ಪರಸ್ತ್ರೀಯ ಸಂಗ ಬೇಡೆಂದು ಹೇಳಿದ್ದಾರೆ ಇಲ್ಲಿ ಪರಸ್ತ್ರೀಯಂದರೆ ಈ ತನ್ನ ಶರೀರವೆಂಬ ಸ್ತ್ರೀಯ ಸಂಗದ ಹೊರತು ಉಳಿದ ಹೊರಗಿನ ಹೆಂಡತಿ ಮೊದಲಾದ ಸ್ತ್ರೀಯರೆಲ್ಲ ಪರಸ್ತ್ರೀಯರೆಂದು ಹೇಳಿದ್ದಾರೆ ಅವರೆಲ್ಲರ ಸಂಗವೇ ಬೇಡೆಂದು ಎಲ್ಲ ವಚನಕಾರರ ಅಭಿಪ್ರಾಯವಿರು

ವದು. ಇದರ ಬಗೆಗೆ ಬೇರೆ ಲೇಖಗಳನ್ನು ಶಿವಾನುಭವ ಮಾಸಪತ್ರಿಕೆಗಳಲ್ಲಿ ಮುಂದೆ ನೋಡಿಕೊಳ್ಳಬಹುದು.

## ಶಿವಯೋಗವು ಭಕ್ತಿಪ್ರಧಾನವು

ವೀರಶೈವರ ಶಿವಯೋಗವು ಅರ್ಥಾತ್ ಲಿಂಗಾಂಗ ಸಮರಸವು ಭಕ್ತಿಪ್ರಧಾನವಾದುದು. ಪರಮಾತ್ಮನ ಮೇಲೆ ಮಾಡುವ ದಿವ್ಯ ಪ್ರೇಮವೇ ಭಕ್ತಿ ಹೊರತು ಬೇರೆ ಇಲ್ಲ. ದಿವ್ಯ ಪ್ರೇಮದಲ್ಲಿ ಯಾವ ಕಟ್ಟು ನಿಟ್ಟು ನಿಯಮ ಕಾಯದೆ ಕಾನೂನ ಬರುವದಿಲ್ಲ. ಪ್ರೇಮದ ಹುಚ್ಚನಾದುದು. ದೇವನಲ್ಲಿ ಅಂಥ ಪ್ರೇಮವನ್ನು ನೆಲೆಗೊಳಿಸುವದು ಬಹು ಶ್ರೇಷ್ಠವೆನಿಸುವದು. *Love is God, God is Love* ಎಂಬಂತೆ ಪ್ರೇಮವೇ ದೇವನು. ಆ ದೇವನೇ ಪ್ರೇಮವು. ತನ್ನ ಇಷ್ಟದೇವರ ಮೂರ್ತಿಯ ಮೇಲೆ ಒಳ್ಳೇ ವಿಹ್ವಲವಾದ ದಿವ್ಯ ಪ್ರೇಮ ಬೇಕು ತನು ರೋಮಾಂಚಗಳಿಂದ ಕೂಡಿರಬೇಕು. ನಯನ ಆನಂದ ಶ್ರುಗಳಿಂದ ಕೂಡಿರಬೇಕು. ಪುಳಕಗಳೇಳಬೇಕು. ಕಣ್ಣೀರ ಕರೆಯುವ ಉದ್ಗಾರಗಳು ಹೃದಯದಿಂದ ಏಳಬೇಕು. ಅಶನ ವ್ಯಸನ ಹಸಿವೆ ತೃಷೆ ನಿದ್ರೆ ವಿಶ್ರಾಂತಿ ಮೊದಲಾದವುಗಳ ಪ್ರಜ್ಞೆಯು ದಿವ್ಯ ಹುಚ್ಚು ಪ್ರೇಮದಲ್ಲ ಇರುವದಿಲ್ಲ. ಅದಕ್ಕಂತೆ ಶಿವಯೋಗಕ್ಕೆ ಉಳಿದ ರಾಜಯೋಗ, ಅಷ್ಟಾಂಗಯೋಗ, ಹಠಯೋಗ, ಲಯಯೋಗಗಳ ಅವಶ್ಯಕತೆ ಇಲ್ಲೆಂದು ಹೇಳುವರು. ಇದೆಲ್ಲ ಭಕ್ತಿಯು ಉಚ್ಚ ಸ್ಥಿತಿಗೆ ಹೋಗಿ ಭಕ್ತನು ಹುಚ್ಚನಾದಾಗ ಇವುಗಳ ಅವಶ್ಯಕತೆ ಇಲ್ಲ. ಮೊದಲಿನ ಸ್ಥಿತಿಯಲ್ಲಿ ಸರಿಯಾಗಿ ಲಿಂಗಪೂಜೆಯ ಕಾಲಕ್ಕೆ ಆಸನ ಹಾಕಬೇಕು. ಶರೀರವನ್ನು ನೀಟಾಗಿ ಇರಿಸಬೇಕು. ಲಿಂಗವನ್ನು ದೃಷ್ಟಿಹಳಚದೆ ಏಕೀಕರಿಸಿ ನೋಡುತ್ತ ಕುಳಿತು ಮುದ್ರೆ ಮಾಡಬೇಕು. ಈ ಕಾಲಕ್ಕೆ ಉಸುರನ್ನು ನಿಯಂತ್ರಿಸಬೇಕು. ಸಿಕ್ಕಂತೆ ಉಸುರನ್ನು ಬಿಡಕೂಡದು. ಇವೆಲ್ಲ ಕೃತಿಗಳು ಉಳಿದ ಯೋಗಮಾರ್ಗಕ್ಕೂ ಸಂಬಂಧಿಸುವವು ಇವುಗಳನ್ನು ಮಾಡಿದರೆ ಯಾವ ದೋಷ ವಿದೆ ಹೇಳಿ ನೋಡುವಾ ?

ಶ್ರೀ ಷಣ್ಮುಖಸ್ವಾಮಿಗಳು ಆಸನಗಳು, ಬಂಧಗಳು, ಮುದ್ರೆಗಳು ಪ್ರಾಣಾಯಾಮ, ಅಷ್ಟಾಂಗಯೋಗ, ರಾಜಯೋಗ ಸಾಂಖ್ಯಯೋಗ,

ಹಠಯೋಗ, ತಾರಕಯೋಗ ಮೊದಲಾದ ವಿಷಯಗಳನ್ನು ಕುರಿತು ತಮ್ಮ ವಚನಗ್ರಂಥದಲ್ಲಿ ತಮ್ಮ ಅನುಭವಗಳನ್ನೇ ಹೇಳಿದ್ದಾರೆ. ಇವುಗಳನ್ನೇನು ಅವರು ಹಳಿದದ್ದು ಕಂಡುಬರುವದಿಲ್ಲ. ವೈರಿಗಳನ್ನು ಕೊಂದು ರಾಜ್ಯವನ್ನು ಜಯಿಸಬೇಕಾದರೆ ಯಾರೂ ಒಂದೇ ಅಸ್ತ್ರ ಶಸ್ತ್ರದಿಂದ ಯುದ್ಧ ಮಾಡುವದಿಲ್ಲ. ಹಿಂದಕ್ಕೆ ಚತುರಂಗ ಬಲವಿತ್ತು. ಈಗಂತೂ ಅಸಂಖ್ಯ ಅಸ್ತ್ರ ಶಸ್ತ್ರಗಳ ಬೇರೆ ಬೇರೆ ದಂಡುಗಳ ನೆರವಿನಿಂದ ವೈರಿಗಳನ್ನು ಕೊಂದು ಯುದ್ಧ ಮಾಡುವರು. ಅದರಂತೆ ; ಒಂದು ಶಿವಯೋಗ ಸಾಧಿಸಲಿಕ್ಕೆ ಅಥವಾ ಲಿಂಗಾಂಗ ಸಮರಸ ಮಾಡಲಿಕ್ಕೆ ಭಕ್ತಿಯೋಗವು ಪ್ರಾಧಾನ್ಯವಿದ್ದರೂ ಉಳಿದ ಯೋಗಗಳ ನೆರವು ಕೂಡ ಅಲ್ಪ ಸ್ವಲ್ಪ ಬೇಕೇಬೇಕೆಂದು ಇವರ ವಚನಗಳಿಂದ ಅನಿಸುವದು. ಭಕ್ತಿಯೋಗವು ಹೆಚ್ಚಿನದು, ಶ್ರೇಷ್ಠವಾದುದೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಇದು ಒಳ್ಳೇ ಸುಲಭ ಸರಳ ರಾಜಮಾರ್ಗವೇ ಸರಿ. ಮಾಡಿದಷ್ಟು ಭಕ್ತಿ ಪದರಲ್ಲಿ ಬೀಳುವದು. ಭಕ್ತಿಯು ತಾಯಿ ಇದ್ದಂತೆ. ಜ್ಞಾನವು ತಂದೆ ಇದ್ದಂತೆ. ತಾಯಿ ನಮ್ಮನ್ನು ಸುರಕ್ಷಿತ ಮುಟ್ಟಿಸಬಲ್ಲಳು. ಇದು ಬೆಕ್ಕಿನ ಮರಿಯ ಯೋಗವೆನ್ನುವರು. ಜ್ಞಾನವು ಮಂಗನ ಮರಿಯ ಯೋಗವಿರುವದು. ಭಕ್ತಿಯೋಗವು ಸರ್ವ ಭಾರವು ಪರಮಾತ್ಮನ ಮೇಲೆ ಹಾಕುವದೇ ಆಗಿದೆ. ಆದರೆ ಅವನಿಗೆ ಅರ್ಪಣ ಮಾಡಿ, ನವವಿಧಭಕ್ತಿಯಿಂದ ಪಂಚ ಭಾವಗಳಿಂದ ಅವನನ್ನು ಪ್ರೀತಿಸುವದರಿಂದ ಅವನು ಭಕ್ತನ ಸರ್ವ ಭಾರವನ್ನು ತನ್ನ ಮೈಮೇಲೆ ಹೊತ್ತುಕೊಳ್ಳುವನು. ನಮ್ಮ ಯಾವತ್ತೂ ಯೋಗಕ್ಷೇಮಗಳನ್ನು ಆತನೇ ನೋಡಿಕೊಳ್ಳುವನು. ಅದಕ್ಕೆ ಇದು ಬಲು ಸರಳ ಮಾರ್ಗವಾಗಿರುವದು.

ತಂದೆ ನೀವಯ್ಯ ಎನಗೆ । ತಾಯಿ ನೀವಯ್ಯ ಎನಗೆ । ಗತಿ ನೀವಯ್ಯ ಎನಗೆ । ಸಕಲ ಚೈತನ್ಯವು ನೀವಯ್ಯ ಎನಗೆ । ಅಖಂಡೇಶ್ವರ ನೀವೆನಗೆ ದಿಕ್ಕಿಲ್ಲದೆ ಮತ್ತಾರು ಇಲ್ಲವಯ್ಯ ಎನಗೆ ॥ ಎನ್ನ ಕರಣೇಂದ್ರಿಯಗಳು ಚೇಷ್ಟಿಸಿದವೆಂದರೆ ನಿಮ್ಮ ಚೇತನದಿಂದಲ್ಲದೆ ಬೇರೆ ಅದಕ್ಕೆ ಚೇತನವುಂಟೇನಯ್ಯ । ಸೂತ್ರದ ಬೊಂಬೆಯಂತೆ ನೀವಾಡಿಸಿದಡೆ ನಾನಾಡುತಿರ್ದೆನಯ್ಯ ಅಖಂಡೇಶ್ವರ ॥

ದಶೇಂದ್ರಿಯಗಳಲ್ಲಿ ದಶಲಿಂಗಗಳಾಗಿ ಬಂದು ನೆಲಿಸಿ ನಿಮ್ಮಲ್ಲಿ ಸಮರಸವಾಗಿ ನಾನು ನೀನೆಂಬುವದಕ್ಕೆ ಭಿನ್ನಭಾವವಳಿದ ಸದ್ಭಕ್ತನ

ಮಾಡೆಂದು ದೇವರಿಗೆ ಬೇಡಿಕೊಂಡಿದ್ದಾರೆ. "ಎನಗೆ ಆವ ಫಲಪದವಿ ಬೇಡ। ನಿಮ್ಮ ಶ್ರೀಚರಣವನೊಡಗೂಡುವ ಅವಿರಳ ಸಮರಸ ಭಕ್ತಿ ಪದವ ಕರುಣಿಸಿ ಮರ್ತ್ಯದತ್ತ ಮರಳಿ ಬಾರದಂತೆ ಮಾಡಯ್ಯ ಅಖಂಡೇಶ್ವರ."

"ಸಂಗನ ಬಸವಣ್ಣನಂತೆ ಸದ್ಭಕ್ತನೆಂದೆನಿಸಯ್ಯ। ಮಡಿವಾಳ ಮಾಚಯ್ಯನಂತೆ ವೀರಮಾಹೇಶ್ವರನೆನಿಸಯ್ಯ। ಉರಿಲಿಂಗಪೆದ್ದಿಯಂತೆ ಉರುತರ ಶರಣನೆಂದೆನಿಸಯ್ಯ। ನಿಜಗುಣಯೋಗಿಗಳಂತೆ ಪರಮಾರ್ಥ ಪೂಢನೆನಿಸಯ್ಯ। ಅಕ್ಕಮಹಾದೇವಿಯಂತೆ ನಿಷ್ಕಾಮಿಯೆಂದೆನಿಸಯ್ಯ। ಪ್ರಭುದೇವನಂತೆ ಪರಿಪೂರ್ಣನೆಂದೆನಿಸಯ್ಯ। ಇಂತಿವರ ಕಾರುಣ್ಯದ ನಿಲವನೆ ಕರುಣಿಸಿ ನಿಮ್ಮ ಗಣಂಗಳ ಸಮ್ಮೇಳದಲ್ಲಿರಿಸಿ ಸಲುಹಯ್ಯ ಅಖಂಡೇಶ್ವರ."

ಗುರುಲಿಂಗ ಜಂಗಮರಲ್ಲಿ ಭಯ, ಭಕ್ತಿ, ಕಿಂಕರ ವಾಣಿ, ವಿನಯ ನುಡಿ, ನಮಸ್ಕಾರ। ಕ್ಷಮೆ, ದಮೆ, ಸೈರಣೆ, ಸಮಾಧಾನ, ಶಾಂತಿ, ದಯಾಗುಣ ವಿಶ್ವಾಸ ನಂಬುಗೆ। ನಿಷ್ಠೆ ಸಮರಸವನುಳ್ಳ ಸದ್ಭಕ್ತರ ತೋರಿಸಿ ಬದುಕಿಸಯ್ಯ ಎನ್ನ ಅಖಂಡೇಶ್ವರ."

" ಫಲಪದವಿಯಾಶೆಯ ಮಾಡಲಾಗದು ಜಂಗಮಾರ್ಚನೆಯ ಮಾಡಿ। ಅದೇನು ಕಾರಣವೆಂದರೆ ಬಯಕೆಯ ಭಕ್ತಿಯನ್ನು ಪೂರ್ವ ಪುರಾತನರು ಮೆಚ್ಚರು। ನಮ್ಮ ಅಖಂಡೇಶ್ವರ ದೇವನು ಹಂಗಿನ ಭಕ್ತನಲ್ಲ ನೋಡಾ."

ಇವರ ಭಕ್ತಿಯ ವಚನಗಳನ್ನು ಆಯ್ದುಕೊಂಡಿದೆ. ಇದರಲ್ಲಿ ನಿಷ್ಕಾಮ ಭಕ್ತಿ, ಸರ್ವ ಸಮರ್ಪಣ ಭಕ್ತಿ, ಪರಮಾತ್ಮನೇ ಸರ್ವಸ್ವ, ಸರ್ವ ಇಂದ್ರಿಯಗಳಲ್ಲಿ ಪರಮಾತ್ಮನ ನೆನಹು, ಪ್ರತಿಯೊಂದು ಹಿರಿಭಕ್ತರ ಒಂದೊಂದು ಗುಣವ ಕರುಣಿಸೆಂದು ಆಲಾಪ ಮಾಡಿದ್ದು. ಭಕ್ತರಲ್ಲಿ ಅವಶ್ಯ ಬೇಕಾದ ಗುಣ ಮೊದಲಾದವುಗಳನ್ನು ಈ ವಚನಗಳಲ್ಲಿ ಬಹು ಹೃದಯಂಗಮವಾಗಿ ಸ್ವಲ್ಪದರಲ್ಲಿ ಬಣ್ಣಿಸಲಾಗಿದೆ. ಇವೆಲ್ಲ ಪ್ರತಿಯೊಬ್ಬ ಸದ್ಭಕ್ತನಲ್ಲಿ ವೀರ್ಯದಿಂದ ಓಜಸ್ಸು ಓಜಸ್ಸಿನಿಂದ ತೇಜಸ್ಸು

ಒಂದೊಂದಾಗಿ ಪ್ರಕಟವಾಗುವವು. ಈ ಓಜಸ್ಸೆಲ್ಲ ಮೆದುಳಿನಲ್ಲಿ ಸಂಗ್ರಹ ವಾಗುವದು. ಆಗ ಮೆದುಳಿನ ಗ್ರಂಥಿಗಳೆಲ್ಲ ಒಡೆದು ಹಾರಿಹೋಗುವದ ರಿಂದ ಮೆದುಳಿನ ಅಜ್ಞಾನ ಅಂಶಗಳೆಲ್ಲ ವಾಯುವಾಗುವವು. ಆಗ ತೇಜಸ್ಸು ಪ್ರಕಾಶವಾಗಿ ಪರಿಣಮಿಸುವದು. ಆಗ ಅವನ ಮುಖದಿಂದ ಜ್ಞಾನದ ಝುರಿಯೇ ಹೊರಹೊಮ್ಮುವದು. ಅವನ ಬರಹಗಳೆಲ್ಲ ಮಾನ್ಯ ವಾಗುವವು ನುಡಿದದ್ದೆಲ್ಲ ವೇದವಾಕ್ಯವಾಗುವದು. ಆಗ ಇವನ ಭಕ್ತಿಯು ತುಟ್ಟತುದಿಯಲ್ಲಿ ಇವನಿಗೆ ಕೆಳಗಿನಂತೆ ಜ್ಞಾನವಾಗುವದು.

"ಸತ್ತು ಹುಟ್ಟುವನಲ್ಲ ನೋಡಾ ಮಹೇಶ್ವರನು । ಹುಟ್ಟಿ ಸಾವನಲ್ಲ ನೋಡಾ ಮಹೇಶ್ವರನು । ಈ ಲೋಕದ ಬಯಕೆಯ ಬಯಸುವವನಲ್ಲ ನೋಡಾ ಮಹೇಶ್ವರನು । ಪರಲೋಕದ ಮೋಕ್ಷವ ನೆನೆಸುವನಲ್ಲ ನೋಡಾ ಮಹೇಶ್ವರನು । ಇಹ ಪರವ ಹೊದ್ದ ಧೀರನು ಹಿಂದು ಮುಂದೆಂಬ ದ್ವಂದ್ವ ಕರ್ಮಂಗಳ ಮೀರಿದ । ವೀರ ಮಾಹೇಶ್ವರಿಂಗೆ ನಮೋ ನಮೋ ಅಖಂಡೇಶ್ವರ."

"ಎನ್ನ ಜನನ ಮರಣಂಗಳು ಜಾರಿ ಹೋದವಯ್ಯಾ । ನಿಮ್ಮ ನೆನ ಹಿನ ಬಲದಿಂದ । ಕಾಲಕಲ್ಪಿತಗಳು ಕರಗಿ ಹೋದವಯ್ಯ ನಿಮ್ಮ ನೆನ ಹಿನ ಬಲದಿಂದ । ಎನ್ನ ಪೂರ್ಣ ಪಾಪಗಳೆಲ್ಲ ಪಲ್ಲಟವಾಗಿ ಹೋದ ವಯ್ಯ ನಿಮ್ಮ ನೆನಹಿನ ಬಲದಿಂದ । ಎನ್ನ ಪಂಚೇಂದ್ರಿಯ ಸಪ್ತ ವ್ಯಸನಗಳೆಂಬ ವರ್ಣಾಶ್ರಮ ಕುಲಗೋತ್ರಂಗಳೆಂಬ ತನ್ನ ಪೂರ್ವಾಶ್ರಯ ಪದ್ಧತಿಯು ಮರೆಯಾಯಿತು । ಇಂದಿಂಗೆ ಬೇಕು ನಾಳಿಂಗೆ ಬೇಕೆಂಬ ಆಶೆಯ ಕಳೆದೆನಯ್ಯ ನಿಮ್ಮ ನೆನಹಿನ ಬಲದಿಂದ । ಲಿಂಗಗಳೆಲ್ಲ ನಷ್ಟ ವಾದವಯ್ಯ ನಿಮ್ಮ ನೆನಹಿನ ಬಲದಿಂದ । ಎನ್ನ ತನು ಕರಣೇಂದ್ರಿಯ ಗಳೆಲ್ಲ ತರಹರ ವಾದವಯ್ಯ ನಿಮ್ಮ ನೆನಹಿನ ಬಲದಿಂದ । ಎನ್ನ ಮನ ಪ್ರಾಣ ಭಾವಂಗಳೆಲ್ಲ ಬಯಲಾದವಯ್ಯ ನಿಮ್ಮ ನೆನಹಿನ ಬಲದಿಂದ ಅಖಂಡೇಶ್ವರ."

"ಪರಾತ್ಪರವಾದ ಪರಶಿವ ಪರಬ್ರಹ್ಮವನೊಡಗೂಡುವ ಅವಿರಳ ಸಮರಸ ಭಕ್ತಿ ಇಲ್ಲದೆ । ನಾನು ಬ್ರಹ್ಮ ತಾನು ಬ್ರಹ್ಮವೆಂದು ಪರಬ್ರಹ್ಮದ ನಿಲವನರಿಯದೆ ಕೆಟ್ಟುಹೋದರು ಕಾಣಾ ಅಖಂಡೇಶ್ವರ."

ಜಗದ ಒಳಹೊರಗೆಲ್ಲ ತೆರಹಿಲ್ಲದೆ ಸಂಭ್ರಮಿಸಿ ತೋರದಿರ್ಪ ಪರ ವಸ್ತುವನು। ಅಜ್ಞಾನಿನಿ ಬಿಡುವದಕ್ಕೆ ಇಂಬುಂಟೇನೋ ಮರುಳೇ, ಇಂತೀ ಅಖಂಡವಾದ ಪರಿಪೂರ್ಣ ಪರಬ್ರಹ್ಮನ ನಿಲವನರಿಯದೆ ಖಂಡಿತ ಬುದ್ಧಿಯಿಂದ ಕಲ್ಪಿಸಿ। ಪೂಜಿಸಿ ಕರ್ಮ ಬಲೆಯಲ್ಲಿ ಸಿಲ್ಕಿ ಕಾಲಂಗೆ ಗುರಿಯಾಗಿ ಹೋದವರ ಕಂಡು ಬೆರಗಾದೆನಯ್ಯಾ ಅಖಂಡೇಶ್ವರ."

"ಮಾಡಿದ ಮಾಟವ ಮರೆದೆನಯ್ಯ ನಿಮ್ಮೊಳಗೆ। ನೋಡಿದ ನೋಟವ ಮರೆದೆನಯ್ಯ ನಿಮ್ಮೊಳಗೆ। ಕೂಡಿದ ಕೂಟವ ಮರೆದೆನಯ್ಯ ನಿಮ್ಮೊಳಗೆ। ಕರ್ಪೂರ ಗಿರಿ ಉರಿದಂತಾಯಿತಯ್ಯ ನಿಮ್ಮೊಳಗೆ ಅಖಂಡೇಶ್ವರ."

ಜ್ಞಾನಿಯ ನಿಲಯವು ಎಂತಹದು? ಹೇಗೆ ಎಂದು ಹೇಳಿದ್ದರೆ? ಅದರ ಸ್ಥಿತಿಗತಿ ರೀತಿಗಳನ್ನು ಚನ್ನಾಗಿ ಹೊಗಳಿದ್ದಾರೆ. ವೀರಮಾಹೇಶ್ವರನ ಭಕ್ತ ಶ್ರೇಷ್ಠ ವೀರ ಜ್ಞಾನಿಯ ಇರುವಿಕೆಯನ್ನು ಆಗು ಹೋಗುಗಳನ್ನು ಚನ್ನಾಗಿ ಬಣ್ಣಿಸಿದ್ದಾನೆ. ಭಕ್ತಿಯು ಮಾಡಿ ಪರಮಾತ್ಮನ ಧ್ಯಾನಮಾಡಿದ ತರುವಾಯ ಅವನಲ್ಲಿ ಏನು ಹೊಸದಾಗಿ ಬಂದಿತೆಂದು ಚನ್ನಾಗಿ ವಿಶದಪಡಿಸಿರುವರು. ಅಲ್ಲದೆ ಬಾಯಿ ಬ್ರಹ್ಮವನು ನುಡಿಯುವವರನ್ನು ಚನ್ನಾಗಿ ಖಂಡಿಸಿದ್ದಾರೆ. ಹೇಗೆ ಆದರೆ ಪರಬ್ರಹ್ಮವ ನೋಡುವರೆಂದು ಸಹ ವಿವರಿಸಿದ್ದಾರೆ. ಇದು ಎರಡನೇ ಸ್ಥಲದಲ್ಲಿ ಬರುವ ಜ್ಞಾನ ಭಾಂಡಾರವು. ಷಣ್ಮುಖಸ್ವಾಮಿಗಳು ತಮ್ಮ ಸ್ಥಿತಿಯನ್ನು ಚನ್ನಾಗಿ ವಿವರಿಸಿದ್ದಾರೆ. ಅಲ್ಲದೆ ಮೋಕ್ಷವನ್ನು ಕೂಡ ಬಯಸುವದು ದ್ವಂದ್ವದಲ್ಲಿಯೇ ಬರುವದೆಂದು ತಿಳಿದಿದ್ದಾರೆ. ಅದರಂತೆ ಇವರು ಇದ್ದರು. ಸರ್ವ ಸೂತಗಳನ್ನು ಹರಿದೊಗೆದ ವೀರಮಹೇಶ್ವರರು.

ಮುಂದೆ ಸಾಗುವದು

---

# ಭಕ್ತಿಮಾರ್ಗ

[ ಲೇಖಕರು:- ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ. ]



ಇಂದು ಜಗತ್ತು ಭಕ್ತಿಮಾರ್ಗವನ್ನರಿಯದೆ ಅನೇಕ ವಿಚಾರಗಳ ತೆರೆಯಲ್ಲಿ ಸಿಲುಕಿ ನಾಸ್ತಿಕತ್ವಕ್ಕೆ ಸಿಲುಕಹತ್ತಿದೆ. ಚಂದ್ರ, ಸೂರ್ಯ, ಮಂಗಳಲೋಕಗಳನ್ನು ಅಂಗಳಕೇರಿಗಳನ್ನಾಗಿ ಮಾಡಿಕೊಳ್ಳಲೆತ್ನಿಸಿ, ಅನೇಕೋ ಹೀನಕೃತ್ಯಗಳನ್ನೆಸಗಿಯೂ ತಾನೇ ಪರಮಾತ್ಮನೆಂದೆನಿಸಿಕೊಳ್ಳಲು ಸಾಗಿದೆ. ಜಗದಲ್ಲಿ ಪರಮಾತ್ಮನಿಲ್ಲ, ಸರ್ವವೂ ವಿಜ್ಞಾನಮಯದಿಂದಲೇ ಜಗತ್ತು ಚಲಿಸುತ್ತಿದೆಯೆಂದು ಹೇಳುವವರು ಆ ವಿಜ್ಞಾನಶಕ್ತಿಯನ್ನಾದರೂ ಜಗತ್ತಿಗಿತ್ತವರಾರು ಎಂಬ ಪ್ರಶ್ನೆಯನ್ನೆತ್ತಲು ಹೇಳಲಸಾಧ್ಯವಾಗಿದೆ ವಿಜ್ಞಾನಿಗಳಿಗೆ.

ಪರಮಾತ್ಮನ ದಿವ್ಯ ಶಕ್ತಿಯು ಜಗತ್ತಿನಲ್ಲಿ ಅದೃಶ್ಯತೆಯಲ್ಲಿದೆ. ಪರಮಾತ್ಮನು ನಿರಾಕಾರಿಯೂ ಅಹುದು. ಆಕಾರಿಯೂ ಅಹುದು. ಆತನು ಅನೇಕೋ ರೂಪು ತಾಳಿದುದು ನಮ್ಮ ಪುರಾತನ ಸಾಹಿತ್ಯಗಳಲ್ಲಿ ಕಂಡು ಬರುತ್ತವೆ. ಆದರೆ ಆ ಸಾಹಿತ್ಯಗಳಿಗೆ ಇಂದು ಮನ್ನಣೆ, ಗೌರವಗಳು ಸಿಗುವದು ದುಸ್ತರವಾಗಿದೆ. ಅಂಥ ಸಾಹಿತ್ಯಾಭಿಮಾನಿಗಳೂ ಕೂಡ ಪರಮಾತ್ಮನ ಆ ಅನೇಕೋ ರೂಪುಗಳಲ್ಲಿ ಒಂದೊಂದು ರೂಪನ್ನು ಭಕ್ತಿಯಿಂದ ಪೂಜಿಸಿ, ಆ ಪರಮಾತ್ಮನ ಭಕ್ತಿಗೆ ಪಾತ್ರರಾದ ಅನೇಕ ಸತ್ಪುರುಷರ ಉದಾಹರಣೆ ಕೊಡುತ್ತ, ಜನತೆಯ ಮನವನ್ನು ತಮ್ಮ ಮನಕ್ಕೆ ಏಕೀಕರಿಸಿಕೊಂಡು ಪರಮಾತ್ಮನ ಅನೇಕೋ ರೂಪಗಳನ್ನರಿಯದೆ ಆ ಪರಮಾತ್ಮನನ್ನು ಧರ್ಮದಲ್ಲಿ ತೆಗೆದುಕೊಂಡು ದೀಕ್ಷೆಕೊಟ್ಟವರಂತೆ ಆಯಾ ಧರ್ಮದವರು ಪರಮಾತ್ಮನ ಆಯಾ ರೂಪುಗಳನ್ನಾರಿಸಿಕೊಂಡ ಆ ರೂಪವನ್ನೇ ಪೂಜಿಸುವದು ಹಾಗು ತಮ್ಮ ಜನಾಂಗಕ್ಕೆ ಆ ಪರಮಾತ್ಮನಿಗಿತ್ತ ನಾಮಕರಣವನ್ನು ಇಡುವದು ಇಂದಿಗೂ ಸಹ ಅಚ್ಚಳಿಯದೆ ಬಂದಿದೆ. ಆದರೆ ಆ ಪ್ರಕಾರವಾದ ಭಕ್ತಿಗೂ ಇಂದು ಅಳವುಂಟಾಗಿರುವದು ಎರಡು ನೂರು ವರುಷಗಳಿಂದ ಒಂದೇ ಸವನೆ ಪಾಶ್ಚಿಮಾತ್ಯದ ಗಾಳಿಯು ಬೀಸಿದ

ಪರಿಣಾಮವಾಗಿದೆ. ಆ ಗಾಳಿಯು ನಮ್ಮ ದೇಶದ ಅಪಾರ ಸಂಪತ್ತನ್ನು ಕೊಚ್ಚಿಕೊಂಡು ಒಯ್ದಿದೆ. ಆ ಸಂಪತ್ತು ಸಾಮಾನ್ಯ ಸಂಪತ್ತಲ್ಲ. ಮರಳಿ ಬಾರದ ಸಂಪತ್ತಾಗಿದೆ. ದ್ರವ್ಯಗಳನ್ನು ಕೊಚ್ಚಿಕೊಂಡೊಯ್ದಿದ್ದರೆ ಮರಳಿ ಪ್ರಾಪ್ತಿಪಡಿಸುವ ಧೈರ್ಯ ನಮ್ಮಲ್ಲಿತ್ತು. ಆದರೆ ನಮ್ಮ ಸಾಂಸ್ಕೃತಿಯೆಂಬ ದಿವ್ಯ ಹಾಗು ಪಾವಿತ್ರ್ಯಮಯವಾದ ಸಂಪತ್ತನ್ನೇ ಕೊಚ್ಚಿಕೊಂಡು ಒಯ್ದಿದೆ. ಇಂತು ಹಾಸಿಗೀಡಾಗಿ ನಮ್ಮ ಭರತಖಂಡವು ಬಳಲಿಕೆಯಲ್ಲಿದೆ. ನಮ್ಮ ನಿಜವಾದ ಧ್ಯೇಯವಾವುದು ಹಾಗು ಆ ಧ್ಯೇಯವನ್ನು ಹೇಗೆ ಸಾಧಿಸಿಕೊಳ್ಳಬೇಕೆಂಬುದನ್ನು ತಿಳಿಯದೆ ಅಸಾಧ್ಯತೆಯಲ್ಲಿ ಸಿಲುಕಿದೆ. ಇಷ್ಟೇ ಅಲ್ಲ, ಧರ್ಮದ ಮರ್ಮವನ್ನೂ ತಿಳಿಯದಾಗಿದೆ. ಅಧರ್ಮದಿಂದ ನಡೆದಿದೆ. ಧರ್ಮವೇ ಜೀವವೆಂದರಿವವರು ಇಂದು ಕೊಚಿತ. ಆದಿಕಾಲದ ಪುರಾಣೇತಿಹಾಸಗಳಲ್ಲಿಯ ಕತೆಗಳು ಕಟ್ಟುಕತೆಗಳೆನ್ನುವಷ್ಟು ಕೀಳುಮಟ್ಟಿಗಿಳಿದಿದೆ ಇಂದಿನ ಜನಾಂಗ. ಇದಕ್ಕೆ ಕಾರಣವೇನೆಂದರೆ ಭಕ್ತಿಯ ನಿಜಮಾರ್ಗವರಿಯದುದೇ ಕಾರಣವೆನ್ನಬಹುದು.

ಪರಮಾತ್ಮನ ಬಗ್ಗೆ ನಂಬುಗೆಯುಳ್ಳ ಹಲವು ಜನ ಆತನನ್ನು ಸಾಕ್ಷಾತ್ಕರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಆದರೆ ಕೊನೆಗೆ ನಿರಾಶರಾಗಿ ದೇವನಿಲ್ಲವೆಂದು ಭಾವಿಸಿ ನಾಸ್ತಿಕರಾಗುತ್ತಾರೆ. ಇದಕ್ಕೆ ಹಲವಾರು ಉದಾಹರಣೆಗಳನ್ನು ನಾವು ಆಗಾಗ್ಗೆ ನೋಡುತ್ತಿರುವೆವು. ಹಾಗು ಕೇಳುತ್ತಿರುವೆವು. ಆ ಘಟನೆಗಳಿಗೆ ಆ ಜನಗಳೇ ಕಾರಣರೆಂಬ ಮನವರಿಕೆಯಾಗದೇ ಇರದು. ಆ ಹಲವು ಉದಾಹರಣೆಗಳನ್ನು ಇಲ್ಲಿ ತಿಳಿಯಬಹುದಾಗಿದೆ.

ಪರಮಾತ್ಮನ ಜಗತ್ತಿನಲ್ಲಿ ಯಾವದಕ್ಕೂ ಕೊರತೆ ಇಲ್ಲ. ಪರಮಾತ್ಮನು ಜಗತ್ತಿಗೆ ಕೊಡಬೇಕಾದ ಮಳೆ ಬೆಳೆ ಎಷ್ಟು ಕೊಡಬೇಕೋ ಅಷ್ಟನ್ನು ಕೊಟ್ಟೇ ಕೊಡುವನು. ಆದರೆ ಅನೇಕರು ಆಹಾರಕ್ಕಾಗಿ ಏಕೆ ಬಳಲುತ್ತಿರುವರು ಎಂಬ ಪ್ರಶ್ನೆಯು ಇಲ್ಲಿ ಉದ್ಭವಿಸದೇ ಇರದು. ಇದಕ್ಕೂ ಸಹ ಮಾನವನೇ ಕಾರಣನೆಂದು ನಿಃಸಂಶಯವಾಗಿ ಹೇಳಬಹುದು. ನಾವು ನೋಡುತ್ತಿರುವ ಅನೇಕ ಪಶುಪಕ್ಷಿಗಳು ಆಹಾರಕ್ಕಾಗಿ ಬಹು ಆಯಾಸ ಪಟ್ಟುಕೊಳ್ಳುವದಿಲ್ಲ. ಆದರೆ ಮಾನವನು ಮಾನವನಾಗಿಯೂ ಇನ್ನಿತರ ಮಾನವರನ್ನು ತೂತ್ತೊಯ್ದು ಕಷ್ಟಪಟ್ಟು ಹೊಟ್ಟೆ ಹೊರೆದುಕೊಳ್ಳುವ

ದನ್ನು ನಾವು ಅನೇಕೋ ಗಿರಿಗಂಹರಗಳ ದೇವಸ್ಥಾನದಲ್ಲಿ ಹಾಗು ದೊಡ ದೊಡ್ಡ ಪಟ್ಟಣಗಳಲ್ಲಿ ರಿಕ್ಷಾ ಎಂಬ ಗಾಡಿಯಲ್ಲಿ ಜನರನ್ನು ಕುಳ್ಳಿರಿಸಿ ಎಳೆಯುತ್ತ ತನ್ನ ಶಕ್ತಿಮೀರಿ ಬೆವರು ಸುರಿಸಿ ದುಡಿಯುವದು ಗೇಣು ಹೊಟ್ಟೆಗಾಗಿ. ಹೀಗೆ ಒಬ್ಬನು ಕಷ್ಟಪಡುವದು, ಇನ್ನೊಬ್ಬನು ಸುಖ ಭೋಗಿಸುವದು ಕೇವಲ ಸ್ವಾರ್ಥತನದಿಂದ ಮಾತ್ರ. ಇಂತಹ ಸ್ವಾರ್ಥ ತನದಿಂದಲೇ ಇಂತಹ ದುಃಖವನ್ನು ಮಾನವನು ಅನುಭವಿಸಬೇಕಾಗುತ್ತದೆ. ಮಾನವನ ಮನಸ್ಸಿಗೆ ತೃಪ್ತಿಯಿಲ್ಲ. ಇಂದು ಲಕ್ಷಾಧಿಪತಿಯಿದ್ದವನು ಸಹ ಕಷ್ಟಪಡುತ್ತಿರುವದನ್ನು ನಾವು ನೋಡುತ್ತಿದ್ದೇವೆ ಇದಕ್ಕೆ ಕಾರಣವೇ ನೆಂದರೆ ಕೋಟ್ಯಾಧಿಪತಿಯಾಗಬೇಕೆಂದು ಮಾತ್ರ. ಹೀಗೆಯೇ ಅನು ಕ್ರಮವಾಗಿ ಅಂಕಿಯು ಮುಂದೆ ಹೆಚ್ಚು ಹೆಚ್ಚು ಸೊನ್ನೆಗಳಿಗಾಗಿ ಕಷ್ಟ ಪಡುವನು. ಕೊನೆಗೆ ಎಲ್ಲವೂ ಸೊನ್ನೆಗಳಾದಲ್ಲಿ ಎದೆಯೊಡೆದು ಪ್ರಾಣವೂ ಶೂನ್ಯವಾದವರನ್ನು ನೋಡದ ಜನರಿಲ್ಲ. ಇದರಮೇಲಿಂದ ತಿಳಿದು ಬರುವದೇನೆಂದರೆ ಆಶೆಯಿಂದಲೇ ಮಾನವನಿಗೆ ದುಃಖ ಪ್ರಾಪ್ತಿಯಾಗು ವದೇ ವಿನಃ ಪರಮಾತ್ಮನು ಇದಕ್ಕೆ ಸಂಬಂಧವಿಲ್ಲ. ಆತನನ್ನು ಇಂತಹರು ಭಕ್ತಿಯಿಂದ ಒಲಿಸಿಕೊಳ್ಳಲು ಸಾಧ್ಯವಿಲ್ಲ. ಹಾಗು ಅಂಥ ಭಕ್ತಿಯು ಭಕ್ತಿಯೂ ಅಲ್ಲ.

ಇನ್ನು ಹಲವರು ಹಣವನ್ನು ಅಪಾರವಾಗಿ ಗಳಿಸಬೇಕೆಂಬ ದುರ್ಬುದ್ಧಿಯಿಂದ ಹಲವಾರು ಹೀನ ಕೃತ್ಯಗಳನ್ನು ಕೈಕೊಂಡು ಬಳಿಕ ಹಲವಾರು ಕಷ್ಟಗಳನ್ನು ಅನುಭವಿಸಿ ಕಾಶಿ, ಕೇದಾರ, ಹರಿದ್ವಾರ, ಮಥುರಾ, ಗೋಕರ್ಣ ಮುಂತಾದ ಕ್ಷೇತ್ರಗಳಿಗೆ ಹೋಗುವದರಿಂದ ತಮ್ಮ ಪಾಪ ಪರಿಹಾರವಾಗಿ ಸುಖೋಪಭೋಗಿಗಳಾಗುವೆವೆಂದರಿದು ತಾವು ಕೂಡಹಾಕಿದ ಹಣವನ್ನು ರೇಲ್ವೆಗಾಗಿ ಸೂರೆಗೊಳಿಸಿ, ಅನೇಕ ಕ್ಷೇತ್ರ ಗಳನ್ನು ಸಂದರ್ಶಿಸುವರು. ಆದರೆ ಆ ಕ್ಷೇತ್ರದ ದೇವಾಲಯದ ಎಡಬಲ ಕುಳಿತ ಭಿಕ್ಷುಕರಿಗೆ ದಾನಮಾಡಲು ಸಹ ಹಣ ಸಾಲದೆ, ಹಾಗು ಹೊಟ್ಟೆಗೆ ಅನ್ನವಿಲ್ಲದೆ, ಮರಳಿ ಸ್ವದೇಶಕ್ಕೆ ಬರಲು ಹಣವಿಲ್ಲದೆ ಮಕ್ಕಳುಮರಿಗಳ, ಬಂಧುಬಳಗಗಳ ನೆನಪಾಗಿ ಹಾತೊರೆದು ಬಿನ್‌ಟಿಕೆಟ್ಟನಿಂದ ರೇಲ್ವೆಯಲ್ಲಿ ಕುಳಿತು ಟಿಕೆಟ್ ಇನಸ್ಪೆಕ್ಟರರಿಂದ ಬಂಧಿತರಾಗಿ ಮತ್ತಷ್ಟು ಕಷ್ಟಪಡುತ್ತ "ದೇವಾ, ನೀನಿದ್ದರೆ ನನಗೆ ಹೀಗೇಕಾಗುತ್ತಿತ್ತು" ಎಂದು ಬಳಲಿ, ತಮ್ಮ ವೆಚ್ಚವಾದ ಹಣ ಹಾಗು ಕೊಡಬೇಕಾದ ದಂಡಗಳಿಗೆ ಗೋಳಾಡಿ

ನಾಸ್ತಿಕರಾದವರು ಎಷ್ಟೋ ಜನರಿದ್ದಾರೆ. ಮತ್ತೆ ಹಲವರು ಪರಮಾತ್ಮನ ಸಾನ್ನಿಧ್ಯಕ್ಕಾಗಿ ದೇವಮಂದಿರದಲ್ಲಿ ನಿತ್ಯಲೂ ಭಜನೆ ಪೂಜಾದಿಗಳನ್ನು ಮಾಡಿ ದೇವನು ಸಾಕ್ಷಾತ್ಕಾರಿಯಾಗದಕ್ಕಾಗಿ ಹಿಂದಿನ ಪುರಾಣಾದಿ ಸಾಹಿತ್ಯಗಳನ್ನು ಹಳಿದವರೂ ಉಂಟು. ಇನ್ನು ಹಲವರು ಪರಮಾತ್ಮನು ಸಾಕ್ಷಾತ್ಕಾರಿಯಾಗದಿದ್ದರೆ ಪ್ರಾಣವನ್ನು ಆತನಿಗೆ ಅರ್ಪಿಸುವೆನೆಂದು ದುರ್ವಾರಣಕ್ಕೊಳಗಾದವರೂ ಉಂಟು. ಇಂಥ ಭಕ್ತಿಯು ಭಕ್ತಿಯಲ್ಲ. ಭಕ್ತಿಯು ಅಕ್ಕ ಮಹಾದೇವಿಯ ಭಕ್ತಿಯಂತೆ ನಿಷ್ಕಾಮಮಯ ಭಕ್ತಿಯಾಗಿರಬೇಕು. ಆವಾಗ್ಗೆ ಮಾತ್ರ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯ. ಮಹಾದೇವಿಯಕ್ಕನು ತನ್ನ ವಚನವೊಂದರಲ್ಲಿ ಪರಮಾತ್ಮನಿಗೆ ಹೇಳಿರುವದೇನೆಂದರೆ "ಅಯ್ಯಾ ನೀ ಒಲಿದರೆ ಒಲಿ, ಒಲಿಯದಿದ್ದೊಡೆ ಮಾಣು. ನಾ ನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯಾ!" ಇದೊಂದೇ ವಾಕ್ಯದಿಂದ ಮಹಾದೇವಿಯಕ್ಕನಲ್ಲಿದ್ದ ನಿಷ್ಕಾಮಮಯ ಭಕ್ತಿ, ವೈರಾಗ್ಯ, ಸೌಜನ್ಯತೆ ಎಷ್ಟಿತ್ತೆಂಬುದು ಹೊಳೆಯದೇ ಇರದು. ಇಂಥ ನಿಷ್ಕಾಮಮಯ ಭಕ್ತಿಯಿಂದಲೇ ಪರಮಾತ್ಮನನ್ನು ಒಲಿಸಿಕೊಳ್ಳಲಿಲ್ಲವೇ ? ಅನುಸೂಯಾ ದೇವಿಯು ತನ್ನ ನಮ್ರವಾದ ಭಕ್ತಿ ಹಾಗು ಪಾತಿವ್ರತ್ಯ ಪ್ರಭಾವದಿಂದ ಪರಮಾತ್ಮನ ತಾಯಿಯಾಗಲಿಲ್ಲವೇ ? ಹೀಗೆ ಅನೇಕರ ಉದಾಹರಣೆಗಳನ್ನು ಕೇಳಿಯೂ ಸಹ ಭಕ್ತಿಮಾರ್ಗವರಿಯದ ಭಕ್ತರಿಗೆ ಭಕ್ತವತ್ಸಲನು ಮೆಚ್ಚುವದೆಂತು ?

ಇನ್ನು ಹಲವು ಭಕ್ತರ ಮಾತೇ ಬೇರೆ. ತಮಗಾಗಲಿ, ತಮ್ಮ ಮಕ್ಕಳಿಗಾಗಲಿ ಯಾವದೊಂದು ಆಹಾರದ ಪರಿಣಾಮವಾಗಿ ಜಾಡ್ಯವು ತ್ಪನ್ನವಾದಲ್ಲಿ ಅದೂ ಕೂಡ ದೇವಿಯ ಕಾಟದಿಂದಲೇ ಎಂದು ತಿಳಿದು ದುರಗವ್ವ, ಮರಗವ್ವ, ಶಿಟಿಕೆವ್ವ ಎಂಬ ಮುಂತಾದ ದೇವತೆಗಳಿಗೆ ಹರಿಕೆ ಬೇಡುವರು ಹಾಗು ಔಷಧೋಪಚಾರಗಳನ್ನು ಯಥಾಪ್ರಕಾರ ಸಾಗಿಸುವರು. ನಂತರ ಔಷಧೋಪಚಾರದಿಂದಲೋ ಶರೀರಗುಣದಿಂದಲೋ ಜಾಡ್ಯ ತೊಲಗಿತೆಂದರೆ ಅಂದು ಹರಿಕೆ ಬೇಡಿಕೊಂಡಂತೆ, ಕೋಳಿಯನ್ನಾಗಲೀ ಕುರಿಯನ್ನಾಗಲಿ, ಇಲ್ಲವೆ ಕಾಯಿ ಕರ್ಪೂರವನ್ನಾಗಲಿ ದೇವಿಗೆ ಸಮರ್ಪಿಸುವರು. ಸಮರ್ಪಿಸುವದೆಂದರೆ ಹಾಗೆಯೇ ಅಲ್ಲ. ಟೆಂಗನ್ನು ಇಬ್ಭಾಗ ಮಾಡಿದಂತೆ ಪಶುಗಳನ್ನೂ ಸಹ ಇಬ್ಭಾಗ ಮಾಡುವದುಂಟು. ಇದು ಅನಾಗರಿಕತೆಯ ಭಕ್ತಿ. ಇಂದು ವಿಶ್ವವು ವಿದ್ಯೆಯಲ್ಲಿ ಮುಂದೊರೆಯು

ತ್ತಿರುವಾಗ್ಗೆ ಇಂಥ ಹೀನ ಕೃತ್ಯಗಳನ್ನು ಕೈಕೊಳ್ಳುವದು ಯೋಗ್ಯವಲ್ಲ. ಪರಮಾತ್ಮನು ಇಂಥ ಭಕ್ತಿಗೆ ಮೆಚ್ಚನು. ಒಂದು ವೇಳೆ ಹೀಗೆಯೂ ಪ್ರಶ್ನೆ ಉದ್ಭವಿಸಬಹು. ಅದಾವುದೆಂದರೆ, ಪರಮಾತ್ಮನಿಗೆ ಮಾಂಸಾರ್ಪಣ ಮಾಡಿದ ಅನೇಕರಿಗೆ ಪರಮಾತ್ಮನು ಪ್ರತ್ಯಕ್ಷನಾದನೆಂಬ ಉದಾಹರಣೆಗಳಿವೆಯಲ್ಲವೆಂದು. ಅಂಥ ಅಜ್ಞ ಜನತೆಗೆ ಪ್ರತ್ಯಕ್ಷನಾದ ದೇವನು ಅವರ ನಿಷ್ಕಾಮಮಯ ಭಕ್ತಿಯಿಂದಲೇ ಹಾಗೂ ಅವರ ಅಜ್ಞಾನವನ್ನು ಹೋಗಲಾಡಿಸಲೋಸುಗವೇ ಎಂಬುದನ್ನು ಅವರ ಚರಿತೆಗಳಲ್ಲಿಯೇ ಕಂಡುಕೊಳ್ಳಬಹುದು.

ಇನ್ನು ಕೆಲವರು ತಾವು ದೇವರಿಗೆ ಹರಿಕೆಹೊತ್ತು, ಹರಿಕೆಹೊತ್ತ ಪ್ರಕಾರ ತಮ್ಮ ಕಾರ್ಯವು ಸಫಲವಾದಲ್ಲಿ ಆ ದೇವಮಂದಿರದ ವರೆಗೆ ದೀಡನಮಸ್ಕಾರವೆಂದು ತಮ್ಮ ಶರೀರವನ್ನು ಭೂಮಿಗೆ ಹಚ್ಚುತ್ತ ಹಚ್ಚುತ್ತ ಜನರನ್ನು ಬೆರಗುಗೊಳಿಸಲೋಸುಗವೋ ಏನೋ ದೂರ ದೂರಿನ ದೇವಾಲಯಗಳಿಗೆ ಊದಿಸುತ್ತ ಬಾರಿಸುತ್ತ ಹೋಗುವರು. ಇದುವಾದರೂ ಭಕ್ತಿಯಲ್ಲ. ಕಾಲಿದ್ದು, ಕೈಯಿದ್ದು, ಜ್ಞಾನವಿದ್ದು, ಮಾನವರಾಗಿಯೂ ಸರ್ಪನಂತೆ ತನ್ನೆಡೆಗೆ ಬರುವ ಮಾನವರನ್ನು ನೋಡಿ ಆ ಜಗನ್ನಿಯಾಮಕನು ಗಹಗಹಿಸಿ ನಗುತ್ತಿರಬಹುದು. ಇಷ್ಟೇ ಅಲ್ಲ. ಶರೀವನ್ನು ಭೂಮಿಗೆ ಸವರಿದ ಪರಿಣಾಮವಾಗಿ ಎದೆ, ಮೊಳಕಾಲುಗಳಿಗೆ ನೋವಾಗಿ ಹಾಸ್ಪಿಟಲ್‌ದಲ್ಲಿ ನರಳುತ್ತಿರುವಾಗಲಾದರೂ ತಮ್ಮ ಹೀನಭಕ್ತಿಯಿಂದಲೇ ಹೀಗಾಯಿತೆಂದು ಅರಿಯಬಹುದು. ಆದರೆ ಅದನ್ನೆಲ್ಲ ಬಿಟ್ಟು ದೇವನಿಲ್ಲ. ಆತನಿದ್ದರೆ ಹೀಗೇಕಾಗುತ್ತಿತ್ತು ಎಂದು ತಮ್ಮ ಭಕ್ತಿಗೇ ಶ್ರೇಷ್ಠತೆಯನ್ನು ಕೊಟ್ಟು ನಾಸ್ತಿಕರಾದವರನೇಕರಿದ್ದಾರೆ. ತಮ್ಮ ಭಕ್ತಿಯೇ ಶ್ರೇಷ್ಠವೆಂದರಿವುದು ಅಹಂಕಾರದ ಭಕ್ತಿ. ಅಂಥ ಅಹಂಕಾರ ಭಕ್ತಿಗೆ ಪರಮಾತ್ಮನು ಮೆಚ್ಚನು.

ಇನ್ನು ಕೆಲವರು ಧರ್ಮಗಳನೇಕನ್ನು ಕಂಡು ಆಯಾ ಧರ್ಮದ ತಳಹದಿಯ ತತ್ವಗಳನ್ನರಿಯದೆ ಟೀಕಿಸುವದು ಅಜ್ಞಾನತನದ್ದಾಗಿದೆ. ಮಾನವನು ಆಯಾ ಧರ್ಮಗಳ ತತ್ವಗಳನ್ನರಿತು, ಹಂಸ ಪಕ್ಷಿಯು ಹಾಲು ನೀರು ಮಿಶ್ರಿತವಾದದ್ದನ್ನು ಬೇರ್ಪಡಿಸಿಕೊಂಡು ತನಗೆ ಬೇಕಾದದ್ದನ್ನೇ ಸೇವಿಸುವಂತೆ ಆಯಾ ಧರ್ಮ ತತ್ವಗಳನ್ನು ತಿಳಿದುಕೊಂಡು ಅದರಲ್ಲಿ

ತಮಗೆ ರುಚಿಸುವ ತತ್ವಗಳನ್ನಷ್ಟೇ ರುಚಿಸಿದಲ್ಲಿ ಆತನು ವಿದ್ವಾಂಸ ನೆಂದೆನಿಸಿಕೊಳ್ಳಲು ಅರ್ಹನಾಗುವನು.

ಈ ಅನೇಕೋ ಧರ್ಮಗಳಲ್ಲಿ ಅನೇಕೋ ತರವಾದ ಪೂಜೆಪುನಸ್ಕಾರ ಹೋಮಹವನಾದಿಗಳು ಜರಗುತ್ತವೆ. ಆ ಹೋಮಹವನಾದಿಗಳನ್ನು ತಿಳಿದುಕೊಳ್ಳಲು ಸಹ ಇತರ ಗ್ರಂಥಗಳ ಪರಿಚಯವು ಮಾನವನಿಗೆ ಬೇಕು. ಇಲ್ಲದಿದ್ದಲ್ಲಿ ಧರ್ಮವು ಧರ್ಮದಂತೆಯೂ, ಧರ್ಮವು ಅಧರ್ಮ ದಂತೆಯೂ, ಅಧರ್ಮವು ಧರ್ಮದಂತೆಯೂ ಕಾಣಿಸಲು ಸಂದೇಹವಿಲ್ಲ. ಏಕೆಂದರೆ ಹೋಮ ಪೂಜಾದಿಗಳಲ್ಲಿ ಮಂತ್ರೋಚ್ಚಾರಗಳನ್ನು ಕೇಳಿ, ಇದೊಂದು ಮಹಾಪೂಜೆಯಂದರಿಯಬಹುದು. ಆದರೆ ಆ ಹೋಮ, ಪೂಜಾದಿಗಳಲ್ಲಿ ಇತರರಿಗೆ ಕೆಡಕು ಮಾಡುವಂಥವೂ, ಹಾಗು ಕಲ್ಯಾಣ ಕಾರಕವಾದಂಥವೂ ಇರುವದರಿಂದ ಅದಾವುದೂ ಗೊತ್ತಾಗದೆ ಕೆಡುಕಕ್ಕೆ ಒಳ್ಳೆಯದೂ, ಒಳ್ಳೆಯದಕ್ಕೆ ಕೆಡಕೂ ಎನ್ನುವದು ಧರ್ಮಕ್ಕೆ ಅಧರ್ಮ ವೆಂದಂತೆಯೇ ಸರಿ. ಧರ್ಮವು ಮನುಷ್ಯನಿಗೆ ಬೇಕೇಬೇಕು ಧರ್ಮ ಕ್ಕಾಗಿ ಅಭಿಮಾನ ಪಡುವ ಜನರು ಇತರ ಧರ್ಮಗಳಿಗೆ ಹೀಯಾಳಿ ಸುವದು ಧರ್ಮವಲ್ಲ. ಧರ್ಮವೆಂದರೆ ಹಿಂದಿನಿಂದ ಬಂದ ಒಂದು ನಡೆ. ಹಾಗು ಆಚರಿಸತಕ್ಕ ಕ್ರಮ ಹೊರತು ಬೇರೆಯಲ್ಲ. ಹಾಗಾದರೆ ಯಾವ ಧರ್ಮವು ಪರಮಾತ್ಮನನ್ನು ಒಲಿಸಿಕೊಳ್ಳಲು ಶ್ರೇಷ್ಠವಾದದ್ದೆಂಬ ವಿಚಾರವು ಇಲ್ಲಿ ಬರಬಹುದು. ಇದೇ ಪ್ರಕಾರ ಆದಿಕಾಲದಲ್ಲಿ ಹಲವು ಋಷಿಗಳಿಗೆ ಈ ವಿಚಾರವೊದಗಿದಾಗ್ಗೆ ಅವರು ಆ ವೇದಶಾಸ್ತ್ರವನ್ನು ಕಲ್ಪಿಸಿಕೊಟ್ಟಂಥ ವೇದವ್ಯಾಸರಲ್ಲಿಗೆ ಸಾಗಿ, ಜಗತ್ತಿನಲ್ಲಿ ಸಾಧ್ವರಾರು ? ಹಾಗು ಧರ್ಮ ಗಳಲ್ಲಿ ಆವ ಧರ್ಮ ಶ್ರೇಷ್ಠ ? ಹಾಗು ಯುಗಗಳಲ್ಲಿ ಆವ ಯುಗವು ಅತಿ ಶ್ರೇಷ್ಠವಾದದ್ದೆಂದು ಮೂರು ಪ್ರಶ್ನೆಗಳನ್ನು ಕೇಳಿದಾಗ್ಗೆ ವೇದವ್ಯಾಸರು ಉತ್ತರಿಸುತ್ತ—"ವಿಶ್ವದಲ್ಲಿ ಸ್ತ್ರೀ ಸಾಧ್ವಿಯು. ಧರ್ಮದಲ್ಲಿ ಶೂದ್ರನು ಶ್ರೇಷ್ಠ. ಯುಗಗಳಲ್ಲಿ ಕಲಿಯುಗವು ಅತಿ ಶ್ರೇಷ್ಠ." ವೇದವ್ಯಾಸ ಮಹರ್ಷಿ ಗಳ ಮುಖದಿಂದ ಕೇಳಿದ ಈ ನುಡಿಗಳಿಗೂ ವೇದವಾಕ್ಯಕ್ಕೂ ಅಸಂಬದ್ಧ ವೆನಿಸಿ, ಆ ಋಷಿಸಮೂಹವು—"ಇದು ಸತ್ಯವೇ ? ಹಾಗಾದರೆ ನಿಮ್ಮ ವೇದದಲ್ಲಿ ಬರೆದ ಬ್ರಾಹ್ಮಣನೇ ಶ್ರೇಷ್ಠವೆನ್ನುವದು ತಪ್ಪೇ ?" ಎಂದು ಪ್ರಶ್ನಿಸಲು ವೇದವ್ಯಾಸರು—"ತಪ್ಪಲ್ಲ. ಅದುವಾದರೂ ಸತ್ಯ. ಆದರೆ ಶೂದ್ರನು ತನ್ನ ಕಾಯಕವನ್ನು ಭಕ್ತಿಭಾವದಿಂದ ಹಗಲಿರುಳೂ ಕೈಕೊಳ್ಳು

ತ್ತಾನೆ. ಇಷ್ಟೇ ಅಲ್ಲ, ಆತನ ಭಕ್ತಿಯಂಥ ಪವಿತ್ರವಾದ ಭಕ್ತಿಯು ವಿಶ್ವದಲ್ಲಿಲ್ಲ. ಜನತಾ ಸೇವೆಯೇ ಜನಾರ್ಧನಸೇವೆ ಎಂಬ ಭಾವನೆಯ ಭಕ್ತಿ ಅವನಲ್ಲಿದೆ. ಆ ಭಕ್ತಿಭಾವದಲ್ಲಿ ಸತತ ಕರ್ಮಿಯಾಗಿರುವದರಿಂದ ಆತನು ಸ್ನಾನಸಂಧ್ಯಾದಿಗಳನ್ನು ಮಾಡಲಿ ಅಥವಾ ಬಿಡಲಿ, ಆತನು ಸದಾ ಪವಿತ್ರನು." ಇವೆರಡು ಪ್ರಶ್ನೆಗಳ ವಿವರಣೆಗೆ ಋಷಿಸಮೂಹವು ಒಪ್ಪಿ, ಮೂರನೆಯ ಪ್ರಶ್ನೆಗೆ ಉತ್ತರ ಕೇಳಿದರು—"ತಾವು ಕಲಿಯುಗದಂಥ ಪಾಪಮಯ ಯುಗವು ಬೇರೊಂದಿಲ್ಲವೆಂದು ಹೇಳಿದ್ದಿರಲ್ಲ? ಈಗ್ಗೆ ಶ್ರೇಷ್ಠವೆಂದು ಹೇಳಲು ಕಾರಣ?" ಎಂದು ಕೇಳಲು ವೇದವ್ಯಾಸರು—"ಕೃತಯುಗದಲ್ಲಿ ಹತ್ತು ವರ್ಷ ತಪಸ್ಸು ಮಾಡಿದರೆ ದೊರಕುವ ಫಲವು ಕಲಿಯುಗದಲ್ಲಿ ಒಂದು ಹಗಲು, ಒಂದು ಇರುಳಿನಲ್ಲಿ ಪ್ರಾಪ್ತಿಯಾಗುವದು. ಅದು ಈಗಿರುವ ನಿಮ್ಮೆಲ್ಲರಿಗೆ ಸುಲಭ. ಆದರೆ ಕಲಿಯುಗದ ಜನತೆಗೆ ಅದು ಬಹು ಅದ್ಭುತವಾಗಿ ಪರಿಣಮಿಸುವದು. ಏಕೆಂದರೆ ಮನಸ್ಸು ಅಷ್ಟೊಂದು ಚಂಚಲತೆಯನ್ನು ತಾಳುವದು." ಎಂದು ಹೇಳಲು ಋಷಿಗಳು ವೇದವ್ಯಾಸರಿಗೆ ಸಂತೋಷದಿಂದ ನಮಸ್ಕರಿಸಿ ತೆರಳುವವರಾದರು. ನೋಡಿರಿ ಆ ಕಾಲದಲ್ಲಿ ಈ ಕಾಲದ ಪರಿಸ್ಥಿತಿಯನ್ನು ಬರೆದದು ಎಷ್ಟೊಂದು ಸಮಂಜಸವಾಗಿದೆ. ಈಗ್ಗೆ ನಡೆದದ್ದನ್ನು ಈಗರಿಯದ ನಾವು ಎಷ್ಟು ಹಿಂದುಳಿದಿದ್ದೇವೆಂಬುದನ್ನು ತಿಳಿದುಕೊಳ್ಳಿ. ಹಾಗು ಹಿಂದಿನ ವೇದಾಂತ ಮುಂತಾದವುಗಳಿಗೆ ಇಂಥ ಅನೇಕೋ ಉದಾಹರಣೆಗಳನ್ನು ತಿಳಿದುಕೊಂಡಾದರೂ ನಂಬಿರಿ. ನಮ್ಮ ರಾಷ್ಟ್ರದ ಅಂಥ ದಿವ್ಯ ಸಂಪತ್ತಿಯ ನೆಸೆದು ಗಾಳಿಗೆ ಹಾರಿಹೋಗುವಂಥ ನೋಟಿಗಾಗಿ ಹೀನ ಕೃತ್ಯವನ್ನು ಕೈಕೊಳ್ಳದಿರಿ.

ಆವ ಧರ್ಮವಾದರೇನು? ಎಲ್ಲರೂ ಆ ಪರಮಾತ್ಮನ ಮಕ್ಕಳಲ್ಲವೇ? ಮಡಿ ಮಡಿ ಎಂದು ಅಡಿಗಡಿಹಾರದೆ ಅಣ್ಣತಮ್ಮಂದಿರಾಗಿ ಬಾಳಿ, ಆ ನಮ್ಮ ಪಿತನಾದ ಪರಮಾತ್ಮನ ಸೇವೆ ಮಾಡಿದರೆ ಪರಮಾತ್ಮನು ಮೆಚ್ಚದಿರುವನೇ? ಅನೇಕ ಧರ್ಮಗಳ ಭಕ್ತಿಭಾವದ ಹಲವು ಚಿನ್ಹೆಗಳುಂಟು. ಅದರಿಂದ ಈತನು ಇಂಥ ಮತದವನೇ ಎಂದು ಸಹಜವಾಗಿ ತಿಳಿಯಬಹುದು. ಆದರೆ ಇದಕ್ಕೆ ವಿರೋಧಭಾವವನ್ನು ಯಾರೂ ತಾಳಬಾರದು. ಈ ಬಗ್ಗೆ ಇಲ್ಲಿ ಸೈನ್ಯಪಡೆಯ ಒಂದು ಉದಾಹರಣೆ ಪಡೆಯುವಾ. ಈಗ್ಗೆ ನಾವು ಸೈನ್ಯಪಡೆಯ ಅನೇಕ ವಿಭಾಗಗಳನ್ನು ಹಾಗು

ಆಯಾ ವಿಭಾಗಗಳ ಬೇರೆ ಬೇರೆ ಕೆಲಸುಗಳನ್ನು ಮತ್ತು ಬೇರೆ ಬೇರೆ ಉಡುಪುಗಳನ್ನು ನೋಡಿಯೂ ಕೂಡ ನಾವು ಅವರನ್ನು ಸೈನ್ಯಪಡೆಯುವ ರೆಂದೇ ಹೇಗೆ ಅನ್ನುವೆವೋ ಹಾಗೆ ಧರ್ಮಚಿನ್ಹ ಉಳ್ಳವರೆಲ್ಲ ಭಕ್ತರು ಎನ್ನುವವುಟ್ಟಿಗೆ ಮುಂದೂರೆಯಬೇಕಾಗಿದೆ. ಆ ಸೈನ್ಯಪಡೆಯ ಜನತೆಯ ಪ್ರತಿಫಲವನ್ನು ಸರಕಾರವು ಹೇಗೆ ಪೂರೈಸುವದೋ ಹಾಗೆ ಭಕ್ತಿಗೆ ದೇವನು ಆವ ಭೇವನ್ನೂ ತಾರದೆ ಫಲಕೊಡುವ.

ಇನ್ನು ಹಲವರು ಪಾಪಕರ್ಮವಾಡುತ್ತಿರಲು ಅವರಿಗೆ ಯಾರಾ ದರೂ ಹಿತನುಡಿದರೆ ಹೆತ್ತೈಷಿಗಳಾಗದೆ, "ಏನಯ್ಯಾ ಹೇಳತೀರಿ ? ನಮಗೆ ಬುದ್ಧಿ ಉಂಟು. ಆ ಬುದ್ಧಿ ನೀವು ಕೊಟ್ಟಿಲ್ಲ. ಪರಮಾತ್ಮನು ಕೊಟ್ಟಿ ದ್ದಾನೆ. ನಾವು ಮಾಡುವ ಪಾಪ ಪುಣ್ಯ ಎಲ್ಲವೂ ಆ ಪರಮಾತ್ಮನದೇ." ಎನ್ನುವವರಿದ್ದಾರೆ. ಅಂಥವರಿಗೆ ನಮ್ಮ ಈಗಿನ ಪ್ರಜಾಪ್ರಭುತ್ವದ ಸಾರ ತಿಳಿದರೆ ಸಾಕು. ಪ್ರಜಾಪ್ರಭುತ್ವವಿದೆಯೆಂದು ಕೊಲೆ, ಸುಲಿಗೆ ದರೋಡೆ ಗಳನ್ನು ಮಾಡಲಾಗದು ಹಾಗೆ ಮಾಡಿದಲ್ಲಿ ಕಾರಾಗೃಹವಾಸವು ಹೇಗೆ ಲಭಿಸುವದೋ ಹಾಗೆ ಪರಮಾತ್ಮನು ಬುದ್ಧಿಯನ್ನು ಕೊಟ್ಟಿದ್ದಾನೆ. ಹಾಗು ಆ ಬುದ್ಧಿಗೆ ಸ್ವತಂತ್ರತೆಯನ್ನೂ ದಯಪಾಲಿಸಿದ್ದಾನೆ. ಆದರೆ ಆ ಸ್ವತಂತ್ರ ತೆಯ ದುರುಪಯೋಗ ಮಾಡಿಕೊಂಡಲ್ಲಿ ಶಿಕ್ಷೆ ವಿಧಿಸುವ. ಆ ಮನವು ಸ್ವತಂ ತ್ರವಿದೆಯೆಂದೇ ಅನೇಕೋ ಯಂತ್ರೋಪಕರಣಗಳು ಮಾನವನಿಗೆ ಸಾಧ್ಯ ವಾಗಿವೆ. ಇವೆಲ್ಲವೂ ಆ ಪರಮಾತ್ಮನ ಪ್ರೇರಣೆಯಿಂದಲೇ ಎಂದರಿಯದೆ ದೇವನಿಲ್ಲವೆನ್ನುವದು ಶುದ್ಧ ತಪ್ಪು ತಿಳುವಳಿಕೆ. ಮಾನವನು ಈಗಿನ ಇಂಥ ಕಠಿಣ ಪರಿಸ್ಥಿತಿಯಲ್ಲಿ ಉದರಪೋಷಣೆಗಾಗಿ ತಾಕಲಾಟದಲ್ಲಿರು ವಾಗ ಭಕ್ತಿಯಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವದು ಕಷ್ಟ. ಆದರೂ ಪರಮಾತ್ಮನ ಅಂತಃಕರುಣಕ್ಕೆ ಪಾತ್ರರಾಗಬೇಕಾದಲ್ಲಿ ಸದ್ವರ್ತ ನೆಯೇ ಒಂದು ಪವಿತ್ರಮಯ ಭಕ್ತಿ.

---

ವಿಶ್ವತೋ ಚಕ್ಷು ವಿಶ್ವತೋ ಮುಖವೆನಲು । ವಿಶ್ವಕೆಲ್ಲ ವಿಶ್ವೇಶ್ವರನಲ್ಲದಿಲ್ಲ ॥ ವಿಶ್ವಾಸಿಸಿ ಭಾವಿಸಿ ನೋಡುವಡೆ । ಶಾಶ್ವತಂ ಸನ್ನಿಹಿತನು ಪರ ಶಿವನು ॥೨॥

ಜಲದೊಳಗಣ ಸೂರ್ಯ ಬಿಂಬದಂತೆ ಜಗ । ದೊಳು ಬೆರಸಿಯು ಬೆರಸ ನೋಡಾ ॥ ಹೊಳೆದು ತೋರದು ಜಗವ ಶಿವನಿಂದವೆ । ಹೊರ ಗಾಗಿ ತೋರುವ ಠಾವಿಲ್ಲವು ॥೩॥

ಬ್ರಹ್ಮಾಂಡಕೋಟಿಯನೊಮ್ಮೆ ಹುಟ್ಟಿಸಬಲ್ಲ । ನೊಮ್ಮೆ ಕೆಡಿಸಲು ಬಲ್ಲನವನು ॥ ಬ್ರಹ್ಮಾಂಡ ಕೋಟಿಗಳಾ ಶಿವನ ನಿಜವ । ನೊಮ್ಮೆ ನಿಲುಕಿ ಕಾಣಲರಿಯವು ॥೪॥

ದಶದಿಕ್ಕು ಸಚರಾಚರದೊಳಗೆಲ್ಲ । ವಿವರಿಸಿ ನೋಡಲು ತನ್ಮಯವು ॥ ಆ ಪರಾಪರ ಹಂಪೆಯ ವಿರುಪಯ್ಯ । ನಲ್ಲದಿಲ್ಲವೆಂದು ಶ್ರುತಿ ಸಾರುತಿವೆ ॥೫॥

---

## ೯. ಭಕ್ತದೇಹಿಕ ಲಿಂಗಸ್ಥಲ.

**ಸೂತ್ರ:—** ಇಂತು ಶಿವನು ಜಗವಾಗಬಲ್ಲ ಜಗವಾಗದಿರಬಲ್ಲನೆಂದರಿತು ಆ ಶಿವನ ತನ್ನೊಳಗಾಲಿಂಗಿಸಿ ಧರಿಸಿಕೊಂಡಿಪ್ಪ ವೀರ ಮಾಹೇಶ್ವರನಲ್ಲಿ ಆ ಶಿವನು ಭಕ್ತದೇಹಿಕದೇವನಾಗಿರ್ದ ಭೇದವೆಂತಿರ್ದುದೆಂದಡೆ, ಮುಂದೆ ಭಕ್ತದೇಹಿಕ ಲಿಂಗಸ್ಥಲವಾದುದು.

॥ಪದ॥ ರಾಗ ಕುರಂಜಿ

ಲಿಂಗ ನೀನೆ ಸಂಗ ನಾ ನೀನೆನಲಿಕ್ಕಿಲ್ಲ ನೋಡು ಲಿಂಗವೆ ॥ಪ॥

ತೋರಿ ತಪ್ಪಿಸಿ ಪುಂಜುಮಾಡಿ ಎನ್ನಬೇರು ಮಾಡಿಹೆನೆಂದೆಂಬೆ । ಬೇರು ಮಾಡಲು ತೆರಹಿಲ್ಲ ನೀ ಕೂಡೆ ಭರಿತನೆಂಬುದ ನಾ ಬಲ್ಲೆ ॥೧॥

ಅಡಗಿ ಮಾತಾಡುವ ಬೆಡಗು । ನಿನ್ನ ಬೆಡಗಿಗೆ ನಾ ಬೆರಗಾದೆ । ಬೆಡಗಿನ ಬೆಂಬಳಿಯವನು ಎನ್ನ ಬಿಡಬೇಸದಿರು ಕಂಡ್ಯಲಿಂಗವೇ ॥೨॥

ಕಡಲೊಳಗಣ ನೊರೆ ತೆರೆಯು ಆ ಕಡಲೊಳಗೆ ಅಳಿವಂತೆ । ಕೊಡ ನೊಡೆದರೆ ಬಟ್ಟಬಯಲು ಆವೆಡೆಯೊಳು ಸಿಲುಕಿತು ಹೇಳಾ ॥೩॥

ದಿಟ ಪರಮಾತುಮನೆನಿಸಿ ಎನ್ನ ಸಟೆ ದಿಟಮಾಡಿ ತೋರದಿರಾ। ಸಟೆ ದಿಟಕೊಡೆಯನು ನೀನೆ ಬೇರೆ ಪ್ರತಿ ನಿನಗುಳುಳ್ಳೊಡೆ ಹೇಳಾ ॥೪॥

ಸಾಕಾರ ನಿರಾಕಾರ ನೀನೆ ಸಕಳೇಕೋದೇವ ಜಗದ್ಭರಿತಾ ಸು॥ ಧಾಕರ ನಿಜಲಿಂಗ ಸಂಗನಲ್ಲದೆ ಬೇರೆ ರೂಹಿಸಲು ತೆರಹಿಲ್ಲ ॥೫॥

---

## ೧೦. ಗುರುಪ್ರಸಾದಿಸ್ಥಲ.

**ಸೂತ್ರ:—** ಇಂತು ಮಾಹೇಶಾದಿ ಭಕ್ತ ದೇಹಿಕ ಲಿಂಗಾತ್ಮ್ಯ ಮಾದ ವೀರ ಮಾಹೇಶ್ವರಸ್ಥಲದಲ್ಲಿ ಆಚರಿಸಿ ಭಕ್ತ ಕಾಯವೇ ಲಿಂಗ ಕಾಯವಾಗಿ ಲಿಂಗ ಕಾಯವೇ ಭಕ್ತ ಕಾಯವಾಗಿ ವಿರಳವಿಲ್ಲದೆ ಬೆರಸಿ ಮಹಂತನು ಮುಂದೆ ಸಾವಧಾನ ಮುಖದಿಂದಲಾಚರಿಸಿ ಬೆರಸುವ ಭೇದವೆಂತಿದ್ದುದು ಎಂದೆಡೆ ಮುಂದೆ ಪ್ರಸಾದಿಸ್ಥಲವಾಹುದು.

॥ಪದ॥ ರಾಗ ಪರಾಳಿ

ನಿನ್ನ ಶರಣರ ಒಕ್ಕುದ ಮಿಕ್ಕುದ ಕೊಂ। ಡೆನ್ನ ತನುಮನ ಶುದ್ಧ ವಾದುದಯ್ಯ ॥ಪ॥

ಒಡೆಯರು ಮನೆಗೆ ಬಂದರೆ ಎನ್ನೊಡಲಾಸೆಯ ನಾನರಿಯದೆ ಸಕಲ। ಪದಾರ್ಥವ ನೀಡಿ ಅವರೊಕ್ಕುದ ಹಾರಿಕೊಂಡಿಪ್ಪೆನಯ್ಯ ॥೧॥

ಆಚಾರ ವಿಚಾರವ ನಾನರಿಯೆನು ಜ್ಞಾನಾನು ಭಾವದ ಹೊಲಬ ನರಿಯೆನು। ಶಿವ ನಿಮ್ಮ ಪ್ರಸಾದಿಗಳ ಪ್ರಸಾದವೆನಗೆ ಪ್ರಾಣವಯ್ಯ ॥೨॥

ಆವ ಪದವಿಯಂತುಟಲ್ಲವೆನಗೆ ನಿಮ್ಮ ಶರಣರ ಶೇಷ ಪ್ರಸಾದ ಜೀವನ। ವೆನಗದು ಬಾಳುವೆಯಾಗಿ ಮತ್ತನ್ಯವನರಿಯೆನಯ್ಯ ॥೩॥

ಹರಗಣ ಪಂತಿಯ ಮುಂದೆ ನಾನು ಕರವ ಮುಗಿದು ಪರವಶನಾಗಿ ಎರ। ಡರಿಯದೆ ಒಡೆಯರ ಪರಿಯಾಣವ ಹಾರಿಕೊಂಡಿಪ್ಪೆನಯ್ಯ ॥೪॥

ಗುರುಲಿಂಗ ಜಂಗಮವಾರೋಗಣೆಯ ಮಾಡುವೆಡೆಯೊಳೆನ್ನಯ ಪ್ರಾಣ ವನಿಕ್ಕಿ। ಉಡುಗಿ ಪ್ರಸಾದವ ಕೊಂಡು ಪರಮ ಸುಖಿಯಾದೆನು ಕೂಡಲ ಸಂಗಯ್ಯ ॥೫॥

---

## ೧೧. ಗುರುಮಹಾತ್ಮ್ಯಸ್ಥಲ.

**ಸೂತ್ರ:—** ಇಂತು ಗುರುಲಿಂಗ ಜಂಗಮದ ಪ್ರಸನ್ನ ಪ್ರಸಾದವ ಸ್ವೀಕರಿಸಿದ ನಿಯತ ಪ್ರಸಾದಿಯು ಅಂಗವನಾ ಲಿಂಗಿಸಿದ ಗುರುಮಹಾತ್ಮ್ಯ ಎಂತಿರ್ದುದೆಂದಡೆ ಮುಂದೆ ಗುರುಮಹಾತ್ಮ್ಯಸ್ಥಲವಾದುದು.

॥ಪದ॥ ರಾಗ ಗುರ್ಜರಿ.

ಗುರು ಚರಣವೆ ಗತಿ ಗುರುಚರಣವೆ ಮತಿ ಗುರುಶಬ್ದ ಸ್ಪರ್ಶ ಪಾವನ ವೆನಗೆ । ನ ಗುರೋರಧಿಕಂ, ನ ಗುರೋರಧಿಕಂ ಎನುತ್ತಿದಾವೆ ಶ್ರುತಿಗಳು ॥ಪ॥

ಜಾತನಲ್ಲ ಅಜಾತನಲ್ಲ ಜನಿತ ಖೇಚರನಲ್ಲ ಭೂಚರನಲ್ಲ ಆಚರಿಸ ವನಲ್ಲ । ಅನ್ಯ ಸುಖಂಗಳ ಭ್ರಾಂತುವಿಲ್ಲದ ನಿಭ್ರಾಂತು ಲಿಂಗೈಕ್ಯನು ॥೧॥

ಯತ್ರ ತತ್ರ ಶಿವಸಾಧಕನಲ್ಲ ಅಷ್ಟತನು ಮೂರುತಿಯಲ್ಲ ಅಷ್ಟ ಮದಂಗಳ । ಮೆಟ್ಟಿ ನಿಲಿಸಿದ ಅಷ್ಟದಳ ಕಮಲ ಪೂಜಿತನು ನೀನೆ ॥೨॥

ಆಕಾರ ನಿರಾಕಾರ ಸಾಕಾರ ಸನುಮತನು ವ್ಯಾಕರಿಸುವನಲ್ಲ ಮನದಿ ಚ್ಛೆಗೆ । ಆಕಾರ ನಿರಾಕಾರ ಸನುಮತದ ಏಕಾಂತದೊಳಗಿಪ್ಪ ನಿಜಸ್ವ ರೂಪಿಂಗೆ ॥೩॥

ಜೀವಂಜೀವ ಜೀವಾದಿಗಳೊಳಗಣ ಅನ್ಯ ಭಿನ್ನ ಭಾವಕನಲ್ಲ ಸಮ ಸ್ತ ನಾದ । ಸಮಸುಖ ಭೋಗಿ ಅಣುರೇಣು ಸ್ಥೂಲ ಸೂಕ್ಷ್ಮ ಭರಿತನು ನೀನೆ ॥೪॥

ಭೃಂಗ ಕುಸುಮ ಪರಿಮಳಕ್ಕೆರಗುವಂತೆ ಲಿಂಗ ಸಂಗ ಸುಖ ನಿರ್ಲೇಪ ಅಂಗ ಲಿಂಗ। ಸಂಗವಾಗಿಪ್ಪ ಶಿವಯೋಗಿ ಕೂಡಲಸಂಗನಲ್ಲಿ ಪ್ರಭುದೇವ ॥೫॥

---

## ೧೨. ಗುರುಲಿಂಗ ಮಹಾತ್ಮ್ಯಸ್ಥಲ.

**ಸೂತ್ರ:—** ಇಂತು ಗುರು ಮಹಾತ್ಮ್ಯಮಂ ಸರ್ವಾಂಗದಲ್ಲೆಡೆಗೊಂಡ ಪ್ರಸಾದಿಯು ಮನದೊಳಗೆಡೆಗೊಂಡಿಪ್ಪ ಲಿಂಗ ಮಹಾತ್ಮ್ಯವೆಂತಿರ್ಪುದೆಂದಡೆ ಮುಂದೆ ಲಿಂಗಮಹಾತ್ಮ್ಯ ಸ್ಥಲವಾದುದು.

॥ಪದ॥ ರಾಗ ಭೂಪಾಳಿ

ಪರಕೆ ಪರವಾ ಘನಕೆ ಘನತರ ಮಹಾ ಘನವು । ವರಕೆ । ವರ ನಿಜ ವಾಙ್ಮನಾತೀತಗತಿಶಯವು । ಸರಿ ಇಲ್ಲದಪ್ರತಿಮ ಲಿಂಗನ ಮಹಾತ್ಮ್ಯಯಿಂದಿಲ್ಲ ಮೇಲಾದ ಘನವು ॥ಪ॥

ವೇದಾದಿ ವೇದಗಳಿಗುಪಮೆಗುಪಮಾತೀತ । ನಾದಿ ಮಧ್ಯಾಂತದಿಂದ ತ್ತಣತ್ತಣಘನವು । ಸಾಧಕರ ಸತ್ವರಜತಮ ದೇವತೆಗಳ । ಗೋಚರಕ ಗೋಚರ ತತ್ವವೂ ॥ ಭೇದಾದಿ ಭೇದ ಬ್ರಹ್ಮಾಂಡ ಕೋಟಿಗಳು ರೋ । ಮ್ಹಾದಿಗಳೊಳಡಕ ಮಾಗಿಹವು ಸಚರಾಚರವ । ನಾದಿಲೋಕಾ ಲೋಕವೆಲ್ಲ ಲೀಲಾಸೂತ್ರ ಮಾತ್ರ ದೊಳಗಿಹವು ಶಿವನಾ. ॥೧॥

ದಿಶೆ ಶ್ರೋತ್ರದಲಿ ನೇತ್ರದಲಿ ರವಿ ಮನಸ್ಸಿನೊಳು । ಶಶಿ ಪ್ರಾಣದಲಿ ವಾಯುವನಲ ಮುಖದಲಿ ಶಿರದ । ವಿಸರದಲಿ ತೆತ್ತೀಸ ಕೋಟಿ ದೇವ ತೆಗಳಭ್ಯಂತರವು ನಾಭಿಯಲ್ಲಿ ॥ ವಸುಧೆ ಪದ ತಳದಲ್ಲಿ ಪ್ರಪದದಲಿ ಶಕ್ರ ನಜ । ನೆಸೆವ ಜಂಘೆಯಲಿ ಭುಜದಲಿ ವಿಷ್ಣು ರುದ್ರ ಮುಖ । ಬಿಸರುಹದೊಳ ಖಿಳ ಜಗ ಜಠರದಲಿ ಜನಿತ ನಿಜ ಲಿಂಗಾಂಗ ಮಹಿಮೆಯಲ್ಲಿ ॥೨॥

ಉಪಮೆಗುಪಮಾನ ಮನುದೇವತಾದಿಗಳಿಲ್ಲ । ಜಪತಪ ಮಹಾದಿವ್ಯ ಮಂತ್ರ ಧ್ಯಾನಗಳಿಂದ । ಅಪರಿಮಿತ ಸೇವನಾರತರಾಗಿ ನಿಮ್ಮ ಪದನುತಿಯಿಂ ಕೃತಾರ್ಥರಾಗಿ ॥ ತ್ರಪತಿ ಪಟ್ಟಿಪ್ಪರಲ್ಲದೆ ನಿಶ್ಚಯದ ಮಹಿಮೆ । ಯುಪರಾ ಪರಂಪರಗಮ್ಯ ಭಾವಾತೀತ । ವಿಪುಳ ಜ್ಯೋತಿಲ್ಲಿಂಗ ವಿಶ್ವತೋ ಮುಖನ ಮುಖ ಘನಗಾಬ ಘನವಾವುದು ॥೩॥

ಮನುಮು ನೀಶ್ವರ ವೇದಶಾಸ್ತ್ರ ಶ್ರುತಿ ಸ್ಮೃತಿಯಲ್ಲ । ತನ ತನಗೆ ಹೊಗಳುತಿರುತಿಹವು ಶಿವ ಘನತೆಯಂ । ಘನ ತರಂ ತರಗಾಣದತ್ಯತಿ ಷ್ಠದ್ದಶಾಂಗುಲನೆಂದು ಒರಲುತಿಹವೂ ॥ ಎನಲಾ ಘನವ ದಾವದರುಶನಾಗವು ತರ್ಕ । ದನುಮತಕಸಾಧ್ಯ ಲಿಂಗದ ಮಹಾತ್ಮೆಗೆ ಕಡೆಯು । ನೆನೆಸಲಿಲ್ಲಾಗಿ ಪ್ರಣವಾದಿ ಪಂಚಾಕ್ಷರಿಯೊಳಡಕವಾಗಿಹುದೆ ಸತ್ಯಾ ॥೪॥

ನಿತ್ಯನನಿತ್ಯ ದೇವತೆಗಳರಿಯಲಿ ಕಳವೆ । ಸತ್ತುಚಿತ್ತಾನಂದ ಶಿವನನು ಭವಾದಿಥಾ । ವೋತ್ತಮರ ಭವ ಕಾರಣಕರದೊಳಮೃತಕರ । ಕಿರಣ ಸವ್ಯ

ಗ್ಜ್ಯೋತಿಯಾ॥ ಬಿತ್ತರಿಸಿ ತೊಳ ತೊಳಗುವತ್ಯಂತ ನಿರವಯದ । ಮತ್ತೆ ಸಚ್ಚಿತ್ಸುಖ ನಿರಂಜನದ ನಿರ್ಮಲದ । ನಿತ್ಯ ಕೂಡಲ ಚನ್ನಸಂಗನಂಗವಸು ಪ್ರಭು ಲಿಂಗದಲ್ಲಿಯೇ ಕಂಡೆನೂ ॥೫॥

---

## ೧೩. ಗುರು ಜಂಗಮ ಮಹಾತ್ಮ್ಯಸ್ಥಲ.

**ಸೂತ್ರ:**— ಇಂತು ಲಿಂಗ ಮಹಾತ್ಮೆಯಂ ತನ್ನ ಮನದಲ್ಲಿ ಕಂಡ ಪ್ರಸಾದಿಯು ತನ್ನ ಅರಿವಿನಲ್ಲಿ ಡೆಗೊಂಡ ಜಂಗಮ ಮಹಾತ್ಮೆ ಎಂತಿರ್ದು ದೆಂದೊಡೆ ಮುಂದೆ ಜಂಗಮ ಮಹಾತ್ಮೆಯು ಸ್ಥಲವಾದುದು.

॥ಪದ॥ ರಾಗ ಭೂಪಾಳಿ

ಶಿವನೇ ಜಂಗಮ ರೂಪ ಧರಿಸಿ ಲೋಕವನುದ್ಧರಿಸಲೆಂದು ಚರಿಸು ತ್ತಿರ್ಪ ॥ಪ॥

ಮಾನುಷ ಚರ್ಮಾವೃತನಾಗಿ ಸಮಾಧಾನವಿಡಿದು ನಿಜ ಲೀಲೆಯೊಳು । ಆನತ ಬೋಧ ರೂಪನಾಗಿ ಪರಮಾನಂದ ಲೀಲೆಯೊಳಿರುತಿಹನು ॥೫॥

ಚರಪರಾಪರ ಬೋಧಾ ರೂಪಿಂದ ಹೊರೆವನು ಭಕ್ತ ಜನಂಗ ಳನು । ಶರಣರ ಸರ್ವಾಂಗದೊಳು ಬೆಳಗುತಿರ್ಪ ಪರಿಪೂರ್ಣ ಮಹಾ ಘನ ಮಹಿಮ ॥೨॥

ಪರಮ ಪ್ರಸನ್ನ ಮೂರುತಿ ಜಂಗಮಲಿಂಗ ಪರಮ ಜ್ಞಾನ ಪ್ರಕಾ ಶಿತ । ಕರುಣಾಮೃತಮಯ ಸಚರಾಚರಗಮ್ಯ ನಿರುಪಮ ನಿರಾಳ ನಿಶ್ಚಿಂತನು ॥೩॥

ಶಕ್ತಿರಹಿತ ಶಕ್ತಿಗಾಧಾರರೂಪ ವಿರಕ್ತಿವಿಡಿದು ರಾಗವರ್ಜಿತ । ಭಕ್ತಿ ಪಿಂಡ ನಿರ್ದೇಹ ನಿರ್ಮಲ ನಿಜಶಕ್ತಿ ಸ್ವತಂತ್ರ ಮಹಂತನು ॥೪॥

ಪರಿಣಾಮಿಯು ಪರಾಪರ ಬೊಮ್ಮ ನಿರಭೇದ್ಯ ನಿರ್ಲೇಪ ಶರ ಣಾಗತ । ವರರತ್ನಾಮಣಿಯೆ ಶ್ರೀಅಲ್ಲಮಪ್ರಭುವೆ ನಮೋ ಕೂಡಲ ಸಂಗಯ್ಯ ॥೫॥

---

## ೧೪. ಭಕ್ತ ಮಹಾತ್ಮ್ಯಸ್ಥಲ.

**ಸೂತ್ರ:—** ಇಂತು ಜಂಗಮ ಮಹಾತ್ಮ್ಯೆಯನರಿದು ಆ ಜಂಗಮ ಪ್ರಸಾದವ ಸ್ವೀಕರಿಸಿ ಸುಖಿಯಾಗಿಪ್ಪ ಪ್ರಸಾದಿಯ ಸದಾಚಾರ ಸದ್ವರ್ತನೆಯಲ್ಲಡಗಿ ತೋರುತ್ತಿರ್ಪ ಸಾವಧಾನ ಸನ್ನಿಹಿತ ಭಕ್ತ ಮಹಾತ್ಮ್ಯ ಎಂತಿರ್ದುದೆಂದಡೆ, ಮುಂದೆ ಭಕ್ತ ಮಹಾತ್ಮ್ಯಸ್ಥಲವಾದುದು.

ಪದ॥ ರಾಗ ಗುಂಡಕ್ರಿ.

ದಾಸೋಹವ ನೋಡಲೆಂದು ಈಶ । ಬೇಡಿ ತನುವ ಕೊಡುವ । ಆ । ಸದರ್ಥ ಭಕ್ತರನ್ನು ಆಸೆಗೈವುದೇನು ಮನವೇ ॥ಪಲ್ಲವ॥

ಏಸು ಬಾರಿ ಬಂದ ಭವದ ದೋಷಗಳನು ಕೆಡಿಸಿ ಮುಕ್ತಿ। ವಾಸದೊಳಗೆ ಕೂಡುದು ಮಹಾ ಶಿವೈಕ್ಯ ದರುಶನಾ ॥೧॥

ಸುತ್ತಿ ಬಳಲಿ ತೀರ್ಥ ಕ್ಷೇತ್ರದತ್ತ ತೊಳಲಿ ಬಳಲಬೇಡ । ಭಕ್ತನಂಗಳವೆ ನಿತ್ಯಮುಕ್ತಿ ಲೋಕ । ವಾರಣಾಸಿ ॥೨॥

ಆವಭಾವದಿಂದ ಲಿಂಗದೇವ ಬೇಡಿ ಈವ । ಭಕ್ತ । ರೀವರಲ್ಲಮುಳಿದ ವ್ಯರ್ಥ ಜೀವರೇನ ನೀವರೂ ॥೩॥

ಕೊಟ್ಟು ದಣಿಯ ತನುಮನವ ಕೊಟ್ಟು ದಣಿಯ ಧನವಭಾವ । ಮುಟ್ಟಿ ಲಿಂಗಜಂಗಮಕ್ಕೆ ನಿಷ್ಠೆನಿರುತ ಭಕ್ತನೂ ॥೪॥

ಭಕ್ತನಂಗ ಶಕ್ತಿಗೀವ ಯುಕ್ತಿಲಿಂಗವಾಗಿ ಬಯಕೆ । ಗತ್ತಮುನ್ನ ಕೊಳುವ ಭಕ್ತಿಭಾವ ಕೂಡಲಸಂಗನೂ ॥೫॥

---

## ೧೫ ಶರಣಮಹಾತ್ಮ್ಯ ಸ್ಥಲ.

**ಸೂತ್ರ:—** ಇಂತು ಭಕ್ತಮಹಾತ್ಮ್ಯೆಯನಂಗದಲ್ಲಿ ತದ್ಗತವಾಗಿ ಮಾಡಿಕೊಂಡು ಭಿನ್ನಭಾವ ತೋರದ ಪ್ರಸಾದಿಯು ಬಾಹ್ಯಾಭ್ಯಂತರದಲ್ಲಿ ಪರಿಣಾಮ ಪ್ರಸಾದದ ಪರಮಾನಂದದೊಳಿಪ್ಪ ಶರಣಮಹಾತ್ಮ್ಯೆಯು ಎಂತಿರ್ದುದೆಂದೊಡೆ ಮುಂದೆ ಶರಣ ಮಹಾತ್ಮ್ಯಸ್ಥಲವಾದುದು.

॥ಪದ॥ ರಾಗ ಮಾಳವ ಗೌಳ.

ಕರ್ಮಕಾಯನುಮಲ್ಲ ಬ್ರಹ್ಮನೂರುತಿಯಲ್ಲ ಪರಬ್ರಹ್ಮವ ನುಡಿವಲ್ಲಿ ತಾನಿಲ್ಲದ ನಿರ್ಮೋಹಿ ॥ಪ॥

ಮಾತೆಪಿತರುಗಳುದರಜಾತ ಜನಿತನುಮಲ್ಲ ಶ್ವೇತ ಪೀತ ಕಪೋತ। ಷಡುವರ್ಣ ರಹಿತ। ನವಮಾಸ ತುಂಬಿದ ಮೂರುತಿ ತಾನಲ್ಲ ಅವಿರಳ ಲಿಂಗದ ಕಳೆಯ ಬೆಳಗು ತಾ ಶರಣಾ ॥೧॥

ನಡೆ ಕುಲವಳಿ ನೋಡಿಳಿಯ ಹಂಗಿಗನಲ್ಲ ನುಡಿಯ ಸದಗರವ ನಾದ ಬಿಂದು ತಾನಲ್ಲ । ಪದುಮಪರಿಮಳಕ್ಕೆರಗುವ ಭ್ರಮರ ತಾನಲ್ಲ ಭವದ ಕುಳ ವನಃ ಗೆಲಿದ ನಿಭ್ರಾಂತ ಶರಣಾ ॥೨॥

ಜಾಗ್ರುಸ್ವಪ್ನ ಸುಷುಪ್ತಿಯಾಗುವನಿಮಿಷನಲ್ಲ ಆಗಮುಕುಳದವಾದ ಭೋಗಿ ತಾನಲ್ಲ। ತೇಜನಿರಂಜನೆಯಗಣಿತ ಗುಣಿತನುಪಲ್ಲ ಸಹಜನಿತ್ಯನು ತಾನ ಭೇದ್ಯ ಶರಣಾ ॥೩॥

ಬಿಂದುಕಳೆಯ ಸುಖದ ಶಯನ ಸಂಪರ್ಕನಲ್ಲ ಒಂದು ಛಂದದಲಿ ಕಂದಮೂಲವನು ಗೆಲಿದ । ಸಂದಳಿದು ಸ್ವಯ ಸುಖವನೊಂದುಮಾಡಿ ತ್ರಿಬಂಧ ಭೇದವ ಗೆಲಿದ ನಿಷ್ಕಾಮಿ ಶರಣಾ ॥೪॥

ಚಂದ್ರಧಾರನುಮಲ್ಲ ಚಂದ್ರಪೂರಿತನಲ್ಲ ಇಂದ್ರಚಾಪದ ಪರಿಯ ಪ್ರಭಾವ ತಾನಲ್ಲ। ಭೃಂಗ ನುಂಗಿದ ರುಚಿಯನೊಂದು ಮಾಡಿ ಗುಹೇಶ್ವರ ನೆಂಬ ಲಿಂಗದ ಹಂಗನಳಿದ ಶರಣಾ ॥೫॥

---

## ೧೬. ಪ್ರಸಾದ ಮಹಾತ್ಮೆಸ್ಥಲ.

**ಸೂತ್ರ:—** ಇಂತು ಶರಣ ಮಹಾತ್ಮೆಯಲ್ಲಿ ಸರ್ವಾಂಗವು ಪರಮಾ ನಂದವನೈದಿದ ಪ್ರಸಾದಿ ತಾನು ಸ್ವೀಕರಿಸುವ ಪರಿಣಾಮ ಪ್ರಸಾದ ಮಹಾತ್ಮೆ ಎಂತಿರ್ದುದೆಂದಡೆ, ಮುಂದೆ ಪ್ರಸಾದ ಮಹಾತ್ಮೆ ಸ್ಥಲವಾದುದು.

॥ಪದ॥ ರಾಗ ನಾಟ.

ವೇದ ಶಾಸ್ತ್ರಾಗಮ ಪುರಾಣಗಳಲಿ ಶಿವನ ಪ್ರಸಾದವಲ್ಲದೆ ಇಲ್ಲವೆಂದು । ಆದಿ ಪುರುಷರು ಪ್ರಸಾದವ ಭೋಗಿಸಲು ವೈದಿಕಂಗೆ ಕೊಡಲಾಗದೇನೋ ॥ಪ॥

ಅನರ್ಹವುಮನ್ನೈವೇದ್ಯವೆಂಬ ಶಿವನ ವಾಕ್ಯಾರ್ಥವನರಿಯದೆ ನುಡಿವೆ। ನಾನಾರ್ಥ ಕಷ್ಟ ನೈವೇದ್ಯವೆಂಬ ಶಬ್ದ ಗೌಣ ಮುಖ್ಯಾರ್ಥವನರಿಯ ಬೇಕೆಲವೋ ।೧॥

ಸಲ್ಲುವುದೆ ಪ್ರಾಣಾಹುತಿಗೆ ಪಂಚ ಮಹಾಯಜ್ಞಕ್ಕೆ ಸಲುವುದೆ ಹವಿಗೆ ಶಿವನ ಪ್ರಸಾದ । ಸಲ್ಲದ ವೈದಿಕಂಗೆಂತನುಭವಿಸಬಹುದೆಂಬ ನಿಮ್ಮೊಲ್ಲಕ್ಕೆ ಪ್ರಸಾದವಲ್ಲದೆ ಸಲ್ಲದೆಂದು ತಿಳಿ ॥೨॥

ನೈವೇದ್ಯವೆಂಬುದು ಆರು ವಿಧವಾಗಿರ್ಪುದು ನೈವೇದ್ಯ ಷಡ್ರಸ ಸ್ವಾದ್ಯು ಎನಲು ನೋಡಾ । ಯೋ ವನರುಹಂ ಎಂದು ಹೇಳುವದಲ್ಲದೆ ಶಿವಭುಕ್ತ ಶೇಷಮನರ್ಹಂ ಎಂದು ಹೇಳಿತ್ತುಂಟೆ ॥೩॥

ಪುರಾಣ ಶ್ರಾದ್ಧ ಕಾಲೇ ಹರಭುಕ್ತ ಶೇಷವು ಪಿತರರಿಗೆ ಕೋಟಿ ಪರ್ಯಂತರ ತೃಪ್ತಿ ಎನಲು । ಮರಳಿ ಪಿತರರ ಶೇಷವ ಹರಂಗರ್ಪಿಸುವ ಪಾಷಂಡಿ ನಿರತರೇತೋ ಪಿತೃ ತಸ್ಯ ಎಕಲೆರೆದವಾ ॥೪॥

ತ್ವಾಧತ್ತೇಭಿರುದ್ರಸಂಚನ್ಮೋಭಿ ಎನಲು ವೇದಯೋಶ್ಚ ತಯೋರೀಶ್ಚ ಮನಜಾಯೋ ಜಾಯತೆ ಎನಲು । ವೇದವುದ್ಧರಾಯ ಪ್ರಥಮ ಸತತಂ ಹವಿ ರುದ್ರ ಎನಲು ವೇದ ವೇತ್ತಿ ಪ್ರಸಾದಯತೆ ಎನಲೀವುದೇನು ಮರುಳಾ ॥೫॥

ವೇದಾರ್ಥ ಕಾಮಯಂತ ಎಂಬ ಶ್ರುತ್ಯರ್ಥವಂ ತಿಳಿವೇದಿ ಗುಪ್ತ ಮಹಾ ತಸ್ಮಿನ್ನೆನಲು ನೋಡಾ । ವೇದ ರುದ್ರೇಣ ಪೀತಂ ಪಿಬಂತಿ ರುದ್ರೇಣ ಘ್ರಾತಂ ಜಿಘ್ರಂತಿ ವೇದ ಕೇವಲ ಗೋ ಭವತಿ ಕೇವಲಾಭಿ ಎನಲು ॥೬॥

ವೇದವಾಕ್ಯ ಕೇವಲ ಎನುತಿವೆಯುವರ ಭಾಷೆಯನರಿವಡರಿ ಶ್ರೌತ ಸ್ಮಾರ್ತವನೆಚ್ಚರುವಡೇ ವೇದಾಢ್ಯರನು ಕೇಳು । ವೇದ ಪುರುಷರು ಪ್ರಸಾದವ ಕೊಂಡಾಡುವರು ಶಿವನ ಪ್ರಸಾದವನಲ್ಲದೆ ಪರವಿಲ್ಲೆಂದು ।೭॥

೨೨೦. ಏನು ಏನು ಎನಲಿಲ್ಲದ ಮಹಾ ಘನ ನಿರಂಜನಾತೀತದ ನೆನಹು ಮಾತ್ರದಲ್ಲಿಯೆ ನವಪದ್ಮ ನವಶಕ್ತಿಗಳುತ್ಪತ್ಯ ಲಯವು. ನಿಃಶಬ್ದ ವೆಂಬ ಪರಬ್ರಹ್ಮದ ನೆನಹು ಮಾತ್ರದಲ್ಲಿಯೆ ಏಕಾಕ್ಷರ, ತ್ರಿಯಕ್ಷರ, ಸಹ ಸ್ರಾಕ್ಷರ, ಅಷ್ಟನಾದ ಉತ್ಪತ್ಯ ಲಯವು. ದಶ ಚಕ್ರ ಮೊದಲಾಗಿ ಚತು ರ್ವೇದ ಗಾಯತ್ರಿ ಅಜಪೆ ಕಡೆಯಾಗಿ ಸಮಸ್ತವು ಅಖಂಡ ಜ್ಯೋತಿರ್ಮಯ ವಾಗಿಹ ಗೋಳಕಾಕಾರ ಪ್ರಣವದಲ್ಲಿ ಉತ್ಪತ್ಯ ಲಯವೆಂದು ಬೋಧಿಸಿ ಕೃತಾರ್ಥನ ಮಾಡಿದ ಮಹಾಗುರುವಿನ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನು ಕಾಣಾ ಅಪ್ರಮಾಣ ಕೂಡಲಸಂಗಮದೇವಾ.

೨೨೧. ಇನ್ನು ಇಷ್ಟ ಪ್ರಾಣ ಭಾವಲಿಂಗಂಗಳ ಭೇದವೆಂತೆಂದಡೆ, ಆದಿ ಅಕಾರ ಉಕಾರ ಮಕಾರ ಈ ಮೂರು ಅಕ್ಷರ. ಅಕಾರವೇ ಆದಿ ನಾದ, ಉಕಾರವೇ ಆದಿ ಬಿಂದು, ಮಕಾರವೇ ಆದಿಕಳೆ. ಉಕಾರವೇ ಇಷ್ಟ ಲಿಂಗ, ಮಕಾರವೆ ಪ್ರಾಣಲಿಂಗ, ಅಕಾರವೇ ಭಾವಲಿಂಗ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೨೨. ॥ಗ್ರಂಥ॥ ಉಕಾರಂ ಇಷ್ಟಲಿಂಗಂ ಚ । ಮಕಾರಂ ಪ್ರಾಣ ಲಿಂಗಂಚ । ಅಕಾರ ಭಾವಲಿಂಗಂಚ । ತ್ರಿಧಾಮೇಕ ವರಾನನೆ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೨೩. ಇಂತೀ ಆದಿ ಅಕಾರ ಉಕಾರ ಮಕಾರಕ್ಕೆ ಆದಿ ಬಿಂದು ಕಳೆ ನಾದವೇ ಆಧಾರ, ಆ ಆದಿ ಬಿಂದು ಕಳೆ ನಾದಕ್ಕೆ, ಆ ಆದಿ ಪ್ರಕೃ ತಿಯೇ ಆಧಾರ ಆ ಆದಿ ಪ್ರಕೃತಿಗೆ ಪ್ರಾಣಮಾತ್ರವೇ ಆಧಾರ, ಆ ಪ್ರಾಣ ಮಾತ್ರೆಗೆ ಪರಂಜ್ಯೋತಿ ಲಿಂಗವೇ ಆಧಾರ, ಊ ಎಂದರೆ ಆದಿ ಬಿಂದು, ಮಾ ಯೆಂದರೆ ಉಕಾರವಳಿಯಿತ್ತು. ಆ ಎಂಬಲ್ಲಿ ಮಾ ಸ್ವರ ಬಂದು ಕೂಡಲು, ಶಕ್ತಿ ಶಿವನಾಗುತ್ತಿಹಂತಹ ಓಂಕಾರವಾಯಿತ್ತು ನೋಡಾ ಅಪ್ರ ಮಾಣ ಕೂಡಲಸಂಗಮದೇವಾ.

೨೨೪. ಉಕಾರವೆಂಬ ಪ್ರಣವದಲ್ಲಿ ದಂಡಶ್ಚ ತಾರಕಾ ಭವಂತಿ, ಓಂ ಇಪಲಂಗೊ ದೇವತಃ । ಉಕಾರಂಚ ಲಯಂ ಪ್ರಾಪ್ತಿ ನವಮಂ ಪ್ರಣವಂ ಶಿವೈಃ । ಮಕಾರವೆಂಬ ಪ್ರಣವದಲ್ಲಿ ಕುಂಡಲಶ್ಚ ಅರ್ಧ ಚಂದ್ರೋಭವತಿ ಓಂ ಪ್ರಣಮಲಿಂಗೋ ದೇವತಾಃ । ಮಕಾರಂ ಚ ಲಯಂ ಪ್ರಾಪ್ತಿ ದಶಮಂ

ಪ್ರಣವಾಂಶಿಕೈಃ । ಅಕಾರವೆಂಬ ಪ್ರಣವುದಲ್ಲಿ ದರ್ಪಣಾಷ್ಟ ಜ್ಯೋತಿರೂಪಾ ಭವತಿ ಓಂ ಭಾವಲಿಂಗೋ ದೇವತಾಃ । ಅಕಾರಂ ಚ ಲಯ ಪ್ರಾಪ್ತಿ । ಉಕಾರಶ್ಚ ಪ್ರಣವಾಂಶಿಕೈಃ । ಉಕಾರಂಚ ಮಕಾರೆ ಚ ಅಕಾರೆ ಚ ತ್ರಿಯಕ್ಷರಂ । ಇದಂ ಮೆತಸಮುತ್ಪನ್ನಂ । ಓಂಕಾರ ಪರಮೇಶ್ವರಾಃ । ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೨೫. ಇನ್ನು ಪರಬ್ರಹ್ಮಸ್ವರೂಪಾಗಿಹ ಪರಮ ಪ್ರಣವದ ಲಕ್ಷಣವ ದಂತೆಂದಡೆ, ಪ್ರಥಮಂ ತಾರಕಾ ಸ್ವರೂಪವಾಗಿಹುದು. ದ್ವಿತೀಯಂ ದಂಡ ಸ್ವರೂಪವಾಗಿಹುದು. ತೃತೀಯಂ ಕುಂಡಲಾಕಾರವಾಗಿಹುದು. ಚತುರ್ಥಂ ಅರ್ಧಚಂದ್ರಾಕಾರವಾಗಿಹುದು. ಪಂಚಮಂ ದರ್ಪಣಾಕಾರವಾಗಿಹುದು. ಷಷ್ಠಮಂ ಜ್ಯೋತಿಸ್ವರೂಪವಾಗಿಹುದು. ಇಂತೀ ಪ್ರಣವ ಅತ್ಯಂತ ಗೋಪ್ಯವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

॥ರಹಸ್ಯೆ॥ ಪ್ರಥಮಂ ತಾರಕಾ ರೂಪಂ । ದ್ವಿತೀಯಂ ದಂಡ ಉಚ್ಯತೆ। ತೃತೀಯಂ ಕುಂಡಲಾಕಾರಂ । ಚತುರ್ಥಂಚಾರ್ಧ ಚಂದ್ರಕಂ । ಪಂಚಮಂ ದರ್ಪಣಾಕಾರಂ । ಷಷ್ಠಮಂ ಜ್ಯೋತಿರೂಪಕಂ । ಇತಿ ಪ್ರಣವ ವಿಜ್ಞೇಯಂ। ದ್ಯತ್ತ ದೋಪ್ಯ ವರಾನನೆ । ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೨೭. ಇನ್ನು ಪಂಚಭೂತದುತ್ಪತ್ಯವೆಂತೆಂದಡೆ, ಪರಬ್ರಹ್ಮಸ್ವರೂಪವಾಗಿಹ ಪರಮ ಪ್ರಣವದ ಜ್ಯೋತಿಸ್ವರೂಪದಲ್ಲಿ ಆತ್ಮನುತ್ಪತ್ಯವಾದನು. ಆ ಪ್ರಣವದ ದರ್ಪಣಾಕಾರದಲ್ಲಿ ಆಕಾಶ ಉತ್ಪತ್ಯವಾಯಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ವಾಯು ಉತ್ಪತ್ಯವಾಯಿತ್ತು. ಆ ಪ್ರಣವದ ಕುಂಡಲಾಕೃತಿಯಲ್ಲಿ ತೇಜ ಉತ್ಪತ್ಯವಾಯಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ಅಪ್ಪು ಉತ್ಪತ್ಯವಾಯಿತ್ತು. ಆ ಪ್ರಣವದ ತಾರಕ ಸ್ವರೂಪದಲ್ಲಿ ಪೃಥ್ವಿ ಉತ್ಪತ್ಯವಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೨೮. ॥ಚಿತ್ಪ್ರಕಾಶ ಸೂತ್ರೆ ಸಾಕ್ಷಿ॥ ಓಂಕಾರ ಜ್ಯೋತಿರೂಪೆ ಚ। ಆತ್ಮಶ್ಚೈವ ಸಮುದ್ಭವಂ । ಓಂಕಾರ ದರ್ಪಣಾಕಾರೆ । ಆಕಾಶಂ ಚ ಸಮುದ್ಭವಂ । ಓಂಕಾರ ಅರ್ಧಚಂದ್ರ ಚ । ವಾಯುಶ್ಚೈವ ಸಮುದ್ಭವಂ ।

ಓಂಕಾರ ಕುಂಡಲಾಕಾರೆ ತೇಜಶ್ಚೈವ ಸಮುದ್ಭವಂ / ಓಂಕಾರ ದಂಡ ರೂಪೇ ಚ । ಆಪಶ್ಚೈವ ಸಮುದ್ಭವಂ । ಓಂಕಾರ ತಾರಕಾರೂಪೆ । ಪೃಥಿವ್ಯೈವ ಸಮುದ್ಭವಂ । ಇತಿ ಷಡ್‌ಭೂತಂ ದೇವಿ, ಸ್ಥಾನೆಸ್ಥಾನೆ ಸಮುದ್ಭವಂ । ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೨೯. ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಆತ್ಮ, ಈ ಆರು ಪ್ರಕಾರವು ಅತ್ಯಂತ ಗೋಪ್ಯ, ಅತ್ಯಂತ ಸೂಕ್ಷ್ಮ, ಅತ್ಯಂತ ರಹಸ್ಯವಾಗಿಹುದು. ಈಯೂರನು ಗುರುಮುಖದಲ್ಲಿ ಕೇಳಿಕೊಂಬುವುದು ನೋಡಾ, ಅಪ್ರಮಾಣ ಕೂಡಲಸಂಗಮದೇವಾ.

೨೩೦. ಇನ್ನು ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯನುತ್ಪತ್ಯವೆಂತೆಂದಡೆ, ಪರಬ್ರಹ್ಮ ಸ್ವರೂಪವಾಗಿಹ ಪರನು ಪ್ರಣವದ ಜ್ಯೋತಿ ಸ್ವರೂಪದಲ್ಲಿ ಐಕ್ಯನುತ್ಪತ್ಯವಾದನು. ಆ ಪ್ರಣವದ ದರ್ಪಣಾಕಾರದಲ್ಲಿ ಶರಣನುತ್ಪತ್ಯವಾದನು. ಆ ಪ್ರಣವದ ಅರ್ಧಚಂದ್ರಕದಲ್ಲಿ ಪ್ರಾಣಲಿಂಗಿಯುತ್ಪತ್ಯವಾದನು. ಆ ಪ್ರಣವದ ಕುಂಡಲಾಕಾರದಲ್ಲಿ ಪ್ರಸಾದಿಯುತ್ಪತ್ಯವಾದನು. ಆ ಪ್ರಣವದ ದಂಡಸ್ವರೂಪದಲ್ಲಿ ಮಹೇಶ್ವರನುತ್ಪತ್ಯವಾದನು. ಪ್ರಣವದ ತಾರಕಾ ಸ್ವರೂಪದಲ್ಲಿ ಭಕ್ತನುತ್ಪತ್ಯವಾದನು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೩೧. ಚಿತ್ಪ್ರಕಾಶ ವೃತ್ತರಸಾರೆ ಸಾಕ್ಷಿ॥ ಓಂಕಾರ ಜ್ಯೋತಿರೂಪೇಚ। ಐಕ್ಯಂಚ ಸಮುದ್ಭವಂ । ಓಂಕಾರ ದರ್ಪಣಾಕಾರೆ ಶರಣಂ ಚ ಸಮುದ್ಭವಂ। ಓಂಕಾರಮರ್ಧಚಂದ್ರೆ ಚ । ಪ್ರಾಣಲಿಂಗಿ ಸಮುದ್ಭವಂ। ಓಂಕಾರ ಕುಂಡಲಾಕಾರೆ ಪ್ರಸಾದಂ ಚ ಸಮುದ್ಭವಂ । ಓಂಕಾರ ದಂಡರೂಪೇಚ । ಮಹೇಶ್ವರಂ ಸಮುದ್ಭವಂ । ಓಂಕಾರ ತಾರಕಾರೂಪೆ, ಭಕ್ತಶ್ಚೈವ ಸಮುದ್ಭವಂ । ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೩೨. ಇನ್ನು ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯನ ನೆಲೆಯೆಂತೆಂದಡೆ, ಪೃಥ್ವಿ ಭೂತದಲ್ಲಿ ಭಕ್ತನಿಹನು. ಅಪ್ಪು ಭೂತದಲ್ಲಿ ಮಹೇಶ್ವರನಿಹನು. ಅಗ್ನಿ ಭೂತದಲ್ಲಿ ಪ್ರಸಾದಿ ಇಹನು. ವಾಯು ಭೂತದಲ್ಲಿ ಪ್ರಾಣಲಿಂಗಿ ಇಹನು. ಆಕಾಶ ಭೂತದಲ್ಲಿ ಶರಣನಿಹನು. ಆತ್ಮ ಭೂತದಲ್ಲಿ ಐಕ್ಯನಿಹನು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೩೩. ಚಿತ್ಪ್ರಕಾಶ ಉತ್ತರ ಸೂತ್ರೆ ಸಾಕ್ಷಿ ॥ ಪೃಥ್ವಿ ಭೂತೇ ಚ ಭಕ್ತಶ್ಚ । ಅಪ್ಪು ಭೂತೋ ಮಹೇಶ್ವರ । ಪ್ರಸಾದಿ ತೇಜ ಭೂತಂ ಚಂ । ಪ್ರಾಣಂ ಚ ವಾಯುಭೂತಕಂ । ಶರಣ್ಯಾಕಾಶಭೂತಂ ಚ । ಐಕ್ಯಂ ಚಾತ್ಮ ಭೂತಕಂ । ಇತಿ ಷಟ್‌ಸ್ಥಳಂ ದೇವಿ ಸ್ಥಾನೆ ಸ್ಥಾನೆ ಸಮುದ್ಭವಂ ಚರೇತ್ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೩೪. ಇನ್ನು ಷಡ್ವಿಧ ಹಸ್ತ ಉತ್ಪತ್ಯವೆಂತೆಂದಡೆ, ಪರಬ್ರಹ್ಮ ಸ್ವರೂಪವಾಗಿಹ ಪರಮ ಪ್ರಣವದ ಜ್ಯೋತಿಸ್ವರೂಪದಲ್ಲಿ ಭಾವ ಹಸ್ತ ಹುಟ್ಟಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಜ್ಞಾನಹಸ್ತ ಹುಟ್ಟಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ಸುಮನ ಹಸ್ತ ಪುಟ್ಟಿತ್ತು, ಆ ಪ್ರಣವದ ಕುಂಡಲಾಕಾರದಲ್ಲಿ ನಿರಹಂಕಾರ ಹುಟ್ಟಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ಸುಬುದ್ಧಿ ಹಸ್ತ ಪುಟ್ಟಿತ್ತು. ಆ ಪ್ರಣವದ ತಾರಕಾ ಸ್ವರೂಪದಲ್ಲಿ ಸುಚಿತ್ತ ಹಸ್ತ ಪುಟ್ಟಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೩೫. ಅಪಿಪದಾತೀತಾಗಮೆ ಸಾಕ್ಷಿ ॥ ಓಂಕಾರ ಜ್ಯೋತಿರೂಪೇ ಚ । ಭಾವಹಸ್ತಶ್ಚ ಜಾಯತೆ । ಓಂಕಾರ ದರ್ಪಣಾಕಾರೆ, ಜ್ಞಾನಹಸ್ತಶ್ಚ ಜಾಯತೆ । ಓಂಕಾರಮರ್ಧಚಂದ್ರೆ ಚ । ಸುಮನ ಹಸ್ತಶ್ಚ ಜಾಯತೆ । ಓಂಕಾರ ಕುಂಡಲಾಕಾರೆ, ಅಹಂಕಾರಂ ಚ ಜಾಯತೆ । ಓಂಕಾರ ದಂಡ ರೂಪೇಚ । ಬುದ್ಧಿ ಹಸ್ತಂ ಚ ಜಾಯತೆ । ಓಂಕಾರ ತಾರಕಾ ರೂಪೆ ಚಿತ್ತ ಹಸ್ತಂ ಚ ಜಾಯತೆ । ಇತಿ ಷಷ್ಠ ಹಸ್ತಂ ದೇವಿ ಸ್ಥಾನೆ ಸ್ಥಾನೆ ಚ ಜಾಯತೆ, ಎಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ

೨೩೬. ಇನ್ನು ಷಡ್ವಿಧ ಹಸ್ತಂಗಳ ನೆಲೆ ಅದೆಂತೆಂದಡೆ, ಪೃಥ್ವಿಯಲ್ಲಿ ಸುಚಿತ್ತ ಹಸ್ತವಿಹುದು, ಅಪ್ಪುವಿನಲ್ಲಿ ಸುಬುದ್ಧಿ ಹಸ್ತವಿಹುದು. ತೇಜದಲ್ಲಿ ನಿರಹಂಕಾರ ಹಸ್ತವಿಹುದು, ವಾಯುವಿನಲ್ಲಿ ಸುಮನ ಹಸ್ತ ವಿಹುದು. ಆಕಾಶದಲ್ಲಿ ಸುಜ್ಞಾನಹಸ್ತವಿಹುದು. ಆತ್ಮನಲ್ಲಿ ಭವಹಸ್ತವಿಹುದು, ಈ ಭೇದವನರಿವುದು ಅತ್ಯಂತ ಸೂಕ್ಷ್ಮ ನೋಡಾ ! ಅಪ್ರಮಾಣ ಕೂಡಲ ಸಂಗಮದೇವಾ.

೨೩೭. ಚಿದ್ರೂಪಸಾರೆ ॥ ಚಿತ್ತಹಸ್ತಂ ಚ ಪೃಥ್ವೀಚ । ಬುದ್ಧಿ ಹಸ್ತಂ ಚ ಆಪಕಂ । ಅಹಂಕಾರಂ ಚ ತೇಜಂ ಚ । ಮನೋಹಸ್ತಂ ಚ ಮಾರುತಃ ।

ಜ್ಞಾನ ಹಸ್ತಂಚ ಮಾಕಾಶಂ । ಭಾವ ಹಸ್ತಂಚ ಆತ್ಮಕಂ । ಇತಿ ಹಸ್ತಸ್ಯ ಸಂಜ್ಞಾತ್ವ ಸುಸೂಕ್ಷ್ಮಂ ಶೃಣಿಪಾರ್ವತಿ । ಎಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ.

೨೩೮. ಇನ್ನು ಷಡ್ವಿಧ ಲಿಂಗ ಉತ್ಪತ್ಯವೆಂತೆಂದಡೆ, ಪರಬ್ರಹ್ಮ ಸ್ವರೂಪವಾಗಿಹ, ಪರವ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಮಹಾಲಿಂಗ ಹುಟ್ಟಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಪ್ರಸಾದ ಹುಟ್ಟಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ಶಿವಲಿಂಗ ಹುಟ್ಟಿತ್ತು. ಆ ಪ್ರಣವದ ದಂಡ ಸ್ವರೂಪದಲ್ಲಿ ಗುರುಲಿಂಗ ಹುಟ್ಟಿತ್ತು. ಆ ಪ್ರಣವದ ತಾರಕಾಸ್ವರೂಪದಲ್ಲಿ ಆಚಾರಲಿಂಗ ಹುಟ್ಟಿತ್ತು ನೋಡಾ! ಅಪ್ರಮಾಣ ಕೂಡಲಸಂಗಮದೇವ.

೨೩೯. ಶಿವಲಿಂಗಾಗಮೇ ಸಾಕ್ಷಿ ॥ ಓಂಕಾರ ಜ್ಯೋತಿರೂಪೇಚ, ಮಹಾಲಿಂಗಂ ಚ ॥ ಜಾಯತೆ ಓಂಕಾರ ದರ್ಪಣಾಕಾರೆ, ಪ್ರಸಾದ ಲಿಂಗಂ ಚ ಜಾಯತೆ, ಓಂಕಾರಮರ್ಧ ಚಂದ್ರೆ ಚ । ಜಂಗಮಂಚ ಸ ಜಾಯತೆ। ಓಂಕಾರ ಕುಂಡಲಾಕಾರೆ ಶಿವಲಿಂಗಂ ಚ ಜಾಯತೆ, ಓಂಕಾರ ದಂಡ ರೂಪೆ ಚ ಗುರುಲಿಂಗಂ ಚ ಜಾಯತೆ, ಓಂಕಾರ ತಾರಕಾರೂಪೆ ಆಚಾರಂ ಚ ಸಜಾಯತೆ, ಎಂದುದಾಗಿ ಅಪ್ರಮಾಣ ಕೂದಲಸಂಗಮದೇವಾ.

೨೪೦. ಇನ್ನು ಷಡ್ವಿಧ ಲಿಂಗದ ನೆಲೆ ಅದೆಂತೆಂದಡೆ. ಪೃಥ್ವಿಯಲ್ಲಿ ಆಚಾರಲಿಂಗವಿಹುದು, ಅಪ್ಪುವಿನಲ್ಲಿ ಗುರುಲಿಂಗವಿಹುದು. ತೇಜದಲ್ಲಿ ಶಿವ ಲಿಂಗವಿಹುದು, ವಾಯುುವಿನಲ್ಲಿ ಜಂಗಮಲಿಂಗವಿಹುದು. ಆಕಾಶದಲ್ಲಿ ಪ್ರಸಾದ ಲಿಂಗವಿಹುದು. ಆತ್ಮನಲ್ಲಿ ಮಹಾಲಿಂಗವಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೪೧. ಶಿವಲಿಂಗ ಸೂತ್ರೆ ಸಾಕ್ಷಿ॥ ಆಚಾರಂ ಪೃಥ್ವಿಭೂತೇ ಚ ಆಪಶ್ಚ ಗುರುಲಿಂಗಕಂ । ಯತ್ತೇಜಂ ಶಿವಲಿಂಗಂ ಚ । ವಾಯೌ ಚ ಚರ ಲಿಂಗಕಂ । ಪ್ರಸಾದಲಿಂಗೆ ತ್ವಾಕಾಶಂ । ಆತ್ಮತಾ ಮಹಾಮೆವ ಚ । ಇತಿ ಲಿಂಗಸ್ಥಲಂ ಜ್ಞಾತ್ವಾ । ದುರ್ಲಭಂ ಚ ವರಾನನೆಯೆಂದುದಾಗಿ, ಅಪ್ರ ಮಾಣ ಕೂಡಲಸಂಗಮದೇವಾ.

೨೪೨. ಇನ್ನು ಷಡ್ವಿಧ ಮುಖಂಗಳುತ್ಪತ್ಯವೆಂತೆಂದಡೆ, ಪರಬ್ರಹ್ಮ ಸ್ವರೂಪವಾಗಿಹ ಪರ ಪ್ರಣವದ ಜ್ಯೋತಿಸ್ವರೂಪದಲ್ಲಿ ಮನಸ್ಸು ಪುಟ್ಟಿತ್ತು.

ಆ ಪ್ರಣವದ ದರ್ಪಣಾಕಾರದಲ್ಲಿ ಶ್ರೋತ್ರ ಪುಟ್ಟಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ತ್ವಕ್ಕು ಪುಟ್ಟಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ನೇತ್ರ ಪುಟ್ಟಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ಜಿಹ್ವೆ ಪುಟ್ಟಿತ್ತು. ಆ ಪ್ರಣವದ ತಾರಕಾ ಸ್ವರೂಪದಲ್ಲಿ ಘ್ರಾಣ ಪುಟ್ಟಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೪೩. ಚಕ್ರಾತೀತಾಗಮೆ ಸಾಕ್ಷಿ॥ ಓಂಕಾರ ಜ್ಯೋತಿರೂಪೆ ಚ। ಮಾನಸಂ ಚ ಸಮುದ್ಭವಂ। ಓಂಕಾರ ದರ್ಪಣಾಕಾರೆ ಶ್ರೋತ್ರಂ ಚೈವ ಸಮುದ್ಭವಂ। ಓಂಕಾರಯರ್ಧಚಂದ್ರೆ ಚ। ತ್ವಕ್ಸ್ಯಶ್ಚೈವ ಸಮುದ್ಭವಂ। ಓಂಕಾರ ಕುಂಡಲಾಕಾರೆ। ನೇತ್ರಶ್ಚೈವ ಸಮುದ್ಭವಂ। ಓಂಕಾರ ದಂಡ ರೂಪೇ ಚ। ಜಿಹ್ವಶ್ಚೈವ ಸಮುದ್ಭವಂ। ಓಂಕಾರ ತಾರಕಾ ರೂಪೆ। ಘ್ರಾಣಶ್ಚೈವ ಸಮುದ್ಭವಂ। ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೪೪. ಇನ್ನು ಷಡ್ವಿಧ ಮುಖಂಗಳ ನೆಲೆಯದೆಂತೆಂದಡೆ, ಘ್ರಾಣ ಪೃಥ್ವಿಗಾಶ್ರಯವಾಗಿಹುದು, ಜಿಹ್ವೆ ಅಪ್ಪುವಿಗಾಶ್ರಯವಾಗಿಹುದು. ಅಗ್ನಿ, ತೇಜವಾಶ್ರಯವಾಗಿಹುದು, ತ್ವಕ್ಕು ವಾಯುವಿಗಾಶ್ರಯವಾಗಿಹುದು. ಶ್ರೋತ್ರ ಆಕಾಶಕ್ಕಾಶ್ರಯವಾಗಿಹುದು. ಮನ ಆತ್ಮಾಶ್ರಯವಾಗಿಹುದು ನೋಡಾ! ಅಪ್ರಮಾಣ ಕೂಡಲಸಂಗಮದೇವಾ.

೨೪೫. ಜ್ಯೋತಿಸಾರೆ ಸಾಕ್ಷಿ॥ ಘ್ರಾಣಂ ಪೃಥ್ವಿಮಾಶ್ರಿತ್ಯ। ಜಿಹ್ವಾ ಚ ಜಲಮಾಶ್ರಿತೋ ನೇತ್ರಂ ಚ ತೇಜ ಮಾಶ್ರಿತ್ಯ। ತ್ವಕ್ಚೈವಂ ವಾಯು ವಾಶ್ರಿತಾ। ಶ್ರೋತ್ರಂ ವಾಚಾಕಾಶಮಾಶ್ರಿತ್ಯ। ಮನಸ್ಯದಾತ್ಮನಾಶ್ರಯುಸಿ ಇತೀಷಷ್ಠ ಮುಖಂ ದೇವಿ ಸ್ಥಾನೆಸ್ಥಾನೆ ಸಮಾಚರೇತ್। ಎಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ.

೨೪೬. ಇನ್ನು ಷಡ್ವಿಧಪರಿಣಾಮದುತ್ಪತ್ಯವೆಂತೆಂದಡೆ, ಪರಬ್ರಹ್ಮ ಸ್ವರೂಪವಾಗಿ ಪರಮ ಪ್ರಣವದ ಜ್ಯೋತಿಸ್ವರೂಪದಲ್ಲಿ ಪರಿಣಾಮ ಪುಟ್ಟಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಶಬ್ದ ಪುಟ್ಟಿತ್ತು. ಆ ಪ್ರಣವದ ಅರ್ಧ ಚಂದ್ರಕದಲ್ಲಿ ಸ್ಪರ್ಶನ ಪುಟ್ಟಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ರೂಪು ಹುಟ್ಟಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ರಸ ಪುಟ್ಟಿತ್ತು. ಆ

ಪ್ರಣವದ ತಾರಕಾ ಸ್ವರೂಪದಲ್ಲಿ ಗಂಧ ಪುಟ್ಟಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

ಶಿವಸೂತ್ರಸಾರೆ ಸಾಕ್ಷಿ॥ ಓಂಕಾರ ಜ್ಯೋತಿರೂಪೇಚ । ಪರಿಣಾಮಂ ಚ ಜಾಯತೆ । ಓಂಕಾರ ದರ್ಪಣಾಕಾರೆ । ಶಬ್ದಶ್ಚೈವ ಸ ಜಾಯತೆ । ಓಂಕಾರಮರ್ಧಚಂದ್ರೆ ಚ । ಸ್ಪರ್ಶನಂ ಚ ಸ ಜಾಯತೆ । ಓಂಕಾರ ಕುಂಡಲಾಕಾರೆ । ರೂಪಂ ಚೈವ ಸ ಜಾಯತೆ । ಓಂಕಾರ ದಂಡರೂಪೇಚ । ರಸಂ ಚೈವ ಸಜಾಯತೆ ಓಂಕಾರ ತಾರಕಾ ರೂಪೆ । ಗಂಧಂ ಚೈವ ಸಜಾಯತೆ । ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೪೮. ಇನ್ನು ಷಡ್ವಿಧ ಪರಿಣಾಮದ ನೆಲೆ ಅದೆಂತೆಂದೊಡೆ, ಪೃಥ್ವಿಯಲ್ಲಿ ಗಂಧವಿಹುದು, ಅಪ್ಪುವಿನಲ್ಲಿ ರಸವಿಹುದು, ಅಗ್ನಿಯಲ್ಲಿ ರೂಪುವಿಹುದು, ವಾಯುವಿನಲ್ಲಿ ಸ್ಪರ್ಶವಿಹುದು, ಆಕಾಶದಲ್ಲಿ ಶಬ್ದವಿಹುದು, ಆತ್ಮನಲ್ಲಿ ತೃಪ್ತಿ ಇಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೪೯. ಶಿವಲಿಂಗಸೂತ್ರೆ ಸಾಕ್ಷಿ॥ ಸ.ಗಂಧ ಪೃಥ್ವಿಮಾಶ್ರಿತ್ಯ । ಸುರಸಜಲಮಾಶ್ರಿತಾಃ । ರೂಪೆ ಚ ತೇಜಮಾಶ್ರಿತ್ಯ । ಸ್ಪರ್ಶನಂ ವಾಯುವಾಶ್ರಿತಾಃ । ಶಬ್ದಮಾಕಾಶಮಾಶ್ರಿತ್ಯ । ಆತ್ಮಾಚ ತೃಪ್ತಿಮಾಶ್ರಿಯಃ । ಇತಿ ಷಷ್ಠೇಂದ್ರಿಯಂ ದೇವಿ, ಸ್ಥಾನೆ ಸಮಾಚರೇತ್ । ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೫೦. ಇನ್ನು ಅರ್ಪಿತಾವಧಾನದ ಭೇದವೆಂತೆಂದಡೆ, ಭೂಮಿಯೆ ಅಂಗವಾದ ಭಕ್ತನು ಸುಚಿತ್ತವೆಂಬ ಹಸ್ತದ ಆಚಾರಲಿಂಗಕ್ಕೆ ಪ್ರಾಣವೆಂಬ ಮುಖದಲ್ಲಿ ಗಂಧವನೆ ಸಮರ್ಪಣವ ಮಾಡಿ, ತೃಪ್ತಿಯನ್ನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೫೧. ರಹಸ್ಯ ಸಾಕ್ಷಿ॥ ಚಿತ್ತಹಸ್ತೇನ ಭೂಮ್ಯಾಂಗೊ । ಭಕ್ತಶ್ಚಾಚಾರಲಿಂಗಕಂ । ಘ್ರಾಣಚತ್ಮನುಖಂ ಗಂಧಂ । ಅರ್ಪಿತಂ ತೃಪ್ತಿಭೊಕ್ತೃವಾನ್ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೫೨. ಅಪ್ಪುವೆಂಬ ಅಂಗವಾದ ಮಹೇಶ್ವರನು ಸುಬುದ್ಧಿಯೆಂಬ ಹಸ್ತದಲ್ಲಿ ಗುರುಲಿಂಗಕ್ಕೆ ಜಿಹ್ವೆ ಎಂಬ ಮುಖದಲ್ಲಿ ರಸವ ಸಮರ್ಪಣ

ಮಾಡಿ, ತೃಪ್ತಿಯನೆ ಭೋಗಿಸುವ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೨೫೩. ॥ಸಾಕ್ಷಿ॥ ಮಹೇಶ್ವರ ಜಲಾಂಗಂ ಚ । ಬುದ್ಧಿಹಸ್ತೇನ ಸದ್ಗುರು ಜಿಹ್ವಾ ಮುಖೇರಸಂಭೇದಂ । ಅರ್ಪಿತಂ ತೃಪ್ತಿಭೂಕ್ತವಾನ್ । ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೫೪. ಅಗ್ನಿಯೇ ಅಂಗವಾದ ಪ್ರಸಾದಿಗೆ ನಿರಹಂಕಾರವೆಂಬ ಹಸ್ತದಲ್ಲಿ ಶಿವಲಿಂಗಕ್ಕೆ ನೇತ್ರವೆಂಬ ಮುಖದಲ್ಲಿ ರೂಪ ಸಮರ್ಪಣವ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೫೫. ॥ಸಾಕ್ಷಿ॥ ನಿರಹಂಕಾರ ಹಸ್ತೆ ಚ । ಅನಲಾಂಗ ಪ್ರಸಾದಿ ಚ । ಶಿವಲಿಂಗ ಮುಖೆ ನೇತ್ರೆ ಅರ್ಪಿತಂ ರೂಪಭೂಕ್ತವಾನ್ । ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೫೬. ವಾಯುವೇ ಅಂಗವಾದ ಪ್ರಾಣಲಿಂಗಿಗೆ ಸುಮನವೆಂಬ ಹಸ್ತದಲ್ಲಿ ಜಂಗಮಲಿಂಗಕ್ಕೆ ತ್ವಕ್ಕೆಂಬ ಮುಖದಲ್ಲಿ ಸ್ಪರ್ಶನವ ಸಮರ್ಪಣವ ಮಾಡಿ, ತೃಪ್ತಿಯನೆ ಭೋಗಿಸುವನು ನೋಡಾ । ಅಪ್ರಮಾಣ ಕೂಡಲ ಸಂಗಮದೇವಾ.

೨೫೭. ॥ಸಾಕ್ಷಿ॥ ಮನೋಹಸ್ತೇನ ವಾಯ್ವಂಗಂ । ಪ್ರಾಣಲಿಂಗಿ ತಥೈವ ಚ । ಜಂಗಮೆ ತ್ವಙ್ಮುಖಶ್ಚೈವ । ಅರ್ಪಿತಂ ಸ್ಪರ್ಶಭೂಕ್ತವಾನ್ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೫೮. ಆಕಾಶವೆ ಅಂಗವಾದ ಶರಣಂಗೆ ಸುಜ್ಞಾನವೆಂಬ ಹಸ್ತದಲ್ಲಿ ಪ್ರಸಾದಲಿಂಗಕ್ಕೆ ಶ್ರೋತ್ರವೆಂಬ ಮುಖದಲ್ಲಿ ಶಬ್ದವ ಸಮರ್ಪಣವ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೫೯. ॥ಸಾಕ್ಷಿ॥ ಜ್ಞಾನಹಸ್ತೆನ ಶರಣ । ವ್ಯೋಮಾಂಗಶ್ಚ ಪ್ರಸಾದಿಕೆ । ಶ್ರೋತ್ರೆ ಚ ತನ್ಮುಖಶ್ಚೈವ । ಅರ್ಪಿತಂ ಶಬ್ದಯುಕ್ತವಾನ್ । ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

ಸಂಪುಟ ೨೯  ಸಂಚಿಕೆ ೧

# ಶಿವಾನುಭವ



:: ಸಂಪಾದಕರು ::

ಫ. ಗು. ಹಳಕಟ್ಟಿ,

ಬಿ. ಏ. ಎಲ್. ಎಲ್. ಬಿ.

ವಾ. ಚ. ೫-೧೨-೦] ವಿಜಾಪೂರ [ಅಕ್ಟೋಬರ ೧೯೫೫

# ವಿಷಯಾನುಕ್ರಮಣಿಕೆ.

ಶಿವಾನುಭವ

ಸಂಪುಟ ೨೯ | ಅಕ್ಟೋಬರ ೧೯೫೫ | ಸಂಚಿಕೆ ೧೦

# ವಿದ್ಯಾಭ್ಯಾಸವೂ ಚಲನಚಿತ್ರವೂ.

( ಲೇಖಕರು:— ಶ್ರೀ. ಮ. ಮಲ್ಲಪ್ಪ ಜ್ಞಾನಮಂದಿರ, ಹಲಗೂರು. )

ಚಲನಚಿತ್ರದ ಸಹಾಯದಿಂದ ಕಲಿಸಿದ ಪಾಠವು ತಾನಾಗಿಯೇ ನೇರವಾಗಿ ಮಕ್ಕಳ ಮನಸ್ಸಿನಲ್ಲಿ ನಾಟುವದರಿಂದ ಅವರಲ್ಲಿ ತೀವ್ರವಾದ ಪರಿಣಾಮವನ್ನು ಉಂಟುಮಾಡುತ್ತವೆ. ಕಂಠೀರವ ನರಸಿಂಹರಾಜರ ಚಲನಚಿತ್ರಗಳು ಜನಜೀವನದ ಅಭ್ಯುದಯಕ್ಕೆ ಅನೇಕ ಬಗೆಯಲ್ಲಿ ಕಾರಣಭೂತವಾಗಿರುವುದರಿಂದ ಸರಕಾರವು ಚಲನಚಿತ್ರಗಳ ಪ್ರಗತಿಯಲ್ಲಿ ಬಹುವಾಗಿ ಗಮನ ಕೊಡಬೇಕು.

ವಿದ್ಯೆಯನ್ನು ಕಲಿಯುವುದು ಎಂದರೆ ಜ್ಞಾನಸಂಪಾದನೆ (-ಲೆನಿನ್) ಮಾಡುವುದು. "ಜ್ಞಾನವು ಮೋಕ್ಷದ ತಾಯಿ, ಮೋಕ್ಷವು ವಿರೂಪಾಕ್ಷನ ಬಾಯಿ, ಜ್ಞಾನಕ್ಕೆ ಕೊನೆಯಿಲ್ಲ, ಭಾನುವಿಗೆ ನೆಲೆಯಿಲ್ಲ." ಎಂಬ ನಾಣ್ಣುಡಿಗಳನ್ನು ನೋಡಿದರೆ ಜ್ಞಾನದ ಪ್ರಭೆಯು ಅತಿಯು ಎಂಬುದು ತಿಳಿಯುತ್ತದೆ. ವಿದ್ಯೆಯು ವಿನಯವನ್ನೂ, ಸನ್ನಿವೇಶಕ್ಕನುಗುಣವಾಗಿ ನಡೆದುಕೊಳ್ಳುವುದನ್ನೂ ಕಲಿಸುವುದು. ಯಾವ ನಾಡಿನಲ್ಲಿ, ಯಾವ ದೇಶದಲ್ಲಿ ವಿದ್ಯಾಭ್ಯಾಸವು ಮುನ್ನಡೆಯನ್ನು ಪಡೆದಿರುವುದೋ ಅದು ಅಭಿವೃದ್ಧಿಗೆ ಬರುವುದು. ನಾಡಿನ ವಿದ್ಯಾಭ್ಯಾಸದಲ್ಲಿ ಮೊದಲ ಮೆಟ್ಟಲು ಪ್ರಥಮ ಶಾಲೆಯು. ನಮ್ಮ ನಾಡು ಹಳ್ಳಿಗಳಿಂದ ತುಂಬಿರುವುದು. ಹಳ್ಳಿಗಳು ಬೇಸಾಯಗಾರರಿಂದ ತುಂಬಿರುವುದು. ಮುಂದಿನ ಜನಾಂಗದ ಹೆಚ್ಚಿನ ಭಾಗವು ರೈತರ

ಮಕ್ಕಳು. ಮಕ್ಕಳ ತಂದೆತಾಯಿಗಳು ವಿದ್ಯಾವಂತರಾಗಿ, ವಿದ್ಯಾಸಕ್ತರಾಗಿ ದ್ದರೆ ಮಕ್ಕಳ ವಿದ್ಯಾಭ್ಯಾಸವು ಸರಾಗವಾಗಿ ಸಾಗುವುದು. ನೆತ್ತಿಗೆ ಎಣ್ಣೆ ಕಾಣದೆ, ಬೆನ್ನಿಗೆ ಬಟ್ಟೆಕಾಣದೆ, ಒಡಲಿಗೆ ಕೂಳುಕಾಣದೆ, ಕಂಗಾಲಾಗಿ ಕಕ್ಕಾವಿಕ್ಕಿಯಾಗಿ ಒಂದೇ ಸಮನಾಗಿ ಕೊರಗುತ್ತಿರುವ ಆ ಬಡ ರೈತನೇ ಗತಿಕಾಣದಿರುವಾಗ ಮತಿ ಕೆದುರಿಸಿಕೊಂಡು ವಿದ್ಯೆಕಲಿಯಲು ಆತನಿಗೆ ಅವಕಾಶವೂ, ಆಸೆಯೂ ಎಲ್ಲಿಂದ ಬರಬೇಕು ? ಅದೆಂತು ತಾನೇ ಆತನು ವಿದ್ಯಾವಂತನಾಗುವನು? ಜೀವನವು ಬಹುವಾಗಿ ಬೇಸರಗೊಂಡು ಬೊಬ್ಬೆಳ ಏಳುತ್ತಿರಲು ಕಾಲನ ನಗರಿಗೆ ಹೋಗುವುದೊಂದೇ ಆತನಿಗೆ ಶಾಂತಿಯು. ಹೀಗಿರುವಲ್ಲಿ ಆತನಿಗೆ ಶಿಕ್ಷಣ ಕೊಡುವುದು ಎಂತು ? ಆತನ ಮಕ್ಕಳಿಗೆ ಕೊಡುವುದು ಯಾವ ರೀತಿ ? ಇದನ್ನ ಅತೋ ಏನೋ ಈಗೀಗ ನಾಡಿ ನಲ್ಲಿ ವಯಸ್ಕರ ವಿದ್ಯಾಭ್ಯಾಸಕ್ಕೆ ಗಮನವು ಹೋಗುತ್ತಿದೆ. ಅಕ್ಷರ ಪ್ರಚಾ ರದ ಮೂಲಕ ಜ್ಞಾನ ಪ್ರಚಾರ ಮಾಡಲು ನಾಡಿನ ಮೂಲೆ ಮೂಲೆಯ ಲ್ಲಿಯೂ ಶಿಕ್ಷಣ ಪ್ರೇಮಿಗಳು ಓಡಾಡುತ್ತಿರುವರು. ಶಿಕ್ಷಣಕ್ಕೆ ನೂರಾರು ರೂಪಾಯಿಗಳನ್ನು ಖರ್ಚುಮಾಡಿದ್ದರೂ ಶಿಕ್ಷಣವು ತನ್ನ ಸಹಜ ಸಾರ್ಥ ಕತೆಯನ್ನು ಹೊಂದಿಲ್ಲ.

ಚಲನಚಿತ್ರವು ಒಂದು ಕಲೆಯು. ವಿದ್ಯೆಯೂ, ಕಲೆಯೂ ಅವಳಿ ಜವಳಿ ಮಕ್ಕಳು. ಸಮಸ್ತ ಜನಾಂಗಕ್ಕೆ ಸುಲಭವೆಚ್ಚದಲ್ಲಿ ಸಂತೋಷವನ್ನು ಕೊಡುವ ಹವಣಿಕೆಗಳಲ್ಲಿ ಚಲನಚಿತ್ರಕ್ಕೆ ಸಮನಾದದ್ದು ಯಾವುದೂ ಇಲ್ಲವು. ರಾಷ್ಟ್ರದ ಅತಿ ಉಪಯುಕ್ತ ಸಾಧನವು ಇದಾಗಬೇಕು. ಚಲನ ಚಿತ್ರದ ಉಪಯೋಗ ಮುಖ್ಯವಾಗಿ ಮನೋರಂಜನೆ, ಮನೋಲ್ಲಾಸ, ಸಮಾಜ ಸಂಸ್ಕರಣೆ ಮತ್ತು ಸಮಾಜ ಸುಧಾರಣೆಯು. ಜನತೆಗೆ ವಿದ್ಯಾ ಪ್ರಸಾರ ಮಾಡುವ ಮಹತ್ವದ ಸಾಧನವು ಇದಾಗಬೇಕು. ಅಂದು ಭಾರ ತೀಯ ಚಲನಚಿತ್ರದ ಕೀರ್ತಿ ಕಿರೀಟವು ಮಿರುಗುವುದು. ಅದಕ್ಕಾಗಿ ಅದನ್ನು ಒಳ್ಳೆಯ ಮಾರ್ಗದಲ್ಲಿ ಪ್ರಗತಿ ಹೊಂದುವಂತೆ ಮಾಡಿ, ಹಿಡಿತದಲ್ಲಿರಿಸ ಬೇಕು. ದ್ಧಿನಚರಿಯ ಜೀವನದಲ್ಲಿ ಅನುಭವಕ್ಕೆ ಬರಬಹುದಾದ ವಿಷಯ ಗಳ ಜೊತೆಗೆ ಉಚ್ಚ ವಿಚಾರಗಳ ಕಡೆಗೂ ಜನತೆಯ ಕಲ್ಪನಾಶಕ್ತಿಯು ಹೋಗುವಂತೆ ಮಾಡಬಹುದು. ಪ್ರಜೆಯನ್ನು ಸುಖಿಯನ್ನಾಗಿಯೂ, ಶ್ರೀಮಂತನನ್ನಾಗಿಯೂ, ಸುಸಂಸ್ಕೃತನನ್ನಾಗಿಯೂ ಮಾಡಲು ಚಲನಚಿತ್ರವು ಸಹಾಯಕಾರಿಯಾಗುವುದು. ಸಮಾಜದ ಮೇಲೆ ಮಹತ್‌ಪ್ರಭೆಯನ್ನು ಹರ

ಡುವ ಉದ್ಯಮವು ಚಲನಚಿತ್ರವು. ಮಾನವ ಬಾಳಿನ ಸಿಹಿ ಕಹಿಯನ್ನು ಕಲ್ಪನಾ ಕುದುರೆಯ ಮೇಲೆ ಕುಳಿತು ಅನುಭವಿಸಿ ಅದರ ಅನ್ವಯದಿಂದ ಜೀವನದ ಜೊಂಪನ್ನು ಜಗ್ಗಿಸಲು ಸಾಧ್ಯವಾಗುವುದು. ಸಮಾಜ ಸಂಸ್ಕರಣೀಯ ಕ್ರಿಯೆಯನ್ನು ಚಲನಚಿತ್ರದ ಮೂಲಕ ಜಾಗ್ರತೆಯಾಗಿ ಮಾಡಬಹುದು. ಜ್ಞಾನ ಪ್ರಸಾರಣೆಗೆ ಅಗತ್ಯವಾದ ಪುಸ್ತಕ, ಪತ್ರಿಕೆ, ಭಾಷಣ, ಪ್ರಯೋಗಾದಿಗಳ ಸಂಪರ್ಕ ಸಹವಾಸವು ಇದರಿಂದ ಸಿಗುತ್ತದೆ. ಪರಕೀಯರನ್ನು ತನ್ನ ಕಡೆಗೆ ಸೆಳೆದುಕೊಂಡು, ಬೇಸಾಯ ವಾಣಿಜ್ಯ ಕೈಗಾರಿಕಾದಿಗಳ ಅಭಿವೃದ್ಧಿಯನ್ನು ನಮ್ಮ ದೇಶವು ಕಾಣಲು ಅನುಕೂಲವಾಗುವುದು.

ಹಳ್ಳಿಯ ಪುನರುಜ್ಜೀವನ, ಗ್ರಾಮ ಕೈಗಾರಿಕೆಗಳ ಉದ್ಧಾರಗಳಿಗೆ ಸಹಾಯಕರವಾಗಿ ವಿದ್ಯಾಭ್ಯಾಸದ ಮೂಲಕ ಚಲನಚಿತ್ರವನ್ನು ಉಪಯೋಗಿಸಿಕೊಳ್ಳುವುದು. ಬಗೆಬಗೆಯ ದೇಶಗಳ ನಡೆನುಡಿ ಆಚಾರವಿಚಾರಗಳು ಜನರಿಗೆ ಇದರಿಂದ ಪರಿಚಯವಾಗುವವು. ಚಲನಚಿತ್ರದ ಮೂಲಕ ವಿಶಿಷ್ಟ ವಿಷಯಗಳನ್ನೂ, ಶಾಸ್ತ್ರೀಯ ವಿಭಾಗಗಳನ್ನೂ ಬಿಚ್ಚಿ ತಿಳಿಸುವುದು ಸಾಧ್ಯವು. ಕಲಾಕೌಶಲ್ಯ, ವಾಣಿಜ್ಯ, ಉದ್ಯೋಗ, ಯಂತ್ರತಂತ್ರಗಳಲ್ಲಿ ವಿದ್ಯೆಯು ಬಲಿತು ಬೆಳೆಯುವುದು. "ಒಂದು ಚಿತ್ರವನ್ನು ನೋಡುವುದು ಒಂದು ಲಕ್ಷ ಪದಗಳನ್ನು ಕಲಿಯುವುದಕ್ಕಿಂತ ಮಿಗಿಲು. ಕಣ್ಣು ಏನನ್ನು ನೋಡುವುದೋ ಅದನ್ನು ಮನವು ನೆನಪಿನಲ್ಲಿಟ್ಟುಕೊಳ್ಳುವುದು.' ಈ ಸ್ವತಃ ಸಿದ್ಧಪ್ರಮಾಣವು ನಿಜವಾದರೆ ಚಲನಚಿತ್ರವು ನಿಜವಾಗಿಯೂ ವಯಸ್ಕರಿಗೂ, ಮಕ್ಕಳಿಗೂ ಸುಲಭವಾಗಿ ಕಲಿಸಲು ಮತ್ತು ಸಮಾಜ ವ್ಯವಸ್ಥೆ ಮಾಡಲು ಒಂದೇ ಒಂದು ಮಾರ್ಗದರ್ಶಕವೂ, ಸಾಧಕವೂ ಆಗಿದೆ. ಚಲನಚಿತ್ರದ ಮೂಲಕ ನಾಡಿನಲ್ಲಿ ಜ್ಞಾನ ಪ್ರಸಾರ ಮಾಡಿ, ಅದರ ಮೂಲಕ ಅವರ ಉನ್ನತಿಯನ್ನು ಕಂಡು ಜನತೆಯಲ್ಲಿ ಸುಖಸಂತೋಷವು ನೆಲೆಗೊಳ್ಳುವಂತೆ ಮಾಡಬೇಕು. ನುರಿತವರಿಂದ ಸುಧಾರಿಸಿದವರಿಂದ ಸಂಸ್ಕರಿಸಿದವರಿಂದ ಇದು ಸಾಧ್ಯವು. ಸೇರಿವಾದ ಮಾರ್ಗ ಬೇಕೆಂದು ಕೂಗುವ ಇಂದಿನ ಶಿಕ್ಷಣ ಯುಗದಲ್ಲಿ ಕಲೆಯಂತಹ ಪರೋಕ್ಷದ ಸಾಧನದ ಮೂಲಕ ಪ್ರತ್ಯಕ್ಷವಾಗಿರುವ ಜೀವನದ ಅರ್ಥವನ್ನು ತಿಳಿಸುತ್ತೇನೆಂದು ಹೊರಡುವ ಕಲೆಗಾರಿಕೆಗೆ ಏನಾದರೂ ಜಾಗವಿದೆಯೇ ? ಕಲಾಚರಿತ್ರೆಯ ಸಾರ್ವತ್ರಿಕ ಪ್ರಸಾರ, ಸತ್ಪ್ರಜಾನಿರ್ಮಾಣದ ಗುರಿ, ಸಂಸ್ಕೃತಿ ಜ್ಞಾನದ ವ್ಯಾಪ್ತಿಯ

ಕೂಡಲಸಂಗಮವನ್ನು ಚಲನಚಿತ್ರ ಶಿಕ್ಷಣದ ಮೂಲಕ ಸರಾಗವಾಗಿ ಕಾಣ ಬಹುದು.

ಶಾಲಾ ಕಾರ್ಯಕ್ಕೆ ಇದರ ಉಪಕಾರ ಎಂತಿದೆ? ಶಿಕ್ಷಣ ವಿಶಾರದ ರಿಂದ ಆರಿಸಲ್ಪಟ್ಟ ವಿಷಯಗಳನ್ನು ಚಲನಚಿತ್ರದ ಮೂಲಕ ಮಕ್ಕಳಿಗೂ ವಿದ್ಯಾರ್ಥಿಗಳಿಗೂ ಸುಲಭವಾಗಿ, ಜಾಗ್ರತೆಯಾಗಿ ಕಲಿತುಕೊಳ್ಳಬಹುದು. ಮುಂಬಯಿಯಲ್ಲಿ ವಾರಕ್ಕೊಂದು ಬಾರಿ ಮಕ್ಕಳಿಗೆ ಚಲನಚಿತ್ರದ ಮೂಲಕ ವಿಷಯವನ್ನು ಹರಡುತ್ತಿದ್ದರು. ರಸಾಯನ, ಭೂಗೋಳ, ಖಗೋಳ, ಜೀವ ಶಾಸ್ತ್ರ, ಪ್ರಾಣಿಶಾಸ್ತ್ರಾದಿಗಳನ್ನು ಚೆನ್ನಾಗಿ ಮನಸ್ಸಿಗೆ ಹಿಡಿಯುವಂತೆ ಮಾಡಿ ಕೊಳ್ಳಲು ಅವಕಾಶವಿದೆ. ನಮ್ಮ ನಾಡಿನ ಕಲೆ ವೈಭವ ಹಿರಿಮೆಗಳನ್ನು ಚಿತ್ರಿಸಿ ಭಾವೀ ಪ್ರಜೆಗಳಿಗೆ ಅದರ ಜ್ಞಾನವನ್ನು ಚಲನಚಿತ್ರದ ಮೂಲಕ ಸಲೀಸಾಗಿ ಮಾಡಿಕೊಟ್ಟು ಅವರಲ್ಲಿ ದೇಶಭಕ್ತಿ, ರಾಜಮರ್ಯಾದೆಯು ಹುಟ್ಟುಗುಣವಾಗುವಂತೆ ಮಾಡಬೇಕು. ನಾಲ್ಕು ಗೋಡೆಗಳ ನಡುವೆ ಶರಾವತಿ ನದಿಯ ವರ್ಣನೆಯನ್ನು ವರ್ಣಿಸುವ ನುಡಿಗಳಿಗಿಂತಲೂ ಚಲನ ಚಿತ್ರದ ಮೂಲಕ ತಿಳಿಸುವದು ಮಹತ್ಪ್ರಯೋಜನವು. ರಾಷ್ಟ್ರವೀರರ, ದೇಶದ ಇತಿಹಾಸ ರಚನೆಯನ್ನು ಕುರಿತು ರಷ್ಯಾದೇಶದಲ್ಲಿ ಅಕ್ಷರ ಓದು ಮಕ್ಕಳಿಗೆ ಕಲಿಸಿತು. ಜರ್ಮನಿಯಲ್ಲಿ ಎಳೆ ಮಕ್ಕಳ ಮನೋಗತಿಯನ್ನು ಪರಿಶೀಲಿಸಿದರೆ ಅದಕ್ಕೆ ಸರಿಹೋಗುವ ವಿದ್ಯೆಯು ಚಲನಚಿತ್ರದ ಮೂಲಕ ಮಾತ್ರ ಸಾಧ್ಯವು ಎಂಬುದಾಗಿದೆ. ಒಂದು ಶಿಕ್ಷಣಪಟ ಸಂಸ್ಥೆಯನ್ನು ರೋಮ ನಗರದಲ್ಲಿ ಅಂತರ್ರಾಷ್ಟ್ರೀಯ ಸಂಘವು ಸ್ಥಾಪಿಸಿದೆ. ನುರಿತವ ರಿಂದ ಪಟ ತಯಾರಿಸಿ ಪ್ರಪಂಚದ ಎಲ್ಲ ಭಾಗದಲ್ಲಿಯೂ ಅವುಗಳನ್ನು ಹರಡುವ ಕಾರ್ಯ ಕೈಗೊಂಡಿದೆ.

ಇಂದಿನದು ವಿಜ್ಞಾನಯುಗ. ಈ ಯುಗದಲ್ಲಿ ಚಲನಚಿತ್ರದ ಪ್ರಭಾ ವವು ಮಹತ್ವವೇ ಸರಿಯು. ಚಲನಚಿತ್ರಗಳು ಜನಜೀವನದಲ್ಲಿ ಒಂದು ದೊಡ್ಡ ಪಾತ್ರವನ್ನು ವಹಿಸಿ, ಅದರ ಅಭಿವೃದ್ಧಿಗೆ ಬಹುವಾಗಿ ನೆರವಾಗುತ್ತ ಲಿವೆ. ರಷ್ಯದ ರಾಷ್ಟ್ರನಾಯಕ ಮಾರ್ಶಲ್ ಸ್ಟಾಲಿನ್ "ಚಲನಚಿತ್ರಗಳು ಸರ್ಕಾರದ ಕೈಯಲ್ಲಿ ಒಂದು ಅಮೋಘ ಸಾಧನವಾಗಿವೆ." ಎಂದು ಹೇಳಿ ದ್ದಾರೆ. ಸಂಯುಕ್ತರಾಷ್ಟ್ರ ಸಮಿತಿಯ ಆಶ್ರಯದಲ್ಲಿ ಚಲನಚಿತ್ರಗಳ ಒಂದು ರಂಗವನ್ನು ಜೀನ್‌ಬೆನಟ್‌ಲಿವಿ ಎಂಬ ಫ್ರೆಂಚ ಮಹಾ ವ್ಯಕ್ತಿಯ ನೇತೃತ್ವ

ದಲ್ಲಿ ಸ್ಥಾಪನೆಯಾಗಿರುವುದು. ಆಯಾಯ ದೇಶಗಳಲ್ಲಿ ಶಿಕ್ಷಣ ಕೊಡಲು ತಕ್ಕ ಚಿತ್ರಗಳನ್ನು ತಯಾರಿಸಲು ಈ ಸಂಸ್ಥೆಯು ಸಿದ್ಧವಾಗಿರುವುದು. ಬೇಸಾಯ ವಿಷಯಗಳಲ್ಲಿ ಅಗತ್ಯವಾದ ಯಾಂತ್ರಿಕ ಬೇಸಾಯ ಕ್ರಮ ವಿಜ್ಞಾನದ ಪ್ರಾಮುಖ್ಯತೆ, ಅಣೆಕಟ್ಟುಗಳ ನಿರ್ಮಾಣ, ದವಸ ವಿಕ್ರಯ, ಈ ವಿಷಯದಲ್ಲಿ ಸಂಬಂಧಿಸಿದ ಚಿತ್ರಗಳನ್ನು ಅಮೇರಿಕವು ತಯಾರಿಸುವುದು. ಮರಕಡಿಯುವದು, ಕಾಗದ ಮಾಡುವದು, ಬೆಂಕಿಪೆಟ್ಟಿಯನ್ನು ತಯಾರಿಸುವುದು ಇತ್ಯಾದಿ ವಿಷಯಗಳನ್ನು ಒಳಗೊಂಡ ಚಿತ್ರದ ತಯಾರಿಕೆಯು ಸ್ವೀಡನ್ನಿನಲ್ಲಿ, ರಷ್ಯಾದೇಶದಲ್ಲಿ ಸಹಕಾರಿಕ ಚಿತ್ರಗಳ ತಯಾರಿಕೆ, ಬೆಲ್ಜಿಯಂದಲ್ಲಿ ಚಿಕ್ಕ ಮಕ್ಕಳಲ್ಲಿ ಕಂಡು ಬರುವ ಕೆಟ್ಟ ಚಾಳಿಗಳ ಪರಿಹಾರದ ಚಿತ್ರ ನಿರ್ಮಾಣ ಹೀಗೆ ಬಗೆಬಗೆಯ ಚಿತ್ರಗಳನ್ನು ಏರ್ಪಡಿಸಿ ಸಕಲ ರಾಷ್ಟ್ರಗಳಿಗೂ ಪರಿಚಯ ಮಾಡಿಕೊಡುವುದಲ್ಲದೆ ಜಗತ್ತಿನ ಪ್ರಗತಿಗೆ ಒಂದು ಶ್ರೇಷ್ಠ ಮಾರ್ಗವನ್ನು ಕಲಿಸಿದಂತಾಗುತ್ತದೆ. ಚಲನಚಿತ್ರಗಳ ಮೂಲಕ ಶಿಕ್ಷಣ ಕೊಡುವುದು ವಿದ್ಯಾ ಇಲಾಖಾ ಕರ್ತವ್ಯವಾದರೆ ನಾಡಿನ ಅಭಿವೃದ್ಧಿಗೆ ಹೊಸ ಹಾದಿಯನ್ನು ಹಾಕುವುದರಲ್ಲಿ ಯಾವ ಸಂಶಯವೂ ಇಲ್ಲ.

ಕೆಲವು ಅಪ್ರತಿಮ ಚಿತ್ರತಯಾರಕರು ಅವರ ಕಲಾಚಾತುರ್ಯದ ಭಾವನೆಗಳನ್ನು ಚಿತ್ರ ಕೈಗಾರಿಕೆಗೆ ಸರಪಳಿಯಂತೆ ಜೋಡಿಸಿ, ನಮಗೆ ಅವುಗಳನ್ನು ಪ್ರತಿಛಾಯೆಯ ರೀತಿಯಲ್ಲಿ ತೋರಿಸಿರುವರು. ಸಮಾಜ ಚಿತ್ರವನ್ನು ನಮ್ಮ ಕಣ್ಣು ಮುಂದೆ ನಿಲ್ಲಿಸಿದರೆ ಅಂದು ಸಮಾಜಶಾಸ್ತ್ರವು ನಮಗೆ ತಿಳಿದಂತಾಗುವುದು. ಚಲನಚಿತ್ರವು ವಿದ್ಯಾಭ್ಯಾಸಕ್ಕೆ ಒಂದು ಶಕ್ತಿಯುತ ಆಯುಧವು. ಸರಿಯಾದ ಕಲಾನಿಪುಣರೂ, ಚಿತ್ರನಿರ್ದೇಶಕರೂ ತರಪೇತಾದ ತಯಾರಿಕರೂ ಈ ಆಯುಧವನ್ನು ಉಪಯೋಗಕ್ಕೆ ತರಲು ಅಗತ್ಯವು. ಇದರ ಸಲುವಾಗಿಯೇ ಸರಕಾರದವರೂ, ಪ್ರಜೆಗಳೂ ಸಹಕರಿಸಿ ಒಂದು ಚಲನಚಿತ್ರದ ತರಪೇತು ಶಾಲೆಯನ್ನು ಅಗತ್ಯವಾಗಿ ಸ್ಥಾಪಿಸಿದ ಹೊರತು ವಿದ್ಯಾಭ್ಯಾಸವು ಅದರ ಸಂಪೂರ್ಣತೆಯನ್ನು ಹೊಂದಲಾರದು. ಭೂಪಾಟನಲ್ಲಿ ಮಕ್ಕಳಿಗಾಗಿ ವಿದ್ಯಾಭ್ಯಾಸವನ್ನು ಚಲನಚಿತ್ರದ ಮೂಲಕ ನೀಡಲು ಏರ್ಪಾಡು ದೃಢೀಕರವಾಗಿತ್ತು. ಮುಂಬಯಿಯಲ್ಲಿ ಸೇಂಟ್ ಕ್ಸೈವಿಯರ್ ಕಾಲೇಜಿನವರು ಚಲನಚಿತ್ರದ ವಿಷಯವಾಗಿ ತರಪೇತುಕೊಡಲು ಸಿದ್ಧರಾಗಿದ್ದರು. ಪರದೇಶದಲ್ಲಿನ ವಿದ್ಯಾಭ್ಯಾಸದ ಜಾಗೃತಿಯನ್ನು ನಮ್ಮ ದೇಶದವರು ಕಣ್ಣುಬಿಟ್ಟು ನೋಡದೆ ಇದ್ದಿದರು. ಪ್ರಜಾಪಾಲನೆಯ ಹಾಗೂ

ಅಭಿವೃದ್ಧಿಯ ಸಕಲ ಬಗೆಯ ಪ್ರಸಾರಣೆ ಕಾರ್ಯಗಳನ್ನು ಚಲನಚಿತ್ರಗಳ ಮೂಲಕ ನಡೆಸಲು ಉಚಿತ ಉಪಕರಣಗಳು ನಮ್ಮಲ್ಲಿಯೇ ಇವೆ; ಆದರೆ ನಾವೇ ಮೂಕರಾಗಿದ್ದೇವೆ. ಕುರುಡರಾಗಿದ್ದೇವೆ.

ಪರದೇಶದಲ್ಲಿನ ನಾಡುಗಳು ಜನತೆಯ ಶಿಕ್ಷಣಕ್ಕೆ, ವಿದ್ಯಾರ್ಥಿಗಳ ಕರ್ತವ್ಯ ಸಾಧನೆಗೆ ಚಲನಚಿತ್ರವನ್ನೇ ಮುಖ್ಯ ಸಾಧನವನ್ನಾಗಿ ಇಟ್ಟು ಕೊಂಡಿರುವರು. ಆಕಳ ಪಾಲನೆ, ಬೆಣ್ಣೆ ಮತ್ತು ಹಾಲನ್ನು ತಯಾರಿಸು ವುದು ಇತ್ಯಾದಿಯನ್ನು ಸ್ವೀಡನ್ ದೇಶವು ಚಲನಚಿತ್ರದ ಮೂಲಕ ಶಿಕ್ಷಣ ಕೊಟ್ಟು, ಅನಂತರ ಪ್ರಾಯೋಗಿಕ ಶಿಕ್ಷಣಕ್ಕೆ ಕೈಹಾಕಿತು. ಇದರ ಅನು ಕರಣೆಯಿಂದ ಅಮೇರಿಕವೂ ಕೂಡ ಒಕ್ಕಲತನದ ವಿದ್ಯೆಯನ್ನು ತಳದಿಂದ ಶೋಧಿಸಿ, ಚಲನಚಿತ್ರ ಪ್ರಸಾರಣೆಯ ಸಹಾಯದಿಂದ ಎಲ್ಲರನ್ನೂ ವಿದ್ಯಾ ವಂತರನ್ನಾಗಿ ಮಾಡಿತು. ರಷ್ಯವೂ ಕೂಡ ಬಲು ಜಾಗ್ರತೆಯಾಗಿ ವಯ ಸ್ಕರ ಹಾಗೂ ಮಕ್ಕಳ ವಿದ್ಯೆಯನ್ನು ಹೆಚ್ಚಿಸಿತು. ಇಟಲಿ, ಜರ್ಮನಿ ಸರ್ಕಾರವೂ ಕೂಡ ಆರ್ಥಿಕ ಕೊರೆಗೋಲು ತಮ್ಮಲ್ಲಿ ಸರಿಯಾಗಿಲ್ಲದಿದ್ದರೂ ಬಹು ಕಷ್ಟದಿಂದ ಅದನ್ನು ಹೊಂದಿಸಿಕೊಂಡು ಉದ್ಯಮಶೀಲರಾದರು. ಹೀಗೆ ವಿಶ್ವದ ಎಲ್ಲ ಕಡೆಯಲ್ಲಿಯೂ ವಿದ್ಯೆಯನ್ನು ಚಲನಚಿತ್ರಗಳ ಸಹಾಯ ದಿಂದ ಕಲಿಸಲು ತೊಡಗಿದರು. ಬಡವರ ದೇಶವಾದ ನಮ್ಮ ದೇಶವು ಮಾತ್ರ ಹಿಂದುಳಿದಿದೆ. ಸರ್ಕಾರವು ಇದಕ್ಕಾಗಿ ಬಹುವಾಗಿ ಗಮನ ತೆಗೆದುಕೊಂಡು ಇದನ್ನು ಮುಂದೆ ತರುವಂತೆ ಮಾಡಬೇಕು. ಪ್ರಜಾಸರ್ಕಾರದ ವೇಳೆಯಲ್ಲಿ ತಮ್ಮ ಸ್ವಂತ ಜವಾಬ್ದಾರಿಯನ್ನು ಅರಿತು ಕಾರ್ಯ ಮಾಡುವುದು ಸೂಕ್ತವು ವಿದ್ಯಾವಂತರು ವಿದೇಶದ ಸೊಬಗಿನ ಸೋನೆಗೆ ಸೊರಗಿರುವುದು ಕಡಿಮೆ ಯಾಗಬೇಕು. ತಯಾರಿಕೆಯ ಸಂವಿಧಾನ ಮತ್ತು ವಿಧದಲ್ಲಿ ಅವ್ಯವಸ್ಥೆ ಇರುವುದು ಅಳಿಯಬೇಕು.

ಚಲನಚಿತ್ರದಿಂದ ಅನುಭವಜನ್ಯವಾದ ತಿಳಿವಳಿಕೆಯನ್ನು ನಾವು ಅರಿತು ಕೊಳ್ಳಬಹುದು. ವಸ್ತುವನ್ನು ನೋಡಿದ ಅನುಭವದಿಂದಲೇ ಅರಿವು ಬರು ತ್ತದೆಯೇ ಹೊರತು ಪುಸ್ತಕ ಪುರಾಣದ ಬದನೆಕಾಯಿಯಿಂದಲ್ಲವು. ಮನ ಸ್ಸಿಗಿಂತ ಹೃದಯದ ಮೇಲೆ ಬೀಳುವ ಮುದ್ರೆಯು ಪರಿಣಾಮಕಾರಿಯಾ ದುದು ಎಂಬುದನ್ನು ಚಲನಚಿತ್ರವು ನಿದರ್ಶಿಸುವುದು. ''ಪ್ರಪಂಚದ ಸಾಹಿ ತ್ಯವು ಬರೆಯುವುದಕ್ಕಿಂತ ಮುಂಚೆಯೇ ಜನವಾಡಿಕೆಯಾಗಿರುವ ಕತೆಗಳ

ಲ್ಲಿಯೂ, ಸಂಗೀತದಲ್ಲಿಯೂ, ಕುಣಿತದಲ್ಲಿಯೂ, ನಾಟಕದಲ್ಲಿಯೂ ಅಡಗಿಕೊಂಡಿರುವುದು ಕಾಣಬರುತ್ತದೆ." ಎಂದು ಜಾನ್ ಡ್ರಿಂಕ ವಾಟರ್ ಮಹಾಶಯನು ಹೇಳಿರುವನು. ಇಂದಿನ ಚಿತ್ರಗಳು ಬರೀ ಜನಮನೋಲ್ಲಾಸಕರವಾಗಿವೆಯೇ ಹೊರತು ಶೈಕ್ಷಣಿಕವಾದವಲ್ಲವು. ಅಮೇರಿಕದ Damaged viles ಎಂಬ ವಾಕ್ಪಟ ಚಿತ್ರವು ಆರೋಗ್ಯ ಶಿಕ್ಷಣದಲ್ಲಿ ಉತ್ತಮವಾದ ಆರಂಭ ಯತ್ನವು. ಶಿಶುಜನನ ಎಂಬ ಚಿತ್ರವೂ ಕೂಡ ಪ್ರತಿಯೊಬ್ಬರೂ ನೋಡಬೇಕಾದ ಆರೋಗ್ಯ ಚಿತ್ರ.

---

# ಭಕ್ತಿಯೋಗ

(ಬರೆದವರು:- ಶ್ರೀ ಶಿವಾನಂದಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ)

---

ಈ ಹಿಂದೆ ಭಕ್ತಿಯೋಗ ಅಥವಾ ಭಕ್ತಸ್ಥಲದ ಬಗ್ಗೆ ಕೆಲವು ಲೇಖಗಳನ್ನು ಬರೆದು ಕೆಲವು ವಿಷಯಗಳನ್ನು ಪ್ರತಿಪಾದಿಸಲಾಗಿದೆ. ಇನ್ನು ಇದಕ್ಕೆ ಸಂಬಂಧಿಸಿದ ದೇವರ ಬಗ್ಗೆ ಆಕಾಂಕ್ಷೆ ಹೇಗೆ? ಯಾಕೆ? ಹುಟ್ಟುವದೆಂಬ ಮುಂತಾದ ವಿಷಯುವನ್ನು ಪ್ರತಿಪಾದಿಸುವೆನು.

ಒಳ್ಳೇ ಭಕ್ತರಾದ ತಾಯಿತಂದೆಗಳ ಹೊಟ್ಟೆಯಿಂದ ಬಹುತರ ಈ ಸಂಸಾರದಲ್ಲಿ ಲಾಲಸೆ ಅಭಿರುಚಿ ಆಸಕ್ತಿ ಇವುಗಳು ಇರದಂಥ ಮಗುಗಳೇ ಜನಿಸಿದ ಕಥೆಗಳುಂಟು. ಇವರೆಲ್ಲ ಪೂರ್ವಜನ್ಮದಲ್ಲಿ ಅನೇಕ ಸಾಧನೆಮಾಡಿ ಪೂರ್ಣಸ್ಥಿತಿಗೆ ಹೋಗದೆ ಯೋಗಭ್ರಷ್ಟರಾದವರೂ ಇರುವದುಂಟು. ಅದಕ್ಕೆ ಗೀತೆಯಲ್ಲಿ ಪರಮಾತ್ಮನು " ಇಂಥವರು ಮುಂದಿನ ಜನ್ಮದಲ್ಲಿ ಸದಾಚಾರ ಸಂಪನ್ನರಾದ ಭಾಗ್ಯವಂತರ ಮನೆಯಲ್ಲಿ ಅಥವಾ ಒಳ್ಳೇ ಭಕ್ತರೆನಿಸಿದ ಯೋಗಿಗಳ ಕುಲದಲ್ಲಿ ಹುಟ್ಟುವರು. ಆಗ ಅವರು ಹಿಂದಿನ ಜನ್ಮದ ಬುದ್ಧಿ ಸಂಯೋಗವನ್ನು ಪಡೆದು ಭಕ್ತಿಧ್ಯಾನಗಳನ್ನು ಪೂರ್ಣಮಾಡಿಕೊಳ್ಳಲು ಅನಾಯಾಸವಾಗಿ ಅವರ ಮನಸ್ಸು ಸದಾ ದೇವರ ಕಡೆಗೆ ಹರಿಯುವದು. ಅವರು ಒಲ್ಲೆಂದರೂ ಅವರನ್ನು ಮುಕ್ತಿ ಎಂಬ ಗುರಿಯ ಕಡೆಗೆ ಯಾವ ಅಡ್ಡಿ ಆತಂಕ

ವಿಲ್ಲದೆ ಸುಗಮವಾಗಿ ಆರೆಮೊಯ್ಯುವದು' ಎಂದು ಹೇಳಿದ್ದಾನೆ. ಇವರು ದೇವರ ಬಗ್ಗೆ ಸ್ವಾಭಾವಿಕವಾಗಿ ಒಳ್ಳೇ ಆಕಾಂಕ್ಷೆಯುಳ್ಳವರಾಗಿರುತ್ತಾರೆ. ಉದಾ:— ಸಿದ್ಧರಾಮ ಮೊದಲಾದ ಎಲ್ಲ ಶರಣರು ಇದರಲ್ಲಿ ಬರುವರು. ತುಕ್ಕಾರಾಮ ಮೊದಲಾದ ಎಲ್ಲ ಸಂತರೂ ಇದರಲ್ಲೇ ಬರುವರು. ಇನ್ನು ಮುಕ್ತಾತ್ಮರು ದೇಶಕ್ಕೆ ನಾಡಿಗೆ ಅವಶ್ಯಕತೆ ಎನಿಸಿದಾಗ ಪರಮಾತ್ಮನ ಆಜ್ಞೆ ಪಡೆದು ಜನರಲ್ಲಿ ಧರ್ಮನೀತಿ ಭಕ್ತಿಜ್ಞಾನ ವೈರಾಗ್ಯಗಳನ್ನು ಬೀರಲಿಕ್ಕೆ ಅವತಾರ ತಾಳಿ ಬರುವದುಂಟು. ಇಂಥವರು ಜನನದಲ್ಲೆ ದೇವರಬಗ್ಗೆ ಒಳ್ಳೇ ಆಕಾಂಕ್ಷೆ ಉಳ್ಳವರಿರುವದುಂಟು. ಇವರಿಗೆ ಬೇಕಾದಂಥ ಅಡ್ಡಿ ಆತಂಕಗ ಳೊದಗಿದರೂ ಪ್ರಾಣಹೋಗುವ ಪ್ರಸಂಗ ಬಂದರೂ ದೇವರ ಭಕ್ತಿಯನ್ನು ಎಂದೂ ಯಾವ ಕಾಲಕ್ಕೂ ಬಿಡುವದೇ ಇಲ್ಲ. ಉದಾ- ಬಸವ, ಶ್ರೀರಾಮ, ಕೃಷ್ಣ, ವಿವೇಕಾನಂದ, ಶಂಕರಾಚಾರ್ಯ, ಅಕ್ಕಮಹಾದೇವಿ, ಅಲ್ಲಮಪ್ರಭು ಮೊದಲಾದವರು.

ಇನ್ನು ಸಾಮಾನ್ಯರ ಬಗ್ಗೆ ಸ್ವಲ್ಪ ವಿಚಾರಿಸುವಾ. ಇಂಥವರಿಗೆ ಸಂಸಾ ರದ ವಿಷಯದಲ್ಲಿ ಹುಟ್ಟಿದಂದಿನಿಂದಲೇ ಪ್ರತಿಯೊಂದು ಒಡವೆಗಳಲ್ಲಿ ಆಸಕ್ತಿ, ಪ್ರೀತಿ, ರತಿ, ಲವಲವಿಕೆ, ಆಶೆ, ಅನುರಕ್ತಿ, ಬಯಕೆಗಳಿರುವದು ಕಂಡು ಬರುವದು. ಈ ಪ್ರಪಂಚದ ಪ್ರತಿಯೊಂದು ವಸ್ತು ವಡವೆಗಳಲ್ಲಿ ಹೆಚ್ಚಾಗಿ ಪ್ರೀತಿ ತೋರುವರು. ಇದು ಕೇವಲ ಪಶುಪ್ರೇಮವೆನಿಸುವದು. ಈ ಪ್ರೇಮವು ವಿನಾಶಕಾರಿಯಾಗುವದು. ಪ್ರಾಪಂಚಿಕ ವಿಷಯಗಳಾದ ಹೆಣ್ಣು, ಹೊನ್ನು, ಮಣ್ಣು, ಚೆಯನಿ, ಚಟ, ಮೊದಲಾದ ಇಂದ್ರಿಯ ವಿಷಯಗಳ ಬಗ್ಗೆ ಪ್ರೀತಿ ಯುಳ್ಳವರು ಒಳ್ಳೇ ಹೀನಸ್ಥಿತಿಗೆ ಹೋಗುತ್ತಾರೆ. ದೃಶ್ಯವಾದ ಸ್ಥೂಲ ಜಗ ತ್ತನ್ನು ಬಿಟ್ಟು, ಎಂದೂ ಸೂಕ್ಷ್ಮ, ಕಾರಣ, ಮಹಾಕಾರಣ, ಜಗತ್ತಿನ ಕಡೆಗೆ ಹೋಗುವದೇ ಇಲ್ಲ. ಇದರಲ್ಲಿಯೇ ಇವರು ಸದಾ ಹುಟ್ಟಿ ಹುಟ್ಟಿ ಸಾಯು ತ್ತಿರುವರು. ಮೇಲಕ್ಕೆ ಏಳುವದೇ ಇಲ್ಲ. ಅತೀಂದ್ರಿಯ ಆತ್ಯಂತಿಕ ಸುಖ ವನ್ನು ಇವನೆಂದೂ ಕಾಣನು. ಇವನು ಇಂದ್ರಿಯಗಳಿಗೆ ಸದಾ ಗುಲಾಮನಾಗಿ ದಾಸನಾಗಿ ಹೋಗಿರುವನು. ಇವನ ಹೊಟ್ಟೆ ಬಟ್ಟೆ ಚಯನಿ ಚಟಗಳಿಗಾಗಿ ಸದಾ ದುಡಿಯುತ್ತಿರುವನು. ಇವನಿಗೆ ದೇವರ ನೆನಪೇ ಆಗುವದಿಲ್ಲ. ಇದ ಕ್ಕಾಗಿ ಬಾಳುವದಕ್ಕಿಂತ ಸಾಯುವದೇ ಹೆಚ್ಚಿನ ಸುಖವಾಗಿರುವದು. ಇವನಿಗೆ ಈ ಇಂದ್ರಿಯ ಸುಖಕ್ಕಿಂತ ಅತೀಂದ್ರಿಯ ಸುಖ ಆನಂದವು ಬಹು ಹೆಚ್ಚಿ ನದು, ಅತಿಮಹತ್ವದ್ದು, ಅತಿ ಹಿರಿದಾದ್ದು, ಇದೆ ಎಂದು ಸ್ವಲ್ಪ ಅರಿ

ವ ದರೆ ಆ ಸುಖದ ಬಗ್ಗೆ ಅವನು ಆಗ ಆಕಾಂಕ್ಷೆಪಡುವನು. ಈ ಇಂದ್ರಿಯ ವಿಷಯ ಸುಖವನ್ನು ಅತಿಯಾಗಿ ಭೋಗಿಸಿದವರಿಗೂ ಇದು ಸಾಕಾಗಿ ಅದರ ಬಗ್ಗೆ ಒಮ್ಮೆ ತಿರಸ್ಕಾರ ಹುಟ್ಟುವದು. ಆಗ ಅವನು ದೇವರ ಬಗ್ಗೆ ಆಕಾಂಕ್ಷೆಯನ್ನು ತಾಳುವನು. ದೇವನನ್ನು ಆಗ ಹುಡುಕ ಹತ್ತುವನು. ಉದಾ— ತುಳಸೀದಾಸ. ರಾಜಾಗೋಪೀಚಂದ ಗೌತುಮಬುದ್ಧ.

ಇನ್ನು ಅತಿ ನೀಚಕೃತ್ಯಗಳನ್ನು ಮಾಡಿ ಅತಿಯಾಗಿ ಪಾಪಮಯ ವಾದಾಗ ಅವನ ಮನಸ್ಸಿನ 'ಓಘವು ಒಮ್ಮೆಲೇ ಬದಲಾವಣೆಯಾಗುವದು. ಆಗ ಅವನು ಅವುಗಳ ಬಗ್ಗೆ ಒಳ್ಳೇ ಪಶ್ಚಾತ್ತಾಪ ಪಟ್ಟು ದೇವನ ಬಗ್ಗೆ ಅತಿ ಕಠೋರವಾಗಿ ತಪವನ್ನು ಗೈದು ಅವನನ್ನು ಅತಿಯಾಗಿ ಆಕಾಂಕ್ಷೆ ಮಾಡುವನು; ಉದಾ- ನನ್ನಯ್ಯ ಕನ್ನಪ್ಪ, ವಾಲ್ಮೀಕಿ ಮೊದಲಾದವರು ಈ ವರ್ಗದಲ್ಲಿ ಬರುವರು.

ಇನ್ನು ಅತಿಯಾಗಿ ಶಾಸ್ತ್ರ ಪುರಾಣ ಕೇಳಿದವರೂ ಒಳ್ಳೇ ಸಾಧು ಸಂತರ ಸಹವಾಸದಲ್ಲಿ ಇದ್ದವರೂ ತಮ್ಮ ಮೊದಲಿನ ವಿಷಯ ವೃತ್ತಿಯನ್ನು ಬಿಡುವರು. ಇವರು ಆತ್ಮ, ದೇವ, ಪರಮಾತ್ಮನ ಬಗೆಗೆ ಸದಾ ಶ್ರವಣ ಮಾಡಿ ಮಾಡಿ ಅದರ ಮಹಿಮೆ ಮಹತ್ವವನ್ನು ಕೇಳಿ ಕೇಳಿ ಅದನ್ನು ಹುಡುಕಬೇಕು. ಆ ಸುಖವನ್ನು ಹೊಂದಬೇಕು. ಇದಕ್ಕಿಂತಲೂ ಹೆಚ್ಚಿನ ಸುಖ ವಿದ್ದರೆ ಅದನ್ನು ಯತ್ನಮಾಡಿ ದೊರಕಿಸಬೇಕೆಂದು ಆಕಾಂಕ್ಷೆಯನ್ನು ತಾಳುವರು. ಈ ಶರೀರ ಈ ಸಂಸಾರ ಸುಳ್ಳು, ಈ ಎಲ್ಲ ವಿಷಯ ಸುಖಗಳು ದು:ಖದಿಂದ ಕೂಡಿರುವವು, ಇಂದ್ರಿಯ ಸುಖದಲ್ಲಿ ಅನೇಕ ಬಗೆಯ ಪಾಪ ದಿಂದ ಕೂಡಿರುವದೆಂದು ತಿಳಿಯಲು ಹೆಚ್ಚಿನ ಸುಖವನ್ನುಪಡೆಯಲು ದೇವನೇ ಗತಿಯೆಂದು ಅವನಿಗಾಗಿ ಮಾನವನು ಆಕಾಂಕ್ಷೆಪಡುವನು. ಒಳ್ಳೇ ಸಂಗದಿಂದ ಕೀಡಿ ಕುಂಡಲಿಗನಾದಂತೆ ವಿಷಯಾಸಕ್ತನೂ ಕೂಡ ದೇವರ ಬಗ್ಗೆ ಒಳ್ಳೇ ಆಕಾಂಕ್ಷೆ ಹೊಂದುವನು. ಇಂಥ ಉದಾಹರಣೆಗಳನ್ನು ನಾವು ವ್ಯವಹಾರದಲ್ಲಿ ಬಹುವಾಗಿ ಕಾಣಬಹುದು. ಇವರಲ್ಲಿ ವಯಸ್ಸಾದ ಹಿರಿಯರೇ ಹೆಚ್ಚಾಗಿ ದೇವರ ಬಗ್ಗೆ ಆಕಾಂಕ್ಷೆಯುಳ್ಳವರಿರುವರು. ಇದು ಹರೆಯದ ಕಾಲಕ್ಕೆ ಹಾದರ ಮುಪ್ಪಿನ ಕಾಲಕ್ಕೆ ಆಚಾರ, ಎಂಬಂತೆ ಆಗುವದು. ಇವರಿಗೆ ದೇವರು ಸಿಗ ದಿದ್ದರೂ ಅವನಲ್ಲಿ ಭಕ್ತಿಪ್ರಕಟವಾಗುತ್ತಿರುವದು. ಇವಕ್ಕಾಗಿ ಬಸವಣ್ಣನ ವರು " ನೆರೆಕೆನ್ನೆಗೆ, ತೆರೆಗಲ್ಲಕ್ಕೆ, ಶರೀರ ಗೂಡುವೋಗದ ಮುನ್ನ, ಹಲ್ಲು ಹೋಗಿ, ಬೆನ್ನುಬಾಗಿ, ಅನ್ಯರಿಗೆ ಹಂಗಾಗದಮುನ್ನ , ಕಾಲಮೇಲೆ ಕೈಯ್ಯ

ನೂರಿ, ಕೋಲಹಿಡಿಯದ ಮುನ್ನ, ಮುಪ್ಪಿಂದೊಪ್ಪವಳಿಯದ ಮುನ್ನ ಮೃತ್ಯು ಮುಟ್ಟದಮುನ್ನ ಕೂಡಲಸಂಗಮದೇವನ" ಈ ಪ್ರಕಾರ ಆದಬಳಿಕ ದೇವರ ಆಕಾಂಕ್ಷೆ ಆಗಿ ಫಲ ಬರುವದು ಶಕ್ಯವಿಲ್ಲ. ಆದರೂ ಸಾಯುವ ಗಳಿಗೆಯಲ್ಲಿ ದೇವರ ಆಗಿ ಫಲ ಬರುವದು ಶಕ್ಯವಿಲ್ಲ ಆದರೂ ಸಾಯುವ ಗಳಿಗೆಯಲ್ಲಿ ದೇವರ ಬಗ್ಗೆ ಆಕಾಂಕ್ಷೆ ಹುಟ್ಟಿದರೂ ಮುಂದಿನ ಜನ್ಮದಲ್ಲಿಯಾದರೂ ಸುಖಕೊಡುವದರಲ್ಲಿ ಸಂದೇಹವಿಲ್ಲ. ಈ ಪ್ರಕಾರ ಮಾನವನು ಅನೇಕ ಬಗೆಯಿಂದ ದೇವರಬಗ್ಗೆ ಆಕಾಂಕ್ಷೆ ಹೊಂದುವನು. ಸದಾ ಪುಣ್ಯಕ್ಷೇತ್ರ ತೀರ್ಥಗಳಿಗೆ ತಿರುಗಾಡುವ ಭಾವಿಕರೂ ಕೂಡ ದೇವರಬಗ್ಗೆ ಆಕಾಂಕ್ಷೆ ಹೊಂದುವರು. ಇದೆಲ್ಲಕ್ಕೂ ಒಳ್ಳೇ ವಿವೇಕಶಾಲಿಯಾದವನು ದೇವರ ಬಗ್ಗೆ ಆಕಾಂಕ್ಷೆ ಹೊಂದುವದು ಹೆಚ್ಚಿನದೆನ್ನಬೇಕು. ಯಾಕಂದರೆ ಈ ಸಂಸಾರದ ಈ ವಿಷಯ ಇಂದ್ರಿಯ ಸುಖದ ಕೂಪದಲ್ಲಿ ಬೀಳುವ ಮೊದಲೇ ಮುಂದೆ ಈ ಸಂಸಾರವನ್ನು ಈಸಿ ಪಾರಾಗದವರ ಚರಿತ್ರೆಗಳನ್ನು ತನ್ನ ಸ್ಮೃತಿಪಟಲದಮೇಲೆ ಮೂಡಿಸಿಕೊಂಡು ಮೊದಲೇ ಜಾಗ್ರತನಾಗಿ ನಡೆಯುವನು. ಅನ್ಯರಿಗೆ ಆಗ ಸಂಕಟ, ದುಃಖ ಕಷ್ಟಗಳನ್ನು ನೋಡಿ ವಿವೇಕಿಯಾದವನು ವಿಚಾರಮಾಡಿ ಮೊದಲು ಅವರು ಮಾಡಿದ ತಪ್ಪನ್ನು ತಾನು ಇನ್ನು ಮಾಡಬಾರದೆಂದು ಈ ಸಂಸಾರವನ್ನು ತೊರೆದು ದೇವರ ಬಗ್ಗೆ ಒಳ್ಳೇ ಆಕಾಂಕ್ಷೆಯನ್ನು ಪಡೆಯುವನು. ಇದು ಎಲ್ಲಕ್ಕೂ ಒಳ್ಳೇ ಶ್ರೇಷ್ಠವಾದ ಆಕಾಂಕ್ಷೆ ಎನಿಸುವದು. ಯಾವ ಪ್ರಕಾರದಿಂದಾಗಲೊಲ್ಲದೇಕೆ, ಇನ್ನೂ ವಯಸ್ಸು ಇದ್ದಾಗ ದೇವರ ಬಗ್ಗೆ ಆಕಾಂಕ್ಷೆ ಉತ್ಪನ್ನವಾದರೆ ಅವನಂಥ ಪುಣ್ಯಶಾಲಿ, ಭಾಗ್ಯಶಾಲಿ ಯಾರೂ ಇಲ್ಲೆಂದು ಹೇಳಬಹುದು. ಮಾನವನು ಜಡವಾದಿಯಾಗಿ ಬಾಳಬಾರದು. ಈ ಶರೀರವೇ ಆತ್ಮ ದೇವರು ಎಂದು ತಿಳಿದು ಅದನ್ನೇ ತಿದ್ದುವದು ತೀಡುವದು ಮಾಡುವರು. ಅದಕ್ಕೇ ಉಣಿಸುವದು ತಿನಿಸುವದು ಉಡಿಸುವದು ಸಿಂಗರಿಸುವದು ಬಗೆಬಗೆಯ ಚಯನಿಗಳನ್ನು ಒದಗಿಸಿಕೊಡುವದನ್ನು ಮಾಡುವರು. ಇವರಿಗೆ ಚಾರ್ವಾಕರೆನ್ನುವರು. ಈ ಜನರು ಪಂಚ ಮಕಾರಗಳನ್ನು ಭೋಗಿಸುವರು. ಮದ್ಯಮಾಂಸ ಮನೋರಮೆ ಮೊದಲಾದ ಇಂದ್ರಿಯ ವಿಷಯೋಪಭೋಗಗಳನ್ನು ಸದಾ ಭೋಗಿಸಿ ಶರೀರ ಸುಖವನ್ನುಂಟು ಮಾಡಬೇಕೆನ್ನುವರು. ಇದರಿಂದ ಮಾನವನು ಬಹು ಹೀನ ಸ್ಥಿತಿಗೆ ಅಂದರೆ ಕಾಡಮೃಗ ಪಕ್ಷಿಗಳಿಗಿಂತಲೂ ಬಹು ಕೀಳಾದ ಸ್ಥಿತಿಗೆ ಇಳಿಯುವದರಲ್ಲಿ ಸಂದೇಹವಿಲ್ಲ. ಇವರೇ ಜಡವಾದಿಗಳು. ಇವರೇ ನಾಸ್ತಿಕರು. ಇಂಥ ಜನರು ಈಗೀಗ ಬಹಳೇ ಹೆಚ್ಚಾಗಿರುವರು. ಅದಕ್ಕಂತಲೇ ನಾವು ದಿನದಿನಕ್ಕೆ ದಾರಿದ್ರ್ಯ

ಸ್ಥಿತಿಗೆ ಹೋಗುತ್ತಿರುವೆವು. ಈ ಸ್ಥೂಲ ಪ್ರಪಂಚದ ಹಿಂದೆ ಅನಂತ ಆತ್ಮ ನಿರುವನೆಂದು ಅವನಲ್ಲಿಯೇ ಅನಂತ ಸುಖ ಅಖಂಡ ಆನಂದ ಇರುವ ದೆಂದು ನಮ್ಮಲ್ಲಿ ವಿಚಾರ ಬರುವತನಕ ನಾವು ನಾಸ್ತಿಕರೇ ಸರಿ. ಈ ಸಂಸಾರವನ್ನೇ ತಬ್ಬಿಕೊಂಡು ಕುಳಿತವರೆಲ್ಲ ನಾಸ್ತಿಕರು, ಜಡವಾದಿಗಳು. ಇವ ರಲ್ಲಿ ದೇವರ ಬಗ್ಗೆ ಆಕಾಂಕ್ಷೆ ಹುಟ್ಟುವದು ಬಹು ಕಠಿಣ. ಮೇಲೆ ವಿವ ರಿಸಿದಂತೆ ಮಾಡಿದರೆ ಮಾತ್ರ ಈ ಜಡವಾದಿಗಳು ದೇವವಾದಿಗಳಾಗಬಹುದು. ದೇವರಬಗ್ಗೆ ಆಕಾಂಕ್ಷೆ ಹುಟ್ಟಿ ಭಕ್ತಿ ಪ್ರಬಲವಾಗುವಂತೆ ನಾವು ಯತ್ನಿಸ ಬೇಕು. ಇದು ಭಕ್ತಿಯೋಗಕ್ಕೆ ಬೇಕಾಗುವ ಪ್ರಥಮ ಸೋಪಾನವೇ ಸರಿ.

ಈ ಜಗತ್ತು ಒಂದು ಕಲ್ಪವೃಕ್ಷವಿದ್ದಂತೆ ಆದೆ. ವಿಷಯಬೇಕಾದರೆ ವಿಷಯ, ಹೊನ್ನು ಹೆಣ್ಣು ಮಣ್ಣು ಚಯನಿಚಟಗಳನ್ನು ಬೇಡಿದರೆ ಅದೇ ಸಿಗುವದು. ಆತ್ಮಸುಖ ಹಿರಿಸುಖ ಅಖಂಡ ಆನಂದ ಜ್ಞಾನ ವೈರಾಗ್ಯ ತ್ಯಾಗ ಸೇವೆಗಳನ್ನು ಬೇಡಿದರೆ ಅವೇ ಸಿಗುವದು. ಬೇಡಿದರೆ ಬೇಕಾದದ್ದು ಸಿಗುವದೆಂಬ ಮಾತ್ರಕ್ಕೆ ಅಲ್ಪವಾದ ಸುಳ್ಳಾದ ವಿಷಯಸುಖವನ್ನೇಕೆ ಬೇಡ ಬೇಕು? ಹಿರಿದಾದ ಇಂದ್ರಿಯಾತೀತ ದೇವರಾಜ್ಯದ ಸುಖವನ್ನು ಯಾಕೆ ಬೇಡಬಾರದು? ಅಂದರೆ ನಮ್ಮ ಜನ್ಮ ಸಾರ್ಥಕವಾಗುವದಿಲ್ಲವೆ? ಬೇಡಿರಿ ನಿಮಗೆ ದೊರಕುವದು. ಹುಡುಕಿರಿ ನಿಮಗೆ ಸಿಗುವದು. ತಟ್ಟಿರಿ ನಿಮಗೆ ತೆರೆಯುವದು. ಮುಟ್ಟಿರಿ ನಿಮಗೆ ವಶವಾಗುವದು, ಎಂದು ಕ್ರಿಸ್ತನೂ ಹೇಳಿ ರುವನು. ಬೇಡಿದ್ದು ನೀಡುವನು ನಮ್ಮ ಕೂಡಲಸಂಗಮದೇವ ಎಂದು ಬಸ ವಣ್ಣನವರೂ ಹೇಳಿದ್ದಾರೆ. ಆದರೆ ಮಾನವನು ಬೇಡುವದರಲ್ಲೇ ತಪ್ಪುವನು. ದೇವನನ್ನೇ ಬೇಡಿದರೆ ತನ್ನ ತಾನೇ ನಿನಗೆ ಕೊಡುವನು. ದೇವನನ್ನು ಯಾರು ಬೇಡಬೇಕು? ಅವನು ಯಾರಿಗೆ ಬೇಕಾಗಿದೆ? ಇವನು ಓದಿದರೆ ಕೇಳಿ ದರೆ ತರ್ಕಿಸಿದರೆ ರೊಕ್ಕಕೊಟ್ಟರೆ ಸಿಗಲಾರದವನು ದೇವರು ಇದ್ದಾನ್ಯೆ. ಇಲ್ಲ ಎನ್ನುವದರಲ್ಲೇ ಎಷ್ಟೋಜನರು ತಮ್ಮ ಆಯುಷ್ಯವನ್ನು ಕಳೆದುಕೊಂಡಿ ದ್ದಾರೆ. ಇವರಂತೂ ಬಹಳೇ ನಿರುಪಯೋಗಿ ಜನರು.

ಮಾನವನು ಸದಾಸಾವಿನ ಮರಣದ ಮೃತ್ಯುವಿನ ನೆನಪನ್ನೂ ಮಾಡು ತ್ತಿರಬೇಕು. ಸುಡುಗಾಡದಲ್ಲಿ ನಿತ್ಯ ಕೆಲವೇಳೆ ಕುಳಿತು ಮರಣದ ಬಗ್ಗೆ ವಿಚಾರಿಸುತ್ತಿರಬೇಕು. ಸತ್ತವರ ಅಂತ್ಯಕಾರ್ಯಕ್ಕೆ ಹೋಗುತ್ತಿರಬೇಕು. ಪ್ಲೇಗ, ಮಾರಿಕಾ, ಇನ್‌ಪ್ಲುಎಂಜಾ ಮೊದಲಾದವುಗಳಿಂದ ಜನರು ಸತ್ತ ಹಾಗೂ ಸಾಯುತ್ತಿರುವ ಊರುಗಳಿಗಾಗಲಿ, ಜಲಪ್ರಳಯ, ಭೂಕಂಪಗ

ಳಾಗಿ ಹಾಳಾದ ಊರುಗಳಿಗಾಗಲಿ, ಯುದ್ಧಭೂಮಿಯ ದೃಶ್ಯಗಳನ್ನಾಗಲಿ ಹೋಗಿ ನೋಡಿದರೆ ಎಲ್ಲವೂ ಸುಳ್ಳು ಸಂಸಾರ ಬಾಳುವೆಯು ಎಲ್ಲ ವ್ಯರ್ಥ ನಿರರ್ಥಕವೆಂದು ಎದೆಯಲ್ಲಿ ಒಡಮೂಡಿಹೋಗುವದು. ಆಗ ಸತ್ಯ ನಿತ್ಯನಾದ ದೇವರ ಬಗ್ಗೆ ಆಕಾಂಕ್ಷೆ ಸಹಜ ತನ್ನಿಂದ ತಾನೇ ಜನಿಸುವದು. ಹೇಗಾದರೂ ಆಗಲಿ ದೇವರ ಬಗ್ಗೆ ಭಕ್ತಿ ಹುಟ್ಟಿದರೆ ಸಾಕು.

ದುಃಖದ ಮೇಲೆ ದುಃಖ, ಕಷ್ಟದ ಮೇಲೆ ಕಷ್ಟ, ತ್ರಾಸಿನ ಮೇಲೆ ತ್ರಾಸುಗಳು ಬಂದು ಹೊಡತಕೊಡಹತ್ತಿದರೆ ಅವನ ಕಣ್ಣುಗಳು ತೆರೆದು ದೇವರ ಬಗ್ಗೆ ಆಕಾಂಕ್ಷೆ ಉಂಟಾಗುವದು. ಪ್ರೀತಿಯ ಹೆಂಡತಿ, ಮಗ, ಸತ್ತಿಶೆ ಇದ್ದ ಹೊಲ ಮನೆಗಳೂ ಬೆಳ್ಳಿ ಬಂಗಾರ ಮೊದಲಾದವುಗಳೂ ಹೋದರೆ ದೇವರ ನೆನಪು ತಾನೇ ಆಗುವದು. ಆಗ ದೇವರ ಭಕ್ತಿಗೆ ಪ್ರಾರಂಭವಾಗುವದು. ದೇವರು ಹೇಗಾದರೂ ನಮಗೆ ನೆನಪಾದರೆ ನಾವೇ ನಿಜವಾದ ಭಾಗ್ಯಶಾಲಿಗಳೇ ಸರಿ. ಇಷ್ಟಾದರೂ ಕೆಲವರಿಗೆ ದೇವರ ನೆನಪೇ ಆಗುವದಿಲ್ಲ. ಕಡೆಯ ಉಸುರಿನ ಗುಟುಕನ್ನು ಬಿಡುವ ತನಕ ತನಗೆ ಹೋದ ವಿಷಯಸುಖಗಳು ಪುನ: ಲಭಿಸುವವೆಂದೇ ತಿಳಿಯುವನು. ಅಲ್ಲದೆ ಅದಕ್ಕೆ ತಕ್ಕಂತೆ ಯತ್ನವನ್ನೇ ಸದಾ ಮಾಡಿಯೇ ಸಾಯುವನು. ಇವು ಅತಿ ಬದ್ಧ ಜೀವಿಗಳೇ ಸರಿ. ಇವರು ಅತಿ ಮೃಗಗಳೇ ಸರಿ. ಇದು ಯಾತಕ್ಕೂ ಬಾರದ ಜೀವನವೇ ಸರಿ. ಮಾನವನಿಗೆ ಎಂತಾದರೂ ಆಗಲಿ, ಹೇಗಾದರೂ ಆಗಲಿ, ಏನಾದರೂ ಆಗಲಿ, ದೇವರ ನೆನಪು ಆಕಾಂಕ್ಷೆ ಉಂಟಾಗಿ ಭಕ್ತಿ ಮಾಡಿದರೆ ಸಾಕು. ಅದಕ್ಕಾಗಿ "ಹಾವ ತಿಂದವರ ನುಡಿಸಬಹುದು. ಗರ ಹೊಡೆದವರ ನುಡಿಸಬಹುದು. ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ! ಬಡತನವೆಂಬ ಮಂತ್ರವಾದಿ ಹೋಗಲು ಒಡನೆ ನುಡಿವರಯ್ಯ ಕೂಡಲಸಂಗಮದೇವಾ." ಎಂದು ಹಾಡಿದ್ದು ಬಹು ಸಮಂಜಸವಾಗಿರುವದು.

ಮುಖ್ಯವಾಗಿ ಬೇಕಾಗಿರುವದು ದೇವರಿಗಾಗಿ ಆಕಾಂಕ್ಷೆ ಹೊರತು ಬೇರೆ ಏನೂ ಇಲ್ಲ. ನಮಗೆ ದೇವರ ಹೊರತು ಉಳಿದುದೆಲ್ಲವೂ ಬೇಕಾಗಿರುವದು. ಯಾಕೆಂದರೆ ಈ ಬೇಡಿಕೆಗಳೆಲ್ಲ ಈ ಪ್ರಪಂಚದಲ್ಲಿ ಸಹಜ ಅನಾಯಾಸ ದೊರಕೊಳ್ಳುವವು. ಈ ಬಾಹ್ಯ ಪ್ರಪಂಚವನ್ನು ಮೀರಿ ಹೋದಾಗ ಮಾತ್ರ ದೇವರು ದೊರಕುವನು. ಇಲ್ಲವಾದರೆ ದೇವನು ಎಂದೂ ದೊರ

ಕೊಳ್ಳಲಾರ. ಇದೆಲ್ಲ ಪ್ರಪಂಚದ ಆಟದ ಬಗ್ಗೆ ವಿಚಾರಿಸಿದರೆ ಇದೊಂದು ಮಕ್ಕಳಾಟದಂತೆ ತೋರುವದು. ಇದೇ ಧರ್ಮದ ದೇವರ ಮೊದಲನೆಯ ಮೆಟ್ಟಲು ಪ್ರಾರಂಭವಾದಂತೇ ಸರಿ. ನಮಗೆ ಬಾಳಲಿಕ್ಕೆ ಅತಿ ಅವಶ್ಯಕ ವಾದ ಕೆಲವೇ ವಸ್ತುಗಳುಂಟು. ಅವೇ ಗಾಳಿ ಅನ್ನ ನೀರುಗಳು. ಇವು ಗಳಂತೆ ದೇವರು ನಮಗೆ ಬೇಕೆನಿಸಬೇಕು. ಇದೇ ಭಕ್ತಿ ಎನಿಸುವದು. ದೇವರ ಮೇಲಿನ ಪ್ರೀತಿ ಅಥವಾ ಭಕ್ತಿ ಅಸಂಖ್ಯ ಗ್ರಂಥಗಳನ್ನೋದಿದರೆ ಸಿಗಲಾರದು. ಅತಿ ಬುದ್ಧಿವಂತನಾದರೂ ಅದು ದೊರೆಯುವದಿಲ್ಲ. ಯಾರು ದೇವರ ಬಗ್ಗೆ ಆಶೆ ಆಕಾಂಕ್ಷೆ ಪಟ್ಟು ಪ್ರೀತಿ ಭಕ್ತಿಗಳನ್ನು ಮಾಡುವರೋ ಅವರಿಗೆ ಮಾತ್ರ ದೇವರು ಸಿಕ್ಕೇ ತೀರುವನು. ನಾವು ನಮ್ಮ ವೈರಿಯನ್ನೂ ಕೂಡ ಪ್ರೀತಿಸಹತ್ತಿದರೆ ಕೆಲವು ದಿನಗಳ ಮೇಲೆ ಅವನ ದ್ವೇಷವು ಹೋಗಿ ತಿರುಗಿ ನಮ್ಮನ್ನು ಪ್ರೀತಿಸುವದುಂಟು. ಹೀಗಿದ್ದ ಮೇಲೆ ದೇವರನ್ನು ಪ್ರೀತಿ ಸಿದರೆ ಅವನು ನಮ್ಮನ್ನು ಪ್ರೀತಿಸಲಾರದೆ ಎಂದಾದರೂ ಇರುವದು ಶಕ್ಯ ವಿದೆಯೇ ಹೇಳಿ ನೋಡುವಾ. ನಾವು ಒಂದು ಪಟ್ಟು ಪ್ರೀತಿಸಿದರೆ ಅವನು ನಾಲ್ಕು ಪಟ್ಟು ನಮ್ಮನ್ನು ಪ್ರೀತಿಸುವನು. ನಾವು ಒಂದು ಹೆಜ್ಜೆ ಅವನ ಕಡೆ ಸಾಗಿದರೆ ಅವನು ನಾಲ್ಕು ಹೆಜ್ಜೆ ಸರಿದು ಮುಂದೆ ಬರುವನು. ಅದ ಕ್ಕಾಗಿ ಪ್ರತಿದಿನ ದೇವರುಬೇಕು, ದೇವನು ಬೇಕು. ಬೇಕೇ ಎಂಡು ಹೃದಯ ದಿಂದ ಕೇಳಿಕೊಂಡರೆ ಅವನಿಗಾಗಿ ಕಾತರರಾಗಿ ಕಣ್ಣೀರು ಕರೆದರೆ ತಾನಾ ಗಿಯೇ ಓಡಿ ಬರುವನು. ಇದಾರಿಗೆ ಬೇಕಾಗುವದು ರೊಟ್ಟಿ, ಬಂಗಾರ, ವಸ್ತು ವಡವೆ, ಮಕ್ಕಳು, ಹೆಂಡರು, ಗಂಡರು ಅವು ಇವುಗಳೇ ನಮಗೆ ಬೇಕಾಗಿರುವದರಿಂದ ಅವುಗಳನ್ನು ನಮಗೆ ಕೊಟ್ಟು ತಾನು ದೂರ ಸರಿದು ನಿಲ್ಲುವನು. ಇವುಗಳನ್ನು ಬೇಡದೆ ದೇವರನ್ನೇ ಬೇಡಿದರೆ ಅವನೇ ನಮ್ಮ ಕಡೆಗೆ ಬಂದೇಬಿಡುವನು.

ಕಾರಣ ಪ್ರೀತಿಸಬೇಕಾದರೆ ದೇವರನ್ನೇ ಪ್ರೀತಿಸು. ಪ್ರಾಪಂಚಿಕ ವಸ್ತುಪಡವೆಗಳನ್ನು ಪ್ರೀತಿಸಿ ಪ್ರಯೋಜನವೇನು? ಪ್ರಪಂಚವೇ ನಮ್ಮ ಹೆಗ್ಗುರಿಯೆಂದು ನಂಬಿದ್ದನ್ನು ತೊಡೆದುಹಾಕು. ಯಾಕಂದರೆ ಅದು ವಿನಾಶ ಕಾರಿಯು. ಅಸ್ಥಿರವಾದದು. ಕಾರಣ ಇದರಲ್ಲಿ ನಿಷ್ಕಾಮವಾಗಿ ಇದು ಶರ ಣರ ಕಾಯಕ ಮಾರ್ಗದಂತೆ ನಡೆದು ನಿಮ್ಮ ಭಕ್ತಿಯುತನಾದರೆ ನಿನಗೆ ದೇವರು ತಾನೇ ಲಭಿಸುವನು. ಸಂದೇಹವಿಲ್ಲ. ದೇವರಿಗೆ ವಿಷಯಸುಖವನ್ನು ಕೊಡೆಂದು ಬೇಡ ಬೇಡ. ಅವನ ಭಕ್ತಿಯನ್ನೇ ಕೊಡೆಂದು ಬೇಡಿದರೆ

ಸಾಕು, ಎಲ್ಲವೂ ತಾನೇ ಸರಿಹೋಗುವದು. ಇಂಥ ಭಕ್ತಿಯೇ ಅತ್ಯುತ್ತಮ ಆದರ್ಶ. ಈ ಶರೀರ ಪ್ರಪಂಚಗಳು ನಾವು ದೇವರನ್ನು ಕಾಣಬೇಕೆನ್ನುವದಕ್ಕೆ ಸಾಧನಗಳು ಮಾರ್ಗಗಳು ಹೊರತು ಬೇರೆ ಏನೂ ಇಲ್ಲ. ಕಾರಣ ದೇವರನ್ನು ಸೇರುವದಕ್ಕೆ ಅವುಗಳ ಸದುಪಯೋಗ ಮಾಡಿಕೊಳ್ಳಬೇಕು. ಅದನ್ನೇ ವೀರಶೈವರ ಶಕ್ತಿ ವಿಶಿಷ್ಟಾದ್ವೈತ ತತ್ವವು ಚನ್ನಾಗಿ ನಿರೂಪಿಸುವದು. ಅದರ ಅಭ್ಯಾಸವನ್ನು ಸರಿಯಾಗಿ ಮಾಡಿ ಗುರಿಯನ್ನು ಸೇರಿದರೆ ಸಾಕು.

---

## ಬ್ರಹ್ಮಾನುಭವವೂ ಶಿವಾನುಭವವೂ.

(ಲೇಖಕ:— ಶ್ರೀ. ಸಿ. ನಾ. ಮಹಾಂತಣ್ಣವರ ಹೂನೂರ)

---

ಅನಾದ್ಯವಿದ್ಯಾಪರವಶರಾಗಿ ಸಂಸಾರ ದುಃಖಸಾಗರದಲ್ಲಿ ಮುಳುಗಿ ಹೋಗುವ ಪ್ರಾಣಿಗಳನ್ನು ಉದ್ಧರಿಸುವದಕ್ಕೋಸ್ಕರ ಸಚ್ಚಿದಾನಂದ ಪರಮೇಶ್ವರನಿಂದ ಶ್ರೀರಾಮದೇವರಿಗೆ ಬೋಧಿಸಿದ ಶಿವಮಹಿಮಾ ಪ್ರಕಾಶಮಾದ ಪದ್ಮಪುರಾಣಾಂತರ್ಗತವಾದ ಷೋಡಶಾಧ್ಯಾಯ ಪರಿಮಿತಮಾದ ಶಿವಗೀತೆಯೆಂಬಭಿಧಾನದ ಅಧ್ಯಾತ್ಮ ಜ್ಞಾನವನ್ನು ಮಹೇಶ್ವರನ ಅನುಗ್ರಹದಿಂದ ಶುದ್ಧ ಕೈವಲ್ಯ ಮುಕ್ತಿಪ್ರದವಾದ ಸಕಲೋಪನಿಷತ್ತುಗಳ ಸಾರ ಸಂಗ್ರಹದೊಡನೆ ಇತ್ತೀಚೆಗೆ ಸೂತಪುರಾಣಿಕರು ಉತ್ತಮಾಧಿಕಾರಿಗಳಾದ ಶೌನಕಾದಿ ಮಹರ್ಷಿಗಳಿಗೆ ಉಸುರಿದ ದೇಹಸ್ವರೂಪವನ್ನು ಅಧ್ಯಾತ್ಮಬೋಧಾಮೃತಾ ಕಾಂಕ್ಷಿಗಳಿಗೆ "ಶರೀರಮಾದ್ಯಂ ಖಲು ಧರ್ಮಸಾಧನಂ' ಎಂಬುಕ್ತಿಯಂತೆ ಈ ದೇಹಸ್ವರೂಪ ಜ್ಞಾನದಿಂದ ಆತ್ಮಜ್ಞಾನಕ್ಕೆ ಅನುವು ಕೊಡಬಹುದೆಂಬ ಆಶೆಯನ್ನನುಲಕ್ಷಿಸಿ ಬರೆಯಲುದ್ಯುಕ್ತನಾಗಿರಲು, ವರ್ಣಾಶ್ರಮೋಚಿತ ಕರ್ಮ, ಅನುಷ್ಠಾನ, ದಾನ, ತಪಸ್ಸುಗಳಿಂದ ಬ್ರಹ್ಮಸಾಕ್ಷಾತ್ಕಾರ ರೂಪವಾದ ಕೈವಲ್ಯವು ಸಾಧಿಸಬಿದ್ದರೂ, ಇವುಗಳಿಂದಾದ ಚಿತ್ತಶುದ್ಧಿದ್ವಾರಾ ಬ್ರಹ್ಮಜಿಜ್ಞಾಸೆ ಹುಟ್ಟಿ ಬ್ರಹ್ಮಜ್ಞಾನಾನುಸಂಧಾನದಿಂದ ಅರ್ಥಾತ್ ಜ್ಞಾನ

ಮೇಶ್ವರನಿಂದ ಶ್ರೀರಾಮನಿಗೆ ಯಾವ ಶಿವಗೀತೆಯೆಂಬುದು ಹೇಳಲ್ಪಟ್ಟಿತೋ ಅದು ಅತ್ಯಂತ ರಹಸ್ಯವಾದುದೆಂದು ತಿಳಿಯಬೇಕು. ಯಾವದರ ಸ್ಮರಣ ದಿಂದಲೇ ಮನುಷ್ಯರಿಗೆ ಮುಕ್ತಿಯು ನಿಶ್ಚಯವೋ ಅಂಥ ಈ ಶಿವಗೀತೆಯು ಪೂರ್ವಕಾಲದೊಳು ಸುಬ್ರಹ್ಮಣ್ಯ ದೇವರಿಂದ ಸನತ್ಕುಮಾರರೆಂಬ ಋಷಿ ಕುಮಾರರಿಗೆ ಹೇಳಲ್ಪಟ್ಟಿತು. ಎಲೈ ಮುನೀಶ್ವರರುಗಳಿರಾ; ಅದನ್ನು ಸನತ್ಕುಮಾರನು ವೇದವ್ಯಾಸರಿಗೆ ಹೇಳಿದನು. ವ್ಯಾಸನು ಕೃಪಾತಿಶಯ ದಿಂದ ಅದನ್ನು ನನಗೆ ಉಪದೇಶಿಸಿದನು ಮತ್ತು ಅವರು ನನಗೆ ಹೇಳಿ ದ್ದೇನಂದರೆ "ಎಲೇ ಸೂತನೇ ಇದಕ್ಕೆ ಅಧಿಕಾರಿಯಲ್ಲದ ಯಾವನೊಬ್ಬ ನಿಗೂ ನೀನು ಕೊಡಬೇಡ. ಹಾಗೇ ಕೊಟ್ಟದ್ದಾದರೆ ದೇವತೆಗಳು ಕೋಪ ಗೊಳ್ಳುತ್ತಾರೆ ಮತ್ತು ಶಪಿಸುತ್ತಾರೆ" ಆವಾಗ ಭಗವಂತನಾದ ವೇದವ್ಯಾಸಃ– 'ದೇವರೇ ದೇವರುಗಳು ಯಾವನನ್ನು ಕೋಪಿಸುವರು ಹಾಗೂ ಶಪಿಸು ವರು?" ಎಂಬದಾಗಿಯೂ ಇದರಿಂದ ದೇವತೆಗಳಿಗೆ ಉಂಟಾಗುವ ಹಾನಿ ಯಾದರೂ ಏನು? ಎಂಬದಾಗಿ ವಿಚಾರಿಸಲು ಆಗ ವೇದವ್ಯಾಸರು ನನ್ನಂ ನೋಡಿ ಉತ್ತರಿಸುವರು. "ಗೃಹಸ್ಥಾಶ್ರಮಿಗಳಾದ ಯಾವ ಬ್ರಾಹ್ಮಣರು ಯಾವಾಗಲೂ ನಿತ್ಯಾಗ್ನಿಹೋತ್ರವನ್ನು ಮಾಡುತ್ತಾರೋ ಅವರೇ ದೇವತೆಗ ಳಿಗೆ ಕಾಮಧೇನುಗಳೋಪಾದಿಯಲ್ಲಿ ಸರ್ವ ಫಲಗಳನ್ನು ಕೊಡುವವರಾಗಿ ರುತ್ತಾರೆ. ಈ ಲೋಕದೊಳು ಅಗ್ನಿಯಲ್ಲಿ ಹೋಮ ಮಾಡಲ್ಪಟ್ಟ ಹವಿಸ್ಸಿ ನಿಂದ ಸ್ವರ್ಗ ಲೋಕದೊಳು ದೇವರಿಗೆ ಇಷ್ಟಗಳಾಗಿರುವಂಥ ಭಕ್ಷ್ಯಭೋಜ್ಯ ಪಾನಾದಿ ಪದಾರ್ಥಗಳೆಲ್ಲವೂ ಸಲ್ಲಿಸಲ್ಪಡುತ್ತವೆ. ಈ ಲೋಕದೊಳು ಗೃಹ ಸ್ಥರಿಗೆ ಸುಖಕರವಾಗಿಯೂ ತುಂಬಾ ಹಾಲು ಕರೆಯುವ ಹಸುವನ್ನು ತಪ್ಪಿ ಸಿದರೆ ಅವರಿಗೆ ಹೇಗೆ ಸುಖವಿಲ್ಲವೋ ಹಾಗೆ ಸ್ವರ್ಗದಲ್ಲಿ ದೇವತೆಗಳಿಗೆ ಅಗ್ನಿಹೋತ್ರವನ್ನು ಬಿಟ್ಟು ಇಷ್ಟಸಿದ್ಧಿಕರವಾದುದು ಬೇರೊಂದಿಲ್ಲ. ಆದ್ದ ರಿಂದ ಜ್ಞಾನವಂತನಾದ ಬ್ರಾಹ್ಮಣನು ದೇವರಿಗೆ ದುಃಖಕರನಾಗುತ್ತಾನೆ. ಇದರಿಂದ ದೇವರು ಭೂಲೋಕವನ್ನೈದಿ ತತ್ವಜ್ಞಾನಕ್ಕೆ ವಿಘ್ನವಂ ಮಾಡು ತ್ತಾರೆ. ಇದರಿಂದ ಮೂಢನಾದ ಯಾವ ಮನುಷ್ಯನಿಗೂ ಭಕ್ತಿಯುಂಟಾ ಗುವದಿಲ್ಲ. ಹಾಗಾದರೆ ಪುರುಷ ಪ್ರಯತ್ನಕ್ಕೂ ಮುಕ್ತಿ ಸಾಧ್ಯವಿಲ್ಲವಲ್ಲಾ ಎಂದು ಋಷಿಸಮೂಹವು ಅನ್ನುತ್ತಿರಲು—

ಆಗ ಸೂತ ಪುರಾಣಿಕರುಃ— ಕೋಟಿ ಜನ್ಮಗಳಿಂದ ಸಂಪಾದಿಸಲ್ಪಟ್ಟ ಪುಣ್ಯಗಳಿಂದ ಶಿವನಲ್ಲಿ ಭಕ್ತಿಯುಂಟಾಗುತ್ತದೆ. ಮನುಷ್ಯನು ಅಂಥ ಭಕ್ತಿ

ಯಿಂದ ಶಿವಾರ್ಪಣ ಬುದ್ಧಿಯೊಡನೆ ಸ್ವಪ್ರಯೋಜನದ ಕೋರಿಕೆಗಳಂ ಬಿಟ್ಟು ಶಾಸ್ತ್ರೋಕ್ತವಾಗಿ ಇಷ್ಟಾಪೂರ್ತಾದಿ ಕರ್ಮಗಳನ್ನು ಮಾಡುತ್ತಾನೆ. ಹಾಗೆ ಮಾಡುವದರಿಂದ ಪರಮೇಶ್ವರನ ಅನುಗ್ರಹ ವುಂಟಾಗಿ ಮನುಷ್ಯನು ದೃಢ ಚಿತ್ತವುಳ್ಳವನಾಗುತ್ತಾನೆ. ಆಗ ದೇವರು ಮಾಡುವ ವಿಘ್ನಗಳು ಮಾಡದೆ ಓಡಿ ಹೋಗುವದು. ಆಗ ಮನುಷ್ಯನಿಗೆ ಪರಮೇಶ್ವರನ ಚರಿತ್ರವ ಕೇಳ ಬೇಕೆಂಬ ಇಚ್ಛೆ ಹುಟ್ಟುತ್ತದೆ. ಕೇಳುವಂಥವನಿಗೆ ಜ್ಞಾನ ಹುಟ್ಟುತ್ತದೆ. ಜ್ಞಾನದಿಂದ ಮುಕ್ತನಾಗುತ್ತಾನೆ.

ಶ್ರೀರಾಮಚಂದ್ರನು ತಂದೆಯ ಅಪ್ಪಣೆಯಂತೆ ಸೀತಾ ಲಕ್ಷ್ಮಣರೊಡನೆ ವನವಾಸದಲ್ಲಿರುವಾಗ ರಾವಣನು ಮೋಸದಿಂದ ಸೀತಾಪಹರಣ ಮಾಡಿ ಕೊಂಡಿರಲು ಆಗ ರಾಮನು ಸೀತಾ ವಿಯೋಗದಿಂದ ಪಂಚ ಪ್ರಾಣಗಳನ್ನು ಬಿಡುವವನಾಗಿರಲು ಇದನ್ನು ತಿಳಿದ ಅಗಸ್ತ್ಯ ಋಷಿಯು ರಾಮನ ಹತ್ತರ ಬಂದು ಬೇಕಾದಷ್ಟು ಆತ್ಮಬೋಧೆ ಮಾಡಿದರೂ ಆತನು ಸಮಾಧಾನ ಹೊಂದದ್ಧರಿಂದ ರಾಮನ ಭಕ್ತಿಭಾವಕ್ಕೆ ಮೆಚ್ಚಿ ಋಷಿಯು ಆತನಿಗೆ ವಿರಜಾ ದೀಕ್ಷೆಯನ್ನಿತ್ತು ಶಿವಸಹಸ್ರ ನಾಮಾವಳಿಯ ವ್ರತವನ್ನೂ ಅಗ್ನಿಮಂತ್ರಜಪ ವನ್ನೂ ಬೋಧಿಸಲು ರಾಮನ ಕಠಿಣವಾದ ತಪಸ್ಸಿಗೆ ಮೆಚ್ಚಿ ಶಿವನು ಪ್ರಸನ್ನ ನಾಗಿ ಪಾಶುಪತಾಸ್ತ್ರವನ್ನು ವರಪ್ರದಾನ ಮಾಡಿ ಅಧ್ಯಾತ್ಮ ವಿದ್ಯೆಯನ್ನೂ ಮಂತ್ರ ಮಹಿಮೆಯನ್ನೂ ಉಪದೇಶಿಸುತ್ತ ದೇಹ ಸ್ವರೂಪವನ್ನು ರಾಮಚಂದ್ರ ನನ್ನು ಕುರಿತು ಆರಂಭಿಸಿದನು.

ಶಿವನು:- ಎಲೈ ಅರಸನೇ! ದೇಹದ ಸ್ವರೂಪವನ್ನು ಹೇಳುತ್ತೇನೆ ಜಾಗರೂಕನಾಗಿ ಕೇಳು. ಈ ಲೋಕವು ನನ್ನಿಂದಲೇ ಹುಟ್ಟಿ ನನ್ನಲ್ಲೇ ನೆಲೆಗೊಂಡಿರುತ್ತದೆ. ಮುತ್ತಿನ ಚಿಪ್ಪಿನಲ್ಲಿ ಬೆಳ್ಳಿ ತೋರಿ ಹ್ಯಾಗೆ ಅಲ್ಲಿಯೆ. ಲಯಿಸುತ್ತದೋ ಹಾಗೆಯೇ ಆಧಾರವಾದ ನನ್ನಲ್ಲಿಯೇ ಜಗತ್ತು ಲಯಿಸ ತ್ತದೆ. ನಾನು ನಿರ್ಮಲನು, ಪೂರ್ಣನು ಸಚ್ಚಿದಾನಂದ ಮೂರ್ತಿಯು ಸಂಗವಿಲ್ಲದವನು, ಅಹಂಕಾರವಿಲ್ಲದವನು, ಶುದ್ಧವಾದ ಬ್ರಹ್ಮವು ಶಾಶ್ವತನು, ಅನಾದಿಯಾದ ಮಾಯೆಯೊಂದಿಗೆ ಸೇರಿ ಜಗತ್ಕಾರಣನಾಗುತ್ತೇನೆ. ಇಂಥಾ ದ್ದೆಂದು ಹೇಳುವದಕ್ಕೆ ಅಶಕ್ಯವಾಗಿಯೂ ಮಹತ್ತಾಗಿಯೂ ಇರುವ ಅವಿ ದ್ಯೆಯು ಮೂರು ಗುಣಗಳುಳ್ಳದ್ದಾಗಿಯೂ ವಿಕಾರವುಳ್ಳದ್ದಾಗಿಯೂ ಇರುತ್ತದೆ. ಸತ್ವ, ರಜಸ್ಸು ತಮಸ್ಸೆಂಬ ಮೂರು ಗುಣಗಳು. ಸತ್ವಗುಣವು ಶುಕ್ಲ

ವರ್ಣವನ್ನು ಹೊಂದಿ ಸುಖಪ್ರದವಾಗಿರ್ಪುದು. ರಜೋಗುಣವು ರಕ್ತವಂ ಪಡೆದು ಚಂಚಲತ್ವವನ್ನೀಯುತ್ತದೆ. ತಮೋಗುಣವು ಕಪ್ಪಾಗಿಯೂ ಜಡವಾಗಿಯೂ ಸುಖದುಃಖಗಳಿಗೆ ಅಕಾರಣವಾಗಿರುತ್ತದೆ. ಆದದರಿಂದ ನನ್ನ ಸಂಬಂಧದಿಂದ ಶಕ್ತಿಯು ತ್ರಿಗುಣಗಳುಳ್ಳದ್ದಾಗಿದೆ. ಅದು ಆಧಾರಭೂತವಾದ ನನ್ನಲ್ಲಿಯೇ ಜಗತ್ ಸ್ವರೂಪವಂ ಹೊಂದುತ್ತ, ಮುತ್ತಿನ ಚಿಪ್ಪಿನಲ್ಲಿ ಬೆಳ್ಳಿಯಂತೆಯೂ ಹಗ್ಗದಲ್ಲಿ ಹಾವಿನಂತೆಯೂ ಇದ್ದು ನನ್ನ ಮಾಯೆಯಿಂದ ಆಕಾಶಾದಿ ಪಂಚಭೂತಗಳುಂಟಾಗಿ ಅವುಗಳ ಮೂಲಕ ಪಂಚಭೂತಾತ್ಮಕವಾದ ಸರ್ವ ಜಗತ್ತೂ ಉಂಟಾಗಿರುತ್ತದೆ.

ತಾಯಿ ತಂದೆಗಳಿಂದ ಭಕ್ಷಿಸಲ್ಪಟ್ಟ ಅನ್ನದ ದೆಸೆಯಿಂದ ಆರು ಕೋಶಗಳುಳ್ಳದ್ದಾಗಿ ಶರೀರ ಹುಟ್ಟುತ್ತದೆ. ಅವುಗಳಲ್ಲಿ ತಂದೆಯಿಂದ ನರ, ಮೂಳೆ, ಮಜ್ಜೆಯು, ಹಾಗು ತಾಯಿಯಿಂದ ತೊಗಲು, ಮಾಂಸ, ರಕ್ತಗಳು ಹುಟ್ಟುತ್ತವೆ. ಆರು ಭಾವಗಳಾದರೂ ತಾಯಿ ತಂದೆಗಳಿಂದ ಉದ್ಭವಿಸುತ್ತವೆ. ಆರು ಕೋಶಗಳುಳ್ಳ ಶರೀರದಲ್ಲಿ ಮಾತೃಜ, ಪಿತೃಜ, ರಸಜ ಆಮುಜವೆಂಬ ನಾಲ್ಕು ಪ್ರಕಾರದ ಭಾವ ವಸ್ತುಗಳು. ರಕ್ತವು ವಪೆಯು, ಸಾರಭೂತವಾದ ಧಾತು ವಿಶೇಷವು, ಗುಲ್ಮವು, ಪುರುಷನ ಗರ್ಭದ ಬಲಗಡೆಯಲ್ಲಿರುವ ಕಪ್ಪಾದ ಮಾಂಸ ಖಂಡವು, ಆಸನವು, ಹೃದಯವು, ನಾಭಿಯು ಇಂಥ ಮೃದುವಾದ ಭಾವಗಳು ತಾಯಿಯಿಂದುಂಟಾಗುತ್ತವೆ. ಮೀಸೆ, ರೋಮಗಳು, ತಲೆಗೂದಲು ಸೂಕ್ಷ್ಮನಾಡಿಗಳು, ಉಗುರು, ಹಲ್ಲುಗಳು, ವೀರ್ಯವು ಇಂಥ ಸ್ಥಿರಭಾವಗಳು ತಂದೆಯಿಂದುಂಟಾಗುತ್ತವೆ, ದೇಹ ಹುಟ್ಟುವಾಗ ವೃದ್ಧಿಯೂ, ವರ್ಣವೂ. ಕ್ರಮವಾದ ವೃದ್ಧಿಯು, ತೃಪ್ತಿಯು, ಬಲವು ಸ್ಥಿರತ್ವವು, ಚಾಪಲ್ಯಯಿಲ್ಲದಿರುವಿಕೆಯು, ಉತ್ಸಾಹವು ಇವುಗಳು ರಜೋಗುಣದಿಂದುಂಟಾಗುವವು. ಇಚ್ಛೆಯು ದ್ವೇಷವು, ಸುಖವು, ದುಃಖವು, ಧರ್ಮಾಧರ್ಮಗಳು, ಭಾವನೆಯು, ಪ್ರಯತ್ನವು, ಜ್ಞಾನವು, ಆಯುಸ್ಸು, ದಶೇಂದ್ರಿಯಗಳು ಇವೆಲ್ಲ ಆತ್ಮದಿಂದುಂಟಾಗುವ ಗುಣಗಳು. ಜ್ಞಾನೇಂದ್ರಿಯಗಳಾದ ಶ್ರವಣವು ಸ್ಪರ್ಶನವು ದರ್ಶನವು ರಸನವು ಘ್ರಾಣವು ಎಂಬ ಕೇಳ್ವಿಕೆ ಮುಟ್ಟುವಿಕೆ ನೋಟ ರಸಗ್ರಹಣ ಮೂಸುವಿಕೆ ಇವು ವಿಷಯಗಳು. ಶಬ್ದವು ಸ್ಪರ್ಶವು ರೂಪವು ರಸವು ಗಂಧವು ಎಂಬವು ಕ್ರಮದಿಂದ ವಿಷಯಂಗಳು. ವಾಕ್ಕು ಕೈ ಕಾಲು ಗುದ

ಉಪಸ್ಥಗಳೆಂಬವು ಕರ್ಮೇಂದ್ರಿಯಗಳು. ನುಡಿ ತೆಗೆದುಕೊಳ್ಳೋಣ ನಡೆ ಮಲೋತ್ಸರ್ಗ, ರತಿ ಇವು ಕ್ರಮವಾಗಿ ಕರ್ಮೇಂದ್ರಿಯಗಳ ಕ್ರಿಯೆಗಳು. ಕರ್ಮೇಂದ್ರಿಯ ಕೆಲಸಗಳೂ, ಮನಸ್ಸು ಇವು ಎರಡು ಪ್ರಕಾರದವು ಅವೆ.

ಮನಸ್ಸು, ಬುದ್ಧಿಯು, ಅಹಂಕಾರ, ಚಿತ್ತವು ಈ ನಾಲ್ಕು ಅಂತ:ಕರಣಂಗಳು. ಸುಖದುಃಖಗಳು, ವಿಷಯಗಳು, ಸ್ಮರಣ, ಭಯ, ವಿಕಲ್ಪವೆಂಬಿವು ಮನೋವ್ಯಾಪಾರಗಳು. ನಿಶ್ಚಯ ಜ್ಞಾನವೇ ಬುದ್ಧಿಯು. ನಾನು ನನ್ನದು ಎಂಬ ಜ್ಞಾನವು ಅಹಂಕಾರವು. ವಿಚಾರರೂಪವಾದುದು ಚಿತ್ತವು. ಸಾಕ್ಷಿಭೂತವಾದ ಅಂತ:ಕರಣವೇ ಸತ್ವವೆನಿಸಿಕೊಳ್ಳುತ್ತದೆ. ಅದೇ ಗುಣಗಳ ಭೇದದಿಂದ ಸತ್ವ, ರಜಸ್ಸು, ತಮಸ್ಸು ಎಂಬದಾಗಿ ಮೂರು ವಿಧವಾಗಿರುತ್ತದೆ. ಅವುಗಳಲ್ಲಿ ಸತ್ವದಿಂದ ಸಾತ್ವಿಕ ಭಾವಗಳುಂಟಾಗುತ್ತವೆ. ಅವುಗಳು ಯಾವವೆಂದರೆ- ಪ್ರಸನ್ನತೆ, ಆರೋಗ್ಯ, ಚಟವಟಿಕೆ, ಆಸ್ತಿಕತ್ವವು ಶುದ್ಧಿಯು, ಧರ್ಮಾಸಕ್ತಿ ಮೊದಲಾದವುಗಳು. ರಜೋ ಗುಣದಿಂದ ಕಾಮ ಕ್ರೋಧ ಮದ ಮೊದಲಾದ ಭಾವಗಳು. ತಮೋ ಗುಣದಿಂದ ನಿದ್ರೆ, ಆಲಸ್ಯ, ಪ್ರಮಾದ, ವಂಚನೆ ಮುಂತಾದವುಗಳು. ಸ್ಥೂಲದೇಹವು ಮಾತೃ ಸ್ವರೂಪವಾದುದು. ಆದದರಿಂದ ತಾಯಿಯ ದೆಶೆಯಿಂದ ಗುಣಗಳು ತೆಗೆದುಕೊಳ್ಳಲ್ಪಟ್ಟವೆ. ಮತ್ತು ಈ ದೇಹದಲ್ಲಿ ಶಬ್ದ, ಶ್ರೋತ್ರ, ಸುಖರತಿ, ವಿಚಿತ್ರತ್ವ, ಲಘುತ್ವ, ಧೈರ್ಯ, ಬಲವು ಇವು ಆಕಾಶ ತತ್ವದಿಂದ ಉಂಟಾಗುವವು. ಸ್ಪರ್ಶವು, ಸ್ಪರ್ಶೇಂದ್ರಿಯವು, ಮೇಲೆ ಎತ್ತುವಿಕೆ, ಕೆಳಗೆ ಇಳಿಸುವದು, ಮುಂದೂಡುವಿಕೆ, ನಡೆಯುವಿಕೆ, ಅಡ್ಡವಾಗಿ ಚಾಚುವಿಕೆ ಇವು ವಾಯುತತ್ವದಿಂದುಂಟಾಗುವವು.

ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ ಇವು ಪ್ರಾಣ ಪಂಚಕಗಳು. ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ ಇವು ಉಪವಾಯುಗಳು. ಇವುಗಳಲ್ಲಿ ಮುಖ್ಯವಾದ ಪ್ರಾಣವಾಯುವು ಕಂಠದ ಕೆಳಗೆ ನಾಭಿಯ ವರೆಗೂ ಇದ್ದು ಮೂಗುಗಳಲ್ಲಿಯೂ ನಾಭಿಯಲ್ಲಿಯೂ ಹೃದಯ ಕಮಲದಲ್ಲಿಯೂ ಸಂಚರಿಸುತ್ತದೆ. ಮತ್ತು ಶುದ್ಧೋಚ್ಚಾರಣೆಗೂ ಉಚ್ಛ್ವಾಸ ನಿಶ್ವಾಸಗಳಿಗೂ ಕಾರಣವಾಗಿರುತ್ತದೆ. ಅಪಾನವಾಯು ಗುದಸ್ಥಾನದಲ್ಲಿಯೂ ಮೇಢ್ರದಲ್ಲಿಯೂ, ಹೊಟ್ಟೆ ಸೊಂಟ ಮೊಳಕಾಲುಗಳಲ್ಲಿಯೂ, ನಾಭಿ, ಅಂಡ, ತೊಡೆ, ಮೀನುಗಂಡಗಳಲ್ಲಿಯೂ ಇರುತ್ತದೆ. ಇದರ ಕೆಲಸವು

ಮಲಮೂತ್ರವನ್ನು ಬಿಡುವದು. ವ್ಯಾನವು— ಕಣ್ಣು, ಕಿವಿ, ಗುಲ್ಫ, ನಾಲಿಗೆ, ಮೂಗುಗಳಲ್ಲಿ ಇರುತ್ತದೆ. ಇದರ ಕೆಲಸವು ರೇಚಕ ಪೂರಕ ಕುಂಭಕಗಳೆಂಬ ಪ್ರಾಣಾಯಾಮವು. ಸಮಾನವೆಂಬ ವಾಯುವು ಅಗ್ನಿಯೊಂದಿಗೆ ಸರ್ವ ಶರೀರವನ್ನೂ ವ್ಯಾಪಿಸಿ ಎಪ್ಪತ್ತೆರಡು ಸಾವಿರ ನಾಡೀ ಮಾರ್ಗಗಳಲ್ಲಿ ಸಂಚರಿಸುತ್ತ ತಿಂದು ಕುಡಿದ ಪದಾರ್ಥಗಳ ರಸಗಳನ್ನು ಚನ್ನಾಗಿ ಶರೀರವೆಲ್ಲ ವ್ಯಾಪಿಸುವ ಹಾಗೆ ಪುಷ್ಟಿಯನ್ನುಂಟು ಮಾಡುತ್ತದೆ. ಉದಾನ ವಾಯುವು ಕೈಕಾಲುಗಳಲ್ಲಿಯೂ ಅಂಗಸಂಧಿಗಳಲ್ಲಿಯೂ ಇರುತ್ತದೆ. ಇದರ ಕೆಲಸವು ಶರೀರವನ್ನು ಮೇಲಕ್ಕೆ ಎಬ್ಬಿಸುವಿಕೆ, ನಡೆಸುವಿಕೆ ಇತ್ಯಾದಿ.

ತ್ವಚೆ, ಮಾಂಸ, ರಕ್ತ, ಎಲುವು, ಸ್ನಾಯು ಈ ಐದು ಧಾತುಗಳ ಆಶ್ರಯದಿಂದ ನಾಗಾದಿಪಳಾದ ಉಪಪ್ರಾಣಗಳು ಇರುತ್ತವೆ. ಅವುಗಳಲ್ಲಿ ಅಬ್ಬಳಿಕೆ, ಬಿಕ್ಕು, ವಾಂತಿ ಇವು ನಾಗದ ಕೆಲಸಗಳು. ನಿಮೇಷ (ಕಣ್ಣು ಮುಚ್ಚುವದು,) ಉನ್ಮೇಷ (ಕಣ್ಣು ತೆರೆಯುವದು) ವಾರಿನೋಟ ಇವು ಕೂರ್ಮದ ಕೆಲಸಗಳು. ಹಸಿವೆ, ನೀರಡಿಕೆ, ಸೀನು ಇವು ಕೃಕಲದ ಕೆಲಸಗಳು. ಆಲಸ್ಯತನ, ನಿದ್ರೆ, ಆಕಳಿಕೆ, ಇವು ದೇವದತ್ತನ ಕೆಲಸಗಳು. ದುಃಖ, ನಗೆ ಇವು ಧನಂಜಯದ ಕೆಲಸಗಳು. ಅಗ್ನಿಯ ದೆಶೆಯಿಂದ ಕಣ್ಣುಗಳಲ್ಲಿ ಪ್ರಕಾಶವು, ಶುಕ್ಲಾದಿ ರೂಪಜ್ಞಾನವು, ಅಗ್ನಿ ದೀಪನವು, ಪ್ರತಿಭಾರೂಪವಾದ ಪ್ರಕಾಶವು, ಕೋಪವು, ಚುರುಕತನವು, ಸೂಕ್ಷ್ಮ ಬುದ್ಧಿಯು, ಓಜಸ್ಸು, ತೇಜಸ್ಸು, ಶೂರತ್ವವು, ಕೇಳಿದ ವಿಷಯಗಳನ್ನು ಧರಿಸತಕ್ಕ ಬುದ್ಧಿ ಉಂಟಾಗುತ್ತವೆ. ಇನ್ನು ಜಲದಿಂದ ರಸನೇಂದ್ರಿಯವು ರಸ ಶೈತ್ಯ, ಸ್ನೇಹಗುಣ, ದ್ರವತ್ವ, ಬೆವರು, ಶರೀರದ ಮೃದುತ್ವಗಳುಂಟಾಗುತ್ತವೆ. ಪೃಥ್ವಿತತ್ವದಿಂದ ಘ್ರಾಣೇಂದ್ರಿಯ, ಮೇಧಸ್ಸು, ಮೂಳೆ, ಮಜ್ಜೆ, ಶುಕ್ಲವೊದಲಾದ ಧಾತುಗಳು ಹುಟ್ಟುತ್ತವೆ.

ಮನುಷ್ಯನಿಂದ ತಿನ್ನಲ್ಪಟ್ಟ ಅನ್ನವು ಜಠರಾಗ್ನಿಯಿಂದ ದೃಢ, ಮಧ್ಯ, ಲಘುಗಳೆಂಬ ಮೂರು ಭಾಗಗಳಾಗುತ್ತವೆ. ಅವುಗಳಲ್ಲಿ ದೃಢಭಾಗವೇ ಮಲವು. ಮಧ್ಯಭಾಗವೇ ಮಾಂಸವು. ಅಂತ್ಯಭಾಗವೇ ಮನಸ್ಸು. ಆದ್ದರಿಂದ ಮನಸ್ಸು ಅನ್ನರೂಪವು. ಜಲದ ದೃಢಭಾಗವು ಮೂತ್ರವು. ಮಧ್ಯಭಾಗವು ರಕ್ತವು. ಅಂತ್ಯಭಾಗವೇ ಪ್ರಾಣಗಳು. ಆದ್ದರಿಂದ ಪ್ರಾಣವು ಜಲರೂಪವು. ತೇಜಸ್ಸಿನ ದೃಢಭಾಗವೇ ಮೂಳೆ, ಮಧ್ಯಭಾಗವೇ ಮಜ್ಜೆ,

ಅಂತ್ಯಭಾಗವೇ ವಾಕ್ಕು-ಅದ್ದರಿಂದ ಲೋಕವು ತೇಜೋವರ್ಣರೂಪಾಗಿದೆ. ರಕ್ತದಿಂದ ಮಾಂಸವೂ, ಮಾಂಸದಿಂದ ಮೇಧಸ್ಸು, ಮೇಧಸ್ಸಿನಿಂದ ಮೂಳೆಗಳು, ಮೂಳೆಯಿಂದ ಮಜ್ಜೆಯು ಉಂಟಾಗುತ್ತವೆ. ನಾಡಿಗಳು, ಶುಕ್ಲವು ಮೂಳೆಗಳೊಳಗಿನ ಸಾರವು ಸಹ, ಮಾಂಸಗಳ ಸಂಬಂಧದಿಂದುಂಟಾಗುತ್ತದೆ. ಮತ್ತು ವಾತ, ಪಿತ್ತ, ಶ್ಲೇಷ್ಮ ಧಾತುಗಳೆಂಬವುಗಳು ಸಹ, ಮನುಷ್ಯ ಶರೀರಗಳಿಗೆ ಉಪಸ್ತಂಭಕವಾದ ಜಲದ ಹತ್ತು ಭಾಗಗಳು ಪ್ರಾಣಬಲವಾಗುತ್ತವೆ. ಒಂಭತ್ತು ಭಾಗಗಳು ಭುಂಜಿಸುವ ಪದಾರ್ಥಗಳ ಸಾರವಾಗಿರುವ ರಸವಾಗಿರುತ್ತವೆ. ಎಂಟು ಭಾಗಗಳು ರಕ್ತವಾಗುತ್ತವೆ. ಏಳು ಭಾಗಗಳು ಮಲವಾಗುತ್ತವೆ. ಆರು ಭಾಗಗಳು ಕಫವಾಗುತ್ತವೆ, ಐದು ಭಾಗಗಳು ಪಿತ್ತವಾಗುತ್ತವೆ. ನಾಲ್ಕು ಭಾಗಗಳು ಮೂತ್ರವಾಗುತ್ತವೆ. ಮೂರು ಭಾಗಗಳು ವಸಾ ಎಂಬ ಧಾತು ಆಗುತ್ತವೆ, ಎರಡು ಭಾಗಗಳು ಮೇಧಸ್ಸೆಂಬ ಧಾತು ಆಗುತ್ತವೆ, ಒಂದು ಭಾಗವು ಮಜ್ಜೆಯೆಂಬ ಧಾತುವಾಗುತ್ತದೆ. ಅರ್ಧಭಾಗವು ಶುಕ್ಲವುಂಟಾಗಿ ಬಲವೆಂದು ಹೇಳಿಸಿಕೊಳ್ಳುತ್ತದೆ.

ಶರೀರದಲ್ಲಿ ಮೂಳೆಗಳು ಮುನ್ನೂರ ಅರವತ್ತು ಇದ್ದು, ಇವುಗಳು ೫ ಭಾಗಗಳಾಗಿ ವಿಂಗಡಿಸಲ್ಪಟ್ಟಿವೆ. "ಜಲಜಾನಿ, ಕಪಾಲಾನಿ ರುಚಿಕಾಸ್ತರಣಾನಿಚ । ನಲಕಾನೀತಿ ತಾನ್ಯಾಹುಃ ಪಂಚಕಾಸ್ಥೀನಿ ರೂಚಕಾಃ" ॥ ಮೂಳೆಗಳ ಸಂಧಿಗಳು ಇನ್ನೂರಾ ಹತ್ತಿರುತ್ತವೆ. ಮನುಷ್ಯ ದೇಹದ ಎಲ್ಲ ಮೂಳೆಗಳಲ್ಲಿ ಪ್ರಸರಗಳು, ಸ್ಕಂಧಸೇಚನಗಳು, ಉರೂಲಖಗಳು, ಸಮುದ್ರಗಳು, ಮಂಡಲಗಳು, ಶಂಖಾವರ್ತಗಳು, ವಾಯುಸತುಂಡುಗಳು, ಕಾರವಗಳು ಎಂಬ ಎಂಟು ವಿಧವಾಗಿರುತ್ತವೆ. ಹಾಗು ದೇಹದಲ್ಲಿ ಮೂರೂವರೆ ಕೋಟಿ ರೋಮಗಳು, ಮೀಸೆ, ದಾಡಿ, ತಲೆಗೂದಲುಗಳು ಮೂರು ಲಕ್ಷ.

ಎಲೈ ದಶರಥ ಕುಮಾರನೇ ಈ ಮೇರಿಗೆ ದೇಹದ ಸ್ವರೂಪವನ್ನು ನಿನಗೆ ಹೇಳಿದೆನು. ಮೂರು ಲೋಕಗಳಲ್ಲಿಯೂ ಅಸಾರವಾದ ಪದಾರ್ಥಗಳಿಲ್ಲ. ಇಂಥ ದೇಹದಲ್ಲಿ ಅಭಿಮಾನದಿಂದ ಮಹತ್ತಾದ ಉಪಾಯ ಬುದ್ಧಿಗಳು ಪಾಪಿಷ್ಟವಾದ ಅಹಂಕಾರದಿಂದ ಮಾಡಲ್ಪಡುತ್ತವೆ. ಅಯ್ಯೋ ಹೇಳತಕ್ಕದ್ದೇನು ? ಆದರಿಂದ ಪಂಡಿತರಾದವರು ಇಂಥ ದೇಹ ಸ್ವರೂಪವನ್ನು ಚನ್ನಾಗಿ ತಿಳಿಯಬೇಕು.

ಈ ದೇಹ ಸ್ವರೂಪವನ್ನು ಕುರಿತು ಶಿವಶರಣರು ಕರಣಹಸಿಗೆ ಎಂಬ ಗ್ರಂಥವನ್ನೇ ರಚಿಸಿರುವರು. ಅದರಲ್ಲಿ ಇದಕ್ಕೂ ಹೆಚ್ಚು ವಿಸ್ತೃತವಿದೆ. ಬ್ರಹ್ಮಜ್ಞಾನಿಗಳು ಪ್ರಕೃತಿಯ ಸಪ್ತಧಾತುಗಳನ್ನು ನಿರಾಕರಿಸಿದರೆ ಶಿವ ಶರಣರು ಅವುಗಳನ್ನು ಸ್ಥೂಲಾಷ್ಟಾವರಣವಾಗಿ ಕಂಡುಕೊಂಡಿದ್ದಾರೆ. ರಸವೇ ಭಸ್ಮ, ರುಧಿರವೇ ರುದ್ರಾಕ್ಷಿ, ಮೇಧಸ್ಸೇ ತೀರ್ಥ, ಮಾಂಸವೇ ಶೇಷ, ಮಜ್ಜೆಯೇ ಗುರು, ಅಸ್ಥಿಯೇ ಲಿಂಗ ರೇತುವೇ ಮಂತ್ರ, ದೇಹವೇ ಜಂಗಮ ಎಂಬದಾಗಿ ಭಾವಿಸಿ ಭವಸಾಗರವನ್ನು ಸುಲಭವಾಗಿ ದಾಂಟಿ ನಿಟಿಲಾಕ್ಷನೊಳು ಬೆರೆದಿದ್ದಾರೆ.

---

# ಚಂದ ಏತರಲ್ಲಿ?

ದ್ವಿಪದಿ: ವಿಶ್ವಧರ್ಮನಿಸುವ ವೀರಶೈವವೇ ಚಂದ ।
ವಿಶ್ವಾಂತರ್ಯಾಮಿಯ ಪೂಜೆಯು ಚಂದ ॥೧॥

ವಿಶ್ವಧರ್ಮದ ತತ್ವ ತಿಳಿವುದು ಚಂದ ।
ವಿಶ್ವಪತಿಯು ಕ್ರಿಯಾಜ್ಞಾನವು ಚಂದ ॥೨॥

ವಿಶ್ವನಾಥನ ಕುರುಹು ಕರದೊಳಿಹುದು ಚಂದ ।
ವಿಶ್ವಂಭರನ ಧ್ಯಾನಬಿಡದಿಹುದು ಚಂದ ॥೩॥

ವಿಶ್ವರಾಧ್ಯ ಗುರುವಿನ ಬೋಧವು ಚಂದ ।
ವಿಶ್ವಾಸಯುತವಾದ ಗುರುಸೇವೆಯೇ ಚಂದ ॥೪॥

ವಿಶ್ವಮಹಾಭೂತಗಳ ತಿಳಿವುದು ಚಂದ ।
ವಿಶ್ವತೋ ಮುಖನ ನೋಟವು ಚಂದ ॥೫॥

ವಿಶ್ವವಾವರಿಸಿದ ಅಷ್ಟಮೂರ್ತಿಯು ಚಂದ ।
ವಿಶ್ವಾಷ್ಟಾವರಣ ತಿಳಿವುದು ಚಂದ ॥೬॥

ಕನ್ಯಾದಾನವು ಚಂದ ಕಲ್ಯಾಣಪುರ ಚಂದ ।
ಮಾನ್ಯ ಜಂಗಮಕರ್ಪಿತ ಚಂದ ॥೭॥

ಸತ್ಯ ಶಿವಶರಣರ ಭೃತ್ಯಾಚಾರವು ಚಂದ ।
ನಿತ್ಯ ಲಿಂಗಾರ್ಚನೆ ಮಾಳ್ಪುದು ಚಂದ ||೮||

ಮುತ್ತನ್ನು ಪೋಲ್ವ ಹೆತ್ತಾಯಿ ಮನೆಗೆ ಚಂದ ।
ಸತ್ತುಚಿತ್ತಾನಂದದ ಜಂಗಮ ಮೂರ್ತಿ ಚಂದ ||೯||

ಸ್ವಾನುಭಾವವು ಚಂದ ಧ್ಯಾನುಹ್ಯೆನವು ಚಂದ ।
ಭಾನುಕೋಟಿ ಪ್ರಕಾಶವು ಬಹು ಚಂದ ||೧೦||

ಮೂರು ದೀಕ್ಷೆಯನಿತ್ತ ಶ್ರೀಗುರು ಚಂದ ।
ಮೂರು ಮಲಗಳ ತೊಳೆವ ಮೂಲ ಮಂತ್ರವು ಚಂದ ||೧೧||

ಸಾಧಿಸಿ ನಡೆವ ಸತ್ಕ್ರಿಯೆಯು ಚಂದ ।
ಬೋಧರೂಪಿನ ವಚನಶಾಸ್ತ್ರವು ಚಂದ ||೧೨||

ಮೋದಗೊಳಿಸುವ ಸಮ್ಯಜ್ಞಾನವು ಚಂದ ।
ಬಾಧೆಗೊಳಿಪ ಕರಣ ವಿಜಯವೇ ಚಂದ ||೧೩||

ಮಮಕಾರವಿಲ್ಲದ ವಿರತಿಯೇ ಚಂದ ।
ವಿಮಲ ಮಾನಸದ ಶಿವಮೂರ್ತಿ ಚಂದ ||೧೪||

ಭಕ್ತಿಯುಕ್ತನಾಗಿ ಮುಕ್ತಿಪಡೆವುದು ಚಂದ ।
ಶಕ್ತಿವಿಶಿಷ್ಟಾದ್ವೈತ ಮತ ಬಹು ಚಂದ ||೧೫||

ನಿತ್ಯನೇಮ ನಿಷ್ಠೆಗಳ ಪಿಡಿದ ಮಹೇಶ ಚಂದ ।
ಭಕ್ತ ದೇಹಿಕ ದೇಹೀ ಗುರುಸ್ಥಲ ಚಂದ ||೧೬||

ಸುಜನ ಸಂಗದೊಳಿರ್ಪ ಮಾನವನೆ ಚಂದ ।
ನಿಜಶರಣರ ಸುಪ್ರಸಾದ ಸೇವನೆ ಚಂದ ||೧೭||

ತನುಮನ ಧನಗಳ ಬಿಟ್ಟ ಭಕ್ತನು ಚಂದ ।
ಅನುದಿನ ಗುರುಲಿಂಗ ಜಂಗಮ ಭಕ್ತಿ ಚಂದ ||೧೮||

ನಿಷ್ಕಾಮದ ಕ್ರಿಯಾಚಾರಗಳು ಚಂದ ।
ಶುಷ್ಕ ವಿಚಾರ ವಿಕಲ್ಪನೀತಿಗಳಿವುದು ಚಂದ ||೧೯||

ಸುಖದುಃಖದೊಳು ತನ್ನ ಸಮತಾ ಭಾವವು ಚಂದ ।
ನಿಖಿಲಾತ್ಮರುಗಳು ತನ್ನವರೆಂಬ ಭಾವ ಚಂದ ||೨೦||

ಆತ್ಮಾನಾತ್ಮ ಜ್ಞಾನವಿರ್ಪುದೇ ಚಂದ ।
ಸ್ವಾತ್ಮ ಜ್ಞಾನಿಯಾಗಿ ಬಾಳುವುದೇ ಚಂದ ||೨೧||

ನಿಜಾತ್ಮನೊಳು ಸಂದ ಸುಖಪೊಂದುವದು ಚಂದ ।
ನಿಜದೊಳು ಬೆರೆದು ಬೇರಾಗದಿಹುದು ಚಂದ ||೨೨||

ದ್ವಾದಶಾಚಾರಗಳ ನಡೆಸುವದು ಚಂದ ।
ವೇದಶಾಸ್ತ್ರಾನುಭವದ ಬೋಧವು ಚಂದ ||೨೩||

ಹಿಂದಿನ ಜನ್ಮದ ದೋಷ ನಾಶಕೆ ಸತ್ಕ್ರಿಯಕ ಚಂದ ।
ಸಂದಿಹ ಕಾಲಕಾಮರ ಕಾಟಕೆ ಸತ್ಕ್ರಿಯೆ ಚಂದ ||೨೪||

ತ್ರಿವಿದ ಮಾಯಾ ಸಂಹಾರಕೆ ಸಮ್ಯಜ್ಞಾನವು ಚಂದ ।
ಪಾವನ ಸ್ವರೂಪರಾಗಲು ಸದ್ಭಕ್ತಿಯು ಚಂದ ||೨೫||

ಅಂಗ ಶುದ್ಧಿಸಲು ಬದ್ಧ ಲಿಂಗಾಚಾರವು ಚಂದ ।
ತುಂಗ ಮನ ಶುದ್ಧಿಗೆ ಸದಾಚಾರವು ಚಂದ ||೨೬||

ನಡೆಪರುಷವಾಗಲು ಗಣಾಚಾರವು ಚಂದ ।
ನುಡಿಪರುಷವಾಗಲು ಭೃತ್ಯಾಚಾರವು ಚಂದ ||೨೭||

ಧನಪ್ರಸಿದ್ಧಿಗೆ ಶಿವಾಚಾರವು ಚಂದ ।
ಜ್ಞಾನೇಂದ್ರಿಯ ಶುದ್ಧಿಗೆ ಜ್ಞಾನಾಚಾರವು ಚಂದ ||೨೮||

ಕರ್ಮೇಂದ್ರಿಯ ಪವಿತ್ರತೆಗೆ ಕ್ರಿಯಾಚಾರವು ಚಂದ ।
ಧರ್ಮಾಚಾರದೆ ಲಿಂಗಾಂಗವೇಕವಾಗ್ವುದು ಚಂದ ||೨೯||

ಕರಣ ನಿಜ ಸ್ವರೂಪಕೆ ಭಾವಾಚಾರವು ಚಂದ ।
ಹರಿವ ವಾಯು ಪ್ರಸಾದವಾಗಲು ಸತ್ಯಾಚಾರವು ಚಂದ ||೩೦||

ಸರ್ವಾಂಗ ಜ್ಞಾನಜ್ಯೋತಿಗೆ ಸರ್ವಾಚಾರವು ಚಂದ ।
ಸರ್ವಾತ್ಮರಿಗೆ ದ್ವಾದಶಾಚಾರವು ಚಂದ ||೩೧||

ಹುಟ್ಟು ಹರಿಯಲಷ್ಟಾವರಣವೆ ಚಂದ ।
ಬಿಟ್ಟು ಬಿಡದೀ ಕ್ರಿಯಾಚಾರವು ಚಂದ ||೩೨||

ತನುತ್ರಯಕೆ ಗುರುತ್ರಮ ಸಂಬಂಧವು ಚಂದ ।
ಮನತ್ರಯಕೆ ಲಿಂಗತ್ರಯ ಸಂಬಂಧವು ಚಂದ ||೩೩||

ಭಾವತ್ರಯಕೆ ಜಂಗಮತ್ರಯ ಜೋಡಣೆ ಚಂದ ।
ಭಾವಿಸುತಾತ್ಮತ್ರಯಕೆ ಪಾದೋದಕ ತ್ರಯ ಚಂದ ॥೩೪॥

ಅವಸ್ಥಾತ್ರಯಕೆ ಪ್ರಸಾದತ್ರಯ ಚಂದ ।
ಕವಿದ ಕರಣತ್ರಯಕೆ ಭಸ್ಮತ್ರಯ ಚಂದ ॥೩೫॥

ಜೀವತ್ರಯಕೆ ರುದ್ರಾಕ್ಷಿತ್ರಯ ಜೋಡಣೆ ಚಂದ ।
ಅವಿತ ಗುಣತ್ರಯಕೆ ಮಂತ್ರತ್ರಯ ಚಂದ ॥೩೬॥

ಅಷ್ಟಾಂಗ ವಿಕೃತಿಗೆ ಅಷ್ಟಾವರಣವೇ ಚಂದ ।
ಅಷ್ಟಾಂಗ ಸುಕೃತಿಗೆ ಜೀವನ್ಮುಕ್ತಿಯು ಚಂದ ॥೩೭॥

ದೇಹಿಯೆಂದವಗೆ ದಾನವೀವುದು ಚಂದ ।
ಸೋಹಂ ಭಾವದಿಂ ದಾಸೋಹಂ ಭಾವವೇ ಚಂದ ॥೩೮॥

ದಾನದೆ ಪಾತ್ರಾಪಾತ್ರ ವಿಚಾರವು ಚಂದ ।
ದೀನರೊಳು ದಯಾ ತೋರ್ಪುದು ಬಲು ಚಂದ ॥೩೯॥

ಬಂದ ಬರವನು ನಿಂದ ನಿಲವನರಿವುದು ಚಂದ ।
ಇಂದುಧರನಾವರೂಪದೆ ಬಂದರೂ ಚಂದ ॥೪೦॥

ಹಸಿವೆಗೆಯನ್ನವು ಆಚಾರಕೆ ಸಮರಸ ಚಂದ ।
ವೇಷಕೆ ನಮನವುಯೆಂಬೀ ಬಸವನ ನುಡಿ ಚಂದ ॥೪೧॥

ಪೂರ್ವ ಪುರಾತನರ ನಡೆನುಡಿಗಳು ಚಂದ ।
ಪೂರ್ವಾಚಾರ ಕ್ರಿಯಾಜ್ಞಾನ ಬೋಧವು ಚಂದ ॥೪೨॥

ಮಾತಿನಂತೆ ನೀತಿ ಕ್ರಿಯಾಚಾರ ನಡೆ ಚಂದ ।
ಪೂತ ತನು ಮನ ಭಾವಂಗಳು ಬಹು ಚಂದ ॥೪೩॥

ಪಾವನಾತ್ಮಕರಣ ಜೀವ ಗುಣಂಗಳು ಚಂದ ।
ಸಾವ ಭೂತಾಂಗಕೆ ಮೆಚ್ಚದ ಶಿವಜ್ಞಾನವು ಚಂದ ॥೪೪॥

ಮಾನವ ಜನ್ಮದ ನಿಜಸಾರ್ಥಕತೆ ಚಂದ ।
ಅನುಮರಿತ ಲಿಂಗಾಂಗ ಕೂಟವೆ ಚಂದ ॥೪೫॥

ಜೀವ ಪರಮರ ನಿಜಸ್ಥಲವರಿವುದು ಚಂದ ।
ಜೀವ ಭಾವ ಬದಲಿಸಿದ ಶಿವಭಾವವು ಚಂದ ॥೪೬॥

ವಿಶ್ವಧರ್ಮದ ವಿಚಾರವಮಾಳ್ಪುದು ಚಂ
ವಿಶ್ವ ಜೀವನ ಭಾವ ಬದಲಿಕೆ ಚಂದ ||೪೭||

ಪಂಕೇಜ ಪತ್ರದಂತೆ ಬಾಳುವುದು ಚಂದ ।
ಸಂಕೇತ ಶಬ್ದಾರ್ಥವ ತಿಳಿವುದು ಚಂದ ||೪೮||

ಭಾವಜ್ಞರೆಲ್ಲರು ಭಾವಿಸಿ ನೋಳ್ಪುದು ಚಂದ ।
ಜೀವನ ಪಾವನ ಮಾಳ್ಪ ಲಿಂಗಾಂಗಿಯೋ ಚಂದ ||೪೯||

ವೇದಾಗಮಶಾಸ್ತ್ರಪೂರಿತ ವಿಶ್ವಧರ್ಮವೇ ಚಂದ ।
ಭೇದರಹಿತ ಬೋಧ ವೀರಶೈವವೆ ಚಂದ ||೫೦||

ವಿಶ್ವಧರ್ಮದ ನೆಲೆ ವಿಶ್ವಧರ್ಮದ ಕಲೆ ಚಂದ ।
ವಿಶ್ವಧರ್ಮದ ಸ್ಥಳ ವಿಶ್ವಧರ್ಮದ ಕುಳ ಚಂದ ||೫೧||

ಭಕ್ತಿಭಾವಿತ ಶಕ್ತಿ ಸಾಹಸಿತ ಧರ್ಮವೇ ಚಂದ
ಯುಕ್ತಿಯುಗದ ಮುಕ್ತಿದಾಯಕ ಧರ್ಮವೇ ಚಂದ ||೫೨||

ಸಾಧನ ಬೋಧನ ಸಂಸಾರ ಛೇದನ ಮತ ಚಂದ ।
ವಿಧಾನ ವಿಸ್ತೃತ ಪ್ರಚಲಿತ ವಿಶ್ವಧರ್ಮವೇ ಚಂದ ||೫೩||

—ಸಿ. ನಾ. ಮಹಾಂತಣ್ಣವರ,

## ಶ್ರೀ ನಾಗನೂರು ಶಿವಬಸವ ಸ್ವಾಮಿಗಳವರ
## —ಃ ಪ್ರಸಾದನಿಲಯ ಬೆಳಗಾವಿಃ—

ವೀರಶೈವರ ನಿಲಯವಿದು
ಸರ್ವ ಧರ್ಮಗಳ ಆಗರವು
ಕರತಲ ಭಿಕ್ಷದ ನಿಲಯವಿದು
ಮಾನವ ಅರಿವಿನ ದೇಹವಿದು
ಈಶಾವಾಸದಾಲಯವು
ಇರುಳು ದಾರಿಯ ದೀಪವಿದು................||೧||

ಚಂದಮುಂದರದಂದವಿದು
ಧರ್ಮಾಚಾರದ ಆಗರವು
ಗುರುನೀಡಿದ ಹರಿಕೆಯಿದೂ
ವಿದ್ಯಾದಾನದ ನಿಲಯವಿದು
ಶಿವಸಾನಿಧ್ಯ ಮಾರ್ಗವಿದು
ಜೀವನೊದ್ಧಾರ ಹಸಾದವಿದು................||೨||

ಈಶ್ವರ. ಈ. ಕಳಣ್ಣವರ.
( ಸಾ. ಭೂಷಣ. )
ಬೆಳಗಾವಿ

# ಭಕ್ತಿ.

( ಲೇಖಕಃ— ಶ್ರೀ ಮಂಟೇಶ್ವರ ಪಟ್ಟದ್ದೇವರು ಮು. ನಿಡಸೋಸಿ. )

ಮಾನವನಿಗೆ ಅತ್ಯಂತ ಸುಲಭವೂ ಶ್ರೇಷ್ಠವೂ ಯೋಗ್ಯವೂ ಇದ್ದುದು ಯಾವುದೆಂದರೆ ಭಕ್ತಿ.ಭಕ್ತಿಯನ್ನು ಮಾಡಲು ಹೊನ್ನು ಮನೆ ಬೇರೆ ಸಹಾಯ ಯಾವದೂ ಬೇಡ. ಧನಕನಕಾದಿಗಳಿಗೆ ಒಡೆಯನಾದ ಕುಬೇರನೇ ಮಿತ್ರನಾಗಿ ಸಹಾಯ ನೀಡುತ್ತಿರಲಿಕ್ಕಾಗಿ ಈ ಯಾವ ಸಲಕರಣೆಗಳೂ ಬೇಕಾಗಿರುವದಿಲ್ಲ. ಆದರೆ ಅವನಿಗೆ ಬೇಕಾಗಿರುವದೊಂದೇ ಒಂದು. ಅದು ಯಾವುದೆಂದರೆ ಮನಸ್ಸು ಅದರಲ್ಲಿಯೇ ಭಕ್ತಿ ಇದೆ.

ಜಗನ್ನಿಯಾಮಕನಾದ ಪರಮಾತ್ಮನಲ್ಲಿ ಪ್ರತಿಯೊಬ್ಬ ಮಾನವನು ವಿಶ್ವಾಸವನ್ನೂ ನಯವನ್ನೂ ಶ್ರದ್ಧೆಯನ್ನೂ ಇಟ್ಟಿರುವದೇ ಭಕ್ತಿಯೆಂದೆನಿಸುವದು. ಭಕ್ತಿ ಇಲ್ಲದೆ ನಾವು ಅವನನ್ನು ಎಷ್ಟು ಅರ್ಚಿಸಿದರೂ ಹೊಗಳಿದರೂ ಸುತ್ತಿಸಿದರೂ ಪಾಡಿದರೂ ನಾದವನ್ನು ನುಡಿಸಿದರೂ ಇದಕ್ಕೆ ಮೆಚ್ಚುವನೇ ? ಮೆಚ್ಚನು. ಆದರೆ ಭಕ್ತಿಗೇನೇ ಮಾತ್ರ ಒಲಿಯುವನು. ಅಂತೇ ಅಣ್ಣ ಜಗದಣ್ಣ ಬಸವಣ್ಣನವರು ಹಾಡಿರುವದು ಏನಂದರೆಃ—

" ನಾದ ಪ್ರಿಯನೆಂಬರು—ನಾದಪ್ರಿಯ ಶಿವನಲ್ಲವಯ್ಯಾ; ವೇದಪ್ರಿಯ ಶಿವನೆಂಬರು-ವೇದಪ್ರಿಯ ಶಿವನಲ್ಲವಯ್ಯಾ; ನಾದವ ಮಾಡಿದ ರಾವಣಂಗೆ ಅರೆಯಾಯುಷ್ಯವಾಯಿತ್ತು; ವೇದವನೋದಿದ ಬ್ರಹ್ಮಂಗೆ ಶಿರ ಹೋಯಿತ್ತು. ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ. ಭಕ್ತಿ ಪ್ರಿಯ ನಮ್ಮ ಕೂಡಲ ಸಂಗಮದೇವ. "

ನಂಬರು, ನೆಚ್ಚರು, ಬರಿದೆ ಕರೆವರು;<br>
ನಂಬಲರಿಯರೀ ಲೋಕದ ಮನುಜರು !<br>
ನಂಬಿ ಕರೆದೊಡೆ 'ಓ' ಎನ್ನನೆ ಶಿವನು<br>
' ನಂಬದೆ ನೆಚ್ಚದೆ ಬರಿದೆ ಕರೆವರ

ಕೊಂಬ ಮೆಟ್ಟಿ ಕೂಗೆಂದ ನಮ್ಮ ಕೂಡಲಸಂಗಮದೇವ.

ಶಿವನು ಸದ್‌ಭಕ್ತರಲ್ಲಿಯೂ, ಸಾಧುಗಳಲ್ಲಿಯೂ, ಶಿವಯೋಗಿಗಳಲ್ಲಿಯೂ, ಶಿವಶರಣರಲ್ಲಿಯೂ, ವಾಸವಾಗಿರುವನು. ಮದ್ಭಕ್ತಾ "ಯತ್ರ

ತಿಷ್ಠಂತಿ ತತ್ರ ತಿಷ್ಠಾಮಿ." ಎಂಬ ನುಡಿಯು ನಿಜವಾಗಿರುವದು. ಶಿವ ಭಕ್ತರೂ ಕೂಡ ಕರುಣಾಳುಮಯನಾದ ಶಿವನ ಆಶ್ರಯವನ್ನು ಹೊಂದು ತ್ತಾರಲ್ಲದೇ ಹೊರತು ಮನುಷ್ಯರನ್ನಲ್ಲ. ಭಕ್ತಿ ಪ್ರಭಾವದಿಂದಲೇ ಶಿವನ ನಿಲವು ಕೈಸೇರುವದು.

" ಭಕ್ತಿ ಶಿವಪ್ರಸಾದ ಜನನೀ ಭವನಂ ಶಿವನ ಪ್ರಸಾದ ವಾ ।
ಭಕ್ತಿಗೆ ಜನ್ಮ ಭೂಮಿ ವಿಮಲಾಂಕುರ ಬೀಜದವೋಲ್ ಪರಸ್ಪರಂ ॥
ವ್ಯಕ್ತ ಮಿದಿಂತು. ನೊಳ್ಪೊಡದು ತಾನೆ ನಿರಂತರ ಮುಪ್ಪ ಮುಕ್ತಿಯಾ !
ಮುಕ್ತಿಯೆ ಶುದ್ಧ ನಿಷ್ಕಳ ನಿಜೈಕ್ಯ ಪದಂ ಪರಮಂ ಶಿವಾಧವಾ ॥

ಇದಕ್ಕೆಲ್ಲಕ್ಕೂ ಕಾರಣೀ ಭೂತವಾದದ್ದು ಮನಸ್ಸು. ಆ ಮನಸ್ಸನ್ನು ಮಾತ್ರ ನಾವು ಪವಿತ್ರವಾಗಿಯೂ, ಶುದ್ಧವಾಗಿಯೂ, ಮಾಡಿಕೊಳ್ಳಬೇಕು. ಮನಸ್ಸು ಶುದ್ಧವಾದರೆ ಆತ್ಮ ಶುದ್ಧವಾಗುವದು. ಆತ್ಮ ಶುದ್ಧವಾದರೆ ಆತ್ಮ ಜ್ಞಾನ ದೊರಕುವದು. ಆತ್ಮಜ್ಞಾನ ದೊರಕಿದರೆ ಆತ್ಮಸಾಕ್ಷಾತ್ಕಾರ ಲಭಿ ಸುವದು. ಇದರಲ್ಲಿ ಏನೂ ಸಂದೇಹವಿಲ್ಲ. ಪ್ರತಿಯೊಬ್ಬ ಮಾನವನು ಪವಿತ್ರವಾದ ಏಕ ಮನಸ್ಸಿನಿಂದ ( ಏಕಾಗ್ರ ಚಿತ್ತದಿಂದ ) ಧರೆಗೆ ವಲ್ಲಭ ನಾದ ( ಕುತ್ರ್ಯವಾದ ) ಶಿವನನಾಮ ಸ್ಮರಣೆಯನ್ನು ಮನಸ್ಸಿನಿಂದ ಮಾಡಿ ದರೆ ದಯಾಘನನಾದ, ಶಿವಾಧವನು ಸಂತುಷ್ಟನಾಗಿ ಕೈಪಿಡಿದೋರುವ ನು ಇದು ಅಚ್ಚರಿಯಲ್ಲ.

"ಕೋಪಿ ಮಜ್ಜನಕ್ಕೆರೆದರೆ ರಕ್ತಧಾರೆ!
ಪಾಪಿ ಹೂವನೇರಿಸಲು ಮಸದ ಆಯುಧದ ಗಾಯ!
ಕೂಡಲ ಸಂಗಮದೇವ.

ಭಕ್ತಿಯಲ್ಲಿ ಎರಡು ಬಗೆಯುಂಟು. ಸಕಾಮ ಭಕ್ತಿ ಎಂತಲೂ, ನಿಷ್ಕಾ ಮಭಕ್ತಿ ಎಂತಲೂ ಭೇದಗಳುಂಟು. ಭಕ್ತನು ತನ್ನ ಹಿತಕ್ಕಾಗಿ ಯಾವು ದೊಂದು ಫಲಾಪೇಕ್ಷೆಯನ್ನಿಟ್ಟು ಅರ್ಚಿಸುವದು ಸಕಾಮ ಭಕ್ತಿ ಎಂದೆನಿಸು ವದು. ಯಾವದೊಂದೂ ಫಲವನ್ನು ಯಾಚಿಸದೆ ಪೂಜಿಸುವದು ನಿಷ್ಕಾಮ ಭಕ್ತಿ ಎಂದೆನಿಸುವದು. ಅಂತೆಯೇ ಬಸವಣ್ಣ ಮೊದಲಾದ ಶಿವಶರಣರು ಫಲಾಪೇಕ್ಷೆಯನ್ನಿಡದೆ ತಮಗೆ ಬಂದೊದಗಿದ ಸುಖ, ದುಃಖ, ಆಪತ್ತುಗಳನ್ನು ಲೆಕ್ಕಿಸದೆ, ಹಿಗ್ಗದೆ, ಕುಗ್ಗದೆ, "ಕೊಡುವಾತ ಸಂಗ, ಕೊಂಬಾತ ಸಂಗ, ಮಾಡು ವಾತ ಬಸವ, ಎಂಬಂತೆ ಆ ಎಲ್ಲ ಸುಖ ದುಃಖಗಳೂ ಆ ಪರಶಿವನವೇ ಎಂದು ಶಿವನಿಗರ್ಪಿಸುವರು.

ಎನ್ನ ವಾಮ ಕ್ಷೇಮ ನಿಮ್ಮದಯ್ಯಾ. ಎನ್ನ ಹಾನಿ ವೃದ್ಧಿ ನಿಮ್ಮದಯ್ಯಾ ಎನ್ನ ಮಾನಾಪಮಾನ ನಿಮ್ಮದಯ್ಯಾ. ಬಳ್ಳಿಗೆ ಕಾಯಿ ದಿಮ್ಮಿತ್ತೆ ಕೂಡಲ ಸಂಗಮದೇವಾ ?

ಎಂದು ತಮ್ಮ ಎಲ್ಲ ಸುಖ ದುಃಖಗಳು ಆ ಪರಶಿವನವೇ ಎಂದು ಶಿವನಿಗರ್ಪಿಸಿ ಸಹಜಾಚಾರಗಳಿಂದಲೂ ಅತ್ಯಂತ ಪರಿಶುದ್ಧವಾದ ವಿಚಾರಗಳಿಂದಲೂ ವರ್ತಿಸುತ್ತ ಅನಾಯಾಸವಾಗಿ ಮೋಕ್ಷವನ್ನು ಹೊಂದುವರು.

ಕ್ಷಮಿಸದೆ ಸರ್ವಕಾಮಿತ ಸಮೃದ್ಧಿಸಮನ್ವಿತ ತತ್ತ್ವದೈಹಿಕಾ।
ಶ್ರಯಘನ ಸೌಖ್ಯಮಂ ಬಿಡದೆ ಭೋಗಿಸಿ ತತ್ವನಿಜ ಸ್ವರೂಪಿ ನಿ॥
ಶ್ಚಯಪದಮಂ ಶರೀರ ದವಸಾನದೊಳೊಂದಿ ಮಹಾಮಹೇಶ್ವರ
ರ್ಬಯಸದೆ ಭೋಗ ಮೋಕ್ಷಸಂಪರಪ್ಪುದು ಚಿತ್ರವಲಾ ಶಿವಾಧವಾ॥

ಶ್ರೀ ಶಿದ್ಧರಾಮೇಶನ ಸೊನ್ನಲಾಪುರದಲ್ಲಿ ಶರಣ ಶಿರೋಮಣಿಗಳಾದ ನಾಲ್ವತ್ತ್ರವಾಡ ಶರಣರು ಆಗಿಹೋದರಷ್ಟೆ. ಅವರು ಆಚರಿಸಿದ ನಿಷ್ಕಾಮ ಭಕ್ತಿಯು ಸರ್ವಶ್ರೇಷ್ಠವಾದದ್ದೆಂದು ಹೇಳಬಹುದು. ಅದು ಹೀಗೆ ಇರುವದು:—

ನಾಲ್ವತ್ತ್ರವಾಡ ಶರಣರಿಗೆ ಒಬ್ಬಮಗನು ಇದ್ದನು ಆ ಮಗುವಿನನ್ನು ಶರಣರ ಅಣ್ಣತಮ್ಮಂದಿರು ಪ್ರೇಮದಿಂದ ಸಲಹುತ್ತಿದ್ದರಂತೆ. ಒಮ್ಮೆ ಸೊನ್ನಲಾಪುರದಲ್ಲಿ ಮಾರಿಕಾಬೇನೆಯು ಆರಂಭವಾಯಿತು. ಶರಣರ ಮಗುವಿಗೂ ಅಂಟಿಕೊಳ್ಳದೆ ಇರಲಿಲ್ಲ. ಆಯುಷ್ಯತೀರಿದ್ದರಿಂದಲೋ, ಶಿವನ ಕರೆಗೆ ಓಗೊಟ್ಟನೋ ಏನೋ ಅನ್ನುವಂತೆ ಶರಣರ ಮಗನು ಶಿವಲೋಕವನ್ನೈದಿದನು. ಮಗನ ಮೇಲೆ ಶರಣರ ಪ್ರೇಮ ಇಲ್ಲದಿರಲಿಲ್ಲ. ಆದರೂ ವಾಮ ಕ್ಷೇಮ ಎಲ್ಲವೂ ನಿನ್ನದಯ್ಯ, ಎನ್ನುವವರಾಗಿದ್ದರು. ಆಗ ಅವರಾಡಿದ ನುಡಿಗಳನ್ನು ನಾವು ಅಡಿಗಡಿಗೆ ನೆನಿಸಿಕೊಳ್ಳಬಹುದು.

"ಕೊಟ್ಟವನೂ ಅವನೇ ತೆಗೆದುಕೊಂಬಾತನೂ ಅವನೇ. ಎಲ್ಲವೂ ಶಿವನ ಸೊತ್ತು. ಅದಕ್ಕೆ ನಾವೇನೂ ದು:ಖಪಡುವ ಕಾರಣವಿಲ್ಲ"

ಕೇಳಿದಿರಾ! ಶರಣರ ನುಡಿಗಳನ್ನು? ಇದಕನ್ನಬೇಕು ಶರಣರ ನಿಷ್ಕಾಮ ಭಕ್ತಿಯೆಂದು.

ಸೊಲ್ಲಾಪುರದ ಅಪ್ಪಾಸಾಹೇಬರೆಂದು ಹೆಸರಿನಿಂದ ಖ್ಯಾತಿವೆತ್ತ ವಾರದ ಮಲ್ಲಪ್ಪನವರು ಫಲಾಪೇಕ್ಷೆಗಾಗಿ ಒಮ್ಮೆ ಪುತ್ರಕಾಮೇಷ್ಟಿ ಯಜ್ಞ ಮಾಡಿ

ದರು. ಆ ಊರಲ್ಲಿಯೇ ವಾಸವಾಗಿರುತಿದ್ದ ನಾಲ್ವತ್ತವಾಡ ಶರಣರಿಗೆ ಈ ಸುದ್ದಿ ಮುಟ್ಟದಿರಲಿಲ್ಲ. ಶರಣರು ಭಿಕ್ಷಾಟಣ ಮಾಡುತ್ತ ಮಾಡುತ್ತ ವಾರ ದರವರ ಯಜ್ಞ ಮಂಟಪಕ್ಕೆ ಬಂದದ್ದಾಯಿತು. ಅಲ್ಲಿ ಒಳ್ಳೆ ಸಂಭ್ರಮ ದಿಂದ ಯಜ್ಞ ಕಾರ್ಯ ನಡೆದಿತ್ತು. ಶರಣರು ಹಠಾತ್ತಾಗಿ ಯಜ್ಞಕುಂಡದ ಎದುರಿಗೇ ಬಂದು ನಿಂತರು. "ಕರ್ಮಕಾಂಡವು ನಮ್ಮ ವೀರಶೈವರಿಗೆ ಸಮ್ಮತ ವಲ್ಲವೆಂದೂ ಶರಣರ ಮಾರ್ಗವೇ ಬೇರೆಯಾಗಿರುವದೆಂದೂ" ಹೇಳುವ ನಾಲ್ವ ತ್ತವಾಡ ಶರಣರು ವಾರದ ದಂಪತಿಗಳನ್ನು ಉದ್ದೇಶಿಸಿ— "ನಿಮ್ಮಂಥವರು ಇಂಥ ಕಾರ್ಯವನ್ನು ಮಾಡುವದು ಉಚಿತವಲ್ಲ, ಹಾಗೂ ಯೋಗ್ಯವೂ ಅಲ್ಲ, ಎಂದು ಉಪದೇಶ ಮಾಡಿದರು. ಅವರು ಮಾಡಿದರೂ ಅವರ ಮಾತಿಗೆ ಯಾರೂ ಕಿವಿಗೊಡಲಿಲ್ಲ. ಆಗ ಶರಣರು ಯಜ್ಞಕ್ಕೆ ತಾವೇ ಆಹುತಿಯಾ ಗಬೇಕೆಂದು ಬಯಸಿದರೋ ಏನೋ ಎನ್ನುವಂತೆ ಒಮ್ಮೆಲೇ ಯಜ್ಞ ಕುಂಡ ದಲ್ಲಿ ಧುಮುಕಿದರು. ಅಕಸ್ಮಾತ್ತಾಗಿ ಒದಗಿದ ಈ ಘಟನೆ. ಜೀವದ ಪರಿವೆ ಇಲ್ಲದೆ ಶರಣರನ್ನು ಹೊರದೆಗೆದರು. ಆದರೆ ಅದು ಎಲ್ಲರಿಗೂ ಪರಮಾಶ್ಚರ್ಯ ವನ್ನುಂಟು ಮಾಡಿತು.

ಶರಣರ ಮೈಗೆ ಸ್ವಲ್ಪವೂ ಬೆಂಕಿಯ ಪರಿಣಾಮವಾಗಿದ್ದಿಲ್ಲ. ವಾರದ ದಂಪತಿಗಳು ಶರಣಲೀಲೆ ಕಂಡು ಪಶ್ಚಾತ್ತಾಪಗೊಂಡು ಶರಣರಿಗೆ ಶರಣು ಬಂದರು. ದಯಾಂತಃ ಕರುಣಿಗಳಾದ ಶರಣರು ಅವರಿಗೆ ಪ್ರಸಾದ ಆಶೀ ರ್ವಾದಗಳನ್ನಿತ್ತು ಹೊರಟು ಹೋದರು.

ವಾರದರವರಿಗೆ ಯಜ್ಞ ಕರ್ಮಕಾಂಡದಿಂದ ಫಲಪ್ರಾಪ್ತಿಯಾಗದೆ ಶರ ಣರ ಆಶೀರ್ವಾದ ಬಲದಿಂದ ಮುಂದೆ ಪುತ್ರ ಪ್ರಾಪ್ತಿ ಲಭಿಸಿತು.

ನಿಷ್ಕಾಮ ಭಕ್ತಿಯೇ ಈಗಿನ ಕಾಲದ ಮೋಕ್ಷದ ಸುಲಭ ಸೋಪಾನವೆಂದು ಶರಣರೂ ಮಹಾತ್ಮರೂ ನುಡಿದು ನಡೆದು ತೋರಿಸಿ ದ್ದಾರೆ.

# ಬಡತನ

ಸಂಗ್ರಾಹಕರು:— ಶ್ರೀ ಆನಂದಕವಿಗಳು.— ಕುರುಗುಂದ

---

ಬಡತನವೆಂಬುದು ಭಾಗ್ಯದ ಬಂಡಿ। ನನಗೆ ಇರುವದು ಚಿನ್ನದ ಗಿಂಡಿ
ಆದರ ನೋಡ ಮುತ್ತಿನ ದಂಡಿ। ದಂಡಿಹೋದಮೇಲೆ ಆದಾಳ

ರಂಡಿಮುಂಡಿ। ಬಾ ಎನ್ನ ಬಡತನ ಭಾಗ್ಯದ ಬಂಡಿ
ಸಾವಕಾರ ಮನ್ಯಾಗ ಗಾದಿ ಜಮಖಾನಾ

ಬಡವರ ಮನ್ಯಾಗ। ಕೌದ್ಯೋ ಗೆಳೆಯಾ।
ಕೌದಿ ಸುಮಾರ ಮಾಡಬೇಡಾ.।
ಕೌದಿ ಸುಮಾರ ಅನ್ನಬೇಡ ಗೆಳೆಯಾ
ಕೌದಿ ಗೆಳೆತನ ಬಲುದಿನ
ಬಾ! ಎನ್ನ ಬಡತನದ ಭಾಗ್ಯದ ಬಂಡಿ.

---

# ದೇವರಾಗ!

ದೇವ ನಿನ್ನ ನೆನಹಿನಿಂದ
ಮನದಮಾಯೆ ಕಳೆಯಲಿ
ದೇವನಿನ್ನ ಬೆಳಕಿನಿಂದ
ಮನವುತೊಳೆದು ಹೊಳೆಯಲಿ ॥

ಸುಳು-ಮೋಸ ಕಪಟವೆಲ್ಲ
ಹಳೆವಾಗಿ ಕೊಳೆಯಲಿ
ಸತ್ಯ-ಧರ್ಮ ಶಾಂತಿಯೆಲ್ಲ
ಮನದೊಳುದಿಸಿ ನಲಿಯಲಿ ॥

ಶೀವಿನಿಂದ ಜೇನಿನಲ್ಲಿ
ಮನವು ಮುಳುಗಿ ತೇಳಲಿ
ನಾಳ ನಾಳ ದಾಳದಲ್ಲಿ
ನೆನಹು ತುಳಿದು ತುಂಬಲಿ ||

ಅಂತರಂಗ ದಾಳದಲ್ಲಿ
ತುಂಬಿತುಳುಕಿ ವರಗಳು
ಹರಿಯುತಿರಲಿ ಮೆರೆಯುತರಲಿ
ಜ್ಞಾನದಮುರ ವರಗಳು ||

ಸಾಯುವನಕ ಬಾಳಿನಲ್ಲಿ
ಧ್ಯಾನರಸವು ಸುರಿಯಲಿ
ನ್ಯಾಯಉದಿಸಿ ಮನಸಿನಲ್ಲಿ
ಮೌನರಾಜ್ಯ ಮೆರೆಯಲಿ ||

ಕನಸಿನಲ್ಲಿ ಮಾಡುತಿರಲಿ
ಭಾವದ್ವೈವ ಯೋಗವು
ನೆನಹಿನಲ್ಲಿ ಹರಿಯುತಿರಲಿ
ದೇವ, ನಿನ್ನ ರಾಗವು ||

ಹಿಂಗಮಿರೆ ಬಿ. ಬಿ.
ವಿದ್ಯಾರ್ಥಿ ಪ್ರಸಾದ ನಿಲಯ,
ಬೆಳಗಾಂವಿ

# ಸ್ಫುಟ ವಿಷಯಗಳು.

**ಶಿಕ್ಷಣ:—** ಕೆಳಗೆ ಕಾಣಿಸಿದ ವಿಷಯಗಳನ್ನು ಈ ಪತ್ರಿಕೆಯ ಸಂಪಾದಕರು ಶ್ರೀ ನಿರಂಜನ ಬಂಥನಾಳ ಶಿವಯೋಗಿಗಳ ಕಡೆಗೆ ವಿಚಾರಕ್ಕೋಸ್ಕರ ಕಳಿಸಿಕೊಟ್ಟಿದ್ದರು. ಅವುಗಳಲ್ಲಿ ನಿರ್ದೇಶಪಡಿಸಿದಂತೆ ಶ್ರೀಸ್ವಾಮಿಗಳವರು ಅವುಗಳನ್ನು ತಜ್ಞರಾದ ಆಯಾ ಮಂಡಳಿಗಳ ಕಡೆಗೆ ಕಳಿಸಿಕೊಡುವ ಪೂರ್ವದಲ್ಲಿ ಅವುಗಳನ್ನು ಬೇಗನೆ ಕೂಡಲಿರುವ ಮಹಾಸಭೆಯ ಸ್ಟ್ಯಾಂಡಿಂಗ ಕಮಿಟಿಗೆ ವಿಚಾರ ಮಾಡಲು ಕಳಿಸಿದರು. ಆ ಕಾಲಕ್ಕೆ ಈ ಸಂಪಾದಕರನ್ನೂ ಅವರು ಬರಮಾಡಿಕೊಂಡಿದ್ದರು ಆ ಕಾಲದಲ್ಲಿ ಅದರಲ್ಲಿಯ ವಿಷಯಗಳನ್ನು ಬಂದ ಸಭಾಸದರಲ್ಲಿ ತಿಳಿಸಿ ಹೇಳಲಾಗಿ ಅವು ಅವಶ್ಯವೆಂದು ಅಭಿಪ್ರಾಯಪಟ್ಟು ಅವುಗಳನ್ನು ನಮ್ಮ ಪತ್ರದಲ್ಲಿ ನಿರ್ದೇಶ ಮಾಡಿದ ಮಹಾನುಭಾವರಿಗೆ ಕಳಿಸಿ ಅವರ ಅಭಿಪ್ರಾಯವನ್ನು ಪಡೆಯಬೇಕೆಂದು ನನಗೆಯೇ ಅಧಿಕಾರಕೊಟ್ಟರು. ಅವುಗಳಲ್ಲಿ ಮೊದಲಿನ ವಿಷಯವನ್ನು ಕಾಲೇಜಗಳಲ್ಲಿಯ ಪ್ರಿನ್ಸಿಪಾಲರಿಗೂ ವ್ಹಾಯಿಸ ಚಾನ್ಸಲರರಿಗೂ ಕಳಿಸಿಕೊಡಬೇಕೆಂದು ಯೋಚಿಸಿದ್ದೇನೆ. ನಾನು ಕಳಿಸಿಕೊಡಬೇಕೆಂಬ ಮೊದಲಿನ ವಿಷಯವು ಕೇವಲ ಶಿಕ್ಷಣಕ್ಕೆ ಸಂಬಂಧಿಸಿದ್ದು ಇದ್ದು ಅದನ್ನು ಕೆಳಗೆ ಕೊಟ್ಟಿದ್ದೇನೆ.

**ಕಾಲೇಜಗಳು:—** " ಧಾರವಾಡ, ಬಾಗಲಕೋಟ, ಬೆಳಗಾಂವ, ಹುಬ್ಬಳ್ಳಿ, ಬಳ್ಳಾರಿ, ಸೊಲ್ಲಾಪುರ, ಈ ಪಟ್ಟಣಗಳಲ್ಲಿ ಕಾಲೇಜುಗಳು ಆಗಿವೆ. ಬೇರೆ ಸ್ಥಳಗಳಲ್ಲಿಯೂ ಅವು ಆಗುವದರಲ್ಲಿವೆ. ಇವುಗಳ ಸಲುವಾಗಿ ಸುಮಾರು ಒಂದು ಕೋಟಿ ರೂಪಾಯಿಗಳನ್ನು ವೀರಶೈವ ಸಮಾಜವು ಕೂಡಿಸಿರುತ್ತದೆ. ಅವುಗಳಲ್ಲಿ ವೀರಶೈವರಿಗಿಂತ ವೀರಶೈವೇತರರೇ ಹೆಚ್ಚಾಗಿ ಕಲಿಯುತ್ತಲಿದ್ದಾರೆ. ಈ ವಿಷಯವು ಒತ್ತಟ್ಟಿಗಿರಲಿ, ಅವುಗಳಿಂದ ವೀರಶೈವ ಸಮಾಜಕ್ಕೆ ಪ್ರಯೋಜನ ಆಗಿದೆಯೋ ಹೇಗೆ ಎಂಬುದನ್ನು ವಿಚಾರಮಾಡಿದಲ್ಲಿ ಅವು ಕೇವಲ ವಾಙ್ಮಯಾತ್ಮಕ ಸಂಸ್ಥೆಗಳಿರುವದರಿಂದ ಉದ್ಯೋಗ ಪ್ರಧಾನವಾಗಿರುವ ವೀರಶೈವ ಸಮಾಜಕ್ಕೆ ಅವುಗಳಿಂದ ಉಪಯೋಗವಾಗಿರುವದಿಲ್ಲ. ಬ್ರಾಹ್ಮಣರು ಸರಕಾರೀ ನೌಕರಿಗಳಲ್ಲಿ ಪ್ರಧಾನರಾಗಿದ್ದಾರೆ. ಆದ್ದರಿಂದ ಅವುಗಳಿಂದ ಬ್ರಾಹ್ಮಣ ಸಮಾಜಕ್ಕೆ ಮಾತ್ರ ಹಿತವಾಗಿರುತ್ತದೆ. ಬ್ರಾಹ್ಮಣ ಸಮಾಜದಲ್ಲಿ ಈ ಕಾಲೇಜಗಳಿಗೆ ಏನೂ ಹಣ ಬಂದಿರುವದಿಲ್ಲ.

ಆದ್ದರಿಂದ ಕಾಲೇಜಗಳ ಧೋರಣವನ್ನು ಬದಲಾಯಿಸುವದು ಅವಶ್ಯವೆಂದು ನನಗೆ ತೋರುತ್ತದೆ.

ಮುಂಬಯಿ, ಅಹಮ್ಮದಾಬಾದ, ಸುರತ ಇಲ್ಲಿ ಉಪಯುಕ್ತ ಔದ್ಯೋಗಿಕ ಉಚ್ಚವುಟ್ಟದ ಕಾಲೇಜಗಳಾಗಿವೆ. ಅವುಗಳ ಮಾದರಿಯಮೇಲೆ ನಮ್ಮ ಕಾಲೇಜುಗಳನ್ನು ಮುಂದುವರಿಸುವದು ಅವಶ್ಯವಿದೆ. ಹುಬ್ಬಳ್ಳಿಯಲ್ಲಿ ಈ ಮಾದರಿಯ ಒಂದು ಕಾಲೇಜವಿದೆ. ಅದೇ ಪ್ರಕಾರ ಎಂಜಿನಿಯರಿಂಗ, ಟೆಕ್ಸ್‌ಟಾಯಿಲ್, ಮೆಕ್ಯಾನಿಕಲ್, ಇಲೆಕ್ಟ್ರಿಕ್, ಡಾಯಿಂಗ ಕಲಿಸುವ ಸಂಸ್ಥೆಗಳಾಗಬೇಕು. ಈ ಖಾತೆಗಳಿಗೋಸ್ಕರ ಸಾವಿರಾರು ಜನರು ಬೇಕೆಂದು ಸರಕಾರದವರು ಪ್ರಕಟಿಸಿದ್ದಾರೆ. ಅಂಥವರು ಸಿಗುವದಿಲ್ಲೆಂದು ಅವರು ಹೇಳುತ್ತ ಬಂದಿದ್ದಾರೆ. ಇದನ್ನು ನಮ್ಮ ಕಾಲೇಜದ ಆಡಳಿತ ಮಂಡಳಿಯವರು ದುರ್ಲಕ್ಷಿಸಿದ್ದಾರೆ. ಕಾಲೇಜದಲ್ಲಿಯ ಪ್ರೊಫೆಸರರು ತಮ್ಮ ಸ್ಥಾನಕ್ಕೆ ಚ್ಯುತಿಯು ಬಂದೀತೆಂದು ಅಂಜಿ ಅವರು ಇಂಥ ಹೊಸ ಸೂಚನೆಗಳನ್ನು ಮುಂದು ಮಾಡುವದಿಲ್ಲ. ಗವ್ಹರ್ನಿಂಗ ಬಾಡಿಯಲ್ಲಿ ಉಚ್ಚಶಿಕ್ಷಣ ಹೊಂದದೆ ಇದ್ದವರೇ ಹೆಚ್ಚಾಗಿ ಇರುವದರಿಂದ ಅವರಿಗೆ ಈ ಹೊಸಹಾದಿ ತೋಚುವದಿಲ್ಲ.

ಈ ವಿಷಯವನ್ನು ವಿಚಾರಮಾಡಲಿಕ್ಕೆ ಎಲ್ಲ ವೀರಶೈವ ಕಾಲೇಜಗಳ ವೀರಶೈವ ಪ್ರಿನ್ಸಿಪಾಲರು ಮತ್ತು ಸುಶಿಕ್ಷಿತ ಗವ್ಹರ್ನಿಂಗ ಬಾಡಿಯ ವೀರಶೈವರು ಇವರ ಒಂದು ಚಿಕ್ಕ ಸಭೆಯನ್ನು ತಾವು ಕರೆಯಬೇಕು. ನಾನೂ ಈ ವಿಷಯವಾಗಿ ಸಾರ್ವಜನಿಕ ಪ್ರಕಟನೆಯನ್ನು ಪತ್ರಿಕೆಗಳಲ್ಲಿ ಪ್ರಕಟಿಸುವೆನು. ಬ್ರಾಹ್ಮಣರಿಗೆ ಈ ವಿಷಯವು ಚನ್ನಾಗಿ ಮತ್ತು ತೀವ್ರವಾಗಿ ತಿಳಿಯುತ್ತಿದೆ. ಆದ್ದರಿಂದ ನಮ್ಮ ಜವಾಬ್ದಾರೀ ಜನರ ಸಭೆಯನ್ನು ಮೊದಲಿಗೆ ಕರೆದು ವಿಚಾರ ವಿನಿಮಯ ಮಾಡುವದು ಒಳಿತು. ”

ನಾನು ಈ ವಿಷಯದ ಬಗ್ಗೆ ಒಂದು ಸೂಚನಾಪತ್ರಿಕೆಯನ್ನು ಸಿದ್ಧಗೊಳಿಸಿ ಅದನ್ನು ಆಯಾ ಕಾಲೇಜ ಪ್ರಿನ್ಸಿಪಾಲರಿಗೂ ಆಡಳಿತೆಯ ಮಂಡಳಿಗಳ ಮುಖ್ಯಾಧಿಕಾರಿಗಳೂ ವಿಶ್ವವಿದ್ಯಾಲಯದ ವ್ಹಾಯಿಸ ಚಾನ್ಸಲರರಿಗೂ ಕಳಿಸಬೇಕೆಂದು ಇಚ್ಛಿಸಿದ್ದೇನೆ. ವ್ಹಾಯಿಸ ಚಾನ್ಸಲರರು ಈ ಸೂಚನೆಯನ್ನು ತಮ್ಮ ಅಕೆಡಿಮಿಕ್ಕ ಕೌನ್ಸಿಲು, ಅಭ್ಯಾಸ ಮಂಡಳ ಮತ್ತು ಸಿನೇಟಮಂಡಳಿಗೂ ಕಳಿಸಬಹುದು. ಆದರೆ ಈ ವಿಷಯವು ಈ ಮಂಡಳಗಳು ಬೇರೊಂದು ತರಹದ್ದೆಂದು ಅದನ್ನು ಕಡೆಗಣಿಸಬಹುದು. ಇದು ತಮ್ಮ ಕಾರ್ಯಕ್ಷೇತ್ರದಲ್ಲಿ

ಬೀಳುವದಿಲ್ಲೆಂತಲೂ ಎನ್ನಬಹುದು. ಮುಂಬಯಿಯಲ್ಲಿಯೆ ವ್ಹಿ. ಜೆ. ಟೆಕ್ನಿಕಲ್ ಇನ್‌ಸ್ಟ್ಯೂಟಿನ ಡಾಯರೆಕ್ಟರ ಮಂಡಳಿ ಇದ್ದು ಅವರು ತಮ್ಮ ಸಂಸ್ಥೆಯನ್ನು ಮುಂಬಯಿ ವಿಶ್ವವಿದ್ಯಾಲಯದವರು ಮನ್ನಿಸಬೇಕೆಂದು ಅನೇಕಬಾರಿ ಅವರಿಗೆ ವಿನಂತಿಸಿದರೂ ಅವರ ವಿನಂತಿಯನ್ನು ವಿದ್ಯಾಲಯದವರು ಮನ್ನಿಸದೆ ಈ ವಿಷಯವು ತಮ್ಮ ಕ್ಷೇತ್ರದಲ್ಲಿ ಬರುವದಿಲ್ಲೆಂದು ಅದನ್ನು ನಿರಾಕರಿಸಿದರು. ಆದರೆ ಈಗ ಈ ಸಂಸ್ಥೆಯು ವಿಶ್ವವಿದ್ಯಾಲಯದಲ್ಲಿ ಸೇರ್ಪಡೆ ಹೊಂದಿದೆ. ಈ ವಿಷಯವನ್ನು ಸರ್ ವಿಶ್ವೇಶ್ವರಯ್ಯ, ಸರ್ ರಾಮನ್ ಇಂಥ ಉಚ್ಚಮಟ್ಟದ ತಜ್ಞರ ಮುಂದೆಯೂ ಇಟ್ಟು ಅವರ ಸಲಹೆಯನ್ನು ಹೊಂದುವದು ಅವಶ್ಯವು. ಈ ಕಾರ್ಯದಲ್ಲಿ ಕೇವಲ ತಜ್ಞರು ಮತ್ತು ವಿಜ್ಞಾನಿಗಳು ಮಾತ್ರವಲ್ಲದೆ ವ್ಯವಹಾರಸ್ಥರೂ ಮುಂದಾಗಬೇಕು. ವ್ಯವಹಾಸ್ಥರು ಈ ಕಾರ್ಯಕ್ಕೆ ಮಹತ್ವಕೊಟ್ಟು ತಮ್ಮಲ್ಲಿ ಉಚ್ಚ ತರಹದ ಕಾರ್ಖಾನೆಲಯಗಳನ್ನು ಸ್ಥಾಪಿಸಲು ಯತ್ನಿಸಬೇಕು. ಇಲ್ಲದಿದ್ದರೆ ಕರ್ನಾಟಕ ತಜ್ಞರ ಉಪಯೋಗವನ್ನು ಹೊರಗಿನವರು ಮಾಡಿಕೊಳ್ಳುವರು. ಆದ್ದರಿಂದ ಕರ್ನಾಟಕ ಚೇಂಬರ ಅಫ ಕಾಮರ್ಸ ಸಭಾಸದರೂ ಈ ವಿಷಯದಲ್ಲಿ ಮನಸ್ಸು ಹಾಕಬೇಕು. ಹೀಗೆ ಮಾಡಿದಲ್ಲಿ ಕೆಳಗಿನ ತರಗತಿಯ ಔದ್ಯೋಗಿಕ ಶಾಲೆಗಳ ಸಂಖ್ಯೆಯಾದರೂ ಬೆಳೆಯುತ್ತ ಹೋಗುವದು. ಕರ್ನಾಟಕದಲ್ಲಿ ಉದ್ಯೋಗಾಭಿವೃದ್ಧಿಗೆ ಅವಶ್ಯವಿರುವ ಎಲ್ಲ ತರದ ಅನುಕೂಲತೆಗಳಿಪ. ಅವುಗಳ ಉಪಯೋಗವಾಗುವಂತೆ ಕರ್ನಾಟಕಸ್ಥರು ಮೇಲೆ ಹೇಳಿದಂತೆ ಸಾಮೂಹಿಕವಾಗಿ ಪ್ರಯತ್ನಮಾಡಬೇಕು. ಕಾಯಕವೇ ಕೈಲಾಸವೆಂದು ಶಿವಶರಣರು ಹೊಗಳಿರುವದೆಂದು ವೀರಶೈವರು ಆತ್ಮ ಶ್ಲಾಘನೆ ಮಾಡಿಕೊಳ್ಳುವದಕ್ಕಿಂತ ಅವರು ಸಕಾಲದಲ್ಲಿ ಕಾರ್ಯತತ್ಪರರಾಗುವದು ಅವಶ್ಯವು.

**ವಾಙ್ಮಯ:**— ಈ ಮಹತ್ವದ ವಿಷಯವಾಗಿ ಶ್ರೀ ಬಂಥನಾಳ ಸ್ವಾಮಿಯವರಿಗೆ ನಾನು ಮಾಡಿದ ಸೂಚನೆಯನ್ನು ಕೆಳಗೆ ವಿವರಿಸಿದ್ದೇನೆ.

**ವಾಙ್ಮಯಸಂಶೋಧನೆ:**— "ತಾವು ವಿರಕ್ತ, ಪಂಚಾಚಾರ್ಯ ಪಟ್ಟ ಚರಮೂರ್ತಿಗಳಲ್ಲಿ ಐಕ್ಯತೆ ಮಾಡಲು ಪ್ರಯತ್ನ ನಡಿಸಿರುವಿರೆಂದು ಕೇಳುತ್ತೇನೆ. ಇದು ಉಪಯುಕ್ತವೆಂದು ಹೇಳುವದು ಅವಶ್ಯವಿಲ್ಲ. ಆದರೆ ಉಚ್ಚತರದ ವಾಙ್ಮಯವನ್ನು ಪ್ರಸಾರಮಾಡುತ್ತ ಹೋದರೆ ಇಂಥ ಕ್ಷುಲ್ಲಕ ವಿಚಾರಗಳುಳ್ಳ ವರ್ಗಗಳು ತಾವೇ ಸರಿಯಾದ ಹಾದಿಯನ್ನು ಹಿಡಿಯುವವು. ಶಿವಶರಣ ವಾಙ್ಮಯವನ್ನು ಪ್ರಚಾರಮಾಡಿದ್ದರ ಪರಿಣಾಮವು ತಮಗೆ

ಗೊತ್ತೇ ಇದೆ. ಈ ವಾಙ್ಮಯ ಸಂಶೋಧನೆಗಾಗಿ ಇನ್ನೂ ಹೆಚ್ಚು ಗ್ರಂಥ ಗಳನ್ನು ಸಂಗ್ರಹಿಸುವದು ಅವಶ್ಯವಿದೆ. ತಾವು ಹೋದ ಗ್ರಾಮಗಳಲ್ಲೆಲ್ಲ ಯಾರಲ್ಲಿ ಪುರಾತನ ಗ್ರಂಥಗಳಿವೆ, ಎಂಬುದನ್ನು ಕೇಳಿ ಅವುಗಳ ಯಾದಿ ಯನ್ನು ಮಾಡಲಿಕ್ಕೆ ಒಬ್ಬರಿಗೆ ಹಚ್ಚಬೇಕು. ದೊರೆತ ಗ್ರಂಥಗಳನ್ನು ಕೆಲ ವೊಂದು ಸ್ಥಳದಲ್ಲಿ ಸಂಗ್ರಹಿಸಬೇಕು. ತಮ್ಮನ್ನು ಕಾಣಲು ಅಸಂಖ್ಯ ಜನರು ಬರುತ್ತಾರೆ. ಅವರಿಗೆ ನಿಮ್ಮ ಗ್ರಾಮಗಳಲ್ಲಿ ಯಾರಲ್ಲಿ ಗ್ರಂಥಗಳಿವೆ ಎಂಬುದನ್ನು ತಿಳಿದು ಅಂಥವರ ಹೆಸರುಗಳನ್ನು ಬರೆದಿಡುವ ಕ್ರಮವನ್ನು ಅನುಸರಿಸಬೇಕು. ಇದು ನಿಮಗೆ ಸಾಧ್ಯವಿದೆ.

ಗ್ರಂಥಗಳು ದೊರೆದ ಹಾಗೆ ಅವುಗಳನ್ನು ಓದಿ ವಿಷಯ ಸಂಗ್ರಹ ಮಾಡಲಿಕ್ಕೆ ಒಬ್ಬ ಪಂಡಿತರನ್ನು ನೇಮಿಸಬೇಕು. ಈ ಪ್ರಕಾರ ಕಾರ್ಯ ವನ್ನು ನಾನು ಮಾಡುತ್ತ ಬಂದಿದ್ದರ ಪರಿಣಾಮವಾಗಿ ನನ್ನಿಂದ ಕೆಲ ಮಟ್ಟಿಗೆ ಕಾರ್ಯಗಳಾಗಿವೆ. ಈ ಕಾರ್ಯವನ್ನು ಈಗ ವೀರಶೈವರಲ್ಲಿ ಯಾರೂ ಮಾಡುತ್ತಿರುವಂತೆ ನನಗೆ ತೋರುವದಿಲ್ಲ. ಈ ಕಾರ್ಯವು ಅಗತ್ಯವಾದದ್ದು.

ನಾನು ಈ ಪ್ರಕಾರ ಗ್ರಂಥಗಳನ್ನು ಮೊದಲು ಸಂಗ್ರಹಿಸಿ ಅವುಗಳಲ್ಲಿ ನನಗೆ ದೊರೆತಂಥ ವಿಷಯಗಳನ್ನು ವಿಷಯಾನುಸಾರ ಬರೆದು ಪ್ರಕಟಿಸಿದ್ದೇನೆ. ಅವೇ ಈಗ ಷಟ್ಯ ಪುಸ್ತಕಗಳಾಗಿವೆ. ಇದರಿಂದ ನನಗೆ ಮತ್ತು ನನ್ನ ಪ್ರೆಸ್ಸಿಗೆ ಬಹಳ ಹಾನಿಯಾಗಿದೆ. ೧೫—೧೬ ಸಾವಿರ ರೂಪಾಯಿಗಳ ಬೆಲೆಬಾಳುವ ಗ್ರಂಥಗಳು ಮಾರಾಟವಾಗದೆ ನನ್ನಲ್ಲಿ ಉಳಿದವೆ. ಅವುಗಳನ್ನು ಕೊಂಡು ಕೊಳ್ಳಲಿಕ್ಕೆ ಒಂದು ಸಾರ್ವಜನಿಕ ನಿಧಿಯನ್ನು ತಾವು ಕೂಡಿಸಬೇಕು. ಅವು ಆಯುತವಾಗಿ ಸಮಾಜಕ್ಕೋಸ್ಕರ ಶಿಲ್ಕು ಉಳಿದಿವೆ. ಅಥವಾ ಈ ಕಾರ್ಯವನ್ನು ಕೆಲವೊಂದು ಸಾರ್ವಜನಿಕ ಸಂಸ್ಥೆಯು ಕೈಕೊಳ್ಳಬೇಕು.

ಇಂಥ ಪುರಾತನ ಶಿವಶರಣರ ವಾಙ್ಮಯವನ್ನು ಆಳವಾಗಿ ಅಭ್ಯಾಸ ಮಾಡಿ ಗ್ರಂಥಗಳನ್ನೂ ಲೇಖಗಳನ್ನೂ ಬರೆಸುವದು ಮುಂದಿನ ಕಾರ್ಯವು ಇರುತ್ತದೆ. ನಾನು ಈಗಲೂ ೩೦ ವರ್ಷಗಳಿಂದ ಈ ಕಾರ್ಯ ಮಾಡುತ್ತ ಬಂದಿದ್ದು ತಮಗೆ ಪರಿಚಯವಿದೆ. ಆದರೆ ವೀರಶೈವರು ಇಂಥ ಗ್ರಂಥಗ ಳನ್ನು ಕೊಂಡುಕೊಳ್ಳುವದಿಲ್ಲ. ಇದು ವೀರಶೈವ ಸಮಾಜದ ಸ್ಥಿತಿಯಾಗಿದೆ.

ವೀರಶೈವರ ಷಟ್‌ಸ್ಥಲ ವಿಷಯಗಳ ಮರ್ಮವು ಪೂರ್ಣವಾಗಿ ಇನ್ನೂ ಗೊತ್ತಾಗಿರುವದಿಲ್ಲ. ಈಗ ಹೊರಪಟ್ಟ ಕೆಲವು ವಿಷಯಗಳನ್ನು ಬೆಳಸಿ

ಬೆಳಸಿ ಪುರಾಣಿಕರೂ ವ್ಯಾಖ್ಯಾನಕಾರರೂ ಹೇಳುತ್ತಲಿದ್ದಾರೆ. ಇಷ್ಟೇ ಅವರಿಗೆ ದೊಡ್ಡದಾಗಿ ಬಟ್ಟಿದೆ.

ಇತಿಹಾಸ ಸಂಶೋಧನವು ಏನೂ ನಡೆದಿಲ್ಲ. ನಾನು ಶಿವಶರಣ ಚರಿತ್ರೆಗಳನ್ನು ನಾಲ್ಕು ಭಾಗಗಳಾಗಿ ಪ್ರಸಿದ್ಧಿಸಿದ್ದೇನೆ. ಅವುಗಳಲ್ಲಿರುವ ಇತಿಹಾಸವನ್ನು ಕಂಡು ಹಿಡಿಯಬೇಕು. ಬಸವ, ಚನ್ನಬಸವ, ಅಲ್ಲಮಪ್ರಭು ಇವರ ನಿಜೇತಿಹಾಸಗಳ ಸಂಶೋಧನೆ ನಡೆದಿಲ್ಲ. ಬರೀ ದಂತಕಥೆಗಳನ್ನು ಹೇಳುತ್ತಾರೆ. ಇದರಿಂದ ಸುಶಿಕ್ಷಿತ ವರ್ಗಗಳ ಮೇಲೆ ಏನೂ ಪರಿಣಾಮವಾಗಲಾರದು.

ಇವೇ ಮೊದಲಾದ ವಿಷಯಗಳನ್ನು ಚರ್ಚಿಸಲು ಒಂದು ಚಿಕ್ಕ ಸಭೆಯನ್ನು ಕರೆಯಬೇಕು " ಹೀಗೆ ನನ್ನ ಪತ್ರವಿದೆ.

ಪತ್ರದಲ್ಲಿ ಗ್ರಂಥ ಸಂಶೋಧನ, ಗ್ರಂಥಗಳ ಸಂಶೋಧನವಾದ ಹಾಗೆ ಅವುಗಳನ್ನು ಸಂಗ್ರಹಿಸುವದು, ಸಂಗ್ರಹವಾದ ಹಾಗೆ ಅವುಗಳ ಮುದ್ರಣ, ವೀರಶೈವ ಧರ್ಮ ಮತ್ತು ಅದರ ಇತಿಹಾಸ ಇವುಗಳ ಸಂಶೋಧನೆ, ಇವುಗಳನ್ನು ನಾನು ಪತ್ರದಲ್ಲಿ ವಿವರಿಸಿದ್ದೇನೆ. ಈ ಕಾರ್ಯವನ್ನು ನಾನು ಮಾಡಿದ್ದರ ಸಂಕ್ಷಿಪ್ತ ವಿವರಣೆಯು ಇದರಲ್ಲಿದ್ದು ಇದಕ್ಕೆ ಕೆಲವು ಕೆಲಸಗಾರರನ್ನೂ ಕೆಲ ನಿಧಿಯನ್ನೂ ಶೇಖರಿಸುವ ಬಗ್ಗೆ ನಾನು ಸೂಚನೆಯನ್ನು ಮಾಡಿದ್ದಾಗಿದೆ. ಆದರೆ ಇದು ಖರ್ಚಿನ ಕಾರ್ಯವಾದ್ದರಿಂದ ನೆರೆದಿದ್ದ ಸಭಾಸದರು ಈ ಕಾರ್ಯವನ್ನು ಮುಂದುವರಿಸಲು ಆಕ್ಷೇಪಣೆ ತೋರಿಸಿದರು ! ಆದರೆ ವಿಜಾಪುರ, ಸೊಲ್ಲಾಪುರ, ಬಾಗೇವಾಡಿ ಇಲ್ಲಿ ನಡೆದ ಕಟ್ಟಡಗಳ ಕಾರ್ಯಗಳಿಗಾಗಿ ವಿಶೇಷ ಹಣ ಶೇಖರವಾಗುತ್ತಿದ್ದು ಅದರಂತೆಯೇ ಈ ವಾಙ್ಮಯ ಕಾರ್ಯಮಾಡಬೇಕೆಂದು ನಾನು ಸೂಚನೆ ಮಾಡಿದೆನು. ಸದ್ಯಕ್ಕೆ ಇದು ಆಗಲಾರದೆಂದು ಅದು ತಿರಸ್ಕೃತವಾಯಿತು !

ಕಮೀಟಿಯ ನಿರ್ಣಯವು ಹೀಗಿರುವದರಿಂದ ವೀರಶೈವ ಸಮಾಜವು ಮುಖ್ಯವಾಗಿ ಶಿವಶರಣ ವಾಙ್ಮಯ ಪ್ರೇಮಿಗಳು ತಟಸ್ಥರಾಗದೆ ತಮ್ಮ ಕರ್ತವ್ಯವನ್ನು ಮಾಡಿಯೇ ತೀರಬೇಕೆಂಬ ಮನೋ ನಿರ್ಧಾರವನ್ನು ಮಾಡಿಕೊಳ್ಳಬೇಕೆಂದು ನನ್ನ ಸೂಚನೆ ಇದೆ. ಸಮಾಜದ ಪರಿಸ್ಥಿತಿಯು ಹೇಗಿರುವದು ಎಂಬದು ಎಲ್ಲರಿಗೂ ಪರಿಚಯವಿದೆ. ಇದಕ್ಕೆ ನಾವು ಮನಗೊಡದೆ ನಮ್ಮ ವಾಙ್ಮಯ ಕಾರ್ಯವನ್ನು ನಾವು ಸ್ವಾವಲಂಬಿಯಾಗಿ ನಡಿ

ಸುತ್ತ ಬರಬೇಕು. ಇದರ ಪರಿಣಾಮವಾಗಿ ಸಮಾಜದಲ್ಲಿ ಒಂದು ಮಹತ್ವದ ಜಾಗ್ರತೆಯು ಉಂಟಾಗದೆ ಇರದು. ಇದನ್ನು ನಾವು ಲಕ್ಷಿಸಿ ಕೆಳಗಿನ ಸೂಚನೆ ಯನ್ನು ನಾನು ಮಾಡುತ್ತಲಿದ್ದೇನೆ.

**ಆಲಮಟ್ಟಿ ವಿದ್ಯಾಲಯಃ—** ಕೈ. ವಾಸಿ ಮಂಜಪ್ಪ ಹರ್ಡೇಕರ ಇವರ ಹೆಸರನ್ನು ಕರ್ನಾಟಕದಲ್ಲಿ ಕೇಳದವರಾರೂ ಇರುವದಿಲ್ಲ. ಅವರು ಮಾಡಿದ ಪ್ರಯತ್ನಗಳು ಶಾಶ್ವತವಾಗಿ ಬಾಳುವಂಥವು ಇವೆ. ಅವರು ಕೈಗಾರಿಕೆ, ವಾಙ್ಮಯ ಮತ್ತು ಆಯುರ್ವೇದ ಇವುಗಳನ್ನು ಪ್ರೋತ್ಸಾಹಿ ಸುವ ಉದ್ದೇಶ್ಯವಾಗಿ ಆಲಮಟ್ಟಿಯಲ್ಲಿ ಒಂದು ವಿದ್ಯಾಲಯವನ್ನು ಪ್ರಾರಂಭಿ ಸಿದರು. ಅವರು ಆರಂಭದಲ್ಲಿ ಶಿವಶರಣರ ವಾಙ್ಮಯದ ಅಭ್ಯಾಸವನ್ನು ವಿದ್ಯಾಲಯಕ್ಕೆ ಬಂದ ವಿದ್ಯಾರ್ಥಿಗಳಲ್ಲಿ ಆರಂಭಿಸಿದರು. ಅವರು ಹೀಗೆ ಶರಣರ ತತ್ವಗಳನ್ನು ಪ್ರಸಾರಮಾಡುವ ಕಾರ್ಯವನ್ನು ಕೈಕೊಂಡದ್ದಲ್ಲದೆ ಗ್ರಾಮಾಂತರಗಳಲ್ಲಿ ಸಂಚಾರ ಮಾಡುತ್ತ ಬೋಧ ಮಾಡುವರು. ಸಭೆ ಗಳು ಎಲ್ಲಿ ಆದರೂ ಅವುಗಳಿಗೆ ಕರೆ ಬರಲು ಅವರು ಅಲ್ಲಿಗೆ ಹೋಗಿ ತಮ್ಮ ಸ್ಫೂರ್ತಿಯುಕ್ತ ಭಾಷಣ ಮಾಡುವರು. ತಮ್ಮ ಚಟುವಟಿಕೆಗಳನ್ನು ಮುಂದುವರಿಸಲು 'ಶರಣಸಂದೇಶ'ವೆಂಬ ವಾರಪತ್ರವನ್ನು ಆರಂಭಿಸಿದರು. ಆದರೆ ಕಾಲನು ಅಕಸ್ಮಾತ್ತಾಗಿ ಅವರನ್ನು ಒಯ್ದನು.

ಅವರು ಆಲಮಟ್ಟಿಯಲ್ಲಿ ಕಟ್ಟಿಸಿದ ಇಮಾರತುಗಳೂ ಅಚ್ಚುಕೂಟದ ಗೃಹವೂ ನಡುವೆ ಬಹಳ ಮಳೆಯಾಗಿ ಕುಸಿದುಬೀಳಹತ್ತಿದವು. ಆದರೆ ಈಗ ಡಾ॥ ಅಕ್ಕಿ ಎಂಬ ಮಹನೀಯರು ಆಲಮಟ್ಟಿಗೆ ಆಗಮಿಸಿ ಬಿದ್ದ ಇಮಾರತುಗಳನ್ನು ಸರಿಪಡಿಸಿ ಅಲ್ಲಿ ಆಯುರ್ವೇದ ಚಿಕಿತ್ಸಾಲಯವನ್ನು ಸ್ಥಾಪಿಸಿದ್ದಾರೆ. ಅದು ಈಚೆಗೆ ಜನಪ್ರಿಯವಾಗುತ್ತ ನಡೆದಿದೆ. ಈ ಸಂಸ್ಥೆಗೆ ಹೊಂದಿಕೊಂಡು ವಾಙ್ಮಯ ಕಾರ್ಯಗಳನ್ನು ಪ್ರಾರಂಭಿಸುವದು ನಮಗೆ ಉಚಿತವೆನಿಸುತ್ತದೆ.

ಈ ಸಂಸ್ಥೆಯು ಈ ಮೊದಲು ರಜಿಸ್ಟರ್ ಆಗಿದೆ. ಅದು ಚಾರಿಟಿ ಕಮಿಶನರರ ನಿರೀಕ್ಷಣೆಯಲ್ಲಿ ಇದೆ. ಈ ಸಂಸ್ಥೆಗೆ ಸಮಾಜದ ಪ್ರಸಿದ್ಧ ಮಹನೀಯರು ಟ್ರಸ್ಟಿಗಳಿರುವರು. ಕೈ. ವಾ. ಮಂಜಪ್ಪನವರು ಈ ಬಗ್ಗೆ ಯೋಗ್ಯ ವ್ಯವಸ್ಥೆಯನ್ನು ಮಾಡಿದ್ದಾರೆ. ಅವರು ನೇಮಿಸಿದ ಟ್ರಸ್ಟಿಗಳು

ಯಾರೆಂದರೆಃ— (೧) ಶ್ರೀ ಶಿವಯೋಗಿ ಬಂಥನಾಳ ಮಹಾಸ್ವಾಮಿಗಳು, ಪ್ರೆಸಿಡೆಂಟರು (೨) ರಾ। ಬ। ಫ. ಗು. ಹಳಕಟ್ಟಿ ವ್ಹಾಯಿಸ್ ಪ್ರೆಸಿಡೆಂಟರು (೩) ಶ್ರೀ. ಎಸ್. ಬಿ. ಹಿರೇಮಠ ವಕೀಲರು ಬಿ. ಏ. ಎಲ್. ಎಲ್. ಬಿ. ಹಾವೇರಿ. (೪) ಶ್ರೀ. ಬಸನಗೌಡಾ ಪಾಟೀಲ ಮು|| ಶಿರವಾರ ಜಿ. ರಾಯಚೂರ. (೫) ಶ್ರೀ. ಚನ್ನವೀರಪ್ಪಾ ವೋಟಗಿ ಮು. ಮುದ್ದೇಬಿಹಾಳ (೬) ಶ್ರೀ ಎಸ್. ನಿಜಲಿಂಪಪ್ಪಾ ಬಿ. ಏ. ಬಿ. ಎಲ್. (ಎಮ್. ಪಿ.) ಮು. ಚಿತ್ರದುರ್ಗ ಇಷ್ಟು ಜನ ಮಹನೀಯರು ಟ್ರಸ್ಟಿಗಳಾಗಿದ್ದಾರೆ. ಇವರೆಲ್ಲರೂ ಸಮಾಜದಲ್ಲಿ ಗಣ್ಯರಾಗಿದ್ದಾರೆ. ಶ್ರೀ ನಿಜಲಿಂಗಪ್ಪನವರು ಹಿಂದೆ ಕೆ. ಪಿ. ಸಿ. ಸಿ. ಅಧ್ಯಕ್ಷರಾಗಿ ಮಹತ್ವದ ಕಾರ್ಯಮಾಡಿದ್ದಾರೆ. ಈ ಎಲ್ಲ ಮಹನೀಯರು ಕಾರ್ಯ ಮಾಡಲು ಯೋಗ್ಯರಿದ್ದು ಇವರ ನಿದರ್ಶದಲ್ಲಿ ವಾಙ್ಮಯ ಕಾರ್ಯವನ್ನು ಈ ಸಂಸ್ಥೆಯ ಮುಖಾಂತರ ನಡಿಸಲು ಯಾವ ಅಭ್ಯಂತರವೂ ಇಲ್ಲವೆಂದು ನಮಗೆ ತೋರುತ್ತದೆ.

ಈ ವಿಷಯವಾಗಿ ಸಾರ್ವಜನಿಕರು ತಮ್ಮ ಅಭಿಪ್ರಾಯಗಳನ್ನು ನಮ್ಮ ಕಡೆಗೆ ಕಳಿಸಬೇಕೆಂದು ವಿನಂತಿ ಇದೆ. ಅವುಗಳನ್ನು ನಾವು ಪ್ರಸಿದ್ಧಿಸುವೆವು.

ಈದಿಶೆಯಿಂದ ಕಾರ್ಯಮಾಡಿದಲ್ಲಿ ಈವರೆಗೆ ನಿಂತು ಹೋಗಿರುವ ವಾಙ್ಮಯ ಸಂಶೋಧನೆ ಮತ್ತು ವಾಙ್ಮಯ ಪ್ರಸಾರ ಇವುಗಳನ್ನು ಹೆಚ್ಚು ಘನತರವಾದ ರೀತಿಯಿಂದ ನಡಿಸಲು ಅನುಕೂಲವಾಗುವದೆಂದು ನನಗೆ ತೋರುತ್ತದೆ.

ಈ ಕಾಲದಲ್ಲಿ ಬಸವಾದಿ ಪ್ರಮಥರ ಮಾರ್ಗವನ್ನು ಮುಂದುವರಿಸುವ ಪರಿಸ್ಥಿತಿಯು ಉಂಟಾಗಿದೆ. ಇಂಥಕಾಲದಲ್ಲಿಯೇ ವೀರಶೈವ ವಿದ್ಯಾಲಯದ ಮೂಲಕ ಶಿವಶರಣರ ವಾಙ್ಮಯವನ್ನು ಮುಂದು ವರಿಸಬೇಕೆಂದು ನನ್ನ ಸೂಚನೆಯನ್ನು ಜನತೆಯು ಆದರಿಸಬೇಕೆಂದು ನನ್ನ ವಿನಂತಿ ಇದೆ.

## ಗುರುಪ್ರಸಾದ

ಹಗಲಿರುಳೆನ್ನದೆ ಸಶ್ರಮ ಪಡುತಿಹ
ವಿದ್ಯಾರ್ಥಿಗಣ ಪಾಲಕ ಓ! ವ್ಯಕ್ತಿ!
ಜಾತಿಮತ ಪಂಥಗಳ ಕಿತ್ತೊಗೆದಿಹ
ಓ! ಮಹಮ್ಮಹಾ ಗುರುದೇವ ಶಕ್ತಿ!

ಬೆಳಗಾಂವಿ ಶಹರದೊಳ್ ಬೆಳಗುತಿದೆ
ವಿದ್ಯಾರ್ಥಿಗಳ ಉಚಿತ ಪ್ರಸಾದನಿಲಯಂ
ಕನ್ನಡದ ನಾಡಿನೊಳ್ ಮೊಳಗುತಿದೆ
ನಿಲಯದೈಕ್ಯ ದುಂದುಭಿಯ ವಿಜಯಶ್ರೀಯಂ||

ಇಲ್ಲಿಹುದಿಲ್ಲಿಹುದು ರಾಮರಾಜ್ಯ
ಕಲ್ಕಿಯನು ಕೊಲ್ಲುತಿಹ ಧರ್ಮರಾಜ್ಯ!
ಅದೋ! ನೇಮ ನೀತಿಗಳ ಸ್ವರಾಜ್ಯ!
ಆಳುತಿದೆ ನಿಲಯಂ ಮೌನರಾಜ್ಯ!

ಗುರುದಕ್ಷ ರಕ್ಷಕರ ಮಹಾಕರ್ತವ್ಯ
ಕಟ್ಟುತಿದೆ ಓ! ಮಹಾ ಭೂಕೈಲಾಸ!
ಧರ್ಮಶಾಸ್ತ್ರ ಪುರಾಣಗಳ ದಿವ್ಯ
ತಟ್ಟುತಿದೆ ಓ! ಕಲ್ಕಿಗಳ ಜೈಘೋಷ!

ಓ! "ಶ್ರೀಮನ್ನಿರಂಜನ ಪ್ರಣವ-
ಸ್ವರೂಗಿ ಶಿವಬಸವಸ್ವಾಮಿ" ಮೂರ್ತಿ!
ಓ! ಚಿರಂತನ ಪುಣ್ಯ ಪ್ರಭಾವಿ
ಜಯ್ ಪರಾಶಕ್ತಿ ಪಡೆದಿಹೆ ಕೀರ್ತಿ!

ನವರಾಷ್ಟ್ರ ನಿರ್ಮಾಣಕೀ ನಿಲಯಂ
ಕಟ್ಟುತಿದೆ ಜಗ ಕಲ್ಯಾಣಕರ ಭುವನಂ
ಉದಾರ ಹೃದಯಿಗಳ ದಾನವಿನಯು
ಹೆಚ್ಚುತಿರೆ, ನಿಶ್ಚಯಂ ವಿಶ್ವ ಕಲ್ಯಾಣಂ||

ಇದೋ! ಪ್ರಾರ್ಥಿಪೆನು ಜಗದೇವ!
ಕರುಣ ಮೊರೆಯಿಂದಾನಂದ ಚಿತ್ತದಿಂ
ಬಾಳಿರಲಿ ಬಹುವರುಷ ಗುರುದೇವ
ಆಶಿಸುವೆ ನಾಂ ಗುರುಪುಣ್ಯಂ ಪ್ರಸಾದ ||

—ಹಿಂಗಮಿರೆ. ಬಿ. ಬಿ. ಬೆಳಗಾಂವಿ

# ಶಿವಶರಣರ ವಾಙ್ಮಯದ ಪ್ರಕಟನೆ



ನಾವು ಪ್ರಕಟಿಸಲಿಚ್ಛಿಸಿರುವ ವೀರಶೈವ ಗ್ರಂಥಗಳ ಪಟ್ಟಿಯನ್ನು ಕೆಳಗೆ ಕೊಟ್ಟಿದ್ದೇವೆ. ಈ ಪಟ್ಟಿಯು ಮೇಲಿಂದ ವೀರಶೈವ ವಾಙ್ಮಯದ ವಿಸ್ತಾರವು ಇನ್ನೂ ಎಷ್ಟಿದೆಂಬುದು ವಾಚಕರಿಗೆ ಗೊತ್ತಾಗದೆ ಇರದು. ಇದರಲ್ಲಿ ೧೬೫ ಗ್ರಂಥಗಳ ಹೆಸರುಗಳಿವ. ಇವೆಲ್ಲವೂ ಶಿವಶರಣರವಾಗಿದ್ದು ಇವುಗಳಲ್ಲಿ ನಾವು ೧೧೫ ಗ್ರಂಥಗಳನ್ನು ಈ ಮೊದಲಿಗೆ ಪ್ರಸಿದ್ಧಿಸಿದ್ದೇವೆ. ಇವುಗಳಲ್ಲಿ ಈಗ ೩೦-೩೫ ಗ್ರಂಥಗಳು ಮಾತ್ರ ನಮ್ಮಲ್ಲಿ ಉಳಿದಿರುತ್ತವೆ. ಇವುಗಳ ಬಗ್ಗೆ ನಾವು ಬೇರೊಂದು ಪಟ್ಟಿಯನ್ನು ಮಾಡಿದ್ದೇವೆ.

ಈ ೧೬೫ ಗ್ರಂಥಗಳ ಪುನರ್ಮುದ್ರಣವು ಈಗ ಬಹು ಅವಶ್ಯವಾಗಿರುತ್ತದೆ. ಇವುಗಳ ಮುದ್ರಣಕಾಲದಲ್ಲಿ ಪ್ರತಿಯೊಂದು ಗ್ರಂಥಕ್ಕೆ ವಿಸ್ತೃತ ಟೀಕೆ, ಭಾವಾರ್ಥ, ಗ್ರಂಥಕಾರನ ಚರಿತ್ರೆ ಇವುಗಳನ್ನು ಸಮಾವೇಶ ಮಾಡುವೆವು. ಪ್ರತಿಯೊಂದು ಗ್ರಂಥದ ಅಜಮಾಸ ಪುಟ ಸಂಖ್ಯೆಯನ್ನು ಅದರ ಮುಂದಿನ ಕಾಲಮಿನಲ್ಲಿ ಕೊಟ್ಟಿದ್ದೇವೆ. ಅದರ ಮೇಲಿಂದ ಇವು ಚಿಕ್ಕ ಗ್ರಂಥಗಳಾಗುವವೆಂಬುದು ವಾಚಕರಿಗೆ ತಿಳಿದುಬರುವದು. ಇವುಗಳ ಸಲುವಾಗಿ ನಾವು ಉತ್ತಮ ಕಾಗದ ಮತ್ತು ಬಾಯಿಂಡಿಂಗ ಉಪಯೋಗಿಸುವೆವು. ಇವು ಸಣ್ಣ ಗ್ರಂಥಗಳೆಂದು ವಾಚಕರಿಗೆ ತೋರಿದರೂ ಇವುಗಳ ಮಹತ್ವವು ಕಡಿಮೆ ಎಂದು ಯಾರೂ ಭಾವಿಸಕೂಡದು. ಇದರಿಂದ ಗ್ರಂಥಗಳ ಬೆಲೆಯೂ ಕಡಿಮೆಯಾಗುವದು. ೧೨ನೇ ೧೩ನೇ ಶತಮಾನಗಳಲ್ಲಿ ದಕ್ಷಿಣ ದೇಶದಲ್ಲಿ ಶಿವಶರಣರ ಒಂದು ಮಹತ್ವದ ಆಂದೋಲನವು ಉಂಟಾಯಿತು. ಆಗ ಈ ಗ್ರಂಥಕಾರರೆಲ್ಲರೂ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ. ಇವರಲ್ಲಿ ಅನೇಕರು ಸ್ತ್ರೀಯರೂ ಇದ್ದಾರೆ. ಅಲ್ಲದೆ ಅಸ್ಪೃಶ್ಯ ಮೊದಲಾದ ಎಲ್ಲ ಪಂಗಡದವರೂ ಇದ್ದಾರೆ. ಈ ಗ್ರಂಥಗಳ ಭಾಷೆಯು ಬಹು ಸುಂದರವಾದದ್ದು. ಅವುಗಳಲ್ಲಿ ಚಿಕ್ಕ ಉಕ್ತಿಗಳಿದ್ದರೂ ಅವುಗಳೆಲ್ಲ ಅರ್ಥಪೂರ್ಣವಾದವುಗಳು. ಈ ಗ್ರಂಥಗಳ ಮೇಲಿಂದ ವೀರಶೈವ ಸಮಾಜವು ಹಿಂದಿನ ಕಾಲದಲ್ಲಿ ಎಷ್ಟು ಉನ್ನತಸ್ಥಾನವನ್ನು ಹೊಂದಿತ್ತೆಂಬುದು ತಿಳಿದು ಬರದೆ ಇರಲಾರದು. ಈ ಗ್ರಂಥಗಳನ್ನು ಪ್ರಕಟಿಸುವದು ಈಗ ವೀರಶೈವರ ಮುಖ್ಯಕಾರ್ಯವಾಗಿದೆ.

ಈಗ ಈ ಪಟ್ಟಿಯನ್ನು ನಾವು ಸಿದ್ಧಪಡಿಸಿ ಸಾರ್ವಜನಿಕರ ಇದಿರಿಗೆ ಇಟ್ಟಿದ್ದಾಗಿದೆ. ಅನೇಕ ವರ್ಷಗಳ ಪರಿಶ್ರಮದ ಫಲವು ಇದಾಗಿರುತ್ತದೆ. ಇವು ಆಯತವಾಗಿ ಮುದ್ರಣಕ್ಕೋಸ್ಕರ ಸಿದ್ಧವಾಗಿವೆ. ಈ ಕಾರ್ಯ ದಲ್ಲಿ ಸಾರ್ವಜನಿಕರು ತಮಗೆ ಶಕ್ಯವಿದ್ದಷ್ಟು ಸಹಾಯಮಾಡಲು ಮುಂದಾ ಗುವರೆಂದು ನಾವು ಬಲವಾಗಿ ಆಶಿಸಿದ್ದೇವೆ.

ವಿಜಾಪೂರ. ತಮ್ಮ ವಿಧೇಯ

ತಾ. ೧೫-೧೦-೫೫.

ಫ. ಗು. ಹಳಕಟ್ಟಿ,
ಸಂಪಾದಕ—ಶಿವಾನುಭವ.
ವಿಜಾಪುರ

| ನಂ. | ಗ್ರಂಥಗಳ ಹೆಸರುಗಳು. | ಅಜಮಾಸು ಪುಟ | ಶರಾ |
|---|---|---|---|
| ೧ | ಅಮರಗಣಾಧೀಶ್ವರರ ಚರಿತ್ರೆಗಳು | ೨-೩ | ✓ |
| ೨ | ಅಮುಗಿದೇವಯ್ಯನ ವಚನಗಳು (೩೩ ವಚನಗಳು) | ೩೫ | |
| ೩ | ಅರುವಿನ ಮಾರಿತಂದೆಯ ವಚನಗಳು (೧೧೪ ವಚನಗಳು) | ೧೦೪ | |
| ೪ | ಅವಧೂತ ಗೀತೆ (೧೬ನೇ ಶತಮಾನದ ಕವಿಯಾದ ಗುರುಬಸವ ಕೃತಿ) | ೩೦ | |
| ೫ | ಅವಸರದ ರೇಚಣ್ಣಗಳ ವಚನಗಳು (೧೩೭ ವಚನಗಳು) | ೧೦೦ | |
| ೬ | ಅಂಬಿಗರ ಚೌಡಯ್ಯನ ವಚನಗಳು (೨೧೭ ವಚನಗಳು) | ೧೬೦ | ✓ |
| ೭ | ಆದಯ್ಯನ ವಚನಗಳು (೨೮೨ ವಚನಗಳು) | ೧೦೦ | ✓ |
| ೮ | ಆದಿಶೆಟ್ಟಿ ಪುರಾಣ (ರಾಘವಾಂಕ ಕವಿ ಕೃತ) | ೧೪೪ | ✓ |
| ೯ | ಉರಿಲಿಂಗದೇವನ ವಚನಗಳು (೬೫ ವಚನಗಳು) | ೫೦ | |
| ೧೦ | ಉರಿಲಿಂಗಪೆದ್ದಿಯ ವಚನಗಳು | ೧೭೦ | ✓ |
| ೧೧ | ಏಲೇಶಕೇತಯ್ಯನ ವಚನಗಳು (೭೮ ವಚನಗಳು) | ೧೦೦ | ✓ |

| ನಂ. | ಗ್ರಂಥಗಳ ಹೆಸರು. | ಅಜಮಾಸು ಪುಟ | ಶರಾ |
|---|---|---|---|
| ೧೨ | ಒಕ್ಕಲಿಗ ಮುದ್ದಣ್ಣನ ವಚನಗಳು (೫೦ ವಚನಗಳು) | ೪೦ | |
| ೧೩ | ಓಂಕಾರ ನಿಜಲಿಂಗನ ವಚನಗಳು | ೧೫೦ | |
| ೧೪ | ಕಲಕೇತ ಬ್ರಹ್ಮಯ್ಯನ ವಚನಗಳು (೨೬ ವಚನಗಳು) | ೩೫ | |
| ೧೫ | ಕಂಭದ ಮಾರಯ್ಯನ ವಚನಗಳು (೨೦ ವಚನಗಳು) | ೪೦ | |
| • ೧೬ | ಕಾಲಜ್ಞಾನದ ವಚನಗಳು | ೯೬ | ✓ |
| ೧೭ | ಕಾಳವ್ವೆಯ ವಚನಗಳು (ಉರಿಲಿಂಗವೆದ್ದಿಯ ಹೆಂಡತಿ) | ೨೦ | |
| ೧೮ | ಕಿಲಾರದ ಭೀಮಣ್ಣಗಳ ವಚನಗಳು (೩೫ ವಚನಗಳು) | ೩೬ | |
| ೧೯ | ಕೂಗಿನ ಮಾರಿತಂದೆಯ ವಚನಗಳು (೧೨ ವಚನಗಳು) | ೩೫ | |
| • ೨೦ | ಕೃಷಿಜ್ಞಾನ ಪ್ರದೀಪಿಕೆ ಘನಮಠದಾರ್ಯ ಕೃತ | ೩೭೯ | ✓ |
| • ೨೧ | ಕೆಳದಿ ಸಂಸ್ಥಾನದ ರಾಜರ ವಂಶಾವಳಿ | ೫೮ | ✓ |
| • ೨೨ | ಕೊಡಗಿನ ಸಂಸ್ಥಾನದ ರಾಜೇಂದ್ರನಾಮೆ | ೧೨೨ | ✓ |
| ೨೩ | ಕೋಲ ಶಾಂತಯ್ಯನ ವಚನಗಳು (೧೪೪ ವಚನಗಳು) | ೯೦ | |
| ೨೪ | ಗಜೇಶ ಮಸಣಯ್ಯನ ವಚನಗಳು (೧೦೦ ವಚನಗಳು) | ೬೦ | |
| ೨೫ | ಗಟ್ಟಿವಾಳಯ್ಯನ ವಚನಪಳು (೧೦೨ ವಚನಗಳು) | ೮೦ | |
| • ೨೬ | ಗಣದಾಸಿ ವೀರಣ್ಣನ ವಚನಗಳು | ೪೦ | ✓ |
| ೨೭ | ಗಾಣದ ಕನ್ನಪ್ಪನ ವಚನಗಳು (೨೬ ವಚನಗಳು) | ೩೦ | |
| • ೨೮ | ಗುಮ್ಮಳಾಪುರದ ಸಿದ್ಧಲಿಂಗ ದೇವರ ವಚನಗಳು | ೫೩ | ✓ |
| ೨೯ | ಗೋರಕ್ಷನ ವಚನಗಳು (೩೦ ವಚನಗಳು) | ೪೫ | |
| • ೩೦ | ಘನಲಿಂಗನ ವಚನಗಳು | ೬೦ | ✓ |

| ನಂ. | ಗ್ರಂಥಗಳ ಹೆಸರು | ಅಜಮಾಸು ಪುಟ | ಶರಾ |
|---|---|---|---|
| ೩೧ | ಚನ್ನಬಸವೇಶ್ವರನ ವಚನಗಳು (೯೦೦ ವಚನಗಳು) | ೨೦೦ | ✓ |
| ೩೨ | ಚನ್ನಬಸಪ್ಪ ಧಾರವಾಡ ಇವರ ಚರಿತ್ರೆ | ೪೨ | ✓ |
| ೩೩ | ಚಂದಿಮರಸನ ವಚನಗಳು (೫೬ ವಚನಗಳು) | ೫೪ | |
| ೩೪ | ಚಿಕ್ಕಣ್ಣನ ವಚನಗಳು (೨೪ ವಚನಗಳು) | ೩೦ | |
| ೩೫ | ಜಾತಿಭೇದ ನಿರಸನ ವಚನಗಳು (೩೭ ವಚನಗಳು) | ೫೦ | |
| ೩೬ | ಜ್ಯೋತಿರ್ಮಯ ಶಾಂಭವೀ ದೀಕ್ಷಾಬೋಧೆ | ೫೧ | |
| ೩೭ | ತುರುಗಾಹಿ ರಾಮಣ್ಣನ ವಚನಗಳು (೨೧ ವಚನಗಳು) | ೩೦ | |
| ೩೮ | ತೋಂಟದಾರ್ಯರಗಳೆ | ೪೦ | ✓ |
| ೩೯ | ದಶರಯ್ಯನ ವಚನಗಳು (೧೨ ವಚನಗಳು) | ೨೦ | |
| ೪೦ | ದಾಸೋಹದ ಸಂಗಣ್ಣನ ವಚನಗಳು (೧೩೫ ವಚನಗಳು) | ೭೫ | |
| ೪೧ | ದೇವರದಾಸಿಮಯ್ಯನ ಚರಿತ್ರೆ | ೭೦ | |
| ೪೨ | ದೇವರ ದಾಸಿಮಯ್ಯನ ವಚನಗಳು | ೯೩ | ✓ |
| ೪೩ | ನಗೆಮಾರಿತಂದೆಯ ವಚನಗಳು (೧೨೯ ವಚನಗಳು) | ೭೫ | |
| ೪೪ | ನಿಜಗುಣನ ವಚನಗಳು (೧೦ ವಚನಗಳು) | ೨೦ | |
| ೪೫ | ನಿರಂಜನ ವಂಶರತ್ನಾಕರ | ೯೫ | ✓ |
| ೪೬ | ನೂರೊಂದರ ಹಾಡುಗಳು | ೧೦೦ | |
| ೪೭ | ನೈತಿಕ ವಚನಗಳು | ೭೬ | |
| ೪೮ | ಪರಮಾತ್ಮನ ವಚನಗಳು | ೬೭ | ✓ |
| ೪೯ | ಪ್ರಭುದೇವರ ವಚನಗಳು | ೫೫೦ | ✓ |
| ೫೦ | ಪ್ರಸಾದಿ ಭೋಗಣ್ಣನ ವಚನಗಳು (೧೩೨ ವಚನಗಳು) | ೧೦೦ | |
| ೫೧ | ಪ್ರಾಣಲಿಂಗಜ್ಞಾನ ದರ್ಪಣ ಚಾರಿತ್ರ್ಯ | ೧೦೩ | |
| ೫೨ | ಬಸವೇಶ್ವರನ ಚರಿತ್ರೆ | ೨೦೦ | |
| ೫೩ | ಬಸವೇಶ್ವರನ ತತ್ವಗಳು | ೧೦೫ | ✓ |

| ನಂ. | ಗ್ರಂಥಗಳ ಹೆಸರು | ಅಜಮಾಸು ಪುಟ | ಶರಾ |
|---|---|---|---|
| • ೫೪ | ಬಸವೇಶ್ವರ ಷಟ್‌ಸ್ಥಲ ವಚನದ ಕಥಾಸಾರ | ೧೧೪ | ✓ |
| ೫೫ | ಬಹುರೂಪಿ ಚೌಡಯ್ಯನ ವಚನಗಳು | ೬೦ | |
| ೫೬ | ಬಳ್ಳೇಶಮಲ್ಲಯ್ಯನ ವಚನಗಳು (೧೬ ವಚನಗಳು) | ೩೫ | |
| • ೫೭ | ಬಾಹೂರು ಬೊಮ್ಮಯ್ಯನ ವಚನಗಳು | ೩೪ | ✓ |
| ೫೮ | ಬಿಬ್ಬಿಬಾಚಯ್ಯನ ವಚನಗಳು (೧೪೧ ವಚನಗಳು) | ೧೦೦ | |
| ೫೯ | ಬಿಳಗಿ ಅರಸರ ವಂಶಾವಳಿ ✓ | ೧೦೦ | |
| • ೬೦ | ಭಕ್ತಿಯ ವಚನಗಳು | ೬೮ | ✓ |
| ೬೧ | ಭಂಡಾರಿ ಶಾಂತಯ್ಯನ ವಚನಗಳು | ೫೬ | |
| • ೬೨ | ಮಡಿವಾಳ ಮಾಚಿದೇವನ ವಚನಗಳು | ೮೮ | ✓ |
| • ೬೩ | ಮಧುವರಸನ ವಚನಗಳು (೩೫ ವಚನಗಳು) | ೬೮ | ✓ |
| ೬೪ | ಮನುಮುನಿ ಗುಮ್ಮಟ ದೇವಯ್ಯನ ವಚನಗಳು (೧೪೧ ವಚನಗಳು) | ೮೦ | |
| ೬೫ | ಮರುಳಶಂಕರದೇವನ ವಚನಗಳು | ೩೫ | |
| • ೬೬ | ಮಹಾದೇವಿಯಕ್ಕನ ವಚನಗಳು | ೬೦ | ✓ |
| ೬೭ | ಮಹಾನುಭಾವ ಪ್ರಕಾಶಿಕೆ ಹಾಗಲವಾಡಿ ರಾಜಕೃತ | ೩೮ | |
| • ೬೮ | ಮಹಿಮ್ನ ಸ್ತೋತ್ರ | ೪೮ | ✓ |
| ೬೯ | ಮಾದಾರ ಚನ್ನಯ್ಯನ ವಚನಗಳು (೨೧ ವಚನಗಳು) | ೩೫ | |
| ೭೦ | ಮಾದಾರ ಧೂಳಯ್ಯನ ವಚನಗಳು (೧೨೦ ವಚನಗಳು) | ೧೨೫ | |
| • ೭೧ | ಮಾರೇಶ್ವರೊಡೆಯರ ವಚನಗಳು (೧೩೪ ವಚನಗಳು) | ೧೦೦ | |
| ೭೨ | ಮುಕ್ತ್ಯಂಗನಾಕಂಠಮಾಲೆ | ೫೦ | |
| • ೭೩ | ಮೆರೆಮಿಂಡದೇವನ ವಚನಗಳು | ೩೮ | ✓ |

| ನಂ. | ಗ್ರಂಥಗಳ ಹೆಸರು | ಅಜಮಾಸು ಪುಟ | ಶರಾ |
|---|---|---|---|
| ೭೪ | ರಕ್ಕಸ ಬೊಮ್ಮಣ್ಣಗಳ ವಚನಗಳು (೩೦ ವಚನಗಳು) | ೩೫ | |
| ೭೫ | ರೆಮ್ಮವ್ವೆಯ ವಚನಗಳು ... | ೪೦ | |
| ೭೬ | ಲಿಂಗಮ್ಮನ ವಚನಗಳು ... | ೬೫ | ✓ |
| ೭೭ | ಲಿಂಗಪೂಜೆಯ ತತ್ವಗಳು | ೫೪ | ✓ |
| ೭೮ | ಲಿಂಗದ ಸ್ವರೂಪ .... ... | ೮೩ | |
| ೭೯ | ವಚನಶಾಸ್ತ್ರಸಾರ ಭಾಗ ೧ (ಪೂರ್ವಾರ್ಧ) | ೪೧೦ | ✓ |
| ೮೦ | ,, ಭಾಗ ೧ (ಉತ್ತರಾರ್ಧ) | ೨೯೬ | |
| ೮೧ | ,, ಭಾಗ ೨ ( ,, ) | ೬೩೧ | ✓ |
| ೮೨ | ,, ಭಾಗ ೩ (ಪೂರ್ವಾರ್ಧ) | ೨೪೪ | ✓ |
| ೮೩ | ,, ಭಾಗ ೩ (ಉತ್ತರಾರ್ಧ) | ೨೦೮ | |
| ೮೪ | ವರದಾನಿ ಗುಡ್ಡಮ್ಮೆಯ ಚರಿತ್ರೆ | ೬೦ | ✓ |
| ೮೫ | ವೀರಗೊಲ್ಲಾಳನ ವಚನಗಳು (೧೦ ವಚನಗಳು) | ೩೨ | |
| ೮೬<br>೮೭<br>೮೮<br>೮೯ | ವೀರಶೈವ ಮತತತ್ವಗಳು–ಶಿವಾನುಭವ ಶಬ್ದಕೋಶದಲ್ಲಿಯ ವಿಷಯಗಳನ್ನು ವಿಸ್ತರಿಸಿ ನಾಲ್ಕು ಭಾಗಗಳನ್ನಾಗಿ ಮಾಡಿ ಪ್ರಕಟಿಸುವೆವು. | ೫೦೦ | 4 |
| ೯೦ | ವೀರಶೈವ ರಗಳೆ .... | ೧೬ | ✓ |
| ೯೧ | ವೀರಶೈವ ರಾಜಮನೆತನಗಳ ಚರಿತ್ರೆ | ೨೪೮ | |
| ೯೨ | ವೇಮಯ್ಯನ ಜ್ಞಾನಯೋಗದ ವಚನಗಳು | ೭೨ | |
| ೯೩ | ಶಿವಲೆಂಕ ಮಂಚಣ್ಣನ ವಚನಗಳು (೫೦ ವಚನಗಳು) | ೬೭ | ✓ |
| ೯೪ | ಶಿವಶರಣರ ಚರಿತ್ರೆಗಳು ಭಾಗ ೧ | ೧೮೯ | ✓ |
| ೯೫ | ,, ,, ಭಾಗ ೨ | ೪೫೮ | |
| ೯೬ | ,, ,, ಭಾಗ ೩ | ೩೪೨ | ✓ |
| ೯೭ | ,, ,, ಭಾಗ ೪ | ೩೫೦ | ✓ |
| ೯೮ | ಶಿವಶರಣರ ಪದಗಳು | ೮೪ | ✓ |
| ೯೯ | ಶಿವಾನುಭವದರ್ಪಣ–ಮೈಲಾರಬಸಪ್ಪ | ೭೫ | ✓ |

| ನಂ. | ಗ್ರಂಥಗಳ ಹೆಸರು | ಅಜಮಾಸು ಪುಟ | ಶರಾ |
|---|---|---|---|
| ೧೦೦ | ಶಿವಾನುಭವ ಸತ್ಯಮಾರ್ಗ | ೧-೨ | ✓ |
| ೧೦೧ | ಶಿವಾನುಭವ ಸೂತ್ರಸಾರ | ೧೧೪ | |
| ೧೦೨ | ಶೂನ್ಯಸಂಪಾದನೆ (ಮೂಲಗ್ರಂಥ) | ೪೦೩ | ✓ |
| ೧೦೩ರಿಂದ ೧೨೩ರ ವರೆಗೆ | ಶೂನ್ಯಸಂಪಾದನೆಯಲ್ಲಿಯ ಆಯಾ ಸಂಪಾದನೆಗಳ ಸಟೀಕ ವಿವೇಚನೆ ೨೧ ಗ್ರಂಥಗಳು. ಇವುಗಳಲ್ಲಿ ಮೂರು ಗ್ರಂಥಗಳು ಅಚ್ಚಾಗಿವೆ. | ೧೨೬೦ | ✗ 18 |
| ೧೨೪ | ಸಕಲಾಗಮ ಶಿಖಾಮಣಿ | ೨೦೦ | ✓ |
| ೧೨೫ | ಸಕಲೇಶ ಮಾದರಸನ ವಚನಗಳು | ೫೩ | ✓ |
| ೧೨೬ | ಸಂಗರದ ಬೊಮ್ಮಯ್ಯನ ವಚನಗಳು (೧೪೦ ವಚನಗಳು) | ೮೫ | |
| ೧೨೭ | ಸಟೀಕ ಏಕೋತ್ತರ ಶತಸ್ಥಲ | ೫೦೦ | ✓ |
| ೧೨೮ ರಿಂದ ೧೩೩ | ಸಟೀಕ ಬಸವೇಶ್ವರ ವಚನಗಳು ಆರು ಗ್ರಂಥಗಳಾಗುವವು. | ೭೦೦ | ✗ 6 |
| ೧೩೪ | ಸತ್ಯಕ್ಕನ ವಚನಗಳು (೨೦ ವಚನಗಳು) | ೨೦ | ✓ |
| ೧೩೫ | ಸಂಗನಬಸವೇಶ್ವರನ ವಚನಗಳು | ೧೦೧ | ✓ |
| ೧೩೬ | ಸಂಗೀತ ವಚನಗಳು | ೪೦ | ✓ |
| ೧೩೭ | ಸಿದ್ಧರಾಮೇಶ್ವರನ ವಚನಗಳು | ೨೦೦ | ✓ |
| ೧೩೮ | ಸೋಮೇಕಟ್ಟೆ ಕರಿವೃಷಭೇಂದ್ರರ ಕೈವಲ್ಯ ಪದ್ಯಗಳು | ೪೦ | ✓ |
| ೧೩೯ | ಸುಂಕದ ಬಂಕಣ್ಣನ ವಚನಗಳು (೧೪೮ ವಚನಗಳು) | ೧೦೦ | |
| ೧೪೦ | ಸೊಡ್ಡಳ ಬಾಚರಸನ ವಚನಗಳು | ೪೩ | ✓ |
| ೧೪೧ | ಹಡಪದಪ್ಪಣ್ಣನ ವಚನಗಳು | ೧೧೮ | ✓ |
| ೧೪೨ | ಹಡಪದ ರೇಚಣ್ಣನ ವಚನಗಳು | ೧೫ | |
| ೧೪೩ | ಹರಳಯ್ಯನ ತ್ರಿಪದಿ | ೨೫ | ✓ |

## ೨೫ ಶೀಲಸಂಪಾದನೆಸ್ಥಳ

**ಸೂತ್ರ**:— ಇಂತು ಸುಜ್ಞಾನ ಭೇದವಂ ನಿರ್ದೇಶಂ ಮಾಡಿ ನಿಜ ವನರಿದ ಸರ್ವಾಂಗ ಜ್ಞಾನ ಮೂರ್ತಿಯಾದ ಶರಣಂಗೆ ಮಹಾಜ್ಞಾನವೇ ತಂತ್ರವಲ್ಲದೆ ಉಳಿದ ದುಶ್ಶೀಲವ್ರತಂಗಳು ಇಲ್ಲವೆಂದು ಪ್ರತಿಷ್ಠಿಸಿ ತೋರುತ್ತಿರಲು ಮುಂದೆ ಶೀಲಸಂಪಾದನಸ್ಥಲವಾದುದು.

|| ಪದ || ರಾಗ ದೇಶಿ

ಕಾಮಕ್ರೋಧ ಲೋಭ ಮೋಹ | ತಾಮಸ ಮದವೀ ಮತ್ಸರಂಗಳ
ಸೀಮೆಗೆ ಸಿಲುಕದ ಶೀಲದೊಳಗೆ ಶಿವ ತಾ ಮನೆಗಟ್ಟಿಹ । ನನವರತಾ ||ಪ||

ಅಂಗಪ್ರಾಣಾಂತರ್ಬಹಿರಂಗವ | ನುಂಗಿ ಪುಗುತ್ತಿಹ ಮಾಯಾ ಸಂಗವ|
ಹಿಂಗದೆ ನಾನಾ ಶೀಲವ ಹಿಡಿದರೆ ಫಲವೇನದರಿಂದಾ ||೧||

ತನುಗುಣಗಳನಂಗೀಕರಿಸದೆ ಮತ್ತನುಕರಿಸದೆ ಕರಣಾದಿವಿಕಾರದ ।
ನೆನಹನು ಲಿಂಗದೊಳಗೆ ಮುಟ್ಟಿಸಬಲ್ಲಡೆ ತಾನದು ಶೀಲಾ ||೨||

ಸೀಮೆಯು ಸಂಕಲ್ಪದ ಶೀಲದ ಮನತಾಮಸದಲಿ ಮನೆಗಟ್ಟಿಹುದು ।
ತಾಮಸ ಸೀಮೆಯನರಿಯದೆ ನಿಜನಿಸ್ಸೀಮೆಯೊಳಿರುತಿರ್ಪುದೆ ಶೀಲಾ ||೩||

ಶಿವ ಶರಣರ ನಂಬುದೆ ಶೀಲವು ಅವ ಗುಣಗಳ ಹೊದ್ದದೊಡದು ಶೀಲಾ|
ಶಿವದಾಸೋಹ ದೊಳೆರಡರಿಯದೆ ಇರಬಲ್ಲಡೆ ತಾನದು ಶೀಲಾ ||೪||

ಅಂಗದೊಳಗೆ ಗುರು ಲಿಂಗದೊಳಗೆ ಮನ ಜಂಗಮದಲಿ ಧನವರ್ಪಿತ ವಾಗಿಯೇ । ಲಿಂಗಾಂಗಿತವಾಗಿರಬಲ್ಲಡೆ ಸಂಗನೋಳದು ಸ್ವಯ ಶೀಲಾ ||೫||

ಇಂತೆಂಬಲ್ಲಿಗೆ ಶ್ರೀಮದೇಕೋತ್ತರ ಶತಸ್ಥಲಂಗಳಲ್ಲಿ ಪಿಂಡಾದಿ ಸಹಜ ಮಾಟಾಂತ್ಯಮಾದ ಹದಿನೈದು ಸ್ಥಲಂಗಳೊಳೊಂದನೆಯದಾದ ಭಕ್ತ ಸ್ಥಲಕ್ಕೆ, ಮಹೇಶಾದಿ ಭಕ್ತದೇಹಿಕ ಲಿಂಗಾಂತ್ಯಮಾದೊಂಬತ್ತೆರಡನೆಯದಾದ ಮಹೇಶ ಸ್ಥಲಕ್ಕೆ, ಪ್ರಸಾದಿಯಾದಿ ಪ್ರಸಾದ ಮಹಾತ್ಮೆಯಂತ್ಯಮಾದೇಳ್ಮೂರನೆಯ ದಾದ ಪ್ರಸಾದಿ ಸ್ಥಲಕ್ಕೆ, ಪ್ರಾಣಲಿಂಗಾದಿ ಅಂಗ ಲಿಂಗಾಂತ್ಯಮಾದೈದು ನಾಲ್ಕನೆಯದಾದ ಪ್ರಾಣಲಿಂಗಿ ಸ್ಥಲಕ್ಕೆ, ಶರಣಾದಿ ಶೀಲ ಸಂಪಾದನಾಂತ್ಯ ಮಾದ ನಾಲ್ಕು ಐದನೆಯದಾದ ಶರಣ ಸ್ಥಲಕ್ಕೆ ಮುಗಿದುದು.

---

## ೨೬ ಐಕ್ಯಸ್ಥಲ

**ಸೂತ್ರ:**— ಇಂತು ಶರಣಾದಿ ಶೀಲ ಸಂಪಾದನಾಂತ್ಯವಾದ ನಾಲ್ಕು ಸ್ಥಲಂಗಳಲ್ಲಿ ಮಹಾಜ್ಞಾನ ವಿವೇಕದಿಂ ಸರ್ವಸಂಶಯು ನಿವೃತ್ತಿಯಂ ಮಾಡಿ ನಿಜವನರಿದು ಪರಮಾನಂದ ಸುಖಿಯಾದ ಮಹಂತನು ಮುಂದೆ ತನ್ನರಿವ ರತು ಮರಹು ನಷ್ಟವಾಗಿ ಮಹಾಲಿಂಗದಲ್ಲೈಕ್ಯವಾದ ಭೇದವೆಂತಿರ್ದುದೆಂದಡೆ ಮುಂದೆ ಐಕ್ಯ ಸ್ಥಲವಾಹುದು.

ಪದ

ಅರಿಯಲಿಲ್ಲ ಮರೆಯಲಿಲ್ಲ ನೆರೆತಿಳಿದು ಕುರುಹಳಿದ ಲಿಂಗೈಕ್ಯನು ||ಪ||
ಯತೋವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ ಎಂಬ ಶ್ರುತಿಯ ಮತವನು ಹಿಡಿವನಲ್ಲ। ಅತಿಶಯದ ಘನಲಿಂಗ ದಿಟಗಟಿಸಿ ಸ್ವಯವಾಗಿ ವೃತ ಗಮನ ರಹಿತ ತಾ ಲಿಂಗೈಕ್ಯನು ||೧||

ಭರ ಭರದಿಯುರವಣೆಯು ಹರಿವ ಪ್ರಕೃತಿಯ ಜಲದ ತೆರೆ ತೆರೆಯ ಲಂಘನೆಯ ಭರಿತನಲ್ಲಿ। ಶರಿರಧಾರನುವಲ್ಲ ಸಬುದ ಮುಗುದನುವಲ್ಲ ಪರಮ ಘನರಹಿತ ತಾ ಲಿಂಗೈಕ್ಯನು ||೨||

ಒಪ್ಪಿಗೆಟ್ಟಾರು ದರ್ಶನ ಗತಿಯ ಮತಿವಿಡಿಯಲಿಪ್ಪದಲ್ಲಿ ಸವೆದ ಬಹು ಭಾಷೆಯಲ್ಲಿ || ಇಪ್ಪನು ಅಷ್ಟ ತನುವಿನ ಹಂಗ ಹರಿದು ತಾನಪ್ಪಿ ವೈಮರೆದ ಅತ ಲಿಂಗೈಕ್ಯನು ||೩||

ಪ್ರಾಣ ಚೇತನವಿಹಿದು ಗಮನ ರೂಪಿಸುವಲ್ಲಿ ನಿಷ್ಪ್ರಾಣಿಯಾಗಿ ಜಡ ದೇಹಿಯಲ್ಲ। ಕಾಣಲಿಕೆ ಬಯಲೆಂಬ ಮೂರುತಿ ತಾನಲ್ಲ ಹೂಣ ಹೊಕ್ಕೆರಡಳಿದ ಲಿಂಗೈಕ್ಯನು ||೪||

ಸಂಭ್ರಮದ ನುಡಿಯು ಸಡಗರದವನು ತಾನಲ್ಲ ಎಂಬನಲ್ಲಿ ಎನಿಸಿಕೊಂಬನಲ್ಲ ನೋಡಾ। ಇಂಬಿನಂದಾದಿಯಲ್ಲಿ ತಾ ನಿಂದ ನಿಲವ ಸುಜ್ಞಾನ ಭರಿತ ಶ್ರೀ ಕೂಡಲಚನ್ನಸಂಗೈಕ್ಯನು ||೫||

## ೨೭ ಸರ್ವಾಚಾರ ಸಂಪತ್ ಸ್ಥಲ

**ಸೂತ್ರ:**— ಇಂತು ಶ್ರೀಮನ್ಮಹಲಿಂಗದಲೈಕ್ಯನಾದ ಲಿಂಗೈಕ್ಯನಲ್ಲಿ ಷಟ್‌ಸ್ಥಲ ಸಂಪನ್ನವಾದ ಸರ್ವಾಚಾರವು ಅಡಗಿದ್ದ ಭೇದವೆಂತಿರ್ದುದೆಂದಡೆ ಮುಂದೆ ಸರ್ವಾಚಾರ ಸಂಪತ್‌ಸ್ಥಲವಾದುದು.

ಪದ—ನುಡಿಗಳು

ಶಿವನೆ ಬಸವಣ್ಣನ ರೂಪಾಗಿ ಅವಿರಳ ತತ್ವವಾಗಿರುತಿರ್ಪ ॥ಪ॥

ಪ್ರಥ್ವಿಯಂಗವಾಗಿ ಅವಿತತವಿಲ್ಲದೆ ಮಥನದಿ ಭಕ್ತ ಸುಚಿತ್ತಹಸ್ತ ದೊಳಾಚಾರ ಲಿಂಗವಾಗಿರ್ದು ಮತ್ತೆ ನಾಸಿಕದಲ್ಲಿ ಭೋಗಿಪ್ಪ ॥೧॥

ಜಲವೆಯಂಗವಾಗಿ ಕುಲವನಳಿವ ಬಲುಹುಳ್ಳನಾಗಿ ಮಹೇಶ್ವರನ ಬುದ್ಧಿಯ ಬಲೆಯೊಳು ಗುರುಲಿಂಗವಾಗಿ ಸಿಲುಕಿ ಜಿಹ್ವೆಯೊಳು ಭೋಗಿಪ್ಪ ॥೨॥

ಅಗ್ನಿಯಂಗವಾಗಿಪ್ಪ ಪ್ರಸಾದಿಯು ಹಂಗಿಲ್ಲದ ನಿರಹಂಕಾರ ಹಸ್ತದಿ ಭಂಗವಳಿದು ಶಿವಲಿಂಗವಾಗಿರ್ದು ಕಂಗಳಲ್ಲಿ ರೂಪವ ಭೋಗಿಪ್ಪ ॥೩॥

ಅನಿಲನಂಗವಾಗಿಪ್ಪ ಪ್ರಾಣಲಿಂಗಿಯು ಸುಮನವೆಂಬ ಹಸ್ತದೊಳನು ಶ್ರುತ ಘನ ಮಹಾಚರಲಿಂಗವಾಗಿ ಸಿಲುಕಿ ಸ್ಪರ್ಶನೇಂದ್ರಿಯದಲ್ಲಿ ಭೋಗಿಪ್ಪ ॥೪॥

ಆಕಾಶವೇ ಅಂಗವಾಗಿಪ್ಪ ಶರಣನ ವಿಕಸಿತ ಸುಜ್ಞಾನಹಸ್ತದಿ ವಿಕೋಪ್ರಣವಲಿಂಗವಾಗಿರ್ದು ಶ್ರೋತ್ರೇಂದ್ರಿಯದಲ್ಲಿ ಭೋಗಿಪ್ಪ ॥೫॥

ಭಾವಾಂಗಹಸ್ತವಾದ ಶಿವೈಕ್ಯಂಗೆ ಸ್ವಾನುಭಾವ ಸಮರಸದಲ್ಲಿ ಅನು ಭಾವದಿ ಮಹಲಿಂಗವಾಗಿರ್ದು ವಿವರಿಸಬಾರದ ಬೋಗ ಭೋ. ॥೬॥

ಸರ್ವಾಂಗವು ಲಿಂಗ ಸಂಗಿಯಾಗಿರ್ದು ಸರ್ವೇಂದ್ರಿಯ ಸನುಮತವಾಗಿ ನಿರ್ವಾಹ ಕೂಡಲ ಚನ್ನಸಂಗಯ್ಯನಲ್ಲಿ ಉರ್ವಿಗೆ ಶರಣ ಮಹಂತ ಭೋ ॥೭॥

---

## ೨೮ ಏಕಭಾಜನಸ್ಥಲ

**ಸೂತ್ರ:**— ಇಂತು ಸರ್ವಾಚಾರ ಸಂಪತ್ತು ಸರ್ವಾಂಗದಲ್ಲಿ ಲೀಯ್ಯ ವಾದ ಲಿಂಗೈಕ್ಯಂಗೆ ಆ ಮಹಾಲಿಂಗವೆ ಭಾಜನವಾಗಿ ಅಂತಪ್ಪ ಮಹಲಿಂ ಗಕ್ಕೆ ಲಿಂಗೈಕ್ಯನೇ ಭಾಜನವಾಗಿ ಉಭಯ ನಾಮವಡಗಿ ಏಕ ಭಾಜನವಾ ಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಏಕ ಭಾಜನಸ್ಥಲವಾದುದು.

ಲಿಂಗದೊಳೆರಡಿಲ್ಲದೆ ಸರ್ವಾಂಗವ ಲಿಂಗದೊಳೊಡವೇದಿಸಿದ । ಲಿಂಗೈ ಕ್ಯಂಗೇಕಭಾಜನವಲ್ಲದೆ ಉಳಿದವರಿಗೆ ಸಾಧ್ಯವೇ ಅಯ್ಯಾ ॥ಪ॥

ಅಂಗಗುಣವಳಿಯದೆ ಪ್ರಾಣನ ಧರ್ಮ ಹಿಂಗದೆ ಅಂತರಂಗದ ಕರಣ ಗುಣ ಕೆಡದೆ । ಲಿಂಗದೊಳು ತಮಗೇಕಭಾಜನವೆಸಾತಿರ್ಪರಜ್ಞಾನ ಭಾವ ಭ್ರಮಿತರನೇನೆಂಬೆ ॥೧॥

ಒಡಲೆಂಬ ಭಾಜನದಲ್ಲಿ ಸರ್ವೇಂದ್ರಿಯವನಡಗಿಸಿ ಸಕಲ ಸನ್ನಿಹಿತ ಲಿಂಗಕ್ಕೆ ಪರಮ । ಶಿವರತಿಯಿಂದ ಸರ್ವಾಂಗ ಸುಖವನೆರಡಿಲ್ಲದೆ ಸಲಿಸ ಬಲ್ಲಾತನೆ ಲಿಂಗಮೋಹಿ ॥೨॥

ಮನದೊಳಳವಡಿಸಿರ್ದ ನೆನಹೆಂಬ ದ್ರವ್ಯವನು ಗುರುಲಿಂಗ ಸಂಬಂಧ ಸದ್ಭಾವದಾ । ಪರಿಯಾಣದಲ್ಲಿ ಗಡಣಿಸಿ ಸಮರ್ಪಿಸಬಲ್ಲಡಾತನೆ ಲಿಂಗೈಕ್ಯ ನೋಡಾ ॥೩॥

ಭಾವದ ಭ್ರಮೆ ಹಿಂಗಿ ಮೋಹಮತ್ಸರ ಕೆಟ್ಟು ತಾನೆ ಸದಾ ಸುಖಿ ಯಾದ ಲಿಂಗೈಕ್ಯನು । ಜ್ಞಾನ ಪ್ರಸನ್ನದೊಳು ಲಿಂಗನೇಮ ಸುಖವನ್ನು ಭೋಗಿಸುವನೆರಡಿಲ್ಲದೆ ॥೪॥

ತೆರನನರಿದರಿವೆಂಬ ದಿವ್ಯ ಭಾಜನದಲ್ಲಿ ಪರಮಾನಂದ ಪದಾರ್ಥವನು ಸಲಿಸಿ । ಕೂಡಲಚನ್ನಸಂಗನಲ್ಲಿ ಸಮವೇಧಿಸಿ ಎರಡುಯದಿರ್ಪಾತನೇ ಲಿಂಗ ಮೋಹಿ ॥೫॥

---

## ೨೯. ಸಹಭೋಜನ ಸ್ಥಲ.

**ಸೂತ್ರ:**- ಇಂತು ಮಹಾಲಿಂಗದಲ್ಲಿ ಏಕ ಭಾಜನವಳವಟ್ಟ ಲಿಂಗೈ ಕ್ಯನು ಆ ಮಹಾಲಿಂಗದ ಸಮರಸ ಭಾವದಿಂದ ಪರಮಾನಂದ ಸುಖದಲ್ಲಿ ಸಮಭೋಗಿಯಾಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಸಹ ಭೋಜನ ಸ್ಥಲವಾದುದು.

ಪದ

ಹಸಿವುತೃಷೆನಿದ್ರೆ ಜಡ ವಿಷಯದೊಡನುಂಬ ದು । ವ್ಯಸನಿಗಹುದೆ ಲಿಂಗ ಸಹ ಭೋಜನಾ ॥ಪ॥

ಅಂಗದಜ್ಞಾನಗುಣ ಸಂಗದೊಳಗಿರ್ದು ಶಿವಲಿಂಗದೊಳು ಸಹ ಭೋಜ ನವ ಮಾಡುವಾ । ಭಂಗಿತರಿಗಿಹ ಪರವು ಹಿಂಗಿ ನರಕದ ಪಥದ ಜಂಗುಳಿ ಕೂಡಿಹರು ಕಲ್ಪಾಂತರಾ ॥೧॥

ಕ್ರೋಧ ಕೂಗುತ ಕಾಮ ಕಾಡುತ್ತ ಮೋಹ ಮದ ಭೇದಿಸುತ ಲೋಭ ಮತ್ಸರ ತನುವನೂ । ಸಾಧಿಸುತ್ತಿರಲು ಶಿವಭಕ್ತನಾದಡೆ ಪ್ರಸಾದವಿಲ್ಲದೊಡ ಹುದೆ ತನಗೆ ನೇಹ ಭೋಜನಾ ॥೨॥

ಜನನ ಮರಣ ಸ್ಥಿತಿಗಳೊಳು ಸಿಲ್ಕಿ ಸಂಸಾರವನು ಕೂಡಿಕೊಂಡಿರ್ದು ತಾವು ಲಿಂಗ ಎನುತ । ಜ್ಞಾನದ ಮಾತು ಜಾಣಿಗಿ ಲಿಂಗದ ಕೂಡೆ ಉಣ ಕಲಿತ ಪಾತಕರ ನೋಡೆ ಬಹುಪಾಪ ॥೩॥

ಅರ್ಪಿತಾನರ್ಪಿತದೊಳಿಪ್ಪ ಭೇದವು ದೇಹದಪ್ಪುಗೆವಿಡಿದು ಗ್ರಹಿಸೆ ಇಂದ್ರಿಯ ಮುಖ । ದರ್ಪಗಳ ಕೆಡಿಸಿ ಶಿವಗರ್ಪಿತಾವಧಾನವಾಗಿಪ್ಪ ಮುಖ ವ್ಯಳ್ಳಡದು ಸಹ ಭೋಜನಾ ॥೪॥

ಭ್ರಮೆಯಳಿದು ಲೌಕಿಕವ ಸಮನಿಸದೆ ಲಿಂಗದೊಳು ಅಮಳ ಭಾವೈ ಕ್ಯದಿಂದೊಂದುಗೂಡಿ । ಕಮಲನಾಳದ ಭೇದ ಸಮ ಸೂತ್ರ ಸಂಗನೊಳು ಸಮನಿಸಲು ಸಹ ಭೋಜನ ಮದಪ್ಪುದು ॥೫॥

ಇಂತೆಂಬಲ್ಲಿಗೆ ಶ್ರೀ ಮದೇಕೋತ್ತರ ಶತಸ್ಥಲಂಗಳಲ್ಲಿ ಪಿಂಡಾದಿ ಸಹಜ ಮಾಟಾಂತ್ಯವಾದ ಹದಿನೈದು ಸ್ಥಲಂಗಳಿಂದ ಒಂದನೇ ಭಕ್ತಿ ಸ್ಥಲಕ್ಕೆ ಮಹೇ ಶಾದಿ ಭಕ್ತದೇಹಿಕ ಲಿಂಗಾಂತ್ಯಮಾದೊಂಭತ್ತು ಸ್ಥಲಂಗಳಿಂದ ಎರಡನೇ ಮಹೇಶಸ್ಥಲಕ್ಕೆ ಪ್ರಸಾದಿಯಾದೀಪ್ರಸಾದ ಮಹತ್ಮೆಯಂತ್ಯವಾದೇಳು ಸ್ಥಲಂಗ ಳಿಂದ ಮೂರನೇ ಪ್ರಸಾದಿ ಸ್ಥಲಕ್ಕೆ ಪ್ರಾಣಲೀಂಗಿಯಾದಿ ಅಂಗಲಿಂಗಾಂತ್ಯ ವಾದೈದು ಸ್ಥಲಂಗಳಿಂದ ನಾಲ್ಕನೇ ಪ್ರಾಣಲಿಂಗಿ ಸ್ಥಲಕ್ಕೆ ಶರಣಾದಿ ಶೀಲ ಸಂಪಾದನಾಂತ್ಯವಾದ ನಾಲ್ಕು ಸ್ಥಲಂಗಳಿಂದ ಐದನೇ ಶರಣ ಸ್ಥಲಕ್ಕೆ ಐಕ್ಯಾದಿ ಸಹ ಭೋಜನಾಂತ್ಯವಾದ ನಾಲ್ಕು ಸ್ಥಲಂಗಳಿಂದ ಆರನೇ ಐಕ್ಯ ಸ್ಥಲಕ್ಕೆ ಸಂದ ಅಂಗ ಸ್ಥಲಂಗಳು ನಾಲ್ವತ್ತುನಾಲ್ಕು ಮುಗಿದುದು.

---

## ೩೦ ದೀಕ್ಷಾಗುರುಸ್ಥಲ

**ಸೂತ್ರ**:— ಇಂತು ಪಿಂಡಸ್ಥಲಾದಿಯಾಗಿ ಸಹ ಭೋಜನಸ್ಥಲಾಂ ತ್ಯವಾದ ನಾಲ್ವತ್ತು ನಾಲ್ಕು ಅಂಗಸ್ಥಲಂಗಳ ಭೇದವು. ಭಕ್ತಾದ್ಯೈಕ್ಯಾಂತ ಷಡಂಗ ಸ್ಥಲಂಗಳಲ್ಲಡಗಿ ಈ ಷಡಂಗ ಸ್ಥಲಂಗಳೇ ಅಂಗವಾಗಿರ್ದ ಮಹಂತನ ಮನಸ್ಥಲದಲ್ಲಿ ಮನೋಲೀಯ್ಯವಾದ ಲಿಂಗಸ್ಥಲದ ವಿವರವು ಎಂತಿರ್ದು ದೆಂದಡೆ, ಮುಂದೆ ದೀಕ್ಷಾಗುರುಸ್ಥಲವಾದುದು.

ಪದ—ರಾಗ—ಆಹರಿ

ಗುರುವೇ ನಮೋನಮೋ ಶ್ರೀಮತ್ ಗುರುವೇ ನಮೋನಮೋ ॥ಪ॥

ಅನಾದಿಮಲ ಸಂಸಾರದ ಜನನ ಮರಣ ಭವ ದುಃಖವ। ನೆನೆಯಲೀಯ್ಯದೆ ಶಿವಲಿಂಗವ ಮನದೊಳಗಿರಿಸಿದಾ ॥೧॥

ವಿಷಮ ಸಂಸಾರದ ಕೊಗ್ಗೆಸರೊಳಂಧಕನಂದದಿ। ದೆಶೆಗಾಣದೆ ಬಿದ್ದನ ನೆಬ್ಬಿಸಿ ಶಿವಲಿಂಗವನೊಲಿದಿತ್ತಾ ॥೨॥

ಕೀಟಕ ನರನಾನಿದನೆತ್ತ ಪಿನಾಕಿಯ ಮಹಾಘನವಿದೆತ್ತ ಸೂಕ್ಷ್ಮ ಶುದ್ಧನನೊಲಿದಾಲೋಕಿಸಿ ಪರಮಾರ್ಥವನೆನಗಿತ್ತ ॥೩॥

ಇಡಕಲಿಸಿದ ವಿಭೂತಿಯ ತೊಡಕಲಿಸಿದ ರುದ್ರಾಕ್ಷಿಯ ಅಡಿಗಡಿಗೆ ಶ್ರೀ ಪಂಚಾಕ್ಷರಿಯೊಡೆಯನನರ್ಚಿಸ ಕಲಿಸಿದಾ ॥೪॥

ನಾಹಮೆಂಬಜ್ಞತೆಯನು ಕೋಹಮೆಂಬ ಮರವೆಯನು ಸೋಹಮೆಂದೆನಿಸದೆ ದಾಸೋಹಮೆಂದೆನಕಲಿಸಿದಾ ॥೫॥

ತ್ವಾಧತ್ತೇಭಿಯೆಂಬ ಶ್ರುತಿಯ ಸಂಪಾದಿತ ಶಿವಲಿಂಗದಲ್ಲಿ ಪಾದೋದಕ ಪ್ರಸಾದವನಾದರದಿಂದುಣಕಲಿಸಿದಾ ॥೬॥

ಅಜ್ಞಾನತಿಮಿರಾಂಧಕಂಗೆ ಶಿವಜ್ಞಾನಾಂಜನವ ನೆಚ್ಚಿ ಪ್ರಾಜ್ಞನೆನಿಸಿ ಶಿವಲಿಂಗದ ಸುಜ್ಞಾನವನೊಲಿದಿತ್ತಾ ॥೭॥

ಭೂತಗ್ರಾಮದೊಳು ಅನುಕೃತಯಾತೇ ರುದ್ರನೆಂಬ ಶ್ರುತಿಯ ನೀತಿವಿಡಿದು ಲಿಂಗ ಪರಂಜ್ಯೋತಿಯ ಬೆಳಗಿನೊಳಗಿರಿಸಿದಾ ॥೮॥

ಅಯಂ ಮೇಹಸ್ತೋ ಭಗವಾನ್ ಅಯಂಮೇ ಭಗವತ್ತರಃ ಅಯಂಮೇ ವಿಶ್ವಭೇಷಜ ಎಂಬ ಸ್ವಯ ಸ್ವರೂಪನ ಮಾಡಿ ತೋರಿದಾ ॥೯॥

ನಾ ರುದ್ರೋ ಸಂಸ್ಮರೇದ್ರುದ್ರ ನಾರುದ್ರೋ ರುದ್ರಮರ್ಚಯೇತ್ ನಾರುದ್ರೋ ರುದ್ರಾತ್ಮನೆಂಬೀ ಭೂರುದ್ರನ ಮಾಡಿ ತೋರಿದಾ ॥೧೦॥

ರುದ್ರಾತ್ಮನೋ ರುದ್ರಪರ ರುದ್ರಾಂಶೋ ರುದ್ರ ಭಾಸಿತ ಸದ್ರೂಪಾಕಾರಚಿದ್ರೂಪ ವೀರ ಸೊಡ್ಡಳ ಲಿಂಗವೇ ॥೧೧॥

---

## ೩೧. ಶಿಕ್ಷಾಗುರು ಸ್ಥಲ.

**ಸೂತ್ರ:—** ಇಂತು ಶ್ರೀಗುರುಪದೇಶ ಕಾರಣವಾಗಿ ದೀಕ್ಷಾ ಗುರು ಸ್ವರೂಪವನ್ನೈದಿದ ಮಹಾಲಿಂಗವು ಭಕ್ತನಂಗದಲ್ಲಿ ಶಿಕ್ಷಾಮುಖದಿಂದ ಬೋಧಾ ಸ್ವರೂಪವನ್ನೈದಿದ ಭೇದವೆಂತಿರ್ದುದೆಂಡಡೆ ಮುಂದೆ ಶಿಕ್ಷಾಗುರುಸ್ಥಲವಾದುದು.

॥ಪದ॥ ರಾಗ ಲಹರಿ

ಗುರುವೆ ಶರಣು ಎನ್ನ ಗುರುವೆ ಶರಣು । ಎನ್ನ ಪರಿಭವವ ಕಳೆದ ಶಿಕ್ಷಾಗುರುಲಿಂಗವೇ ॥ಪಲ್ಲವ॥

ಒರೆದೊರೆದು ಭಕ್ತಿಯನು ಬಗೆದೋರಿ ಮರವೆಯನು ಹರಿದ ಸಂಸಾರ ವನು ಕೆಲಕೊತ್ತಿಸಿ । ಇರುಳು ಪಗಲೆನ್ನದನವರತ ಬೋಧಿಸಿ ಎನ್ನ ಪರವು ಸುಖದೊಳಿರಿಸಿ ಪೊರೆದ ಗುರುವೆ ॥೧॥

ಶ್ರೀಗಂಧವನು ಕಡಿದು ಕೊರೆದು ಸಣ್ಣಿಸುವಂತೆ ಕರುಣದಿಂದೆನ್ನ ಪೂರ್ವಾಪರವನು । ಶಿರವ ಹಿಡಿದೆತ್ತಿ ತೋರಿಸಿ ಭಕ್ತಿಸಂಪದವ ದೊರಕೊ ಳಿಸಿ ಪಾಲಿಸಿದ ಪರಮ ಗುರುವೆ ॥೨॥

ಅಂಗ ಲಿಂಗದ ನೋಟವನು ಪ್ರಾಣ ಭಾವದೊಳು ಹಿಂಗದಿರಿಸುವ ಭೇದವನು ತೋರಿಸಿ ॥ ಅಂಗದಾಚಾರಸ್ಥಲದೊಳು ನೆಲಸಿರುತಿರ್ಪ ಸಂಗಚಿ ನ್ಮೂರ್ತಿ ಶ್ರೀ ಗುರುಲಿಂಗವೇ ॥೩॥

ಕಾಯ ಪ್ರಸಾದವಿದು ಪ್ರಾಣ ಪ್ರಸಾದವಿದು ಭಾವ ಪ್ರಸಾದವಿದು ಎಂದು ತೋರಿ ॥ ಆಯಸವ ಬಿಡಿಸಿ ರಾಯಸದೊಳಿರಿಸಿದ ಮಾಯಾ ರಹಿತ ಎನ್ನ ಗುರುಲಿಂಗವೇ ॥೪॥

ಒಳಗೆ ನರುಹಿಸಿ ತಿಳುಹಿ ಹೊರಗೆ ಬೋಧಿಸಿ ನಿಲಿಸಿ ಒಳಹೊರ ಗೆಂದೆಂಬವೆರಡ ಕೆಡಿಸಿ ॥ ಕಳೆಯು ಲಿಂಗದೊಳೊಚ್ಚತವನೊಪ್ಪುಗೊಳಿಸಿದ ಕರುಣಿ ಗುರುಪುರದ ಮಲ್ಲನಾಥ ಗುರುವೇ ॥೫॥

## ೩೨. ಜ್ಞಾನ ಗುರುಸ್ಥಲ.

**ಸೂತ್ರ:**- ಇಂತು ಶಿಕ್ಷಾಗುರು ಸ್ವರೂಪವನ್ನೈದಿದ ಲಿಂಗವು ಸದ್ಭಕ್ತನಂಗದಲ್ಲಿ ಸುಜ್ಞಾನ ಕಟಾಕ್ಷೆಯ ಕಣ್ಧರವೆಯ ನಿಮಿತ್ತ ಜ್ಞಾನಸ್ವರೂಪವನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಜ್ಞಾನ ಗುರುಸ್ಥಲವಾದುದು.

॥ಪದ॥ ರಾಗ ಬೌಳಿ

ಶರಣು ಶರಣು ಎನ್ನ ಗುರುವೆ ಶರಣಯ್ಯ । ಶರಣು ಉಪಮಾತೀತ ಜ್ಞಾನ ಗುರುವೆ ॥ಪ॥

ಲಿಂಗ ಜಂಗಮವೆ ಘನವೆಂದು ಪ್ರಸಾದವನು ಹಿಂಗದಾ ನಿಜಪದವ ತೋರಿದ ಗುರುವೆ ॥ ಕ್ರಿಯಾ ಜ್ಞಾನವೇ ಮನವೆಂದು ಪಾದೋದಕವ ಸಂಗಸನುಮತವಾಗಿತ್ತ ಗುರುವೆ ॥೧॥

ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣೈಕ್ಯ ಸ್ಥಲದಲ್ಲಿ ನಡೆದ ಗುರುವೆ ॥ ಸೋಹಿ ದಾಸೋಹಿ ನೀನಾಗಿ ಎನ್ನುವನು ತಪ್ಪಿಸಿ ಪೊರೆದೆನ್ನ ಪರಮ ಗುರುವೆ ॥೨॥

ನಾದ ಬಿಂದು ಕಳಾತೀತ ಮಹಾ ಘನದ ॥ಆದಿ ಲಿಂಗ ಅನಾದಿ ಶರಣ ಗುರುವೆ ॥ ಮಿಂಚು ಮಿಂಚನೆ ಕೂಡಿದಂತಿರದ ಸಂಚುವನು ಏನೆನ್ನಬಹುದು ಗುರುವೆ ॥೩॥

ಅರಿವು ಕುರುಹನೆ ಅರಸಿ ಬರಲು ಆ ಕುರುಹು ಅರಿವನೊಳಕೊಂಡುದನು ಅರಿದ ಗುರುವೆ ॥ ಜ್ಞಾತೃ ಜ್ಞಾನ ಜ್ಞೇಯವೆಂಬ ತ್ರಿವಿಧದ ಮಾತುವನು ಹಿಂಗಿದ ಜ್ಞಾನಗುರುವೆ ॥೪॥

ಭಾವಾ ಭಾವವನೆ ಭಾವಿಸಲು ಅನುಭಾವ ನಿರ್ಭಾವವೇಕಾರ್ಥವೆಂದರಿದ ಗುರುವೆ ॥ ಕೂಡಲ ಚನ್ನ ಸಂಗ ನಿಮ್ಮವನು ಬಸವಲಿಂಗ ಬಸವ ಎಂಬ ಗುರುವೆ ॥೫॥

## ೩೧. ಕ್ರಿಯಾಲಿಂಗ ಸ್ಥಲ.

**ಸೂತ್ರ:**- ಇಂತು ದೀಕ್ಷಾಗುರು ಶಿಕ್ಷಾಗುರು ಜ್ಞಾನಗುರುವೆಂಬ ತ್ರಿವಿಧ ಸ್ಥಲವೇಕವಾದ ಲಿಂಗವು ಭಕ್ತನಂಗದ ಮೇಲೆ ಕರತಳಾಮಳಕದಂತೆ ಇಷ್ಟ ಲಿಂಗ ಸ್ವರೂಪವನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಕ್ರಿಯಾಲಿಂಗ ಸ್ಥಲವಾದುದು.

೩೩೧. ನಿರಾಮಯವೆಂಬ ಮಾಹೇಶ್ವರಂಗೆ ನಿರಾಮಯವೆ ಅಂಗ, ನಿರಾಮಯವೆ ಹಸ್ತ, ನಿರಾಮಯವೆ ಗುರುಲಿಂಗ, ನಿರಾಮಯ ಮುಖದಲ್ಲಿ ನಿರಾಮಯಾನಂದವೆಂಬ ಸುಖವನೆ ಸಮರ್ಪಣವಂ ಮಾಡಿ, ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೩೨. ನಿರಾಮಯ ಪ್ರಸಾದಿಗೆ, ನಿರಾಮಯವೇ ಅಂಗ, ನಿರಾಮಯವೇ ಹಸ್ತ, ನಿರಾಮಯವೇ ಶಿವಲಿಂಗ, ನಿರಾಮಯವೆಂಬ ಮುಖದಲ್ಲಿ ನಿರಾಮಯ ಪ್ರಾಣಾನಂದವೆಂಬ ಸುಖವ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲ ಸಂಗಮ ದೇವಾ.

೩೩೩ ನಿರಾಮಯ ಪ್ರಾಣಲಿಂಗಿಗೆ, ನಿರಾಮಯವೆ ಅಂಗ, ನಿರಾಮಯವೆ ಹಸ್ತ, ನಿರಾಮಯವೇ ಜಂಗಮಲಿಂಗ, ನಿರಾಮಯವೆಂಬ ಮುಖದಲ್ಲಿ ನಿರಾಮಯಾನಂದವೆಂಬ ಸುಖವನೆ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೩೪ ನಿರಾಮಯ ಶರಣಂಗೆ ನಿರಾಮಯವೆ ಅಂಗ ನಿರಾಮಯವೆ ಹಸ್ತ ನಿರಾಮಯವೆ ಪ್ರಸಾದಲಿಂಗ ನಿರಾಮಯವೆಂಬ ಮುಖದಲ್ಲಿ ನಿರಾಮಯಾನಂದವೆಂಬ ಸುಖವ ಸಮರ್ಪಣವಂ ಮಾಡಿ, ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೩೫. ನಿರಾಮಯ ಐಕ್ಯಂಗೆ ನಿರಾಮವೆ ಅಂಗ, ನಿರಾಮಯವೆ ಹಸ್ತ, ನಿರಾಮಯಪೆ ಮಹಲಿಂಗ, ನಿರಾಮಯವೆಂಬ ಮುಖದಲ್ಲಿ ನಿರಾಮಯಾನಂದವೆಂಬ ಸುಖವ ಸಮರ್ಪಣವಂ ಮಾಡಿ, ತೃಪ್ತಿಯನೆ ಭೋಗಿಸಿ ನಿರಾಮಯಾತೀತವೆಂಬ ನಿರ್ವಯಲನೆಯ್ದಿದನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೩೩೬. ಇನ್ನು ನಿರಂಜನ ದಳ ಚಕ್ರಂಗಳ ಭೇದವೆಂತೆಂದಡೆ, ಪರತತ್ವ ಪೃಥ್ವಿಎಂದು, ಪರತತ್ವ ಅಪ್ಪುವೆಂದು ಪರತತ್ವ ತೇಜವೆಂದು ಪರತತ್ವ ವಾಯುವೆಂದು, ಪರತತ್ವ ಆಕಾಶವೆಂದು ಪರತತ್ವ ಹೃದಯವೆಂದು ಆರು ಪ್ರಕಾರವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೩೭. ಪರತತ್ವ ಪೃಥ್ವಿಯಮೇಲೆ ನಿರಂಜನಾಧಾರ ಚಕ್ರ, ಅಲ್ಲಿಯ ಪದ್ಮ ಐನೂರನಾಲ್ವತ್ತು ದಳಪದ್ಮ, ಆ ಪದ್ಮದ ವರ್ಣ ಅರುವತ್ತು ಸಾವಿರ

ದಾರು ನೂರು ಕೋಟಿ ಸೂರ್ಯಚಂದ್ರಾಗ್ನಿ ಪ್ರಕಾಶ, ಅಲ್ಲಿಯಕ್ಷರ ಐನೂರ ನಾಲ್ವತ್ತಕ್ಷರ ಆ ಅಕ್ಷರ ವಾಚಾತೀತವಾಗಿಹುದು. ಅಲ್ಲಿಯ ಶಕ್ತಿನಿಃಕಲಾ ಶಕ್ತಿ, ಅಲ್ಲಿಯ ನಾದ ಚಿನ್ನಾದ, ಅಚಲ ಬ್ರಹ್ಮನಧಿದೇವತೆ, ಅಲ್ಲಿಯಬೀಜಾಕ್ಷರ ಅಖಂಡ ಜ್ಯೋತಿರ್ಮಯವಾಗಿಹ ಗೋಳಾಕಾಕಾರ ಪ್ರಣವ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೩೮. ಪರತತ್ವದ ಅಪ್ಪುವಿನ ಮೇಲೆ ನಿರಂಜನ ಸ್ವಾಧಿಷ್ಠಾನಚಕ್ರ; ಅಲ್ಲಿಯ ಪದ್ಮ ನಾನೂರು ಐವತ್ತು ದಳಪದ್ಮ, ಆ ಪದ್ಮವರ್ಣ ಎಪ್ಪತ್ತು ಸಾವಿರದಾರು ನೂರು ಕೋಟಿಸೂರ್ಯ ಚಂದ್ರಾಗ್ನಿ ಪ್ರಕಾಶದ ವರ್ಣ, ಅಲ್ಲಿಯ ಅಕ್ಷರ ನಾನೂರೈವತ್ತು ಅಕ್ಷರ, ಆ ಅಕ್ಷರವು ನಾಮಾತೀತವಾಗಿಹುದು. ಅಲ್ಲಿಯ ಶಕ್ತಿ ಆನಂದಶಕ್ತಿ, ಅಚಲಾನಂದ ಬ್ರಹ್ಮವೇ ಅಧಿದೇವತೆ, ಅಲ್ಲಿಯ ನಾದ ಪರಮಾನಂದ, ಅಲ್ಲಿಯ ಬೀಜಾಕ್ಷರ ಪರಬ್ರಹ್ಮ ಸ್ವರೂಪವಾಗಿಹ ಪರಮ ಪ್ರಣವ ನೋಡಾ ಅಪ್ರಮಾಣ ಕೂಡಲಸಂಗಮ ದೇವಾ.

೩೩೯ ಪರತತ್ವ ತೇಜದ ಮೇಲೆ ನಿರಂಜನ ಮಣಿಪೂರಕ ಚಕ್ರ, ಅಲ್ಲಿಯ ಪದ್ಮ ಮುನ್ನೂರರುವತ್ತು ದಳಪದ್ಮ , ಆ ಪದ್ಮದ ವರ್ಣ ಎಂಬತ್ತು ಸಾವಿರದನೂರು ಕೋಟಿಸೂರ್ಯ ಚಂದ್ರಾಗ್ನಿ ಪ್ರಕಾಶದ ವರ್ಣ, ಅಲ್ಲಿಯಕ್ಷರ ಮುನ್ನೂರರುವತ್ತು ಅಕ್ಷರ, ಆ ಅಕ್ಷರ ವರ್ಣಾತೀತವಾಗಿಹುದು. ಅಲ್ಲಿಯ ಶಕ್ತಿ ನಿತ್ಯಾನಂದ ಶಕ್ತಿ, ವಿಮಲ ಬ್ರಹ್ಮವೆ ಅಧಿದೇವತೆ, ಅಲ್ಲಿಯ ನಾದ ಅಮಲನಾದ, ಅಲ್ಲಿಯ ಬೀಜಾಕ್ಷರ ಅಖಂಡ ಮಹಾಜ್ಯೋತಿ ಪ್ರಣವ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೪೦. ಪರತತ್ವ ವಾಯುವ ಮೇಲೆ ನಿರಂಜನ ಅನಾಹತ ಚಕ್ರ ಅಲ್ಲಿಯ ಪದ್ಮ ಇನ್ನೂರೆಪ್ಪತ್ತು ದಳ ಪದ್ಮ, ಆ ಪದ್ಮದ ವರ್ಣ ತೊಂಭತುಸಾವಿರದಾರು ನೂರುಕೋಟಿ ಸೂರ್ಯಚಂದ್ರಾಗ್ನಿ ಪ್ರಕಾಶದ ವರ್ಣ, ಅಲ್ಲಿಯಕ್ಷರ ಇನ್ನೂರೆಪ್ಪತ್ತಕ್ಷರ ಆ ಅಕ್ಷರ ತತ್ವಾತೀತವಾಗಿಹುದು. ಅಲ್ಲಿಯ ಶಕ್ತಿ ನಿರಾಮಯ ಶಕ್ತಿ, ವಿಮಲಾನಂದ ಬ್ರಹ್ಮವೇ ಅಧಿದೇವತೆ, ಅಲ್ಲಿಯ ನಾದ ನಿರಾಳನಾದ ಅಲ್ಲಿ ಬೀಜಾಕ್ಷರ ನಿರಂಜನ ಕಳಾಪ್ರಣವ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೪೧ ಪರತತ್ವಾಕಾಶದ ಮೇಲೆ ನಿರಂಜನ ವಿಶುದ್ಧಿ ಚಕ್ರ, ಅಲ್ಲಿಯ ಪದ್ಮ ನೂರೆಂಭತ್ತು ದಳ ಪದ್ಮ, ಆ ಪದ್ಮದ ವರ್ಣ ನೂರುಸಾವಿರದಾರು

ನೂರುಕೋಟಿ ಸೂರ್ಯಚಂದ್ರಾಗ್ನಿ ಪ್ರಕಾಶದ ವರ್ಣ, ಅಲ್ಲಿಯ ಅಕ್ಷರ ನೂರೆಂಭತ್ತು ಅಕ್ಷರ, ಆ ಅಕ್ಷರಜ್ಞಾನಾತೀತವಾಗಿಹುದು. ಅಲ್ಲಿಯ ಶಕ್ತಿ ನಿರಾಮಯಾನಂದ ಶಕ್ತಿ, ಆನಂದ ಬ್ರಹ್ಮವೆ ಅಧಿದೇವತೆ, ಅಲ್ಲಿಯ ನಾದ ನಿರಾಳಾನಂದವೆಂಬ ಮಹಾನಾದ, ಅಲ್ಲಿಯ ಬೀಜಾಕ್ಷರ ಅವಾಚ್ಯ ಪ್ರಣವ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೪೨. ಪರತತ್ವ ಹೃದಯದ ಮೇಲೆ ನಿರಂಜನ ಆಜ್ಞಾಚಕ್ರ, ಅಲ್ಲಿಯ ಪದ್ಮವಿಶ್ವತೊ ದಳಪದ್ಮ, ಆ ಪದ್ಮದ ವರ್ಣ ಅನೇಕ ಕೋಟಿ ಸೂರ್ಯ ಚಂದ್ರಾಗ್ನಿ ಪ್ರಕಾಶದ ವರ್ಣ ಅಲ್ಲಿಯ ಅಕ್ಷರ ವಿಶ್ವತೋಕ್ಷರ ಆ ಅಕ್ಷರ ವಿಶ್ವಾತೀತವಾಗಿಹುದು. ಅಲ್ಲಿಯ ಶಕ್ತಿ ನಿರಾಮಯಾತೀತಾನಂದವೆಂಬ ಮಹಾ ಗಣೇಶ್ವರಿ, ಅಲ್ಲಿಯ ನಾದ ಗುಹ್ಯನಾದ ನಿರಂಜನಾತೀತವೆಂಬ ಮಹಾ ಘನ ಲಿಂಗವೇ ಅಧಿದೇವತೆ, ಅಲ್ಲಿಯ ಬೀಜಾಕ್ಷರ ನಿರಂಜನ ಪ್ರಣವ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೪೩ ಇನ್ನು ನಿರಂಜನ ಷಡುಚಕ್ರದ ಮೇಲೆ ನಾಲ್ಕು ಚಕ್ರ ಉಂಟು. ಅದೆಂತೆಂದಡೆ, ರಹಸ್ಯಕ್ಕು ಅತ್ಯಂತ ರಹಸ್ಯವಾಗಿಹುದು. ಸೂಕ್ಷ್ಮಕ್ಕು ಅತ್ಯಂತ ಸೂಕ್ಷ್ಮವಾಗಿಹುದು. ಶೂನ್ಯಕ್ಕು ಅತ್ಯಂತ ಶೂನ್ಯ ವಾಗಿಹುದು; ಅಮಲಕ್ಕು ಅಮಲಾತೀತವಾಗಿಹುದೆಂದು ಚಕ್ರಾತೀತಾಗಮದಲ್ಲಿ ಪ್ರಸಿದ್ಧವಾಗಿ ಹೇಳುತ್ತಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೪೪. ಇನ್ನು ನಿರಂಜನ ಷಡುಚಕ್ರದ ಮೇಲಣ ನಾಲ್ಕು ಚಕ್ರಂಗಳ ಕ್ರಮ ವೆಂತೆಂದಡೆ, ಸ್ವಯಾನಂದ ವೆಂದು ಸ್ವಯಾನಂದ ಘನಚಕ್ರವೆಂದು ಸ್ವಯಾನಂದ ಮಹಾಘನ ಚಕ್ರವೆಂದು, ಸ್ವಯಾನಂದ ಮಹಾಘನಾತೀತ ಚಕ್ರವೆಂದು, ನಾಲ್ಕು ಚಕ್ರಂಗಳು ಅನೇಕ ಕೋಟಿ ಪದ್ಮಂಗಳನೊಳಕೊಂಡು ಪದ್ಮ ವಿಲ್ಲದಿಹುದು. ಅನೇಕ ಕೋಟಿ ವರ್ಣಂಗಳ ನೊಳಕೊಂಡು ವರ್ಣವಿಲ್ಲದಿಹುದು. ಅನೇಕ ಕೋಟಿ ಅಕ್ಷರಂಗಳನೊಳಕೊಂಡು, ಅಕ್ಷರವಿಲ್ಲದಿಹುದು. ಅನೇಕ ಕೋಟಿ ಶಕ್ತಿಯನೊಳಕೊಂಡು ಶಕ್ತಿ ಇಲ್ಲದಿಹುದು. ಅನೇಕ ಕೋಟಿ ಅಧಿದೇವತೆಯ ನೊಳಕೊಂಡು ಅಧಿದೇವತೆ ಇಲ್ಲದಿಹುದು ಅನೇಕ ಕೋಟಿ ನಾದವನೊಳಕೊಂಡು ನಾದ ವಿಲ್ಲದಿಹುದು. ಅನೇಕ ಕೋಟಿ ಬೀಜವನೊಳಕೊಂಡು ಬೀಜ ವಿಲ್ಲದೆ ಬೆಳಗುತ್ತಿಹುದು. ಚಕ್ರಂಗಳು ವಾಚ್ಯಕ್ಕು ವಾಚ್ಯಾತೀತವಾಗಿಹುದು. ಮನಕ್ಕು ಮನಾತೀತವಾಗಿಹುದು. ವರ್ಣಕ್ಕು ವರ್ಣಾತೀತವಾಗಿಹುದು. ತತ್ವಕ್ಕು ತತ್ವಾತೀತವಾಗಿಹುದು. ಜ್ಞಾನಕ್ಕು ಜ್ಞಾನಾ

ತೀತವಾಗಿಹುದು. ಉಪಮೆಗು ಉಪಮಾತೀತವಾಗಿಹುದು. ಚಕ್ರಕ್ಕು ಚಕ್ರಾತೀತವಾಗಿಹುದು. ಆಸಿಪದಾತೀತಾಗಮದಲ್ಲಿ ಪ್ರಸಿದ್ಧವಾಗಿ ಹೇಳುತ್ತಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೩೪೫. ಇನ್ನು ನಿರಂಜನಾತೀತ ಷಡುಸ್ಥಲ ಬ್ರಹ್ಮವೆಂತೆಂದಡೆ, ನಿರಂಜನಾತೀತ ಭಕ್ತ ನಿರಂಜನಾತೀತ ಮಹೇಶ್ವರ ನಿರಂಜನಾತೀತ ಪ್ರಸಾದಿ, ನಿರಂಜನಾತೀತ ಪ್ರಾಣಲಿಂಗ, ನಿರಂಜನಾತೀತ ಶರಣ, ನಿರಂಜನಾತೀತ ಐಕ್ಯ ನಿರಂಜನಾತೀತ ಷಡುಸ್ಥಲ ಅಖಂಡಿತ ಅಪ್ರಮಾಣ ಅಗೋಚರ ಅಪ್ರಮೇಯು ವಾಚಾಗಸುಗೊಚರಕ್ಕತ್ತತ್ತವಾಗಿಹುದು ನೋಡಾ ಅಪ್ರಮಾಡಅ ಸಂಗಮದೇವಾ.

೩೪೬. ಇನ್ನು ನಿರಂಜನಾತೀತ ಷಡುಸ್ಥಲದ ಅರ್ಪಿತಾವಧಾನದ ಭೇದವೆಂತೆಂದಡೆ, ನಿರಂಜನಾತೀತ ಭಕ್ತಂಗೆ, ನಿರಂಜನಾತೀತವೆ ಅಂಗ. ನಿರಂಜನಾತೀತವೆ ಹಸ್ತ, ನಿರಂಜನಾತೀತವೆ ಆಚಾರಲಿಂಗ, ನಿರಂಜನಾತೀತವೆಂಬ ಮುಖದಲ್ಲಿ ನಿರಂಜನಾತೀತಾನಂದವೆಂಬ ಸುಖವನೆ ಸಮರ್ಪಣವಂ ಮಾಡಿ, ತೃಪ್ತಿಯನೆ ಭೋಗಿಸುವನು ಅಪ್ರಮಾಣ ಕೂಡಲಸಂಗಮದೇವಾ.

೩೪೭. ನಿರಂಜನಾತೀತ ಮಹೇಶ್ವರಂಗೆ ನಿರಂಜನಾತೀತವೆ ಅಂಗ ನಿರಂಜನಾತೀತವೆ ಹಸ್ತ ನಿರಂಜನಾತೀತವೆ ಗುರುಲಿಂಗ ನಿರಂಜನಾತೀತವೆಂಬ ಮುಖದಲ್ಲಿ ನಿರಂಜನಾತೀತಾನಂದವೆಂಬ ಸುಖವ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೪೮. ನಿರಂಜನಾತೀತ ಪ್ರಸಾದಿಗೆ, ನಿರಾಂಜನಾತೀತವೆ ಅಂಗ, ನಿರಂಜನಾತೀತವೆ ಹಸ್ತ, ನಿರಂಜನಾತೀತವೆ ಶಿವಲಿಂಗ, ನಿರಂಜನಾತೀತವೆಂಬ ಮುಖದಲ್ಲಿ ನಿರಂಜನಾತೀತಾನಂದವೆಂಬ ಸುಖವ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣಕೂಡಲಸಂಗಮದೇವಾ.

೩೪೯. ನಿರಂಜನಾತೀತ ಪ್ರಾಣಲಿಂಗಿಗೆ, ನಿರಂಜನಾತೀತವೆ ಅಂಗ ನಿರಂಜನಾತೀತವೆ ಹಸ್ತ, ನಿರಂಜನಾತೀತವೆ ಜಂಗಮಲಿಂಗ ನಿರಂಜನಾತೀತವೆಂಬ ಮುಖದಲ್ಲಿ ನಿರಂಜನಾತೀತಾನಂದವೆಂಬ ಸುಖವ ಸಮರ್ಪಣವ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೪೦. ನಿರಂಜನಾತೀತ ಶರಣಂಗೆ ನಿರಂಜನಾತೀತವೆ ಅಂಗ ನಿರಂಜನಾತೀತವೆ ಹಸ್ತ ನಿರಂಜನಾತೀತವೆ ಪ್ರಸಾದಲಿಂಗ ನಿರಂಜನಾತೀತವೆಂಬ ಮುಖದಲ್ಲಿ ನಿರಂಜನಾತೀತವೆಂಬ ಸುಖವ ಸಮರ್ಪಣವಂ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲಸಂಗಮದೇವ.

೩೫೧. ನಿರಂಜನಾತೀತ ಐಕ್ಯಂಗೆ ನಿರಂಜನಾತೀತವೆ ಅಂಗ ನಿರಂಜನಾತೀತವೆ ಹಸ್ತ ನಿರಂಜನಾತೀತವೆ ಮಹಾಲಿಂಗ ನಿರಂಜನಾತೀತವೆಂಬ ಮುಖದಲ್ಲಿ ನಿರಂಜನಾತೀತಾನಂದದೆಂಬ ಸುಖವ ಸಮರ್ಪಣವ ಮಾಡಿ ತೃಪ್ತಿಯನೆ ಭೋಗಿಸುವನು ನೋಡಾ ಅಪ್ರಮಾಣ ಕೂಡಲಸಂಗದುದೇವಾ.

೩೫೨. ನಿರಂಜನಾತೀತ ಷಟ್‌ಸ್ಥಲವಂಗವಾಗಿ ಆ ನಿರಂಜನಾತೀತ ಷಟ್‌ಸ್ಥಲಬ್ರಹ್ಮವನೊಡಗೂಡಿದ ಮಹಾ ಶರಣಂಗೆ ನಮೋ ನಮೋ ಎಂದು ಬದುಕಿದೆನು ಕಾಣಾ ಅಪ್ರಮಾಣ ಕೂಡಲಸಂಗಮದೇವಾ.

೩೫೩. ಚಕ್ರಾತೀತಾಗಮ, ಅಸಿಪದಾತೀತಾಗಮದಲ್ಲಿ ನಿರಾಳ ದಶಚಕ್ರ ನಿರಾಮಯ ಷಡುಸ್ಥಲ ನಿರಂಜನ ದಶಚಕ್ರ, ನಿರಂಜನಾತೀತ ಷಡುಸ್ಥಲ ಬ್ರಹ್ಮವನು ಪಾರ್ವತಿ ದೇವಿಯವರಿಗೆ ಶಿವನು ನಿರೂಪಿಸಿದರೆಂದು ಆ ಸದ್ಗುರು ಸ್ವಾಮಿ ಶಿಷ್ಯಂಗೆ ನಿರೂಪಿಸಿದ ವಚನ ಸಮಾಪ್ತ ಶ್ರೀ॥ ಶ್ರೀ॥ ಶ್ರೀ॥

ಇನ್ನು ಅವಸ್ಥೆಗಳ ದರ್ಶನದ ಭೇದವೆಂತೆಂದಡೆ ಪ್ರೇರಕಾವಸ್ಥೆ ಒಂದು, ಮಧ್ಯಾವಸ್ಥೆ ಐದು ಈ ಇಪ್ಪತ್ತುನಾಲ್ಕು ಅವಸ್ಥೆಯ ದರ್ಶನದ ಭೇದವ ಶಿವಯೋಗಿ ಲಿಂಗಾನುಭಾವಿ ಬಲ್ಲನಲ್ಲದೆ ಮಿಕ್ಕಿನ ವೇಷಧಾರಿಗಳೆತ್ತ ಬಲ್ಲರು ನೋಡಾ ಅಪ್ರಮಾಣಕೂಡಲಸಂಗಮದೇವಾ.

೩೫೪. ಇನ್ನು ಪ್ರೇರಕಾವಸ್ಥೆಯ ದರುಶನವೆಂತೆಂದಡೆ ಶಿವತತ್ವ ಐದು ಕಲಾದಿಗಳೇಳು ಕರಣನಾಲ್ಕು ಜ್ಞಾನೇಂದ್ರಿಯಂಗಳಲ್ಲಿ ಶ್ರೋತ್ರ ಒಂದು ಭೂತಂಗಳಲ್ಲಿ ಅಕಾರ ಒಂದು ಈ ಹದಿನೆಂಟು ಕರಣಂಗಳೊಡನೆ ಕೂಡಿ ಶಬ್ದವ ಕೇಳುವ ಅವಸರ, ಮತ್ತಂ ಉಂಟಾದ ಇಂದ್ರಿಯಂಗಳ ಕಂಡು ಕೊಂಬುದು ನೋಡಾ ಅಪ್ರಮಾಣಕೂಡಲಸಂಗಮದೇವಾ.

೩೫೫. ಇನ್ನು ಮಧ್ಯಾವಸ್ಥೆಯ ದರ್ಶನವೆಂತೆಂದಡೆ ಜಾಗ್ರದಲ್ಲಿ ಅತೀತವಿಕುದು. ಮುಂದೆ ಕಂಡವನ ಈಗ ಅರಿಯದಿರ್ಪುದು. ಜಾಗ್ರದಲ್ಲಿ ಅತೀತವು ಪುರುಷ ತತ್ವದೊಡನೆ ಪ್ರಾಣವಾಯು ಕೂಡಿಕೊಂಡು ಇವನರಿಯದ ಹಾಗೆ ಉಸಿರು ಬಿಡುವದು. ಜಾಗ್ರದಲ್ಲಿ ಸೂರ್ಯನು ನೋಡಾ ಅಪ್ರಮಾಣಕೂಡಲಸಂಗಮದೇವಾ.

೩೫೬. ಜಾಗ್ರದಲ್ಲಿಯ ಸುಷುಪ್ತಿ ಯಾವುದು? ಪುರುಷ ಪ್ರಾಣ ವಾಯು ಚಿತ್ತದೊಡನೆ ಕೂಡಿ ಅವರ ಕಂಡ ಠಾವನೆ ಹೇಳವದು ಜಾಗ್ರದಲ್ಲಿ ಸುಷುಪ್ತಿನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೫೭. ಜಾಗ್ರದಲ್ಲಿ ಸ್ವಪ್ನವಾವುದು? ಶಬ್ದಾದಿಗಳೈದು ಶ್ರೋತ್ರಾದಿಗಳೈದು ವಾಗಾದಿಗಳೈದು ಕರಣ ನಾಲ್ಕು ಪುರುಷನೊಬ್ಬ ಇಂತೀ ಇಪ್ಪತ್ತೈದು ಕರಣಂಗಳೊಂದನೆಕೂಡಿ ಅವನು ಅವನ ಕಂಡ ಠಾವನು ಹೇಳುವುದು ಜಾಗ್ರದಲ್ಲಿಯ ಸ್ವಪ್ನ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೫೮. ಜಾಗ್ರದಲ್ಲಿಯ ಜಾಗ್ರವಾವುದು? ಪುರುಷನೊಬ್ಬ ವಾಯು ಹತ್ತು ನಾಡಿ ನಾಲ್ಕು ಶಬ್ದಾದಿಗಳೈದು ಶ್ರೋತ್ರಾದಿಗಳೈದು ವಾಗಾದಿಗಳೈದು ಈ ಮೂವತ್ತೈದು ಕರಣಂಗಳೊಡನೆ ಕೂಡಿ ಇವನ ತಬ್ಬಿಕೊಳ್ಳ ತಕ್ಕೆ ಪ್ರಿಯವ ಮಾಡುವದು ಜಾಗ್ರದಲ್ಲಿಯ ಜಾಗ್ರ ನೋಡಾ ಅಪ್ರಮಾಣ ಕೂಡಲಸಂಗಮದೇವಾ

೩೫೯. ಮುಂದೆ ಹೇಳಿದ ಪ್ರೇರಕಾವಸ್ಥೆ, ಅಲ್ಲಿ ಹೇಳಿದ ಕರಣಂಗಳು ಹದಿನೆಂಟರೊಡನೆ ಕೂಡಿ ಇವನ ನಾಮ ಜಾತಿ ಗುಣತ್ರಯಂಗಳಿಲ್ಲಯ ವಿಚಾರಿಸಿ ಅರಿದು ಸಂದೇಹಗಳು ಕೆಡುವುದು ಪ್ರೇರಕಾವಸ್ಥೆ ಎಂದು ಅರಿವುದು. ಇನು ಕೆಳಗಿನವಸ್ಥೆಯ ದರ್ಶನವೆಂತೆಂದಡೆ ಸ್ವಪ್ನವಾವುದು ಶ್ರೋತ್ರಾದಿಗಳೈದು ವಾಗಾದಿಗಳೈದು ಈ ಹತ್ತು, ಕರಣಂಗಳು ಭ್ರೂಮಧ್ಯದಲ್ಲಿ ನಿಂದು ಶಬ್ದಾದಿಗಳೈದು, ವಾಯು ಹತ್ತು ಕರಣ ನಾಲ್ಕು ಪುರುಷನೊಬ್ಬ ಇಪ್ಪತ್ತೈದು ಕರಣಂಗಳೊಡನೆ ಕಂಠ ಸ್ಥಾನದಲಿ ನಿಂದು ಆನೆ ಹಯನೇರುವ ಹಾಗೆ ಮಾಲೆಯ ಧರಿಸುವ ಹಾಗೆ ಕಂಡ ಅವಸರವು ಸ್ವಪ್ನ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೬೦ ಸುಷುಪ್ತಿ ಯಾವುದು? ವಚನಾದಿಗಳೈದು ಶಬ್ದಾದಿಗಳೈದು ಕರಣದಲ್ಲಿ ಚಿತ್ತವಲ್ಲದೆ ಮೂರು ದಶವಾಯುಗಳಲ್ಲಿ ಪ್ರಾಣವಾಯುವಲ್ಲದೆ ವಾಯು ಒಂಭತ್ತು ಈ ಇಪ್ಪತ್ತೈದು ಮೂರು ಕರಣಂಗಳು ಕಂಠಸ್ಥಾನದಲ್ಲಿ ನಿಂದು ಚಿತ್ತವನು ಪ್ರಾಣವಾಯುವನು ಪುರುಷನನು ಈ ಮೂರು ಕರಣಂಗಳೊಡನೆ ಹೃದಯ ಸ್ಥಾನದಲ್ಲಿ ನಿಂದು ಅನೇಕ ಚಿಂತನೆಯ ಮಾಡುವುದು. ಜಾಗ್ರದಲ್ಲಿ ಬಂದರೆ ಹೇಳಲರಿಯದಿಪ್ಪುದು ಸುಷುಪ್ತಿ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೬೧. ತೂರ್ಯವಾವುದು? ಚಿತ್ತ ಒಂದು ಹೃದಯಸ್ಥಾನದಲ್ಲಿ ನಿಂದು ಪುರುಷನನು ಪ್ರಾಣವಾಯುವನು ನಾಭಿಸ್ಥಾನದಲ್ಲಿ ನಿಂದು ಶರೀರಕ್ಕೆ ಕವಲಾಗಿ ನಿಂದು ಸಂಧಿಸುವುದು ತೂರ್ಯ. ತೂರ್ಯಾತೀತವಾವುದು? ನಾಭಿಸ್ಥಾನದಲ್ಲಿ ಪ್ರಾಣವಾಯು ನಿಂದು ಪುರುಷನ ಮೋಹಿಸಿ ನಿಜಸ್ವರೂಪವಾಗಿ ಕಂಡು ಒಂದೆಂಬುದು ಕೆಟ್ಟು ಮೂಲಾಧಾರದಲ್ಲಿಹುದು ತೂರ್ಯಾತೀತ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೬೨. ಇನ್ನು ಮೇಲಾದವಸ್ಥೆಯ ದರ್ಶನ ವೆಂತೆಂದಡೆ, ಶುದ್ಧ ತತ್ವವೈದು ಇಂಬಾಗಿ ಬಂದು ನಿಂದು ಅತೀತ ಮೊದಲಾಗಿ ದರ್ಶನ ಮಾಡುವದು. ಅದೆಂತೆಂದಡೆ ನಾದ ಇಂಬಾಗಿ ನಿಂದು ಒಂದೆಂಬುದು ಇಲ್ಲದೆ ಇದ್ದ ತಾವನು ಪುರುಷನನು ಮೂಲಾಧಾರದಲ್ಲಿ ದರ್ಶನವದು ತೂರ್ಯಾತೀತ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೬೩. ನಾದ ಬಿಂದು ಕಳೆಗಳಿಂದ ಬಾಗಿಂದು ಪುರುಷನನು ಪ್ರಾಣವಾಯುವನು ಚಿತ್ತವನು ಹೃದಯ ಸ್ಥಾನದಲ್ಲಿ ದರ್ಶನವ ಮಾಡುವುದು ಪರಮಸುಸುಪ್ತಿ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೬೪. ನಾದ ಬಿಂದು ಸಾದಾಖ್ಯ ಇಂಬಾಗಿ ನಿಂದು, ಪುರುಷನನು ಪ್ರಾಣವಾಯುವನು, ಚಿತ್ತವನು ಹೃದಯ ಸ್ಥಾನದಲ್ಲಿ ದರ್ಶನವ ಮಾಡುವದು, ಪರಮ ಸುಸುಪ್ತಿ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೬೫. ನಾದ ಬಿಂದು ಸಾದಾಖ್ಯ ಈಶ್ವರವು ಇಂಬಾಗಿ ನಿಂದು, ವಚನಾದಿಗಳೈದು ಶಬ್ದಾದಿಗಳೈದು ಕರಣ ನಾಲ್ಕು ವಾಯು ಹತ್ತು, ಪುರುಷನೊಬ್ಬ, ಈ ಇಪ್ಪತ್ತೈದು ಕರಣಂಗಳೊಡನೆ, ಕಂಠ ಸ್ಥಾನದಲ್ಲಿ ನಿಂದು ದರ್ಶನವ ಮಾಡುವುದು ಪರಮ ಸ್ವಪ್ನ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೩೬೬. ಶಿವತತ್ವವೈದು ಇಂಬಾಗಿ ನಿಂದು, ಪುರುಷನೊಬ್ಬನು ವಚನಾದಿಗಳೈದು ಶಬ್ದಗಳೈದು ಕರಣ ನಾಲ್ಕು ಶ್ರೋತ್ರಾದಿಗಳೈದು ವಾಗಾದಿಗಳೈದು, ವಾಯು ಹತ್ತು ಈ ಮೂವತ್ತೈದು ಕರಣಂಗಳೊಡನೆ ಭ್ರೂಮಧ್ಯದಲ್ಲಿ ದರ್ಶನವ ಮಾಡುವುದು, ಪರಮ ಜಾಗ್ರ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೯೭. ಇನ್ನು ಕೇವಲಾವಸ್ಥೆಯ ದರ್ಶನವದೆಂತೆಂದಡೆ, ಮುಂದೆ ಹೇಳಿದ ಅವಸ್ಥೆಗಳನು ಬಿಟ್ಟು, ಬೇರಾಗಿ ಒಂದೆಂಬದುಟ್ಟು ತಾವು ಕೇವಲಾ

ವಸ್ಥೆ. ಇನ್ನು ಸಕಲಾವಸ್ಥೆಯು ದರ್ಶನವೆಂತೆಂದಡೆ, ಮುಂದೆ ಹೇಳಿದ ಆ ಕನಸನು ಕಂಡ ತಾವು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೭೮. ಇನ್ನು ಶುದ್ಧಾವಸ್ಥೆಯು ದರ್ಶನವೆಂತೆಂದಡೆ, ಮುಂದೆ ಹೇಳಿದ ಕೇವಲದಲ್ಲಿ ಒಂದೆಂಬುದು ಕೆಟ್ಟ ತಾವನು ಸಕಲದಲ್ಲಿ ಕರಣಂಗಳ ಕೂಡುವ ತಾವನು ಮತ್ತೆಲ್ಲವ ಬಿಟ್ಟು ಈ ಎರಡು ಅವಸ್ಥೆಯು ಇವನಿಗೆ ಪ್ರತಿ ಇಲ್ಲೆಂದು ಕಂಡದು ಶುದ್ಧಾವಸ್ಥೆ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೭೯. ಇನ್ನು ನಿರ್ಮಲಾವಸ್ಥೆಯ ದರ್ಶನವ ಮಾಡುವಾಗ ಪಂಚ ಮಲಂಗಳನು ದರ್ಶನವ ಮಾಡುವುದು. ಅದೆಂತೆಂದಡೆ ಆಣವ ಮಾಯೆ ಕಾರ್ಮಿಕ ಮಹಾಮಾಯೆ, ತಿರೋದಾಯ ಮಲ ಆಣವ ಮಲವಾವುದು ಶಿವನ ನೆನೆಯಲೀಸದಿಹುದು. ಮಾಯೆವಾವುದು? ತನುಕರಣ ಭುವನ ಭೋಗಂಗಳ ಬಯಸುತ್ತಿಹುದು. ಕಾರ್ಮಿಕವಾವುದು? ಪುಣ್ಯಪಾಪಂಗಳೆಂದು ಹೆಸರಾಗಿ, ಸುಖದುಃಖಂಗಳಾಗಿಹುದು. ಮಹಾಮಾಯೆ ಯಾವದ.? ಪಂಚ ಕರ್ತರಿಗು ರೂಪಾಗಿ ದೇಹಾದಿ ಪ್ರಪಂಚುಗಳ ಪ್ರೀತಿಸಿ ಕೊಂಡಿಹುದು. ಆರೋದಾಯು ಮಲವಾವುದು? ನುರಸಿ ಮಾಯಾ ಭೋಗದಲ್ಲಿಯೆ ಬಿದ್ದು ಹೊರಳಾಡುತ್ತಿಹುದು. ಈ ಪ್ರಕಾರದಲ್ಲಿ ಪಂಚ ಮಲಂಗಳನು ಕಂಡುಕೊಂಬುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೭೦. ಇನ್ನು ಮುಂದೆ ಹೇಳಿದ ನಿರ್ಮಲಾವಸ್ಥೆಯ ದರ್ಶನವೆಂತೆಂದಡೆ ಹೀಗೆ ಪಂಚಮಲಂಗಳ ತೋರಿದ ಜ್ಞಾನಶಕ್ತಿಗೂ ಮೊದಲು ಪೂರ್ಣ ಬೋಧವಾಗಿ ನಿಂದ ತಾವು ನಿರ್ಮಲ ಜಾಗ್ರ ಮುಂದೆ ಹೇಳಿದ ಪೂರ್ಣ ಬೋಧ ನಿರ್ವಿಕಾರ ಹುಟ್ಟುವ ಬಗಿಗು ಮೊದಲಾದ ತಾವು ನಿರ್ಮಲ ಸ್ವಪ್ನ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೭೧. ಪರಮ ಭೋಗದಲ್ಲಿಯೆ ಸಂತೋಷವಳಿದು ನಿಷ್ಪತ್ತಿಯಾಗಿ ನಿಂದುದೇ ನಿರ್ಮಲ ಸುಷುಪ್ತಿ. ಮುಂದೆ ಹೇಳಿದ ಪರಮ ಭೋಗವನು ಬಿಟ್ಟು ಮೇಲಾದ ಪರಮಾನಂದಕ್ಕೆ ಮೊದಲು, ನಿರ್ಮಲ ತೂರ್ಯ ಮುಂದೆ ಹೇಳಿದ ಪರಮಾನಂದವನು ಸುಟ್ಟ ತಾವು ನಿರ್ಮಲ ತೂರ್ಯಾತೀತ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

ಸಂಪುಟ ೨೯ ಸಂಚಿಕೆ ೫



# ಶಿವಾನುಭವ




-। ಸಂಪಾದಕರು ।-

ಫ. ಗು. ಹಳಕಟ್ಟಿ,

ಬಿ. ಎ. ಎಲ್. ಎಲ್. ಬಿ.



ವಾ. ಚ. ೫-೧೨-೦] ವಿಜಾಪೂರ [ ಮೇ ೧೯೫೫

# ವಿಷಯಾನುಕ್ರಮಣಿಕೆ





---

**ಶಿವಾನುಭವ ಮಾಸಪತ್ರಿಕೆಗೆ**

**ಚಂದಾದಾರರಾಗಿರಿ.**

# ಶಿವಾನುಭವ

ಸಂಪುಟ ೨೯ ಮೇ ೧೯೫೫ ಸಂಚಿಕೆ ೫.

## ಸ್ಫುಟವಿಚಾರಗಳು

[ಲೇ:— ಶ್ರೀಯುತ ರಾ|| ಬ|| ಫ. ಗು. ಹಳಕಟ್ಟಿ, ಸಂಪಾದಕ—ಶಿವಾನುಭವ.]

### ಮಹಾ ಸಭೆಯ ಸಂಘಟನೆ

ಈ ವರ್ಷ ವೀರಶೈವ ಮಹಾ ಸಭೆಯ ಅಧಿವೇಶನವು ಜರುಗಿ ಅದರಲ್ಲಿ ಅನೇಕ ಮಹತ್ವದ ನಿರ್ಣಯಗಳು ಆಗಿರುತ್ತವೆ. ಆದರೆ ಅವೆಲ್ಲವು ಬಹುತರ ಸಾಮಾನ್ಯ ನಿರ್ಣಯಗಳು ಇದ್ದು, ಅವುಗಳನ್ನು ನಿರ್ವಹಿಸುವ ಕಾರ್ಯವನ್ನು ಅದರ ಕಾರ್ಯಕಾರಿ ಮಂಡಳವು ಮಾಡತಕ್ಕದ್ದಾಗಿರುತ್ತದೆ. ಹೋದ ತಿಂಗಳಲ್ಲಿ ಲಚ್ಯಾಣದಲ್ಲಿ ನೆರೆದ ಮಧ್ಯವರ್ತಿ ಮಂಡಳದ ಸಭೆಯಲ್ಲಿ ಈ ವಿಷಯಗಳು ಕೂಲಂಕಷವಾಗಿ ಚರ್ಚಿಸಲ್ಪಟ್ಟಿರುತ್ತವೆ. ಆ ಮೇರೆಗೆ ಶ್ರೀ ಅಧ್ಯಕ್ಷ ಮಹಾಸ್ವಾಮಿಗಳವರು ಅವುಗಳನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸುವರೆಂದು ನಾವು ನಿರೀಕ್ಷಿಸಿದ್ದೇವೆ.

ಸಭಾ ಕಾಲದಲ್ಲಿ ಅನೇಕ ವಿಷಯಗಳು ಚರ್ಚಿಸಲ್ಪಟ್ಟಿದ್ದರೂ ವಾಙ್ಮಯದ ವಿಷಯವಾಗಿ ಮಾತ್ರ ಅದರಲ್ಲಿ ಯಾವ ಚರ್ಚೆಗಳೂ ಆದಂತೆ ತೋರುವದಿಲ್ಲ. ಒಂದು ಅಧಿಕೃತ ಧಾರ್ಮಿಕ ಗ್ರಂಥವನ್ನು ಬರೆಯಿಸಬೇಕೆಂಬ ಠರಾವು ಮಾತ್ರ ಆಗಿರುತ್ತದೆ. ಆದರೆ ಈ ಮಹತ್ವದ ನಿರ್ಣಯದ ಬಗ್ಗೆ ಮುಂದೆ ಯಾವ ಪ್ರಯತ್ನಗಳು ಆಗಬೇಕೆಂಬುದು ಮಾತ್ರ ನಿರ್ಧರಿಸಲ್ಪಟ್ಟಹಾಗೆ ತೋರುವದಿಲ್ಲ. ಕಾರ್ಯಕಾರಿ ಕಮೀಟಿಯವರು ಈ ವಿಷಯವನ್ನು ಕುರಿತು ಮುಂದಿನ ಕಮೀಟಿಯ ಕಾಲದಲ್ಲಿ ಪೂರ್ಣ ಚರ್ಚಿಸುವರೆಂದು ನಾವು ಆಶಿಸಿದ್ದೇವೆ.

ಲಖ್ನೋಣದ ಕಮಿಟಿಯು ಕಾಲದಲ್ಲಿ ವೀರಶೈವ ಸಂಘಟನೆಯು ಬಗ್ಗೆ ಯಾವ ವಿಧಾಯಕ ಕಾರ್ಯಗಳನ್ನು ಮಾಡಬೇಕೆಂಬುದರ ಬಗ್ಗೆಯೂ ಯಾವ ನಿರ್ಣಯಗಳೂ ಆಗಿರುವದಿಲ್ಲ. ಸಭಾಸದರ ವಾರ್ಷಿಕ ವರ್ಗಣಿ ಎಷ್ಟು ಇರಬೇಕೆಂಬುದು ಮಾತ್ರ ನಿರ್ಧರಿಸಲ್ಪಟ್ಟಿತು. ಆದರೆ ಸಭಾಸದರನ್ನು ಮಾಡುವ ಕಾರ್ಯದ ಬಗ್ಗೆ ಯಾವ ಯಾವ ಪ್ರಯತ್ನಗಳನ್ನು ಮಾಡಬೇಕೆಂಬುದನ್ನು ಕುರಿತು ಯಾವ ಚರ್ಚೆಗಳೂ ಆಗಿರುವದಿಲ್ಲ. ಒಂದು ಗ್ರಾಮವನ್ನು ಹಿಡಿದು ಜಿಲ್ಹಾ ಸ್ಥಾನದ ವರೆಗೂ ಅಲ್ಲಲ್ಲಿ ಕಮಿಟಿಗಳು ಆಗದ ವಿನಃ ಈ ಕಾರ್ಯವು ಸಾಧ್ಯನಾಗಲಾರದು. ಇದಕ್ಕೋಸ್ಕರ ಒಂದು ದೊಡ್ಡ ಪ್ರಚಾರ ಕಾರ್ಯವು ನಡೆಯಬೇಕಾಗುತ್ತದೆ. ಆದರೆ ಈ ಬಗ್ಗೆ ಯಾವ ವ್ಯವಸ್ಥೆಯನ್ನು ಮಾಡಬೇಕೆಂಬುದು ಕಮಿಟಿಯಲ್ಲಿ ಗೊತ್ತಾಗಿರುವದಿಲ್ಲ. ಈ ಪ್ರಚಾರ ಕಾರ್ಯಕ್ಕೋಸ್ಕರ ಒಂದು ದೊಡ್ಡ ನಿಧಿಯು ಬೇಕಾಗುತ್ತದೆ. ಇಂಥ ನಿಧಿಯನ್ನು ಕೂಡಿಸುವ ಸಾಮರ್ಥ್ಯವು ಅಧ್ಯಕ್ಷರಲ್ಲದೆ ಎಂಬ ತಿಳುವಳಿಕೆಯು ಸಮಾಜದಲ್ಲಿ ಉಂಟಾಗಿರುತ್ತದೆ. ಈ ದೃಷ್ಟಿಯನ್ನಿಟ್ಟುಕೊಂಡು ಅಧ್ಯಕ್ಷರು ಕಾರ್ಯಕಾರಿ ಕಮಿಟಿಯನ್ನು ರಚಿಸಿರುತ್ತಾರೆ. ಅದಕ್ಕೆ ಬರಹಗಾರರ ಮತ್ತು ಸಂಶೋಧಕರ ಸಂಪರ್ಕವು ಇರುವದಿಲ್ಲ. ಇದು ಈಗಿನ ಪರಿಸ್ಥಿತಿಯಲ್ಲಿ ಯೋಗ್ಯವೆಂದು ತೋರಬಹುದು. ಆದರೆ ಧನಸಂಗ್ರಹ ಮತ್ತು ವಾಙ್ಮಯ ಪ್ರಸಾರ ಇವೆರಡೂ ಕಾರ್ಯಗಳು ಪರಸ್ಪರಾವಲಂಬಿಗಳಾಗಿದ್ದದರಿಂದ ಆ ರೀತಿಯಾಗಿ ಶ್ರೀ ಅಧ್ಯಕ್ಷರು ಈ ಕಾರ್ಯ ಮಾಡಬೇಕೆಂದು ನಮ್ಮ ಸೂಚನೆ ಇದೆ.

ಅಧ್ಯಕ್ಷರು ಇನ್ನುಮೇಲೆ ವಿಜಾಪೂರದಂಥ ಒಂದು ಪಟ್ಟಣದಲ್ಲಿ ಹೆಚ್ಚಾಗಿ ನಿಂತುಕೊಂಡು ತಮ್ಮ ಕಾರ್ಯಗಳಿಗೋಸ್ಕರ ಮೂರು ನಾಲ್ಕು ಜನರ ಸಲಹಾ ಕಮಿಟಿಯನ್ನು ಏರ್ಪಡಿಸಿಕೊಂಡು ಕಾರ್ಯಪ್ರವೃತ್ತರಾಗಬೇಕೆಂದು ನಮ್ಮ ಸೂಚನೆ ಇದೆ. ಇಂಥ ಕಮಿಟಿಯನ್ನು ಅದರ ಕಾರ್ಯಕಾರಿ ಮಂಡಳದ ನಿರ್ಣಯದ ಪ್ರಕಾರ ರಚಿಸುವದು ಅವಶ್ಯಕವು. ಅಥವಾ ತಾನೇ ತಮಗೆ ಯೋಗ್ಯ ಕಂಡವರನ್ನು ನೇಮಿಸಿಕೊಂಡು ಅದಕ್ಕೆ ಕಾರ್ಯಕಾರೀ ಮಂಡಳದ ಸಮ್ಮತಿಯನ್ನು ಪಡೆಯತಕ್ಕದ್ದು.

**ಜಾತೀಯತೆ:—** ಭಾರತವು ಏಕರಾಷ್ಟ್ರವಾಗಿ ನಿರ್ಮಾಣವಾಗಲಿಕ್ಕೆ ಅದರಲ್ಲಿ ನೆಲಿಸಿದ ಜಾತೀಯತೆಯು ಒಂದು ಮುಖ್ಯ ಆತಂಕವಾಗಿದೆ.

ಆದರೆ ಅದು ಏಕರಾಷ್ಟ್ರವಾಗಲಿಕ್ಕೆ ಶಕ್ಯವಿದೆಂಬುದು ಬೌದ್ಧ, ಶೀಖ ಮತ್ತು ವೀರಶೈವ ಮತಗಳ ಇತಿಹಾಸಗಳಿಂದ ದೃಢಪಡುತ್ತದೆ. ಅವುಗಳ ಪ್ರವರ್ತಕರು ಜನತೆಯಲ್ಲಿ ಉಚ್ಚ ಧಾರ್ಮಿಕ ಭಾವನೆಯನ್ನು ಹುಟ್ಟಿಸಿ ತಮ್ಮ ಧ್ಯೇಯವನ್ನು ಸಾಧಿಸಿದರು. ಈಗಿನ ನಮ್ಮ ರಾಜ್ಯಕಾರ್ಯ ದುರಂಧರರು ಈ ಧರ್ಮ ಪ್ರವರ್ತಕರ ಕಾರ್ಯ ಪದ್ಧತಿಯನ್ನು ಕೈಕೊಂಡರೆ ಏಕರಾಷ್ಟ್ರ ನಿರ್ಮಾಣವು ಸಾಧ್ಯವೆಂದು ತೋರುತ್ತದೆ. ಸಾಂಪ್ರತ ಕಾಲದಲ್ಲಿ ಮುಸ್ಲೀಮ ರಾಷ್ಟ್ರಗಳು ಮತ್ತು ಚೀನದೇಶ ಇವುಗಳು ಇದಕ್ಕೆ ಉತ್ತಮ ಉದಾಹರಣೆಗಳಾಗಿವೆ.

ಧಾರ್ಮಿಕ ಜ್ಞಾನಪ್ರಸಾರದಿಂದ ಮನುಷ್ಯನಲ್ಲಿ ಉಚ್ಚ ಮನೋವೃತ್ತಿಯು ಉಂಟಾಗುತ್ತದೆ. ಇದು ಶಕ್ಯವಿದೆಂಬುದು ಶಿವಶರಣರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಆದರೆ ಈಗಿನ ರಾಜಕೀಯ ವಾತಾವರಣವು ಧರ್ಮಜ್ಞಾನ ಪ್ರಸಾರಕ್ಕೆ ಉತ್ತೇಜನಕರವಾಗಿರುವದಿಲ್ಲ. ನಮ್ಮ ರಾಜ್ಯಕರ್ತರು ಧಾರ್ಮಿಕ ಜ್ಞಾನ ಪ್ರಸಾರಕ್ಕೆ ವಿಮುಖರಾಗಿ ವರ್ತಿಸುತ್ತಿದ್ದಾರೆ. ಅವರು ಹೀಗೆ ಅಭಿಪ್ರಾಯಪಟ್ಟರೂ ವೀರಶೈವರು ಶಿವಶರಣರ ತತ್ವಗಳನ್ನು ಕರ್ನಾಟಕದಲ್ಲಿ ತಾವೇ ಪ್ರಸಾರಗೊಳಿಸಿ ಇಲ್ಲಿಯ ಸಮಾಜಗಳಲ್ಲಿ ಐಕ್ಯಭಾವವನ್ನು ಹುಟ್ಟಿಸುವದು ಶಕ್ಯವಿದೆಂಬುದನ್ನು ಅವರು ತಿಳಿದು ವರ್ತಿಸಿದಲ್ಲಿ ಭಾರತದಲ್ಲಿ ಒಂದು ಮಹತ್ವದ ಕಾರ್ಯವನ್ನು ವೀರಶೈವರು ಮಾಡಿದಂತಾಗುವದು. ವೀರಶೈವ ಸಮಾಜದವರು ಹೀಗೆ ವರ್ತಿಸಿದಲ್ಲಿ ಅವರು ಜಾತೀಯತೆಯನ್ನು ದೂರ ಮಾಡಿದಂತಾಗುವದಲ್ಲದೆ ಭಾರತದ ಇತರ ಪ್ರದೇಶಗಳಿಗೆ ಮಾರ್ಗದರ್ಶಕರಾಗುವರು. ಈ ತರದ ಮಹತ್ವದ ಕಾರ್ಯವನ್ನು ಹಿಂದಿನ ಕಾಲಕ್ಕೆ ಶಿವಶರಣರು ಜರಿಗಿಸಿದ್ದು ಅವರ ಅನುಕರಣವನ್ನು ಈಗಿನ ನಮ್ಮ ರಾಜಕೀಯ ಮತ್ತು ಧಾರ್ಮಿಕ ವ್ಯಕ್ತಿಗಳು ಕೈಕೊಳ್ಳುವರೆಂದು ಹಾರೈಸುತ್ತೇವೆ.

**ಶಿವಾನುಭವ ಪಾಠಶಾಲೆಗಳು:—** ಹಿಂದೆ ಒಂದು ಕಾಲದಲ್ಲಿ ಧಾರ್ಮಿಕ ಶಿಕ್ಷಣ ಹೊಂದಲಪೇಕ್ಷಿಸುವವರು ಕಾಶಿಗೆ ಹೋಗಿ ಅಧ್ಯಯನವನ್ನು ನಡಿಸುವ ಪರಂಪಾರವು ಎಲ್ಲ ಕಡೆಗೂ ಪ್ರಸಾರಹೊಂದಿತ್ತು. ಧಾರ್ಮಿಕ ವರ್ಗದವರು ಕಾಶಿಗೆ ಹೋಗಿ ಅಧ್ಯಯನವನ್ನು ನಡಿಸುವ ಪರಿಪಾಠವು ಎಲ್ಲ ಕಡೆಗೂ ಪ್ರಸಾರಹೊಂದಿತ್ತು. ಜಂಗಮ ವರ್ಗದವರು ಕಾಶಿಗೆ ಹೋಗಿ

ಬ್ರಾಹ್ಮಣ ಧರ್ಮಗ್ರಂಥಗಳನ್ನು ಅನೇಕ ವರ್ಷ ಅಲ್ಲಿ ಪರಿಶೀಲನೆ ಮಾಡುತ್ತಿದ್ದರು. ಅವರು ಸಂಸ್ಕೃತದಲ್ಲಿರುವ ವಾಙ್ಮಯ, ನ್ಯಾಯ, ವ್ಯಾಕರಣ, ಮೀಮಾಂಸ ಮುಂತಾದ ವಿಷಯಗಳನ್ನು ಅಭ್ಯಾಸಮಾಡಿ ಹೆಚ್ಚಿನ ತರಗತಿಯ ಪದವಿಗಳನ್ನು ಪಡೆಯುತ್ತಿದ್ದರು. ಅವರು ಈ ಪ್ರಕಾರ ವಿದ್ವಾಂಸರೆನಿಸಿಕೊಂಡರೂ ಅವರಿಗೆ ಷಟ್‌ಸ್ಥಲಶಾಸ್ತ್ರ ಅಥವಾ ಶಕ್ತಿವಿಶಿಷ್ಟಾದ್ವೈತ ಮತಗಳ ಪರಿಚಯವು ಏನೂ ಇರಲಿಲ್ಲ. ಅವರು ತಮ್ಮ ಅಭ್ಯಾಸವನ್ನು ಮುಗಿಸಿಕೊಂಡು ತಮ್ಮ ಗ್ರಾಮಗಳಿಗೆ ಬಂದಬಳಿಕ ಬೇರೆ ಬೇರೆ ಕಡೆಗೆ ಪಾಠಶಾಲೆಗಳನ್ನು ನಿರ್ಮಿಸಹತ್ತಿದರು. ಈ ಸಂಸ್ಥೆಗಳಲ್ಲಿ ಅವರು ಕಾಶಿಯಲ್ಲಿ ತಾವು ಹೊಂದಿದ ಶಿಕ್ಷಣ ಪದ್ಧತಿಯನ್ನೇ ಅನುಸರಿಸುತ್ತ ಬಂದರು. ಇಂಥ ಶಿಕ್ಷಣದ ಪ್ರಭಾವದಿಂದ ಬ್ರಾಹ್ಮಣ ಪದ್ಧತಿಗಳು ನಮ್ಮ ನಾಡಿನಲ್ಲಿ ಪ್ರಸಾರವಾಗಹತ್ತಿದವು. ಇದರಿಂದ ವರ್ಣಾಶ್ರಮ ಧರ್ಮಗಳು ಬ್ರಾಹ್ಮಣರಲ್ಲಿಯಂತೆ ಬೆಳೆಯಹತ್ತಿದವು. ಈ ಪ್ರಕಾರ ನಮ್ಮಲ್ಲಿಯ ಧಾರ್ಮಿಕ ವರ್ಗದವರು ತಪ್ಪುದಾರಿಯನ್ನು ತುಳಿಯಹತ್ತಿದರು.

ಮುಂದೆ ನಮ್ಮ ನಾಡಿನಲ್ಲಿ ಅದ್ವೈತಮತ ಪ್ರಸಾರವು ಬಹು ಬಲವಾಗಿ ಸಾಗಹತ್ತಿತು. ಈ ಕಾರ್ಯ ಸಾಗಿಸುವವರು ನಿಜಗುಣಶಿವಯೋಗಿಗಳ ಗ್ರಂಥಗಳನ್ನು ತಮ್ಮ ಪಠ್ಯಪುಸ್ತಕಗಳನ್ನಾಗಿ ಇಟ್ಟುಕೊಂಡು ಅವುಗಗಳ ಪರಿಶೀಲನೆ ಮಾಡಹತ್ತಿದರು. ಜಗತ್ತು ಎಂಬುದು ಸುಳ್ಳು, ಅದು ಮಾಯಾಮಯವು, ಎಂಬ ವಿಚಾರಗಳನ್ನು ಇವರು ಮುಂದಿಟ್ಟುಕೊಂಡು ಆಚಾರ ರಹಿತರಾಗಿ ವರ್ತಿಸಹತ್ತಿದರು. ಒಂದು ಕಾಲದಲ್ಲಿ ಇಂಥವರ ಸಂಖ್ಯೆಯು ಬಲವಾಗಿ ಬೆಳೆಯಿತು. ಇದರ ಪರಿಣಾಮವು ಸಮಾಜದ ಮೇಲೆ ವಿಘಾತುಕವಾಗಿಯೇ ಆಯಿತು. ಸಮಾಜದಲ್ಲಿ ಅನೇಕತರದ ದುರಾಚಾರಗಳು ಬೆಳೆದವು.

ಆದರೆ ಈಚೀಚೆಗೆ ಅರವಿಂದರ ವಿಚಾರಗಳು ಪ್ರಬಲವಾಗಿ ನಾಡಿನಲ್ಲಿ ಬೆಳೆಯಹತ್ತಿವೆ. ಇವುಗಳ ಪ್ರಚಾರದಿಂದ ಸಮಾಜದಲ್ಲಿ ವ್ಯತ್ಯಾಸಗಳು ಒದಗದೆ ಇದ್ದರೂ ಶಿವಶರಣರ ಧರ್ಮಕ್ಕೆ ಇವುಗಳ ಸಂಬಂಧವಿರುವದಿಲ್ಲೆಂಬುದನ್ನು ನಾವು ಲಕ್ಷಿಸುವದು ಅವಶ್ಯವಿದೆ.

ಈಚೀಚೆಗೆ ಇಂಚಗೇರಿ ಪಂಥ ಮುಂತಾದ ಪಂಥಗಳು ಬೆಳೆಯಹತ್ತಿವೆ. ಇವುಗಳಲಿ ವೀರಶೈವರು ಬಹು ಸಂಖ್ಯೆಯಿಂದ ಸೇರ್ಪಡೆಯಾಗ

ಈ ಎಲ್ಲ ಚಟುವಟಿಕೆಗಳು ವೀರಶೈವ ಸಂಸ್ಕೃತಿಗೆ ಬಾಧಕವಾಗಿರುತ್ತವೆ. ಆದರೆ ಇನ್ನುಮುಂದೆ ಶಿವಶರಣರ ಸಂಸ್ಕೃತಿಯನ್ನು ಪ್ರಸಾರಪಡಿಸುವ ಧ್ಯೇಯವನ್ನು ನಾವು ತಾಳಿ ಎಲ್ಲ ಕಡೆಗೂ ಶಿವಾನುಭವ ಪಾಠಶಾಲೆಗಳನ್ನು ಸ್ಥಾಪಿಸುವ ಕಾಲ ಬಂದಿದೆ. ಎಲ್ಲರೂ ಈ ಕಾರ್ಯವನ್ನು ಕೈಕೊಳ್ಳಲು ಉದ್ಯುಕ್ತರಾಗಬೇಕು. ಈಚೆಗೆ ಶಿವಶರಣರ ಉದ್ಗ್ರಂಥಗಳು ರಾ. ಬ. ಹಳಕಟ್ಟಿಯವರ ಪರಿಶ್ರಮದಿಂದ ಹೊರಪಟ್ಟಿರುತ್ತವೆ. ಅವುಗಳ ಪರಿಶೀಲನೆಯು ಎಲ್ಲ ಮಠಗಳಲ್ಲಿ ಮತ್ತು ವೀರಶೈವ ಸಂಸ್ಥೆಗಳಲ್ಲಿ ಬಹುಬಲವಾಗಿ ನಡೆಯಬೇಕು. ಇದರಿಂದ ಇಡೀ ದೇಶದಲ್ಲಿ ಒಂದು ಮಹತ್ತರವಾದ ಕ್ರಾಂತಿಯು ಉದ್ಭವಿಸುವದು ನಿಶ್ಚಯವು.

**ವಚನಶಾಸ್ತ್ರದ ಅಭ್ಯಾಸದ ಪದ್ಧತಿ:**—ವಚನಶಾಸ್ತ್ರದ ಅಭ್ಯಾಸವು ಒಂದು ಕಾಲದಲ್ಲಿ ಎಲ್ಲ ಕಡೆಗೂ ಬಹಳ ಪಸರಿಸಿದ್ದಿತೆಂದು ತೋರುತ್ತದೆ. ಆಗ ಮಠಗಳಲ್ಲಿ ಮತ್ತು ಬೇರೆ ಶಿವಾನುಭವಿಗಳಲ್ಲಿ ಈ ಅಭ್ಯಾಸವು ಯಾವ ರೀತಿಯಾಗಿ ನಡೆಯುತ್ತಿತ್ತೆಂಬುದನ್ನು ನಾವು ಸಂಶೋಧಿಸಲಾಗಿ ಅದು ಕೆಳಗೆ ಹೇಳಿದಂತೆ ನಡೆಯುತ್ತಿತ್ತೆಂದು ಕಂಡುಬಂದಿದೆ. ಒಬ್ಬ ಗುರುಗಳಿಂದ ಉಪದೇಶಹೊಂದಿದವರುಮಾತ್ರ ವಚನಶಾಸ್ತ್ರದ ಅಭ್ಯಾಸ ಮಾಡಲು ಯೋಗ್ಯರೆಂದು ಹಿಂದಿನ ಕಾಲದಲ್ಲಿ ತಿಳುವಳಿಕೆ ಇತ್ತು. ಆದ್ದರಿಂದ ಮಠಾಧಿಕಾರಿಗಳು ಅಥವಾ ಉಪದೇಶಪಡೆದವರು ಯಾರಿಗೂ ವಚನಗಳನ್ನು ಓದಿ ಹೇಳುತ್ತಿದ್ದಿಲ್ಲ. ಈ ಲೇಖಕನು ಚಿಕ್ಕವನಿರುವಾಗ್ಗೆ ಹಾವೇರಿಯ ಒಬ್ಬ ಸದ್ಗೃಹಸ್ಥರಲ್ಲಿ ಕೈಬರಹದ ತಾಡವೋಲೆಯ ಅನೇಕ ಗ್ರಂಥಗಳಿದ್ದವು. ಈ ಲೇಖಕನ ತಂದೆಯವರು ಅವರಿಂದ ಈ ಗ್ರಂಥಗಳ ಪರಿಚಯ ಮಾಡಿಕೊಳ್ಳಬೇಕೆಂದು ಅವರಿದ್ದಲ್ಲಿಗೆ ಹೋಗಿ ಕೆಲವೊಂದು ಗ್ರಂಥವನ್ನು ಉಭಯತರು ಕೂಡಿ ಓದುವರು. ಅವರು ತೆಗೆದುಕೊಂಡ ಮೊದಲನೆಯ ಗ್ರಂಥವು 'ಕರಣಹಸಿಗೆ' ಎಂಬುದಾಗಿತ್ತು. ಆಗ ಮೇಲೆ ಉಲ್ಲೇಖಿಸಿದ ಮಹನೀಯರು ತಾವು ಈ ಗ್ರಂಥ ಓದುವ ಪೂರ್ವದಲ್ಲಿ ಸ್ನಾನ ಮಾಡಿ ಶುಚಿರ್ಭೂತರಾದದ್ದಲ್ಲದೆ ನನ್ನ ತಂದೆಯವರಿಗೂ ಹಾಗೆಯೇ ಮಾಡಲು ತಿಳಿಸುತ್ತಿದ್ದರು. ಆ ಮೇಲೆ ಅವರು ಈ ಗ್ರಂಥವನ್ನು ಭಕ್ತಿಪೂರ್ವಕವಾಗಿ ಓದುವರು. ಮುಂದೆ ಅವರು ಷಟ್‌ಚಕ್ರ, ಮಂತ್ರಗೋಪ್ಯ, ಸೃಷ್ಟಿಯ ವಚನಗಳನ್ನು ಕ್ರಮೇಣ ಇದೇ ರೀತಿಯಾಗಿ ಅಭ್ಯಾಸ ಮಾಡಿದರು. ಉಪ [illegible] ಗ[illegible]ಗಳನು ಎಲಕೂ, ಮೊದಲು ಓದು

ಪರಿಪಾಠವು ಪೂರ್ವಕಾಲದಲ್ಲಿದ್ದಿತು. ಆಮೇಲೆ ಬಸವೇಶ್ವರನ ವಚನಗಳು, ಅಖಂಡೇಶ್ವರ ವಚನಗಳು ಹೀಗೆ ಇಂಥ ಗ್ರಂಥಗಳನ್ನು ಓದಲಿಕ್ಕೆ ತೆಗೆದು ಕೊಳ್ಳುವರು. ಈ ತರದ ಅಭ್ಯಾಸ ಪದ್ಧತಿಯು ಒಂದು ನೂರು ವರ್ಷಗಳ ಹಿಂದೆ ನಮ್ಮ ನಾಡಿನಲ್ಲಿ ಇದ್ದಿತು. ಆಗ ಶಿವಾನುಭವ ಅಭ್ಯಾಸ ಮಾಡು ವವರು ಗುರುಗಳಿಂದ ಉಪದೇಶ ಹೊಂದಿ ಅವರಿಂದ ಲಿಂಗಕ್ಕೂ ತಮಗೂ ಇರುವ ಮಂತ್ರಸಂಬಂಧವನ್ನು ಗುರುತಿಸಿಕೊಂಡು ಹಾಗೆ ಆಚರಿಸುವರು. ನಾನು ಒಬ್ಬ ಚರಮೂರ್ತಿಯ ಮಠಕ್ಕೆ ಹೋದಾಗ್ಗೆ ಅಲ್ಲಿ ನೆಲದ ಮೇಲೆ ಒಂದು ತಾಡವೋಲೆ ಗ್ರಂಥವು ಬಿದ್ದಿತ್ತು. ಅದನ್ನು ನಾನು ಎತ್ತಿ ಅದನ್ನು ನೋಡಲು ಅದರಲ್ಲಿ ನನಗೆ ಬೇಕಾದ ಒಂದು ವಚನವು ಕಂಡುಬಂದಿತು. ಅದರಲ್ಲಿ ಒಬ್ಬನು ದಾಸೀಪುತ್ರನಾಗಲಿ ಅಥವಾ ಯಾರಿದ್ದರೂ ಅವನು ಭಕ್ತಿಯುಳ್ಳವನಾಗಿದ್ದರೆ ಅವನು ದೀಕ್ಷೆಗೆ ಅರ್ಹನೆಂಬ ಅಭಿಪ್ರಾಯವು ಇದ್ದಿತು. ಇದನ್ನು ನಾನು ತತ್‌ಕ್ಷಣವೇ ಬರೆದುಕೊಂಡೆನು. ಅದನ್ನು ಚರಮೂರ್ತಿ ಗಳು ನೋಡಿ ಅದೇನು ನೀವು ಬರೆದುಕೊಂಡಿರೆಂದು ಕೇಳಿದರು. ಅವರ್ನ ಪುರಾತನ ಪದ್ಧತಿಯುವರು ಇದ್ದುದರಿಂದ ನಿಜಸಂಗತಿಯನ್ನು ನಾನು ಅವ ರಿಗೆ ತಿಳಿಸಲಿಲ್ಲ. ಈ ವಚನವನ್ನು ನಾನು ವಚನಶಾಸ್ತ್ರಸಾರದಲ್ಲಿ ಉದ್ಧರಿ ಸಿದ್ದೇನೆ. ಪ್ರಾಣಲಿಂಗ ಜ್ಞಾನದರ್ಪಣವೆಂಬ ಬೇರೊಂದು ಗ್ರಂಥವು ನನ ಸ್ನೇಹಿತರೊಬ್ಬರಿಗೆ ದೊರಕಿತ್ತು. ಅದನ್ನು ಅಚ್ಚು ಹಾಕಬಾರದೆಂದು ಅವ ರಿಂದ ವಚನ ತೆಗೆದುಕೊಂಡು ಅದನ್ನು ಆ ಗ್ರಂಥದ ಯಜಮಾನರು ಅವ ರಿಗೆ ಕೊಟ್ಟಿದ್ದರು. ಈ ಗ್ರಂಥವು ಮಹತ್ವದ್ದೆಂದು ನನಗೆ ತೋರಿದ್ದರಿಂದ ಇದನ್ನು ನಾನು ಅಚ್ಚುಹಾಕಿಸಿದ್ದೇನೆ. ಹೀಗೆ ಮಾಡಿದರೆ ಅದು ಬಹು ಜನರಿಗೆ ಉಪಯೋಗವಾಗುವದೆಂದು ನನ್ನ ತಿಳುವಳಿಕೆ ಇದ್ದುದ್ದರಿಂದ ನಾನು ಹೀಗೆ ಮಾಡಿದೆನು. ಇದೇ ಪ್ರಕಾರ ನಾನು ಉದ್ಧರಣೆಯ ಓಲೆಗಳನ್ನು ಸಂಪಾದಿಸಿದೆನು. ಅವು ಬಹು ಗೌಪ್ಯದಾದವುಗಳು. ಅವುಗಳಲ್ಲಿ ಮಂತ್ರಾ ಕ್ಷರಗಳನ್ನು ಬರೆದಿದ್ದಾರೆ ಅದಕ್ಕೆ ಒಂದು ವಾಚ್ಯ ಎಂದರೆ ಭಾವಾರ್ಥ ವಿದೆ. ಆದರೆ ಈ ಮಂತ್ರಾಕ್ಷರಗಳ ಅರ್ಥವು ನಮಗೆ ಏನೂ ತಿಳಿದಿರುವ ದಿಲ್ಲ. ಇದರ ಮೇಲಿಂದ ನಮ್ಮ ಹಿಂದಿನವರು ಶಿವಾನುಭವ ಗ್ರಂಥಗಳನ್ನು ಎಷ್ಟು ಭಕ್ತಿಯಿಂದ ಕಾದಿಡುತ್ತಿದ್ದರೆಂಬುದು ತಿಳಿದುಬರುತ್ತದೆ. ಹೀಗಿದ್ದರೂ ನಾನು ಇವುಗಳು ಜನರಿಗೆ ಉಪಯೋಗವಾಗಬೇಕೆಂದು ಅವುಗಳನ್ನು ಸಂಗ್ರ ಹಿಸಿ ಅಚ್ಚು ಹಾಕಿ ಮಾರಾಟಕ್ಕೆ ಇಟ್ಟಿದ್ದೇನೆ. ಆದರೆ ಈಗಿನ ವೀರಶೈವರು

ಅವು ತಮಗೆ ತಿಳಿಯುವದಿಲ್ಲೆಂದು ಅವುಗಳಿಗೋಸ್ಕರ ತಾತ್ಸಾರ ಭಾವ ವುಳ್ಳವರಾಗಿ ನಡೆಯಹತ್ತಿರುತ್ತಾರೆ. ಇದರಿಂದ ಹಿಂದಿನವರ ಪದ್ಧತಿಯೇ ಯೋಗ್ಯವಾದದ್ದೆಂದು ನನಗೆ ಈಗ ತೋರಹತ್ತಿದೆ. ಆಚಾರ ವಿಚಾರಗಳ ವಿಷಯಗಳು ಯಾವಾಗಲೂ ಗೌಪ್ಯವಾಗಿ ಇಡಲೇಬೇಕೆಂತಲೂ ತಾತ್ವಿಕ ವಿಷಯಗಳನ್ನು ಮಾತ್ರ ಸಾರ್ವಜನಿಕರ ತಿಳಿವಳಿಕೆಗೆ ತರುವದು ಅವಶ್ಯ ವೆಂತಲೂ ನನಗೆ ತೋರಹತ್ತಿದೆ. ಒಟ್ಟಿಗೆ ಶಿವಾನುಭವ ಶಾಸ್ತ್ರವು ಘನತರ ವಾದುದು ಎಂಬುದನ್ನು ವೀರಶೈವರು ತಿಳಿಯುವದು ಅವಶ್ಯವೆಂದು ತೋರಿದ್ದ ರಿಂದ ನಾನು ಈ ಬರಹವನ್ನು ಬರೆದಿದ್ದೇನೆ.

**ಶಿವಾನುಭವ ಸಂಸ್ಥೆಗಳ ಬಗ್ಗೆ ಸೂಚನೆ:**—ನಾನು ಬಹಳ ವರ್ಷ ಗಳಿಂದ ಶಿವಾನುಭವ ಸಂಸ್ಥೆಗಳ ನಿರ್ಮಾಣಕ್ಕೋಸ್ಕರ ಪ್ರಯತ್ನಮಾಡುತ್ತ ಬಂದಿದ್ದು ಆ ಪ್ರಯತ್ನಗಳು ನಿಷ್ಫಲವಾಗುತ್ತ ಬಂದಿರುತ್ತವೆ. ನಮ್ಮಲ್ಲಿ ಕೆಲವರು ಮಾತ್ರ ಇಂಥ ಪ್ರಯತ್ನಗಳು ಫಲಕಾರಿ ಎಂದು ತಿಳಿದು ಅಲ್ಲಲ್ಲಿ ಶಿವಾನುಭವ ಸಂಘಗಳನ್ನೂ ಅಕ್ಕನಬಳಗಗಳನ್ನೂ ಸ್ಥಾಪಿಸಿರುತ್ತಾರೆ. ಈ ಸಂಸ್ಥೆಗಳಿಂದ ಕೆಲವು ಕಾರ್ಯಗಳು ನಡೆದಿವೆ. ಆದರೆ ಅವುಗಳಿಂದ ಮಹ ತ್ವದ ಕಾರ್ಯಗಳು ಅವವೂ ಜರಿಗಿಲ್ಲೆಂಬುದು ಸ್ಪಷ್ಟವಿದೆ. ಆದ್ದರಿಂದ ಇನ್ನುಮೇಲೆ ಇವುಗಳ ಬಗ್ಗೆ ನಾವು ಹೊಸ ಹಾದಿಯನ್ನು ಹುಡುಕುವದು ಅವಶ್ಯವಿದೆ. ಇದನ್ನು ಕುರಿತು ಶಿವಾನುಭವ ವಾಚಕರು ಆಲೋಚಿಸುವ ರೆಂದು ನಮ್ಮ ವಿಜ್ಞಾಪನೆ ಇದೆ.

ಈ ವರೆಗೆ ನಡೆದುಬಂದ ಕಾರ್ಯ ಪದ್ಧತಿಯನ್ನು ನಾನು ಕೆಳಗೆ ವಿವರಿಸಿದ್ದೇನೆ. ಅದು ಹೇಗೆಂದರೆ ನಾನು ನನ್ನನ್ನು ಭೆಟ್ಟಿಯಾದವರಿಗೆ ನಿಮ್ಮ ಗ್ರಾಮದಲ್ಲಿ ಶಿವಾನುಭವ ಪ್ರೇಮಿಗಳು ಇರುತ್ತಾರೋ ಹೇಗೆ ಎಂಬು ದನ್ನು ವಿಚಾರಿಸಿ ಅವರು ಇದ್ದಾರೆಂದು ತಿಳಿದಲ್ಲಿ ಅಂಥವರ ನೇತೃತ್ವ ದೊಳಗೆ ಗ್ರಾಮದಲ್ಲಿರುವ ಇತರ ಪ್ರೇಮಿಗಳೊಡನೆ ಸಹಕರಿಸಿ ಒಂದು ಶಿವಾನುಭವ ಸಂಸ್ಥೆಯನ್ನು ಸ್ಥಾಪಿಸಿರೆಂದು ಹೇಳುತ್ತ ಬಂದಿದ್ದೇನೆ. ಈ ಪ್ರಕಾರ ಅನೇಕರು ಶಿವಾನುಭವ ಸಂಘಗಳನ್ನು ತಮ್ಮಲ್ಲಿ ಸ್ಥಾಪಿಸುತ್ತ ವಾರಕ್ಕೊಂದಾವರ್ತಿ ಒತ್ತಟ್ಟಿಗೆ ಸೇರಿ ವಚನ ಗ್ರಂಥಗಳನ್ನು ಪರಿಶೀಲಿಸುತ್ತ ಬಂದಿದ್ದಾರೆ. ಇದು ಒಂದು ಪ್ರಗತಿಯೆಂದು ಅನೇಕರು ತಿಳಿದಿರುತ್ತಾರೆ. ಆದರೆ ಇವುಗಳಲ್ಲಿ ಪ್ರಗತಿಯ ಚಿನ್ಹಗಳು ನನಗೆ ತೋರಿ ಬರುವದಿಲ್ಲ.

ಇಂಥ ಸಂಘಗಳು ಬೇಗನೆ ನಾಶವಾಗಿರುತ್ತವೆ. ಆದ್ದರಿಂದ ಈ ಕ್ರಮವನ್ನು ನಾವು ಬಿಟ್ಟು ಕೊಟ್ಟು ಹೊಸ ಹಾದಿಯನ್ನು ಹಿಡಿಯುವದು ಅವಶ್ಯವೆನಿಸ ಹತ್ತಿದೆ. ಅದನ್ನು ನಾನು ಕೆಳಗೆ ವಿವರಿಸುತ್ತಿದ್ದೇನೆ:

ಒಂದು ಗ್ರಾಮದಲ್ಲಿ ಒಬ್ಬಾನೊಬ್ಬನು ಶಿವಾನುಭವ ಪ್ರೇಮಿಯು ಇದ್ದಾನೆಂದು ತಿಳಿಯುವಾ. ಅವನು ಶಿವಾನುಭವ ಪ್ರಚಾರ ಮಾಡಬೇಕೆಂದು ಗ್ರಾಮದಲ್ಲಿಯ ಬೇರೆ ಯಾರೊಬ್ಬರಿಗೂ ಹೇಳಲಿಕ್ಕೆ ಹೋಗದೆ ಮೊದಲು ಅವನು ತನ್ನ ಮನೆಯಲ್ಲಿಯೇ ಇಂಥ ಗ್ರಂಥಗಳನ್ನು ಭಕ್ತಿಪೂರ್ವಕವಾಗಿ ಅಭ್ಯಾಸ ಮಾಡಹತ್ತಬೇಕು. ಅವುಗಳಲ್ಲಿರುವ ಉಚ್ಚ ತತ್ವಗಳನ್ನು ತಾನೇ ಓದಹತ್ತಬೇಕು. ಅವುಗಳನ್ನು ತಾನೇ ಆಲೋಚಿಸಬೇಕು. ಶರಣರನ್ನು ಅವನು ನಿಂತಲ್ಲಿ, ಕುಳಿತಲ್ಲಿ, ಹೊರಗೆ ಹೋದಲ್ಲಿ ತನ್ನ ಮನಸ್ಸಿಗೆ ತಂದುಕೊಂಡು ಅವುಗಳನ್ನು ಮನನ ಮಾಡಿಕೊಳ್ಳಬೇಕು, ಪಾಠ ಮಾಡಬೇಕು. ಅಥವಾ ಕೆಲವೊಂದು ಧಾಟಿಯಿಂದ ಅನ್ನಬೇಕು. ಈ ಕಾರ್ಯವನ್ನು ಅವನು ಭಕ್ತಿಪೂರ್ವಕವಾಗಿ ಜರುಗಿಸಬೇಕು. ಅವನು ಶಿವಶರಣರ ಚರಿತ್ರಗಳನ್ನು ಮನಸ್ಸಿನಲ್ಲಿ ತಂದುಕೊಂಡು ಭಕ್ತಿ ವಿಶ್ವಾಸಗಳಿಂದ ಅವುಗಳನ್ನು ನೆನೆಯಬೇಕು. ಅವನು ತನ್ನ ಮಕ್ಕಳು, ಹೆಂಡಿರು, ಮತ್ತು ಮನೆಯಲ್ಲಿರುವ ಇತರ ಜನರಿಗೆ ಅವುಗಳನ್ನು ತಿಳಿಸಿ ಹೇಳಬೇಕು. ಅವನು ಮೊದಲು ನೆರೆಮನೆಯವರಿಗೆ, ತನ್ನ ಮಿತ್ರರಿಗೆ ಅವುಗಳನ್ನು ತಿಳಿಸಿಹೇಳಲಿಕ್ಕೆ ಹೋಗಬಾರದು. ಯಾಕೆಂದರೆ ಅವರಿಗೆ ಅವುಗಳಲ್ಲಿ ವಿಶ್ವಾಸವಿರಲಿಕ್ಕಿಲ್ಲ. ಅಥವಾ ದುರ್ಲಕ್ಷ್ಯ ಮಾಡುತ್ತಿರಬಹುದು. ಅಥವಾ ಅಪಹಾಸ್ಯ ಮಾಡುತ್ತಿರಬಹುದು. ಶಿವಶರಣರ ಉಕ್ತಿಗಳನ್ನು ಕೇಳಿ ಹೀಗೆ ಅಪಹಾಸ್ಯ ಮಾಡಿದ್ದಾದರೆ ಅದರ ದೋಷವು ಅವನಿಗೆ ಹತ್ತುತ್ತದೆ. ಆದ್ದರಿಂದ ಆರಂಭದಲ್ಲಿ ತನ್ನ ಕುಟುಂಬದವರಿಗೆ ಶಿವಾನುಭವ ತತ್ವಗಳನ್ನು ತಿಳಿಸಿ ಹೇಳಿ ಕುಟುಂಬ ಸುಧಾರಣೆ ಮಾಡಬೇಕು. ಹೀಗೆ ಮನೆಯವರನ್ನು ಬಿಟ್ಟು ಹೆರವರಲ್ಲಿ ಪ್ರಚಾರ ಮಾಡಲಿಕ್ಕೆ ಹೋಗುವದು ಸರಿಯಾದುದಲ್ಲ. ಇದು ಪುರಾತನ ಪದ್ಧತಿಯೂ ಅಲ್ಲ. ಇದನ್ನು ನಾನು ಹಿಂದಿನ ಟಿಪ್ಪಣಿಯಲ್ಲಿ ಪೂರ್ಣವಾಗಿ ವಿವರಿಸಿದ್ದೇನೆ. ಬಸವೇಶ್ವರನು ಒಂದು ವಚನದಲ್ಲಿ ಹೇಳಿರುವದೇನಂದರೆ, "ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಧನವ ಸಂತೈಸಿಕೊಳ್ಳಿ ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನೆರೆಮನೆಯವರ ದುಃಖಕ್ಕೆ ಅಳುವರ

ಮೆಚ್ಚ ನಮ್ಮ ಕೂಡಲಸಂಗಮದೇವ." ಎಂದು ಹೇಳಿದ್ದಾನೆ. ಇದು ಅಕ್ಷರಶಃ ನಿಜವಿರುತ್ತದೆ. ಇಂಥ ಉಚ್ಚ ಧಾರ್ಮಿಕಮನೆತನಗಳ ಸಂಖ್ಯೆಯು ಗ್ರಾಮದಲ್ಲಿ ಬೆಳೆಯುತ್ತ ಹೋದಹಾಗೆ ಸಮಾಜ ಸುಧಾರಣೆಯು ನಿಶ್ಚಯವಾಗಿ ಮುಂದೆ ಜರಗಹತ್ತುತ್ತದೆ.

---

# ವೀರಶೈವರು ಶಕ್ತಿವಿಶಿಷ್ಟಾದ್ವೈತಿಗಳು ಹೇಗೆ ?

[ಲೇ:— ಶ್ರೀಯುತ ಶಿವಾನಂದಸ್ವಾಮಿಗಳು ಗವಿಮಠ, ]

[ಶಿವಾನುಭವ ಶಾಸ್ತ್ರವು ನಮ್ಮ ಭಾರತ ದೇಶದಲ್ಲಿ ಹೊಸದಿದ್ದು ಅದನ್ನು ಬಹು ಸ್ವಲ್ಪ ಜನರು ಅರಿತಿರುವರು. ದ್ವೈತಾದ್ವೈತ ವಿಶಿಷ್ಟಾದ್ವೈತ ಮಾರ್ಗಗಳು ಜನರಲ್ಲಿ ಬಹಳ ಪ್ರಚಾರಹೊಂದಿವೆ. ಆದರೆ ಶಿವಾನುಭವ ಶಾಸ್ತ್ರವು ಈ ಎಲ್ಲ ಶಾಸ್ತ್ರಗಳಲ್ಲಿರುವ ತತ್ವಗಳನ್ನು ಒಳಕೊಂಡು ಬೌದ್ಧ ಶೈವಧರ್ಮಗಳಲ್ಲಿರುವ ವ್ಯವಹಾರಿಕ ತತ್ವಗಳನ್ನು ತನ್ನಲ್ಲಿ ಹೆಣೆದುಕೊಂಡಿದ್ದರೂ ಈ ಮಾರ್ಗದ ವಿವರಣೆಗಳು ಇನ್ನೂ ಸಮಾಜದಲ್ಲಿ ವಿಶದವಾಗಿ ನಿರೂಪಿತವಾಗಿಲ್ಲ. ಈ ಕಾರ್ಯವನ್ನು ಪ್ರಸ್ತುತ ಲೇಖಕರು ಮಾಡುತ್ತಲಿದ್ದಾರೆ. ಅವರ ವಿದ್ವತ್ಪ್ರಚುರವಾದ ಲೇಖಗಳು ಶಿವಾನುಭವ ಪತ್ರಿಕೆಯಲ್ಲಿ ಆಗಿಂದಾಗ್ಗೆ ಪ್ರಸಿದ್ಧವಾಗುತ್ತಲಿವೆ. ಅವರು ಬರೆದಿರುವ ಈಗಿನ ಲೇಖವನ್ನು ವಾಚಕರು ಲಕ್ಷಗೊಟ್ಟು ಮನನ ಮಾಡಿಕೊಳ್ಳಬೇಕೆಂದು ನಮ್ಮ ಸೂಚನೆ. ಶಿವಾನಂದರು ಸುಶಿಕ್ಷಿತರಿದ್ದಾರೆ. ಅವರು ಒಂದು ಕಾಲದಲ್ಲಿ ಶಿಕ್ಷಣಖಾತೆಯಲ್ಲಿ ಉಚ್ಚದರ್ಜೆಯ ಅಧಿಕಾರಿಗಳಿದ್ದು ಅವರು ಆ ಸ್ಥಾನಕ್ಕೆ ರಾಜೀನಾಮೆಯನ್ನು ಕೊಟ್ಟು ಧರ್ಮಸಂಶೋಧನ ಕಾರ್ಯಗಳಲ್ಲಿ ತೊಡಗಿರುವರು. ಅವರು ಒಂದು ಕಾಲಕ್ಕೆ ನವಕರ್ನಾಟಕ ಪತ್ರಿಕೆಯಲ್ಲಿ ಗ್ರಾಮೋದ್ಧಾರದ ವಿಷಯವಾಗಿ ಬಹು ಮಹತ್ವದ ಲೇಖನಗಳನ್ನು ಬರೆಯುತ್ತಿದ್ದರು. ಅವರು ಈಗ ಆಶ್ರಮವನ್ನು ಹೊಂದಿ ಪಟ್ಟಾಧಿಕಾರಿಗಳಾಗಿದ್ದಾರೆ. ಅವರು ಶಿವಾನುಭವ ವಿಷಯದ ಮೇಲೆ ಮನನೀಯ ಲೇಖಗಳನ್ನು ಬರೆಯುತ್ತಿದ್ದು ಅವು ಉಚ್ಚ

ದರ್ಶಿಯುವಿರುತ್ತವೆ. ಅವುಗಳಲ್ಲಿ ಅವರು ಬಹು ಸ್ಫುಟವಾಗಿ ತಮ್ಮ ಪ್ರಗಲ್ಭ ವಿಚಾರಗಳನ್ನು ನಿರೂಪಿಸುತ್ತಲಿರುವರು. ವಾಚಕರು ಅವುಗಳನ್ನು ಲಕ್ಷಿಸಬೇಕೆಂದು ನಮ್ಮ ವಿನಂತಿ ಇದೆ. —**ಸಂಪಾದಕ**]

ವೀರಶೈವರು ಶಿವೋಪಾಸಕರು. ಅದಕ್ಕಾಗಿ ಅವರು ಲಿಂಗವನ್ನು ಅಂಗದಮೇಲೆ ಯಾವಾಗಲೂ ಧರಿಸಿ ಅದರ ಪೂಜಾದಿಗಳನ್ನು ಮಾಡಿ, ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳಂತೆ ನಡೆಯುವರು. ಇದರಿಂದ ಶಿವಾನುಭವ ಪಡೆಯುವರು. ಇದೇ ಶಿವಯೋಗವೆನಿಸುವದು. ಅಂದರೆ ಶಿವನೊಡನೆ ಶಕ್ತಿಯನ್ನು ಕೂಡಿಸುವದೇ ಶಿವಯೋಗ ಅಥವಾ ಶಿವಾನುಭವ. ಶಿವ—ಅನು—ಭವ, ಶಿವ = ಆನಂದ, ಸುಖ. ಅನು = ಜಯು, ಭವ = ಜನನ ಮರಣಗಳಿಂದ ಕೂಡಿದ ಸಂಸಾರ ಅಂದರೆ ಜನನ ಮರಣಗಳಿಂದ ಕೂಡಿದ ಸಂಸಾರದಲ್ಲಿ ನಿಜಸುಖ ಆನಂದಗಳನ್ನು ಜಯಿಸುವದು ಎಂದು ಅರ್ಥವಾಗುವದು. ಶಿವನ ನೆನಹಿನೊಡನೆ ಸಂಸಾರ ಚಕ್ರದ ಜನನ ಮರಣದಲ್ಲಿಯೂ ಬಾಳುವದು. ಶಿವಾರ್ಪಣ ಬುದ್ಧಿಯೊಡನೆ ಜೀವನ ಸಾಗಿಸುವದು ಎಂದು ಆಗುವದು. ಈ ಸುಖ ಆನಂದಗಳು ಈಗ ಶಿವನನ್ನು ಶಕ್ತಿಯು ಅಗಲಿದ್ದರಿಂದ ಇಲ್ಲವಾಗಿವೆ. ಸಹಸ್ರಾರದಲ್ಲಿ ಶಿವಶಕ್ತಿಯರ ಸ್ಥಾನವು. ಅಲ್ಲಿಂದ ಆಣವ, ಮಾಯಾ, ಕಾರ್ಮಿಕ ಮಲಿನಗಳಿಂದ ಶಕ್ತಿಯು ಶಿವನನ್ನು ಅಗಲಿ ಕೆಳಗಿಳಿದು ಆರು ಚಕ್ರಗಳನ್ನು ದಾಟಿ ಮೂಲಾಧಾರದ ತಳದಲ್ಲಿ ತ್ರಿಕೋಣದಲ್ಲಿ ಹಾವಿನೋಪಾದಿಯಲ್ಲಿ ಕೆಳಮುಖ ಮಾಡಿ ಬಿದ್ದಿರುವಳು. ಇದುವೇ ಕುಂಡಲಿನಿ ಶಕ್ತಿ ಅಥವಾ ಗುಂಡಿಲಿ ಸರ್ಪವೇ ಸರಿ. ಕುಂಡಲಿನಿ ಶಕ್ತಿಯು ಮುಖವನ್ನು ಮೇಲೆ ಮಾಡಿ ಆರು ಚಕ್ರಗಳನ್ನು ಏರಿ ಸಹಸ್ರಾರದಲ್ಲಿಯ ತನ್ನ ಪತಿಯಾದ ಶಿವನನ್ನು ಕೂಡಿದರೆ ಅದೇ ಶಿವಯೋಗವಾಗುವದು. ಆಗ ನಿಜವಾದ ಶಿವಾನುಭವವಾಗುವದು. ನಿಜವಾದ ಸುಖ ಆನಂದಗಳು ಪ್ರಾಪ್ತವಾಗುವವು. ಶಿವನನ್ನು ಶಕ್ತಿಯು ಅಗಲಿ, ಮೂಲಾಧಾರದ ತಳದಲ್ಲಿ ಕೆಳಮುಖಮಾಡಿ ಬಿದ್ದಿರುವದರಿಂದ ಅದು ಬರೇ ವಿಷಯ ಸುಖವನ್ನೇ ಕಾರುವದು. "ಕುಂಡಲಿಯೆಂಬ ಮಾಯಾ ಸರ್ಪವು ತನ್ನ ಬಾಲವ ಬ್ರಹ್ಮರಂಧ್ರಕ್ಕೆ ಸೇರಿಸಿ। ನಾಭಿಚಕ್ರವ ಸುತ್ತಿಕೊಂಡು ಅಧೋಮುಖವಾಗಿ ಇಂದ್ರಿಯವೆಂಬ ವಿಷವ ಕಾರುತಿರ್ಪುದು ನೋಡಾ। ಆ ವಿಷಯದ ನಂಜು ತಲೆಗೇರಿದಲ್ಲಿ ಅಸಿಯ ಜವ್ವನೆಯರ ಸಂಪತ್ಸುಖವು

ಬಹು ಸವಿಯಿಂದು ತಲೆದೂಕುತಿರ್ಪರು ನೋಡಾ। ಸಕಲ ಪ್ರಾಣಿಗಳು ಇದು ಪಶುಪತಿ ಮಾಡಿದ ಮಾಯಾ ವಿಧಿಯೆಂದು ತಿಳಿಯದೆ ಹಸೆಗೆಟ್ಟು ಹೋಯಿತು ನೋಡಾ ಮೂಜಗವೆಲ್ಲ ಅಖಂಡೇಶ್ವರಾ॥" ಕಾರಣ ಅಧೋಮುಖ ಮಾಡಿದ ಶಕ್ತಿಯನ್ನು ಮೇಲು ಮುಖ ಮಾಡಿಸಿ, ಆಧಾರ-ಸ್ವಾಧಿಷ್ಠಾನ-ಮಣಿಪೂರಕ-ಅನಾಹತ-ವಿಶುದ್ಧಿ-ಆಜ್ಞೇಯು ಎಂಬ ಆರು ಚಕ್ರಗಳಗುಂಟ ಏರಿಸಿ, ಬ್ರಹ್ಮರಂಧ್ರದಲ್ಲಿ ಹಾಯ್ದು ಸಹಸ್ರಾರದ ತುಟ್ಟ ತುದಿಗೆ ಏರಿ, ಶಿವನೊಡನೆ ವಿರಾಜಿಸುವಂತೆ ಮಾಡಿದರೆ ಶಿವಯೋಗ ನಾಗುವದು. ಆಗ ನಿಜಸುಖ ಆನಂದಗಳುಂಟಾಗುವವು. ಆಗ ಸತ್ ಪರಶಿವನೊಡನೆ ಚಿತ್ತ ಪಾರ್ವತಿ ಆದಿಶಕ್ತಿ ಕೂಡಿದಂತಾಗಿ ಆನಂದವು ಹರಿಯುಹತ್ತುವದು. ಆ ಆನಂದವು ಮುಂದೆ ಶಕ್ತಿರೂಪದಿಂದ ಪಶ್ಚಿಮ ಚಕ್ರ, ಶಿಖಾಚಕ್ರ, ಅಣುಚಕ್ರಗಳನ್ನು ದಾಟಿ, ಸುಷುಮ್ನದ ಎಡಬಲಕ್ಕೆ ಇರುವ ಈಡಾಪಿಂಗಳದ ನಾಳದಗುಂಟ ಹೇದು ಬಂದು ಪಾದಗಳ ಹೆಬ್ಬೆರಳುಗಳಿಗೆ ಆ ಚಿಚ್ಛಕ್ತಿಯು ಇಳಿದು ಬರುವಳೆಂದು ವೀರಶೈವ ಷಟ್ಸ್ಥಲಗಳಲ್ಲಿ ವಿವರಿಸಲಾಗಿದೆ. ಶೈವರು ಇದಕ್ಕೆ ಶಕ್ತಿಪಾತವೆನ್ನುವರು. ಜೈನರು ಇದಕ್ಕೆ ಜಂಪಾಪಾತವೆನ್ನುವರು. ಆದರೆ ವೀರಶೈವರು ಇದಕ್ಕೆ ಲಿಂಗಪ್ರಸಾದ ಭೋಗ (ಅಮೃತಪ್ರಾಶನ) ವೆನ್ನುವರು. ಶಿವಯೋಗದಲ್ಲಿ ವಿಶೇಷತಃ ಶಕ್ತಿಯೊಡನೇ ನಮ್ಮ ಕೆಲಸವು ಬಹಳೇ ಇರುವದು. ಅದ ಕ್ಕಾಗಿ ಇದಕ್ಕೆ ಶಕ್ತಿವಿಶಿಷ್ಟಾದ್ವೈತವೆಂದು ಹೇಳುವರು.

ಇದರ ಬಗೆಗೆ ಶ್ರೀ ಚನ್ನಬಸವನವರು— "ಕಾಯವು ಜೀವವು, ಜೀವವು ಕಾಯವು, ಇವು ಎಂತು ಬೆರಸಿಪ್ಪವಂತೆ, ಲಿಂಗದೊಳಗೆ ಜಂಗಮ, ಜಂಗಮದೊಳಗೆ ಲಿಂಗ, ಬೆರಸಿಪ್ಪುದು; ಭಿನ್ನಭಾವವಿಲ್ಲದೆ." 'ನ ಶಿವೇನ ವಿನಾಶಕ್ತಿರ್ನ ಶಕ್ತಿರಹಿತಃ ಶಿವಃ। ಪುಷ್ಪ ಗಂಧ ವಿನಾ ದೈವ ಮರುತಾಂಬರ ಯೋರಿವ॥' ಎಂಬುದಾಗಿ ಭಾವಭೇದವಿಲ್ಲದ ಜಂಗಮವೇ ಲಿಂಗವು ಕೂಡಲಚನ್ನಸಂಗಮದೇವಾ" ಇದರಂತೆ ನಿಜಗುಣ ಶಿವಯೋಗಿಗಳು ಸಹ— "ಇಂಗಡಲೊಳಿಂಪು ಬೆಳದಿಂಗಳೊಳು ತಂಪು ಕಂಪು। ಮಂಗಳೊಳು ಕಂಪು ಬೆರೆದಂತೆ ಪರಮನೊಳು। ಪಿಂಗದಗಸುತೆ ನತನಪ್ಪ॥" ಇದರಂತೆ ಚಾಮರಸನು ಸಹ— "ಶಶಿಯು ಶೀತಳದಂತೆ ಕರ್ಪೂರ। ದೆಸೆವ ಕಂಪುಗಳಂತೆ ಕನಕದ। ವಿಮಲ ಕಾಂತಿಗಳಂತೆ

ನವ್ಯ ಸುಧಾಂಶು ರುಚಿಯಂತೆ । ಲಲಿತ ಮಿಥುನಾಳಿಃಪ ಹೊರಗಾ- । ಣಿಸದೆ ಶಕ್ತಿ ಸಮೇತ ಶಂಕರ । ನೊಸೆದು ಕುಳಿತು ಮೆರೆವುತಿರ್ದನು ದಿವ್ಯ ತೇಜದಲಿ. ” ಮೇಲಿನ ಮೂರು ಮಾತುಗಳಲ್ಲಿಯೂ ಕೂಡ ಶಿವ + ಶಕ್ತಿ ಅಥವಾ ಸತ್ + ಚಿತ್‌ಗಳ ಮಿಲನವನ್ನೇ ಸೂಚಿಸುವವು. ಇವರು ಅಗಲಿದರೆ ಆನಂದ, ಸುಖ, ಶಾಂತಿ, ಜ್ಞಾನಗಳು ಇಲ್ಲವಾಗುತ್ತವೆ. ಕೂಡಿದರೆ ಅವು ಸಿಗುತ್ತವೆಂದೇ ಕೆಲವು ಸ್ಪಷ್ಟ ವಸ್ತುಗಳನ್ನು ಉದಹರಿಸಿ ತೋರಿಸಿದ್ದಾರೆ. ಈಗ ನಮಗೆ ದುಃಖ, ಅಶಾಂತಿ, ಅಜ್ಞಾನ, ಅವಿದ್ಯೆಗಳು ಉಂಟಾಗಲಿಕ್ಕೆ ಆ ಚಿಚ್ಛಕ್ತಿಯು ಸಹಸ್ರಾರದಲ್ಲಿರುವ ಪರಶಿವನನ್ನು ಅಗಲಿ, ಮೂಲದ ತಳದಲ್ಲಿ ಬಿದ್ದಿರುವದೇ ಕಾರಣವಾಗಿದೆ. ಆ ಚಿಚ್ಛಕ್ತಿಯನ್ನೇ ಜಾಗ್ರತಗೊಳಿಸಿ ಮೇಲೇರಿಸಿ, ಪರಶಿವನನ್ನು ಕೂಡಿಸುವದೇ ಷಟ್ಸ್ಥಲದ ಸಾರವಾಗಿದೆ. ಶಕ್ತಿಯು ಕೂಡ ನಮ್ಮ ಸರ್ವ ವ್ಯವಹಾರವಿರುವದರಿಂದ ಇದಕ್ಕೆ ಶಕ್ತಿವಿಶಿಷ್ಟಾದ್ವೈತವೆನ್ನಬೇಕಾಗಿದೆ. ಈ ಚಿತ್ತು ಸಮುದ್ರದಲ್ಲಿಯ ಒಡಬಾಗ್ನಿಯಂತೆ, ಚಂದ್ರನಲ್ಲಿಯ ಅಮೃತದಂತೆ, ಹೂವಿನೊಳಗಿನ ಗಂಧದಂತೆ, ಕೆನ್ನೆಯಲ್ಲಿಯ ಸ್ನೇಹದಂತೆ ಅಡಗಿರುವದೆಂದು ಬಸವಣ್ಣನವರು ಹೇಳಿದ್ದಾರೆ. ಅದಕ್ಕೆ ಶಿವಶಕ್ತಿಯರನ್ನು ಅಗಲಿಸಲಿಕ್ಕೆ ಬರುವದಿಲ್ಲ. ಮೊದಲು ಮಹತ್ ಎಂಬುದು ಒಂದೇ ಇತ್ತು. ಇದರಲ್ಲಿ ಚೈತನ್ಯ ಹಾಗು ದೃಶ್ಯ ಹೀಗೆ ಎರಡು ಕೂಡಿರುವವು. ಚೈತನ್ಯವು ಮೇಲಿನ ಅಂತಸ್ತಿನಲ್ಲಿ, ದೃಶ್ಯವು ಕೆಳಗಿನ ಅಂತಸ್ತಿನಲ್ಲಿ ಇರುವದುಂಟು. ಆದರೆ ಇವುಗಳಿಗೆ ಮೂಲವಾದುದು ಸತ್ ವಸ್ತುವೆಂದು ಹೇಳಬಹುದು. ಇದಕ್ಕೆ ಶೈವರು ಶಿವನೆಂದೂ ವೇದಾಂತಿಗಳು ಬ್ರಹ್ಮನೆಂದೂ ಹೇಳುವರು. ಇದಕ್ಕೆ ವೀರಶೈವರು ಮಹಾಲಿಂಗವೆಂದು ಕರೆದಿದ್ದಾರೆ. ಇದರಲ್ಲಿ ಎರಡು ಭೇದಗಳುಂಟು. ಸ್ಥಿರ—ಶಿವ—ಲಿಂಗ ಎಂದು ಒಂದನೇದು. ಚರ—ಶಕ್ತಿ—ಜಂಗಮ ಎಂಡು ಎರಡನೇದು. ಇದಕ್ಕೆ ಸತ್ ಮತ್ತು ಚಿತ್ ಎಂದು ಬೇರೆ ಎರಡು ಹೆಸರುಗಳೂ ಸಹ ಉಂಟು. ಈ ಪ್ರಕಾರ ಜಗತ್ತಿನಲ್ಲಿ ಶಿವಶಕ್ತಿಯರು ಕೂಡಿರುವರೆಂದು ವೀರಶೈವರು ನಂಬಿದ್ದಾರೆ.

ಈ ಕಾರಣದಿಂದಲೂ ಸಹ ಶಕ್ತಿವಿಶಿಷ್ಟಾದ್ವೈತವೆಂದು ಹೇಳಬಹುದು. ಈ ಶಕ್ತಿಯು ಒಂದು ಚೈತನ್ಯಯುಕ್ತ ಪ್ರವಾಹವಾಗಿರುವದು. ಇದು ಜಗತ್ತಿನಲ್ಲಿ ಸಂಪೂರ್ಣ ತುಂಬಿಕೊಂಡಿದೆ. ತೋರುವ ಸ್ಪಷ್ಟ

ವಸ್ತುಗಳೆಲ್ಲ ಅದರ ಚಲನವಲನೆಯ ಪರಿಣಾಮುಗಳೇ ಸರಿ. ಪರಮಾತ್ಮ ನನ್ನು ಕೂಡಬೇಕೆಂಬ ಲವಲವಿಕೆಗೆ ಈ ಚೈತನ್ಯಶಕ್ತಿಯೇ ಕಾರಣವಾಗಿರುವದು. ಇದಕ್ಕೆ ಪ್ರೇರಣೆ ಎಂದು ಹೇಳುವರು. ಇದಕ್ಕೆಲ್ಲ ಚಿತ್ ಶಕ್ತಿಯ ಪರಿಣಾಮವೇ ಕಾರಣವಿರುವದು. ಅಗಲಿದ ತನ್ನ ಪತಿಯಾದ ಪರಶಿವನನ್ನು ಕೂಡಿ ನಲಿಯಬೇಕೆಂದು ಅವಳಿಗೂ ಹಂಬಲವಿರುವದು ಸ್ವಾಭಾವಿಕವೇ. ಇದಕ್ಕೆ ಇಚ್ಛಾಶಕ್ತಿ ಎನ್ನುವದುಂಟು. ಇದರಿಂದಲೇ ಕಲ್ಪನಾಶಕ್ತಿಯು ಹುಟ್ಟುವಳು. ಈ ಶಿವ-ಶಕ್ತಿ ಇವುಗಳು ಜಗತ್ತಿಗೆ ಮೀರಿದವುಗಳು ಪರವಸ್ತುಗಳು ಅವೆ. ಲಿಂಗ—ಜಂಗಮುಗಳು ದೃಶ್ಯ ಜಗತ್ತಿಗೆ ಸಂಬಂಧಪಡುತ್ತವೆ. ದೃಶ್ಯವಾದವುಗಳೆಲ್ಲ ಅದೃಶ್ಯದೊಳಗಿಂದಲೇ ಬಂದಿರುತ್ತವೆ. ಈ ಶಕ್ತಿಯಲ್ಲಿ ಹುಟ್ಟಿಸುವ ರಕ್ಷಿಸುವ ಹಾಗೂ ನಾಶ ಮಾಡುವ ಗುಣವಿರುತ್ತದೆ. ಆದರೆ ಶಿವತತ್ವವು ಇದಕ್ಕೆ ಮೀರಿದ್ದು, ಪ್ರಕಾಶಮಾನವಾದುದು. ನಿಶ್ಯಬ್ದವಾದುದು. ಅದರ ಬೆಳಗು ಜಗತ್ತಿನಲ್ಲೆಲ್ಲ ಪಸರಿಸಿದೆ. ಇದು ಇಂದ್ರಿಯಾತೀತವಾದುದಾಗಿದೆ. ಇದು ಪರಿಪೂರ್ಣ ಸ್ವತಂತ್ರ ಅನಂದವಾಗಿದೆ. ಇದೇ ಮಹಾಲಿಂಗವೆಂದು ಹೇಳಬಹುದು. ಇಚ್ಛಾಶಕ್ತಿಯು ಅದರ ಬೆಳಕಿನಲ್ಲಿ ಸಂಚಲಿಸುವದು. ಇದರಲ್ಲಿಯೂ ಇವೆರಡೂ ಇರುವದರಿಂದ ಇದಕ್ಕೆ ಶಕ್ತಿವಿಶಿಷ್ಟಾದ್ವೈತವೆಂದು ಹೇಳಬೇಕಾಗಿದೆ.

ಶಿವ-ಶಕ್ತಿ ಇವು ಯಾವಾಗಲೂ ಕೂಡಿಯೇ ಇರುವದರಿಂದ ದೈವೀಶಕ್ತಿ ಹಾಗೂ ಪದಾರ್ಥ ಇವುಗಳಲ್ಲಿ ಭೇದ ಮಾಡಲಿಕ್ಕಾಗುವದಿಲ್ಲ. ಅದಕ್ಕೆ ವೀರಶೈವನು ತನ್ನ ಇಡೀ ಜೀವನವನ್ನು ಲಿಂಗಮಯವಾಗಿ ಮಾಡಬೇಕೆಂದು ಹೇಳುವನು. ಇದೇ ಲಿಂಗಾಂಗ ಸಾಮರಸ್ಯದ ಮರ್ಮ. ಶರೀರವು ಪ್ರಗತಿಪರವಾದದ್ದು. ಇದಕ್ಕೆ ಲಿಂಗದ ಸಂಬಂಧವಾದಲ್ಲಿ ಈ ಶರೀರವೂ ಕೂಡ ಶಿವನ ಪ್ರಭಾವವುಳ್ಳದ್ದಾಗುವದು. ಅದರಂತೆ ಶರೀರ ಹಾಗೂ ಮನಸ್ಸುಗಳಲ್ಲಿಯೂ ಕೂಡ ಭೇದವನ್ನು ಕಲ್ಪಿಸಲಿಕ್ಕಾಗುವದಿಲ್ಲ. ಅದಕ್ಕಾಗಿ ಇಹ-ಪರವನ್ನು ವಿಂಗಡಿಸಲಿಕ್ಕೆ ಬರುವದಿಲ್ಲೆಂದು ಬಸವಣ್ಣನವರ ವಚನದಲ್ಲಿ ಕಾಣಬಹುದು. "ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೇ? ಈ ಲೋಕದೊಳಗೆ ಮತ್ತನಂತಲೋಕ. ಶಿವಲೋಕ ಶಿವಾಚಾರವಯ್ಯ. ಶಿವಭಕ್ತನಿದ್ದ ಠಾವೇ ದೇವಲೋಕ.

ಭಕ್ತಸಂಗಣವೇ ವಾರಣಾಸಿ. ಕಾಯಕವೇ ಕೈಲಾಸ. ಇದು ಸತ್ಯ. ಶಿವನಾಣೆ ಕೂಡಲಸಂಗಮದೇವಾ." "ಮರ್ತ ಲೋಕವೆಂಬುದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು ಕೂಡಲಸಂಗಮದೇವಾ." ಎಂದು ಸ್ಪಷ್ಟ ಹೇಳಿದ್ದಾರೆ. ಇಹ ಪರಗಳನ್ನು ವಿಂಗಡಿಸುವವನು ಸಂಸಾರದಿಂದ ಪಾರಾಗಲಾರನು. ಅದಕ್ಕಾಗಿಯೇ ಸನ್ಯಾಸಿಗಳಂತೆ ವೀರಶೈವನು ಓಡಿ ಅರಣ್ಯ ಸೇರಬಯಸುವದಿಲ್ಲ. ಸಂಸಾರದಲ್ಲೇ ಇದ್ದು ಅದನ್ನು ಶಿವ ಪ್ರಪಂಚವನ್ನಾಗಿ ಮಾರ್ಪಡಿಸಿಕೊಳ್ಳುವನು. ಹೆಂಡತಿಯೊಡನೆ ಒಳ್ಳೇ ನಿಷ್ಕಾಮವಾಗಿ, ಕಾಮರಹಿತ ಪಾರಮಾರ್ಥ ಪ್ರಪಂಚವನ್ನು ಸಾಗಿಸಿ, ತನ್ನ ಮನೆಯನ್ನು ಶಿವಲೋಕ ಸ್ವರ್ಗಲೋಕಗಳನ್ನಾಗಿ ಮಾರ್ಪಡಿಸಿಕೊಂಡು ಇರುವದರಿಂದ ಬಳಸಿ ಬ್ರಹ್ಮಚಾರಿ, ಉಂಡು ಉಪವಾಸಿ ಈ ತತ್ವಗಳು ವೀರಶೈವರಲ್ಲಿ ಒಳ್ಳೇ ಮಹತ್ವವಾದವುಗಳೇ ಇರುವವು. ಸ್ತ್ರೀಯೊಡನೆ ಮನೆ ಮಠಗಳಲ್ಲಿ ಇದ್ದರೂ ನಿಜವಾಗಿ ಕಾಮರಹಿತ ಸಂಸಾರ ಸಾಗಿಸಿ, ಬ್ರಹ್ಮಚಾರಿಗಳಾಗಿ ಇರುವದು. ಉಪವಾಸ ಇದ್ದರೂ ಉಂಡವನಿಗಿಂತ ಅತಿ ಸಂತೃಪ್ತನಾಗಿ ಸದಾ ಎಲ್ಲ ಸ್ಥಿತಿಯಲ್ಲಿ ಆನಂದವೃತ್ತಿಯುಳ್ಳವನಾಗಿರುವದೇ ಇವುಗಳ ಅರ್ಥವಾಗಿದೆ. ಅದಕ್ಕಾಗಿ ಶಿವನ ಕಾಣಲು ಇಹವನ್ನು ಬಿಟ್ಟು ಬೇರೆ ಎಲ್ಲಿಗೆ ಹೋಗಬೇಕು? ಇದನ್ನು ವಸ್ತುವಿನಲ್ಲಿ ಅಂದರೆ ತನ್ನಲ್ಲಿಯೇ ಕಾಣಬೇಕು. ನಿಜವಸ್ತುವಾಗಿರುವದೇ ಲಿಂಗವು. ಮತ್ತು ಅದಕ್ಕೆ ಆಧಾರವಾಗಿರುವದೇ ಶರೀರವು. ಶರೀರದ ಸರ್ವ ಕ್ರಿಯೆಗಳು ಲಿಂಗಮಯವಾಗುತ್ತ ಹೋಗುವದೇ ಲಿಂಗಾಂಗಸಾಮರಸ್ಯವೆನಿಸುವದು. ಈ ರೀತಿ ನಡೆದರೇನೇ ಮನುಷ್ಯನಿಗೆ ಪರಿಪೂರ್ಣತೆ ಬರುವದು. ಅವನೇ ಪೂರ್ಣ ಯೋಗಿಎನಿಸುವನು. ಒಂದನ್ನು ಬಿಟ್ಟು ಒಂದನ್ನೇ ಹಿಡಿದರೆ ಅವನು ಅಪೂರ್ಣ ಮಾನವನಾಗುವನು. ಪೂರ್ಣಯೋಗಿಯಾಗಲಾರನು. ಶಕ್ತಿಯನ್ನು ಬಿಟ್ಟು ಶಿವನನ್ನಾಗಲಿ ಶಿವನನ್ನು ಬಿಟ್ಟು ಶಕ್ತಿಯನ್ನಾಗಲಿ, ಇಹವನ್ನು ಬಿಟ್ಟು ಪರವನ್ನಾಗಲಿ, ಪರವನ್ನು ಬಿಟ್ಟು ಇಹವನ್ನಾಗಲಿ ಹಿಡಿದರೆ ಅವನು ಅಪೂರ್ಣನೇ ಉಳಿಯುವನು. ಇದರಂತೆ ವೀರಶೈವರು ಎರಡನ್ನೂ ನಂಬಿ, ಎರಡನ್ನೂ ಕೂಡಿಸಿ ಸಾಧಿಸುವರು. ಅದಕ್ಕಾಗಿ ಇವರಿಗೆ ಶಕ್ತಿವಿಶಿಷ್ಟಾದ್ವೈತಿಗಳೆಂದು ಹೇಳಬೇಕು.

ಜಗತ್ತಿನಲ್ಲಿ ಸತ್ಯ ನಿತ್ಯವಾದದ್ದರಲ್ಲಿ ಅಂತಃಪ್ರೇರಣೆ ಇರುವದು. ಈ ಪ್ರೇರಣೆಯಿಂದಲೇ ಈ ಜಗತ್ತು ನಿರ್ಮಾಣವಾಗಿದೆ. ಈ ಜಗತ್ತು ಈ ಸತ್ಯ ವಸ್ತುವಿನೊಳಗಿಂದಲೇ ಪ್ರಕಟವಾಗಿರುವದು. ಇದೆಲ್ಲ ಮಾಯೆಯಿಂದ ಉಂಟಾಗಿಲ್ಲ. ಆದರೆ ಅದರೊಳಗಿನ ನಿಜವಾದ ಚಲನವಲನಗಳ ಮೂಲಕ ಉಂಟಾಗಿದೆ. ಈ ತತ್ವವನ್ನು ಯಾವ ಮತದವರೂ ಯಾವ ಧರ್ಮದವರೂ ಕಂಡಿಲ್ಲ. ಚಿಕ್ಕ ಬೀಜದಲ್ಲಿ ಮಹಾ ವಟವೃಕ್ಷವೇ ಅಡಗಿರುವಂತೆ ಆ ಸತ್ಯದಲ್ಲಿ ಇದೆಲ್ಲ ಜಗವು ಅಡಕವಾಗಿತ್ತು. ಚಲನವಲನೆಯ ಮೂಲಕ ಹೊರಗೆ ಪ್ರಕಟವಾಯಿತೆಂದು ಹೇಳಬಹುದು. ಅದಕ್ಕೆ ತೋರುವ ದೃಶ್ಯಪ್ರಕೃತಿಯಲ್ಲಿ ಆ ನಿತ್ಯದಲ್ಲಿ ಇರುವ ಚಿತ್ತ್ರದ ಕಾರ್ಯವೇ ಆಗಿದೆ. ಇದಕ್ಕೆ ಪರಶಿವನ ಲೀಲೆ ವಿಲಾಸವೆಂದು ಆ ಚಿತ್ ಶಕ್ತಿಗೆ ಅನ್ನುವರು. ಇದರಲ್ಲಿ ಸರ್ವವನ್ನೂ ಹುಟ್ಟಿ ರಕ್ಷಿಸಿ ಪೋಷಿಸಿ ಆಳಿ ನಾಶ ಮಾಡುವ ಗುಣವಿರುತ್ತದೆ. ಇವೆರಡರಲ್ಲಿ ಸಹಜವಾದ ಮೇಳವಿರುತ್ತದೆ. ಶಕ್ತಿಯಲ್ಲಿ ಸ್ಥಾನಮಾನ ಕಾಲ ಪರಿಸ್ಥಿತಿಗೆ ಅನುಸರಿಸಿ ಬದಲಾವಣೆಯಾಗಬಹುದು. ಆದರೆ ಪರಶಿವನಲ್ಲಿ ಬದಲಾವಣೆ ಶಕ್ಯವಿಲ್ಲ. ಆದರೆ ಇವರಿಬ್ಬರಲ್ಲಿ ಒಳ್ಳೇ ಮೇಳನವಿರುತ್ತದೆ. ಅದಕ್ಕಾಗಿ ಜೀವನದಲ್ಲಿ ಮಾಡುವ ಪ್ರತಿಯೊಂದು ಕೆಲಸದಲ್ಲಿ ಪಾರಮಾರ್ಥಿಕ ಭಾವವನ್ನೇ ಮಾಡಿ ನಮ್ಮಲ್ಲಿ ನಿಜವಾದ ಶಕ್ತಿಯನ್ನು ಬೆಳಸಿಕೊಳ್ಳುವದೇ ವೀರಶೈವ ಧರ್ಮದ ಸದುದ್ದೇಶವಾಗಿದೆ. ಇದೇ ವೀರಶೈವ ಧರ್ಮದ ವೈಶಿಷ್ಟ್ಯವೆಂದು ಹೇಳಬೇಕು. ಉಳಿದ ಧರ್ಮಗಳಲ್ಲಿ ಇದರ ಬಗ್ಗೆ ಸಾಕಷ್ಟು ಲಕ್ಷವನ್ನು ಪೂರೈಸಿಲ್ಲ. ಜಗತ್ತಿನ ಕಾರ್ಯಗಳನ್ನು ಇಷ್ಟಲಿಂಗದ ಮುಖಾಂತರ ಹೇಗೆ ಲಿಂಗಮಯವಾಗಿ ಮಾಡಬೇಕೆಂದು ಷಟ್‌ಸ್ಥಲ ಶಾಸ್ತ್ರದಲ್ಲಿ ವಿವರಿಸಲಾಗಿದೆ. ಈ ಶಾಸ್ತ್ರದಂತೆ ನಡೆದರೆ ಮನುಷ್ಯನಲ್ಲಿಯ ಸರ್ವಶಕ್ತಿಗಳಲ್ಲಿ ಸಂಪೂರ್ಣ ಲಿಂಗಮಯವಾಗಿ ಮಾರ್ಪಡುತ್ತವೆ. ಅದಕ್ಕೆ ಮೋಕ್ಷವನ್ನೂ ಕೂಡ ಅವನು ಬಯಸುವದಿಲ್ಲ. ಇದೇ ದಿವ್ಯ ಜೀವನವೆನಿಸುವದು. ಯಾಕಂದರೆ ಪರಮಾತ್ಮನ ಶಕ್ತಿಯದ್ದು ಅವನು ಅರಿತಿರುವದಲ್ಲದೆ ತನ್ನಲ್ಲಿ ಅದನ್ನು ಅಳವಡಿಸಿಕೊಂಡಿರುವನು. ಇದೇ ಲಿಂಗಾಂಗ ಸಾಮರಸ್ಯ. ಇದರಿಂದಲೇ ಅವನಿಗೆ ಶಾಂತಿಸುಖ ಆನಂದಗಳು ಲಭಿಸುವವು. ಇದಕ್ಕೆ ಪಾರಮಾರ್ಥ ಸಂಸಾರವೆಂದೂ ಹೇಳಬಹುದು. ಇದರಿಂದ ಸರ್ವಕಾರ್ಯಗಳನ್ನು ಲಿಂಗಮಯವಾಗಿ ಮಾಡಿಕೊಂಡು ಮಹಾ

ಲಿಂಗದೊಡನೆ ಸಂಬಂಧವನ್ನು ಬೆಳಿಸಿಕೊಂಡಿರುವನು. ಆದ್ದರಿಂದ ಜಗತ್ತಿನಲ್ಲಿ ಜೀವಿಸಿದರೂ ಲಿಂಗದ ಬೆಳಕಿನಲ್ಲಿಯೇ ಇರುವನು. ಇದಕ್ಕೆ ಸರ್ವಾಂಗಲಿಂಗಸ್ಥಲ ಅಥವಾ ಲಿಂಗಮಯ ಜಗವೆಂದು ಹೇಳಬಹುದು. ಮೊದಲಿನಿಂದ ಕಡೆಯತನಕ ಈ ಎರಡನ್ನೂ ಕೂಡಿಸಿಕೊಂಡೇ ಸಾಗುವದರಿಂದ ಇದಕ್ಕೆ ಶಕ್ತಿವಿಶಿಷ್ಟಾದ್ವೈತವೆಂದು ಹೇಳಬೇಕು.

ಈ ಎಲ್ಲ ಮೇಲಿನ ವಿಚಾರಗಳ ಮೂಲಕವೇ ವೀರಶೈವನು ಅಂಗದ ಮೇಲೆ ಲಿಂಗವನ್ನು ಧರಿಸಿದ್ದಾನೆ. ಲಿಂಗವಾದರೂ ಶಕ್ತಿವಿಶಿಷ್ಟಾದ್ವೈತವನ್ನೇ ಪ್ರತಿಪಾದಿಸುವದು. ಈ ಲಿಂಗದಲ್ಲಿ ಎರಡು ಮುಖ್ಯ ಭಾಗಗಳುಂಟು. ಕೆಳಗಿನದು ಪೀಠ, ಮೇಲಿನದು ಪಿಂಡಿಕೆ, ಪೀಠವು ಚಿತ್ ಶಕ್ತಿ (ಆದಿಶಕ್ತಿ) ಪಾರ್ವತಿಯ ಗುರ್ತು. ಪಿಂಡಿಕೆಯು ಪರಶಿವನ ಗುರ್ತು. ಇವೆರಡು ಕೂಡಿದಾಗ ಜಲಹರಿ (ಜಾಲಾರಿ)ಯು ಮುಂದೆ ಚಾಚಿದ ಭಾಗವು ಉಂಟಾಗಿದೆ. ಅದೇ ಆನಂದವೆನಿಸುವದು. ಅದಕ್ಕೆ ಸತ = ಪಿಂಡಿಕೆ; ಚಿತ್ = ಪೀಠ, ಆನಂದ = ಜಲಹರಿ ಸಚ್ಚಿದಾನಂದ ಅಂದರೆ ಲಿಂಗವೆಂದು ಹೇಳಬಹುದು. ಈ ಲಿಂಗವು ಶಿವಶಕ್ತಿಯರ ಸಮ್ಮೇಲನವನ್ನು ಸೂಚಿಸುವದು. ಅಲ್ಲದೆ ಅವರಿಂದಲೇ ಆನಂದವೂ ಉಂಟಾಗುವದೆಂದೇ ಹೇಳಬಹುದು. ಕುರುಡ ಕುಂಟ ಹೊಳಿ ದಾಟಿ ಸುಖಭೋಗಿಸಿದಂತೇ ಪುರುಷ ಪ್ರಕೃತಿಯ ಸಂಯೋಗವನ್ನೇ ಈ ಲಿಂಗವು ತೋರಿಸುವದು. ನಾವು ಮೊದಲು ಆದಿಶಕ್ತಿಯ ಗುರುತಾದ ಪೀಠಕ್ಕೆ ನಮಸ್ಕರಿಸುವೆವು. ಅದು ಪರಶಿವನ ರೂಪವಾದ ಪಿಂಡಿಕೆಗೆ ಮುಟ್ಟುವದೆಂದು ನಮ್ಮಲ್ಲಿ ಭಾವನೆ ಇರುವದು. ಪರಶಿವನ ಕೀಲಿ ಹಾಗೂ ಕೀಲಿ ಕೈಗಳೆರಡೂ ಆದಿಶಕ್ತಿ ಪಾರ್ವತಿಯ ಕೈಯಲ್ಲಿಯೇ ಇರುವದು. ಅವಳ ಕೃಪೆಯ ಹೊರತು ಪರಶಿವನ ದರ್ಶನವೇ ಶಕ್ಯವಿಲ್ಲ. ಅವಳು ಕೃಪೆದೋರಿ ತನ್ನ ಮಾಯೆಯನ್ನು ಸರಿ ಮಾಡದ ವಿನಃ ಭಕ್ತನಿಗೆ ಪರಶಿವನ ದರ್ಶನವು ಶಕ್ಯವಿಲ್ಲ. ಅದಕ್ಕೆ ನಾವು ಲಿಂಗದಲ್ಲಿಯ ಆದಿಶಕ್ತಿಯ ಭಾಗವಾದ ಪೀಠಕ್ಕೆ ನಮಿಸಿ ಬೇಡುವೆವು. ಅದಕ್ಕಾಗಿ *first mother then the father* ಎಂದು ಬಲ್ಲವರು ಹೇಳುವದರ ಸಾರವೇ ಇದಾಗಿದೆ. ಈ ಎಲ್ಲ ಕಾರಣಗಳಿಂದಲೂ ವಿಚಾರಿಸಿದರೆ ಇದಕ್ಕೆ ಶಕ್ತಿವಿಶಿಷ್ಟಾದ್ವೈತವೆಂದು ಹೇಳಲಿಕ್ಕೆ ಅಡ್ಡಿ ಇಲ್ಲ. ಯಾಕಂದರೆ ಇದು ಶಕ್ತಿಯನ್ನು

ಹಿಡಿದು ಹೊರಟು, ಶಕ್ತಿಯಲ್ಲಿಯೇ ನಡೆದು ಶಕ್ತಿಯಲ್ಲಿಯೇ ಕೊನೆಗಾಣುವದು. ಶರೀರವನ್ನೆಲ್ಲ ಲಿಂಗಮಯವನ್ನಾಗಿ ಮಾಡಿಕೊಂಡು ಬಿಡುವದೆಂದು ಇರುವದರಿಂದಲೇ ಲಿಂಗಾಂಗ ಸಮರಸವೆಂದು ಸಂಬೋಧಿಸಲಾಗಿದೆ. ಇದಕ್ಕಾಗಿ ವೀರಶೈವರಿಗೆ ಶಕ್ತಿವಿಶಿಷ್ಟಾದ್ವೈತಿಗಳೆಂದು ಹೇಳುವದು ಬಹು ಸಮಂಜಸವಾಗಿದೆ. ಜಗದ ಪ್ರತಿಪದಾರ್ಥಗಳಲ್ಲವೂ ಪುರುಷ ಪ್ರಕೃತಿಯ ಶಿವಶಕ್ತಿಯರ ಸಂಯೋಗವೇ ಇರುವದು. ಇದು ಅಗಲಿದ್ದರಿಂದ ನಮಗೆ ದುಃಖ ಉಂಟಾಗಿದೆ. ಅವರನ್ನು ಕೂಡಿಸುವದೇ ಶಿವಯೋಗವು. ಇದರಿಂದಲೇ ನಿಜ ಸುಖ ಆನಂದಗಳುಂಟಾಗಿ ದೇವನು ಮಾನವನಾಗುವನು. ಇದಕ್ಕೆಲ್ಲ ಷಟ್‌ಸ್ಥಲದಂತೆ ನಡೆಯುವದು ಅತಿ ಅವಶ್ಯವಾಗಿರುವದು. ಪಂಚಾಚಾರ ಮೊದಲಿಗೇ ಬೇಕು. ಅಷ್ಟಾವರಣಗಳು ಇದಕ್ಕೆ ಪೋಷಕವಾಗಿರುವವು. ಇದೆಲ್ಲವನ್ನು ಕೂಡಿಕೊಂಡ ವೀರಶೈವರು ಶಕ್ತಿವಿಶಿಷ್ಟಾದ್ವೈತಿಗಳೇ ಸರಿ.

# ಪರಮಾತ್ಮನ ಸ್ವರೂಪ.

( ಲೇಖಕ:— ಶ್ರೀ. ಮಠದ ಬಸವಯ್ಯನವರು. )

---

[ಟೀಪು:— ಶ್ರೀ ಮಠದ ಬಸವಯ್ಯನವರು ಹರಪನಹಳ್ಳಿ ತಾಲೂಕು ಪುಣಬಗಟ್ಟೆ ಗ್ರಾಮದವರಾಗಿದ್ದು ಅವರು ಶಿವಮೊಗ್ಗ ಜಿಲ್ಹಾ ಚನ್ನಗಿರಿ ತಾಲೂಕಿನ ಅನೇಕ ಗ್ರಾಮಗಳಿಗೆ ನೆರೆಯುವರಾಗಿದ್ದಾರೆ. ಅವರು ಈ ಭಾಗದಲ್ಲೆಲ್ಲ ಶಿವಶರಣರ ನಡೆನುಡಿಗಳನ್ನು ಯಾವಾಗಲೂ ಪ್ರಚಾರ ಮಾಡುತ್ತ ಬಂದಿದ್ದಾರೆ. ಅವರು ತಮ್ಮ ಒಂದು ಪತ್ರದಲ್ಲಿ ತಮಗೆ ಶಿವ ಶರಣರ ನಡೆನುಡಿಗಳೇನೂ ಮೊದಲು ಗೊತ್ತಿರಲಿಲ್ಲ. ಅದರೆ ಮುಂದೆ ವಚನ ಗ್ರಂಥಗಳನ್ನು ಪರಿಶೀಲಿಸಿದ ಹಾಗೆ ತಮಗೆ ಒಂದು ಪ್ರಕಾಶವು ಹೊಳೆದಂತಾಗಿ ಶಿವಶರಣರ ತತ್ವಗಳನ್ನು ಜನತೆಯಲ್ಲಿ ಪ್ರಸಾರ ಮಾಡುವ ಕಾರ್ಯವನ್ನು ಕೈಕೊಂಡಿರುವೆನೆಂದು ತಿಳಿಸಿದ್ದಾರೆ. ಅವರಿಗೆ ಚನ್ನಗಿರಿ ತಾಲೂಕಿನ ಪಾಂಡೋಮಟ್ಟಿ ಗ್ರಾಮದ ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳಾದ ಸಂಗಮನಾಥ ಮಹಾಸ್ವಾಮಿಗಳು ಮಾರ್ಗದರ್ಶಿಗಳಾಗಿರುವರು. ಶಿವಾನುಭವದ ತತ್ವಗಳನ್ನು ಪ್ರಸಾರ ಮಾಡುವದೇ ಈ ಉಭಯ ಮಹನೀಯರ ಧ್ಯೇಯವಾಗಿದೆ. ಈ ಉಭಯತರು ೩೦-೪೦ ಜನರನ್ನು ಕೂಡಿಕೊಂಡು ಒಂದು ಸ್ಪೇಶಲ್ ಕಾರ ಮಾಡಿಕೊಂಡು ವಿಜಾಪುರಕ್ಕೆ ನನ್ನನ್ನು ಕಾಣಲಿಕ್ಕೆ ಬಂದಿದ್ದರು. ಅವರು ತಮ್ಮ ಕಡೆಯ ಕೆಲವು ಜನ ಸ್ತ್ರೀಯರನ್ನು ಸಹ ಕೂಡಿಕೊಂಡು ನಾನಿದ್ದ ಮನೆಗೆ ಮೊದಲು ಬಂದು ನನ್ನೊಡನೆ ವಿಶ್ವಾಸಪೂರ್ವಕವಾಗಿ ಶಿವಾನುಭವದ ಮುಂದಿನ ಕಾರ್ಯಗಳನ್ನು ಸಮಾಲೋಚಿಸಿದರು. ಈ ಎಲ್ಲರಲ್ಲಿ ಶಿವಶರಣರ ತತ್ವಗಳು ಬಹು ಗಾಢವಾಗಿ ಬಿಂಬಿಸಿದ್ದುದು ಮನಾಕರ್ಷಕವಾಗಿತ್ತು. ಶ್ರೀಸಂಗಮನಾಥ ಸ್ವಾಮಿಗಳು ವಚನ ಗ್ರಂಥಗಳನ್ನು ಅಚ್ಚುಹಾಕುವದನ್ನು ತಮ್ಮ ಮುಂದಿನ ಮುಖ್ಯೋದ್ದೇಶವನ್ನಾಗಿ ಇಟ್ಟುಕೊಂಡಿದ್ದಾರೆ. ಈ ಎಲ್ಲವರ ನಡೆನುಡಿ ವಿಚಾರಗಳಲ್ಲೆಲ್ಲ ಶಿವಶರಣರ ತತ್ವಗಳು ಪ್ರತಿಬಿಂಬಿಸಿದ್ದು ಸ್ಪಷ್ಟವಾಗಿ ದೃಗ್ಗೋಚರವಾಗುವಂತಿತ್ತು.

ಪಾಂಡೂಮಟ್ಟಿ ಗ್ರಾಮದಲ್ಲಿ ಮಾರ್ಚ ೧ನೇ ವಾರದಲ್ಲಿ ಒಂದು ಸಮ್ಮೇಲನವು ಜರಗಿತು. ಆಗ ಅನೇಕ ಶಿವಾನುಭವಿಗಳು ಶಿವಶರಣರ ತತ್ವಗಳ ಬಗ್ಗೆ ಜನರಿಗೆ ತಿಳಿಯುವಂತೆ ಭಾಷಣ ಮಾಡಿದರು. ಶ್ರೀ ಮಠದ ಬಸವಯ್ಯನವರು ಇವುಗಳನ್ನು ಸಂಗ್ರಹಿಸಿದ್ದು ಅವರ ಇಚ್ಛೆಯ ಪ್ರಕಾರ ಇಲ್ಲಿ ಅವುಗಳನ್ನು ಕೊಟ್ಟಿದ್ದೇವೆ. —**ಸಂಪಾದಕ.** ]

ವೀರಶೈವ ಧರ್ಮಕ್ಕೆ ಆಧಾರಗ್ರಂಥವಾದುದು ವಚನಶಾಸ್ತ್ರವಾಗಿದೆ. ಈ ಶಾಸ್ತ್ರದಲ್ಲಿ ದೇವರ ಸ್ವರೂಪವನ್ನು ಚನ್ನಾಗಿ ವರ್ಣಿಸಿದ್ದಾರೆ. ಅದು ಹೇಗೆಂದರೆ– ಮಹಾದೇವನಿಗೆ ಪಂಚ ಮುಖಗಳು, ಗಂಗೆ ಗೌರಿಯರೆಂಬ ಹೆಂಡಿರು, ಕೈಯ್ಯಲ್ಲಿ ತ್ರಿಶೂಲ ಡಮರುಗ, ಏರಲಿಕ್ಕೆ ನಂದಿ ಇವೂವೂ ಇಲ್ಲ. ಅವನು ಸೂಕ್ಷ್ಮನು ಮತ್ತು ವಿಶ್ವದ ಗುಣಗಳಿಗೆ ಹೊದ್ದದಂತೆ ವಿಶ್ವದಲ್ಲಿದ್ದಾನೆ. ಅವನಿಗೆ ಆಧಾರವಿಲ್ಲ. ಅವನು ನಾಟಕನಲ್ಲ, ಬೂಟಕನಲ್ಲ, ಶೀಲಿಗನಲ್ಲ, ಕಪಟ ನಾಟಕ, ರುಂಡಮಾಲೆ, ಪುಲಿಚರ್ಮ, ಗಜಚರ್ಮಧರನಲ್ಲ. ಗಂಗಾಧರ, ಗೌರೀವರನಲ್ಲ. ಚಂದ್ರಶೇಖರನಲ್ಲ, ಪಾರ್ವತೀಪತಿಯಲ್ಲ, ತ್ರಿಪುರಸಂಹಾರಿಯಲ್ಲ, ನಂದಿವಾಹನನಲ್ಲ, ಯೋಗಿ ಜೋಗಿಯಲ್ಲ, ಶ್ರವಣ ಸನ್ಯಾಸಿಯಲ್ಲ, ಕಾಳಾಮುಖಿಯಲ್ಲನೋಡಾ, ನಿರವಯ ಶೂನ್ಯ ಮೂರ್ತಿ ಗುಹೇಶ್ವರಲಿಂಗ." ಹೀಗೆಂದು ಅಲ್ಲಮಪ್ರಭುವು ವರ್ಣಿಸಿದ್ದಾನೆ.

ಅವನಿಗೆ "ಅಸುರರ ಮಾಲೆಗಳಿಲ್ಲ, ತ್ರಿಶೂಲ ಡಮರುಗವಿಲ್ಲ. ಬ್ರಹ್ಮ ಕಪಾಲವಿಲ್ಲ, ಭಸ್ಮಭೂಷಣನಲ್ಲ. ಋಷಿಯ ಮಗಳೊಡನಿದ್ದಾತನಲ್ಲ, ಎಸಗುವ ಸಂಸಾರದ ಕುರುಹಿಲ್ಲ. ಆತಗೆ ಹೆಸರಾವುದೆಂದನಂಬಿಗರ ಚೌಡಯ್ಯ- "

ಬಸವೇಶ್ವರನು ಹೇಳಿರುವದೇನೆಂದರೆ— "ಇಬ್ಬರು ಮೂವರು ದೇವರೆಂದ ಉಬ್ಬುಬ್ಬಿ ಮಾತನಾಡಬೇಡಿರೋ. ದೇವನೊಬ್ಬ ಕಾಣಿರೋ. ಇಬ್ಬರೆಂಬುದ ಹುಸಿ ನೋಡಾ, ಕೂಡಲಸಂಗಮನಲ್ಲದಿಲ್ಲವೆಂದಿತ್ತು ವೇದ."

ವಚನಕಾರರು ಕಿರುಕುಳ ದೈವಗಳನ್ನು ನಂಬಕೂಡದೆಂದು ಹೇಳುತ್ತಾರೆ. ಅದು ಹೇಗೆಂದರೆ— ಮಡಕೆ ದೈವ, ಮರ ದೈವ, ಬಿಲ್ಲುನಾರಿ ದೈವ, ಕೊಳಗ ದೈವ, ಗಿಳಿಲು ದೈವ, ಬೀದಿಯ ಕಲ್ಲೇ ದೈವ, ಹಣತೆ ದೈವ, ದೈವ ದೈವವೆಂದು ಕಾಲಿಡಲಿಂಬಿಲ್ಲ. ದೇವನೊಬ್ಬನೇ ನಮ್ಮ ಕೂಡಲಸಂಗಮದೇವ.

ತ್ರಿಮೂರ್ತಿಗಳು ದೇವರಲ್ಲ:— ಹುಟ್ಟಿಸುವಾತ ಬ್ರಹ್ಮನೆಂಬರು, ರಕ್ಷಿಸುವಾತ ವಿಷ್ಣುವೆಂಬರು, ಬ್ರಹ್ಮನು ತನ್ನ ಶಿರವ ಹುಟ್ಟಿಸಿಕೊಳ್ಳಲಾರದೇಕೆ ಹೋದ? ವಿಷ್ಣುವು ತನ್ನ ಮಗನ ರಕ್ಷಿಸಲಾರದಾದ. ದುಷ್ಟರಕ್ಷಕ, ಶಿಷ್ಟಪರಿಪಾಲಕ ನಮ್ಮ ಕೂಡಲಸಂಗಮದೇವ.

ಈ ರೀತಿಯಾಗಿ ಭಾಷಣಕಾರರು ವಿವರಣೆ ಮಾಡಿ, ಮಹಾದೇವನು ಒಬ್ಬನೇ ಇದ್ದಾನೆ, ಅವನು ಎಲ್ಲೆಲ್ಲಿಯೂ ಇರುವನು, ನಿನ್ನಲ್ಲಿಯೂ ಇರುವನು. ಅನುಭವದಿಂದ ಕಂಡುಕೊಂಡರೆ, ಎಲ್ಲ ಕಡೆಯಲ್ಲಿಯೂ ವಸ್ತುವು ನಿನಗೆ ಸಿಗುವುದು ಎಂದು ತಿಳಿಸಿದರು.

ನಿನ್ನಲ್ಲಿರುವ ಪಶ್ಚಿಮಚಕ್ರದ ಚಿತ್ಕಲೆಯು ನಿನ್ನ ಕರದಲ್ಲಿ ಇರುವದು. ಪಾವನಾತ್ಮಕ ಸುಪುತ್ರನ ಮಸ್ತಕದೊಳು ಗುರುದೇವ ಕರವಾಂತ್ಯ ಸಾಸಿರದಳದ ಚಿತ್ಕಳೆಯು ಭಾವದಿಂ ಮನ, ಮನದಿ ನೇತ್ರ, ನೇತ್ರಂಗಳಿಂ ತೆಗೆದಿಷ್ಟ ರೂಪುಗೊಳಿಸೆ ತಚ್ಛಿಷ್ಯನಂಗದ ಮೇಲೆ ಧರಿಸಿ, ಸಂಜೀವ ಷಣ್ಮಂತ್ರ ಲಿಂಗವಿದೆಂದು ತಿಳುಹಿ ಚಿದ್ಭಾವ ಕಳೆಯೊಳಗಿಷ್ಟಲಿಂಗವೇ ತಾನಾದ ಲಿಂಗ ಭಕ್ತನೇ ಶ್ರೇಷ್ಠನು. ಈ ರೀತಿಯಾಗಿ ನೇತ್ರವೇ ಲಿಂಗದ ಜನನ ಸ್ಥಾನವೆಂತಲೂ ನೇತ್ರದಿಂದಲೇ ಲಿಂಗಾಂಗ ಸಮರಸವೆಂತಲೂ ಉಪನ್ಯಾಸಕರು ವಿವರಿಸಿದರು.

ನೀತಿಯ ಬಗ್ಗೆ ಅವರು ಹೇಳಿದ್ದೇನೆಂದರೆ— ಬಸವಣ್ಣನವರು ಒಂದೇ ಒಂದು ವಚನದಲ್ಲಿ ಪರಮಾತ್ಮನನ್ನು ಒಲಿಸಲಿಕ್ಕೆ ಹೇಳಿದ್ದಾರೆ. ಅವರು ಹೇಳಿದ್ದೇನೆಂದರೆ- ಅವನನ್ನು ಒಲಿಸಲಿಕ್ಕೆ ಜಪ ಬೇಡ, ತಪ ಬೇಡ, ಅಷ್ಟಾಂಗ ಯೋಗ ಬೇಡ, ಯಜ್ಞಯಾಗಾದಿಗಳು ಬೇಡ ಎಂದಿದ್ದಾರೆ. ಹೀಗೆಂದ ಕೂಡಲೆ ಸಭೀಕರು ಬಹಳ ಆಶ್ಚರ್ಯಪಟ್ಟರು. ಆ ವಚನವಾವುದೆಂದು ಕುತೂಹಲದಿಂದ ಕೇಳಲಾಗಿ ಅದು ಯಾವುದೆಂದರೆ— ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅವರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ. ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ ಇದೇ ನಮ್ಮ ಕೂಡಲಸಂಗಮದೇವನ ನೊಲಿಸುವ ಪರಿ, ಎಂದು ಉದಹರಿಸಿದರು. ಈ ರೀತಿ ದೇವನು ನೀತಿಗೆ ಒಲಿಯುವನು, ಭಕ್ತಿಗೆ ಒಲಿಯುವನು ಎಂದು ಹೇಳಿದರು.

ಶಿವನಿಗೆ ನೀರು ಎರಿಯಲಿಕ್ಕಾತನು ಬಿಸಿಲಿನಿಂದ ಬಳಲಿದನೇ' ಪುಷ್ಪವ ಧರಿಸಲಿಕ್ಕಾತನೇನು ವಿಟರಾಜನೇ' ಮನವೆಂಬ ನೀರಿನಿಂದ ಜ್ಞಾನವೆಂಬ

ಪುಷ್ಪದಿಂದ ಪೂಜಿಸಬಲ್ಲಡೆ ಭಕ್ತನೆಂಬೆ, ಮಹೇಶ್ವರನೆಂಬೆ ನೋಡಾ ಕಪಿಲ ಸಿದ್ಧಮಲ್ಲಿಕಾರ್ಜುನಾ. ಎಂದು ಭಾಷಣಕಾರನು ಒಂದು ವಚನವನ್ನು ಉದಹರಿಸಿದನು

ಈ ರೀತಿಯಾಗಿ ಉಪನ್ಯಾಸಕಾರರು ಹೇಳಿದ್ದಲ್ಲದೆ, ನಮ್ಮ ಮನಸ್ಸನ್ನು ದೇವನಲ್ಲಿಯೇ ಇಟ್ಟು ಪೂಜೆ ನಮಸ್ಕಾರಗಳನ್ನು ಮಾಡಬೇಕಲ್ಲದೆ, ಮನ ಒಂದು ಕಡೆ, ನೀನೊಂದು ಕಡೆ ಆದರೆ, ಆ ಪೂಜೆ, ಧ್ಯಾನಗಳು ವ್ಯರ್ಥ. ಈ ಬಗ್ಗೆ ಒಂದು ವಚನ— ಮಾಡಿ ನೀಡಿ ಲಿಂಗವ ಪೂಜಿಸಿಹೆವೆಂಬರು ನೀವೆಲ್ಲ ಕೇಳಿರಣ್ಣಾ. ಹಾಗದ ಕೆರಹ ಹೊರಗೆ ಕಳೆದು ದೇವರಿಗೆ ಹೋಗಿ ನಮಸ್ಕಾರ ಮಾಡುವನ ತೆರನಂತೆ ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲ. ಧನವನಿರಿಸದಿರಾ. ಇರಿಸಿದರೆ ಭವಬಪ್ಪುದು ತಪ್ಪದು. ಕೂಡಲ ಸಂಗನ ಶರಣರಿಗೆ ಒಡವೆಯ ಸವಿಸುವುದು.

ಗುರು ಕೊಟ್ಟ ಲಿಂಗದಲ್ಲಿಯೆ ಸಕಲ ಜಗತ್ತು ಇದೆ. ಅದು ಹೇಗೆಂದರೆ— ಜಗವನೊಳಕೊಂಡ ಲಿಂಗವು ಎನ್ನ ಕರಸ್ಥಲಕ್ಕೆ ಬಂದಬಳಿಕ ಹೆಗರಣವಾಯಿತ್ತೆನಗೆ. ಆಹಾ ಪುಣ್ಯವೇ, ಆಹಾ ಭಾಗ್ಯವೇ, ಆಹಾ ಅಖಂಡೇಶ್ವರ ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಲ್ಲ ಲಿಂಗವೇ. ಮತ್ತು ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲ, ಪಾತಾಳದಿಂದತ್ತತ್ತ ನಿಮ್ಮ ಶ್ರೀಪಾದ, ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ. ಅಗಮ್ಯ ಅಗೋಚರ, ಅಪ್ರಮಾಣ ಕೂಡಲಸಂಗಮದೇವ ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಲ್ಲ.

ಇಂಥ ಜಗತ್ತನ್ನು ತನ್ನೊಳಗೆ ಇಟ್ಟುಕೊಂಡಿರುವ ಮಹಾ ವಸ್ತುವು ಕರದಲ್ಲಿದ್ದ ಮೇಲೆ ಲಿಂಗವ ಬಿಟ್ಟು ಹೊರಗೆ ಯಾವ ವಸ್ತುವು ಉಳಿಯುದಿರುವಾಗ ಆ ಇಷ್ಟಲಿಂಗ ಬಿಟ್ಟು, ಬೇರೆ ಮೂರ್ತಿಗಳನ್ನಾಗಲಿ. ತೀರ್ಥ ಕ್ಷೇತ್ರಗಳಲ್ಲಿ, ಗುಡಿಗುಂಡಾರಗಳಲ್ಲಿ ದೇವರಿರುವನೆಂದು ಪೂಜಿಸುವದು ಸರ್ವಥಾ ತಪ್ಪು.

ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ ಹೊಟ್ಟೆ ಅಡಿಯಾಗಿ ಬೀಳುವ ಲೊಟ್ಟೆ ಮಾನವರ ಕಂಡರೆ ಮೆಟ್ಟಿದ ಎಡಪಾದರಕ್ಷೆಯು ತೆಗೆದುಕೊಂಡು ಲಟಲಟನೆ ಹೊಡೆ ಎಂದ ನಮ್ಮ ಅಂಬಿಗರ ಚೌಡಯ್ಯನು ಮತ್ತಂ— ಉಡಿಯ ಲಿಂಗವ ಬಿಟ್ಟು ಗುಡಿಯಲಿಂಗಕ್ಕೆ ಶರಣೆಂಬ ಮೋಡಿಗಳನೇನೆಂಬೆನಯ್ಯ ಪರಮಗುಣ ಶಾಂತಮಲ್ಲಿಕಾರ್ಜುನಾ.

**ಮೈಲಾರ ಬಸವಲಿಂಗ ಶರಣರು:—** ಗುಂಡನೆ ಶಿವಲಿಂಗವೆನ್ನುವಿ ನೀನು, ಕಂಡ ದೈವಕೆ ಕೈಮುಗಿಯುತಿಹೆ, ಕೆಂಡದ ಗಡಿಗೆಯ ಮಂಡೆಯ ಮೇಲೆ ಹೊತ್ತುಕೊಂಡು ಬಾಯಿಗೆ ಬೀಗ ಹಾಕುವಿ. ಛೀ ಹೆಡ್ಡ ನೀನೆಂತಹ ಶಿವಭಕ್ತ ? ಸತ್ಯಸದ್ಗುರು ಕೊಟ್ಟ ಲಿಂಗವ ನೀನು ನಿತ್ಯ ಪೂಜಿಸಿ ಮುಕ್ತಿ ಪಡೆಯದೆ, ತೊತ್ತು ಬಂಟರು ಹೋಗಿ ಕ್ಷೇತ್ರದ ದೈವಂಗಳಿಗೆ ಎರಗುವೆ. ಛೀ ಹೆಡ್ಡ ನೀನೆಂತಹ ಶಿವಭಕ್ತ ?

ಇಷ್ಟು ಅಲ್ಲವೆ ಸದ್ಯದ ವೀರಶೈವ ಸಮಾಜವು ತೀರ್ಥಕ್ಷೇತ್ರಗಳಲ್ಲದೆ, ಒನಕೆ ಬೀಸುವ ಕಲ್ಲು ಒರಳು ಇವುಗಳನ್ನು ಅವಿಚಾರದಿಂದ ಇಷ್ಟದ ನಷ್ಟಿ ಇಲ್ಲದೆ ಪೂಜಿಸುತ್ತಾರೆ ಎಂದು ಅವರು ಅಂದಿರುವರು.

ಘನಮಠರು ಹೇಳುವದೇನೆಂದರೆ—ಒಳ್ಳು, ಒನಕೆ, ಮರ, ಜಲ್ಲಾಡಿ, ಬೀಸುವ ಕಲ್ಲು ಪೂಜಿಸರು ನಮ್ಮವರು. ಒಳ್ಳಿಯ ಶಿವನ ಪದವಲ್ಲದೆ ನುತಿಸರು. ಉದೋ, ಉದೋ ಎಂದು ಒದರುವವರಲ್ಲ ಈ ಪ್ರಕಾರವಾಗಿ ಅವರು ಅವಿಚಾರದಿಂದ ನಡೆಯುವವರನ್ನು ಎಚ್ಚರಿಸಿದ್ದಾರೆ.

ಇದಲ್ಲದೆ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಈ ಬಗ್ಗೆ ಸಭೆಯಲ್ಲಿ ಅಮೋಘವಾದ ಭಾಷಣಗಳು ಏಳು ದಿವಸಗಳವರೆಗೆ ನಡೆದು ಜನತೆಯಲ್ಲಿ ವಿಚಾರವು ಉದಯವಾಗಿ ಗಿರಿಯಾಪುರದ ಮಲ್ಲಿಕಾರ್ಜುನ ಬಳಗದವರು ಕೂಡ ಒಂದೆರಡು ದಿವಸ ಭಾಷಣ ಮಾಡಿ ನಮ್ಮ ಸಮಾಜದಲ್ಲಿ ಹೊಸ ಕಳೆಯನ್ನು ತುಂಬಿದರು.

ಶ್ರೀ ಶಿವಕುಮಾರ ಶಿವಯೋಗಿಗಳು ಪಟ್ಟಾಧ್ಯಕ್ಷರು ಸಿರಿಗೆರೆ ಇವರು ಕೊನೆಯ ದಿನದಲ್ಲಿ ಅಧ್ಯಕ್ಷತೆ ವಹಿಸಿದ್ದರು. ಅವರ ಸಮಾರೋಪಣ ಭಾಷಣ ದಿಂದ ಶಿವಾನುಭವ ಸಮ್ಮೇಳನವು ಮುಕ್ತಾಯವಾಯಿತು.

ಇವೆಲ್ಲವು ವಚನಶಾಸ್ತ್ರದ ಅಭ್ಯಾಸದ ಬಲದಿಂದಲ್ಲದೆ ಬೇರೆ ಇನ್ನೇ ತರಿಂದ ಸಾಧ್ಯ ?

---

# ಬಸವನ ಜಾತಿಯು ಬಗ್ಗೆ ಶೈವ ಕವಿಗಳ ಭ್ರಮೆ

[ಲೇ:— ಕಲ್ಯಾಣಪ್ಪ ಬ್ಯಾಳಿ, ಹುನಗುಂದ.]

"ಅನಾದಿ ವೀರಶೈವ ಸಂಗ್ರಹ"ದಲ್ಲಿ ಹೇಳಿರುವಂತೆ ಬಸವನು ಜಾತಿಯಿಂದ ಶುದ್ಧ ವೀರಶೈವ ವಂಶವಾದ ಪಂಚಮಸಾಲೆಯವನು. ಪಂಚಮಸಾಲೆ ಅಂದರೆ ಅಪ್ರಾಕೃತ ಅಥವಾ ಆರಾಧ್ಯ ಬ್ರಾಹ್ಮಣ ಅಥವಾ ಅತಿ ವರ್ಣಾಶ್ರಮಿ ಬ್ರಾಹ್ಮಣನೆಂಬ ಶಬ್ದಗಳು ಆಗಮಗಳಲ್ಲಿ ದೊರೆಯುತ್ತವೆ. ಅಂತಪ್ಪ ವೀರಶೈವನಿಗೆ ಲಿಂಗವೊಂದೇ ಉಂಟಲ್ಲದೆ ಶಿಖಾಸೂತ್ರಗಳಿಲ್ಲ. ಕರ್ಮಕಾಂಡವನ್ನು ಹರಿದು ಜ್ಞಾನವನ್ನಳವಡಿಸಿಕೊಂಡವರಿಗೆ ಲಿಂಗವೊಂದೇ ಉಂಟು. ಕರ್ಮಕಾಂಡದ ಚಿಹ್ನಗಳಾದ ಶಿಖಾಸೂತ್ರಗಳಾಗಲಿ, ಉಪನಯನವಾಗಲಿ ಇಲ್ಲವೇ ಇಲ್ಲ. ಕೃತಯುಗದಿಂದ ಈ ಪದ್ಧತಿಯು ನಡೆಯುತ್ತ ಬಂದಿರುವದೆಂದು ತಿಳಿದುಬರುತ್ತದೆ. * ಇದನ್ನರಿಯದೆ ವೈಷ್ಣವ ಕವಿಯಾದ ಸಿಂಗಿರಾಜನೂ ಶೈವ ಕವಿಗಳಾದ ಹರಿಹರ ಭೀಮಾದಿಗಳೂ ಬಸವನಿಗೆ ಪ್ರಾಕೃತ ಬ್ರಾಹ್ಮಣ್ಯವನ್ನಾರೋಪಮಾಡಲಿಕ್ಕೆ ಹೋಗಿ ದೊಡ್ಡ ಪೇಚಿನಲ್ಲಿ ಬಿದ್ದುಬಿಟ್ಟಿದ್ದಾರೆ. ಅವರ ಭ್ರಮೆಯನ್ನು ಯಥಾ ಶಕ್ತಿ ನಿರಸನ ಮಾಡುವದೇ ಈ ಲೇಖನದ ಮುಖ್ಯ ಉದ್ದೇಶವಾಗಿದೆ. ಮೊದಲು ನಾವು ಆಯಾಯ ಕವಿಗಳು ಬಸವನ ಜಾತಿಯಬಗ್ಗೆ ಹೇಳಿದ ವಿವರಗಳನ್ನು ಅವಲೋಕಿಸಿ ಅನಂತರ ಅವುಗಳಲ್ಲಿ ಕಂಡು ಬರುವ ದೋಷಗಳನ್ನು ಎತ್ತಿ ತೋರಿಸಲು ಪ್ರಯತ್ನಿಸೋಣ. ಸಿಂಗಿರಾಜ, ಹರಿಹರ, ಭೀಮಾದಿಗಳು ಮೊದಲು ಪ್ರಾಕೃತ ಬ್ರಾಹ್ಮಣರಿದ್ದು ಹಿಂದುಗಡೆ ವೀರಶೈವರಾದುದರಿಂದ ಅವರು ತಮ್ಮ ಪೂರ್ವ ಕುಲ ಜಾತಿಯ ಸಂಸ್ಕಾರಕ್ಕನುಸರಿಸಿ ತಮ್ಮ ಗ್ರಂಥಗಳಲ್ಲಿ ಬಸವನ ಜಾತಿಯನ್ನು ಚಿತ್ರಿಸಿರುವರೇ ವಿನಾ ನಿಜಸ್ಥಿತಿಯು ಮಾತ್ರ ಬೇರೆಯಿರುವದೆಂಬದು ವಾಚಕರಿಗೆ ಕೆಳಗಿನ ಸಂಗತಿಗಳಿಂದ ವಿದಿತವಾಗುವದು.

---

* ವೀರಶೈವರಿಗೂ ಮೊದಲು ಶಿಖಾಸೂತ್ರಗಳಿದ್ದವೆಂದು ಯಾರಾದರೂ ಸಾಧಿಸಿದರೆ ಬಸವನು ಅವುಗಳನ್ನು ೧೨ನೇ ಶತಮಾನದಲ್ಲಿ ಕಿತ್ತೊಗೆದು ಹೊಸ ವೀರಶೈವ ಪದ್ಧತಿಯನ್ನು ಹಾಕಿಕೊಟ್ಟನೆಂದೂ ಅಂದಿನಿಂದ ಅದೇ ಸಾಂಪ್ರದಾಯವೇ ರೂಢಿಯಲ್ಲಿರುತ್ತದೆಂದೂ ಒಪ್ಪಬೇಕಾಗುತ್ತದೆ.

## ೧ ಸಿಂಗಿರಾಜ ಪುರಾಣ.

ಮೊದಲು ಸಿಂಗಿರಾಜ ಪುರಾಣದಲ್ಲಿ ಹೇಳಿದ ಅಂಶಗಳನ್ನು ಕುರಿತು ವಿವೇಚಿಸೋಣ. ಅವರಲ್ಲಿ ಹೇಳಿರುವ ಅಂಶವು 'ಭಕ್ತಿಭಾಂಡಾರಿ' ಯಲ್ಲಿ ಹೀಗೆ ಅದೆ. "ಇಂಗಳೇಶ್ವರ ಬಾಗೇವಾಡಿಯಲ್ಲಿ ಅಗ್ರಭೂಸುರ ಶ್ರೇಷ್ಠ ಪರಮಸಾಂಖ್ಯಾಯನ ಸುಗೋತ್ರ, ಸತ್ಕುಲ ಪ್ರಸೂತರೊಳಧಿಕ, ಕರ್ಮ ಷಟ್ಕರ್ಮ ಶಾಪಾನುಗ್ರಹ ಸಮರ್ಥ ತನ್ನ ಪೆಸರು ವರಮಂಡಿಗೆಯ ಮಾದರಸ ಆತನ ರಾಣಿ ಪರಮಪತಿವ್ರತೆಯರಾದಿ ದೇವತೆ ಮಾದಲಾಂಬೆ ಇದ್ದರು. ಆಕೆ ಪುತ್ರಾರ್ಥ ಕಾರಣಂ ನೋಂಪಿ ಕಥೆಗಳ ಕೇಳಿ ಮನಮುಟ್ಟದೆ ಅವ ಬಿಟ್ಟು ವೃಷಭನೋಂಪಿಯ ನೋನುತ ಇರ್ದಳು. ಆಗ ವೃಷಭನು ಅವಳ ಗರ್ಭವನ್ನು ಸೇರಿ ನವಮಾಸ ತುಂಬಿ ಆಶ್ವಿಜ ಶುದ್ಧ ೧೪ ಸೋಮವಾರ ಹಿಮಕರಂಅರ್ದಸ್ತ ಶಿವಯೋಗ ಕೂಡಿದಾಗ ಜನಿಸಿದಂ ವೃಷಭನು. ಮಗು ಹುಟ್ಟಿದರೂ ಅದು ಕಣ್‌ಬಾಯ್ದೆರೆಯದೆ ಅಳದೆ ಮಿಡುಕದೆ ಇರಲು ತಾಯ್ತಂದೆಗಳು ಗಾಬರಿಗೊಂಡು ಮಂತ್ರತಂತ್ರೌಷಧಿಗಳನ್ನು ಮಾಡಿಸಿದರು. ಆದರೂ ಸಾರ್ಥಕವಾಗಲಿಲ್ಲ. ಆಗ ಕಪ್ಪಡಿಸಂಗಮಕ್ಷೇತ್ರದಿಂದ ಬಾಗೇವಾಡಿಗೆ ಬಂದಿದ್ದ ಜಾತವೇದ ಮುನಿಗಳು ಆ ಮಗುವಿಗೆ "ಓಂ ನಮಶ್ಶಿವಾಯ" ಎಂಬ ಮಂತ್ರೋಚ್ಚಾರಣೆಯಿಂದ ತ್ರಿಪುಂಡ್ರವಿಡಲು ಆ ಮಹಾತ್ಮನು ಕಣ್ದೆರೆದು ಕಂಡನು. ಕರ್ಮ ನಿರ್ಮೂಲ ನಿಜಗುರುವನು. ಆಗ ಎಲ್ಲರಿಗೆ ಸಂತೋಷವಾಯಿತು. ಜಾತವೇದ ಮುನಿಗಳು ಒಂದು ಲಿಂಗವನ್ನು ಮಾದಲಾಂಬಿಕೆಯ ಕೈಗೆ ಕೊಟ್ಟು "ಇಷ್ಟಕೃತಾರ್ಥ ಬಂದೊಲೆದಿತ್ತ್ರೆಯಾಗಿತ। ನ್ನಿಷ್ಟಲಿಂಗಮದಕ್ಕುಮೀ ಲಿಂಗಮಂ ಸಿಂಹ । ವಿಸ್ಮರದೊಳಿಟ್ಟರ್ಚಿಸರ್ಘ್ಯ ಪಾದ್ಯಾಚಮನ ಜಲಕ್ರಮದಲ್ಲದುದನು । ಮುಟ್ಟಿಸದಿರೇನುಮನನರ್ಪಿತಮನೇ ನೊಂದು । ಕೊಟ್ಟ ಕೆಡಿಸದಿರೆನುತ್ತ ಜ್ಞಾಪಿಸುಪದೇಶಗೊಟ್ಟು ಪೋಗಲ್ಕೆ" ಅದರಂತೆ ಮಾದಲಾಂಬೆ ಲಿಂಗಮುಖದೊಳೆ ಎಲ್ಲವನ್ನು ಮಾಡುತ್ತೆ ಮಗುವನ್ನು ಬೆಳಿಸಿದಳು. ಗರ್ಭಾಷ್ಟಕಕ್ಕೆ ಮಾತಃಪಿತೃಗಳು ಉಪನಯನದ ಏರ್ಪಾಟನ್ನು ಮಾಡತೊಡಗಿದರು. ನೆಂಟರಿಷ್ಟರು ಸೇರಿದರು. ವಿಜೃಂಭಣೆಯಿಂದ ಉಪನಯನ ನಡೆಯಿತು, ಮೌಂಜಿಯನ್ನು ಕಟ್ಟಿ ಯಜ್ಞಸೂತ್ರವಿಕ್ಕಿ ............ಉಪಾಧ್ಯಾಯರಿಗೆ ವಂದಿಸೆಂದು ಹೇಳಲು ಕರ್ಮಯುಕ್ತವಾದ ಉಪನಯನಾದಿಗಳನ್ನೊಲ್ಲೆನೆಂದನು, ಆದರೆ ಮಾತಾಪಿತೃಗಳು ರಮಿಸಿ

ಹೇಳಿದ್ದರಿಂದ ಬಸವನು ಮೌಂಜಿಯನ್ನೂ ಯಜ್ಞಸೂತ್ರವನ್ನೂ ಇಟ್ಟು ಕೊಂಡನು. ಮುಂದೆ ಕೃಷ್ಣ ಬಾಲಕನನ್ನು ನೀರಲ್ಲಿ ಮುಳುಗಿಸಿ ಕೊಂದ ನೆಂಬ ಅಪವಾದ ಬರಲು ಜಾತವೇದರು ಕೊಟ್ಟ ಲಿಂಗವನ್ನು ಕೈಕೊಂಡು ಸಂಗಮಕ್ಕೆ ಓಡಿಹೋದನು. ಅಲ್ಲಿ ಜಾತವೇದ ಮುನಿಗಳ ಆಶ್ರಯ ವನ್ನು ಹೊಂದಿದನು. ಮುಂದೆ ಕಲ್ಯಾಣಕ್ಕೆ ಹೋದಬಳಿಕ ಬಿಜ್ಜಳನು ತನ್ನ ಸಾಕುತಂಗಿಯಾದ ನೀಲಲೋಚನೆಯನ್ನು ಬಸವನಿಗೆ ಕೊಟ್ಟು ಮದುವೆ ಮಾಡಿದನು. ”

ಇನ್ನು ಇದರ ವಿಮರ್ಶೆಮಾಡೋಣ. ೧೨ನೆಯ ಶತಮಾನದಂಥ ಜಾತ್ಯಂಧತೆಯ ಕಾಲದಲ್ಲಿ ಶಿವದಾರದವರಿಗೂ ಜನಿವಾರದವರಿಗೂ ಕೂಡಿ ನಡೆಯುವದು ಶಕ್ಯವೇ ? ಒಂದು ಮತವನ್ನು ಇನ್ನೊಬ್ಬನು ಖಂಡ ತುಂಡವಾಗಿ ನಿಷೇಧಿಸುವಾಗ ಬ್ರಾಹ್ಮಣರೆಂದಾದರೂ ವೀರಶೈವಮತವನ್ನು ಸ್ವೀಕರಿಸಲು ಸಾಧ್ಯವೇ ? ಬಸವನಿಂದ ಬ್ರಾಹ್ಮಣರು ಮುಂದೆ ವೀರ ಶೈವರಾಗಿರಬಹುದು. ಆ ಮಾತು ಬೇರೆ. ಬ್ರಾಹ್ಮಣ ಹೆಣ್ಣುಮಗ ಳೆಂದಾದರೂ ನಂದೀವ್ರತವನ್ನಾಚರಿಸಿದ್ದುದು ಭೂತವರ್ತಮಾನ ಭವಿಷ್ಯ ತ್ಕಾಲದಲ್ಲಿ ಶಕ್ಯವೇ ? ವಿಷ್ಣು-ಶಿವ ಮೊದಲಾದ ದೇವರ ವ್ರತವನ್ನೇಕೆ ಆಚರಿಸಲಿಲ್ಲ ? ಮಾದಲಾಂಬಿಕೆಯು ವೀರಶೈವ ಸ್ತ್ರೀಯಾದ್ದರಿಂದಲೇ ಸಹಜವಾಗಿ ನಂದೀ ವ್ರತವನ್ನಾಚರಿಸಿದ್ದಾಳೆ. ನಂದೀ ವಂಶದವರೇ ವೀರಶೈವರು. ನಂದಿಯು ವೀರಶೈವ ಮತಕ್ಕೆ ಮೂಲ ಗುರುವು. ಆದ್ದರಿಂದ ನಂದಿಯು ಅವತಾರಿಯಾದ ಮಗನಿಗೆ ಸ್ವಾಭಾವಿಕವಾಗಿ ಬಸವ ನೆಂಬ ವೀರಶೈವಾಭಿಧಾನವುಂಟು. ಬ್ರಾಹ್ಮಣರೆಂದಾದರೂ ತಮ್ಮ ಮಕ್ಕ ಳಿಗೆ ‘ ಬಸವ ’ ನೆಂಬ ನಾಮಾಂಕಿತವನ್ನಿಟ್ಟದ್ದುಂಟೇ ? ಅಸಂಭವ. ಬ್ರಾಹ್ಮಣ ಶಿಶುವಿಗೆ ವೀರಶೈವ ಗುರುವೇಕೆ ಲಿಂಗಧಾರಣ ಮಾಡುವನು? ಹಾಗೆ ಮಾಡಿದರೆ ತಾಯ್ತಂದೆಗಳೇಕೆ ಒಪ್ಪುವರು ? ತಾಯ್ತಂದೆಗಳು ತಾವೇ ಕುಳಿತು ಅನ್ಯಮತೀಯನಿಂದ ಏಕೆ ಲಿಂಗ ಕಟ್ಟಿಸುವರು ? ವೀರಶೈವನಾದ ಬಳಿಕ ಬಸವನು ೮ ವರ್ಷಗಳ ವರೆಗೆ ವೀರಶೈವರಲ್ಲದ ಬ್ರಾಹ್ಮಣ ತಾಯ್ತಂದೆಗಳೊಡನೆ ಹೇಗೆ ಬಳಿಕೆ ಮಾಡಿದನು? ಲಿಂಗ ಧಾರಣವಾಗಿದ್ದರೂ ಉಪನಯನವನ್ನೇಕೆ ಮಾಡಿಸಿಕೊಂಡನು ? ಯಜ್ಞೋ ಪವೀತ ಮೌಂಜಿಗಳನ್ನೇಕೆ ಧರಿಸಿಕೊಂಡನು ? ಮಗುವಿಗೆ ಲಿಂಗಧಾರಣ ಮಾಡಲಿಕ್ಕೆ ಬಂದ ಗುರುವು ಮಗುವಿಗೆ ಲಿಂಗ ಕಟ್ಟದೆ ತಾಯಿಯ

ಕೈಯಲ್ಲಿ ಕೊಟ್ಟು ಹೋಗಬೇಕಾದರೆ ಎಂಥ ಹೆಡ್ಡನಿರಬೇಕು ? ತಾಯ್ತಂದೆಗಳಿಗೆ ಲಿಂಗಧಾರಣ ಮಾಡದೆ ಮಗುವಿಗೆ ಲಿಂಗ ಧರಿಸಬಹುದೇ? ಭಕ್ತ ಭವಿಗಳಿಬ್ಬರೂ ಒಂದೇ ಮನೆಯಲ್ಲಿ ಕೂಡಿನಡೆಯುವದು ಶಕ್ಯವೇ ? ತಾವು ಲಿಂಗಧಾರಣ ಹೊಂದದೆ ಮಗುವಿಗೆ ಲಿಂಗಧಾರಣ ಮಾಡಿಸುವ ತಾಯ್ತಂದೆಗಳಾದರೂ ಎಂಥ ಹೆಡ್ಡರಿರಬೇಕು ? ಲಿಂಗವನ್ನು ಮಗುವಿನ ದೇಹದ ಮೇಲೆ ಧರಿಸದೆ ಸಿಂಹವಿಷ್ಟರದೊಳಿಟ್ಟು ಅದನ್ನು ಲಿಂಗಬಾಹ್ಯಳಾದ ತಾಯಿಗೆ ಪೂಜಿಸೆಂದು ಹೇಳುವವನು ವೀರಶೈವ ಗುರುವೇ ? ಪಾಪ ! ವೈಷ್ಣವನಾದ ಸಿಂಗಿರಾಜನಿಗೆ ವೀರಶೈವ ತತ್ವವೇನು ಗೊತ್ತು ? ಬ್ರಾಹ್ಮಣ ಬಾಲಕನಿಗೆ ಲಿಂಗಧಾರಣಮಾಡಿದರೆ ಮುಂದೆ ೮ನೇ ವರ್ಷಕ್ಕೆ ಅವನ ತಾಯ್ತಂದೆಗಳು ಆತನ ಉಪನಯನ ಮಾಡಿದರೆ ಹೇಗೆಂಬ ಕಲ್ಪನೆಯು ಆ ಗುರುವಿಗೆ ಬರಲಿಲ್ಲವೇ ? ತಾನು ವೀರಶೈವನೆಂಬ ಕಲ್ಪನೆ ಬಂದಬಳಿಕ ಸಹ ಬಸವನು ಮೌಂಜಿಯನ್ನೂ ಯಜ್ಞಸೂತ್ರವನ್ನೂ ತಂದೆಯ ಅನುಮತಿಯ ಪ್ರಕಾರ ಇಟ್ಟುಕೊಂಡನಂತೆ. ಈ ಮಾತು "ನನ್ನ ಹುಚ್ಚು ಬಿಟ್ಟಿತು, ಒಣಕಿಯನ್ನು ತಲೆಗೆ ಸುತ್ತಿಕೊಳ್ಳುತ್ತೇನೆ"ಂದಂತೆಯೇ ಸರಿ. ಲಿಂಗಾಯತನೆಂದು ತಿಳಿದೂ ತಿಳಿದೂ ಮನಸ್ಸಿನ ವಿರುದ್ಧ ಉಪನಯನಕ್ಕೊಪ್ಪಬಹುದೇ ? ಉಪವೀತವನ್ನು ಧರಿಸಬಹುದೇ? ಇದೆಲ್ಲ ವೀರಶೈವ ಆಚಾರ ಅನುಭವಗಳಿಲ್ಲದ ಸಿಂಗಿರಾಜನಿಗೆ ಏನು ಗೊತ್ತು ? ಶುದ್ಧ ವೀರಶೈವನಾದ ಬಸವಣ್ಣನಿಗೆ ವೃಥಾ ಬ್ರಾಹ್ಮಣ್ಯವನ್ನಾರೋಪ ಮಾಡಿ ಲಿಂಗಧಾರಣ-ಉಪನಯನಗಳ ಪರಸ್ಪರ ವಿರೋಧ ಸಂಗತಿಗಳನ್ನು ಕವಿಯು ವಿಶದಪಡಿಸಿದ್ದುದು ದೊಡ್ಡ ಪ್ರಮಾದವೆಂದೇ ಹೇಳಬೇಕಾಗಿದೆ. ಆದ್ದರಿಂದ ಇವೆಲ್ಲ ಸುಳ್ಳು ಸಂಗತಿಗಳು. ಬಸವನು ಶುದ್ಧ ವೀರಶೈವ ವಂಶದಲ್ಲಿ ಜನಿಸಿದ್ದಾನೆ. ಹುಟ್ಟಿದ ಕೂಡಲೆ ವೀರಶೈವಧರ್ಮದ ಪ್ರಕಾರ ಕುಲಗುರುವಿನಿಂದ ಅವನಿಗೆ ನೇರವಾಗಿ ಲಿಂಗಧಾರಣವಾಗಿರುತ್ತದೆ. ೮ನೇ ವರ್ಷಕ್ಕೆ ಅವನು ಸ್ವಾಭಾವಿಕವಾಗಿಯೇ ಗುರುವಿನ ಬಳಿಗೆ ವಿದ್ಯಾಭ್ಯಾಸಕ್ಕಾಗಿ ಹೋಗಿದ್ದಾನೆ. ಉಪನಯನದ ಸನ್ನಿವೇಶವು ಕವಿಯ ಕೈಗಂಟು.

## ೨. ಬಸವರಾಜದೇವರ ರಗಳೆ

ಇನ್ನು ಬಸವರಾಜದೇವರ ರಗಳೆಯಲ್ಲಿ ಬಸವನ ಜಾತಿಯ ಬಗ್ಗೆ ಯಾವ ಸಂಗತಿಗಳು ಕಂಡುಬರುತ್ತವೆಯೆಂಬದನ್ನು ವಿವೇಚಿಸೋಣ.

ಭಕ್ತಿಭಂಡಾರಿಯಲ್ಲಿ ಹೀಗೆ ಹೇಳಿದೆ. "ಬಾಗೇವಾಡಿ ಕಮ್ಮೆಕುಲದ ಮಾದಿರಾಜನೆಂಬ ವಿಪ್ರನಿಗೂ ಅವನ ಹೆಂಡತಿ ಮಾದಾಂಬೆಗೂ ವೃಷಭ ಮುಖನು ಮಗನಾಗಿ ಹುಟ್ಟಿದನು. ಆ ಮಗನಿಗೆ ಜಾತಕರ್ಮಮಂ ಮಾಡಿ ಬಸವನೆಂಬ ಅಭಿಧಾನಮಂ ಕೊಟ್ಟರು. 'ಲಿಂಗಮಂ ತೋರೆ ಕಣ್ದೆರೆದು ಸುಖಿಯಾಗುತಂ। ಲಿಂಗಪ್ರಸಾದಮಂ ಕೊಂಡು ಹೊರೆಯೇರುತಂ.' ಬಸವನು ಬೆಳೆಯ ತೊಡಗಿದನು. ಕೆಲವು ಕಾಲದಮೇಲೆ ತಾಯ್ತಂದೆಗಳೀರ್ವರೂ ತೀರಿಕೊಂಡರು. ಆಗ ಶಿವಭಕ್ತಿ ಮತ್ತಂತಿರ್ದ ಮುತ್ತಜ್ಜಿಯ ಪಕ್ಕದೊಳು ಶಿವಪ್ರಸಾದ ಸಂತುಷ್ಟ ಹೃದಯನಾಗಿ ನಾಲ್ಕೆರಡು ವರ್ಷಂ ಸುಖದೊಳಿರೆ ಬಾಲ್ಯ ವಿಮೋಚನವಾಗಿ ಯೌವನೋದಯವಾಗಿ ಹದಿನಾರು ವರ್ಷದ ಸೊಬಗಿನ ಭಕ್ತನಾದನು ಬಸವಣ್ಣ. ಆಗ ವಿಚಾರಪರನಾದ ಬಸವನು "ಶಿವಭಕ್ತಿಯುಂ ಕರ್ಮಮುಂ ಎಂದು ಮೊಂದಾಗಿರದು"— ಎಂದೊಲ್ಲದೆ ಪರಮವೈರಾಗ್ಯಯುಕ್ತಂ ಶಿವಲಿಂಗಾರ್ಚನಾಯತ್ತ ಚಿತ್ತಂ ಕರ್ಮಲತೆಯಂತಿರ್ದ ಜನ್ನಿವಾರಮಂ ಕಳೆದು ಬಿಸುಟು ಹೋತಿನ ಗಂಟಲಂ ಬಿಗಿವಂತಿರ್ದ ಮೌಂಜಿಯಂ ಪರಿದು ಬಿಸುಟು ನವ್ಯದು ಕೂಲಮಂ ತೆಗೆದು ದಿವ್ಯವಸ್ತ್ರಮಂ ಪೊದೆದು ಮನೆ ನೆಳಲಂ ಬಗೆಯದೆ ಬಾಗೆವಾಡಿಯಿಂ ಪೊರಮಟ್ಟು ಪೂರ್ವದಿಶಾಮುಖನಾಗಿ ಕೂಡಲಸಂಗಮ ಕ್ಷೇತ್ರವನ್ನು ಸೇರಿದನು. ಈಶಾನ್ಯ ಗುರುಗಳು ಸಂಗಮೇಶನನ್ನು ಭಕ್ತಿಯಿಂದ ಪೂಜಿಸಲು ಅಪ್ಪಣೆ ಕೊಡಿಸುವರು. ಅಲ್ಲಿ ನಂದಿಕೇಶ್ವರನ ಮುಂದೆ ನೆನೆವುತ್ತ ಕುಳ್ಳಿರೆ ವೃಷಭ ಮುಖದಿಂದ ಸಂಗಮೇಶ್ವರ ಲಿಂಗ ಬಸವನ ಹಸ್ತಕ್ಕೆ ಬಂದಿತು. ಮುಂದೆ ಬಸವನು ಮಂಗಳವಾಡಕ್ಕೆ ಹೋಗಲು ಸಿದ್ಧರಸನು ಬಸವನನ್ನು "ಕುಲವೊಂದೆ ಕುಲವಾಗೆ ಗೋತ್ರವಂತನುವಾಗೆ ಬಸವನಂ ಮನೆಯಲ್ಲಿರಿಸಿಕೊಂಡನು. ಕೆಲವು ದಿನಗಳ ತರುವಾಯ ಬಸವಣ್ಣನು ಸತ್ಕುಲ ಸದೃಶ್ಯ ಸುಶೀಲೆಯರಪ್ಪ ಗಂಗಾದೇವಿ ಮಾಯಾದೇವಿಯರನ್ನು ಮದುವೆಯಾಗಿ ಸುಖಿಯಾಗಿದ್ದನು."

ಈ ಮೇಲ್ಕಂಡ ಸಂಗತಿಗಳ ಬಗ್ಗೆ ವಿಮರ್ಶಿಸೋಣ. ಹರೀಶ್ವರನು ಮೊದಲು ಶೈವನಿದ್ದು ನಂತರ ವೀರಶೈವನಾದುದರಿಂದ ಅವನಿಗೆ ತನ್ನ ಪೂರ್ವ ಜಾತಿಯ ಸಂಸ್ಕಾರವು ಹೋಗಿಲ್ಲವೆನ್ನಬೇಕು. ಬ್ರಾಹ್ಮಣ ಶಿಶುವಿಗೆ ಜಾತಕರ್ಮ ಮಾಡಿಸಿದ ಬಳಿಕ "ಲಿಂಗಮಂ ತೋರೆ ಕಣ್ದೆರೆದು

ಸುಖಿಯಾಗುತಂ । ಲಿಂಗ ಪ್ರಸಾದವಂ ಕೊಂಡು ಹೊರೆಯೇರುತಂ" ಎಂದು ವರ್ಣಿಸಿದ್ದಾನೆ- ಆ ಲಿಂಗವೆಲ್ಲಿಂದ ಬಂತು ? ಯಾರಾದರೂ ತಮ್ಮ ಲಿಂಗವನ್ನು ತೋರಿಸಿದರೋ ? ಬಸವಣ್ಣನಿಗೆ ಅದನ್ನು ಯಾರಾದರೂ ಕಟ್ಟಿದ್ದರೋ ? ಅಥವಾ ಯಾರಾದರೂ ಎಲ್ಲಿಯದಾದರೊಂದು ಲಿಂಗವನ್ನು ತೋರಿಸಿದರೋ ಇದಾವುದನ್ನೂ ಕವಿಯು ಸ್ಪಷ್ಟಪಡಿಸಿಲ್ಲ. ಒಂದು ವೇಳೆ ಗುರುವು ಲಿಂಗ ಕಟ್ಟಿದ್ದರೆ ಅದನ್ನು ಅನ್ಯರು ತಮ್ಮಲ್ಲಿಟ್ಟುಕೊಂಡು ಅವನಿಗೆ ಪ್ರಸಂಗ ಬಂದಾಗ ತೋರಿಸಬಹುದೇ ? ಗುರುವು ಲಿಂಗ ಕಟ್ಟದಿದ್ದರೆ ಸಂತೆಯೊಳಗಿನ ಲಿಂಗವನ್ನು ಕೊಂಡು ತಂದು ಅದನ್ನು ತೋರಿಸಿದರೆ ಆ ಶಿಶುವು ಸಂತೋಷಗೊಳಬಹುದೇ ? ಇವೆಲ್ಲ ವೀರಶೈವಾಚಾರಕ್ಕೆ ಅಸಂಗತವಾದ ವಿಷಯಗಳಲ್ಲವೇ ? ಶಿಶುವಿಗೆ ಲಿಂಗ ಧಾರಣವಾಗಿದ್ದಪಕ್ಷದಲ್ಲಿ ೮ನೇ ವರ್ಷಕ್ಕೆ ಉಪನಯನವೇಕಾಯಿತು ? ಲಿಂಗಧಾರಿಗಳಿಗೆ ಉಪವೀತವಿಲ್ಲವೆಂಬುದು ಹರೀಶ್ವರನಿಗೆ ಗೊತ್ತಿರಲಿಲ್ಲವೇ? ೮ ವರ್ಷಗಳ ವರೆಗೆ ಬ್ರಾಹ್ಮಣನೇ ಇದ್ದನೆಂದು ಗ್ರಹಿಸುವಾ. ೧೬ ವರ್ಷಗಳ ವರೆಗೆ ಬ್ರಾಹ್ಮಣ ಸಂಸಾರದಲ್ಲಿಯೇ ಬೆಳೆದ ಬಾಲಕನಿಗೆ ಜನ್ನಿವಾರವು ಕರ್ಮಲತೆಯೆಂಬುದೂ ಮೌಂಜಿಯು ಹೋತಿನ ಗಂಟಲವಂ ಬಿಗಿವಂತಿರ್ದ ಹಗ್ಗವೆಂಬುದೂ ಬೇರೆ ಯಾವ ಸಂಸ್ಕಾರದಿಂದ ಗೊತ್ತಾಯಿತು ? ಪೂರ್ವದಲ್ಲಿ ಲಿಂಗಾಯತ ಸಂಸ್ಕಾರವಿಲ್ಲದವನು ಸುಮ್ಮ ಸುಮ್ಮನೆ ಜನಿವಾರ, ಮೌಂಜಿಯನ್ನೇಕೆ ಕಿತ್ತೊಗೆಯುವನು ? ಲಿಂಗಾಯತರ ಮಗುವನ್ನು ಬ್ರಾಹ್ಮಣ ತಾಯಿತಂದೆಗಳು ಸಾಕಿ ಸಲುಹಿಲ್ಲವಷ್ಟೇ ! ತಿದೆಲ್ಲ ಬಸವನ ಮೇಲೆ ವೃಥಾ ಬ್ರಾಹ್ಮಣ್ಯವನ್ನಾರೋಪಿಸಿದ ದೋಷವಲ್ಲವೇ ? ಸಿಂಗಿರಾಜ ಪುರಾಣದ ಜಾತವೇದ ಗುರುವು ಬಸವನ ತಾಯಿಗಾದರೂ ಮಗನ ಹೆಸರಿನಿಂದ ಲಿಂಗ ಕೊಟ್ಟಿದ್ದಾನೆ. ಆದರೆ ಹರೀಶ್ವರನು ಈಶಾನ ಗುರುವಿನ ನಾಮ ನಿರ್ದೇಶ ಮಾಡಿದ್ದರೂ ಪ್ರೌಢನಾದ ಬಸವನಿಗೆ ಲಿಂಗಧಾರಣ ಮಾಡಿಸಬಾರದೇ ? (ಈಶಾನ್ಯ ಗುರುವು ಬಸವನಿಗೆ ವೀರಶೈವ ಧರ್ಮಕ್ಕೆ ವಿರುದ್ಧವಾದ ಸ್ಥಾವರ ಲಿಂಗೋಪಾಸನೆ ಮೊದಲು ತಿಳಿಸುವನು) ಈ ತಪ್ಪನ್ನು ತಿದ್ದಿಕೊಳ್ಳಲಿಕ್ಕೆ ಸಂಗಮೇಶ್ವರ ದೇವಸ್ಥಾನದ ನಂದೀ ವಿಗ್ರಹದ ಬಾಯಿಯಿಂದ ಬಸವನ ಹಸ್ತಕ್ಕೆ ಲಿಂಗ ಬಂದಿತೆಂದು ಹೇಳಿದ್ದಾನೆ. ವೀರಶೈವ ಧರ್ಮದ ಪ್ರಕಾರ ಶ್ರೀಗುರುವಿನಿಂದ ಲಿಂಗಧಾರಣ ಹೊಂದದೆ ಶಿಲಾಮೂರ್ತಿಯಿಂದ ಹೊಂದಬಹುದೇ?

ಇದರ ಮೇಲಿಂದ ಹರೀಶ್ವರನಿಗೆ ವೀರಶೈವ ಮತಜ್ಞಾನವು ಎಷ್ಟಿತ್ತೆಂಬುದು ವಿದಿತವಾಗುವದಿಲ್ಲವೇ? ಹೆಸರಿನಿಂದಲೇ ಸಿದ್ದಣ್ಣ ಮಂತ್ರಿಯು ವೀರಶೈವನೆಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ. "ಕುಲವೊಂದೆ ಕುಲವಾಗೆ ಗೋತ್ರವಂತನುವಾಗೆ" ಬಸವನನ್ನು ತನ್ನ ಮನೆಯಲ್ಲಿರಿಸಿಕೊಂಡನೆಂದು ಕವಿಯು ಹೇಳಿರುವಾಗ ಬಸವನು ಸ್ವಾಭಾವಿಕವಾಗಿಯೇ ವೀರಶೈವನಿದ್ದು ಅವನ ಮನೆಯಲ್ಲಿ ಉಳಿದು ಸಿದ್ದಣ್ಣ ಮಂತ್ರಿಯ ಮಗಳಾದ ನೀಲಮ್ಮನ ಲಗ್ನವಾದದ್ದು ಸ್ವಾಭಾವಿಕವು. ಇದನ್ನು ಬಿಟ್ಟು ಕವಿಯು ಬ್ರಾಹ್ಮಣ್ಯಾರೋಪಕ್ಕೆ ವಿಘ್ನ ಬಂದೀತೆಂದು ನೀಲಮ್ಮನ ಹೆಸರನ್ನೇ ಬಿಟ್ಟು ಗಂಗಾದೇವಿ ಮಾಯಾದೇವಿಯರನ್ನು ಲಗ್ನವಾದನೆಂದು ಏಕೆ ಹೇಳಿದನೋ? ಇದರ ಮೇಲಿಂದ ಬಸವನ ವೀರಶೈವತ್ವವನ್ನು ಬಚ್ಚಿಟ್ಟು ಅವನನ್ನು ಪ್ರಾಕೃತ ಬ್ರಾಹ್ಮಣ್ಯದತ್ತ ಎಳೆಯುವ ಪ್ರಮಾದವು ವ್ಯಕ್ತವಾಗುವದಿಲ್ಲವೇ?

## ೩. ಬಸವ ಪುರಾಣ

ಇನ್ನು ಭೀಮಕವಿ ಕೃತ 'ಬಸವ ಪುರಾಣ' ದಲ್ಲಿ ಬಸವನ ಜನನದ ಬಗ್ಗೆ ಹೇಳಿರುವ ಸಂಗತಿಗಳನ್ನಷ್ಟು ವಿವೇಚಿಸೋಣ. ಬಸವಪುರಾಣದಲ್ಲಿ ಹೀಗೆ ಹೇಳಿದೆ. "ಕರ್ನಾಟಕ ದೇಶದ ಇಂಗಳೇಶ್ವರ ಬಾಗೇವಾಡಿಯೆಂಬ ಸುಪ್ರಸಿದ್ಧವಾದ ಗ್ರಾಮದಲ್ಲಿ ಪರಮಶೈವಾಂಬುರುಹ ತರಣಿಯಾದ ಮಾದಿರಾಜನೂ ಅವನ ಸತಿಯಾದ ಮಾದಲಾಂಬಿಕೆಯೂ ಸಂತಾನಾಪೇಕ್ಷೆಯಿಂದ ನಂದಿನಾಥೇಶ್ವರನಿಗೆ ಹರಕೆಯನ್ನು ಮಾಡಿಕೊಂಡಿರಲಾಗಿ ಆ ಕೋರಿಕೆಯನ್ನು ಈಡೇರಿಸುವದಕ್ಕೆ ನಂದೀಶ್ವರನು ಪುತ್ರನಾಗಿ ಜನಿಸುವನು. ಮಾದಲಾಂಬೆಯು ೩ ವರ್ಷ ಕಾಲ ಗರ್ಭಧಾರಣ ಮಾಡಿ ಬೇಸತ್ತು ಬಳಲಿ ಬೆಂಡಾಗಿ ನಂದೀಶ್ವರನ ಕರುಣೆಯಿಂದ ಶಿಶುವನ್ನು ಹಡೆಯುವಳು. ಆಗಲೇ ಸಂಗಮನಾಥನಿಂದ ಲಿಂಗಧಾರಣಾದಿ ಕಾರ್ಯಗಳು ನೆರವೇರುವವು. ಬಾಲಕನು ೮ ವರ್ಷದವನಾಗಲು ಮಾದಿರಾಜನು ಉಪನಯನ ಮಾಡಲಿಕ್ಕೆ ಹವಣಿಸುವನು. ಆದರೆ ವೀರಶೈವ ದೀಕ್ಷೆಯನ್ನು ಮೊಟ್ಟಮೊದಲೇ ಪಡೆದ ನಾವು ಅನ್ಯಕರ್ಮಾಚರಣೆ ಮಾಡುವದಿಲ್ಲೆಂದು ತಂದೆಯನ್ನು ನಿರಾಕರಿಸಿ ಸಹೋದರಿ ನಾಗಲಾಂಬಿಕೆಯನ್ನು ಕರೆದುಕೊಂಡು ಸಂಗಮಕ್ಕೆ ತೆರಳುವನು. ಉಪನಯನಕ್ಕೆ ಬಂದಿದ್ದ

ಮಾದಲಾಂಬಿಕೆಯ ಅಣ್ಣ ಬಲದೇವನು ಬಸವಣ್ಣನವರ ನಿಶ್ಚಲ ವೀರ ಶೈವ ಭಕ್ತಿಗೆ ಮೆಚ್ಚಿ ಮಗಳಾದ ಗಂಗಾಂಬಿಕೆಯನ್ನು ಲಗ್ನಮಾಡಿ ಕೊಡುವನು."

ಈ ಮೇಲ್ಕಂಡ ಸಂಗತಿಗಳ ಬಗ್ಗೆ ಯಥಾಮತಿ ವಿವೇಚಿಸುವಾ. ಹರಿಹರ ಸಿಂಗಿರಾಜರಿಗಿಂತ ಭೀಮ ಕವಿಯು ಸ್ವಲ್ಪ ಹೆಚ್ಚು ಬುದ್ಧಿ ವಂತನೆಂಬಂತೆ ಕಾಣುತ್ತದೆ. ಅಂತೆಯೇ ಅವನ ಪುರಾಣವೇ ಮೊದಲಿ ನಿಂದಲು ವೀರಶೈವರಲ್ಲಿ ಪ್ರಚಲಿತವಾಗಿರುತ್ತದೆ. ಆದರೆ ವೀರಶೈವರು ಸಿಂಗಿರಾಜ ಪುರಾಣ ಬಸವರಾಜದೇವರ ರಗಳೆಗಳನ್ನು ಅಷ್ಟು ಮನ್ನಿಸು ವಂತೆ ಕಂಡು ಬರುವದಿಲ್ಲ. ಯಾಕಂದರೆ ಭೀಮಕವಿಯು ಹೇಳಿದ ಕೆಲವು ಸಂಗತಿಗಳು ಹೆಚ್ಚು ವೀರಶೈವಪರವಾಗಿರುವವು. "ಪರಮ ಶೈವಾಂಬುರು ಹತರಣಿ ಮಾದಿರಾಜ" ಎಂಬ ಶಬ್ಧ ಪ್ರಯೋಗದಿಂದ ವೀರಶೈವ ಅಥವಾ ಆರಾಧ್ಯ ಶೈವ ಎಂಬ ಅರ್ಥ ಮಾಡಿಕೊಳ್ಳಬಹುದು. ಹುಟ್ಟಿದ ಕೂಡಲೆ ಶಿಶುವಿಗೆ ಸಂಗಮನಾಥನಿಂದ ಲಿಂಗಧಾರಣವಾಗುತ್ತದೆ. ಇದು ವೀರಶೈವ ತತ್ವಕ್ಕೆ ಅನುಕೂಲ ವಿಷಯ. ಅಂತೆಯೇ ಷಡಕ್ಷರಿಯು ಭೀಮ ಕವಿಯ ಬಸವಪುರಾಣದಿಂದಲೇ ವೃಷಭೇಂದ್ರ ವಿಜಯವನ್ನುಬರೆದಿದ್ದಾನೆ. ಆದರೆ ೮ ವರ್ಷಕ್ಕೆ ಉಪನಯನ ಪ್ರಸಂಗವನ್ನು ತಂದೊಡ್ಡಿದ್ದುದು ದೊಡ್ಡ ತಪ್ಪು. ಆದರೂ ಅದನ್ನು ಮರೆಮಾಚುವ ಉದ್ದೇಶದಿಂದ ಮೊದಲೇ ವೀರ ಶೈವ ದೀಕ್ಷೆಯನ್ನು ಪಡೆದ ನಾವು ಅನ್ಯಕರ್ಮಾಚರಣೆಯನ್ನು ಆಚರಿಸುವ ದಿಲ್ಲೆಂದು ತಂದೆಯ ಮಾತನ್ನು ನಿರಾಕರಿಸಿ ಅಕ್ಕ ನಾಗಮ್ಮನೊಡನೆ ಸಂಗ ಮಕ್ಕೆ ತೆರಳುವನು. ತಾನು ವೀರಶೈವನೆಂಬ ಕಲ್ಪನೆಯಿದ್ದ ಬಸವನು ಭವಿಗ ಳಾದ ಬ್ರಾಹ್ಮಣ ತಾಯ್ತಂದೆಗಳ ಮನೆಯಲ್ಲಿಯೇ ಹೇಗೆ ಬಳಿಕೆಮಾಡಿದನು ? ಇದನ್ನು ಕವಿಯು ಸ್ಪಷ್ಟ ಮಾಡಿಲ್ಲ. ನಾಗಮ್ಮನೆಂಬ ಹೆಸರು ಶುದ್ಧ ವೀರಶೈವರದು. ಬ್ರಾಹ್ಮಣರಲ್ಲಂತೂ ಇಂಥ ಹೆಸರು ಎಂದೂ ಸಿಗುವ ದಿಲ್ಲ. ಅಂದಮೇಲೆ ಬಸವನು ವೀರಶೈವ ಬಳಗದವನಲ್ಲವೇ ? ಮಾದರಸ (ಮಹಾದೇವರಸ) ಮಾದಲಾಂಬಿಕೆ (ಮಾಹೇದೇವಿಅಂಬಿಕೆ) ಇವಾದರೂ ವೀರಶೈವರ ಹೆಸರುಗಳೇ ನಿಜ. ಹೀಗಿದ್ದು ಉಪನಯನ ಪ್ರಸಂಗವನ್ನು ತಂದೊಡ್ಡಿದುದು ಮೊದಲು ಶೈವನಿದ್ದ ಭೀಮ ಕವಿಗೆ ಬಸವನನ್ನು ತನ್ನ ಜಾತಿಯ ಕಡೆಗೇ ಎಳೆದೊಯ್ಯಬೇಕೆಂಬ ಇಚ್ಛೆಯಿಂದಲ್ಲದೆ ಮತ್ತೇನು? ಇದಲ್ಲದೆ ವೀರಶೈವ ಸಾಮಾನ್ಯರಲ್ಲಿ ಬಸವಣ್ಣನ ಹೆಂಡತಿ ನೀಲಮ್ಮ

ನೆಂಬ ನಂಬಿಕೆಯು ರೂಢಿಯಲ್ಲಿರುವುದಲ್ಲದೆ ಬಲದೇವ ಬ್ರಾಹ್ಮಣನ ಮಗಳಾದ ಗಂಗಾಂಬಿಕೆಯೆಂಬದು ಯಾವ ಸಾಮಾನ್ಯನಿಗೂ ಗುರುತಿಲ್ಲ. ವಚನಕಾರರಲ್ಲಿಯೂ ಕೂಡ ನೀಲಮ್ಮನೇ ಮುಖ್ಯವಾಗಿದ್ದು ಗಂಗಾಂಬಿಕೆಯ ಹೆಸರಿಲ್ಲ. ಹೆಸರಿಲ್ಲ. ಉಪನಯನಕ್ಕೆ ಬಂದಿದ್ದ ಬಲದೇವನು ಬಸವನು ವೀರಶೈವನೆಂಬು ತಿಳಿದೂ ತಿಳಿದೂ ತನ್ನ ಮಗಳನ್ನು ಅವನಿಗೆ ಕೊಡು ವದೆಂದರೆ ತನ್ನ ಜಾತಿಗೆ ಕಲಂಕವಲ್ಲವೇ? ಗಃನೇ ಶತಮಾನದಂಥ ಜಾತ್ಯಂಧತೆಯ ಕಾಲದಲ್ಲಿ ಬ್ರಾಹ್ಮಣನೆಂದಾದರೂ ವೀರಶೈವನಿಗೆ ತನ್ನ ಮಗಳನ್ನು ಕೊಡಬಹುದೇ? ಈಗಿನ ಜಾತ್ಯತೀತವಾದ ಕಾಲದಲ್ಲಿ ಈ ಮಾತು ಅಶಕ್ಯವಿರುವಾಗ ಆ ಕಾಲದಲ್ಲಿ ಹೇಗೆ ತಾನೆ ಶಕ್ಯ? ಗಂಗಾಂಬಿಕೆಯ ವಿವಾಹವು ವೀರಶೈವ ಸಾಂಪ್ರದಾಯಕ್ಕೆ ವಿರೋಧವಾಗಿದೆ. ಬಲದೇವ ಗಂಗಾಂಬಿಕೆಯರ ಸನ್ನಿವೇಶವು ಕೂಡ ಬಸವನನ್ನು ಬ್ರಾಹ್ಮಣ ಸಾಂಪ್ರದಾಯಕ್ಕೆಳೆಯುವ ಹಂಚಿಕೆಯೇ ಹೊರತು ಬೇರಲ್ಲವು.

ಮೇಲಿನ ಮೂವರು ಕವಿಗಳ ಅಸಂಬದ್ಧ ಸಂಗತಿಗಳನ್ನು ವಿಚಾರಿಸಲಾಗಿ ಶುದ್ಧ ವೀರಶೈವ ವಂಶಜನಾದ ಬಸವನಿಗೆ ಆ ಕವಿಗಳು ಬ್ರಾಹ್ಮಣ್ಯವನ್ನಾರೋಪಿಸಲಿಕ್ಕೆ ಹೋಗಿ ವೀರಶೈವ ಸಾಂಪ್ರದಾಯಕ್ಕೆ ವಿರೋಧವಾದ ಅಸಂಗತ ಸಂಗತಿಗಳನ್ನು ಅಂಟಿಸಿರುವದರಿಂದ ಈ ಪುರಾಣ ಕಾವ್ಯಗಳು ನಂಬಲರ್ಹವಲ್ಲವೆಂದು ಧಾರಾಳವಾಗಿ ಹೇಳಬಹುದು. ಬಸವನ ಸಮಕಾಲೀನರಾದ ಶರಣರು ಬಸವನು ಬ್ರಾಹ್ಮಣನೆಂದು ಯಾರೂ ಎಲ್ಲಿಯೂ ಹೇಳಿಲ್ಲ. ಆದರೆ "ಪ್ರಥಮಾಚಾರ್ಯ, ಪರಮಾರಾಧ್ಯ, ಜಗದಾದಿದೇಶಿಕ, ವೀರಶೈವ ನಿರ್ಣಯ ಪರಮಾವತಾರ, ಶ್ರೀಗುರು ಸಂಗನಬಸವಣ್ಣನ ಪಾದಕ್ಕೆ ನಮೋ ನಮೋ" ಎಂದಿದ್ದಾರೆ- ಈ ಮಾತುಗಳು ಬಸವನ ಶುದ್ಧ ವೀರಶೈವ ಜಾತಿಯನ್ನು ಗುರುತ್ವವನ್ನು ವ್ಯಕ್ತಪಡಿಸುತ್ತವೆ. ಅನ್ಯಜಾತಿಯವನಿದ್ದು ಹಿಂದುಗಡೆ ವೀರಶೈವನಾಗಿದ್ದರೆ ಆಗಿನ ಕಾಲದ ಸಾಂಪ್ರದಾಯ ಶರಣರೆಂದಾದರೂ ಅವನ ಪಾದಕ್ಕೆ ನಮೋ ನಮೋ ಎನ್ನುವದು ಶಕ್ಯವೇ? ಜಾತ್ಯತೀತವಾದ ಈಗಿನ ಕಾಲದಲ್ಲಿ ಒಬ್ಬ ಪ್ರತಿ ಪ್ರತಿಷ್ಠಿತ ಪೂಜ್ಯ ವ್ಯಕ್ತಿಯು ತನ್ನ ಜಾತಿಯನ್ನು ಬಿಟ್ಟು ವೀರಶೈವವನ್ನು ಅಂಗೀಕರಿಸಲಿ, ಅವನ ಪಾದಕ್ಕೆ ನಮಿಸುವರೋ ನಮ್ಮವರು? ಅವನೊಡನೆ ಬೀಗತನ ಮಾಡುವರೋ? ಅದು ಬಿಡಿರಿ. ಅವನೊಡನೆ

ಕೂಡಿ ಉಣ್ಣುವರೋ? ಶಕ್ಯವೇ ಇಲ್ಲ. ಅಂದಮೇಲೆ ಬಸವನು ವೀರ ಶೈವನಿರದೆ ಲಿಂಗಧಾರಣಾದಿ ಕಾರ್ಯಗಳು ನಡೆಯುವದು ಶಕ್ಯವಿಲ್ಲ. ಆದ್ದರಿಂದ ಶೈವ ಕವಿಗಳು ಬಸವನು ಬ್ರಾಹ್ಮಣನೆಂದು ಹೇಳಿದ ಸಂಗತಿಗಳು ಅಸತ್ಯವೆಂದೇ ನಿಸ್ಸಂದೇಹವಾಗಿ ಹೇಳಬಹುದು.

---

## ಸಕಲಾಗಮ ಶಿಖಾಮಣಿಯ ವಿಮರ್ಶೆ.

---

**ಸಕಲಾಗಮ ಶಿಖಾಮಣಿ:—** ಷಟ್‌ಸ್ಥಲಶಾಸ್ತ್ರದ ಜ್ಞಾನವು ಕರಣಹಸಿಗೆಯ ಮೇಲೆ ಅವಲಂಬಿಸಿರುತ್ತದೆ. ಕರಣಹಸಿಗೆ ಇದು ಸಾಂಖ್ಯ ಶಾಸ್ತ್ರವೇ ಆಗಿರುತ್ತದೆ. ಇದರಲ್ಲಿ ದೇಹ ಸಂಬಂಧದ ಜ್ಞಾನವು ಅಡಕವಾಗಿರುತ್ತದೆ. ಸಕಲಾಗಮ ಶಿಖಾಮಣಿಯು ಪುರಾತನ ಕಾಲದ ಗ್ರಂಥವಾಗಿದೆ. ಅದರಲ್ಲಿಯ ಪ್ರತಿಯೊಂದು ವಚನಕ್ಕೆ ವಚನಕಾರನು ಪುರಾತನ ಸಂಸ್ಕೃತ ಗ್ರಂಥಗಳ ಆಧಾರವನ್ನು ಕೊಟ್ಟಿದ್ದಾನೆ. ಇದರಿಂದ ಅವನು ಎಂಥ ಜ್ಞಾನಿಯಾಗಿದ್ದನೆಂಬುದು ಸ್ಪಷ್ಟವಿರುತ್ತದೆ. ಇದರ ಮುದ್ರಿಕೆಯು 'ಅಪ್ರಮಾಣಕೂಡಲಸಂಗಮದೇವ' ನೆಂದು ಇದ್ದು ಅದನ್ನು ರಚಿಸಿದವನಾರು ಎಂಬುದು ತಿಳಿದುಬಂದಿಲ್ಲ. ಆದರೆ ಒಂದೇ ಪ್ರತಿಯು ನಮಗೆ ದೊರೆತದ್ದರಿಂದ ಅದನ್ನು ಶುದ್ಧ ಮಾಡುವ ಕಾರ್ಯವು ನಮ್ಮಿಂದ ಸಮರ್ಪಕವಾಗಿ ಜರಿಗಿಲ್ಲ. ಇದಕ್ಕೋಸ್ಕರ ನಾವು ವಾಚಕರ ಕ್ಷಮಾಪಣೆಯನ್ನು ಬೇಡಿಕೊಳ್ಳುತ್ತೇವೆ.

—ಸಂಪಾದಕ- ಶಿವಾನುಭವ,

# ಸತ್ಪುರುಷರ ಜನನ ಮತ್ತು ಅದರ ಹಿನ್ನೆಲೆ.

(ಲೇ.।— ಶ್ರೀ. ಶಿವಾನಂದ ಸ್ವಾಮಿಗಳು ಗವಿಮಠ.)

---

ಬಹುತರ ತ್ಯಾಗಿ, ಯೋಗಿ, ಅವತಾರಿಕ, ಸನ್ಯಾಸಿಗಳೆಲ್ಲ ಹೆಚ್ಚಾಗಿ ಹಳ್ಳಿಗಳಲ್ಲಿಯೇ ಜನಿಸಿದ್ದು ಇತಿಹಾಸ, ಪುರಾಣ, ಚರಿತ್ರೆಗಳಿಂದ ಕಂಡು ಬರುವದು. ಪಟ್ಟಣಗಳಲ್ಲಿ ವಿಷಯ ಸುಖದ, ಇಂದ್ರಿಯ ಸುಖದ, ತವರ ಮನೆಗಳಾಗಿರುವವು. ಇಲ್ಲಿ ಕೃತ್ರಿಮ ಜೀವನವೇ ಇರುವದು. ದೇವನ ಭಕ್ತಿ ಕಡಿಮೆ. ಇದ್ದರೂ ಕೂಡ ಅದೊಂದು ನಾಟಕೀ ಸ್ವರೂಪದ್ದೇ ಇರುವದೆಂದು ತೋರುವದು. ಆದರೆ ಹಳ್ಳಿಗಳಲ್ಲಿ ವಿಷಯ ಸುಖ ಇಂದ್ರಿಯ ಸುಖ ಕಡಿಮೆ, ಸ್ವಾಭಾವಿಕ ಜೀವನವೇ ಹೆಚ್ಚು. ಇಲ್ಲಿ ದೇವ ಭಕ್ತಿ ಹೆಚ್ಚು. ಇದು ಸಹಜ ಸ್ವಾಭಾವಿಕವಿರುವದು. ಇಲ್ಲಿ ಭಾವಿಕರು ಹೆಚ್ಚು. ಎಲ್ಲವನ್ನು ದೇವನೇ ಮಾಡುವನು, ದೇವನಿಂದಲೇ ನಡೆಯುವದೆಂದು ನಂಬಿಗೆ ಹೆಚ್ಚು. ಆದರೆ ಪಟ್ಟಣಗಳಲ್ಲಿ ಎಲ್ಲವನ್ನೂ ತಾವೇ ಮಾಡು ವವರು ಪ್ರಯತ್ನವಾದಿಗಳು ಹೆಚ್ಚು. ಅದಕ್ಕಂತಲೇ *man made the town and God made the village* ಎಂದು ಗಾದೆಯಾಗಿದೆ. ಪಟ್ಟಣಗಳನ್ನು ಮಾನವನು ನಿರ್ಮಿಸಿದನು. ಹಳ್ಳಿಗಳನ್ನು ದೇವನು ನಿರ್ಮಿಸಿದನೆಂದು ಇದರ ಅರ್ಥ. ಅದಕ್ಕಂತಲೇ ದೇವನಿಂದ ನಿರ್ಮಿತವಾದ ಹಳ್ಳಿಗಳಲ್ಲಿಯೇ ದೇವಮಾನವನು ಜನಿಸುವದು ಸಹಜವಾಗಿದೆ. ಅಲ್ಲದೆ ಹಳ್ಳಿಯಲ್ಲಿಯ ಶ್ರೀಮಂತ ಕುಟುಂಬದಲ್ಲಿ ಈ ದೇವಮಾನವನು ಜನಿಸಿದ್ದಾದರೂ ಅತಿ ವಿರಳ. ಬಹುತರ ಬಡ ಕುಟುಂಬಗಳಲ್ಲಿಯೇ ಹೆಚ್ಚಾಗಿ ಜನ್ಮವೆತ್ತಿದ್ದು ಕಂಡುಬರುವದು. ರಾಜಮನೆತನದಲ್ಲಿ ಶಿರಿವಂತರಲ್ಲಿ ಇಂಥ ಪುರುಷನು ಜನಿಸಿದ್ದು ಅತಿವಿರಳ. ಯಾಕಂದರೆ ದೇವರಿಂದ ಅವರು ಬಹು ದೂರ ಇರುವರು. ದೇವರಿಲ್ಲದವರಲ್ಲಿ ದೇವನ ಅವತಾರವಿರುವದು ಶಕ್ಯವಿಲ್ಲ. ದೇವಭಕ್ತರೂ ದಯಾಸಾಗರರೂ ದಾನಿಗಳೂ ತ್ಯಾಗಿಗಳೂ ಆದಂಥ ತಂದೆತಾಯಿಗಳ ಉದರದಲ್ಲಿ ಯೋಗಿಗಳು ಜನಿಸಿದ್ದುಂಟು.

ಶಂಕರಾಚಾರ್ಯ, ರಾಮಾನುಜಾಚಾರ್ಯ, ಬಸವೇಶ, ಮಧ್ವಾಚಾರ್ಯ, ಚೈತನ್ಯ, ಗಾಂಧಿ, ಅರವಿಂದ, ರಾಮಕೃಷ್ಣಪರಮಹಂಸದೇವರು, ವಿವೇಕಾನಂದ, ತುಕಾರಾಮ, ಚನ್ನಬಸವ, ಸಿದ್ಧರಾಮ, ಶರಣಬಸಪ್ಪ, ಚನ್ನಯ್ಯ, ನಾಮದೇವ, ರಾಮದಾಸ, ಹೇಮರಡ್ಡಿಮಲ್ಲಮ್ಮ, ಅಕ್ಕಮಹಾದೇವಿ, ಅಲ್ಲಮಪ್ರಭು, ರಾಮತೀರ್ಥ, ರಮಣಮಹರುಷಿ, ಶಿವಾನಂದ, ಶಾರದಾ, ನಾಗಮಹಾಶಯ ಮೊದಲಾದ ಅನೇಕರೆಲ್ಲರೂ ಹಳ್ಳಿಯ ಬಡ ಕುಟುಂಬಗಳಿಂದಲೇ ಜನಿಸಿದರು. ಕೆಲವರು ಮಾತ್ರ ರಾಜಮನೆತನದಲ್ಲಿ ದುಷ್ಟರ (ರಾಕ್ಷಸರ) ವಧೆಗಾಗಿ ಅವತರಿಸಿದ್ದು ಕಂಡು ಬರುವದು. ಇದೇನು ಸಾಮಾನ್ಯ ನಿಯಮವಲ್ಲ. ವಿಶೇಷ ನಿಯಮವೇ ಸರಿ. ಈ ಪ್ರಕಾರ ಹಳ್ಳಿಗಳಲ್ಲಿ ಅಸಂಖ್ಯ ಮಹಿಮರು ಜನ್ಮವೆತ್ತಿದವರಲ್ಲಿ ತೆಗ್ಗಿಹಳ್ಳಿ ಮಠದ ಮೂಲಪುರುಷರಾದ ಶ್ರೀ. ಸಿದ್ಧಲಿಂಗದೇವರು ಕೂಡ ಹಳ್ಳಿಯ ಬಡ ಕುಟುಂಬದಲ್ಲಿಯೇ ಜನ್ಮವೆತ್ತಿದ್ದಾರೆ. ಈ ಮೊದಲು ಅವರ ಅತಿ ಸಂಕ್ಷೇಪ ಚರಿತೆಯನ್ನು ಬರೆಯಿದ್ದೇನೆ, ತತ್ವದ ಪ್ರಕಾರ ಅದನ್ನು ವಿವೇಚಿಸುವೆನು

ಕಲ್ಯಾಣದ ಹತ್ತರ ಮುಚಳಂಬಿಯೆಂಬ ಚಿಕ್ಕ ಹಳ್ಳಿಯ ಬಡ ಗೌಡನಾದ ಮರಿಯಪ್ಪ, ಮಹಾದೇವಿ ಎಂಬ ಭಾವಿಕ ದೇವಭಕ್ತರಾದ ಸತಿಪತಿಗಳಲ್ಲಿ ಇವರು ಜನ್ಮಿಸಿದರು. ಬಹುದಿನ ಇವರಗೆ ಮಕ್ಕಳಾಗಲಿಲ್ಲ. ಮಕ್ಕಳಿಗಾಗ ಶ್ರೀರಾಮಲಿಂಗನನ್ನು ಕೆಲವು ವರ್ಷ ಭಯಭಕ್ತಿ ವಿಶ್ವಾಸಗಳಿಂದ ಪೂಜಿಸಲು ಆ ದೇವರು ಮಹಾದೇವಿಯ ಸ್ವಪ್ನದಲ್ಲಿ ಎರಡು ತೆಂಗು ಎರಡು ಉತ್ತತ್ತಿಗಳನ್ನು ಅವಳ ಉಡಿಯಲ್ಲಿ ಹಾಕಿದರು. "ಮೊದಲು ಶ್ರೀಸಿದ್ಧಲಿಂಗನು ಜನಿಸುವನು. "ಅವನನ್ನು ನನಗೆ ಕೊಡಬೇಕು. ಹಿಂದಿನಿಂದ ಜನಿಸಿದವನನ್ನು ನಿಮ್ಮ ಸಂಸಾರಕ್ಕೆ ಇಟ್ಟುಕೊಳ್ಳಬೇಕು" ಎಂದು ಹೇಳಿದ್ದು ಕೇಳಿ ಎಚ್ಚತ್ತಳು. ಆನಂದದ ಈ ಸುದ್ದಿಯನ್ನು ತನ್ನ ಪತಿಗೆ ತಿಳಿಸಿದಳು. ಮುಂದೆ ಇವಳಿಗೆ ಒಳ್ಳೇ ರೂಪವಂತ ಚಲುವ ಚನ್ನಿಗನಾದ ಮಗು ಜನಿಸಿತು.

ಮಹಾಪುರುಷರ ಕಥೆಗಳನ್ನು ಅತಿವರ್ಣನೆಗಳಿಂದ ಬಣ್ಣಬಳಿದು ಅಮಾನುಷವಾಗಿ ಬರೆದಿದ್ದರೂ ಅವೆಲ್ಲ ಸುಳ್ಳೆನ್ನಲು ಬರುವದಿಲ್ಲ- ಹೀಗೆ ಅನ್ನುವದು ಅಂಥ ಜಾಣತನವೂ ಅಲ್ಲ. ನಮ್ಮ ಮನ ಬುದ್ಧಿಗಳಿಂದ ಅನ್ಯರನ್ನು ಅಳೆಯುವದು ಶಕ್ಯವಿಲ್ಲ. ನಮ್ಮ ಮುರುಕು ಕೋಲಿನಿಂದ

ಆ ಹಿಮಾಲಯವನ್ನು ಅಳೆದಂತೆ ಸುಮ್ಮನೇ ಒಡಕ ಗಡಿಗೆಯಿಂದ ಮಹಾ ಸಾಗರಗಳನ್ನು ಅಳೆದಂತೆ ಒಳ್ಳೇ ಹಾಸ್ಯಾಸ್ಪದವಾಗುವದು. ನಮಗೆ ಸೃಷ್ಟಿಯ ನಿಯಮಗಳೆಲ್ಲ ಇನ್ನು ತಿಳಿದಿಲ್ಲ. ತಿಳಿಯದ ನಿಯಮಗಳಿಗೆ ವಿರೋಧವಾದ ಘಟನೆಗಳು ಕಂಡರೆ ಸುಳ್ಳೆಂದು ಸಹಜವಾಗಿ ಅನ್ನುವೆವು. ದೊಡ್ಡವರನ್ನು ಪರೀಕ್ಷಿಸಲು ದೊಡ್ಡವರೇ ಬೇಕು. ಸಾಧುಗಳನ್ನು ಪರೀಕ್ಷಿಸಲು ಸಾಧುಗಳೇ ಬೇಕು. ಗಾಂಧಿಯನ್ನು ಪರೀಕ್ಷಿಸಲು ಹೆಚ್ಚಿನ ಗಾಂಧಿಗಳೇ ಬೇಕು. ನಾವೇನು ಅಳತೆಗೋಲಲ್ಲ. ಮಹಾಪುರುಷರನು ತಿಳಿಯಲು ಮಹಾಪುರುಷನೇ ಬೇಕು. ಕಲ್ಲಲ್ಲಿ ಜನಿಸಿದರು. ಸಮುದ್ರ ಹಾರಿದರು. ಕರಣದಲ್ಲಿ ಜನಿಸಿದರು. ಗಂಡನಿಲ್ಲದ ಬಾಲೆ ಹಡೆದಳು. ಇದು ಎಲ್ಲರಿಗೆ ಸಂಬಂಧಪಡುವದಿಲ್ಲ. ಇಂಥ ಅನೇಕ ಅದ್ಭುತಗಳು ನಮ್ಮ ಪುರಾಣ ಇತಿಹಾಸಗಳಲ್ಲಿ ಕಂಡುಬರುತ್ತವೆ. ಇದೆಲ್ಲ ತಿಳಿಯಲಾರದಕ್ಕಾಗಿ ಅಸತ್ಯವೆಂದು ಹಳಿದು ಕೂಡ್ರಬಾರದು. ಇವೇನು ವಿವೇಕದ ಲಕ್ಷಣವಲ್ಲ. ಕೆಲವರನ್ನು ಪ್ರಸಿದ್ಧಿಗೆ ತರಲಿಕ್ಕೆ ಅನೇಕ ಸುಳ್ಳುಗೊಳ್ಳು ಶಬ್ದಗಳನ್ನು ಕೂಡಿಸಿ ಅವರ ಚರಿತ್ರೆಗಳನ್ನು ನೆಯ್ದದ್ದೂ ಉಂಟು. ಇದನ್ನೂ ಕೂಡ ವಿಚಾರಿಸಬೇಕು. ಅಂತು ಅದನ್ನೂ ಇದನ್ನೂ ತತ್ವ ನಿಯಮಗಳಿಗನುಸರಿಸಿ ನೋಡಬೇಕಾಗಿದೆ. ಈ ನಮ್ಮ ಶ್ರೀ ಸಿದ್ಧಲಿಂಗ ದೇವರ ಚರಿತೆಯಾದರೂ ಬಹು ವಿಚಿತ್ರ ಘಟನೆಗಳಿಂದ ಕೂಡಿದೆ. ನಾನು ನನ್ನ ವಿಮರ್ಶಕ ಬುದ್ಧಿ ಎಂಬ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸಿ ನೋಡಿ ನಿಮ್ಮ ಮುಂದೆ ಅದನ್ನು ಇಡುವೆನು.

ಯೋಗಿಗಳು, ತ್ಯಾಗಿಗಳು, ಸನ್ಯಾಸಿಗಳು, ದೇವ ಮಾನವರು, ಸಿದ್ಧರು, ಮಹಿಮರು, ಅವತಾರಿಗಳು ಜನಿಸುವ ಪೂರ್ವದಲ್ಲಿ ಅವರ ತಾಯಿತಂದೆಗಳು ಮಕ್ಕಳಿಗಾಗಿ ದೇವ ದೇವನಲ್ಲಿ ಬಹುವಾಗಿ ಬೇಡಿ ಹಂಬಲಿಸಿ, ಬಳಲಿ ಬೆಂಡಾಗಿ ಭಕ್ತಿಮಾಡಿದ ತರುವಾಯ ಜನಿಸಿದ್ದುಂಟು. ಇದೂ ಒಂದು ಸೃಷ್ಟಿಯ ನಿಯಮವೇ ಎನಿಸುವದು. ಈ ನಿಯಮಕ್ಕೂ ಶ್ರೀ ಸಿದ್ಧಲಿಂಗ ದೇವರ ಚರಿತೆಯೂ ಒಗ್ಗುವದು. ಇನ್ನು ಇವರ ಹೆಸರಿಡುವ ಸಂಗತಿಯೂ ಬಹು ವಿಚಿತ್ರವಾಗಿ ಘಟಿಸಿದೆ. ವೀರಶೈವರ ಪದ್ಧತಿಯ ಪ್ರಕಾರ ಮುಂಜಾನೆ ತೊಟ್ಟಿಲ ಪೂಜೆ, ಕಂಭದ ಪೂಜೆ, ಮುತ್ತೈದಿಯರ ಪೂಜೆ, ಊಟ ವಗೈರೆ ಮುಗಿದಮೇಲೆ ಸಾಯಂಕಾಲ ಹೆಸರಿಡಲಿಕ್ಕೆ ಸ್ತ್ರೀಯರನ್ನು ಕರೆಯಲಿಕ್ಕೆ ಹೋದರು. ಆಗ ಮಹಾದೇ

ವಿಗೆ ಸ್ವಲ್ಪ ನಿದ್ರೆಯು ಝುಂಪು ಹತ್ತಿತು. ಆಗ ಸ್ವಪ್ನದಲ್ಲಿ ದೇವ ಲೋಕದ ನಾಗಕನ್ನಿಕೆಯರು ಬಂದರು. ಮನೆಯಲ್ಲಿ ದೀಪಗಳನ್ನು ಹಚ್ಚಿದರು. ಕೂಸನ್ನೂ ತಾಯಿಯನ್ನೂ ಶಿಂಗರಿಸಿದರು. ಹೂವಿನ ತೊಟ್ಟಿಲ ಕಟ್ಟಿದರು. ಜೋಗುಳಪಾಡಿ ಶ್ರೀ ಸಿದ್ಧಲಿಂಗ ದೇವರು ಎಂದು ನಾಮಕರಣ ಮಾಡಿ ಹೊರಟುಹೋದಂತೆ ಆಯಿತು. ಎಚ್ಚರಾಗಿ ಆನಂದದಲ್ಲಿ ಕಣ್ಣನ್ನು ತೆರೆದು ನೋಡಲಾಗಿ ಒಂದು ಕ್ಷಣ ಮಾತ್ರ ಅದೆಲ್ಲ ನೋಟ ಅವಳ ದೃಷ್ಟಿಗಗೋಚರವಾಗಿ ಮಾಯವಾಯಿತು. ಕೂಸನ್ನು ಶಿಂಗರಿಸಿದ್ದು ಮಾತ್ರ ಹಾಗೇ ಉಳಿದಿತ್ತು. ಮುಂದೆ ಊರಲ್ಲಿಯ ಸ್ತ್ರೀಯರು ಬಂದು ಹೆಸರಿಡುವ ಕಾರ್ಯವನ್ನು ಸಾಂಗ ಮಾಡಿ ಹೋದರು. ಈ ವಿಚಿತ್ರ ಘಟನೆಯನ್ನು ಕೇಳಿ ಎಲ್ಲರಿಗೂ ಅಗಾಧ ಆಚ್ಚರಿಯಾಯಿತು. ಇದು ಭಾವಿಕರಿಗೆ ನಿಜವೆನಿಸುವದು. ದೇವಭಕ್ತಿ ಇಲ್ಲದ ಸಂಸಾರ ವಿಷಯಿಗಳಿಗೆ ಮಾತ್ರ ಸುಳ್ಳೆನಿಸುವದು. ಕೋಳೂರು ಕೊಡಗೂಸು ೩-೪ ತಾಸುಗಳಲ್ಲಿ ಕಲ್ಲಿನಲ್ಲಿ ಶಿವನನ್ನು ಕಂಡಳೆಂದು ಮೊದಲು ಕೇಳಿದಾಗ ಸುಳ್ಳೆನಿಸುತ್ತಿತ್ತು. ಆದರೆ ಶ್ರೀ ರಾಮಕೃಷ್ಣ ಪರಮಹಂಸರು ಈಗಿನ ಸುಧಾರಣೆಯ ಕಾಲದಲ್ಲಿ ಪಾರ್ವತಿಯ ಕಲ್ಲಿನ ಮೂರ್ತಿಯಲ್ಲಿ ಆ ಮಹಾ ತಾಯಿಯನ್ನು ಕಂಡರೆಂದು ಕೇಳಿದಾಗ ಕಲಿತು ಸುಧಾರಿಸಿದವರು ಹಿಂದಿನ ಇಂಥ ಅನೇಕ ಸಂಗತಿಗಳಿಗೆ ಈಗ ಹೌದೆನ್ನಹತ್ತಿರುವರು. ಇಂಥವುಗಳಿಗೆ ಸುಧಾರಿಸಿದವರು ಮೂಢ ನಂಬಿಗೆಗಳೆಂದು ಆಗ ಅನ್ನುತ್ತಿದ್ದರು. ಈಗ ದಿವ್ಯ ಭಕ್ತಿಯಿಂದ ಇದೆಲ್ಲ ಸಾಧ್ಯವೆಂದು ತಿಳಿದವರೂ ಕಲಿತವರೂ ನಂಬಹತ್ತಿದ್ದಾರೆ. ಮಹಾತ್ಮರ ಚರಿತ್ರೆಗಳು ಸಾಮಾನ್ಯರಂತೆ ಇರುವದಿಲ್ಲ. ಬೇರೆಯಾಗಿರುವವೆಂಬುದು ಸಹಜ ಕಂಡು ಬರುವಂಥಾದ್ದಿರುತ್ತದೆ. ಒಮ್ಮೆಲೆ ಎಲ್ಲವನ್ನು ನಂಬಬೇಕೆಂದು ಯಾರೂ ಹೇಳುವದಿಲ್ಲ. "ನಿನ್ನ ವಿಮರ್ಶಕ ಬುದ್ಧಿಯನ್ನು ಉಪಯೋಗಿಸು, ಸಾಧನ ಮಾಡು, ತ್ಯಾಗ ಮಾಡು. ಆಗ ಹೊಳೆಯುವದು." ಇದೆಲ್ಲ ಮಾಡದೆ ವಿಷಯದಲ್ಲಿ ಮುಳುಗಿ ಕೇಳಿದ ಕೂಡಲೇ ಸುಳ್ಳು ಸುಳ್ಳು ಎಂದು ನುಡಿಯುವದು ಹೆಡ್ಡತನವಾಗುವದು.

# ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಶಿವಶರಣರ ಸ್ಥಾನ.

(ಲೇಖಕಃ— ಶ್ರೀ. ಜಿ. ಎಂ. ಕಟಗೇರಿ, "ಕನ್ನಡ ಕಾವ" ಮು.-ಬೇಲೂರ)

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ನಿಂತು ಕೃಷಿ ಮಾಡಿದವರು ಅನೇಕರಿದ್ದಾರೆ. ಅವರಲ್ಲಿ ಶ್ರೀ ಶಿವನ ಸ್ವರೂಪಿಗಳಾದ ನಮ್ಮ ಶಿವಶರಣರ ಸ್ಥಾನವು ಅತ್ಯಧಿಕವಾದುದು.

ಕನ್ನಡ ಸಾಹಿತ್ಯವು ಬಹು ವಿಶಾಲವಾದುದು. ಮತ್ತು ಇತರ ಸಾಹಿತ್ಯಕ್ಕಿಂತಲೂ ಅಮೌಲ್ಯವಾದುದು ಎಂದು ಹೇಳುವದಕ್ಕೆ ಬಸವ, ಚನ್ನಬಸವ, ಪ್ರಭು, ಸಿದ್ಧರಾಮ, ಅಕ್ಕಮಹಾದೇವಿ, ಲಕ್ಕಮ್ಮ, ಲಿಂಗಮ್ಮ ಮೊದಲಾದ ಪೂಜ್ಯ ಸಾಹಿತಿಗಳಾದ ಶರಣ-ಶರಣೆಯರು ಭಾಗ ವಹಿಸಿದ್ದೇ ಮುಖ್ಯ ಕಾರಣವಾಗಿದೆ.

ಸಾಹಿತ್ಯ (೧) ಮನರಂಜನೆಯ ಸಾಹಿತ್ಯ. (೨) ಉತ್ತಮ ಸಾಹಿತ್ಯ ಎಂದು ಭಾಗಗಳಾಗಿ ಮಾಡಲ್ಪಟ್ಟಿದೆ.

ಮನರಂಜನೆಯ ಸಾಹಿತ್ಯವು ಕೇವಲ ವಿನೋದ ಪ್ರಧಾನವಾದುದು. ಅಲ್ಲದೆ ಅಧೋಗತಿಯನ್ನು ಹೊಂದುವ, ದೂಷಿತವಾದ ಸಮಾಜದ ಸಾಹಿತ್ಯವೆಂದು ಹೇಳಲು ಯಾವತರಹದ ಶಂಕೆ ಇಲ್ಲ.

ಉತ್ತಮ ಸಾಹಿತ್ಯವೇ ಸಾಹಿತ್ಯ. ಈ ಸಾಹಿತ್ಯದಲ್ಲಿ ಜೀವ ಕಳೆಯಿದೆ. ಜನಜೀವನದ ಪ್ರತಿಬಿಂಬವದೆ. (*Literature is the mirror of life.*) ಅಲ್ಲದೆ ಶ್ರೇಯೋಭಿವೃದ್ಧಿಯನ್ನು ಹೊಂದುವ ಸಮಾಜದ ಊರು ಗೋಲಾಗಿರುತ್ತದೆ.

ಅಂದಮೇಲೆ ಶಿವಶರಣರ ಸಾಹಿತ್ಯ (ವಚನ ಸಾಹಿತ್ಯ)ವು ಯಾವು ಸಾಹಿತ್ಯದಲ್ಲಿ ಗಣಿಸಲ್ಪಡುತ್ತದೆ ಬಲ್ಲಿರಾ ?

೧೨ನೇ ಶತಮಾನ ಪ್ರಾರಂಭವಾಗುತ್ತಲೇ ಕನ್ನಡ ನಾಡಿನಲ್ಲಿ ಭಾಗ್ಯದ ರವಿಯು ಉದಯವಾದನು. ಆಗ ಕನ್ನಡ ಸಾಹಿತ್ಯದಲ್ಲಿ ಅಭೂತ ಪೂರ್ವವಾದ ಕ್ರಾಂತಿ ಉಂಟಾಯಿತು. ಈ ಸಾಹಿತ್ಯ ಭಾವವೇ ಪವಿತ್ರ

ಕ್ಷೇತ್ರಗಳ ತೀರ್ಥದಂತೆ ಮನಸ್ಸನ್ನು ಪವಿತ್ರಗೊಳಿಸುತ್ತದೆ. ದಿವ್ಯ ಅಮೃತ ಬಿಂದುವಿನಂತೆ ಮಾಧುರ್ಯವನ್ನು ಕೊಡುತ್ತದೆ. ಅಲ್ಲದೆ ಆತ್ಮಕಲ್ಯಾಣ ವನ್ನು ಮಾಡುತ್ತದೆ.

ಶಿವಶರಣರ ಸಾಹಿತ್ಯ (ವಚನಸಾಹಿತ್ಯ)ದಲ್ಲಿ ಉಪನಿಷತ್ತಿನ ಸಾರ ವಿದೆ. ವೇದಾಂತದ ನಿಧಿಯಿದೆ. ಧರ್ಮಗ್ರಂಥಗಳ ಸೂತ್ರಗಳಿವೆ: ಸಿದ್ಧಾಂತ ಗ್ರಂಥಗಳ ಮೂಲವಿದೆ. ಅಂದಮೇಲೆ ಇದು ಉತ್ತಮ ಸಾಹಿತ್ಯವೆಂದೂ ದಿವ್ಯಜ್ಞಾನದ ಹುಟ್ಟು (ಜನ್ಮಸ್ಥಳ)ವೆಂದೂ ಪರಿಗಣಿಸಲ್ಪಟ್ಟಿದೆ.

*" Of all the gifts of God the Divine knowledge is the highest and the noblest."*

ದೇವನ ಎಲ್ಲ ಕೊಡುಗೆಗಳಲ್ಲಿ ದಿವ್ಯ ಜ್ಞಾನವೇ ಉಚ್ಚ ಮತು ಮಾನ್ಯವಾದದ್ದು. ಈ ದಿವ್ಯ ಜ್ಞಾನವನ್ನು ಅರಿತುಕೊಂಡರೆ ಸಾಕು; ಉಳಿದ ಖಂಡ ಜ್ಞಾನಗಳ ಅವಶ್ಯಕತೆ ಇಲ್ಲ. ಯಾಕಂದರೆ ಎಲ್ಲವೂ ಇದ ರಲ್ಲಿ ಅಡಕವಾಗಿದೆ. ಈ ತತ್ವಯುಕ್ತ ಶಿವಶರಣರ ಸಾಹಿತ್ಯ ( ವಚನ ಸಾಹಿತ್ಯ )ವು ಆತ್ಮಕ್ಕೆ ಶಾಂತಿಯನ್ನೂ, ಹೃದಯಕ್ಕೆ ತೃಪ್ತಿಯನ್ನೂ ನೀಡು ತ್ತದೆ. ಇವರ ಸಾಹಿತ್ಯವು ನೆಮ್ಮದಿಯನ್ನು ಕೊಡುವ ವಾಣಿಯಾಗಿ ರುತ್ತದೆ.

ಇವರ ಸಾಹಿತ್ಯ ರಚನೆಯು ಅರ್ಥಕ್ಕೆ ಸರಿಯಾಗಿ ಅಲಂಕಾರ ಯುಕ್ತ ಸಂಬೋಧನೆಗಳಿಂದ, ಮಿತಾಕ್ಷರಗಳಿಂದ ಚಿಕ್ಕ ಚಿಕ್ಕ ವಾಕ್ಯಗ ಳಿಂದ ಶಬ್ದಗಳ ಜೋಡಣೆಯಿಂದ ಒಳಗೊಂಡಿದೆ.

ಸಾಹಿತ್ಯಾಭಿಲಾಷಿಗಳೂ, ಅಭ್ಯಾಸಿಗಳೂ ಆದವರು ವಿಶ್ವಬಾಂಧವ್ಯ ತತ್ವ ಪ್ರಸಾರಕ ಈ ಸಾಹಿತ್ಯಾಮೃತದಿಂದಲೇ ತಮ್ಮ ತಮ್ಮಗಳ ಹಸಿವು ತೃಷೆಗಳನ್ನು ತೃಪ್ತಿಗೊಳಿಸಿದ್ದಾರೆ, ಗೊಳಿಸುತ್ತಿದ್ದಾರೆ.

ಅದುಕಾರಣ ಸದ್ಗುಣ ಸದಾಚಾರಿಗಳೂ, ಸುಶೀಲ ಸಂಪನ್ನರೂ, ಶುದ್ಧ ನಡೆನುಡಿಯುಳ್ಳವರೂ, ಆಗಬೇಕಿದ್ದರೆ ಇಹದಲ್ಲಿಯೇ. ಪರಮಾತ್ಮ ನಲ್ಲಿ ಬೆರೆಯಬೇಕಿದ್ದರೆ; ಶಿವಶರಣರ ಪವಿತ್ರ ಜೀವನದ ಇತಿಹಾಸವನ್ನು ಕೂಲಂಕುಷವಾಗಿ ಅಂತು ಆಚರಣೆಯಲ್ಲಿ ತರುವುದೇ ಅವರ ಆದ್ಯ ಕರ್ತವ್ಯ.

ಈ ನಮ್ಮ ಶಿವಶರಣರ ಸಾಹಿತ್ಯ (ವಚನ ಸಾಹಿತ್ಯ] ವು) ಕನ್ನಡವು ಕನ್ನಡ ವಾಙ್ಮಯದಲ್ಲಿ ಉಚ್ಚಸ್ಥಾನವನ್ನು ಹೊಂದಿದೆ ಎಂಬ ಮಾತು ಮನವರಿಕೆಯಾಯಿತು. ಇದೇ ಮಾತನ್ನೇ ಪೂರ್ವ ಕಾಲದಿಂದಲೂ ಗ್ರಂಥಗಳು ಸಾರುತ್ತಿವೆ. ಹಿರಿಯರು ಹೇಳುತ್ತಾರೆ. ಈ ಸಾಹಿತ್ಯವು ನಮ್ಮನ್ನು ಪರಮಾತ್ಮನ ಸನ್ನಿಧಿಯಲ್ಲಿಯೇ ಒಯ್ದುಬಿಡುತ್ತದೆ. ಇಷ್ಟೇ ಅಲ್ಲ ಅಮೃತವನ್ನೀಂಟಿಸಿ ಪರಮಾನಂದದಲ್ಲಿ ತೇಲಹಚ್ಚುತ್ತದೆ. ಆಗ ನಮ್ಮಗಳಿಗೆ ಪರಶಿವನ ದರ್ಶನವೇ ಆದಂತೆ ಭಾಸವಾಗುತ್ತದೆ. ಇದು ಮಹಾತ್ಮರಿಂದ ಶಿವಶರಣರ ಸಾಹಿತ್ಯದ ರೀತಿಯು. ಇಂಥವರು ಹಾಗೂ ಇಂಥವರ ಸಾಹಿತ್ಯವು ಯಾರಿಗೆ ತಾನೇ ಪ್ರಿಯವಾಗಲಿಕ್ಕಿಲ್ಲ ?

ಮಹಾತ್ಮರೂ ವಂದ್ಯರೂ ಆದ ಶಿವಶರಣರ ಸಾಹಿತ್ಯ ( ವಿಶ್ವಬಾಂಧವ್ಯ ತತ್ವಯುಕ್ತ ಸಾಹಿತ್ಯ ) ವು ಪಂಡಿತ-ಪಾಮರರಲ್ಲಿಯೂ, ಮನೆ-ಮಠಗಳಲ್ಲಿಯೂ, ಶಾಲೆ-ಕಾಲೇಜುಗಳಲ್ಲಿಯೂ ಪಸರಿಸಿ ಚೆಲ್ಲವರಿಯಲಿ ಎಂಬುದೇ ನನ್ನ ಹಿರಿದಾದ ಬಯಕೆ.

---

## ಕಾಣಿಕೆ.

ಬೈಲಹೊಂಗಲದಿಂದ ಶ್ರೀಯುತ ಬಸಪ್ಪ ರೇವಪ್ಪ ಜಿಗಿಜಿನ್ನಿ ಈ ಮಹನೀಯರು ಶಿವಾನುಭವ ಪತ್ರಿಕೆಗೆ ೨೫ ರೂ. ಗಳನ್ನು ಸಹಾಯಧನವಾಗಿ ಕಳಿಸಿಕೊಟ್ಟದ್ದಕ್ಕೆ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ. ಅವರು ಗ್ರಾಮೋದ್ಧಾರದ ಅನೇಕ ಉಪಯುಕ್ತ ಕಾರ್ಯಗಳಿಗೆ ಯಾವಾಗಲೂ ಧನಸಹಾಯ ಮಾಡುತ್ತ ಬಂದಿರುತ್ತಾರೆ. ಶಿವಶರಣರ ಬಗ್ಗೆ ಕಾರ್ಯಗಳು ಬಹಳ ಶ್ಲಾಘನೀಯವಾದವುಗಳು. ಈ ಮಹನೀಯರ ಅನುಕರಣವನ್ನು ಶಿವಾನುಭವ ಹಿತೈಷಿಗಳು ಕೈಕೊಳ್ಳಬೇಕೆಂದು ನಮ್ಮ ವಿನಂತಿ ಇದೆ.

ಮ್ಯಾನೇಜರ

**ಶಿವಾನುಭವ-ವಿಜಾಪುರ.**

# ಅಂತರಾತ್ಮ

—:೦:—

ಎಲೆ ಜೀವ ಗಾಬರಿಗೊಳ್ಳಬೇಡ ।
ಎಲೆ ಜೀವ ಮನನೊಂದುಕೊಳ್ಳಬೇಡ ।
ಸುತ್ತಲೂ ಸಾವು ಕುಣಿದರೇನು ಪ್ರಾಣ ತಾ ಬದುಕಬಹುದೆ ॥
ಅಂಧಕವು ಸುತ್ತಲೂ ಮುಸುಕಿದರೇನು ।
ಅಂಧಕದೋಳ್ ದೀಪ ತಾ ಮಿಣುಕಲರಿಯದೆ ।
ಅಂತರ್ಜ್ಯೋತಿಯು ಬೆಳಕಿನಿಂ ಸಾಗಿ ಜನರಿಗೆ ದಾರಿ ತೋರು ॥೧॥

ಇಳಿಹೊತ್ತಾಯಿತು ಸಂಜೆ ಸಮೀಪಿಸಿತು ॥
ಅಳಿಯಿತೀ ದೇಹ ಕೊಳೆಯಿತೀ ದೇಹ ।
ನೀ ಕೊಟ್ಟ ಕೆಲಸವನೆಸಗದೆ ವ್ಯರ್ಥ ಕಾಲ ಕಳೆದೆನಲ್ಲ ॥
ಇತ್ತ ಮನೆ ದೂರತ್ತ ಮಂದಿರ ದೂರ ।
ಇತ್ತಳಿದುದು ಜೀವಳಿದುದುದೇಹ ।
ಈ ನಟ್ಟಡವಿಯಲಿ ಕತ್ತಲೆ ಕವಿವ ಕಾಲ ಒದಗಿತಲ್ಲಿ ॥೨॥

ಜೀವ ಗಾಳಿಗೊಡ್ಡಿದ ಸೊಡರಿನಂತೆ ।
ಜೀವ ನೀರ ಮೇಲಿನ ಗುಳ್ಳೆಯಂತೆ ।
ಹುಲ್ಲ ಮೇಲಿನ ತುಂತುರದಂತೆ ಎನ್ನನ್ನು ಇರಸಿದೆಯಲ್ಲ ॥
ಇಂತಹ ಕ್ಷುದ್ರ-ಕ್ಷಣಿಕ ಜೀವನವು ।
ಇಂತಹ ಆಶೆ ಆಕಾಂಕ್ಷೆಗಳ ಮನವು ।
ಸಾಗರದ ತೆರೆಗಳಷ್ಟು ಎನ್ನ ಮನದಿ ಇರಸಿದೆಯಲ್ಲ ॥೩॥

ಮಿನಿಗಿನಿಂದಲೇ ಕತ್ತಲೆ ಹರಿವುದೇ
ಮಿನಿಗಿನಿಂದಲೇ ದಾರಿ ಕಾಣುವದೇ ।
ಆ ಮಿನಿಗಿನಿಂದಲೇ ಬೆಳಕ ತೋರಿಸೋ ಎನಗೆ ಸ್ವಾಮಿ ॥
ಇದಕಾಗಿ ಎನ್ನ ಜೀವ ಮಿಡುಕುವದು ।
ಆದಕಾಗಿ ಎನ್ನ ಜೀವ ಒಳಲುವದು ।
ಕಾಡಿಕಾಡಿದನೆ ಬೇಡುವೆನು ನೀ ಕೊಟ್ಟು ಕರುಣಿಸೊ ಸ್ವಾಮಿ ॥೪॥

— ಕೆ. ರಾಮೋಶ್ಚಂದ್ರನ್
ಡ್ರಾಯಿಂಗ ಟೀಚರ, ಅಕ್ಕೀಆಲೂರ.

ವೇದವನುಚ್ಚರಿಸುತ್ತ ಅರ್ಪಿಸುವಳು. ವಿಷ್ಣು ಪೂಜಾರಿ ಲಿಂಗ ಕ್ಷೇತ್ರವೆಂಬ ಸಂಜ್ಞೆ ಇವೆಲ್ಲವಕ್ಕು ಮಾತೃಸ್ಥಾನವಾಗಿಹುದು. ಮಕಾರವೆಂಬ ಬೀಜಾಕ್ಷರ, ಅದು ಪ್ರಣವದ ದ ಡಾಕೃತಿ. ಅಲ್ಲಿಹ ಣಕಾರದಲ್ಲಿರುವುದು. ಆ ಈ ಎ ಓಂ ಮಾಂ ಯೆಂಬ ಬ್ರಹ್ಮನಾದ, ಮಂತ್ರಮೂರ್ತಿ ಪ್ರಣವದ ಶಿರೋಮಧ್ಯದಲ್ಲಿಹ ಗುಹ್ಯ ನಾದ, ಮಂತ್ರಮೂರ್ತಿ ಪ್ರಣವಕ್ಕೆ ನಮಸ್ಕಾರವು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೯೪. ಅಲ್ಲಿಂದ ನಾಭಿ ಸ್ಥಾನದಲ್ಲಿ ಮಣಿಪೂರಕ ಚಕ್ರ, ಅಗ್ನಿಯೆಂಬ ಮಹಾ ಭೂತ, ಆ ಚಕ್ರ ತ್ರಿಕೋಣಾಕಾರ, ದಶದಳ ಪದ್ಮ, ಆ ಪದ್ಮ ಕೃಷ್ಣ ವರ್ಣ ಅಲ್ಲಿಯ ಅಕ್ಷರ, ಡ ಢ ಣ ತ ಥ ದ ಧ ನ ಪ ಫ ಯೆಂಬ ದಶಾಕ್ಷರ ನ್ಯಾಸವಾಗಿಹುದು. ಅಲ್ಲಿ ರಕ್ತವರ್ಣವಾಗಿ ಅಘೋರ ಮುಖವನುಳ್ಳ ಶಿವಲಿಂಗ, ಆ ಲಿಂಗಕ್ಕೆ ವಿದ್ಯಾಕಲೆ, ಅಲ್ಲಿ ಮೂರ್ತಿ ಸಾದಾಖ್ಯ, ಅಲ್ಲಿಯ ದಿಕ್ಕು ದಕ್ಷಿಣ ದಿಕ್ಕು, ಅಲ್ಲಿಯ ನಾದ ಘಂಟಾ ನಾದ, ಲಾಕಿನಿಯೆಂಬ ಪರ್ಯಾಯ ನಾಮವನುಳ್ಳ ಇಚ್ಛಾಶಕ್ತಿ, ಆ ಲಿಂಗದ ನೇತ್ರ ಮುಖಕ್ಕೆ ನಿರಹಂಕಾರವೆಂಬ ಹಸ್ತದಿಂ ಅವಧಾನ ಭಕ್ತಿಯಿಂದ, ರೂಪ ದ್ರವ್ಯವನು ಸಾಮವೇದವನುಚ್ಚರಿಸುತ್ತ ಅರ್ಪಿಸುವಳು. ರುದ್ರ ಪೂಜಾರಿ ಇಂತಿವೆಲ್ಲಕ್ಕು ಮಾತೃಸ್ಥಾನವಾಗಿಹುದು. ಶಿಕಾರವೆಂಬ ಬೀಜಾಕ್ಷರ ಅದು ಪ್ರಣವದ ಶಿರೋಮಧ್ಯದಲ್ಲಿಹ ಗುಹ್ಯ ನಾದ ಮಂತ್ರಮೂರ್ತಿ ಪ್ರಣವಕ್ಕೆ ನಮಸ್ಕಾರವು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೯೫. ಅಲ್ಲಿಂದ ಮೇಲೆ ಹೃದಯಸ್ಥಾನದಲ್ಲಿ ಅನಾಹತ ಚಕ್ರ ವಾಯುವೆಂಬ ಮಹಾ ಭೂತ, ಆ ಚಕ್ರ ಷಟ್ಕೋಣಾಕಾರ, ದ್ವಾದಶ ದಳ ಪದ್ಮ, ಆ ಪದ್ಮ ಕುಂಕುಮ ವರ್ಣ, ಅಲ್ಲಿಯ ಅಕ್ಷರ ಕ ಖ ಗ ಘ ಙ, ಚ ಛ ಜ ಝ ಞ, ಟ ಠ ವೆಂಬ ದ್ವಾದಶಾಕ್ಷರ ನ್ಯಾಸವಾಗಿಹುದು. ಅಲ್ಲಿ ತತ್ಪುರುಷ ಮುಖವನುಳ್ಳ ಜಂಗಮಲಿಂಗ, ಆ ಲಿಂಗಕ್ಕೆ ಶಾಂತಿ ಕಲೆ, ಅಲ್ಲಿ ಮೂರ್ತಿ ಸಾದಾಖ್ಯ, ಅಲ್ಲಿಯ ದಿಕ್ಕು ಪೂರ್ವ ದಿಕ್ಕು, ಅಕ್ಷಯ ನಾದ ಭೇರಿಯ ನಾದ, ಶಾಕಿನಿಯೆಂಬ ಪರಿಯಾಯ ನಾಮವನುಳ್ಳ ಆದಿ ಶಕ್ತಿ ಲಿಂಗದ ತ್ವಕ್ಕೆಂಬ ಮುಖದಲ್ಲಿ ಸುಮನವೆಂಬ ಹಸ್ತದಿಂದ ಅನುಭಾವ ಶಕ್ತಿಯಿಂದ ಸ್ಪರ್ಶನ ದ್ರವ್ಯವನು ಅಥರ್ವಣ ವೇದವನುಚ್ಚರಿಸುತ್ತ ಅರ್ಪಿಸುವಳು. ಈಶ್ವರ ಪೂಜಾರಿ ಗೂಢವೆಂಬ ಸೌಜ್ಞ, ಇಂತಿವೆಲ್ಲವಕ್ಕು ಮಾತೃ

ಸ್ಥಾನವಾಗಿಹುದು. ವಕಾರವೆಂಬ ಬೀಜಾಕ್ಷರ, ಅದು ಪ್ರಣವದ ಅರ್ಧ ಚಂದ್ರಕಾ ಕಳೆಯಲ್ಲಿಹ ವಕಾರದಲ್ಲಿಹುದು. ಆ ಈ ಕ್ಷ ಎ ಜಂ ವಾಂ ಬ ಬ್ರಹ್ಮನಾದ ಮಂತ್ರಮೂರ್ತಿ ಪ್ರಣವದ ಶಿರೋಮಧ್ಯದಲ್ಲಿಹ ಗುಹ್ಯ ನಾದ ಮೂರ್ತಿ ಪ್ರಣವದಕ್ಕೆ ನಮಸ್ಕಾರವು ಅಪ್ರಮಾಣ ಕೂಡಲಸಂಗಮದೇವಾ.

೧೯೬. ಅಲ್ಲಿಂದ ಮೇಲೆ ಕಂಠಸ್ಥಾನದಲ್ಲಿ ವಿಶುದ್ಧಿ ಚಕ್ರ, ಆಕಾಶ ವೆಂಬ ಮಹಾ ಭೂತ, ಆ ಚಕ್ರ ವರ್ತುಳಾಕಾರ ಷೋಡಶ ದಳ ಪದ್ಮ, ಆ ಪದ್ಮ ಶ್ವೇತ ವರ್ಣ ಅಲ್ಲಿಯ ಅಕ್ಷರ ಅ ಆ ಇ ಈ ಉ ಊ ಋ ೠ ಌ ೡ ಎ ಐ ಓ ಔ ಅಂ ಅಃ ಯೆಂಬ ಷೋಡಶಾಕ್ಷರನ್ಯಾಸವಾಗಿಹುದು. ಅಲ್ಲಿ ಈಶಾನ್ಯ ಮುಖವನುಳ್ಳ ಪ್ರಸಾದಲಿಂಗ, ಆ ಲಿಂಗಕ್ಕೆ ಶಾಂತಾತೀತೆಯೆಂಬ ಕಳೆ, ಅಲ್ಲಿ ಶಿವ ಸಾದಾಖ್ಯ, ಅಲ್ಲಿಯ ದಿಕ್ಕು ಊರ್ಧ್ವ ದಿಕ್ಕು. ಅಲ್ಲಿಯ ನಾದ ಮೇಘಧ್ವನಿ, ಡಾಕಿನಿಯೆಂಬ ಪರ್ಯಾಯ ನಾಮವನುಳ್ಳ ಪರಶಕ್ತಿ ಲಿಂಗದ ಶ್ರೋತ್ರವೆಂಬ ಮುಖದಲ್ಲಿ ಸುಜ್ಞಾನವೆಂಬ ಹಸ್ತದಿಂದ ಆನಂದ ಭಕ್ತಿಯಿಂದ ಶಬ್ದವೆಂಬ ದ್ರವ್ಯವನು ಗಾಯತ್ರಿಯನುಚ್ಚರಿಸುತ್ತ ಅರ್ಪಿಸು ವಳು. ಸದಾಶಿವ ಪೂಜಾರಿ ಪರವೆಂಬ ಸಂಜ್ಞೆ ಇಂತಿವೆಲ್ಲಕ್ಕು ಮಾತೃಸ್ಥಾನ ವಾಗಿಹುದು. ಯಕಾರವೆಂಬ ಬೀಜಾಕ್ಷರ ಅದು ಪ್ರಣವ ದರ್ಪಣಾಕೃತಿಯಲ್ಲಿ ಯಕಾರದಲ್ಲಿಹುದು. ಆ ಈ ಊ ಎ ಓಂ ಯಾಂ ಎಂಬ ಬ್ರಹ್ಮನಾದ ಮಂತ್ರ ಮೂರ್ತಿ ಪ್ರಣವದ ಶಿರೋಮಧ್ಯದಲ್ಲಿಹ ಗುಹ್ಯ ನಾದ ಮಂತ್ರಮೂರ್ತಿ ಪ್ರಣವಕ್ಕೆ ನಮಸ್ಕಾರವು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೧೯೭. ಅಲ್ಲಿಂದ ಮೇಲೆ ಭ್ರೂಮಧ್ಯದಲ್ಲಿ ಆಜ್ಞಾಚಕ್ರ, ಮನವೆಂಬ ಮಹಾ ಭೂತ, ಆ ಚಕ್ರ ತಮಾಕಾರ ದ್ವಿದಳ ಪದ್ಮ, ಆ ಪದ್ಮ ಮಾಣಿಕ್ಯ ವರ್ಣ. ಅಲ್ಲಿಯ ಅಕ್ಷರ ಹಂ ಳಂ ಹಂ ಕ್ಷಂ ಎಂಬ ಚತುರಾಕ್ಷರ ನ್ಯಾಸ ವಾಗಿಹುದು. ನಿರ್ಭಾವ ಮುಖವನುಳ್ಳ ಮಹಾಲಿಂಗ, ಆ ಲಿಂಗಕ್ಕೆ ಶಾಂತಾ ತೀತೋತ್ತರ ಕಳೆ, ಅಲ್ಲಿ ನಿರ್ಮುಕ್ತಿ ಎಂಬ ಮಹಾ ಸಾದಾಖ್ಯ, ಅಲ್ಲಿಯ ನಾದ ಪ್ರಣವ ನಾದ. ಹಾಕಿನಿ ಎಂಬ ಪರಿಯಾಯ ನಾಮವನುಳ್ಳ ಚಿಚ್ಛಕ್ತಿ ಲಿಂಗದ ಹೃದಯವೆಂಬ ಮುಖದಲ್ಲಿ ಭಾವಹಸ್ತದಿಂದ ಸಮರಸ ಭಕ್ತಿಯಿಂದ ಪರಿಣಾಮವೆಂಬ ದ್ರವ್ಯವನು ಅಜಪೆಯನುಚ್ಚರಿಸುತ್ತ ಅರ್ಪಿ ಸುವಳು. ಪರಶಿವ ಪೂಜಾರಿ ನಿರಾಕುಳವೆಂಬ ಸಂಜ್ಞೆ, ಇಂತಿವೆಲ್ಲವಕ್ಕು ಮಾತೃಸ್ಥಾನವಾಗಿಹುದು. ಓಂಕಾರವೆಂಬ ಬೀಜಾಕ್ಷರ ಅನಂತ ಕೋಟಿ

ಬೀಜಾಕ್ಷರಂಗಳ ಗರ್ಭೀಕರಿಸಿಕೊಂಡಿಹುದು. ಅಕಾರ ಉಕಾರ ಮಕಾರ ವೆಂಬ ನಾದ ಬಿಂದು ಕಳೆಗಳಿಗೆ ಆಶ್ರಯುವಾಗಿ ತತ್ವ ಮಸಿ ಎಂಬ ಪದ ತ್ರಯುವನೊಳಕೊಂಡು, ಅನೇಕ ಕೋಟಿ ಸೂರ್ಯ ಚಂದಾಗ್ನಿ ಕಿರಣ ರಾಶಿ ತೇಜೋವರ್ಧನಕ್ಕೆ ತಾನೆಯಾಗಿಪ್ಪುದಾಗಿ ಅ ಈ ಊ ಏ ಓ ಓಂ ಯೆಂಬ ಬ್ರಹ್ಮನಾದ ಮಂತ್ರಮೂರ್ತಿ ಪ್ರಣವದ ಶಿರೋಮಧ್ಯದಲ್ಲಿಹ ಗುಹ್ಯನಾದ ಮಂತ್ರಮೂರ್ತಿ ಪ್ರಣವಕ್ಕೆ ನಮಸ್ಕಾರ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೧೯೮. ಇನ್ನು ಪ್ರಣವದಲ್ಲಿ ಅತ್ಯಂತ ಗೋಪ್ಯದಾಗಿ ಅತ್ಯಂತ ರಹಸ್ಯವಾಗಿ ಹೇಳುತ್ತಿಹೆನೇನೆದೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದಲ್ಲಿ ತಾರಕಾ ಸ್ವರೂಪ ಪ್ರಣವವೆಂದು ದಂಡಸ್ವ ರೂಪ ಪ್ರಣವವೆಂದು, ಕುಂಡಲಾಕಾರ ಪ್ರಣವವೇದು, ಅರ್ಧಚಂದ್ರಕ ಪ್ರಣವವೆಂದು, ದರ್ಪಣಾಕಾರ ಪ್ರಣವವೆಂದು, ಓಂ ಜ್ಯೋತಿ ಸ್ವರೂಪ ಪ್ರಣವವೆಂದು, ಆರು ಪ್ರಕಾರವಾಗಿಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೧೯೯. ಇನ್ನು ದಶಚಕ್ರಂಗಳ ನಿವೃತ್ತಿ ಅದೆಂತೆಂದಡೆ, ಆಧಾರ ಚಕ್ರ ಸ್ವಾಧಿಷ್ಠಾನ ಚಕ್ರದಲ್ಲಿ ಅಡಗಿತ್ತು. ಸ್ವಾಧಿಷ್ಠಾನ ಚಕ್ರ ಮಣಿ ಪೂರಕ ಚಕ್ರದಲ್ಲಿ ಅಡಗಿತ್ತು. ಮಣಿಪೂರಕ ಚಕ್ರ ಅನಾಹತಚಕ್ರದ ಲ್ಲಡಗಿತ್ತು. ಅನಾಹತ ಚಕ್ರ ವಿಶುದ್ಧಿ ಚಕ್ರದಲ್ಲಡಗಿತ್ತು. ವಿಶುದ್ಧಿ ಚಕ್ರ ಆಜ್ಞಾ ಚಕ್ರದಲ್ಲಡಗಿತ್ತು. ಆಜ್ಞಾಚಕ್ರ ಬ್ರಹ್ಮಚಕ್ರದಲ್ಲಡಗಿತ್ತು. ಬ್ರಹ್ಮ ಚಕ್ರ ಶಿಖಾಚಕ್ರದಲ್ಲಡಗಿತ್ತು. ಶಿಖಾಚಕ್ರ ಪಶ್ಚಿಮಚಕ್ರದಲ್ಲಡಗಿತ್ತು. ಪಶ್ಚಿಮ ಚಕ್ರ ಅಣುಚಕ್ರದಲ್ಲಡಗಿತ್ತು. ಅಣುಚಕ್ರ ಅಖಂಡ ಜ್ಯೋತಿ ರ್ಮಯವಾಗಿಹ ಗೋಳಕಾಕಾರ ಪ್ರಣವದ ನೆನಹಿನಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೦೦. ಇನ್ನು ನವಪದ್ಮ ನಿವೃತ್ತಿ ಅದೆಂತೆಂದಡೆ, ಚತುರ್ದಳ ಪದ್ಮ ಷಡುದಳ ಪದ್ಮದಲ್ಲಿ ಅಡಗಿತ್ತು. ಷಡುದಳ ಪದ್ಮ ದಶದಳ ಪದ್ಮದಲ್ಲಿ ಅಡಗಿತ್ತು. ದಶದಳ ಪದ್ಮ ದ್ವಾದಶದಳ ಪದ್ಮದಲ್ಲಿ ಅಡಗಿತ್ತು. ದ್ವಾದಶ ದಳ ಪದ್ಮ ಷೋಡಶದಳ ಪದ್ಮದಲ್ಲಿ ಅಡಗಿತ್ತು. ಷೋಡಶದಳ ಪದ್ಮ ದ್ವಿದಳ ಪದ್ಮದಲ್ಲಿ ಅಡಗಿತ್ತು. ದ್ವಿದಳ ಪದ್ಮ ಸಹಸ್ರ ದಳ ಪದ್ಮದಲ್ಲಿ ಅಡಗಿತ್ತು.

ಸಹಸ್ರದಳಪದ್ಮ ತ್ರಿದಳ ಪದ್ಮದಲ್ಲಿ ಅಡಗಿತ್ತು. ತ್ರಿದಳಪದ್ಮ ಏಕದಳ ಪದ್ಮದಲ್ಲಿ ಅಡಗಿತ್ತು. ಆ ಏಕದಳ ಪದ್ಮ ನಿರಂಜನಾತೀತವೆಂಬ ಪದ್ಮ ದಲ್ಲಿ ಅಡಗಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೦೧. ಇನ್ನು ಐವತ್ತೆರಡಕ್ಷರದ ನಿವೃತ್ತಿ, ಅದೆಂತೆಂದಡೆ, ವಶ ಷಸ ಎಂಬ ಚತುರಾಕ್ಷರವು ಆಧಾರಚಕ್ರದ ನಕಾರ ಬೀಜದಲ್ಲಿ ಅಡಗಿತ್ತು. ಬ ಭ ಮ ಯ ರ ಲ ಯೆಂಬ ಷಡಕ್ಷರಂಗಳು ಸ್ವಾಧಿಷ್ಠಾನ ಚಕ್ರದ ಮಕಾರ ಬೀಜದಲ್ಲಿ ಅಡಗಿತ್ತು. ಡಢಣ ತಥದಧನ ಪಫ ಯೆಂಬ ದಶಾಕ್ಷರವು ಮಣಿ ಪೂರಕ ಚಕ್ರದ ಶಿಕಾರ ಬೀಜದಲ್ಲಿ ಅಡಗಿತ್ತು. ಕಖಗಘಙ, ಚಛಜ ಝಞ, ಟಠ ಯೆಂಬ ದ್ವಾದಶಾಕ್ಷರವು ಅನಾಹತ ಚಕ್ರದ ವಕಾರ ಬೀಜ ದಲ್ಲಿ ಅಡಗಿತ್ತು. ಅಆ ಇಈ ಉಊ ಋೠ ಌೡ ಏಐ ಓಔ ಅಂ ಅಃ ಯೆಂಬ ಷೋಡಶಾಕ್ಷರವು ವಿಶುದ್ಧಿ ಚಕ್ರದ ಯಕಾರ ಬೀಜದಲ್ಲಿ ಅಡಗಿತ್ತು. ಹಂ ಳಂ ಹಂ ಕ್ಷಂ ಯೆಂಬ ಚತುರಾಕ್ಷರವು ಆಜ್ಞಾ ಚಕ್ರದ ಅಖಂಡ ಜ್ಯೋತಿ ರ್ಮಯವಾಗಿ, ಹಗೋಳಕಾಕಾರ ಪ್ರಣವದ ಬೀಜದ ಜ್ಯೋತಿ ಸ್ವರೂಪ ದಲ್ಲಿ ಪರಮಾತ್ಮದಲ್ಲಿಯಡಗಿತ್ತು ನೋಡಾ ಅಪ್ರಮಾಣ ಕೂಡಲಸಂಗಮ ದೇವಾ.

೨೦೨. ಇನ್ನು ಪಂಚಾಕ್ಷರ ನಿವೃತ್ತಿಯದೆಂತೆಂದಡೆ, ಅಖಂಡ ಜ್ಯೋತಿ ರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಾಕೃತಿಯಲ್ಲಿಹ ನಕಾರ ದಲ್ಲಿಹ ನಕಾರವಡಗಿತ್ತು ಆ ಪ್ರಣವದ ದಂಡಕಾಕೃತಿಯಲ್ಲಿಹ ಮಕಾ ರದಲ್ಲಿ ಮಕಾರವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿಹ ಶಿಕಾರ ಪ್ರಣವದಲ್ಲಿಹ ಶಿಕಾರವಡಗಿತ್ತು. ಆ ಪ್ರಣವದ ಅರ್ಧಚಂದ್ರಾಕೃತಿಯಲ್ಲಿ ಹ ವಕಾರಪ್ರಣವದಲ್ಲಿ ವಕಾರವಡಗಿತ್ತು. ಆ ಪ್ರಣವದ ದರ್ಪಣಾಕಾರದ ಲ್ಲಿಹ ಯಕಾರ ಪ್ರಣವದಲ್ಲಿ ಯಕಾರವಡಗಿತ್ತು ನೋಡಾ! ಅಪ್ರಮಾಣ ಕೂಡಲಸಂಗಮದೇವ.

೨೦೩. ಇನ್ನು ಪ್ರಣವದ ಮೊದಲಲ್ಲಿಹ ಪಂಚಾಕ್ಷರಂಗಳೈಕ್ಯವ ದೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಾಕೃತಿಯಲ್ಲಿಹ ನಕಾರವು. ಆ ಪ್ರಣವದ ತಾರಕಾಕೃತಿಯಲ್ಲಿಯೆ ಐಕ್ಯ ವಾಯಿತ್ತು. ಆ ಪ್ರಣವದ ದಂಡಕಾಕೃತಿಯಲ್ಲಿಹ ಯಕಾರವು ಆ ಪ್ರಣ ವದ ದಂಡಕಾಕೃತಿಯಲ್ಲಿಯೇ ಐಕ್ಯವಾಯಿತ್ತು. ಆ ಪ್ರಣವದ ಕುಂಡಲಾ ಕೃತಿಯಲ್ಲಿ ಶಿಕಾರವು, ಆ ಪ್ರಣವದ ಕುಂಡಲಾಕೃತಿಯಲ್ಲಿ ಐಕ್ಯವಾಯಿತ್ತು

ಆ ಪ್ರಣವದ ಅರ್ಧಚಂದ್ರಾಕೃತಿಯಲ್ಲಿಹ ವಕಾರ ಪ್ರಣವವು. ಆ ಪ್ರಣವದ ಅರ್ಧಚಂದ್ರಾಕೃತಿಯಲ್ಲಿಯೆ ಐಕ್ಯವಾಯಿತ್ತು. ಆ ಪ್ರಣವದದರ್ಪಣಾಕೃತಿಯಲ್ಲಿಹ ಯಕಾರವು ಆ ಪ್ರಣವದ ದರ್ಪಣಾಕೃತಿಯಲ್ಲಿಯೇ ಐಕ್ಯವಾಯಿತ್ತು ....ಆ ಪ್ರಣವದ ಜ್ಯೋತಿಸ್ತಂಭಾಕೃತಿಯಲ್ಲಿಯೇ ಐಕ್ಯವಾಯಿತ್ತು. ॥ಶ್ರುತಿ॥ ಓಂ ಇತ್ಯೇಕಾಕ್ಷರಂ ಬ್ರಹ್ಮಂ ವಿಂದುದಾಗಿ ಅಪ್ರಮಾಣ ಕೂಡಲ ಸಂಗಮದೇವಾ.

೨೦೪. ಇನ್ನು ಸಹಸ್ರಾಕ್ಷರ, ತ್ರಿಯಕ್ಷರ ಏಕಾಕ್ಷರ, ನಿವೃತ್ತಿಯದೆಂತೆಂದಡೆ, ಸಹಸ್ರಾಕ್ಷರ ತ್ರಿಯಕ್ಷರದಲ್ಲಿಯೆ ಅಡಗಿತ್ತು. ತ್ರಿಯಕ್ಷರ ಏಕಾಕ್ಷರದಲ್ಲಿಯೆ ಅಡಗಿತ್ತು. ಆ ಏಕಾಕ್ಷರ ನಿಶ್ಯಬ್ದಬ್ರಹ್ಮ ಮುಚ್ಯತೆಯೆಂಬ ಏಕಬ್ರಹ್ಮದಲ್ಲಿ ಅಡಗಿತ್ತು ನೋಡಾ! ಅಪ್ರಮಾಣ ಕೂಡಲಸಂಗಮದೇವಾ.

೨೦೫. ಇನ್ನು ಷಡ್ವಿಧ ಭೂತಂಗಳ ನಿವೃತ್ತಿ ಅದೆಂತೆಂದಡೆ, ಸದ್ಯೋಜಾತವೆಂಬ ಮುಖದಲ್ಲಿ ಪೃಥ್ವಿಯೆಂಬ ಮಹಾಭೂತವಡಗಿತ್ತು. ವಾಮದೇವ ಮುಖದಲ್ಲಿ ಅಪ್ಪುವೆಂಬ ಮಹಾಭೂತವಡಗಿತ್ತು. ಅಘೋರ ಮುಖದಲ್ಲಿ ಅಗ್ನಿಯೆಂಬ ಮಹಾಭೂತವಡಗಿತ್ತು. ತತ್ಪುರುಷ ಮುಖದಲ್ಲಿ ವಾಯುವೆಂಬ ಮಹಾಭೂತವಡಗಿತ್ತು. ಈಶಾನ್ಯವೆಂಬ ಮುಖದಲ್ಲಿ ಆಕಾಶವೆಂಬ ಮಹಾಭೂತವಡಗಿತ್ತು. ಪ್ರಣವದ ಅರ್ಧಚಂದ್ರಕದಲ್ಲಿ ಮನವೆಂಬ ಮಹಾಭೂತವಡಗಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೦೬. ಇನ್ನು ಷಡ್ವಿಧ ಮುಖಗಳ ನಿವೃತ್ತಿ ಅದೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಸ್ವರೂಪದಲ್ಲಿ ಸದ್ಯೋಜಾತ ಮುಖವಡಗಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ವಾಮದೇವ ಮುಖವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ಅಘೋರ ಮುಖವಡಗಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ತತ್ಪುರುಷ ಮುಖವಡಗಿತ್ತು. ಅಪ್ರಣವದ ದರ್ಪಣಾಕಾರದಲ್ಲಿ ಈಶಾನ್ಯ ಮುಖವಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ನಿರ್ಭಾವ ಮುಖವಡಗಿತ್ತು. ನೋಡಾ ಅಪ್ರಮಾಣ ಕೂಡಲಸಂಗಮದೇವ.

೨೦೭. ಇನ್ನು ಷಡ್ವಿಧಲಿಂಗಗಳ ನಿವೃತ್ತಿ ಅದೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕ ಸ್ವರೂಪದಲ್ಲಿ ಆಚಾರಲಿಂಗವಡಗಿತ್ತು. ಆ ಪ್ರಣವದ ದಂಡಕ ಸ್ವರೂಪದಲ್ಲಿ ಗುರುಲಿಂಗ ವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ಶಿವಲಿಂಗವಡಗಿತ್ತು. ಆ ಪ್ರಣ

ವದ ಅರ್ಧಚಂದ್ರಕದಲ್ಲಿ ಜಂಗಮಲಿಂಗವದಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಪ್ರಸಾದ ಲಿಂಗವಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಮಹಾಲಿಂಗವಡಗಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವ.

೨೦೮. ಇನ್ನು ಷಡುಸಾದಾಖ್ಯಂಗಳ ನಿವೃತ್ತಿ, ಅದೆಂತೆಂದಡೆ, ನಿವೃತ್ತಿಕಳೆಯಲ್ಲಿ ಕರ್ಮಸಾದಾಖ್ಯವಡಗಿತ್ತು. ಪ್ರತಿಷ್ಠೆಕಳೆಯಲ್ಲಿ ಕರ್ತೃಸಾದಾಖ್ಯವಡಗಿತ್ತು. ವಿದ್ಯಾಕಳೆಯಲ್ಲಿ ಮೂರ್ತಿ ಸಾದಾಖ್ಯವಡಗಿತ್ತು ಶಾಂತಿಕಳೆಯಲ್ಲಿ ಅಮೂರ್ತಿ ಸಾದಾಖ್ಯವಡಗಿತ್ತು. ಶಾಂತ್ಯತೀತ ಕಳೆಯಲ್ಲಿ ಶಿವಸಾದಾಖ್ಯವಡಗಿತ್ತು. ಶಾಂತ್ಯತೀತೋತ್ತರ ಕಳೆಯಲ್ಲಿ ನಿರ್ಮುಕ್ತಿಯೆಂಬ ಮಹಾಸಾದಾಖ್ಯವಡಗಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವ.

೨೦೯. ಇನ್ನು ಷಡುಕಲೆ ನಿವೃತ್ತಿ ಅದೆಂತೆಂದಡೆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಸ್ವರೂಪದಲ್ಲಿ ನಿವೃತ್ತಿ ಕಲೆಯಡಗಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ಪ್ರತಿಷ್ಠೆಕಲೆಯಡಗಿತ್ತು. ಆ ಪ್ರಣವದ ಕುಂದಲಾಕಾರದಲ್ಲಿ ವಿದ್ಯಾಕಲೆಯಡಗಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ಶಾಂತಿಕಲೆಯಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಶಾಂತ್ಯತೀತ ಕಲೆಯಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಶಾಂತ್ಯತೀತೋತ್ತರ ಕಲೆಯಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೨೧೦. ಇನ್ನು ಷಡ್ವಿಧ ಹಸ್ತಂಗಳ ನಿವೃತ್ತಿ ಅದೇತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಸ್ವರೂಪದಲ್ಲಿ ಸುಚಿತ್ತ ಹಸ್ತವಡಗಿತ್ತು. ಅಪ್ರಣವದ ದಂಡ ಸ್ವರೂಪದಲ್ಲಿ ಸುಬುದ್ಧಿ ಹಸ್ತವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ನಿರಹಂಕಾರ ಹಸ್ತವಡಗಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ಸುಮನ ಹಸ್ತವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಸುಜ್ಞಾನ ಹಸ್ತವಡಗಿತ್ತು. ಆ ಪ್ರಣವದ ಜ್ಯೋತಿಸ್ವರೂಪದಲ್ಲಿ ಭಾವಹಸ್ತವಡಗಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೧೧. ಇನ್ನು ನವ ಶಕ್ತಿಗಳ ನಿವೃತ್ತಿ ಅದೆಂತೆಂದಡೆ, ಕಾಕಿನಿ ಶಕ್ತಿ, ರಾಕಿನಿಶಕ್ತಿಯಲ್ಲಿ ಅಡಗಿತ್ತು. ಆ ರಾಕಿನಿಶಕ್ತಿ ಲಾಕಿನಿಶಕ್ತಿಯಲ್ಲಡಗಿತ್ತು. ಆ ಲಾಕಿನಿಶಕ್ತಿ ಶಾಕಿನಿ ಶಕ್ತಿಯಲ್ಲಿ ಅಡಗಿತ್ತು. ಆ ಶಾಕಿನಿಶಕ್ತಿ ಢಾಕಿನಿ

ಶಕ್ತಿಯಲ್ಲಿ ಅಡಗಿತ್ತು. ಆ ಢಾಕಿನಿಶಕ್ತಿ ಹಾಕಿನಿಶಕ್ತಿಯಲ್ಲಿ ಅಡಗಿತ್ತು ಆ ಹಾಕಿನಿ ಶಕ್ತಿ ನಿರ್ವಾಣಿಯ ಶಕ್ತಿಯಲ್ಲಿ ಅಡಗಿತ್ತು. ಆ ನಿರ್ವಾಣಿಯ ಶಕ್ತಿ ನಿಭ್ರಾಂತಿಶಕ್ತಿಯಲ್ಲಿ ಅಡಗಿತ್ತು. ಆ ನಿಭ್ರಾಂತಶಕ್ತಿ ನಿರ್ಭಿನ್ನಶಕ್ತಿಯಲ್ಲಿ ಅಡಗಿದಳು ಆ ನಿರ್ಭಿನ್ನ ಶಕ್ತಿ ಏನೂ ಏನೂ ಎನಲಿಲ್ಲದ ಮಹಾಘನ ನಿರಂಜನಾತೀತದ ನೆನಹು ಮಾತ್ರದಲ್ಲಿ ಅಡಗಿ ನಿಶ್ಶೂನ್ಯವಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೧೨. ಇನ್ನು ಷಡ್ವಿಧ ಅಧಿದೇವತೆಗಳ ನಿವೃತ್ತಿ ಅದೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಾ ಸ್ವರೂಪದಲ್ಲಿ ಬ್ರಹ್ಮನಡಗಿದನು. ಆ ಪ್ರಣವದ ದಂಡ ಸ್ವರೂಪದಲ್ಲಿ ವಿಷ್ಣುವಡಗಿದನು. ಆ ಪ್ರಣವದ ಕುಂಡಲಾಕಾರದಲ್ಲಿ ರುದ್ರನಡಗಿದನು. ಆ ಪ್ರಣವದ ಅರ್ಧಚಂದ್ರಕದಲ್ಲಿ ಈಶ್ವರನಡಗಿದನು. ಆ ಪ್ರಣವದ ದರ್ಪಣಾಕಾರದಲ್ಲಿ ಸದಾಶಿವನಡಗಿದನು. ಆ ಪ್ರಣವದ ಜ್ಯೋತಿಸ್ವರೂಪದಲ್ಲಿ ಆತ ನಡಗಿದನು ನೋಡಾ! ಅಪ್ರಮಾಣ ಕೂಡಲಸಂಗಮದೇವಾ.

೨೧೩. ರಹಸ್ಯೆ ॥ಬ್ರಹ್ಮ, ವಿಷ್ಣು ರುದ್ರಶ್ಚ, ಈಶ್ವರಸ್ಯ ಸದಾಶಿವಾಃ। ಯೇತೆ ಗರ್ಭಗತಶ್ಚೈವ ತಸ್ಮೈ ಶ್ರೀ ಗುರುವೆ ನಮಃ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೨೧೪. ಇನ್ನು ಅಂತರಾತ್ಮ ಪರಮಾತ್ಮ ನಿವೃತ್ತಿ ಅದೆಂತೆಂದಡೆ, ಅಂತರಾತ್ಮನೆಂಬ ಮಹಾಗುರು ಪರಮಾತ್ಮನೆಂಬ ಮಹಾಲಿಂಗದಲ್ಲಿ ಅಡಗಿತ್ತು ಆ ಪರಮಾತ್ಮನೆಂಬ ಮಹಾಲಿಂಗವು ಸರ್ವಾತ್ಮನೆಂಬ ಮಹಾ ಜಂಗಮದಲ್ಲಿ ಅಡಗಿತ್ತು. ಆ ಸರ್ವಾತ್ಮನೆಂಬ ಮಹಾ ಜಂಗಮ ತಾನೆ ನಿತ್ಯ ನಿರಂಜನ ನಿರಾಮಯಾತೀತನಾಗಿರ್ದನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೨೧೫. ಇನ್ನು ಅಷ್ಟನಾದದ ನಿವೃತ್ತಿ ಅದೆಂತೆಂದಡೆ, ಪೆಣ್ದುಂಬಿಯ ನಾದ ವೀಣಾನಾದದಲ್ಲಿ ಅಡಗಿತ್ತು ಆ ವೀಣಾನಾದ ಘಂಟಾನಾದದಲ್ಲಿ ಅಡಗಿತ್ತು. ಆ ಘಂಟಾನಾದ ಭೇರಿ ನಾದದಲ್ಲಿ ಅಡಗಿತ್ತು. ಆ ಭೇರಿನಾದ ಮೇಘ ಧ್ವನಿಯಲ್ಲಿ ಅಡಗಿತ್ತು. ಆ ಮೇಘಧ್ವನಿ ಪ್ರಣವನಾದದಲ್ಲಿ ಅಡಗಿತ್ತು. ಆ ಪ್ರಣವನಾದ ದಿವ್ಯನಾದದಲ್ಲಿ ಅಡಗಿತ್ತು. ಆ ದಿವ್ಯನಾದ ಸಿಂಹನಾದದಲ್ಲಿ ಅಡಗಿತ್ತು. ಆ ಸಿಂಹನಾದ ನಿಶ್ಯಬ್ದವೆಂಬ ಪರಬ್ರಹ್ಮದ

ನೆನಹು ಮಾತ್ರದಲ್ಲಿ ಅಡಗಿತ್ತು. ಆ ನಿಃಶಬ್ದವೆಂಬ ಪರಬ್ರಹ್ಮದ ನೆನಹು ಅಡಗಿ ನಿಃಶೂನ್ಯನಾಯಿತ್ತು. ನೋಡಾ ಅಪ್ರಮಾಣ ಕೂಡಲಸಂಗಮದೇವಾ

೨೧೬. ಇನ್ನು ಷಡ್ವಿಧ ಭಕ್ತಿಯ ನಿವೃತ್ತಿ ಅದೆಂತೆಂದಡೆ. ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಾ ಸ್ವರೂಪದಲ್ಲಿ ಸದ್ಭಕ್ತಿ ಅಡಗಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ನೈಷ್ಠಿಕಾ ಭಕ್ತಿಯು ಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ಅವಧಾನ ಭಕ್ತಿಯುಡಗಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ಅನುಭಾವ ಭಕ್ತಿಯುಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಆನಂದ ಭಕ್ತಿಯುಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಸಮರಸ ಭಕ್ತಿಯುಡಗಿತ್ತು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೨೧೭. ಇನ್ನು ಷಡ್ವಿಧ ದ್ರವ್ಯದ ನಿವೃತ್ತಿ ಅದೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಾ ಸ್ವರೂಪದಲ್ಲಿ ಗಂಧವಡಗಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ರಸವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ರೂಪವಡಗಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ಸ್ಪರ್ಶನವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಶಬ್ದವಡಗಿತ್ತು ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ತೃಪ್ತಿಯುಡಗಿತ್ತು. ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೨೧೮. ಇನ್ನು ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣ ವೇದ ಅಜಪೆ ಗಾಯತ್ರಿಯ ನಿವೃತ್ತಿ ಅದೆಂತೆಂದಡೆ ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ತಾರಕಾಸ್ವರೂಪದಲ್ಲಿ ಋಗ್ವೇದವಡಗಿತ್ತು. ಆ ಪ್ರಣವದ ದಂಡಸ್ವರೂಪದಲ್ಲಿ ಯಜುರ್ವೇದವಡಗಿತ್ತು. ಆ ಪ್ರಣವದ ಕುಂಡಲಾಕಾರದಲ್ಲಿ ಸಾಮವೇದವಡಗಿತ್ತು. ಆ ಪ್ರಣವದ ಅರ್ಧಚಂದ್ರಕದಲ್ಲಿ ಅಥರ್ವಣ ವೇದವಡಗಿತ್ತು. ಆ ಪ್ರಣವದ ದರ್ಪಣಾಕಾರದಲ್ಲಿ ಗಾಯತ್ರಿಯುಡಗಿತ್ತು. ಆ ಪ್ರಣವದ ಜ್ಯೋತಿ ಸ್ವರೂಪದಲ್ಲಿ ಅಜಪೆಯುಡಗಿತ್ತು ನೋಡಾ! ಅಪ್ರಮಾಣ ಕೂಡಲಸಂಗಮದೇವಾ

೨೧೯. ದಶ ಚಕ್ರ ಮೊದಲಾಗಿ ಅಜಪೆ ಗಾಯತ್ರಿ ಕಡೆಯಾಗಿ ಸಮಸ್ತವನು ಗರ್ಭೀಕರಿಸಿಕೊಂಡು ಆದಿ ನಡುಮುಡಿ ಕಡೆ ಇಲ್ಲದೆ ಅಖಂಡ ಜ್ಯೋತಿರ್ಮಯ ಲಿಂಗವಾಗಿವುದು ನೋಡಾ ಅಪ್ರಮಾಣ ಕೂಡಲಸಂಗಮ ದೇವಾ.

ತಾಯಿಃ ಶ್ರುತಿಗಳ ಮೊತ್ತ ಪಾಯು ಭಕ್ತಾಂಗನೆಯು। ಶ್ರೀಯುಖಿಳ ಭುವನ ಭವನವ ಸಲಹುವಾ ॥ ಈಯುಲಿಕೆ ಬೇಡದಂದ ಕಾಯುಲಿಕೆ ತನುವನು । ತಾಯಿಂದಲನು ಕಂಡ್ಯ ಪಂಚಾಕ್ಷರಿ ||೧॥

ಕರಗಿ ಮನ ಕಂಗಳೊಳು ಸುರಿಯೆ ಸುಖಾಶ್ರುವಂ । ಕುರಿಸೆ ಪುಳುಕಂಗ ಳಿಗೆ ವೇದಂದದಿ ॥ ಹರುಷದಿಂ ನೆನೆದು ನೆನೆವರಿಗೆ ಗಿರಿಜಾವರನ । ಕರೆದು ತೋರುವದು ಶ್ರೀಪಂಚಾಕ್ಷರೀ ||೨||

ಓದುವಾದಿನಲಿ ಸುರಂಾದರಿಸು ಧರ್ಮದಲಿ । ಸಾಧಿಸುವ ತಪಸಿದ್ಧಿ ವಿದ್ಯೆ ಗಳಲಿ ॥ ವೇದದಲ್ಲಿ ಹಿಂದು ಹೆಸರಾದ ಹೆಂಪುಳ್ಳ ಶಿವ ನಾದಿನಾಮುವ ನೋಡು ಪಂಚಾಕ್ಷರಿ ॥೩॥

ದಣಿವರಿಯೆ ದುಕ್ಕಿ ಸಂದಣಿಸಿ ಕರಣಂಗಳುರ । ವಣಿಸಿ ನೆನೆವರಿಗೆ ಸುರ ಧೇನುವಾಗಿ ಮಣಿಮುಕುಟರಾಶಿಗಳ ಅಣಮಾದಿ ಗುಣಗಳನು । ತ್ರಿಣಯನನು ಕರೆವುದೀ ಪಂಚಾಕ್ಷರಿ ॥೪॥

ಅರಿಮಿತ್ರ ತಾನೆ ಪುನಶ್ಚರಣೆ ಸಿಧ್ಯಾಸಿದ್ಧಿ । ಕರದ ಹಂಗೇತಕನರಿವರೆನ್ನದೆ ॥ ಸ್ಮರಣೆಮಾತ್ರದಲಿ ಉಚ್ಚರಣೆ ಮಾತ್ರದಲಿ ಶಂ । ಕರನ ತೋರುವದು ಶ್ರೀಪಂಚಾಕ್ಷರಿ ॥೫॥

ಪ್ರಣವ ರಾಜನ ಹೊಳೆವ ಮಣಿಮುಕುಟದಲ್ಲಿ ಕೀ । ರಣದ ರತುನದ ತೊಡಿಗೆಯಾಭರಣದಾ ॥ ತ್ರಿಣಯನೊಸೆದಿಪ್ಪ ಗುಣಮಣಿಯು ಚಿಂತಾ। ಮಣಿಯ ಕಣಿಯು ಕರಡಿಗೆ ನೋಡು ಪಂಚಾಕ್ಷರಿ ||೬||

ದಯದ ನಿಧಿ ಪುಣ್ಯಸಂಚಯದ ಶ್ರೀಶ್ರುತಿಯು ನಿ। ಶ್ಚಯದ ನಿಜಧರ್ಮಂ ಗಳಾಪ್ತ ಜನದಾ॥ ಪ್ರಿಯ ನಾಮವು ಭಕ್ತರಿಚ್ಛೆಯ ನಾಮವಿದು ನೀತಿ। ನಯದ ನಾಮವ ನೋಡು ಪಂಚಾಕ್ಷರಿ ॥೭॥

ಶರಣರಿಟ್ಟೆಡೆಗಳನು ಶರಣರಾಪತ್ತುವನು । ಶರಣರಿಗೆ ಮುನಿವ ಕಡು ಪಾತಕರನು । ಒರಸೂದು ಕಡಿದು ಕತ್ತರಿಸೂದು ಉಃಪೆಂದು । ಉರುಹುವದು ನೋಡು ಪಂಚಾಕ್ಷರಿ ॥೮||

ಏಳು ಕೋಟಿಯು ಮಹಾಮಂತ್ರಾದಿಗಳ ಹಡೆದ ತಾಯಿ ತ್ರೈಲೋಕ್ಯ ಪತಿಮಂತ್ರ ರಾಜಾ ॥ ಶೂಲಿಯುಗ್ಗದ ಸಿರಿಕಪಾಲಿಯುರುತರ ತೇಜ ಬಾಲೇಂದು ಧರನ ನಿಜ ಪಂಚಾಕ್ಷರೀ॥೯॥

ಹರಿಹರಿದು ವೆಲ್ಲಡಿಯು ಸರಸಿಜಭವನು ಮುರಿಯು | ಭರದಿಂದಲರಸಿಯಾರುಂ ಕಾಣದಾ ॥ ಹರನ ತಾಸಿರ್ದೆಡೆಗೆ ಬರಿಸಿ ತೋರುವ ಜಗದಾ । ಗುರುವೆನ್ನ ಹೊರೆವ ಶ್ರೀಪಂಚಾಕ್ಷರಿ ॥೧೦॥

ಗುರುದೈವ ತಂದೆತಾಯಿ ಹೊರೆವ ; ಸಖತೇಜ ಬಲಹರನ ಶ್ರೀಸೌಭಾಗ್ಯದಾನೆಂದದಾ ; ಪರಿಪರಿಯೊಳಾಗಿ ನೆಸೆವರ ಸಲುಹುವದು ಗುರುಪುರದ ಮಲ್ಲನ ನಾಮ ಪಂಚಾಕ್ಷರಿ ||೧೧||

---

## ೯. ಭಕ್ತಸ್ಥಲ.

**ಸೂತ್ರ**:— ಇಂತು ಶ್ರೀ ವಿಭೂತಿ ರುದ್ರಾಕ್ಷಿಯಂ ಧರಿಸಿ ಶ್ರೀ ಪಂಚಾಕ್ಷರಿಯಂ ಜಪಿಸಿ ನಿತ್ಯ ಲಿಂಗಾರ್ಚನೆಯಂ ಗೈವ ಸತ್ಕ್ರಿಯಾ ಸಂಪನ್ನನ ಸಾಂಗಕ್ರಿಯಾವರ್ತನೆ ಎಂತಿರ್ದುದೆಂದೊಡೆ ಮುಂದೆ ಭಕ್ತಸ್ಥಲವಾದುದು.

॥ಪದ॥ ರಾಗ ಹಿಂದೂಳ ವಸಂತ

ಮುಂದನೆಣಿಸದೆ ದಿನದಿನಕ್ಕೆ ಪರಮಾಯು । ಸಂದುದೆಂಬಾ ದೃಢತೆ ನೆಲೆಗೊಂಡು ಚರಲಿಂಗ । ಕಂದಂದಿಗೇನುವಂ ವಂಚಿಸದೆ ಮಾಡುತಿಹ ದಾಸೋಹಿ ಸದ್ಭಕ್ತನು ॥ಪಲ್ಲ||

ಭಯಭಕ್ತಿ ಕರುಣ ಕಿಂಕುರ್ವಾಣ ದಾಸೋಹ । ನಯ ಭೃತ್ಯ ಭಾವ ಸಜ್ಜನ ಸತ್ಯ ಸಮತೆ ಸದ್ವಿ | ನಯ ಗುಣ ನಿಷ್ಠೆ ಸಾಹಿತ್ಯ ಸರ್ವಾವಧಾನ ಕ್ಷಮೆ ಷಡ್ವ್ರತಾಚಾರವೂ । ನಿಯತ ನಿರ್ವಂಚನತೆ ನಿರ್ವಿಕಲ್ಪತೆ ನಿರತಿ । ಶಯ ಜಾತಿ ಭೇದ ನಿರಹಂಕಾರ ಸಾತ್ವಿಕ | ದಯದಳುಕಿನಿಂ ಲಿಂಗಜಂಗಮಕೆ ಸ್ವಯವಾಗಿ ಮಾಡುವಾತನೆ ಭಕ್ತನು ||೧॥

ಅನವರತ ದಾಸೋಹದಲ್ಲಿ ಮನಬೆರಸಿ ನಿಜ । ತನು ಕರಗುತಿಹಂ ಲಿಂಗ ಜಂಗಮವ ಕಾಣುತ್ತ । ವಿನಯದಿಂದಶ್ರುಜಲವಾನಂದದಿಂದ ವರಪದ ಸೋಂಕಿನಿಂ ಸುರಿಯುವಾ ॥ ತನು ಪುಳಕ ತಳತು ತನತನಗೆ ಹೊರೆಯೇರಿನಲಿ । ದಣುಕೇಳುಹಂ ಮಹೋತ್ಸಾಹ ಭಾವ ಗುಡಿಗಟ್ಟೆ । ಕುಣಿಕುಣಿದು ಕೂರ್ಮೆಯಿಂ ಮಾಡಿ । ದಣುವಿಲ್ಲದಿರುತಿಹಂ ಭಕ್ತನಂಗಚಿನ್ಹ ॥೨॥

ತನ್ನ ಮಾಟಕೆ ತಾನೇ ಮುಯ್ಯಾನ ದಾಸೋಹಿ | ಸನ್ನಿಹಿತನೆಂಬ ಹೊಗಳತೆಯು ಹೊರ ಪರರ ಹಳಿ | ವನ್ಯಾಯಕೆಳಸದಹಂಕಾರ ವಳಿದೇ

ನುವಂ ತಾನೆನ್ನ ತನಗೆ ನನ್ನನೂ ॥ ಹೊನ್ನು ಹೆಣ್ಣು ಮಣ್ಣಿನೊಳು ಸಿಲು ಕದಾತ್ರಯುವ । ತನ್ನದೆನ್ನದೆ ಲಿಂಗಜಂಗಮಕೆ ಸಮಸುತ್ತ । ತನ್ಮೂರ್ತಿಯಾಗಿ ನಿಭ್ರಾಂತನಾಗಿರಬಲ್ಲಾತನೇ ಸದ್ಭಕ್ತನೂ ॥೩॥

ಮತ್ತೆ ಮತ್ತೆಯು ಮುಗುಳಿ ಲಿಂಗಕ್ಕೆ ಜಂಗಮಕೆ ತೊತ್ತಾಗಿ ಕೀಳು ಕಿಂಕರನಾಗಿ ಭಯದಿಂದ । ಭೃತ್ಯರಾಳಾಳಾಗಿಯುಟ್ಟ ವೈಲಿಗೆ ಯುಗುಳ ತಂಬುಲಕೊಕ್ಕ ವಿಶ್ವಾ । ಸತ್ಯಪ್ರಸಾದಕ್ಕೋಗ್ಯತೆ ವಡೆದೆನೆಂಬ ಭಾ । ವೋತ್ತಮತೆಯಿಂದ ಚರಿಸುವ ಭಕ್ತನೆ ಭಕ್ತಿ । ಗೆತ್ತಿದ ಶಿವನ ಸಿಂಧು ಭಕ್ತಿಯ ಕುಳಸ್ಥಲವನಿಂಬುಗೊಂಡಾಚಾರ್ಯನು ॥೪॥

ದೇಹಾಭಿಮಾನ ಕುಲಛಲವಳಿದು ಭಕ್ತಿದಾ । ಸೋಹವಳವಟ್ಟು ಜಂಗಮ ಪ್ರಸಾದ ಪ್ರಾಣ । ಗ್ರಾಹಕತೆ ನೆಲೆಗೊಂಡು ಸರ್ವಾಂಗದೊಳಗೆ ಸರ್ವಾಚಾರಲೀಯ್ಯವಾಗಿ ॥ ಸೋಹದಾಸೋಹವೆಂಬೆರಡರತು । ಸಹಜ ನಿರ್ದೇಹಿಯಾಗಿರ್ಪ ಭಕ್ತರ ಭೃತ್ಯನಾ । ಗಿಹ ಶಿವಭಾವ ಭರಿತಾನಂದ ಸುಖವನೀಯೆನಗೆ ಕರುಣಾಬ್ಧಿ ಸೊಡ್ಡಳ ಲಿಂಗವೆ ॥೫॥

---

## ೧೦. ಉಭಯಸ್ಥಲ.

**ಸೂತ್ರ:—** ಇಂತು ಶ್ರೀ ಭಕ್ತಸ್ಥಲದಲ್ಲಿ ನಿಂದ ಸದ್ಭಕ್ತನ ದೇಹ ಪ್ರಾಣ ಸ್ವರೂಪಮಪ್ಪ ಕರ್ತೃ ಭೃತ್ಯಾಂತರ ಸಂಬಂಧವೆಂತಿರ್ದುದೆಂದೊಡೆ ಮುಂದೆ ಉಭಯಸ್ಥಲವಾದುದು.

॥ಪದ॥ ರಾಗ ಮಾಳವಗೌಳ.

ಸ್ಥಾವರ ಜಂಗಮ ಸಂಬಂಧದ ನಿ । ಭಾವದುಭಯ ಕೂಟವನೇ ನೆಂಬೆ ॥ಪಲ್ಲವ॥

ಆಚಾರವೇ ಜಂಗಮವು ವಿಚಾರದ ಗೋಚರ ಭಕ್ತಿ ಸ್ವಾನುಭಾವ । ಆಚಾರ ವಿಚಾರವೆಂಬುಭಯದ ವಾಚಕ ಒಂದೇ ಭಾಸವು ॥೧॥

ಸೂತಕ ವಿರಹಿತ ಲಿಂಗ ಮನಪಾತಕ ವಿರಹಿತ ಜಂಗಮವು । ಸೂತಕ ಪಾತಕವೆಂಬುಭಯವಳಿದಾತನೆ ಸಹಜ ಸುಸಂಬಂಧಿ ॥೨॥

ಅಂಗದೊಳನುಭವ ಸತ್ಯಾಚಾರ ಚಿದಂಗದೊಳಗೆ ಪರಮ ಜ್ಞಾನೋ ದಯ । ಅಂಗ ಪ್ರಾಣಸ್ಥಲವೆನ್ನದೊಡದು ಜಂಗಮ ಲಿಂಗದ ಸಂಬಂಧ ॥೩॥

ನಾದವೆ ಜಂಗಮು ಬಿಂದುವೆ ಲಿಂಗವು ಬಿಂದುವಿನಾದಿಯೆ ಭಕ್ತಿಯ ಸತ್ಪಿಂಡವು । ನಾದ ಬಿಂದುಗಳು ಎರಡೆನಿಪ ಆದಿಯೊಳು ಉಭಯದ ಸಂಬಂಧ ॥೪॥

ಅನುಭವದಂಗದೊಳರಿವು ಅರಿವಿನೊಳನುಭವವೆಂತಾ ಪರಿ ಜಂಗಮು । ಭಕ್ತನ ಸಂಬಂಧವಿದನು ಕೂಡಲಸಂಗನ ಶರಣ ತಾನೇ ಬಲ್ಲ ॥೫॥

———

## ೧೧. ತ್ರಿವಿಧ ಸಂಪತ್ಸ್ಥಲ

ಸೂತ್ರ:— ಇಂತು ಉಭಯ ಸ್ಥಲದಲ್ಲಿ ಶ್ರೀಲಿಂಗಜಂಗಮವೆರಡರ ಸಂಬಂಧವನರಿದ ಸದ್ಭಕ್ತನ ತನುವಿನಲ್ಲಿ ಗುರುಸಂಬಂಧ, ಮನದಲ್ಲಿ ಲಿಂಗ ಸಂಬಂಧ ಅರಿವಿನಲ್ಲಿ ಜಂಗಮ ಸಂಬಂಧವಾದ ಭೇದವೆಂತಿರ್ದುದೆಂದೊಡೆ ಮುಂದೆ ತ್ರಿವಿಧ ಸಂಪತ್ತಿನ ಸ್ಥಲವಾದುದು.

॥ಪದ॥ ರಾಗ ಗುಂಡಕ್ರಿಯ.

ಮಾರಗ ಕ್ರಿಯಾಚಾರ ಸಮಯವ ಮೀರಿದ ಕ್ರಿಯಿಂದತ್ತಲಿ । ಮೂರೊಂದೆನಿಸಿದೆ ಬೇರೆ ತೋರದೆ ಲಿಂಗಾ ಲಿಂಗೈಕ್ಯನಾದ ಶರಣಾ ॥ಪಲ್ಲ॥

ಗುರುಕರುಣದಿ ಶುದ್ಧ ಶರೀರಿಯಾಗಿ ಸ್ವೀಕರಿಸಿದ ಶಿವಲಿಂಗಾರ್ಚನೆಯ । ಹೊರಗೆ ಮಾಡುವ ಮಾರಗಕ್ರಿಯಾ ಪರಮ ಸಂಪತ್ತಿನೊಳಾದ ಶರಣಾ ॥೧॥

ತನುವಿಂಗಾಚಾರ ಮನಸಿಂಗರಿವು ಮತ್ತನಿತಾದ ಭಾವ ಭಜನೆಯ । ನೆನಹಂ ಮಾಡುವ ಅನಿಮಿಷ ಲಿಂಗದ ಅನುಭವ ಸಂಪತ್ತಿನೊಳಾದ ಶರಣಾ ॥೨॥

ಒಳಹೊರಗೆಂಬ ಕುಳವನ್ನರಿದು ಮತ್ತಳವಟ್ಟ ಕ್ರಿಯಾಭಾವದ ಭಜನೆಯ । ಸ್ಥಳವ ತಂದು ತನ್ನೊಳಗೆ ವೇಧಿಸಿ ತಿಳಿವಿನ ಸಂಪತ್ತಿನೊಳಾದ ಶರಣಾ ॥೩॥

ಆ ಲಿಂಗಾವಸರದಲ್ಲಿ ಲೋಲುಪನಾಗಿ ಮತ್ತಾ ಲಿಂಗದೊಳು ನಿಜವನ್ನರಿದು । ಆಲಾಪನೆ ಮನದೊಳಗಾಳಲು ಮೀರಿದ ಕ್ರಿಯಾ ಲೀಲಾ ಸಂಪತ್ತಿನೊಳಾದ ಶರಣಾ ॥೪॥

ನೋಟ ಸ್ಥಾವರ ಮಾಟ ಜಂಗಮು ಕೂಟ ಕೂಡಲಚನ್ನಸಂಗನಲ್ಲಿ । ನಾಟಿಸಿದಾಚಾರ ಸುವಿವೇಕದ ಸಘಾಟದ ಸಂಪತ್ತಿನೊಳಾದ ಶರಣಾ ॥೫॥

———

## ೧೨. ಚತುರ್ವಿಧ ಸಾರಾಯಸ್ಥಲ.

**ಸೂತ್ರ:—** ಇಂತು ತ್ರಿವಿಧ ಸಂಪತ್ತಾಲಿಯಾದ ಭಕ್ತನ ಅಂಗದಲ್ಲಿ ಗುರುಭಕ್ತಿ, ಮನದಲ್ಲಿ ಲಿಂಗಭಕ್ತಿ, ಅರಿವಿನಲ್ಲಿ ಜಂಗಮಭಕ್ತಿ ಪರಿಣಾಮದಲ್ಲಿ ಪ್ರಸಾದಭಕ್ತಿ ಸನ್ನಿಹಿತವಾದ ಭೇದವು ಎಂತಿರ್ದುದೆಂದೊಡೆ ಮುಂದೆ ಚತುರ್ವಿಧ ಸಾರಾಯಸ್ಥಲವಾದುದು.

॥ಪದ॥ ರಾಗದೇಶಿ

ಸಾರಾಯ ಚತುರ್ವಿಧವನಾರೈದು ನೋಡಿ ಗುರು । ಕಾರುಣ್ಯದಿಂದೆ ಮಾಡುವದುಚಿತವೂ । ಗುರುಚರಣ ಕಮಲಕ್ಕೆ ॥ ಹರುಷ ದಯ ಚಿತ್ತದಿಂ ! ಶರಿರ ಮರ್ಧಂಚ ಪ್ರಾಣಂಗಳಾ ॥ ಕರಣಸಂಗತಿಗಳನು । ಹರಕರಿಸಲೀಯದೆ । ಪರಿಣಮಿಸಿ ಮಾಡೆ-ಗುರುಭಕ್ತಿ ನೋಡಾ ॥೧॥

ಶಿವಲಿಂಗದಲ್ಲಿ ತ । ನ್ನವಯವಂ ಬೆರಸಿ ಮಾ । ಡುವ ನಿತ್ಯನಿಯಮ ವ್ರತ ನೇಮಂಗಳಾ ಸವೆಯಲೀಯದೆ ಪೂ । ರವಿಸಿ ಮಾಡಲಿಕೆ ಸಂ । ಭವಿಸುವದು ಶಿವ-ಲಿಂಗನೈಷ್ಠೆ ನೋಡಾ ॥೨।

ಹರನ ವೇಷವನೊಲಿದು। ಧರಿಸಿರ್ಪ ಜಂಗಮಕಾ । ದರದಿಂದ ವಸ್ತ್ರಾನ್ನ ಪಾನಂಗಳಾ ॥ ಭರದಿಂದಲಿತ್ತವರ । ವರ ತೃಪ್ತಿ ಬಡಿಸೆ ಸಂ । ವರಿಸುವದು ಜಂಗಮ ಪ್ರೇಮ ನೋಡಾ ॥೩॥

ಆಸಮಾಕ್ತ ಲಿಂಗಕ್ಕೆ ಸ್ವಶರೀರವಿಡಿದು ಭಾ । ವಿಸಿ ಬಂದ ಸಕಲ ಸುಪದಾರ್ಥಂಗಳಾ॥ ಸಸಿನಗೈದಲ್ಲಿ ಯೋ । ಜಿಸಿಯರ್ಪಿಸುತ್ತ ಭೋ । ಗಿಸುವಲ್ಲಿ ಪ್ರಸಾದದೇಹಿ ನೋಡಾ ॥೪॥

ಗುರು ಸದಾಚಾರದಲಿ। ಹರ ಮನೋ ಚಿತ್ತದಲಿ। ವರ ಪ್ರಸಾದವು ಶುದ್ಧ ದೇಹದಲ್ಲಿ ॥ ಪರಿಣಾಮ ಜಂಗಮ । ಸ್ಥಿರಹೇಮದಲ್ಲಿ ನೆಲ । ಸಿರಲು ಚಾತುಷ್ಟಯದ ಒಲಂಮೆ ನೋಡಾ ॥೫॥

ತಮವ ಕಳೆಯಲಿಕೆ ಗುರು । ಭ್ರಮೆಯ ಕಳೆಯಲಿಕೆ ಶಿವ । ಅಮಲ ದೇಹವ ಮಾಳ್ಪ ಪ್ರಸಾದವು ॥ ಸುಮನ ಸುಜ್ಞಾನದಿಂ । ಸಮುಖದ ಜಂಗಮಕಿನಿತು ! ಕ್ರಮವರಿದು ಮಾಡೆ ಸದ್ಭಕ್ತಿ ನೋಡಾ. ॥೬॥

ಸುಲಭರೀ ಚತುರ್ವಿಧದ । ಹೊಲಬ ನೋಡಿಯೆ ತಿಳಿದು ! ಕೆಲಬಲಕೆ ಹರಿಯಲೀಯದೆ ಅರ್ಪಿಸಿ॥ ಕುಲದೀಶ ನಮ್ಮ ಕೂ । ದಲಚನ್ನಸಂಗನೋರಂತೆ । ನೆಲಸಿರ್ಪನಂತ ರಂಗದಲಿ ನೋಡಾ ।೭॥

— — — —

## ೧೩. ಉಪಾಧಿ ಮಾಟಸ್ಥಲ.

**ಸೂತ್ರ:—** ಇಂತು ಚತುರ್ವಿಧ ಸಾರಾಯದಲ್ಲಿ ಸಂಪನ್ನನಾದ ಶ್ರೀಮುಖಂತನು ಸಕಲ ಹಿತೋಪದೇಶ ಕಾರಣಾರ್ಥವಾಗಿ ಮಾಟಕೂಟದ ಪ್ರಾರಂಭಮಂ ನಿರೂಪಿಸುತ್ತಿರಲು ಮುಂದೆ ಉಪಾಧಿ ಮಾಟಸ್ಥಲವಾದುದು.

॥ಪದ॥ ರಾಗ ಮಂಗಳ ಕಾಶಿ

ನಂಬುಗೆಯಿಂದ ಶರಣೆನ್ನಿ ಶ್ರೀಶರಣರಿಗೆ ॥ಪಲ್ಲವ॥

ಶತ ದಶ ದಂತಿ ಸಹಸ್ರ ಲಕ್ಷ ಗೋದಾನ। ಶತ ವಾಜಿ ಅಜಪೆಯು ಕೋಟಿ ಕನ್ಯಾದಾನದ ಫಲ ॥೧॥

ಅತಿಪಾತಕಂಗಳು ಕೋಟ್ಯಾನು ಕೋಟಿ ಭ್ರೂಣಹತ್ಯ । ಶತಲಕ್ಷ ಪಾಪನಾಶನ ಶರಣರ ದರುಶನ ॥೨॥

ಸಪ್ತಸಾಗರ ಪರ್ಯಂತರ ತೀರ್ಥ ಸ್ನಾನದ ಫಲ । ಸ್ವಾರ್ಥವು ಶರಣಾಂಘ್ರಿ ಕಂಕಣಕೆಣೆಯಿಲ್ಲ ॥೩॥

ನಿಮಿಷಂ ನಿಮಿಷಾರ್ಧಂ । ವಾಯತ್ರ ತಿಷ್ಠಂತಿ ಯೋಗಿನಃ ! ಉಮಾನಾಥ ಸಕಲ ತೀರ್ಥ ಸಹಿತನಾಗಿಪ್ಪನಲ್ಲಿ ॥೪॥

ಏಕರುದ್ರ ಲೋಕಾದವತೀರ್ಯ ರುದ್ರಯೆನಲಾ । ಶ್ರೀರುದ್ರ ಲೋಕ ಪಾವನನಾಗಿ ಚರಿಸುವ ॥೫॥

ನಿತ್ಯಂ ವೇದ ಕೋವಿದರೊಂದು ಕೋಟಿ ಯುಂಡಫಲ । ಸತ್ಯಂ ಶಿವ ಯೋಗಿಗೆ ನೀಡಿದೊರ್ಕೆಯನ್ನಕೆಣೆಯಿಲ್ಲ ॥೬॥

ಯತ್ರ ಭುಂಕ್ತೆ ಭಸ್ಮಾಂಗೀ ಯಾವನಾದಡೇನು । ತತ್ರ ಭುಂಕ್ತೆ ಶಿವನಾರೋಗಿಪನಲ್ಲಿ ॥೭॥

ಲಿಂಗಾರ್ಚನಂ ಗೈಯ್ಯುವ ಶ್ವಪಚ ವಿಪ್ರಗಿಂದಧಿಕ । ಲಿಂಗಾರ್ಚನ ವಿಹೀನ ವಿಪ್ರ । ಶ್ವಪಚಗಿಂದತಿ ಕಷ್ಟ ॥೮॥

ಚತುರ್ವೇದಿಯಾದ ವಿಪ್ರ ಶಿವದೀಕ್ಷಾ ವಿಹೀನನಾಗೆ । ನಿಚಿತವ ಗುಣಲಿಕ್ಕದ ಭಕ್ತಂಗ ಘೋರನರಕ ॥೯॥

ಭೂತಿ ರುದ್ರಾಕ್ಷಿ ಲಾಂಛನಧಾರಿಯ ಶಿವನೆಂ । ದಾತನ ಕಾಣುತ್ತಿದ್ದೆರಗದಿರ್ದೊಡೆ ಮುಂದೆ ನರಕ ॥೧೦॥

ಕ್ಷೀಯಂತೆ ಸರ್ವಕರ್ಮಾಣಿ ತನೋಯಜ್ಞಾನ । ಕ್ಷೀಯಂತೆ ವೀರವಕ್ತ್ರ ಹುತ ಹವಿಯಂದುದಾಗಿ ॥೧೧॥

ದೇಶ ನಾಮ ಜಾತಿ ರೂಪು ಸೀಮಾಚಾರ ವಿದ್ಯೆ । ಶೇಷವ ಕಂಡು ಬೆಸಗೊಳ್ಳದೆ ಶರಣನು ತವೆ ಮಾಡಿ ॥೧೨॥

ರೂಪಂ ರೂಪಾನ್ವಿತಂ ಮಲಿನಂ ಮಲಿನಾಂಬರೋ ವಾ । ಯಾವ ಪರಿಯಾಗಿರ್ದಡೇನು ಶಿವಯೋಗಿಯು ಶಿವನೆಂದಿಪ್ಪುದು ॥೧೩॥

ಮಿಥ್ಯಾಪವಾದವನ್ನು ಭಕ್ತರ ಮೇಲಿಕ್ಕಿ ನುಡಿದು । ತಥ್ಯವಪ್ಪ ಕೋಷ್ಠಡಲ್ಲಿ ಬಿದ್ದು ನರಕಕ್ಕಿಳಿವಾ ॥೧೪॥

ಅನ್ಯಭುಕ್ತಾಪವಾದವನ್ನು ಕಾಣದೆ ಲಾಂಛನದ ಮೇಲೆ । ಅನ್ಯಾಯುವ ನುಡಿದು ಕ್ಷಯರೋಗದಿಂ ನರಕಕ್ಕಿಳಿವಾ ॥೧೫॥

ಪಂತಿ ಭೇದ ವಾದಭೇದವಂ ಭಕ್ತರಿಗೆ ಮಾಳ್ಪವನು । ಇಂತು ಗರ್ಭರೋಗದಿಂದ ಘೋರಗತಿಗಿಳಿವಾ ॥೧೬॥

ಇದೆ ಜಂಗಮದೊಳಗಿದ್ದು ಭೋಗವ ಮಾಡುವದೆಂದು । ಸದ್ಗುರು ಶಂಭುಸೋಮೇಶನ ವಚನವ ಕೇಳಿ ॥೧೭॥

---

## ೧೪. ನಿರುಪಾಧಿ ಮಾಟಸ್ಥಲ.

**ಸೂತ್ರ:—** ಇಂತು ಸಕಲ ಭಕ್ತಜನಂಗಳಿಗೆ ಭಕ್ತಿ ಪ್ರಾರಂಭದುದ್ಯೋಗಮಂ ಉಪದೇಶಾರ್ಥವಾಗಿ ನಿರೂಪಿಸಿದ ಮಹಂತನು ತಾನು ಉಪಾಧಿಯು ಹೊದ್ದದೆ ನಿರುಪಾಧಿಕನಾಗಿ ದಾಸೋಹಮಂ ಮಾಡುವ ಪರಿಯಂತಿರ್ದುದೆಂದೊಡೆ ಮುಂದೆ ನಿರುಪಾಧಿ ಮಾಟಸ್ಥಲವಾದುದು.

॥ಪದ॥ ರಾಗ ಮಾಳವಗೌಳ.

ಹಮ್ಮಿಲ್ಲದೆ ಬಿಮ್ಮಿಲ್ಲದೆ ಮಾಟದ । ಹೆಮ್ಮೆಯು ಬೀರದೆ ತನುಮನಧನ ಶಿವ । ಸೊಮ್ಮೆಂದರ್ಪಿಸಬಲ್ಲಾತನೆ ನಿರುಪಾಧಿಕ ದಾಸೋಹಿ ॥ಪಲ್ಲವ॥

ಒಡಲೊಡಲಭಿಮಾನಂಗಳ ಹಂಗಿನೊ । ಳೊಡಗಲಸದೆ ದಾಸೋಹದೊಳಗೆ ಧೃತಿ । ಗೆಡದೆ ನಿರಾಯಾಸದಿಂ ಸರ್ವಾಚಾರದೊಳಗೆ ಎಚ್ಚತ್ತು ॥ ಒಡೆಯರಿಗೊಡವೆಯನೊಪ್ಪಿಸುವಾಳಿನ । ನಡವಳಿಯಂತಿರಲರ್ಥ ಪ್ರಾಣವ । ಹಿಡಿದು ಬಳಸದನವರತಂ ಲಿಂಗಮುಖಕ್ಕೆ ಸವಿಸುತ್ತಿಹುದು. ॥೧॥

ಏನುಂಟಾದ ಪದಾರ್ಥವ ದೇಹಾಭಿಮಾನಕ್ಕೀಯದೆ ಮನದೊಡೆಯಗೆಸು । ಜ್ಞಾನದ ಕೈಯಿಂ ನೀಡುವ ನಿರುತದ ಮಾಟವ ಕೂಟ ಸುಖಿ ।

ಏನೊಂದಣುಮಾತ್ರವು ಭಾವನೆಯೊಳು । ಮಾನಸ ವಾಚಕದೊಳಗಿಲ್ಲದೆ ಪರ । ಮಾನಂದದ ಸುಖದೊಳು ಮಾಡುವ ಮಂಗಳಮಯ ದಾಸೋಹಿ ॥೨॥

ತನುವೆನ್ನದು ಮನವೆನ್ನದು ಮತ್ತಾ । ಧನವೆನ್ನದು ಎಂದೆಂಬ ಬಳಕೆಯ । ನನುಕರಿಸದೆ ನಾನೇ ದಾಸನು ಶಿವನೇ ಪತಿಯೆಂದರಿದು ॥ ಮನಕ್ಕೆ ಮನೋಹರವಾಗಿಹ ಸತ್ಕ್ರಿಯೆ । ಯನು ಭಾವದೊಳು ಸುಖವಡೆದು ನಿರಂತರ ಘನ ಪರಿಣಾಮದ ಬಯಕೆಯೊಳಿಪ್ಪಾತನೆ ಸಾತ್ವಿಕ ಭಕ್ತಾ ॥೩॥

ಖ್ಯಾತಿಯ ಲಾಭದ ಪೂಜೆಯ ಫಲಗಳ । ನೇತಿಗಳೆದು ಸದ್ಭಕ್ತಿರತಿಯೊಳತಿ । ಭೀತಿವಡೆದು ಕಿಂಕರಭೃತ್ಯಾಚಾರಸ್ಥಲ ನಿಜವಾಗಿ ॥ ಸೋತು ಶರಣರೊಳು ಗೆಲಲರಿಯದೆ ಸಂ । ಪ್ರೀತಿವಡೆದು ಸಜ್ಜನ ಶುದ್ಧನೆನಿಸಿರ್ಪ । ತನೆ ಜಂಗಮಲಿಂಗಕ್ಕಾಶ್ರಯವೆನಿಸುವ ದಾಸೋಹಿ ॥೪॥

ಒಡೆಯರಿಗೊಡವೆಯನೊಪ್ಪಿಸಿ ಶುದ್ಧನು । ಎಡೆಯೊಳಗಾ ಊಡಿದುದಿಲ್ಲೆಂ । ದೊಡಲವ ಗುಣವನಡಗಿಸಿ ನಿರಹಂಭಾವದೊಳಗೆ ನಲಿಸಂದು ॥ ಮೃಡನ ಶರಣರನು ಕಂಡವರಡಿಗಳ । ಪಿಡಿದು ಸದಾ ಸುಖಿಯಾಗಿರ್ಪರ ಮೆ ॥ ಲ್ಲಡಿಗಳೊಳಗೆ ಹಾವುಗೆಯಾಗಿರಿಸೆನ್ನನು ಸಂಗಪ್ರಭುವೆ ॥೫॥

---

## ೧೫. ಸಹಜ ಮಾಟಸ್ಥಲ.

**ಸೂತ್ರ**:— ಇಂತು ಶ್ರೀಲಿಂಗಜಂಗಮದಲ್ಲಿ ನಿರುಪಾಧಿಕನಾಗಿ, ಕರ್ತೃಭೃತ್ಯಭಾವದಿಂದ ದಾಸೋಹವ ಮಾಡಿದ ಮಹಂತನು ತಾ ಮಾಡುವ ಮಾಟದೊಳಗೆಯು ಮಾಡಿಸಿಕೊಂಬ ವಸ್ತುವಿನೊಳಗೆಯು ಅವಿನಾಭಾವವೆಂಬ ಕೃತನಿಶ್ಚಯವಳವಡಲು, ಮುಂದೆ ಸಹಜ ಮಾಟಸ್ಥಲವಾದುದು.

॥ಪದ॥ ರಾಗ ವಸಂತ

ಅರಿಯೆ ನಾ ನಿಮ್ಮನುಪಚಾರಂಗಳ । ಅರಿಯೆನೆಂದು ಮಾಡಲು ನಾನರಿಯೆ. ॥ಪಲ್ಲವ॥

ಮಾಟದ ಕೂಟದ ಭೇದವನರಿಯೆನು । ಕೂಟದ ಮಾಟದ ಸಂಚುವನರಿಯೆನು । ನಾಟಿಸಿದಾಚಾರದ ಸುವಿವೇಕವ ಮುನ್ನವೆ ನಾನರಿಯೆ ॥೧॥

ತನುವೆನಗಿಲ್ಲಯ್ಯಾ ತನುವೀವಡೆ । ಮನವೆನಗಿಲ್ಲಯ್ಯಾ ಮನವೀವಡೆ । ಧನವೆನಗಿಲ್ಲಯ್ಯಾ ಧನವೀವಡೆ ಸರ್ವವು ನಿಮ್ಮದಾಗಿ ॥೨॥

ಮಾಡುವ ನೀನೆ ಮಾಡಿಸಿಕೊಂಬ । ರೂಢಿಗೀಶ ನೀನಾದ ಬಳಿಕ ನಾ । ಮಾಡಿದೆನೆಂಬರುವಿಂಗೆಡೆಯನು ಕಾಣೆನು ನಿಜವೆಡೆಗೊಡದಾಗಿ ॥೩॥

ಸೂಚನೆ: [illegible] 15 [illegible] 1941 [illegible] 353 ರಿಂದ 362 [illegible]

# ಬಸವೇಶ್ವರನ ಚರಿತ್ರೆ.

## ೧ನೇ ಅಧ್ಯಾಯ

ಬಸವೇಶ್ವರನ ಚರಿತ್ರೆಯನ್ನು ಬರೆಯುವದಕ್ಕೋಸ್ಕರ ಬಹುಜನರು ಯಾವಾಗಲೂ ನಮಗೆ ಸೂಚಿಸುತ್ತಾ ಬಂದಿದ್ದಾರೆ. ಆದರೆ ಈ ಕಾರ್ಯವು ಬಹಳ ಬಿಕ್ಕಟ್ಟಿನದೆಂದು ನಮಗೆ ತೋರಿದ್ದರಿಂದ ಈ ಸಾಹಸವನ್ನು ನಾವು ಕೈಕೊಂಡಿರುವದಿಲ್ಲ. ಯಾಕಂದರೆ ಬಸವೇಶ್ವರನ ವಿಷಯವಾಗಿ ನಂಬಲರ್ಹವಾದ ಸಂಗತಿಗಳು ಸಾಕಷ್ಟು ಪ್ರಮಾಣದಿಂದ ದೊರೆಯುವದಿಲ್ಲ. ಅವನ ಚರಿತ್ರೆಗಳುಳ್ಳ ಗ್ರಂಥಗಳು ಅನೇಕವಿರುತ್ತವೆಂಬುದು ನಿಜವು. ಆದರೆ ಅವುಗಳಲ್ಲಿ ನಿರ್ದೇಶಿಸಲ್ಪಟ್ಟ ಸಂಗತಿಗಳು ಎಷ್ಟರ ಮಟ್ಟಿಗೆ ನಂಬಲರ್ಹವಾದವುಗಳೆಂಬುದನ್ನು ಕಂಡುಹಿಡಿಯುವದು ಬಹಳ ದುಸ್ತರವಿರುತ್ತದೆ. ಆದರೆ ಈಚೀಚೆಗೆ ಅವನ ಕಾಲಕ್ಕಿನ ವಾಙ್ಮಯವು ಪ್ರಸಿದ್ಧವಾಗುತ್ತ ಬಂದಿದೆ. ಅನೇಕ ಮಹತ್ವದ ಶಿಲಾಶಾಸನಗಳೂ ಪ್ರಕಾಶಕ್ಕೆ ಬಂದಿರುತ್ತವೆ. ಅಲ್ಲದೆ ಅನೇಕ ಸ್ಥಾನಿಕ ಐತಿಹ್ಯಗಳೂ ವೀರಶೈವ ಕ್ಷೇತ್ರಗಳ ವರ್ಣನೆಗಳೂ ಹೊರಪಟ್ಟಿರುತ್ತವೆ. ಇವುಗಳ ಸಹಾಯದಿಂದ ಅವನ ಚರಿತ್ರೆಯಲ್ಲಿಯ ನಿಜಾಂಶಗಳನ್ನು ಕಂಡು ಹಿಡಿಯುವದು ಕೆಲಮಟ್ಟಿಗೆ ಶಕ್ಯವಾಗಿರುವದರಿಂದ ಈ ವಿಷಯವನ್ನು ಕುರಿತು ನಾವು ಈಗ ಚರ್ಚಿಸಲು ಅಪೇಕ್ಷಿಸಿದ್ದೇವೆ.

ಬಸವೇಶ್ವರನ ಚರಿತ್ರೆಯನ್ನು ಮೊದಲಿನ ಕಾಲದಲ್ಲಿ ಅನೇಕ ವೀರಶೈವ ಕವಿಗಳು ಬರೆದಿದ್ದಾರೆ. ಅವರಲ್ಲಿ ಹರಿಹರನು ಮೊದಲನೆಯವನೆಂದು ಹೇಳಬಹುದು. ಅವನು ಬರೆದ 'ಬಸವರಾಜ ರಗಳೆಯು' ಬಹು ಪ್ರಸಿದ್ಧವಾಗಿರುತ್ತದೆ. ಪಾಲ್ಕುರಿಕೆ ಸೋಮಾರಾಧ್ಯನು ಬಸವೇಶ್ವರನ ಚರಿತ್ರೆಯನ್ನು ಆಂಧ್ರ ಭಾಷೆಯಲ್ಲಿ ಬರೆದನು. ಆಮೇಲೆ ಇದನ್ನು ಅನುಸರಿಸಿ ಭೀಮ ಕವಿಯು ಕನ್ನಡದಲ್ಲಿ ಬಸವ ಪುರಾಣವನ್ನು ಬರೆದನು. ಆದರೆ ಈ ಮೂವರು ಮಹಾ ಕವಿಗಳಲ್ಲಿ ಯಾರೂ ಬಸವನ ಸಮಕಾಲೀನರಲ್ಲ. ಸೋಮಾರಾಧ್ಯನು ಆಂಧ್ರ ದೇಶದವನು. ಹಾಗೆಯೇ ಭೀಮ

ಕವಿಯಾದರೂ ಆಂಧ್ರ ದೇಶಕ್ಕೆ ಸಮೀಪವರ್ತಿಯಾದ ಪ್ರಾಂತದವನು. ಇವರು ಬಸವೇಶ್ವರನಿದ್ದ ಪ್ರಾಂತದಿಂದ ಬಹು ದೂರದಲ್ಲಿದ್ದು ಕೇವಲ ಜನರ ಹೇಳಿಕೆಗಳ ಮೇಲಿಂದ ಅವನ ಚರಿತ್ರೆಯನ್ನು ಬರೆದಿರಬೇಕೆಂದು ತೋರುತ್ತದೆ. ಹರಿಹರನ ಸ್ಥಿತಿಯಾದರೂ ಹೀಗೆಯೇ ಇರುತ್ತದೆ. ಅವನು ದಕ್ಷಿಣ ದೇಶದಲ್ಲಿ ಹೆಚ್ಚಾಗಿ ಇದ್ದವನು. ಅವನು ತನ್ನ ಒಂದು ರಗಳೆಯಲ್ಲಿ ಕೂಡಲಸಂಗಮ ದೇವಸ್ಥಾನವು ಬಾಗೇವಾಡಿ ಗ್ರಾಮದಿಂದ ಪೂರ್ವಕ್ಕೆ ಇರುತ್ತದೆಂದು ಬರೆದಿದ್ದಾನೆ. ಇದರ ಮೇಲಿಂದ ಅವನು ಬಾಗೇವಾಡಿಯು ನ್ನಾಗಲಿ ಇಲ್ಲವೆ ಕೂಡಲಸಂಗಮ ಸ್ಥಾನವನ್ನಾಗಲಿ ಪ್ರತ್ಯಕ್ಷ ನೋಡಿದಂತೆ ಕಾಣುವದಿಲ್ಲ. ಯಾಕೆಂದರೆ ಬಾಗೇವಾಡಿಯ ದಕ್ಷಿಣ ದಿಕ್ಕಿಗೆ ಕೂಡಲ ಸಂಗಮ ದೇವಾಲಯವು ಇರುತ್ತದೆ. ಆದರೂ ಹರಿಹರನ ಕಾಲವು ಬಸವೇಶ್ವರನಿಗೆ ಸಮೀಪವಾಗಿರುವದರಿಂದ ಅವನ ಕಾಲದಲ್ಲಿ ಅನೇಕ ದಂತ ಕಥೆಗಳು ಬಸವೇಶ್ವರನ ಬಗ್ಗೆ ಉತ್ಪನ್ನವಾಗಿದ್ದರೂ ಕೂಡ ಅವನು ಯಾವಾಗಲೂ ತಾನು ನಿರೂಪಿಸುವ ವಿಷಯಗಳನ್ನು ಅತಿಶಯೋಕ್ತಿಯನ್ನು ಮಾಡಿ ಬಹುಶಃ ಹೇಳುವದಿಲ್ಲ. ಆದ್ದರಿಂದ ಅವನ ವಿವರಣೆಗಳಿಗೆ ನಾವು ಮಹತ್ವವನ್ನು ಕೊಡಬೇಕಾಗುತ್ತದೆ. ಮುಂದೆ ೧೫ನೇ ೧೬ನೇ ಶತಮಾನಗಳಲ್ಲಿ ಅನೇಕ ವೀರಶೈವ ಗ್ರಂಥಗಳು ವಿದ್ವಜ್ಜನರಿಂದ ಬರೆಯಲ್ಪಟ್ಟವೆ. ಆಗ ಬಸವೇಶ್ವರನ ಕಾಲದ ಗ್ರಂಥಗಳನ್ನು ಸಂಗ್ರಹಿಸುವ ಪ್ರಯತ್ನಗಳೂ ನಡೆದವು. ಆದರೆ ಆ ಕಾಲದಲ್ಲಿ ರಚಿಸಲ್ಪಟ್ಟ ಗ್ರಂಥಗಳಲ್ಲಿ ಸಹ ಬಸವೇಶ್ವರನ ಬಗ್ಗೆ ವಿವರಣೆಗಳು ಹೆಚ್ಚಾಗಿ ಕಂಡುಬರುವದಿಲ್ಲ. ಅವನ ಸ್ತೋತ್ರಗಳುಳ್ಳ ಪದ್ಯಗಳು ಮಾತ್ರ ಹೇರಳವಾಗಿ ದೊರೆಯುತ್ತವೆ. ಅವುಗಳಲ್ಲಿ ಐತಿಹಾಸಿಕ ಕಥಾಭಾಗಗಳು ಅತ್ಯಲ್ಪವಾಗಿರುತ್ತವೆ. ಈ ಗ್ರಂಥಗಳಲ್ಲದೆ ಕಾಲಜ್ಞಾನವೆಂಬ ಹೆಸರಿನ ಅನೇಕ ಗ್ರಂಥಗಳು ಬೇರೆ ಬೇರೆ ಕಾಲಗಳಲ್ಲಿ ಬರೆಯಲ್ಪಟ್ಟಿರುತ್ತವೆ. ಅವುಗಳಲ್ಲಿ ಹಿಂದಿನ ಕಾಲದಲ್ಲಿ ಆಗಿಹೋದ ಐತಿಹಾಸಿಕ ವಿಷಯಗಳು ಅಲ್ಲಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಬಸವೇಶ್ವರನ ವಿವರಣೆಗಳಿರುತ್ತವೆ. ಆದರೆ ಅವುಗಳಲ್ಲಿ ದಂತ ಕಥೆಗಳೇ ಹೆಚ್ಚಾಗಿ ತುಂಬಿರುತ್ತವೆ. ಇದಲ್ಲದೆ ವೀರಶೈವ ಸಮಾಜದಲ್ಲಿ ಕಾಲ ಕಾಲಕ್ಕೆ ಉತ್ಪನ್ನರಾದ ಶಿವಶರಣರ ಚರಿತ್ರೆಗಳನ್ನು ಸಂಗ್ರಹಿಸುವ ಪದ್ಧತಿಯು ಹಿಂದುಗಡೆ ಉಂಟಾದದ್ದು ಕಂಡುಬರುತ್ತದೆ ಅವುಗಳಲ್ಲಿ ಆಗಿಂದಾಗ್ಗೆ ಐತಿಹಾಸಿಕ ಮತ್ತು ಚರಿತ್ರಾತ್ಮಕ ವಿಷಯಗಳಿರುತ್ತವೆ. ಶರಣ ಲೀಲಾಮೃತ ಮತ್ತು ಭೈರವೇಶ್ವರ ಕಾವ್ಯ

ಮೊದಲಾದ ಪುರಾಣಗಳಲ್ಲಿಯ ಕಥೆಗಳು ಈ ವರ್ಗದಲ್ಲಿ ಬರುತ್ತವೆ. ಅವು ಬಹುತರವಾಗಿ ಗದ್ಯ, ಸಾಂಗತ್ಯ ಅಥವಾ ಚೌಪದಿಗಳಲ್ಲಿ ಬರೆಯಲ್ಪಟ್ಟಿರುತ್ತವೆ. ಆದರೆ ಬಸವೇಶ್ವರನ ಬಗ್ಗೆ ಈ ಗ್ರಂಥಗಳಲ್ಲಿ ನಿರೂಪಿಸಲ್ಪಟ್ಟ ವಿಷಯಗಳಲ್ಲಿ ಏಕ ವಾಕ್ಯತೆಯು ಇರುವದಿಲ್ಲ. ವೀರಶೈವ ಗ್ರಂಥಗಳ ಪರಿಸ್ಥಿತಿಯು ಹೀಗೆ ಇರುವದು ಕಂಡುಬರುತ್ತದೆ.

ಬಸವೇಶ್ವರನ ವಿಷಯವಾಗಿ ಇತರ ಧರ್ಮೀಯರು ಅವರಲ್ಲಿ ಮುಖ್ಯವಾಗಿ ಜೈನರು ಕೆಲವು ಗ್ರಂಥಗಳನ್ನು ಬರೆದಿರುತ್ತಾರೆ. ಆದರೆ ಇವೆಲ್ಲವುಗಳು ಈ ಮಹಾಪುರುಷನ ಬಗ್ಗೆ ದ್ವೇಷಬುದ್ಧಿಯಿಂದ ಬರೆದವುಗಳಿರುವದು ಅವುಗಳನ್ನು ನೋಡಿದ ಕೂಡಲೇ ಗೊತ್ತಾಗುತ್ತದೆ. ನಂಬಲರ್ಹವಾದವುಗಳಲ್ಲದ ಅನೇಕ ಸಂಗತಿಗಳು ಅವುಗಳಲ್ಲಿ ನಿರೂಪಿಸಲ್ಪಟ್ಟಿರುತ್ತವೆ. ಇದಲ್ಲದೆ ಅವುಗಳನ್ನು ಬರೆದವರಾರೂ ಬಸವೇಶ್ವರನಿಗೆ ಸಮಕಾಲೀನರಲ್ಲ.

ಹಿಂದುಸ್ತಾನದಲ್ಲಿ ಈ ವರೆಗೆ ಅನೇಕ ಧರ್ಮಸ್ಥಾಪಕರೂ, ಧರ್ಮಪ್ರಸಾರಕರೂ ಆಗಿಹೋಗಿದ್ದಾರೆ. ಆದರೆ ನಿಜಾಂಶಗಳುಳ್ಳ ಅವರ ಚರಿತ್ರೆಗಳು ಕೆಲಮಟ್ಟಿಗಾದರೂ ಉಪಲಬ್ಧವಿವೆ. ಆದ್ದರಿಂದ ಆ ಮಹಾನುಭಾವರ ವಿಷಯವಾಗಿ ಆದರ ಭಾವವು ಇಡೀ ದೇಶದಲ್ಲಿ ಉಂಟಾಗಲು ಕಾರಣವಾಗಿರುತ್ತದೆ. ಅಂಥ ಮಹಾಪುರುಷರಲ್ಲಿ ಬಸವೇಶ್ವರನು ಒಬ್ಬನಾಗಿದ್ದಾನೆ. ಅವನು ಸಮಾಜದಲ್ಲಿ ಒಂದು ಮಹತ್ವದ ಧಾರ್ಮಿಕ ಕ್ರಾಂತಿಯನ್ನು ಮಾಡಿದವನೂ, ಸಮಾಜ ಸುಧಾರಕನೂ ಆಗಿದ್ದಾನೆ. ಯಾವ ಸುಧಾರಣೆಗಳು ಸಾಂಪ್ರತ ಕಾಲದಲ್ಲಿ ದುಸ್ತರವಾದುವೆಂದು ಭಾವಿಸಲ್ಪಟ್ಟಿರುತ್ತವೆಯೋ ಅಂಥವುಗಳನ್ನು ಸಹ ಅವನು ವ್ಯವಹಾರದಲ್ಲಿ ತಂದವನಾಗಿದ್ದಾನೆ. ಚಿಕ್ಕಂದಿನಿಂದ ಮರಣಹೊಂದುವ ವರೆಗೂ ಅವನು ಕಷ್ಟಭೋಗಿಸಿರುತ್ತಾನೆ. ಸ್ವಬಾಂಧವರು, ರಾಜರು, ಇತರ ಸಮಾಜದವರು ಕೊಟ್ಟ ಅನೇಕ ತೊಂದರೆಗಳಿಗೆ ಅವನು ಈಡಾಗಿದ್ದಾನೆ. ಆದರೂ ಅವನು ದೇಶದಲ್ಲಿ ಒಂದು ಮಹತ್ವದ ಕ್ರಾಂತಿಯನ್ನುಂಟು ಮಾಡಲು ಸಮರ್ಥನಾದನು. ಇಂಥವನ ಪೂರ್ಣ ಚರಿತ್ರೆಯು ಗೊತ್ತಾಗದೆ ಇದ್ದುದು ವೀರಶೈವರಿಗಷ್ಟೇ ಅಲ್ಲ. ಕರ್ನಾಟಕಕ್ಕೂ ಹಿಂದುಸ್ತಾನಕ್ಕೂ ದುರ್ದೈವದ ಸಂಗತಿಯಾಗಿದೆ.

ಅವನ ಚರಿತ್ರೆಯು ಉಪಲಬ್ಧವಾಗದಿರಲಿಕ್ಕೆ ಕೆಲವು ಕಾರಣಗಳಿವೆ. ಅವನ ಚಳವಳಿಯಿಂದ ದೇಶದಲ್ಲಿ ಒಂದು ಕ್ಷೋಭವು ಎದ್ದಿತು. ಅವನು ಧರ್ಮಬಾಹಿರನೆಂದು ಮೊದಲು ಎಣಿಸಲ್ಪಟ್ಟನು. ಹೀಗೆ ಎಣಿಸಲ್ಪಟ್ಟವನ ಚರಿತ್ರೆಯನ್ನು ಆಗಿನವರು ಬರೆಯುವರಾರು ? ಆರಂಭ ಕಾಲದಲ್ಲಿ ಬಸವೇಶ್ವರನಿಗೆ ಸಹಾಯವಾದವರು ಪ್ರಮುಖ ಸಮಾಜದವರಿರದೆ ಒಬ್ಬ ಅಗಸ, ಒಬ್ಬ ಕಿನ್ನರೀ ಬಾರಿಸುವವ, ಒಬ್ಬ ಮದ್ದಲಿಗ, ಒಬ್ಬ ಒಡ್ಡರ ನಾಯಕ, ಒಬ್ಬ ನಾಪಿತ, ಹೊಲೆಯ, ಘೋರ, ಕಟ್ಟಿಗೆಯನ್ನು ಮಾರಿ ಉಪಜೀವಿಸುವವನೊಬ್ಬ, ದೇಶತ್ಯಾಗ ಮಾಡಿದ ಒಬ್ಬ ಸ್ತ್ರೀಯಳು ಇಂಥವರೇ ಇದ್ದಾರೆ. ಕ್ರೈಸ್ತನಿಗೆ ಮೊದಲು ಅನುಯಾಯಿಗಳಾದವರು ಇಂಥವರೇ. ಮುಹಮ್ಮದ, ಬುದ್ಧ ಇವರ ಸ್ಥಿತಿಯಾದರೂ ಹೀಗೆಯೇ ಇದೆ. ಮೇಲಿನ ತರಗತಿಯ ಸಮಾಜದವರು ಇಂಥ ಮಹಾತ್ಮರನ್ನು ಆರಂಭದಲ್ಲಿ ಪೀಡಿಸುತ್ತಾರೆ. ಈ ಸ್ಥಿತಿಯಲ್ಲಿ ಇವರ ಚರಿತ್ರೆಗಳನ್ನು ಸಮಕಾಲೀನರು ಹೇಗೆ ಬರೆದಿಡಬೇಕು ? ಮೇಲ್ತರಗತಿಯವರು ಬರೆಯುವ ಸಂಭವವಿಲ್ಲ. ಕೆಳಗಿನವರು ಪೀಡಿಸಲ್ಪಟ್ಟವರು, ವಿಪನ್ನ ಸ್ಥಿತಿಯಲ್ಲಿದ್ದವರು. ಆದ್ದರಿಂದ ಇಂಥ ಮಹಾನುಭಾವರ ಚರಿತ್ರೆಗಳನ್ನು ಬರೆದಿಡುವ ಕಾಲವು ಮುಂದೆ ನೂರಿನ್ನೂರು ವರ್ಷಗಳ ಮೇಲೆ ಬರುತ್ತದೆ. ಆದರೆ ಈ ಅವಧಿಯಲ್ಲಿ ಅವರ ಬಗ್ಗೆ ಅನೇಕ ದಂತ ಕಥೆಗಳು ಉತ್ಪನ್ನವಾಗುತ್ತವೆ. ಭಾವಿಕ ಜನರು ಅಂಥವುಗಳನ್ನು ಸಂಗ್ರಹಿಸಿ ಈ ಮಹಾನುಭಾವರ ಚರಿತ್ರೆಗಳನ್ನು ಹಿಂದುಗಡೆ ಬರೆದಿಡುತ್ತಾರೆ. ಇದೇ ಸ್ಥಿತಿಯು ಬಸವೇಶ್ವರನ ಚರಿತ್ರೆಯದಾಗಿದೆ.

ಬಸವೇಶ್ವರನು ಕಷ್ಟದಿಂದಲೇ ತನ್ನ ಜೀವಿತಕ್ರಮವನ್ನು ಪ್ರಾರಂಭಿಸಿದನು. ಆದರೆ ಅವನು ತನ್ನ ತತ್ವವನ್ನು ಬಿಡಲು ಒಪ್ಪಲಿಲ್ಲ. ತನ್ನ ಮನೆ ಮಾರು ದೇಶಕೋಶಗಳನ್ನು ತೊರೆದನು. ಆದರೆ ಮುಂದೆ ಅವನು ಒಂದು ಮಹತ್ವದ ರಾಜ್ಯದಲ್ಲಿ ಶ್ರೇಷ್ಠ ಸ್ಥಾನವನ್ನು ಪಡೆದನು. ಆದರೆ ಅವನು ಅಲ್ಲಿ ಇದ್ದದ್ದು ೫-೬ ವರ್ಷ ಮಾತ್ರ. ಇಷ್ಟರಲ್ಲಿಯೇ ದೇಶದಲ್ಲಿ ಅವನಿಂದ ಒಂದು ಮಹತ್ತರವಾದ ಕ್ರಾಂತಿಯುಂಟಾಯಿತು. ಆ ಕ್ರಾಂತಿಯ ಮೂಲಕ ರಾಜರು ಮೊದಲ್ಗೊಂಡು ಆಗಿನ ಎಲ್ಲ ಪ್ರಮುಖ ಸಮಾಜದವರು ಬಸವೇಶ್ವರನನ್ನೂ ಅವನ ಅನುಯಾಯಿಗಳನ್ನೂ ಸಂಪೂರ್ಣ ನಾಶ ಮಾಡುವ ಪ್ರಯತ್ನದಲ್ಲಿ ತೊಡಗಿದರು. ಆಗ ಇವರು ಅರಣ್ಯವನ್ನು ಸೇರಬೇಕಾಯಿತು. ಅಲ್ಲಿ ಅವರು

ನಾಶವಾದರು. ಆದರೆ ಅವ್ವರಲ್ಲಿ ಬಸವೇಶ್ವರನು ಸಮಾಜದಲ್ಲಿ ಬಿತ್ತಿದ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣೆಯ ಬೀಜಗಳು ಆ ಅರಣ್ಯ ಪ್ರದೇಶದಲ್ಲಿ ನಾಶಹೊಂದಲಿಲ್ಲ. ಅವು ಮುಂದೆ ಮೊಳೆತು ಮರವಾಗಿ ಬೆಳೆದು ಎಲ್ಲ ಕಡೆಗೂ ಪಸರಿಸಿದವು. ಹೀಗೆ ದೇಶದಲ್ಲಿ ಮೊದಲು ಕ್ರಾಂತಿಯುಂಟಾಗಿ ಎಲ್ಲೆಲ್ಲಿಯೂ ಅರಾಜಕತೆಯಾಗಲು ಇದಕ್ಕೆ ಕಾರಣನಾದವನ ಚರಿತ್ರೆಯನ್ನು ಆಗಿನವರು ಬರೆದಿಡುವವರಾರು ? ಇದರಿಂದ ಬಸವೇಶ್ವರನ ಚರಿತ್ರೆಯು ಆಗ ಬರೆಯಲ್ಪಟ್ಟಂತೆ ತೋರುವದಿಲ್ಲ. ಆದರೆ ಮುಂದೆ ಒಂದೆರಡು ತಲಾಂತರಗಳು ಸಂದಿ ಹೋದಬಳಿಕ ಅವನ ಚರಿತ್ರೆಗಳು ಬರೆಯಲ್ಪಡಹತ್ತಿದವು. ಅಷ್ಟರಲ್ಲಿ ಅವನ ವಿಷಯವಾಗಿ ಅನೇಕ ದಂತ ಕಥೆಗಳು ಉತ್ಪನ್ನವಾಗಿದ್ದವು. ಮತ್ತು ಅವುಗಳಲ್ಲಿ ಅವನ ಚರಿತ್ರೆಯ ನಿಜಾಂಶಗಳು ಅಡಗಿ ಹೋಗಿದ್ದವು. ಆದರೆ ಮುಂದೆ ಕೆಲವು ಕಾಲದ ಮೇಲೆ ಮಠಾಧಿಕಾರಿಗಳು ಈ ಶಿವಶರಣರ ಬಗ್ಗೆ ಪುರಾಣಗಳನ್ನು ಬರೆಯಹತ್ತಿದರು. ಈ ಪುರಾಣಕರ್ತರು ತಮ್ಮ ಪುರಾಣಗಳ ಮೂಲಕ ಅಂಧಶ್ರದ್ಧೆಯನ್ನು ಅಜ್ಞ ಜನರಲ್ಲಿ ಹೆಚ್ಚಿಸುವ ಉದ್ದೇಶವುಳ್ಳವರಾದದ್ದರಿಂದ ನಾನಾ ಬಗೆಯ ಕಟ್ಟು ಕಥೆಗಳನ್ನು ಅವರು ಇವುಗಳಲ್ಲಿ ಸೇರಿಸಿದರು. ಈ ಪ್ರಕಾರ ಮಿತ್ರರೂ ಶತ್ರುಗಳೂ ಎಲ್ಲರೂ ಕೂಡಿ ಬಸವೇಶ್ವರನು ಮಾಡಿದ ಮಹತ್ಕಾರ್ಯಗಳನ್ನು ಯಾರೂ ಅರಿಯದಂತೆ ಮಾಡಿಬಿಟ್ಟಿದ್ದಾರೆ ! ಈ ತರದ ಪರಿಸ್ಥಿತಿಯು ಹಿಂದುಸ್ತಾನದಲ್ಲಿ ಆಗಿಹೋದ ಒಬ್ಬ ಮಹಾಪುರುಷನ ಚರಿತ್ರೆಯ ಬಗ್ಗೆ ಉಂಟಾಗಿರುವದು ಅತ್ಯಂತ ಖೇದಕರವಾಗಿದೆ.

ಈ ಸ್ಥಿತಿಯಲ್ಲಿ ಬಸವೇಶ್ವರನ ಚರಿತ್ರೆಯನ್ನು ಯಾವುದಾದರು ಒಂದು ಗ್ರಂಥವನ್ನು ಅವಲಂಬಿಸಿ ಬರೆಯಲಿಕ್ಕೆ ಬರಲಾರದು. ಅವನ ಬಗ್ಗೆ ಹೇಳಿದ ಪ್ರತಿಯೊಂದು ವಿಷಯವನ್ನು ನಾವು ಶೋಧಿಸಬೇಕಾಗುತ್ತದೆ. ಈಗ ಯಾವದನ್ನೂ ನಾವು ನಂಬಲಿಕ್ಕೆ ಬರದಂತೆ ಆಗಿದೆ- ಆದರೂ ನಾವು ನಿರಾಶರಾಗುವ ಕಾರಣವಿಲ್ಲ. ಯಾಕಂದರೆ ಅವನ ವಿಷಯವಾಗಿ ಬರೆಯಲ್ಪಟ್ಟ ಗ್ರಂಥಗಳನ್ನು ನಾವು ಸೂಕ್ಷ್ಮವಾಗಿ ನಿರೀಕ್ಷಿಸಿದಲ್ಲಿ ಅವುಗಳಲ್ಲಿ ನಿಜೇತಿಹಾಸದ ಕಣಗಳಿವೆ ಎಂಬದು ತಿಳಿದುಬರುತ್ತದೆ. ಆದರೆ ಈ ಕಣಗಳು ನಿಜವಲ್ಲದ ಸಂಗತಿಗಳಿಂದ ಮುಚ್ಚಿಹೋಗಿರುತ್ತವೆ. ಹೀಗೆ ಅವು ಮರೆಯಾಗಿದ್ದರೂ ಅವುಗಳ ಹೊಳಪು ಹೋಗಲಾರದು. ಇಂಥ ಕಣಗ

ಳನ್ನು ನಾವು ಆಯ್ದುಕೊಳ್ಳಬೇಕು. ಅವುಗಳನ್ನು ಆಯ್ದು ಸರಗೊಳಿಸಿ ತೋಣಿಸುವ ಪ್ರಯತ್ನ ಮಾಡಿದಲ್ಲಿ ಬಸವೇಶ್ವರನ ಚರಿತ್ರೆಯನ್ನು ಬರೆಯು ವದು ಶಕ್ಯವಾಗುತ್ತದೆ.

ಹೀಗೆ ಸಿದ್ಧಪಡಿಸಿದ ಚರಿತ್ರೆಯು ಸಣ್ಣದಾಗಬಹುದು. ಆದರೆ ಅದರ ಮಹತ್ವವು ಕಡಿಮೆಯಾಗಲಾರದು. ಈಗ ಸಾಮಾನ್ಯವಾಗಿ ಜನರು ಮಹಾಪುರುಷರ ಜೀವಿತದಲ್ಲಿ ಆಗಿಹೋಗಿರುವ ಸಣ್ಣ ದೊಡ್ಡ ಸಂಗತಿಗಳ ನ್ನೆಲ್ಲ ತಿಳಿಯಲು ಅಪೇಕ್ಷಿಸುತ್ತಾರೆ. ಆದರೆ ಈ ರೀತಿಯಾಗಿ ಹಿಂದುಸ್ತಾನ ದಲ್ಲಿಯ ಧಾರ್ಮಿಕ ಪುರುಷರ ಚರಿತ್ರೆಗಳನ್ನು ಬರೆಯಲಿಕ್ಕೆ ಬರಲಾರದು. ಈಗಿನವರಂತೆ ಅವರು ತಮ್ಮದನ್ನು ಎಂದೂ ಹೇಳಿಕೊಂಡಿಲ್ಲ. ಈ ಪರಿಸ್ಥಿ ತಿಯು ಬಸವೇಶ್ವರನ ಚರಿತ್ರೆಯಲ್ಲಿಯೂ ಕಂಡುಬರುತ್ತದೆ. ಈ ಸ್ಥಿತಿಯಲ್ಲಿ ಅವನ ಚರಿತ್ರೆಯಲ್ಲಿ ಅವನು ಆಗಿನ ಕಾಲದಲ್ಲಿ ಯಾವ ಧೋರಣದಿಂದ ನಡೆದನು, ಯಾವ ಕಾರ್ಯಗಳನ್ನು ಕೈಕೊಂಡನು, ಯಾವ ಬಗೆಯ ಕ್ರಾಂತಿ ಯನ್ನು ಮಾಡಿದನು, ಅವುಗಳನ್ನು ಸರ್ವಸಾಧಾರಣವಾಗಿ ತಿಳಿಯಲು ಶಕ್ಯವಿರು ತ್ತದೆ. ಈ ದೃಷ್ಟಿಯನ್ನು ಮುಖ್ಯವಾಗಿಟ್ಟುಕೊಂಡು ನಾವು ಅವನ ಚರಿತ್ರೆ ಯನ್ನು ಸಂಶೋಧಿಸಬೇಕಾಗಿರುತ್ತದೆ.

ಬಸವೇಶ್ವರನ ಚರಿತ್ರೆಗಳಲ್ಲಿ ಆವ ಸಂಗತಿಗಳು ನಂಬಲು ಅರ್ಹವಾ ದುವು ಎಂಬುದನ್ನು ಕಂಡುಹಿಡಿಯಲಿಕ್ಕೆ ಏನಾದರೂ ಸಾಧನಗಳಿ ವೆಯೇ ಹೇಗೆ ಎಂದು ಅನೇಕರು ಪ್ರಶ್ನೆಮಾಡಬಹುದು. ಅವರಿಗೆ ಇಂಥ ಸಾಧನಗಳು ಈಚೆಗೆ ಉಪಲಬ್ಧವಾಗಹತ್ತಿವೆ ಎಂದು ನಾವು ಹೇಳಬಹುದಾ ಗಿದೆ. ಅವು ಯಾವವೆಂದರೆ:—

(೧) ಶಿಲಾಶಾಸನಗಳು:— ದೇಶದ ಮತ್ತು ವ್ಯಕ್ತಿಯ ನಿಜಸ್ಥಿತಿ ಯನ್ನು ತಿಳಿಯಲಿಕ್ಕೆ ಇವು ಅತ್ಯುತ್ತಮ ಸಾಧನಗಳಾಗಿವೆ. ಇವು ಐತಿ ಹಾಸಿಕ ಸಂಗತಿಗಳು ಜರಗಿದ ಕಾಲಕ್ಕೆ ಬರೆದವುಗಳಿರುತ್ತವೆ. ಜನಸಾ ಮಾನ್ಯರೆಲ್ಲರು ನೋಡುವಂಥ ಸ್ಥಳದಲ್ಲಿ ಅಂದರೆ ದೇವಾಲಯ ಮೊದ ಲಾದ ಸಾರ್ವಜನಿಕ ಸ್ಥಳಗಳಲ್ಲಿ ಅವು ಇಡಲ್ಪಟ್ಟಿರುತ್ತವೆ. ಆದ್ದರಿಂದ ಅವು ಗಳಲ್ಲಿ ಸುಳ್ಳು ಸಂಗತಿಗಳನ್ನು ಅವುಗಳ ಲೇಖಕರು ಬರೆಯುವದು ಶಕ್ಯ ವಿಲ್ಲ. ಈಚೀಚೆಗೆ ಬಸವೇಶ್ವರನ ಕಾಲದಲ್ಲಾದ ಅನೇಕ ಶಿಲಾಶಾಸನಗಳು ಉಪಲಬ್ಧವಾಗಹತ್ತಿರುತ್ತವೆ. ಅವುಗಳ ಸಹಾಯದಿಂದ ಬಸವೇಶ್ವರನ ಚರಿ

ತ್ರೆಯಲ್ಲಿ ನಂಬಲರ್ಹವಾದ ಸಂಗತಿಗಳಾವವೆಂಬುದನ್ನು ನಾವು ಕಂಡುಹಿಡಿಯಬಹುದಾಗಿದೆ.

(೨) ವಚನವಾಙ್ಮಯವು ಬಸವೇಶ್ವರನಿದ್ದ ಕಾಲಕ್ಕೆಯೇ ಉಚ್ಚಸ್ಥಿತಿಗೆ ಬಂದಿದೆ.ಅವನ ಕಾಲಕ್ಕಿದ್ದ ಶಿವಶರಣರೇ ಅವುಗಳನ್ನು ಬರೆದಿದ್ದಾರೆ.ಅವುಗಳನ್ನು ನಾವು ಸೂಕ್ಷ್ಮ ದೃಷ್ಟಿಯಿಂದ ಪರೀಕ್ಷಿಸಿದಲ್ಲಿ ನಿಜವಾದ ಅನೇಕ ಸಂಗತಿಗಳು ಹೊರಬೀಳುವಂತೆ ಇವೆ. ನಮ್ಮ ದೇಶದಲ್ಲಿ ಆಗಿಹೋದ ಮಹಾನುಭಾವರು ಆತ್ಮ ಚರಿತ್ರೆಯನ್ನು ಬರೆಯಲು ಅಪೇಕ್ಷಿಸದಿದ್ದರೂ ಅವರು ಆಕಸ್ಮಾತ್ತಾಗಿ ತಮ್ಮ ಬಾಯಿಯಿಂದ ತಮ್ಮ ಚರಿತ್ರೆಯ ಮೇಲೆ ಪ್ರಕಾಶವನ್ನು ಕೆಡಹುವಂತಹ ಮಾತುಗಳನ್ನು ಆಡುವದುಂಟು. ಅಂಥ ಉಕ್ತಿಗಳು ಆ ಮಹಾನುಭಾವರ ಚರಿತ್ರೆಯಮೇಲೆ ವಿಶೇಷ ಪ್ರಕಾಶವನ್ನು ಕೆಡಹುತ್ತವೆ.

(೩) ಹರಿಹರನ ರಗಳೆಗಳು:— ಹರಿಹರನ ಕಾಲವು ಬಸವೇಶ್ವರನಿಗೆ ಸಮೀಪವಾಗಿರುತ್ತದೆ. ಅವನು ಶಿವಶರಣರ ಅನೇಕ ಚರಿತ್ರೆಗಳನ್ನು ಬರೆದಿರುತ್ತಾನೆ. ಅವುಗಳಿಂದ ಬಸವೇಶ್ವರ ಮೊದಲಾದ ಶಿವಶರಣರ ಚರಿತ್ರೆಗಳ ಮೇಲೆ ಕೆಲಮಟ್ಟಿಗಾದರೂ ಮಹತ್ವದ ಪ್ರಕಾಶವು ಬೀಳುವಂತಿದೆ.

(೪) ಸ್ಥಾನಿಕ ಐತಿಹ್ಯಗಳು ಮತ್ತು ಕುರುಹುಗಳು:— ಶಿವಶರಣರು ಯಾವ ಪ್ರಾಂತದಲ್ಲಿ ಅಥವಾ ಗ್ರಾಮದಲ್ಲಿ ಇದ್ದರೆಂಬುದನ್ನು ನಾವು ಕಂಡುಹಿಡಿದು ಆ ಸ್ಥಾನಗಳನ್ನು ನಾವು ನಿರೀಕ್ಷಿಸಬೇಕು. ಅಂದರೆ ಅಲ್ಲಿ ಇರುವ ದೇವಾಲಯಗಳು, ಆ ದೇವಾಲಯಗಳಲ್ಲಿರುವ ಕುರುಹುಗಳು ಇವೇ ಮೊದಲಾದವುಗಳನ್ನು ಪರೀಕ್ಷಿಸಬೇಕು. ಇವುಗಳು ಪುರಾತನ ಕಾಲದ ಪರಿಸ್ಥಿತಿಯ ಮೇಲೆ ಚನ್ನಾಗಿ ಬೆಳಕನ್ನು ಕೆಡಹುತ್ತವೆ.

(೫) ಮಹಾತ್ಮರ ಚರಿತ್ರೆಗಳಲ್ಲಿ ಕೆಲವೊಂದು ಸಂಗತಿಯು ಬಹು ಪುರಾತನ ಕಾಲದಿಂದ ಈ ವರೆಗೆ ಒಂದೇ ವಿಧವಾಗಿ ನಿರೂಪಿಸಲ್ಪಟ್ಟದ್ದು ಕಂಡುಬರುತ್ತದೆ. ಅಂಥವುಗಳನ್ನು ನಾವು ಕೂಡಲೆ ಅವಿಶ್ವಸಿಸಬಾರದು. ಅವುಗಳ ಬಗ್ಗೆ ಭಿನ್ನ ಮತ್ತು ವಿರುದ್ಧವಾದ ಸಂಗತಿಗಳು ಇದ್ದರೆ ಮಾತ್ರ ಅವುಗಳ ಸತ್ಯತೆಯ ಬಗ್ಗೆ ನಾವು ಅವಶ್ಯವಾಗಿ ಪರೀಕ್ಷಿಸಬೇಕು. ಆದರೆ ಕೆಲವೊಂದು ವಿಷಯದ ಬಗ್ಗೆ ಶಿವಶರಣರ ಕಾಲದಿಂದ ಈ ವರೆಗೆ ಎಲ್ಲ

ಗ್ರಂಥಕಾರರ ವಿವರಣೆಗಳು ಮತ್ತು ದಂತ ಕಥೆಗಳು ಒಂದೇ ವಿಧವಾಗಿದ್ದು ಅವುಗಳನ್ನು ಸಮರ್ಥಿಸಲು ಸ್ಥಾನಿಕ ಕುರುಹುಗಳೂ ಜನರಲ್ಲಿ ಪ್ರವಾದ ಗಳೂ ಇದ್ದದ್ದಾದರೆ ನಾವು ಅವುಗಳಿಗೆ ಮಹತ್ವ ಕೊಡಬೇಕು. ವಿರುದ್ಧ ಆಧಾರಗಳು ದೊರೆಯುವ ವರೆಗಾದರೂ ನಾವು ಅವುಗಳನ್ನು ನಂಬಬೇಕು.

ಈ ಎಲ್ಲ ಸಂಗತಿಗಳನ್ನು ನಾವು ನಿರೀಕ್ಷಿಸಿದಲ್ಲಿ ಒಬ್ಬ ವ್ಯಕ್ತಿಯ ಚರಿತ್ರೆಯಲ್ಲಿ ಅನೇಕ ಅದ್ಭುತ ಸಂಗತಿಗಳು ಇದ್ದರೂ ಕೂಡ ಅವುಗಳಲ್ಲಿ ನಿಜವಾದ ಸಂಗತಿಗಳಾವವು ಎಂಬುದನ್ನು ಕಂಡುಹಿಡಿಯಲು ಶಕ್ಯವಾಗುತ್ತದೆ. ಈ ದೃಷ್ಟಿಯನ್ನಿಟ್ಟುಕೊಂಡು ನಾವು ಬಸವೇಶ್ವರನ ಚರಿತ್ರೆಯನ್ನು ನಿರೂಪಿಸಲು ಇಲ್ಲಿ ಪ್ರಯತ್ನಿಸುತ್ತೇವೆ.

ಈಚೆಗೆ ಬಸವೇಶ್ವರನ ಬಗ್ಗೆ ಇಡೀ ಪ್ರಾಂತದಲ್ಲಿ ಆದರ ಭಾವವು ಉತ್ಪನ್ನವಾಗಹತ್ತಿರುತ್ತದೆ. ಆದ್ದರಿಂದ ಅವನ ಚರಿತ್ರೆಯು ಆವುದೆಂಬದನ್ನು ತಿಳಿಯಲು ಬಹುಜನರು ಅಪೇಕ್ಷಿಸುತ್ತಾರೆ. ಆದರೆ ಎಂಟುನೂರು ವರ್ಷಗಳ ತರುವಾಯ ಅವನ ಆಯುಷ್ಯ ಕ್ರಮದಲ್ಲಿ ಜರಗಿದ ಪ್ರತಿಯೊಂದು ಸಂಗತಿಯನ್ನು ಕಂಡುಹಿಡಿದು ವರ್ಣಿಸುವದು ಅಶಕ್ಯವೇ ಸರಿ. ಆದರೂ ಅವನು ಮಾಡಿದ ಮುಖ್ಯ ಕಾರ್ಯಗಳಾವವು, ಅವುಗಳನ್ನು ಅವನು ಹೇಗೆ ಜರಗಿಸಿದನು, ಇಂಥವುಗಳ ಬಗ್ಗೆ ಏಕಮತವಿರುವದು ಅಶಕ್ಯವೇ ಸರಿ. ಆದರೂ ಇಂಥ ಸಂಗತಿಗಳನ್ನು ನಾವು ಸ್ಥೂಲವಾಗಿ ಇಲ್ಲಿ ಪ್ರಸ್ತಾಪಿಸಲೆಣಿಸಿದ್ದೇವೆ.

## ಬಸವೇಶ್ವರನು ಐತಿಹಾಸಿಕ ಪುರುಷನು.

ಬಸವೇಶ್ವರನ ಚರಿತ್ರೆಯಲ್ಲಿ ನಾವು ಸಿದ್ಧಪಡಿಸತಕ್ಕ ಮೊದಲನೆಯ ವಿಷಯವು ಅವನು ಐತಿಹಾಸಿಕ ಪುರುಷನೋ ಹೇಗೆಂಬುದಿದೆ. ಆ ಪ್ರಶ್ನೆಯು ಅನೇಕರಿಗೆ ಆಶ್ಚರ್ಯವನ್ನುಂಟುಮಾಡಬಹುದು. ಆದರೆ ಅವನು ಐತಿಹಾಸಿಕ ಪುರುಷನಿರದೆ ಕಾಲ್ಪನಿಕ ಪುರುಷನೆಂಬ ತಿಳುವಳಿಕೆಯು ಮೊದಲಿಗೆ ರೂಢವಾಗಿದ್ದಿತು. ಈ ತರದ ಸಂಶಯವನ್ನು ಗತಿಸಿದ ಫ್ಲೀಟಸಾಹೇಬರೇ ವಹಿಸಿದ್ದಾರೆ. ಅವರು ಪ್ರಸಿದ್ಧ ಇತಿಹಾಸ ಸಂಶೋಧಕರು. ಅವರು ಕರ್ನಾಟಕ

ದಿಂದ ಭಾರತದ ಹೊರಗಡೆಯು ಜನತೆಯು ಹಾಗು ಪಂಡಿತರ ಗಮನವು ಇವುಗಳ ಕಡೆಗೆ ಎಳೆಯಲ್ಪಟ್ಟಿಲ್ಲ. ಈಗಲಾದರೂ, ವಿಸ್ತಾರವಾಗಿರುವ ವೀರಶೈವ ಸಾಹಿತ್ಯವನ್ನು ಆದಷ್ಟು ಬೇಗೆ ಬೆಳಕಿಗೆ ತರುವದು ಅತ್ಯಂತ ಅವಶ್ಯವಿದೆ. ಈಗಾಗಲೆ ಅನೇಕ ಸಂಸ್ಥೆಗಳೂ ವ್ಯಕ್ತಿಗಳೂ ಈ ದಿಶೆಯಲ್ಲಿ ಸ್ತುತ್ಯ ಪ್ರಯತ್ನ ಮಾಡಿದ್ದಾರೆ; ಮತ್ತು ಅಮೂಲ್ಯವಾದ ಪ್ರಾಚೀನ ಸಾಹಿತ್ಯದ ಬಗೆಗೆ ಬೆಳಕು ನೀಡುವ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಆದರೆ ಸಮಸ್ಯೆಯ ವಿಸ್ತಾರವನ್ನು ಗಣನೆಗೆ ತಂದಾಗ ಈಗ ನಡೆದ ಪ್ರಯತ್ನವು ತೀರ ಅಲ್ಪ ಎಂದು ಅನಿಸದಿರದು. ಇವಲ್ಲದೆ ಈ ಎಲ್ಲ ಚಟುವಟಿಕೆಗಳನ್ನು ಸಮನ್ವಯಗೊಳಿಸುವ ಪ್ರಯತ್ನವೂ ನಡೆದಿಲ್ಲ. ಈ ಕಾರ್ಯವನ್ನು ವ್ಯಾಪಕ ವಾದ ರೀತಿಯಲ್ಲಿ ಕೈಕೊಂಡು ಇದೇ ಮಾರ್ಗದಲ್ಲಿ ಮುಂದುವರೆಯುವ ವ್ಯಕ್ತಿ ಹಾಗು ಸಂಸ್ಥೆಗಳಿಗೆ ಆರ್ಥಿಕ ಇತ್ಯಾದಿ ನೆರವನ್ನು ನೀಡುವ ಒಂದು ಕೇಂದ್ರ ಸಂಸ್ಥೆಯ ಅವಶ್ಯಕತೆಯನ್ನು ಈಗಾಗಲೆ ಈ ಕ್ಷೇತ್ರದಲ್ಲಿ ದುಡಿಯು ತ್ತಿರುವವರೆಲ್ಲರೂ ಒಪ್ಪುತ್ತಾರೆ. ವೀರಶೈವ ಸಾಹಿತ್ಯವು ಮುಖ್ಯವಾಗಿ ಕನ್ನಡ ದಲ್ಲಿದ್ದುದರಿಂದ ಭಾರತದಲ್ಲಿ ಹಾಗು ಹೊರಗೆ ಅದರ ಪ್ರಚಾರ ಆಗಬೇ ಕಾದಷ್ಟು ಆಗಿಲ್ಲ. ಆದ್ದರಿಂದ ಈ ಸಾಹಿತ್ಯವನ್ನು ಅದರ ಮೂಲ ಭಾಷೆ ಯಲ್ಲಿ ಪ್ರಕಟಿಸಿ, ಇಂಗ್ಲೀಷ ರಾಷ್ಟ್ರಭಾಷೆಯಾದ ಹಿಂದಿ ಮತ್ತು ಉಳಿದ ಪ್ರಾದೇಶಿಕ ಭಾಷೆಗಳಲ್ಲಿ ಪರಿವರ್ತಿಸಬೇಕಾಗಿದೆ. ಅದರಂತೆ ಈ ಎಲ್ಲ ಭಾಷೆ ಗಳಲ್ಲಿ ವೀರಶೈವ ಧರ್ಮ ಮತ್ತು ತತ್ವಜ್ಞಾನಗಳನ್ನು ಕುರಿತು ನವ ಸಾಹಿತ್ಯ ವನ್ನು ರಚಿಸಬೇಕಾಗಿದೆ. ಆದುದರಿಂದ ಇನ್ನಿತರ ಧ್ಯೇಯಗಳೊಂದಿಗೆ ಮುಖ್ಯವಾಗಿ ಈ ಧ್ಯೇಯವನ್ನು ಸಾಧಿಸಲೆಂದು ಅಖಿಲ ಭಾರತ ವೀರಶೈವ ಸಂಘವು ಸ್ಥಾಪಿತವಾಗಿದೆ.

ವೀರಶೈವ ಧರ್ಮದ ಮತಾಚಾರಕ್ಕಿಂತಲೂ ಅದರ ತತ್ವಜ್ಞಾನದ ವ್ಯಾಸಂಗ ಮತ್ತು ಪ್ರಚಾರ, ಅದರಂತೆ ಅದು ಭಾರತೀಯ ಸಂಸ್ಕೃತಿಗೆ ಸಲ್ಲಿಸಿದ ಕಾಣಿಕೆ ಇವುಗಳನ್ನೆಲ್ಲ ಈ ಸಂಘವು ಮುಖ್ಯವಾಗಿ ಗಮನಿಸು ವದು. ವೀರಶೈವ ಧರ್ಮಕ್ಕೆ ಮೂಲಭೂತವಾಗಿರುವ ತತ್ವಗಳು ಇಡಿಯ ಮಾನವ ಕುಲಕ್ಕೆ ಅನ್ವಯಿಸುವದರಿಂದ ಅವುಗಳ ಪ್ರಚಾರ ಮಾಡಲು ಈ ಸಂಘವು ಬಯಸುವದು. ಆದುದರಿಂದ ಈ ಸಂಘದ ಸದಸ್ಯತ್ವದ ಬಗೆಗೆ ಈ ಧರ್ಮದಲ್ಲಿ ಶ್ರದ್ಧೆ ಇಲ್ಲವೆ ಆಸಕ್ತಿ ಇರುವ ಎಲ್ಲ ಮತಗಳ ಅನುಯಾಯಿ ಗಳಿಗೂ ಮುಕ್ತದ್ವಾರವಿದೆ.

ಈ ಸಂಘದ ಘಟನೆಯನ್ನು ಪ್ರಜಾಪ್ರಭುತ್ವದ ತತ್ವಗಳನ್ನು ಅನುಸರಿಸಿ ರಚಿಸಲಾಗಿದೆ. ಸಂಘದ ಸದಸ್ಯತ್ವವನ್ನು ಮೂರು ವರ್ಗಗಳಲ್ಲಿ ವಿಭಾಗಿಸಲಾಗಿದೆ. (೧) ವರ್ಗಣಿದಾರರು. (೨) ಗೌರವ ಸದಸ್ಯರು. (೩) ಸಂಲಗ್ನ ಸಂಸ್ಥೆಗಳು. ವರ್ಗಣಿದಾರರಲ್ಲಿಯೂ ಮೂರು ವರ್ಗಗಳನ್ನು ಮಾಡಿದೆ.

೧. ಅಜೀವ ಸದಸ್ಯರು : ವರ್ಗಣಿ ರೂ. ೫೦೦ ಅಥವಾ ಹೆಚ್ಚಿಗೆ.
೨. ಪೋಷಕರು : „ ರೂ. ೨೦೦೦ „ „
೩. ಮಹಾಪೋಷಕರು : „ ರೂ. ೫೦೦೦ „ „

ವರ್ಗಣಿದಾರರಿಗೆ ಸಂಘದ ಪ್ರಕಟನೆಗಳನ್ನೆಲ್ಲ ಆಡಳಿತ ಮಂಡಳವು [*Governing Body*] ನಿರ್ಧರಿಸುವಂತೆ ಪುಕ್ಕಟೆಯಾಗಿ ಇಲ್ಲವೆ ಕೆಲವು ಸವಲತ್ತುಗಳೊಡನೆ ಸಲ್ಲಿಸಲಾಗುವದು. ಗಣ್ಯ ವ್ಯಕ್ತಿಗಳನ್ನು ಹಾಗು ವೀರಶೈವ ಧರ್ಮದ ಬಗೆಗೆ ಗಮನಾರ್ಹ ಸೇವೆ ಸಲ್ಲಿಸಿದ ಮಹನೀಯರನ್ನು ಗೌರವ ಸದಸ್ಯರನ್ನಾಗಿ ಸೇರಿಸಿಕೊಳ್ಳಲು ಈ ಘಟನೆಯಲ್ಲಿ ಅವಕಾಶವಿದೆ. ಇದೇ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ಸಂಸ್ಥೆಗಳು ಈ ಸಂಘದೊಡನೆ ಒಂದುಗೂಡಿ ಇರುವ ಸದಸ್ಯ ಸಂಸ್ಥೆಗಳಾಗಬಯಸುತ್ತಿದ್ದರೆ ಅದಕ್ಕೂ ಅವಕಾಶ ಕಲ್ಪಿಸಲಾಗಿದೆ. ಅದರೆ ಸಂಘದ ಎಲ್ಲ ಸದಸ್ಯರ ಹಕ್ಕುಗಳು ಮತ್ತು ಸ್ಥಾನಮಾನಗಳು 'ಸದಸ್ಯ' ಈ ದೃಷ್ಟಿಯಿಂದ ಒಂದೇ ಆಗಿದ್ದು ಅದರಲ್ಲಿ ತಾರತಮ್ಯಕ್ಕೆಡೆಯಿಲ್ಲ.

ಸಂಘದ ನಿಧಿಯನ್ನು ವರ್ಗಣಿ, ದಾನ, ಕಾಣಿಕೆ, ಆದೇಶಪತ್ರಗಳ ರೂಪದಲ್ಲಿ ಸಂಗ್ರಹಿಸಲಾಗುವದು. ಯಾರಾದರು ಯಾವುದಾದರೂ ಗ್ರಂಥವನ್ನು ತಮ್ಮ ಹೆಸರಿನಿಂದ ಪ್ರಕಟಿಸಲು ನಿಧಿಯನ್ನು ನೀಡಿದರೆ ಅದನ್ನು ಆಡಳಿತ ಮಂಡಳದ ಅನುಮತಿಯಿಂದ ಸ್ವೀಕರಿಸಲಾಗುವದು.

ಸಂಘದ ಆಡಳಿತವನ್ನು ವಿಶ್ವಸ್ತರಿಗೆ [*Trustees*] ಹಾಗು ಆಡಳಿತ ಮಂಡಳಗಳಿಗೆ ಒಪ್ಪಿಸಲಾಗಿದೆ. ಆಡಳಿತ ಮಂಡಳವು ಸಂಘದ ಎಲ್ಲ ಆಡಳಿತ ಭಾರವನ್ನು ಹೊತ್ತ ಪ್ರಮುಖ ಮಂಡಳವಾಗಿದೆ. ಆದರೆ ವಿಶ್ವಸ್ತರಿಗೆ ಒಪ್ಪಿಸಿದ ಸಂಘದ ಆಸ್ತಿಯ ಬಗ್ಗೆ ಅವರು ಹೊಣೆಗಾರರಿರುವರು. ಆಡಳಿತ ಮಂಡಳವು ಸಂಘದ ಘಟನೆಗನುಸಾರವಾಗಿ ಮತ್ತು ಕಾಲಕಾಲಕ್ಕೆ ಸಾಮಾನ್ಯ ಮಂಡಳವು (*General Body*) ಕೊಡುವ ಆದೇಶಗಳಿಗನುಸಾರವಾಗಿ ತನ್ನ ಕಾರ್ಯವನ್ನು ಸಾಗಿಸುವದು.

ಈ ಕ್ಷೇತ್ರದಲ್ಲಿ ಈಗಾಗಲೆ ದುಡಿಯುತ್ತಿರುವ ವ್ಯಕ್ತಿ ಇಲ್ಲವೆ ಸಂಘಗಳೊಡನೆ ಸ್ಪರ್ಧಿಸುವದು ಇಲ್ಲವೆ ಅವರನ್ನು ಆ ಕ್ಷೇತ್ರದಿಂದ ದೂರಮಾಡುವದು ಈ ಸಂಘದ ಉದ್ದೇಶವಲ್ಲ; ಅದಕ್ಕೆ ಪ್ರತಿಯಾಗಿ ಈ ಸಂಘವು ಈ ಕ್ಷೇತ್ರದಲ್ಲಿ ದುಡಿಯುತ್ತಿರುವ ಎಲ್ಲರಿಗೂ ಶಕ್ಯವಿದ್ದಷ್ಟು ಸಹಾಯ ಸಹಕಾರ ಸಲ್ಲಿಸುವದು. ಈ ಸಂಘದ ಸಂಸ್ಥಾಪಕರು ತಾವು ಕೈಕೊಂಡ ಕಾರ್ಯದ ವ್ಯಾಪ್ತಿಯನ್ನು ಅದಕ್ಕೆ ಬೇಕಾಗಿರುವ ವಿವಿಧ ವ್ಯಕ್ತಿ ಹಾಗು ಸಂಸ್ಥೆಗಳ ಸಹಕಾರದ ಅವಶ್ಯಕತೆಯನ್ನು ಚೆನ್ನಾಗಿ ಲಕ್ಷಿಸಿದ್ದಾರೆ; ಅಷ್ಟೇ ಅಲ್ಲ ವೀರಶೈವ ಧರ್ಮದ ಸಂದೇಶವು ಜನತೆಗೆ ನೇರವಾಗಿ ಮುಟ್ಟಬೇಕಾದರೆ ಇನ್ನೂ ಅನೇಕ ಸಂಸ್ಥೆಗಳು ಹುಟ್ಟುವದು ಅವಶ್ಯವಿದೆ ಎಂದೂ ಅರಿತಿದ್ದಾರೆ. ಆದರೆ ಒಂದೇ ಬಗೆಯ ಕಾರ್ಯವನ್ನು ಹಲವರು ಕೈಕೊಳ್ಳದಂತೆ ನೋಡಿಕೊಳ್ಳುವ, ನಿಧಿಯ ಸದುಪಯೋಗವಾಗುವ ಹಾಗು ಈಗ ಉಪಲಬ್ಧವಿರುವ ಪಂಡಿತರ ಹಾಗು ಕಾರ್ಯಕರ್ತರ ಪೂರ್ಣ ಪ್ರಯೋಜನ ಪಡೆದುಕೊಳ್ಳುವ ದೃಷ್ಟಿಯಿಂದ ಈ ಸಂಘವು ಇತರ ಸಂಸ್ಥೆಗಳ ಸಹಕಾರ ಕೋರುತ್ತದೆ. ಆ ದೃಷ್ಟಿಯಿಂದ ಇದು ಉಳಿದೆಲ್ಲ ಸಂಸ್ಥೆಗಳ ಕೂಡ ಒಂದು ಮಹಾ ಮಂಡಳದಂತೆ ಕಾರ್ಯ ಮಾಡುವದು.

ಸಂಘವು ಎಲ್ಲ ಹಳೆಯ ಕೈಬರಹದ ಪ್ರತಿಗಳನ್ನು ಶಿಲಾಲೇಖನಗಳನ್ನು ಪಟ, ತಾಮ್ರಶಾಸನ ಮತ್ತು ತಾಳೆಯೋಲೆಗಳಲ್ಲಿಯ ಬರಹಗಳನ್ನು ಸಂಗ್ರಹಿಸಿ ಅವುಗಳ ಅಧಿಕೃತ ಸಂಸ್ಕರಣಗಳನ್ನು ಪ್ರಸಿದ್ಧಿಸಲು ಬಯಸುತ್ತದೆ. ಆದುದರಿಂದ ಇಂತಹ ಬರಹಗಳು ತಮ್ಮಲ್ಲಿ ಇರುವವರು ದಯಮಾಡಿ ಅವುಗಳನ್ನು ಸಂಘಕ್ಕೆ ಕಳಿಸುವ ಕೃಪೆ ಮಾಡಬೇಕು. ಅದಕ್ಕಾಗಿ ಅವರು ಹಾಕುವ ಯೋಗ್ಯ ಕರಾರು, ನಿರ್ಬಂಧನೆಗಳನ್ನು ಸಂಘವು ಸಹಾನುಭೂತಿಪೂರ್ವಕ ವಿಚಾರಿಸುವದು.

ಸಂಘಕ್ಕೆ ಒಪ್ಪಿತವಾದ ಯಾವದೆ ವಿಷಯವನ್ನು ಕುರಿತು ಗ್ರಂಥ ಬರೆಯುವ ಲೇಖಕರಿಗೆ ಆಡಳಿತ ಮಂಡಳದ ಅನುಮತಿ ಪಡೆದು ಸರ್ವ ರೀತಿಯಿಂದಲೂ ಯೋಗ್ಯ ಸಹಾಯ ಸಲ್ಲಿಸಲಾಗುವದು. ಗ್ರಂಥದ ಪೂರ್ವಸಿದ್ಧತೆ ಹಾಗು ಪ್ರಕಟನೆಗೆ ತಗಲುವ ಎಲ್ಲ ವೆಚ್ಚವನ್ನೂ ಸಂಘವೇ ವಹಿಸುವದು. ಗ್ರಂಥಗಳನ್ನು ಸಂಘದ ಪ್ರಕಟನೆಗಳೆಂದು ಪ್ರಕಟಿಸಲಾಗುವದು. ಅವುಗಳ ಸರ್ವ ಸ್ವಾಮಿತ್ವವು ಸಂಘಕ್ಕೆ ಸೇರುವದು. ಆಯಾ ಲೇಖಕರ ಹಾಗು ಸಂಪಾದಕರ ಹೆಸರುಗಳನ್ನು ಆಯಾ ಗ್ರಂಥಗಳಲ್ಲಿ ಪ್ರಕಟಿಸಲಾ

ಗುವದು. ಈ ದಿಶೆಯಲ್ಲಿ ಕಾರ್ಯ ಕೈಕೊಳ್ಳಬೇಕೆನ್ನುವವರು ಹೆಚ್ಚಿನ ವಿವರಗಳಿಗಾಗಿ ಸಂಘದೊಡನೆ ಪತ್ರವ್ಯವಹಾರ ಮಾಡಬಹುದು. ಸಂಘವು ತನ್ನ ಪ್ರಕಟನೆಗಳ ಪ್ರಚಾರಕ್ಕೆ ಹೆಚ್ಚು ಮಹತ್ವ ಕೊಡುವದರಿಂದ ನಷ್ಟವನ್ನು ಗಮನಿಸದೆ ಗ್ರಂಥಗಳನ್ನು ತೀರ ಕಡಿಮೆ ಬೆಲೆಗೆ ಪ್ರಕಟಿಸುವ ಸಂಕಲ್ಪ ಮಾಡಿದೆ.

ಸಂಘದ ಉದ್ದೇಶಗಳು ಅತ್ಯಂತ ಸ್ತುತ್ಯವಾಗಿವೆ ಎಂಬುದರಲ್ಲಿ ಸಂಶಯವಿಲ್ಲ. ಆದರೆ ಅವುಗಳನ್ನು ಸಾಧಿಸುವದು ಎಷ್ಟು ದುಸ್ತರವಿದೆ ಎಂಬುದನ್ನು ಸಂಘದ ಸಂಸ್ಥಾಪಕರು ಚನ್ನಾಗಿ ಮನದಂದಿದ್ದಾರೆ. ಅದರಂತೆ ಅವರು ತಮ್ಮ ನ್ಯೂನತೆ ಮತ್ತು ಪರಿಮಿತಿಗಳನ್ನೂ ಅರಿತಿದ್ದಾರೆ. ಆದಾಗ್ಯೂ ಕೂಡ ಅವರು ಈ ಕಾರ್ಯವನ್ನು ಒಂದು ಧ್ಯೇಯಸಾಧನೆಯ ಹಾಗು ಜನತೆಯ ಸೇವಾಭಾವದ ದೃಷ್ಟಿಯಿಂದ ಕೈಕೊಂಡಿದ್ದಾರೆ. ದೃಢವಾದ ಧ್ಯೇಯನಿಷ್ಠೆ ಜನತೆಯ ಹೃತ್ಪೂರ್ವಕ ಸಹಕಾರ ಇವುಗಳ ಬೆಂಬಲದಿಂದ ಅವರು ಸಂಘದ ಉದ್ದೇಶಗಳನ್ನು ಸಾಧಿಸುವ ಆತ್ಮವಿಶ್ವಾಸ ತಾಳಿದ್ದಾರೆ. ಈ ಘನವಾದ ಕಾರ್ಯದಲ್ಲಿ ಉದಾರ ಹೃದಯಿಗಳಾದ ಕೊಡುಗೈಯವ ಮಹಾಜನರು ಅವರಿಗೆ ಧಾರಾಳವಾಗಿ ಸಹಾಯ ಸಹಕಾರಗಳನ್ನು ಸಲ್ಲಿಸಿ ಸಂಘದ ಉದ್ದೇಶವನ್ನು ಯಶಸ್ವಿಯಾಗಿ ಸಾಧಿಸುವಂತೆ ಮಾಡುವರೆಂದು ಹಾರೈಸುತ್ತೇವೆ.

ಮಲ್ಲನಗೌಡ ಪಾಟೀಲ
ಎಂ. ಎಸ್. ಪಾಟೀಲ
ಬಸಪ್ಪ ದಾನಪ್ಪ ಜತ್ತಿ
ಫ. ಗು. ಹಳಕಟ್ಟಿ
ಶಿ. ಚ. ನಂದಿಮಠ
ಪಾಂಡುರಂಗ ದಾಜಿಬಾ ಪಾಲಕಂಡವಾರ
ವಿ. ಶಿ. ಬಸವನಾಳ
ಆಡಳಿತ ಮಂಡಳದ ಸದಸ್ಯರು.

ಸಂಘದ ವಿಳಾಸ:

ಗೌರವ ಕಾರ್ಯದರ್ಶಿ,
ಅಖಿಲ ಭಾರತ ವೀರಶೈವ ಸಂಘ
ಬಸವ ಸದನ
೪೧೧೧೩ ನವರೋಜ ಸ್ಟ್ರೀಟ, ಠಾಕುರದ್ವಾರ
ಮುಂಬಯಿ ೨.

ವಿ. ಸೂ: ಸಂಸ್ಥೆಯ ಗುರಿ ನಿರ್ದೇಶನ ಪತ್ರಿಕೆ(Memorandum of Association) ಹಾಗು ಸಂಘದ ನಿಯಮ ಸಂಬಂಧನೆ (Rules & regulations) ಗಳ ಇಂಗ್ಲೀಷ ಭಾಷೆಯಲ್ಲಿ ಅಚ್ಚಾದ ಪ್ರತಿಗಳು ಸಂಘದ ಕಚೇರಿಯಲ್ಲಿ ದೊರೆಯುತ್ತವೆ.

## ಆಡಳಿತ ಮಂಡಳ.

೧. ಶ್ರೀ. ಮ. ಮ. ಪಾಟೀಲ, ಕಾರ್ಯಾಧ್ಯಕ್ಷ
ಸಹಕಾರ ಮಂತ್ರಿಗಳು ಮುಂಬಯಿ,
ಸರಕಾರ ಮುಂಬಯಿ

೨. ಶ್ರೀ. ಬಿ. ಡಿ. ಜತ್ತಿ, ಗೌರವಕಾರ್ಯದರ್ಶಿ.
ಉಪಮಂತ್ರಿ ಆರೋಗ್ಯಶಾಖೆ
ಮುಂಬಯಿ, ಸರಕಾರ ಮುಂಬಯಿ.

೩. ಶ್ರೀ. ಎಂ. ಎಸ್. ಪಾಟೀಲ, ಸದಸ್ಯ.
ಸದಸ್ಯ, ಮುಂಬಯಿ ಪಬ್ಲಿಕ್ ಸರ್ವಿಸ
ಕಮೀಶನ್ ಮುಂಬಯಿ.

೪. ಶ್ರೀ. ಡಿ. ಸಿ. ಪಾವಟೆ, ಸದಸ್ಯ
ಉಪಕುಲಪತಿ, ಕರ್ನಾಟಕ
ವಿಶ್ವವಿದ್ಯಾಲಯ, ಧಾರವಾಡ.

೫. ಶ್ರೀ. ಪಿ. ಡಿ. ಪಾಲಕಂಡವಾರ, ಜತೆಕಾರ್ಯದರ್ಶಿ.
ಪ್ರಿನ್ಸಿಪಾಲ, ಸರದಾರ ಹಾಯಸ್ಕೂಲ,
ಮುಂಬಯಿ.

೬. ಶ್ರೀ. ಫ. ಗು. ಹಳಕಟ್ಟಿ, ಸದಸ್ಯ.
ಸಂಪಾದಕ 'ಶಿವಾನುಭವ'

೭. ಡಾ. ಎಸ್. ಸಿ. ನಂದೀಮಠ, ಸದಸ್ಯ.
ಪ್ರಿನ್ಸಿಪಾಲ, ಬಸವೇಶ್ವರ ಕಾಲೇಜ,
ಬಾಗಲಕೋಟೆ.

೮. ಶ್ರೀ. ವ್ಹಿ. ಶಿ. ಬಸವನಾಳ ಸದಸ್ಯ.
ಚೇಯರಮನ್, ಕರ್ನಾಟಕ ಸೆಂಟ್ರಲ
ಕೋಆಪರೇಟಿವ್ಹ ಬ್ಯಾಂಕ, ಧಾರವಾಡ.

---

# ಅಖಿಲ ವೀರಶೈವ ಮಹಾಸಭೆಯು ಸಂಘಟನೆಗೋಸ್ಕರ ಸೂಚನೆಗಳು

(ಲೇಖಕ: — ಶ್ರೀ. ಕೆ. ಗ. ಬಕ್ಕಳಿ, ಬಿ. ಎ. ಹುನಗುಂದ.)

ಈ ಸಂಘಟನೆಯ ಮುಖ್ಯ ಉದ್ದೇಶವೆಂದರೆ ವೀರಶೈವ ಮತದ ಸರ್ವಾಂಗಸುಂದರವಾದ ಪ್ರಗತಿಯ ಸಲುವಾಗಿ ಕಾರ್ಯಕ್ಷೇತ್ರಗಳನ್ನು ನಿರ್ಮಿಸುವದು. ಅರ್ಥಾತ್ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ರಂಗಗಳಲ್ಲಿ ಉತ್ಕರ್ಷ ಹೊಂದುವದು.

ಅದಕ್ಕಾಗಿ ವಿಜಾಪುರದಲ್ಲಿ 'ಅಖಿಲ ವೀರಶೈವ ಮಹಾಸಭಾ ಸಂಘಟನೆ' ಯೆಂಬ ಸಂಸ್ಥೆಯು ಚಿರಸ್ಥಾಯಿಯಾಗಿ ನೆಲೆಸಬೇಕು. ಅದಕ್ಕೆ ಶ್ರೀ. ಮ. ನಿ. ಪ್ರ. ಬಂಥನಾಳ ಶಿವಯೋಗಿಗಳು ಅಧ್ಯಕ್ಷರು ಕೆಳಗೆ ಕಾಣಿಸಿದವರು ಸದಸ್ಯರಿರತಕ್ಕದ್ದು.

ಸದ್ಯದ ಸದಸ್ಯರು.

(೧) ರಾ. ಬ. ಹಳಕಟ್ಟಿಯವರು,
(೨) ದಿ. ಬ. ಆಲಮೇಲ ದೇಶಮುಖರು,
(೩) ಡಾ. ನಂದಿಮಠ ಪ್ರಿನ್ಸಿಪಾಲರು,
(೪) ರಾ. ಸಾ. ಸಿಂಹಾಸನರು,
(೫) ಶ್ರೀ. ಎಸ್. ಎಮ್. ಪಾಟೀಲರು.

ಆಯಾಯ ಕಾರ್ಯಗಳ ಪ್ರಕಟನೆಯ ಸಲುವಾಗಿ ವಿಜಾಪುರ ಶಿಪರ್ಡ ಹಾಲಿನಲ್ಲಾಗಲಿ, ಹಳೆಯ ವಿಜಯ ಕಾಲೇಜ ಕಟ್ಟಡದಲ್ಲಾಗಲಿ ಈ ಸಂಸ್ಥೆಯವತಿಯಿಂದ ೧ ಪ್ರಿಂಟಿಂಗ ಪ್ರೆಸ್ಸನ್ನಿಟ್ಟು ಅದರ ಮುಖಾಂತರವಾಗಿ ಒಂದು ಮಾಸಿಕವನ್ನು ಹೊರಡಿಸಬೇಕು. ಅದರಲ್ಲಿ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಸಂಗತಿಗಳು ಅಳವಟ್ಟಿರಬೇಕು. ಈ ಕಾರ್ಯಗಳನ್ನು ಅವ್ಯಾಹತವಾಗಿ ನಡೆಯಿಸಿಕೊಂಡು ಹೋಗಲಿಕ್ಕೆ ಕೆಳಗೆ ಕಾಣಿಸಿದಂತೆ ಸೇವಕ ವರ್ಗವನ್ನು ಯೋಗ್ಯ ವೇತನ-ಭಡತಿ- ಪ್ರಾ. ಫಂಡು ಮುಂತಾದ್ದನ್ನು ಕೊಟ್ಟು ನೇಮಿಸಿಕೊಳ್ಳಬೇಕು.

(೧) ಕನ್ನಡ, ಇಂಗ್ಲೀಷ, ಸಂಸ್ಕೃತ ಬಲ್ಲ ಲೇಖನದಲ್ಲಿ ಗತಿಯಿದ್ದ ಅನುಭವಿಕ ಪದವೀಧರರು.

(೨) ಸಂಸ್ಕೃತ ಹಿಂದಿಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ ಪ್ರಶಸ್ತಿ ಪತ್ರಗಳನ್ನು ಪಡೆದವರೊಬ್ಬರು.

(೩) ಶಾಸನಲಿಪಿ ಹಳೆಗನ್ನಡ ಕಾವ್ಯ ಮೊದಲಾದವುಗಳನ್ನು ಓದಿ ತಿಳಕೊಳ್ಳಬಲ್ಲ ಕನ್ನಡ ಪಂಡಿತರೊಬ್ಬರು.

(೪) ಒಬ್ಬ ಗಾಯನ ಶಿಕ್ಷಕ ಅಥವಾ ಒಬ್ಬ ಕೀರ್ತನಕಾರ.

(೫) ಒಬ್ಬ ಕಾರಕೂನ.

(೬) ಒಬ್ಬ ಶಿಪಾಯಿ.

## ಸಾಮಾಜಿಕ ಪ್ರಗತಿ.

(೧) ವೀರಶೈವರಲ್ಲಿ ಲಿಂಗಧಾರಿಗಳೆಲ್ಲ ಸರಿಸಮಾನರಾದ್ದರಿಂದ ಪರಸ್ಪರ ಅನ್ನಪಾನ ಶರೀರಸಂಬಂಧವಾಗಲು ಅಡ್ಡಿಯಿಲ್ಲ, ಇಂಥ ಲಗ್ನಗಳನ್ನು ಮಹಾಸಭೆಯು ಪ್ರೋತ್ಸಾಹಿಸಬೇಕು.

(೨) ವೀರಶೈವನು ಯಾವ ಕಾಯಕ ಮಾಡಿದರೂ ಪರಿಶುದ್ಧನು. ಆದ್ದರಿಂದ ಯಾರಿಗೂ ಭಿಕ್ಷೆ ಬೇಡ ಹಚ್ಚದೆ ಉದ್ಯೋಗಗಳನ್ನು ಕೊಡಬೇಕು. ಮಹಾಸಭೆಯಲ್ಲಿ ಭಿಕ್ಷಾವೃತ್ತಿಯನ್ನು ನಿಷೇಧಿಸುವ ಬಗ್ಗೆ ನಿರ್ಣಯ ಪಾಸ ಮಾಡಬೇಕು. ವಿದ್ಯಾಸಂಸ್ಥೆ, ಫ್ರೀಬೋರ್ಡಿಂಗಗಳಿಗಷ್ಟೇ ಭಿಕ್ಷೆ ಬೇಡಿ ಫಂಡು ಕಾಳುಕಡಿ ಕೂಡಿಸುವ ಅಧಿಕಾರವಿರಬೇಕು.

(೩) ಎಲ್ಲ ಕಡೆಯಲ್ಲಿಯೂ ಜನ್ಮಸಂಸ್ಕಾರ, ಲಗ್ನವಿಧಾನ, ಅಂತ್ಯವಿಧಿಗಳು ಒಂದೇ ವಿಧವಾಗಿ ನಡೆಯುವಂತೆ ಮಾರ್ಪಾಟು ಮಾಡಬೇಕು.

## ಧಾರ್ಮಿಕ ಪ್ರಗತಿ

(೧) ಸುಲಭ ಶೈಲಿಯಲ್ಲಿ ಶಿವಶರಣರ ಕಥೆ, ಕಾದಂಬರಿ, ಪ್ರಹಸನ ಕಾವ್ಯಗಳನ್ನು ಹಿಂದಿ, ಇಂಗ್ಲಿಷ, ಕನ್ನಡದಲ್ಲಿ ಬರೆಯಿಸಿ ಪ್ರಕಟಿಸಬೇಕು.

(೨) ಚಲನಚಿತ್ರಪಟಗಳಲ್ಲಿ ಉತ್ತಮ ಪ್ರಹಸನಗಳನ್ನು ಹಾಕಿ ಪ್ರಚಾರ ಮಾಡಬೇಕು. ಸ್ಲಾಯಿಡುಗಳನ್ನು ತಯಾರಿಸಿ ಮ್ಯಾ. ಲ್ಯಾಂಟರ್ನದಲ್ಲಿ ಪ್ರದರ್ಶಿಸುವಂತೆ ಮಾರ್ಪಾಟ ಆಗಬೇಕು.

(೩) ವಚನಗಳ ಆಳವಾದ ಮತ್ತು ಕ್ರಮಬದ್ಧವಾದ ಅಭ್ಯಾಸ ಮಾಡಲು ಅಲ್ಲಲ್ಲಿ ಅಭ್ಯಾಸ ಮಂಡಲಗಳನ್ನೇರ್ಪಡಿಸಬೇಕು. ಆಯಾಯ ಕಾಲಗಳಲ್ಲಿ ಸ್ಪರ್ಧೆ-ಪರೀಕ್ಷೆಗಳನ್ನಿಟ್ಟು ಪಾರಿತೋಷಕ-ಪ್ರಶಸ್ತಿ ಪತ್ರಗಳಿಂದ ಉತ್ತೇಜನ ಕೊಡಬೇಕು.

(೪) ಶಿವಪೂಜಾಮಂತ್ರಗಳನ್ನು ಕನ್ನಡದಲ್ಲಿ ಸಂಕ್ಷಿಪ್ತವಾಗಿ ಬರೆಯಿಸಿ ಪ್ರಚಾರದಲ್ಲಿ ತರಬೇಕು.

(೫) ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಇತ್ಯಾದಿ ವೀರಶೈವ ತತ್ವಗಳನ್ನು ಸುಲಭಶೈಲಿಯಲ್ಲಿ ಎಲ್ಲರಿಗೂ ತಿಳಿಯುವಂತೆ ಪ್ರಕಟಿಸಬೇಕು. ಆಗಮ-ಪುರಾಣ ಕೈವಲ್ಯ ಕಾವ್ಯಗಳ ಸಾರವನ್ನು ಸರಳಗನ್ನಡದಲ್ಲಿ ಬರೆಯಿಸಿ ಪ್ರಚಾರ ಮಾಡಬೇಕು.

(೬) ಶರಣರ ಭಾವಚಿತ್ರಗಳನ್ನು ಬರೆಯಿಸಿ '*Coloured Block*' ನಲ್ಲಿ ಪ್ರಿಂಟು ಮಾಡಿಸಿ ಅವುಗಳನ್ನು ಪ್ರಸಾರ ಮಾಡಬೇಕು.

(೭) ಗ್ರಂಥ ಸಂಶೋಧನೆಯ ಸಲುವಾಗಿ ವಿಜಾಪುರದಲ್ಲಿ ವಚನಗಳು, ಆಗಮಗಳು, ಕಾವ್ಯಪುರಾಣಗಳು, ತಾಡವಾಲೆ ಗ್ರಂಥಗಳು, ವಿವಿಧ ಮತಗ್ರಂಥಗಳು, ತತ್ವಜ್ಞಾನದ ಗ್ರಂಥಗಳು ಇತ್ಯಾದಿಗಳನ್ನು ಶೇಖರಿಸಿ ಒಂದು ಕೇಂದ್ರ ಗ್ರಂಥಭಾಂಡಾರವನ್ನು ಸ್ಥಾಪಿಸಿ ಸಂಶೋಧಕರಿಗೆ ಅನುವು ಮಾಡಿಕೊಡಬೇಕು.

(೮) ವಿಜಾಪುರದಲ್ಲಿ ಬಹುಶಃ ಎಲ್ಲ ವೀರಶೈವ ಒಳಪಂಗಡಗಳ ವಟುಗಳಿಗೆ ಧಾರ್ಮಿಕ ಶಿಕ್ಷಣವನ್ನು ಕೊಡುವ ವಿದ್ಯಾಲಯವನ್ನು ಸ್ಥಾಪಿಸಿ ಇಂಗ್ಲಿಷ, ಕನ್ನಡ, ಸಂಸ್ಕೃತ ಬಲ್ಲಂಥ ಧಾರ್ಮಿಕ ಗ್ರಂಥಗಳನ್ನು ನೋಡಿಕೊಂಡಂಥ ಪದವೀಧರರು ಶಾಸ್ತ್ರಿಗಳನ್ನಿಟ್ಟು ಶಿಕ್ಷಣ ಕೊಡಿಸಬೇಕು. ಅವರಲ್ಲಿ ಯೋಗ್ಯ ಕಂಡವರಿಗೆ ಆಯಾಯ ಮಠಪೀಠಗಳಿಗೆ ಅಧಿಕಾರಕೊಡಬೇಕು.

## ಶಿಕ್ಷಣ ಪ್ರಗತಿ

(೧) ಜಿಲ್ಹೆಗೊಂದರಂತೆ ಉದ್ಯೋಗ, ಕಲಾಕೌಶಲ್ಯ, ಒಕ್ಕಲತನ, ಯಾಂತ್ರಿಕ ದಂಥೆ ಇವುಗಳ ಶಾಲೆಗಳನ್ನು ಸ್ಥಾಪಿಸಿ ನಿರುದ್ಯೋಗದ ಸಮಸ್ಯೆಯನ್ನು ದೂರ ಮಾಡಬೇಕು.

(೨) ವೀರಶೈವ ವಿದ್ಯಾಸಂಸ್ಥೆಗಳೆಲ್ಲ ಒಂದೇ ಮಾದರಿಯ ಆಡಳಿತೆ ಪಠ್ಯಪುಸ್ತಕ, ಅಭ್ಯಾಸಕ್ರಮ, ನಿಯಮ ಉಪನಿಯಮಗಳಿಗೆ ಒಳಪಟ್ಟು

ಡೆಯಬೇಕು. ಇದರಲ್ಲಿ ಸ್ಕೂಲ-ಕಾಲೇಜ-ಪಾಠಶಾಲೆ, ಫ್ರೀಬೋರ್ಡಿಂಗು ಗಳು ಸಮಾವೇಶವಾಗುತ್ತವೆ.

(೩) ಆಯಾಯ ಸ್ಕೂಲು ಕಾಲೇಜಗಳ ಪ್ರಿನ್ಸಿಪಾಲರು, ಪ್ರಾಧ್ಯಾಪಕ, ಅಧ್ಯಾಪಕರನ್ನು ೩ ವರ್ಷಗಳಿಗೊಮ್ಮೆ ಬೇರೆ ಬೇರೆ ಸ್ಥಳಗಳಿಗೆ ವರ್ಗಾವರ್ಗಿ ಮಾಡಬೇಕು.

(೪) ಯೋಗ್ಯ ವಿದ್ಯಾರ್ಥಿಗಳನ್ನು ಹೆಚ್ಚಿನ ಶಿಕ್ಷಣಕ್ಕಾಗಿ ಪರದೇಶಗಳಿಗೆ ಕಳಿಸಬೇಕು.

## ಆರ್ಥಿಕ ಪ್ರಗತಿ

(೧) ವೀರಶೈವರಲ್ಲಿ ಸಹಕಾರಿ ಒಕ್ಕಲತನ, ವ್ಯಾಪಾರ, ಉದ್ಯೋಗ, ಗಿರಣಿ ಕಾರಖಾನೆ, ಅಂಗಡಿ ಮುಂತಾದವುಗಳನ್ನು ಪ್ರೋತ್ಸಾಹಿಸಬೇಕು.

(೨) ಒಕ್ಕಲಿಗರಿಗೆ ಗೊಬ್ಬರ ಟ್ರ್ಯಾಕ್ಟರುಗಳು ಬಹು ಸೋವಿ ದರದಿಂದ ಸಿಗುವಂತೆ ಅನುಕೂಲಿಸಿ ಕೊಡಬೇಕು. ಒಡ್ಡು ಹಾಕಲಿಕ್ಕೆ, ಭಾವಿ ತೆಗೆಯಿಸಲಿಕ್ಕೆ ತಗಾಯಿ ಹಣವನ್ನು ಕೊಡಿಸಬೇಕು.

(೩) ಸರಕಾರಿ ನೌಕರರು ಲಂಚ ಮುಂತಾದ್ದನ್ನು ತಿನ್ನದಂತೆ ನೋಡಿಕೊಂಡು ಬಡ ರೈತರ ಕಲ್ಯಾಣ ಮಾಡಬೇಕು.

(೪) ದುರಾಚಾರ-ದುರ್ವ್ಯಸನಗಳಿಗೆ ಬಿದ್ದು ವಿಪುಲ ಧನವನ್ನು ನಾಶ ಮಾಡಿಕೊಳ್ಳದಂತೆಯೂ ನ್ಯಾಯಾಲಯುಗಳಿಗೆ ಹೋಗಿ ಹಾಳಾಗದಂತೆ ಆಪ ಸತ್ತಿನಲ್ಲಿ ನಿಕಾಲಿಯಾಗುವಂತೆ ಊರಿಗೊಂದು 'ನ್ಯಾಯ ನಿರ್ಣಯ ಮಂಡಲ' ವನ್ನು ಸ್ಥಾಪಿಸಬೇಕು.

(೫) ನಿರುದ್ಯೋಗಿ ಸುಶಿಕ್ಷಿತರಿಗೆ ಅವರವರ ಯೋಗ್ಯತೆಯ ಮೇರೆಗೆ ಉದ್ಯೋಗ-ನೌಕರಿಗಳನ್ನು ಕಲ್ಪಿಸಿ ಉಪಜೀವನ ಮಾರ್ಗ ಮಾಡಿಕೊಡಬೇಕು.

೬) ಪುರಾಣ-ಪ್ರಸ್ಥ-ಮಂಟಪ-ಲಗ್ನ ಮುಂತಾದ ಪ್ರಸಂಗಗಳಲ್ಲಿ ಮಿತಿಮೀರಿ ಹಣವು ವೆಚ್ಚ ವಾಗದಂತೆ ಇಂತಿಂಥ ಕಾರ್ಯಗಳಿಗೆ ಇಂತಿಷ್ಟೇ ವೆಚ್ಚ ಮಾಡಬೇಕೆಂದು ಕ್ಲಪ್ತಪಡಿಸಬೇಕು.

## ರಾಜಕೀಯ ಪ್ರಗತಿ

(೧) ಅಸೆಂಬ್ಲಿ-ಪಾರ್ಲಿಮೆಂಟುಗಳಿಗೆ ಉಮೇದವಾರರಾಗಿ ನಿಲ್ಲುವವರ ಬಗ್ಗೆ ವೀರಶೈವ ಮಹಾಸಭೆಯವರು ಶಿಫಾರಸು ಮಾಡಿದವರಿಗೆ ವೀರಶೈವರು ಮತಕೊಡತಕ್ಕದ್ದು. ಅದರಂತೆ ಯುನಿವ್ಹರ್ಸಿಟಿ, ಮುನಸಿಪಾಲ್ಟಿ, ಲೋಕಲ್‌ಬೋರ್ಡ, ಬ್ಯಾಂಕಗಳಿಗೂ ಕೂಡ ಮಹಾಸಭೆಯಿಂದ ಟಿಕೀಟ ಪಡೆದವರಿಗೆ ಚುನಾವಣೆಗೆ ನಿಲ್ಲಲು ಆಸ್ಪದ ಕೊಡಬೇಕು.

(೨) ಆಂಗ್ಲ ಭಾಷೆಯಲ್ಲಿ ಒಳ್ಳೆ ಸ್ವಾಮಿತ್ವವನ್ನು ಪಡೆದು ಉತ್ತಮ ವ್ಯಾಖ್ಯಾತರಿದ್ದರೆ ಅಂಥವರಿಗೆ ಪರದೇಶದ ರಾಯಭಾರಿ ಪದವಿಗೆ ಶಿಫಾರಸ ಮಾಡಬೇಕು.

---

## ನಾನೆ ಸುಖಿ

(ಕವಿ;- ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ.)

—•—

ಅರಿತು ನೋಡಲು ನಾನೆ ಹಿರಿಸುಖಿಯು ಜಗದಲ್ಲಿ ।
ಕಿರಿಯಾಶೆ ಸಹ ಸುಳಿಯದೆನ್ನ ಸನಿಹದಲಿ ।
ಧರೆಯಾಸೆ ಶಿರಿಯಾಶೆ ದೊರೆತನದ ಆಶೆಗಳು ।
ಕೊರಗಿಸದ ಮರುಗಿಸದ ನಾನೆ ಸುಖಿಯು ॥೧॥

ಅಡವಿಯಲಿ ಹೊಲವಿಲ್ಲ ಊರಲ್ಲಿ ಮನೆಯಿಲ್ಲ ।
ಗಿಡದಡಿಯಲೊಂದೆನಗೆ ಗುಡಿಸಲುಂಟು ।
ಮಡುಗೊಂಡು ಸನಿಹದಲ್ಲೊಂದು ಹೊಳೆ ಹರಿಯುವದು ।
ಬಿಡಗಿನಿಂದಡವಿಯಲಿರ್ದ ನಾನೆ ಸುಖಿಯು ॥೨॥

ವಿಷಯ ಸುಖವನು ಕೊಡುವ ಧನಧಾನ್ಯ ಕನಕಾದಿ ।
ಹೊಸ ಬಗೆಯ ಒಡವೆಗಳು ಒಂದು ಇಲ್ಲ ।
ಬಡವನಾದರು ನಾನು ಕೈಯೊಡ್ಡಿ ಅನ್ಯರಿಗೆ ।
ಒಡವೆಗಳ ಬೇಡದವ ನಾನೆ ಸುಖಿಯು ॥೩॥

ಮನಕೆ ದಾಸನಾಗದೆ ಮನದಾಣ್ಮ ನಾನಾಗಿ ।
ತನುವನ್ನು ದಿನದಿನದಿ ದುಡಿಸುತಿರುವೆ ।
ಕನಲಿಸದೆ ಇಂದ್ರಿಯಗಳಾಳುತಿರುವೆನು ನಿತ್ಯ ।
ತನುಮನವ ಗೆದ್ದ ನಾ ನಿಜದಿ ಸುಖಿಯು ||೪||

ಕೀರ್ತಿಯಾಶೆಯು ಇಲ್ಲ ಪದವಿ ಇಚ್ಛೆಯು ಇಲ್ಲ ।
ಧೂರ್ತ ತನದಿಂದ ನಾ ಬಾಳುತಿರುವೆ ।
ಸ್ತೋತ್ರಕ್ಕೆ ಮನಸೋಲೆ ಮಾನ ಮನ್ನಣೆಗೆಳಸೆ ।
ಪಾರ್ಥನಾದವ ನಾನೆ ನಿಜದಿ ಸುಖಿಯು ||೫||

ಮಾರುತನು ಬೀಸುವನು ಚಂದಿರನು ಬೆಳಗುವನು ।
ನೀರು ಹರಿಯುವದು ಎನಗಾಗಿ ನಿತ್ಯ ।
ಸೂರಿಯನು ಉದಿಸುವನು ಆಕಾಶವೆನಗಿಹುದು ।
ಧರಣಿಯಲಿ ಇಂತಿರ್ದ ನಾನೆ ಸುಖಿಯು ||೬||

ಎನಗಾಗಿ ಹಕ್ಕಿಗಳು ಗಾಯನವ ಗೈಯುವವು ।
ಎನಗಾಗಿ ನವಿಲುಗಳು ನರ್ತಿಸುವವು ।
ಎನಗಾಗಿ ಶುಕಪಿಕಗಳುಲಿಯುವವು ಇಂತರದಿ ।
ಇನಿತು ಬಗೆಯಿಂದಿರ್ದ ನಾನೆ ಸುಖಿಯು ||೭||

ಕಾಯ ವಚ ಮನದಿಂದ ಕೇಡಿನಲಿ ಕೈ ಇಡೆನು ।
ನೋಯಿಸೆನು ಅನ್ಯ ಪ್ರಾಣಿಕೋಟಿಯನು ।
ಜೀವಿಗಳ ಸೇವೆಯನು ದೇವನೆಂದೇ ಗೈವೆ ।
ದೇವನೇ ಜಗವೆನುವ ನಾನೆ ಸುಖಿಯು ||೮||

ಧರುಮ ಸತ್ಯಗಳೆನ್ನ ಆತ್ಮದಾ ಗಾಯನವು ।
ಹಿರಿ ನಡೆ ನುಡಿಗಳೆನ್ನಗೆ ಕೋಟೆಯಾಗಿಹವು ।
ಧೊರೆಗಳಿಗೆ ನಾನಂಜೆ ಚೋರರಂಜಿಕೆ ಇಲ್ಲ ।
ಯಮನಿಗಂಜದ ನಾನೆ ನಿಜದಿ ಸುಖಿಯು ||೯||

ವರ ಖಾದಿ ಹಾಸುವೆನು ಹಿರಿ ಖಾದಿ ಹೊದೆಯುವೆನು ।
ಕಿರಿ ಖಾದಿ ಎನ್ನುಡಿಗೆ ಇಹುದು ನಿಜದಿ ।
ಕುರಿ ಹಾಲುಗರೆಯುವದು ಮರ ಫಲವನೀಯುವದು ।
ಧರೆಯೊಳಗೆ ಕೊರತಿರದ ನಾನೆ ಸುಖಿಯು ||೧೧||

ತ್ಯಾಗದಲಿ ರಮಿಸುವೆನು ಭೋಗಗಳ ಭೋಗಿಸೆನು ।
ಯೋಗದಲಿ ನನಗೆ ಬಲು ರಾಗವಿಹುದು ।
ರಾಗಗಳ ಸ ಳಿವಿಲ್ಲ ಕಾಮನನು ಕಾಮಿಸೆನು।
ಹೀಗೆ ನಡೆ ಇದ್ದ ನಾ ನಿಜದಿ ಸುಖಿಯು ।।೧೨।।

ಹೆಣ್ಣೆಲ್ಲ ಮಮ ಮಾತೆ ಸಿರಿದೇವಿಯಂತಿಹರು ।
ಹೊನ್ನನ್ನು ಶಿಲೆಯಂತೆ ಬಗೆಯುತಿರುವೆ ।
ಹೆಣ್ಣು ಹೊನ್ನು ಮಣ್ಣಿಲ್ಲದಿದ್ದರೂ ಶಾಂತಿಯನು ।
ಉಣ್ಣುತಿಹ ನಾನೆ ನಿಜದಿ ಸುಖಿಯು ।।೧೩।।

ಮಾಯೆಯನು ತೊರೆದಂಥ ಆತ್ಮದಲಿ ರತ ನಾನು ।
ಮೀಯುವೆನು ಸಿತ್ಯಾನಂದದಾಗರದಿ।
ಆಯತ ಜನಕೆ ನಿತ್ಯ ಉಣಿಸುತ್ತ ಜ್ಞಾನವನು ।
ದೇವನಂತಿರ್ದ ನಾ ನಿಜದಿ ಸುಖಿಯು ।।೧೪।।

ಸಂತೆಯಾ ಚಿಂತಿಲ್ಲ ಕಾಂತೆಯಾ ಭ್ರಾಂತಿಲ್ಲ ।
ಕಂತು ಹರನಂತೆ ನಾ ಬಾಳುತಿರುವೆ ।
ಇಂತಿರಲಿ ಅಂತಿರಲಿ ಎಂತಿದ್ದರೇನಿನ್ನು ।
ಕಂತೆಯನು ಹೊದೆವ ನಾ ನಿಜದಿ ಸುಖಿಯು ।।೧೫।।

ಗೆಳೆಯರೆಂಬುವರಿಲ್ಲ ಜಗಳದಂಜಿಕೆ ಇಲ್ಲ ।
ಕಳೆವೆ ನಾ ಕಾಲವನು ಏಕಾಂತದಿ ।
ಹಳೆಯ ಶರಣರು ಮತ್ತವರ ಹೊತ್ತಿಗೆಗಳೆನಗೆ ।
ಕೆಳೆಯರೆನಿಸಿರ್ದ ನಾನೆ ನಿಜದಿ ಸುಖಿಯು ।।೧೬।।

ಹಚ್ಚು ಚುಚ್ಚುವ ನಗುವ ಮಹಿತುಗಳು ಬರದವನು ।
ಹುಚ್ಚು ತುಚ್ಛದ ರೀತಿ ನಾನರಿಯೆನು ।
ಹೆಚ್ಚಿನೇಳ್ಗೆಯ ಕಂಡು ಕುದಿಗೊಂಡು ಕರುಬದವ ।
ಮೆಚ್ಚು ತೋರುವ ಜಗದಿ ನಾನೆ ಸುಖಿಯು ।।೧೭।।

ಬೀಳುವಾ ಅಳುಕಿಲ್ಲ ಏರುವಾಶೆಗಳಿಲ್ಲ ।
ಬಾಳಿನಲಿ ಬೆಳಕನ್ನು ಬೆಳಗುತಿರುವೆ ।

ತಾಳ ಮೇಳದಿ ನಾನು ಜಗದೊಂದು ಆಳಿಂದು ।
ಬಾಳುವೆನು ಹರುಷದಿಂ ನಾನೆ ಸುಖಿಯು ॥೧೮॥

ದೇವನನು ಧ್ಯಾನಿಸುವೆ ದೇವನನು ಕಾವಿಸುವೆ ।
ಗೌರಿಯನು ಕೀರ್ತಿಸುತ ಸ್ತವನ ಗೈವೆ ।
ನೀಲಕಂಠನ ನೆನೆವೆ ಉಮೆಯನ್ನು ಹಾಡುವೆನು ।
ದೇವನೇ ಸರ್ವವೆನುವ ನಾನೆ ಸುಖಿಯು ॥೧೯॥

---

# ಏರಲಿದೆ

( ಲೇ॥ ತರುಣಕವಿ ಶ್ರೀಮಾನ್ ಶೇಷಗಿರಿರಾಯರು ಕೊಡತಾಡಿ, ದ. ಕ. )

—೦—

ಏರಲಿದೆ ಬಾವುಟ
ಕನ್ನಡದ ಬಾವುಟ
ನಮ್ಮದಿದು ಬಾವುಟ
ತನ್ನಿರಿಂದೆ ಬಾವುಟ
ವಾಯುನಲಿ ತಟಪಟ
ಹಾರಲಿದೆ ಚಟ ಚಟ ॥೧॥

ಇಂದೆ ನಮ್ಮ ಸುದಿನವು
ಬಂದಿತೆಂದೆ ಸುದಿನವು
ತಾಯಿ ಸೇವೆಗೀದಿನ
ಬನ್ನಿರೆಂದೆ ಮುಂದಿನ
ಅಣ್ಣ ತಮ್ಮ ಸೋದರಿ
ಬನ್ನಿರಿಂದು ವೀರರೆ ॥೨॥

ನಮ್ಮ ತಾಯಿ ಸೇವೆಗೆ
ಹೊರಡಿರಿಂದು ಬೆನ್ನಿಗೆ
ಕಹಳೆಯನ್ನು ಊದುತ
ನಡೆವಾ ಇಂದು ಪಾಡುತ
ಏರಿಸಲು ಬಾವುಟ
ಹಿಡಿಯಿರೆಂದೆ ಈಗಟ ||೩||

ಸುಪ್ರಭಾತ ಸಮಯದಿ
ಕೋಗಿಲೆಯ ಗಾನದಿ
ಹಾರಿಸುತ ಗಗನದಿ
ನಮ್ಮ ತಾಯಿ ಬಾವುಟ
ಹರುಷದಿಂದ ಚೀರುತ
ದಾರಿಯನ್ನು ಸಾಗುತ ||೪||

ಏರಿಸುವಾ ಬಾವುಟ!
ಕನ್ನಡದ ಬಾವುಟ!!

---

# ವಿಜಯವು ವಿಜಯಪುರದ ಕುರುಹು

(ಬರೆದವರು:— ಶ್ರೀ. ಬಾ. ದ. ಲಿಂಗಣ್ಣಾ ಶಾಲಾ ಗುರೂಜಿ. ಬನಹಟ್ಟಿ.)

---

ಕಾಲ ಚಕ್ರವು ತಿರುಗಿದಂತೆಲ್ಲ ಏರಿಳಿತಗಳು ಬರುತ್ತಿವೆ. ಎಂಬುದು ಸರ್ವಶ್ರುತ ಹಾಗೂ ನಿದರ್ಶನ. ಅಂತೆಯೇ ನಾಡಿನಲ್ಲಿ ಆಗಿಹೋದ ಹಿರಿಯರ ಅನುಭವದ ಮಾತು ಇಂದಿಗೂ ಕೇಳಿ ಬರುತ್ತದೆ. "ತಿಪ್ಪೆ ಉಪ್ಪರಿಗೆ, ಉಪ್ಪರಿಗೆ ತಿಪ್ಪೆ" ಈ ಮಾತು ಸತ್ಯ ಎಂದು ನಿರೀಕ್ಷಿಸಬೇಕಾದಲ್ಲಿ ವಿಜಯಪುರದ ಹಿಂದಿನಕಥೆ ಕಿವಿದೆರೆದು ಕೇಳಬೇಕು. ಕಣ್ದೆರೆದು ನೋಡಬೇಕು. ಮನದೆರೆದು ಓದಬೇಕು.

ಒಮ್ಮೆ ವಿಜಯಪುರವು ವಿಜಯ ಗಳಿಸಿತ್ತು ಮತ್ತೊಮ್ಮೆ ವಿಜಯಗಳಿಸಿತ್ತು. ಒಟ್ಟಾರೆ ಹೇಳಬೇಕಾದಲ್ಲಿ ವಿಜಯಪುರವು ಯಾವಾಗಲೂ ವಿಜಯವಾಗುತ್ತಲೇ ಬಂದಿದೆ. ಈಗಲೂ ವಿಜಯಿಯಾಗಿದೆ. ಮುಂದೆಯೂ ಆಗುವದೆಂಬ ಮನದ ಹಿರಿಯಾಸೆ- ಪೂರ್ವಕಾಲದಲ್ಲಿ ವಿಜಯಪುರದೊಳಗೆ ಸರ್ವ ಧರ್ಮಗಳು ಸಮ್ಮಿತಲವಾಗಿ ಸಹನತೆಯಿಂದ ನಡೆದಿದ್ದವು, ಎಂದು ಶಿಲಾ ಲೇಖ ಎಂಬ ನುಡಿ ತಜ್ಞರದು. ಅರ್ಥಾತ್ ಆಗ ಜೈನ, ಬೌದ್ಧ, ವೀರ ಶೈವ, ಹಿಂದೂ, ಈ ಎಲ್ಲ ಧರ್ಮದ ಮುಖ್ಯ ಕೇಂದ್ರವು ವಿಜಯಪುರವು.

ಮೇಲೆ ಹೇಳಿದ ವಿಷಯದಲ್ಲಿ ವಿಜಯಗಳಿಸಿತ್ತು. ಮುಂದೆ ವಿಜಯಪುರವು ಮುಸಲ್ಮಾನರ ವಶದಲ್ಲಿ ಆದರೂ ಮತ್ತೊಮ್ಮೆ ವಿಜಯಿ ಯೆಂದೇ ಹೇಳಬೇಕು. ಯಾಕಂದರೆ ? ಆಗ ಆಳರಸರು ಮುಸಲ್ಮಾನರಾಗಿದ್ದರೂ ಅವರು ಯಾವ ಧರ್ಮಕ್ಕೂ ಪೀಡಿಸಲಿಲ್ಲ_ಮಗುದೊಮ್ಮೆ ವಿಜಯಪುರವು ವಿಜಯಿಯಾಯಿತು, ಅವರ ಗಣಾಧೀಶ್ವರರ ಪೂಜಾ ಮಹೋತ್ಸವದಲ್ಲಿ. ಒಟ್ಟಿನಲ್ಲಿ ವಿಜಯಪುರವು ಪ್ರತಿಯೊಂದು ಮಹತ್ಕಾರ್ಯದಲ್ಲಿ ಜಯಸುತ್ತಿವೆ ಸತ್ಯ.

ಹತ್ತೊಂಭತ್ತನೂರಾ ಐವತ್ನಾಲ್ಕನೇ ಇಶ್ವಿಯ ಕೊನೆಯ ತಿಂಗಳದ ಎರಡನೆಯ ವಾರದ ಪ್ರಾರಂಭದಲ್ಲಿ ನೋಡಬೇಕಿತ್ತು ವಿಜಯಪುರವನ್ನು. ಇಂದ್ರ ಪಟ್ಟಣವೋ-ಕುಬೇರನ ಸಿರಿವಂತಿಕೆಯ ಬೆಡಗೋ, ಆ ಶಿವನ ಕೈಲಾಸವೋ, ಅಥವಾ ಹನ್ನೆರಡನೆಯ ಶತಮಾನದ ಬಸವಣ್ಣನ ಬಸವ ಕಲ್ಯಾಣವೋ, ಎಂದು ಭಾಸವಾಗುತ್ತಿತ್ತು ಅಂದು ವಿಜಯಪುರವು.

ಐತಿಹಾಸಿಕ ಪಟ್ಟಣ, ಧರ್ಮಗಳ ಕೇಂದ್ರ, ರಾಜರ ರಾಜಧಾನಿ. ಪ್ರಸಿದ್ಧ ಕಟ್ಟಡ ಆಗರ, ಎಂದು ತಲೆಯೆತ್ತಿ ನಿಂತಿರುವ ಗೋಲಗುಮ್ಮಟವು ಇಂದಿಗೂ ಏಳು ಏಳು ಸಾರಿ ಒದರೊದರಿ ಹೇಳುತ್ತಿದೆ. ಇನ್ನಾವುದಕ್ಕೆ ಕೊರತೆ ವಿಜಯಪುರಕ್ಕೆ ?

ಈಗ ಜನದ ಮನ ಎತ್ತೆತ್ತೊ ಸಾಗಿದೆ. ಎಂದೆಂದಿಗೂ ಕರ್ನಾಟಕವು ಭಕ್ತಿಯುದಯದ ಸ್ಥಾನ ಎಂಬ ಅಂದಿನ ಮಾತು ಇಂದು ಕರಗತೊಡಗಿದೆ. ಗಾಣಕ್ಕೆ ಕಟ್ಟಿದ ಕೋಣವು ಲಗುಬಗೆಯಿಂದ ನಡೆಯಲು ನೊಗದ ಮುಂದೆ ಮೊಳ ಅಂತರದಲ್ಲಿ ಒಂದು ಸಿವಡು ಹಸಿ ಮೇವು ಕಟ್ಟಿದಾಗ ಅದರಾಸೆಯಿಂದ ಓಡಿ ಓಡಿ ದಣಿಯುವಂತೆ ವಿಷಯಗಳಾಸೆಯಿಂದ ಜನ ಓಡಹತ್ತಿದೆ. ಅಂತೆಯೇ ಅಣ್ಣನವರು ಈ ರೀತಿ ನುಡಿದಿದ್ದಾರೆ—

ವಿಷಯ ವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ ।
ಪಶುವೇನ ಬಲ್ಲುದು ? ಹಸುರೆಂದೆಳಸುವದು. ವಿಷಯ । ರಹಿತನ ಮಾಡಿ
ಭಕ್ತಿ ರಸವ ದಣಿಯ ಮೇಯಿಸಿ ಸುಬುದ್ಧಿ ಎಂಬ । ಉದಕವನೆರೆದು
ನೋಡಿ ಸಲುಹಯ್ಯಾ ಕೂಡಲಸಂಗಮದೇವಾ ।

ಅದಕ್ಕಾಗಿ ಅದು ಮಿಥ್ಯ. ಸತ್ಯದ ಕಡೆ ನಿಮ್ಮ ಮನ ಹೊರಳಲಿ ! ಭಕ್ತಿಯ ಓಘ ನಿಮ್ಮಲ್ಲಿ ಅರಳಲಿ! ಅಂತೆಯೇ ಆಗಿ ಹೋದ ಮಹಾಶರಣರ ಸ್ಮರಣೆಗಾಗಿ ಓರ್ವ ಶಿವಸ್ವರೂಪಿ ಶಿವಯೋಗಿಗಳವರು ವಿಚಾರಿಸಿ ಏಳು ನೂರಾ ಎಪ್ಪತ್ತು ಅಮರ ಗಣಾಧೀಶ್ವರರ ಪೂಜಾ ಮಹೋತ್ಸವದ ನಿಮಿತ್ಯ ಕೂಡಿಸಿದರು, ಸುಮಾರು ಮೂರು ಲಕ್ಷ ಜನ ಸಮೂಹವನ್ನು. ವಿಜಯಪುರವು ಅದರಲ್ಲಿಯೂ ವಿಜಯಿಯಾಯಿತೆ ? ? ? ಹೌದು! ಹೌದು! ಎಂದು ಘಂಟಾ ಘೋಷವಾಗಿ ಹೇಳಬಹುದು. ನಂಬಿಗೆಯಾಗದಿದ್ದಲ್ಲಿ ಓದಿ ವಾಚಕರು ನಿರ್ಧರಿಸ ಬಹುದು.

ಶ್ರೀ ಶಿವಯೋಗಿಗಳವರು ಕೂಡಿಸಿದ ಈ ಜನತೆ ಜಾತ್ರೆಗಲ್ಲ. ಆಧ್ಯಾತ್ಮಿಕತೆಯ ಖಣಿ ಹೆಂಗೆಡವಿ ಭಕ್ತಿಯ ರಸದೂಟ ಸವಿಯಲು, ಅಮರ ತತ್ವಗಳನ್ನು ಅರಿಯಲು ಜನತೆ ಸುತ್ತಲಿನಿಂದ ಕೂಡಿತ್ತು. ಓಬ್ಬರಿಗೂ ಬೇಜಾರ ಬೇಸರಿಕೆಗಳಿಲ್ಲ. ಹಲವರಿಗೆ ಭಾಷೆ ತಿಳಿದರೂ ವಿಷಯ ತಿಳಿಯದು. ಆದರೂ ಶಾಂತತೆ ಇದೊಂದು ಭಕ್ತಿಯ ಓಘ . ಇರಲಿ ! ಸಭೆಗಳಲ್ಲಿ ಮಾತನಾಡುವವರು ಮಹಾ ಮಹಾ ಯೋಗಿಗಳು, ತ್ಯಾಗಿಗಳು, ಜ್ಞಾನಿಗಳು. ಸರ್ವ ಧರ್ಮ

ಪರಿಷತ್ತು, ಶಿವಾನುಭವ ಸಮ್ಮೇಲನ, ಅಕ್ಕನ ಬಳಗ, ಎಲ್ಲವೂ ಒಂದೊಂದಾಗಿ ಎಡಬಿಡವೆ ಮೆರವಣಿಗೆಯ ಚಾಗೆಯಂತೆ ಸಾಗಿದ್ದವು. ಊಟಕ್ಕೆ ಮನಸ್ಸಿಲ್ಲ. ಜನ ಕಡಲವೆ ಕಿವಿ ಮನ, ಕಣ್ಣರಳಿಸಿ ಕೇಳುತ್ತಿದೆ. ನಿಜ ಅಣ್ಣನವರ ಅನುಭವ ಮಂಟಪದ ಪ್ರತಿರೂಪವದು. ಒಬ್ಬ ಹೋಟಲ್ ಮಾಲಿಯಿಂದ ಮೇಲಿನ ಸರಕಾರೀ ನೌಕರರ ವರೆಗೆ ಸಮಾಧಾನ, ಶಾಂತಿ, ಸಹನತೆ ಅಂದು ಅವರಲ್ಲಿ ಮನೆಮಾಡಿ ಕೊಂಡಿದ್ದವೆಂದರೆ ತಪ್ಪಾಗದು.

## ಸರ್ವಧರ್ಮ ಪರಿಷತ್ತು

ಯಾರಾದರೂ ಧರ್ಮ ಇದೆಯೇ ಎಂದು ಪ್ರಶ್ನಿಸಿದರೆ ಅದೆ ಎಂದು ನಮ್ಮ ಉತ್ತರ. ಹಾಗಾದರೆ ನಿಮ್ಮ ಧರ್ಮ ಯಾವುದೆಂದು ಕೇಳಿದರೆ ನಮ್ಮದು " ಧರ್ಮ ", ಇಷ್ಟೇ ಒಲ್ಲೆ ಎಂದು ಮಾನ್ಯ ಪ್ರೊ, ರಾನಡೆಯವರು ನುಡಿದರು.

ಇಂಥ ಮಹಾಕಾರ್ಯದಲ್ಲಿದ್ದ ಸರ್ವ ಧರ್ಮ ಪರಿಷತ್ತನ್ನು ಕೂಡಿಸಿದಾಗ ಆ ಪರಿಷತ್ತಿಗಾಗಿ ಮಾತನಾಡಲು ಕರೆಸಿದ ಗಣ್ಯ ವ್ಯಕ್ತಿಗಳನ್ನು ಅರಿಸಿದ್ದು ಹಾಗೂ ಜೈನ, ಹಿಂದೂ, ಬೌದ್ಧ, ವೀರಶೈವ, ಈ ಎಲ್ಲ ಧರ್ಮಗಳ ಬಗ್ಗೆ ಸಹಕಾರದಿಂಡ ವಿಷಯ ಇಟ್ಟು ಚರ್ಚಿಸುವದನ್ನು ನಾನು ವಿಚಾರಿಸುತ್ತಿರುವಾಗ ಈ ಮಹೋತ್ಸವ ಕಮಿಟಿಯವರು ತಮ್ಮ ಧರ್ಮದ ತತ್ವಗಳನ್ನು ತಾವು ಚೆನ್ನಾಗಿ ಓದಿ ಅರಗಿಸಿಕೊಂಡಿರುವರೆಂದು ನನ್ನ ಅಂತರಾತ್ಮ ಸಾಕ್ಷಿಯಾಗಿ ಹೇಳುತ್ತಿದೆ, ಎಂದು ಮಹಾಯೋಗಿಗಳಾದ ಸಂಬುದ್ಧ ಸ್ವಾಮೀಜಿಯವರು ನುಡಿದರು.

ಯಾರೇ ಇರಲಿ, ಲಿಂಗಾಂಗ ಸಾಮರಸ್ಯವನ್ನು ಹೇಳುವವರೇ ವೀರಶೈವರು. ಜ್ಯೋತಿಯೊಡನೆ ಕಪ್ಪುರವು ಕರಗಿ ನಿರಾಕಾರವಾಗಿ ಶೂನ್ಯವಾದ ಅಪ್ಪುವದೇ ಲಿಂಗಾಂಗ ಸಾಮರಸ್ಯ. ಅರ್ಥಾತ್ ಅಂಗಲಿಂಗಗಳು ಒಂದಕ್ಕೊಂದು ಬೆರೆಯುವದು, ಹಾಗೂ ಲಿಂಗಕ್ಕಿಂತಲೂ ಜಂಗಮಕ್ಕೆ ಬೆಲೆ. ಜಂಗಮದಿಂದ ಲಿಂಗೋತ್ಪತ್ತಿ, ವೀರಶೈವರಲ್ಲಿ ಜ್ಞಾನವೇ ಕ್ರಿಯಾಮಯವಾಗುತ್ತಿದೆ. ಕ್ರಿಯೆಯಿಂದ ಜ್ಞಾನವಲ್ಲ ಅರ್ಥಾತ್ ಹೊರಗಿನಿಂದ ತತ್ವಗಳು ಬರುವದಿಲ್ಲ. ಒಳಗಿನಿಂದ ತತ್ವಗಳು ಹೊರ ಬರುತ್ತಿವೆ. ಮತ್ತು ಒಂದರಿಂದ ಅನೇಕತ್ವ, ಅನೇಕದಿಂದ ಏಕತ್ವ. ಅಂದರೆ ಬೀಜದಿಂದ ಗಿಡ, ಎಲೆ, ಹೂ, ಕಾಯಿ, ಹಣ್ಣು. ಹಣ್ಣಿನಿಂದ ಬೀಜ ಮುಂದುವರೆದು, ಕಾಲಗಳಲ್ಲಿ ಎರಡು ಪ್ರಕಾರ. ಒಂದು ಆಶಾ ಮತ್ತೊಂದು ನಿರಾಶಾ. ಆಶಾ ಹೆಣ್ಣು

ನಿರಾಶಾ ಗಂಡು, ಹೀಗೆ ಅನೇಕ ರೀತಿಯಿಂದ ಸಾಮಾನ್ಯ ಜನತೆಗೂ ತಿಳಿ ಯುವಂತೆ ಮಹತ್ವವಾದ ವಿಶ್ವ ಧರ್ಮದ ಸುಂದರ ತತ್ವಗಳನ್ನು ಬಿಡಿ ಮುತ್ತಿನಂತೆ ಬಿಚ್ಚಿ ಬಿಚ್ಚಿ ಇಡುತ್ತಿದ್ದರು, ಪರಮ ಪೂಜ್ಯ ಶ್ರೀ ಮ. ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳವರು ಮುಧೋಳ. ಇನ್ನೂ ಹಲವು ಬಗೆಯಾಗಿ ಒಳ್ಳೇ ಒಳ್ಳೇ ಮಹತ್ಪೂರ್ಣವಾದ ವಿಷಯಗಳನ್ನು ಮಹಾ ಮಹಾ ಪಂಡಿತರು ಮಾತನಾಡಿ ಜನತೆಯ ಮನವನ್ನು ಏಕಸ್ಥಿತಿಗೆ ತಂದು ನಿಲ್ಲಿಸಿದ್ದರು. ಇದು ಅನುಭವ ಮಂಟಪದ ಪ್ರತಿರೂಪ. ನಿಜ ನಿಜ.

## ಶಿವಾನುಭವ ಸಮ್ಮೇಲನ

ಶಿವಾನುಭವ ಸಮ್ಮೇಲನವಂತೂ ಅಣ್ಣನವರ ಅನುಭವ ಮಂಟಪದ ಸ್ಥಿರ ಅಸ್ತಿಯೆಂದು ಹೇಳಬಹುದು. ಕೈಯೆತ್ತಿ ಉಪದೇಶ ಮಾಡುವಾಗ ನಮ್ಮ ಕೈ ನೋಡುತ್ತಿದೆ. ಜನ ಮಾತಿಗಿಂತ ಕೃತಿಬೇಕು. ಅಂದು ಶರ ಣರು ಊರೂರಿಗೆ ಸಭೆ ಕೂಡಿಸಿ ಉಪದೇಶ ಮಾಡಲಿಲ್ಲ. ಕೃತಿಯಿಂದ ತೋರಿಸಿದರು ತಮ್ಮ ಅಮೋಘ ಶಕ್ತಿಯನ್ನು. ಅದಕ್ಕಾಗಿಯೇ ಅಣ್ಣನ ವರು ನುಡಿದಿದ್ದಾರೆ. "ಕಾಯಕವೇ ಕೈಲಾಸ" ವೆಂದು ಕರ್ಮಯೋಗದ ಮುಂದೆ ಜ್ಞಾನಯೋಗ ಮಡಚಿ ಬೀಳುತ್ತದೆ ಎಂದು ಹೇಳುತ್ತಿದ್ದಾರೆ. ಕಾರಣ ಶರಣರ ವಾಙ್ಮಯದ ವಿಷಯವಾಗಿ ಕೃತಿಬೇಕೆಂದು ಈ ಸಮ್ಮೇ ಲನ ನೆರೆಯಿಸಿತ್ತು. ಅದೇ ಕಾರ್ಯದಲ್ಲಿ ಸತತವಾಗಿ ಮುವತ್ತು ವರ್ಷ ಗಳ ವರೆಗೆ ಕಾರ್ಯ ಮಾಡುತ್ತ ಬಂದ ವಚನಶಾಸ್ತ್ರ ಪಿತಾಮಹರಾದ ಪೂಜ್ಯ ರಾ|| ಬ|| ಪಿ. ಜಿ. ಹಳಕಟ್ಟಿಯವರು ಈ ಕಾರ್ಯದ ಸಂಚಾ ಲಕರಾದರು. ಅವರು ಯಾವಾಗಲೂ ಈ ಪೂರ್ವದಲ್ಲಿ ಈ ಕಾರ್ಯ ವನ್ನು ಸ್ವತಂತ್ರವಾಗಿ ಮಾಡುತ್ತ ಬಂದವರು, ಮಾಡುತ್ತಿದ್ದಾರೆ. ಮುಂದೆಯೂ ಮಾಡುವರು. ಅಂಥ ಕರ್ಮಯೋಗಿಗಳನ್ನು ಕಾಯಕೆ ನಿಯಮಿಸಿದ್ದು ಮೆರಗು ಎಂದು ಹೇಳಬಹುದು ಆ ಕಾರ್ಯಕ್ಕಾಗಿ ಇವೆ ಲ್ಲಕ್ಕೂ ಕಾರಣರಾದ ಮಹಾನ್ ಶಿವಯೋಗಿಗಳವರು ಸಭೆಯಲ್ಲಿಯೇ ಐದು ಸಾವಿರ ರೂಪಾಯಿಗಳನ್ನು ವಾಗ್ದಾನ ಮಾಡಿದರು. ಅಲ್ಲದೆ ಸಭೆ ಯಲ್ಲಿ ಆರುನೂರಾ ಒಂದು ರೂಪಾಯಿ ಸಭ್ಯ ಗೃಹಸ್ಥರು ವಾಗ್ದಾನ ಮಾಡಿದರು. ಇದೊಂದು ಬೆಳಕಿನ ಕಾಲ. ಇರಲಿ!

## ಅಕ್ಕನ ಬಳಗ

ಇದಂತೂ ಮಹಾದೇವಿಯಕ್ಕನ ನೈಜ ಬಳಗ ಅಂದು ಕೂಡಿದಂತಾಗಿತ್ತು. ಆ ಬಳಗದ ಸಭೆ ನೋಡಿದಾಗ ಪ್ರತಿಯೊಬ್ಬರೂ ಅನುಭವ ಮಂಟಪದ ನೆನಹು ತೆಗೆಯದೇ ಇರಲಾರರು. ಶರಣರು ಅಕ್ಕಂದಿರಿಗಾಗಿ ಕೊಟ್ಟ ಮಾನ್ಯತೆ ಅವರ ಜ್ಞಾನದ ಮಿಂಚು. ಸಹನತೆ ಇವೆಲ್ಲವೂ ಇಂದಿನ ಅಕ್ಕನ ಬಳಗದಲ್ಲಿ ಕಂಡುಬರುತ್ತಿತ್ತು. ಅಲ್ಲದೆ ಹೆಣ್ಣಿನಲ್ಲಿ ಒಂದು ಅದ್ಭುತ ಶಕ್ತಿ ಇದೆ ಎಂಬ ಮಾತು ಕೇವಲ ಪುಸ್ತಕಗಳಿಂದ ಓದಿ ತಿಳಿಯುವದಿಲ್ಲ. ಇಂದು ಆ ಸಭೆಯಲ್ಲಿ ಪ್ರತ್ಯಕ್ಷ ಕಂಡು ನಿರ್ಣಯಿಸಿಕೊಂಡಂತೆ ಆಗಿತ್ತು. ಆದಕ್ಕಾಗಿಯೇ ಸಿದ್ಧರಾಮ ತಂದೆಗಳು —

ತಾ ಮಾಡಿದ ಹೆಣ್ಣು ತೊಡೆಯನೇರಿತ್ತು ।
ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯನೇರಿತ್ತು ।
ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು ।
ಅದು ಕಾರಣ ಹೆಣ್ಣು ಹೆಣ್ಣಲ್ಲ. ಹೆಣ್ಣು ರಾಕ್ಷಸಿಯಲ್ಲ ।
ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ ||

ಅದಕ್ಕೊಪ್ಪುವಂತೆಯೇ ಇಂದಿನ ಬಳಗಕ್ಕೆ ಕನ್ನಡನಾಡಿನಲ್ಲಿ, ಇಷ್ಟೇ ಏಕೆ ಪರನಾಡಿನಲ್ಲಿಯೂ ಒಡೆದು ಕಾಣುವ ಶ್ರೀಮತಿ ಜಯದೇವಿತಾಯಿ ಲಿಗಾಡೆ, ಶ್ರೀಮತಿ ಪದ್ಮಾವತಿದೇವಿ ಅಂಗಡಿ ಇವರ ಹಿರಿತನದಲ್ಲಿ ಅಕ್ಕನ ಬಳಗವು ನಡೆದಿತ್ತು.

ಇವೆಲ್ಲ ಕಾರ್ಯಕ್ರಮಗಳು ಒಂದೊಂದು ಬಗೆಯಾಗಿ ಒಂದೊಂದು ರೀತಿಯಿಂದ ಒಳ್ಳೇ ವ್ಯವಸ್ಥಿತ ರೀತಿಯಾಗಿ ನಡೆದವು. ಇನ್ನು ಬಂದ ಸುಮಾರು ಮೂರು ಲಕ್ಷ ಜನಗ್ಕಾಗಿ ನೀರಿನ, ಇಳಿದುಕೊಳ್ಳುವ, ವ್ಯವಸ್ಥೆ ಮಾಡಲಾಗಿತ್ತು. ಯಾವ ತರದ ಅನಾಹುತಗಳಿಲ್ಲ. ನನಗೆ ತ್ರಾಸಾಯಿತು ಎಂಬ ಶಬ್ದ ಒಬ್ಬರ ಬಾಯಿಂದಲೂ ಇಲ್ಲ. ಇಂಥ ಮಹತ್ಕಾರ್ಯಗಳು ಇನ್ನು ಮುಂದೆಂದೂ ಆಗಲಾರವು ಎಂಬ ನುಡಿ ಪ್ರತಿಯೊಬ್ಬರ ಬಾಯಿಂದ ಹೊರಸೂಸುತ್ತಿತ್ತು. ಎಲ್ಲವೂ ಶಾಂತಮಯ, ಜನರ ಓಘವೆಲ್ಲ ಭಕ್ತಿಯಲ್ಲಿ. ಭಕ್ತಿಯ ಮಹಾ ಸಾಗರದಲ್ಲಿ ಮೂರು ಲಕ್ಷ ಜನ ಮುಳುಗಿಬಿಟ್ಟಿತ್ತು. ಅಂತೆಯೇ ಅಣ್ಣನವರು ಈ ರೀತಿ ನುಡಿದಿದ್ದಾರೆ. "ಭಕ್ತಿಯ

ನಿರಾಶಾ ಗಂಡು, ಹೀಗೆ ಅನೇಕ ರೀತಿಯಿಂದ ಸಾಮಾನ್ಯ ಜನತೆಗೂ ತಿಳಿಯುವಂತೆ ಮಹತ್ವವಾದ ವಿಶ್ವ ಧರ್ಮದ ಸುಂದರ ತತ್ವಗಳನ್ನು ಬಿಡಿ ಮುತ್ತಿನಂತೆ ಬಿಚ್ಚಿ ಬಿಚ್ಚಿ ಇಡುತ್ತಿದ್ದರು, ಪರಮ ಪೂಜ್ಯ ಶ್ರೀ ಮ. ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳವರು ಮುಧೋಳ. ಇನ್ನೂ ಹಲವು ಬಗೆಯಾಗಿ ಒಳ್ಳೇ ಒಳ್ಳೇ ಮಹತ್ಪೂರ್ಣವಾದ ವಿಷಯಗಳನ್ನು ಮಹಾ ಮಹಾ ಪಂಡಿತರು ಮಾತನಾಡಿ ಜನತೆಯ ಮನವನ್ನು ಏಕಸ್ಥಿತಿಗೆ ತಂದು ನಿಲ್ಲಿಸಿದ್ದರು. ಇದು ಅನುಭವ ಮಂಟಪದ ಪ್ರತಿರೂಪ. ನಿಜ ನಿಜ.

## ಶಿವಾನುಭವ ಸಮ್ಮೇಲನ

ಶಿವಾನುಭವ ಸಮ್ಮೇಲನವಂತೂ ಅಣ್ಣನವರ ಅನುಭವ ಮಂಟಪದ ಸ್ಥಿರ ಅಸ್ತಿಯೆಂದು ಹೇಳಬಹುದು. ಕೈಯೆತ್ತಿ ಉಪದೇಶ ಮಾಡುವಾಗ ನಮ್ಮ ಕೈ ನೋಡುತ್ತಿದೆ. ಜನ ಮಾತಿಗಿಂತ ಕೃತಿಬೇಕು. ಅಂದು ಶರಣರು ಊರೂರಿಗೆ ಸಭೆ ಕೂಡಿಸಿ ಉಪದೇಶ ಮಾಡಲಿಲ್ಲ. ಕೃತಿಯಿಂದ ತೋರಿಸಿದರು ತಮ್ಮ ಅಮೋಘ ಶಕ್ತಿಯನ್ನು. ಅದಕ್ಕಾಗಿಯೇ ಅಣ್ಣನವರು ನುಡಿದಿದ್ದಾರೆ. "ಕಾಯಕವೇ ಕೈಲಾಸ" ವೆಂದು ಕರ್ಮಯೋಗದ ಮುಂದೆ ಜ್ಞಾನಯೋಗ ಮಡಚಿ ಬೀಳುತ್ತದೆ ಎಂದು ಹೇಳುತ್ತಿದ್ದಾರೆ ಕಾರಣ ಶರಣರ ವಾಙ್ಮಯದ ವಿಷಯವಾಗಿ ಕೃತಿಬೇಕೆಂದು ಈ ಸಮ್ಮೇಲನ ನೆರೆಯಿಸಿತ್ತು. ಅದೇ ಕಾರ್ಯದಲ್ಲಿ ಸತತವಾಗಿ ಮುವತ್ತು ವರ್ಷಗಳ ವರೆಗೆ ಕಾರ್ಯ ಮಾಡುತ್ತ ಬಂದ ವಚನಶಾಸ್ತ್ರ ಪಿತಾಮಹರಾದ ಪೂಜ್ಯ ರಾ|| ಬ|| ಪಿ. ಜಿ. ಹಳಕಟ್ಟಿಯವರು ಈ ಕಾರ್ಯದ ಸಂಚಾಲಕರಾದರು. ಅವರು ಯಾವಾಗಲೂ ಈ ಪೂರ್ವದಲ್ಲಿ ಈ ಕಾರ್ಯವನ್ನು ಸ್ವತಂತ್ರವಾಗಿ ಮಾಡುತ್ತ ಬಂದವರು, ಮಾಡುತ್ತಿದ್ದಾರೆ. ಮುಂದೆಯೂ ಮಾಡುವರು. ಅಂಥ ಕರ್ಮಯೋಗಿಗಳನ್ನು ಕಾಯಕೆ ನಿಯಮಿಸಿದ್ದು ಮೆರಗು ಎಂದು ಹೇಳಬಹುದು ಆ ಕಾರ್ಯಕ್ಕಾಗಿ ಇವೆಲ್ಲಕ್ಕೂ ಕಾರಣರಾದ ಮಹಾನ್ ಶಿವಯೋಗಿಗಳವರು ಸಭೆಯಲ್ಲಿಯೇ ಐದು ಸಾವಿರ ರೂಪಾಯಿಗಳನ್ನು ವಾಗ್ದಾನ ಮಾಡಿದರು. ಅಲ್ಲದೆ ಸಭೆಯಲ್ಲಿ ಆರುನೂರಾ ಒಂದು ರೂಪಾಯಿ ಸಭ್ಯ ಗೃಹಸ್ಥರು ವಾಗ್ದಾನ ಮಾಡಿದರು. ಇದೊಂದು ಬೆಳಕಿನ ಕಾಲ. ಇರಲಿ!

## ಅಕ್ಕನ ಬಳಗ

ಇದಂತೂ ಮಹಾದೇವಿಯಕ್ಕನ ನೈಜ ಬಳಗ ಅಂದು ಕೂಡಿದಂತಾಗಿತ್ತು. ಆ ಬಳಗದ ಸಭೆ ನೋಡಿದಾಗ ಪ್ರತಿಯೊಬ್ಬರೂ ಅನುಭವ ಮಂಟಪದ ನೆನಹು ತೆಗೆಯದೇ ಇರಲಾರರು. ಶರಣರು ಅಕ್ಕಂದಿರರಿಗಾಗಿ ಕೊಟ್ಟ ಮಾನ್ಯತೆ ಅವರ ಜ್ಞಾನದ ಮಿಂಚು, ಸಹನತೆ ಇವೆಲ್ಲವೂ ಇಂದಿನ ಅಕ್ಕನ ಬಳಗದಲ್ಲಿ ಕಂಡುಬರುತ್ತಿತ್ತು. ಅಲ್ಲದೆ ಹೆಣ್ಣಿನಲ್ಲಿ ಒಂದು ಅದ್ಭುತ ಶಕ್ತಿ ಇದೆ ಎಂಬ ಮಾತು ಕೇವಲ ಪುಸ್ತಕಗಳಿಂದ ಓದಿ ತಿಳಿಯುವದಿಲ್ಲ. ಇಂದು ಆ ಸಭೆಯಲ್ಲಿ ಪ್ರತ್ಯಕ್ಷ ಕಂಡು ನಿರ್ಣಯಿಸಿಕೊಂಡಂತೆ ಆಗಿತ್ತು. ಆದಕ್ಕಾಗಿಯೇ ಸಿದ್ಧರಾಮ ತಂದೆಗಳು —

ತಾ ಮಾಡಿದ ಹೆಣ್ಣು ತೊಡೆಯನೇರಿತ್ತು ।<br>
ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯನೇರಿತ್ತು ।<br>
ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು ।<br>
ಅದು ಕಾರಣ ಹೆಣ್ಣು ಹೆಣ್ಣಲ್ಲ. ಹೆಣ್ಣು ರಾಕ್ಷಸಿಯಲ್ಲ ।<br>
ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ ॥

ಅದಕ್ಕೊಪ್ಪುವಂತೆಯೇ ಇಂದಿನ ಬಳಗಕ್ಕೆ ಕನ್ನಡನಾಡಿನಲ್ಲಿ, ಇಷ್ಟೇ ಏಕೆ ಪರನಾಡಿನಲ್ಲಿಯೂ ಒಡೆದು ಕಾಣುವ ಶ್ರೀಮತಿ ಜಯದೇವಿತಾಯಿ ಲಿಗಾಡೆ, ಶ್ರೀಮತಿ ಪದ್ಮಾವತಿದೇವಿ ಅಂಗಡಿ ಇವರ ಹಿರಿತನದಲ್ಲಿ ಅಕ್ಕನ ಬಳಗವು ನಡೆದಿತ್ತು.

ಇವೆಲ್ಲ ಕಾರ್ಯಕ್ರಮಗಳು ಒಂದೊಂದು ಬಗೆಯಾಗಿ ಒಂದೊಂದು ರೀತಿಯಿಂದ ಒಳ್ಳೇ ವ್ಯವಸ್ಥಿತ ರೀತಿಯಾಗಿ ನಡೆದವು. ಇನ್ನು ಬಂದ ಸುಮಾರು ಮೂರು ಲಕ್ಷ ಜನಗ್ಗಾಗಿ ನೀರಿನ, ಇಳಿದುಕೊಳ್ಳುವ, ವ್ಯವಸ್ಥೆ ಮಾಡಲಾಗಿತ್ತು. ಯಾವ ತರದ ಅನಾಹುತಗಳಿಲ್ಲ. ನನಗೆ ತ್ರಾಸಾಯಿತು ಎಂಬ ಶಬ್ದ ಒಬ್ಬರ ಬಾಯಿಂದಲೂ ಇಲ್ಲ. ಇಂಥ ಮಹತ್ಕಾರ್ಯಗಳು ಇನ್ನು ಮುಂದೆಂದೂ ಆಗಲಾರವು ಎಂಬ ನುಡಿ ಪ್ರತಿಯೊಬ್ಬರ ಬಾಯಿಂದ ಹೊರಸೂಸುತ್ತಿತ್ತು. ಎಲ್ಲವೂ ಶಾಂತಮಯ, ಜನರ ಓಘವೆಲ್ಲ ಭಕ್ತಿಯಲ್ಲಿ. ಭಕ್ತಿಯ ಮಹಾ ಸಾಗರದಲ್ಲಿ ಮೂರು ಲಕ್ಷ ಜನ ಮುಳುಗಿಬಿಟ್ಟಿತ್ತು. ಅಂತೆಯೇ ಅಣ್ಣನವರು ಈ ರೀತಿ ನುಡಿದಿದ್ದಾರೆ. "ಭಕ್ತಿಯ

ಹೊರತು ಜಗತ್ತಿನಲ್ಲಿ ಎಲ್ಲವೂ ಅಸ್ಥಿರ. ಎಲೋ ಮನುಷ್ಯನೇ ಹೆಚ್ಚಿನ ಆಶೆ ತರವಲ್ಲ. ನೀನು ಸ್ಥಿರ ಪದವಿಯನ್ನು ಬೇಡಿಕೊಳ್ಳು. ಅದು ಯಾವ ದೆಂದರೆ ಸಂಗಮನಾಥನ ಭಕ್ತಿ."

ಇನ್ನು ಆ ಜಾಗೆ ಮೊದಲು ಹಾಳು ಬೀಳು. ಅಂಥ ಜಾಗೆ ಇಂದು ವೈಭವ ಶಿಖರಕ್ಕೇರಿದ್ದು ಅಷ್ಟೇನು ಆಶ್ಚರ್ಯವಲ್ಲ. ಏಳುನೂರಾ ಎಪ್ಪತ್ತು ಅಮರಗಣಾಧೀಶ್ವರರ ಪ್ರತಿನಿಧಿಗಳಾದ ಮಹಾ ಮಹಾ ಏಳುನೂರಾ ಎಪ್ಪತ್ತು ಶರಣರು ತುಳಿದ ಸ್ಥಳವದು ನಿದ್ರಿಸಿದ ಸ್ಥಳವದು. ಕುಳಿತ ಸ್ಥಳವದು ಮಾತನಾಡಿದ ಸ್ಥಳವದು. ಅದಕ್ಕಾಗಿ ಅಣ್ಣನವರು—

ಶರಣ ನಿದ್ರೆಗೈದರೇ ಜಪ ಕಾಣಿರೋ ।
ಶರಣನೆದ್ದು ಕುಳಿತರೆ ಶಿವರಾತ್ರಿ ಕಾಣಿರೋ ।
ಶರಣ ನಡೆದುದೇ ಪಾವನ ಕಾಣಿರೋ ।
ಶರಣ ನುಡಿದುದೇ ಶಿವತತ್ವ ಕಾಣಿರೋ ।
ಕೂಡಲ ಸಂಗನ ಶರಣರ ಕಾಯವು ಕೈಲಾಸ ಕಾಣಿರೋ ।

ಎಂದು ನುಡಿದಿದ್ದಾರೆ. ಇನ್ನೇನು ಆ ಸ್ಥಳಕ್ಕೆ? ಅದು ಇಂದು ಪವಿತ್ರ. ಮುಂದೆಂದಿಗೂ ಪವಿತ್ರ. ಇಂಥ ಮಹಾತ್ಕಾರ್ಯದಲ್ಲಿ ಎಲ್ಲವನ್ನೂ ಎಲ್ಲ ರೀತಿಯಾಗಿ ಸರಿಯಾಗಿ ಸಾಗಿಸಿಕೊಂಡು ಹೋಗಲು ಕಾರಣೀಭೂತರಾದ ಮಹಾಮಹಿಮರು ಇಪ್ಪತ್ತನೇ ಶತಮಾನದ ಅಣ್ಣನವರ ಅವತಾರಿಯಾದ ಶ್ರೀ ಬಂಥನಾಳ ಶಿವಯೋಗಿಗಳವರು. ಅಂತೂ ವಿಜಯಪುರವು ಇದರಲ್ಲಿ ಮಹಾ ವಿಜಯಶಾಲಿಯಾಯಿತು.

---

# ಬಸವ ಪ್ರಭೆ

(ಲೇ:- ಮ. ಮಲ್ಲಪ್ಪ. ಜ್ಞಾನಮಂದಿರ, ಹೆಲಗೂರು.)



ಬಸವನ ಪುಣ್ಯಕೀರ್ತಿಲತೆ ಬೇರ್ವರಿಯಿತ್ತುರಗೇಂದ್ರ ಲೋಕದೊಳ್
ದೆಸೆಗಳನಗ್ಗಳಂ ಮುಸುಕಿ ಪರ್ವಿದುದಾಗಳೆ ಮರ್ತ್ಯಲೋಕದೊಳ್
ಕುಸುಮಿತವಾಗಿ ಸೌರಭದಿ ಹೊಂಪುಳಿಯೊತ್ತಮರೇಂದ್ರ ಲೋಕದೊಳ್
ಪೊಸರಸ ಪೂರಿತಾಮಳಸುಧಾಫಳ ಮಾದುದುರುದ್ರ ಲೋಕದೊಳ್ ॥

— ಮಹಾಕವಿ ಹರಿಹರದೇವ

ಬಸವಪ್ರಭೆಯು ಜನಜೀವನದ ಮೇಲೆ ಸಾಮಾಜಿಕವಾಗಿ ಸಾಹಿತ್ಯಕವಾಗಿ, ಧಾರ್ಮಿಕವಾಗಿ ಹಬ್ಬಿಹರಿದು ಹೊಳಪನ್ನು ಹೊದಿಸಿದೆ. ಬಸವಣ್ಣನವರ ಸಾಂಸ್ಕೃತಿಕ ಜೀವನದ ಮಟ್ಟವು ಅತಿ ಉನ್ನತವಾದ ಹಾಗೂ ಅವರ ಅವಿರತ ಸಾಧನೆಯಿಂದ, ಅವಿಶ್ರಾಂತ ಪರಿಶ್ರಮದಿಂದ ಆದ ಅಂತರಂಗದ ಸೌಂದರ್ಯವು ಸೂರೆಗೊಳ್ಳುವಂತಿದೆ. ಉನ್ನತ ಜೀವನಕ್ಕೆ ಅನುಗುಣವಾಗಿ ಉದಾತ್ತ ಸಾಹಿತ್ಯವು ಉದಯವಾಗುತ್ತದೆ. ಪ್ರಗತಿಪರ ಮನುಜನ ಹೃದಯಲೀಲೆಯು ಬಸವಣ್ಣನವರ ವಚನಗಳಲ್ಲಿ ಕಾಣಬರುತ್ತದೆ. ಇದರಲ್ಲಿ ವಿಚಾರದ ಗಾಂಭೀರ್ಯವಿರುವಂತೆಯೇ ಭಾವನೆಯ ಮಧುರತೆಯಿದೆ. ಇವರಲ್ಲಿ ಗದ್ಯಪದ್ಯದ ಲಕ್ಷಣಗಳಿವೆ. ಈ ವಚನಗಳು ಇಂಪಾಗಿಯೂ, ಸೊಂಪಾಗಿಯೂ, ಕಂಪಾಗಿಯೂ, ಪೆಂಪಾಗಿಯೂ, ಆನಂದ ತಲ್ಲೀನರನ್ನಾಗಿ ಮಾಡಿಸುತ್ತವೆ. ಪಂಡಿತರ ಸೊತ್ತಾಗಿದ್ದ ಸಾಹಿತ್ಯವನ್ನು ಸಾಮಾನ್ಯ ಜನರ ಸೊತ್ತಾಗಿ ಮಾಡಿದ ಮಹಾಭಾಗ್ಯವು ಮಹಾನುಭಾವಿ ಬಸವಣ್ಣನವರಿಗೆ ಸೇರಿದೆ. ಸಂಸ್ಕೃತ ಶೃಂಖಲೆಯನ್ನು ಕಿತ್ತುಹಾಕಿ ಕನ್ನಡದ ಕಿಂಕಾಪಿನ ವೈಭವದಿಂದ ಮೆರೆಯುವ ಭಾಗ್ಯವು ಬಸವಣ್ಣನವರಿಂದ ಬಂದಿದೆ. ಅಶಿಕ್ಷಿತ ಜನಾಂಗದ ಕೈದೀಪವಾಗಿ ಸ್ಪಷ್ಟವಾಗಿ ಮತ್ತು ಸುಲಭವಾಗಿ ಹೃದಯಕ್ಕೆ ತಟ್ಟಿ, ಆತ್ಮದ ಅನುಭವವು ಸಹಜವಾಗಿ ಸೋರುವ ಸತ್ವಸಾಹಿತ್ಯವಾಗಿದೆ. ಆತ್ಮಸಂಯಮನದಿಂದ ಮಧುರವಾಗಿ ಕಿರಿದರಲ್ಲಿ ಹಿರಿದನ್ನು ಹೇಳುವರು. ಉದಾತ್ತಧ್ಯೇಯವಾದಿ, ಪ್ರಯತ್ನಶೀಲ, ಪ್ರಗತಿಪರ, ವಿಶಾಲಹೃದಯಿ ಬಸವಣ್ಣನವರು ಸರಳ ಹೃದಯ

ದಿಂದ ಸುಲಭಶೈಲಿ, ಗಂಭೀರ ವಿಚಾರದಿಂದ ಪ್ರೌಢಶೈಲಿ, ಆತ್ಮನಿರೀಕ್ಷಣೆ ಮತ್ತು ಜಗತ್ಕಲ್ಯಾಣತೆಯಿಂದ ಮಧುರಶೈಲಿ, ಆಧ್ಯಾತ್ಮಿಕತೆ ಹಾಗೂ ವೀರ ತನದಿಂದ ಮಹಾಶೈಲಿಯು ಈತನಿಗೆ ಸೌಲಭ್ಯದಿಂದ ಸಿಲ್ಕಿ ಸಕಲರೂ ಸಾವರಿಸುವ ಸಾಹಿತ್ಯವು ಬಸವಣ್ಣನವರಿಂದ ಸೃಷ್ಟಿಯಾಗಿ ಇಡೀ ಸಾಹಿತ್ಯ ಜಗತ್ತಿನಲ್ಲಿಯೇ ಒಂದು ಹೊಸ ಪ್ರಭೆಯು ಬಸವಣ್ಣನವರಿಂದ ಹರಡಿದೆ. ಶ್ರೀ ರಂಗನಾಥ ರಾಮಚಂದ್ರ ದಿವಾಕರರ 'ಅಂತರಾತ್ಮ' ಹಾಗೂ ಶ್ರೀ ಜೀರಗೆ ಕಟ್ಟಿ ಬಸವಪ್ಪನವರ 'ಕಟ್ಟಿಯ ಬಸವೇಶ್ವರನ ವಚನಗಳು' ಇದಕ್ಕೆ ನಿದರ್ಶನವಾಗಿವೆ. ಭಾರತದ ಬಾಪುಜಿಯವರ ಸುಂದರ ಜೀವನ ತತ್ವಗಳಾದ ಸತ್ಯ, ಅಹಿಂಸೆ ಬ್ರಹ್ಮಚರ್ಯ, ಅಸ್ತೇಯ, ಅಪರಿಗ್ರಹ, ಅಸ್ವಾದ, ಅಭಯ, ಅಸ್ಪೃಶ್ಯತಾ ನಿವಾರಣೆ, ವಿನಯ, ಸ್ವದೇಶಿ ಈ ದಶತತ್ವಗಳಂ ಈ ವಚನಗಳಲ್ಲಿ ಸುಗಂಧ ಸುವಾಸನೆಯನ್ನು ನೀಡುತ್ತವೆ.

ಆದ್ಯರ ವಚನ ಪರುಷ ಕಂಡರಣ್ಣಾ;
ಸದಾಶಿವನೆಂಬ ಲಿಂಗವನೆರಿನೆಂಬುವುದು.
ಅಯ್ಯಾ ಸಜ್ಜನ ಸದ್ಭಾವದ ಸಂಗದಿಂದ
ಮಹಾನುಭಾವರ ಕಾಣಬಹುದಯ್ಯಾ;

ಈತನ ವಿಚಾರ ಸ್ವಾತಂತ್ರ್ಯ, ಸತ್ಯಪ್ರೇಮ, ಆತ್ಮನಿರೀಕ್ಷಣೆ, ಸರ್ವ ಭೂತದಯೆ ಇಂದ್ರಿಯನಿಗ್ರಹ, ಕಷ್ಟಸಹಿಷ್ಣುತೆ, ನಿರತಯತ್ನ, ನಿರಂಹ ಕಾರವೃತ್ತಿ ನಿರಾಶೆ, ನಿರ್ಭೀತಿ, ಲೋಕವ್ಯವಹಾರ ಚತುರತೆ, ಲೌಕಿಕ ಪಾರಮಾರ್ಥಿಕಗಳ ಸುಂದರ ಸಮನ್ವಯ ದೃಷ್ಟಿಯೇ ಜೀವನದ ಪರಿಪೂ ರ್ಣತೆಯ ಚಿನ್ಹಗಳಾಗಿದ್ದವು. ತಮ್ಮ ಬುದ್ಧಿಲೋಪದಿಂದಾಗಿ ಪ್ರಪಂಚ ವನ್ನೇ ದ್ವೇಷಿಸುವ ದೂಷಿಸುವ ಮನುಜನ ಮನೋಭಾವವನ್ನು ತಿದ್ದು ವುದಕ್ಕಾಗಿ ಈತನು ಹೋರಾಡಿ ಹೆಣಗಾಡಿದ್ದಾನೆ. ಪ್ರಪಂಚವು ದುಃಖ ಮಯದಲ್ಲವು ಸುಖಮಯವಾಗಿದೆಯೆಂದು ಸುಖವನ್ನು ಹೊಂದುವ ಕರ್ಮ ಕೌಶಲ್ಯ ಹಾದಿಯಿದು ಬನ್ನಿರಿ ಎಂದು ಸತ್ಪಥದಲ್ಲಿ ಕರೆದು ತಂದ ಮಹಾ ವಿಭೂತಿಯು ಬಸವಣ್ಣ ಜಗತ್ತಿನಲ್ಲಿ ಇಂದು ಪಸರಿಸುವ ಅಶಾಂತಿಗೆ ಸೂಜಿಮದ್ದನ್ನು ಎಂದೋ ಕೊಟ್ಟು ಹೋಗಿರುವದನ್ನು ಅರಿತು ಅದರ ಪ್ರಭೆಯಿಂದ ಎನಿತು ಮಂದಿಯೋ ಕಣ್ಣು ಕಾಣುವಂತಾಗಿದ್ದಾರೆ. ಪಕ್ಷ ಪಾತವಿಲ್ಲದೆ ನಿರ್ದಾಕ್ಷಿಣ್ಯದಿಂದ ದುರ್ಗುಣಗಳನ್ನು ದೂರೀಕರಿಸಲು ಉತ್ಸಾ

ಹೀಗಳಾಗಿ ಬಸವಣ್ಣ ನುಡಿದಿದ್ದಾರೆ. ಯಾವ ಜಾತಿಯವನಾಗಲೀ ಆತನು ಸಚ್ಛೀಲನಾಗಿ, ಸದ್ಗುಣಿಯಾಗಿ, ಸಚ್ಚಾರಿತ್ರಕನಾಗಿ ನಡೆದರೆ ಆತನೇ ನನ್ನ ಗುರು ಎಂಬ ಭಾವನೆಯು ಇಂದಿನ ಜಗತ್ತಿನಲ್ಲಿ ತೂಸುತ್ತಿದೆ. ಐಹಿಕ ಆಮುಷ್ಮಿಕ ಜೀವನಗಳೆರಡರಲ್ಲಿಯೂ ಈತನು ಸಾಮ್ಯವಾದವನ್ನು ಸ್ಥಾಪಿಸಿರುತ್ತಾನೆ. ಮೇಲು ಕೀಳು ಎಂಬುದನ್ನು ಮಣ್ಣುಗೂಡಿಸಿ ಮಹಾ ಪುರುಷನಾಗಿ ಮೆರೆದಿರುತ್ತಾನೆ.

ಮೇಲಾಗಲೊಲ್ಲೆನು ಕೀಳಾಗಲೊಲ್ಲದೆ;
ಕೀಳಿಂಗಲ್ಲದೆ ಹಯನ ಕರೆವುದೆ?
ಮೆಲಾಗಿ ನರಕದೊಳೋಲಾಡಲಾರೆನು;
ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು;
ಮಹಾದಾನಿ ಕೂಡಲಸಂಗಮದೇವಾ

ಪರನಿಂದೆಯು ಆತ್ಮಘಾತುಕವಾದದ್ದು, ಸ್ವಾಪಹಾಸ್ಯವು ಉಚ್ಚತರ ವಾದದ್ದು, ಮನುಜನ ಸಂಘಾಭಿಲಾಷಿಯು. ಆತನು ಯಾವ ಮಟ್ಟದಲ್ಲಿದ್ದರೂ ಆತನಿಗೆ ಒಡನಾಡಿಗಳು ಬೇಕಲೇಬೇಕು. ಹೆಚ್ಚೇನ ಸವಿಯು ಸಜ್ಜನ ಸಂಗವು ಮಹಾಪುರುಷಗೆ ಅವಶ್ಯಕ. ರಜ್ಜನರ ಸಹವಾಸದಿಂದ ತನ್ನಲ್ಲಿಯ ಅರಿವಿನ ಕಿಡಿಯು ಆರದೆ ಪರಸ್ಪರ ಸಂಸಂರ್ಗದಿಂದ ಕೆಂಡ ವಾಗುವುದಕ್ಕೆ ಅನುಕೂಲತೆಯು ಒದಗುತ್ತದೆ. ಸಾಮಾನ್ಯರು ತಮ್ಮ ಮುಖಕ್ಕೆ ಮಸಿಯನ್ನು ಹಚ್ಚಿಕೊಂಡು ಇತರರ ನೊಸಲಿನಲ್ಲಿನ ತಿಲಕ ವನ್ನು ಎತ್ತಿ ಹಿಡಿಯುವಂತೆ ಪರರ ನಿಂದೆಯಲ್ಲಿಯೇ ತೂಗಾಡುವರು. ಜನಜಂಗುಳಿಯಲ್ಲಿ ತಾನೊಬ್ಬನೆಂದು ಹಿರಿಯರು ತಿಳಿದು, ಕೆಳಗೆ ನಿಲ್ಲುವ ಚಾತುರ್ಯದಿಂದ ಸದ್ವಿವೇಕದಿಂದ ರೇಖೆ ರೇಖೆಯನ್ನು ಕಂಡುಹಿಡಿದು ನಗೆಗೀಡು ಮಾಡುತ್ತಾರೆ. ಇದು ಬಲಿತಂತೆಲ್ಲ ಜ್ಞಾನಿಯ ಜಡವು ಜಜ್ಜಿ ಹೋಗಲು ಹಾದಿಯಾಗಿ, ಆತ್ಮ ಸಂಶೋಧನತ್ವವು ಅರಳುತ್ತದೆ. ಇದು ಸಜ್ಜನ ಸಹವಾಸದಿಂದ ಬರುತ್ತದೆ ಎಂಬುದನ್ನು ಬಸವಣ್ಣನವರು ಅರಿತು ಕೊಂಡಿದ್ದರು.

ಅಯ್ಯಾ ಸಜ್ಜನ ಸದ್‌ಭಾವದ ಸಂಗದಿಂದ
ಮಹಾನುಭಾವರ ಕಾಣಬಹುದಯ್ಯಾ

ಸಜ್ಜನ ಸಹವಾಸದಿಂದ ಪ್ರಸರಿಸುವ ಪ್ರಭೆಯನ್ನು ಬಸವಣ್ಣನವರು ಇಂತು ನೋಡಿರುವುದಲ್ಲದೆ ಆ ಪ್ರಭಾವಳಿಯಿಂದ ಪರಮ ಪಾವನರಾಗುವಂತೆ

ವಲವು ಮಂದಿಗೆ ಪಥವನ್ನು ಹಾಕಿಕೊಟ್ಟರು. ತಮ್ಮ ತಮ್ಮ ತಪ್ಪನ್ನು ಹೃದಯ ಬಿಚ್ಚಿ ಪ್ರದರ್ಶಿಸಿ ಅದನ್ನು ಒಪ್ಪಿಕೊಂಡು ನ್ಯಾಯ ಮಾರ್ಗ ನಾರು ನಡೆಯಲು ಅನುಷ್ಠಾನದ ಆದರ್ಶವನ್ನು ನಿದರ್ಶಿಸಿದರು.

ಇವರು ನ್ಯಾಯನಿಷ್ಠುರಿ, ದಾಕ್ಷಿಣ್ಯಪರರಲ್ಲ, ತಾವು ಹೆಚ್ಚು ಪರರು ಕೀಳೆಂದೆಣಿಸುವಂತಿಲ್ಲ. ಜನರ ಮೂಢ ನಂಬಿಕೆಯನ್ನೂ, ಕಂದಾಚಾರ ವನ್ನೂ ಕಟಕಟನೆ ಕತ್ತರಿಸಿದರು. ಜಗತ್ತಿನ ಪಲವು ಬಗೆಯ ದೇವ ರನ್ನು ಖಂಡಿಸಿ, ದೇವರೊಬ್ಬರೆಂಬ ಅಂಶವನ್ನು ಮಂಡಿಸಿದರು. ತಾಮ್ರ ಹಿತ್ತಾಳೆಯ ಮೂರ್ತಿಗಳನ್ನೂ, ಕಲ್ಲು ಮಣ್ಣಿನ ವಿಗ್ರಹಗಳನ್ನೂ ಅರ್ಚಿಸಿ ಆರಾಧಿಸುವವರ ಸೀಮಾಬದ್ಧ ತಿಳಿವಳಿಕೆಯನ್ನು ಹಂದುಹಂಚಲಾಕಿ ಹಂಗಿಸಿ ಛಂಗಿಸಿದರು. ಪ್ರಭುವಿನ ಗುಹೇಶ್ವರನಾಗಲೀ, ಮಹದೇವಿ ಯಕ್ಕನ ಚೆನ್ನಮಲ್ಲಿಕಾರ್ಜುನನಾಗಲೀ, ಸೊನ್ನಲಿಗೆಯ ಸಿದ್ಧರಾಮನ ಕಪಿಲಸಿದ್ಧ ಮಲ್ಲಿಕಾರ್ಜುನನಾಗಲೀ, ಚೆನ್ನಬಸವಣ್ಣನ ಕೂಡಲ ಚೆನ್ನ ಸಂಗಯ್ಯನಾಗಲೀ ಇವರ ದೃಷ್ಟಿಯಲ್ಲಿ ಭಗವಂತನೇ ಎನ್ನಬಹುದು. ಈ ಶಿವಶರಣರು ಕೀರ್ತಿಸಿದ ನಾಮಗಳೆಲ್ಲ ಮೂರ್ತಿಯ ನಾಮಗಳಲ್ಲ; ತಮ್ಮ ಹೃದಯಕ್ಕೆ ಒಪ್ಪುವ ನಾಮಗಳನ್ನು ಅವರು ಆರಿಸಿಕೊಂಡಿರುವವರೇ ಹೊರತು ಮತ್ತೆ ಬೇರೆಯಲ್ಲ. ಅವರೆಲ್ಲರ ದೃಷ್ಟಿಯಲ್ಲಿ ಪ್ರಕಾಶಗೊಳ್ಳುವ ಭಗವಂತನು ಒಬ್ಬನೇ ಒಬ್ಬನು. ಆತನು ತ್ರಿಮೂರ್ತಿಗಳಲ್ಲಿ ಒಬ್ಬನಾದ ಪರಶಿವನಲ್ಲ. ಕೃಷ್ಣನಂತೂ ಮೊದಲೇ ಅಲ್ಲ. ಮತ್ತೆ ಇನ್ನೆಂತು? ಭಕ್ತ ಅರ್ಥಾತ್ ಶರಣನ ಹೃದಯವಾಗಿಪ್ಪ ಏಕೋತ್ರ ಮನುಮಾತ್ರ.

ಬ್ರಹ್ಮಂಗೆ ವಾಕ್ ಪರುಷ, ವಿಷ್ಣುವಿಂಗೆ ನಯನ ಪರುಷ
ರುದ್ರಂಗೆಹಸ್ತ ಪರುಷ. ನಮ್ಮ ಕೂಡಲಸಂಗನ ಶರಣಂಗೆ
ಪಾದವೇ ಪರುಷ.

ಮತೋದ್ಧಾರಕರೆಲ್ಲರೂ ನೀತಿಯನ್ನು ಬೋಧಿಸಿದ್ದರೂ ಬಸವಣ್ಣನ ವರು ಅದೆಲ್ಲವೂ ಸದ್ನಡೆ ನುಡಿ ಸದಾಚಾರ ಸ್ಮೃತಿಗಿಂತಲೂ ಮಿಗಿಲಿಲ್ಲ ಎಂಬುದನ್ನು ತೋರಿಸಿದರು. ಸತ್ಯ ಅಹಿಂಸೆಗಳ ತಳಹದಿಯ ಮೇಲೆ ಬಲಿತು ಬೆಳೆದ ಬುದ್ಧದೇವನ 'ದಯಾಧರ್ಮ' ದಲ್ಲಿ ನೀತಿಗೆ ಪಟ್ಟಪೀಠವಿದೆ. ಆದರೆ ಬಸವಣ್ಣವರ ಬೋಧನೆಯ ಬಗೆಗೂ ಅದಕ್ಕೂ ಅಂತರವಿದೆ. "ಸದ್ಯೋಚನೆ ಮತ್ತು ಸತ್ಕಾರ್ಯದಿಂದ ಒಳ್ಳಿತೂ, ದುರಾಲೋಚನೆ ಮತ್ತು

ದ ಷ್ಕ್ರಿಯೆಗಳಿಂದ ಕೆಡಕೂ ನಮಗಾಗುತ್ತದೆ." ಎಂಬ ಬುದ್ಧ ಬೋಧೆಯಲ್ಲಿ ದೈವನಿರಾಕರಣೆಯಿರುತ್ತದೆ. ಈ ಲೋಪವನ್ನು ನೋಡಿದ ಬಸವಣ್ಣನವರು ಮನುಷ್ಯನ ಕರ್ಮಗಳಿಗೆಲ್ಲ ಫಲವನ್ನು ಕೊಡುವ ಕರ್ತೃವು ಕೂಡಲಸಂಗಮನೆಂದು ಸ್ಪಷ್ಟಪಡಿಸಿದುದರಿಂದ ಜನಸಾಮಾನ್ಯಕ್ಕೆ ಸದಾಚಾರದ ಅಗತ್ಯವು ಮೂರ್ತಿವತ್ತಾಗಿ ತಿಳಿಯುವಂತಾಯಿತು.

ಸದಾಚಾರ ಸದಭಕ್ತಿಯಿಲ್ಲದವರನೊಲ್ಲನಯ್ಯಾ.
ಅವರಾರಾಧನೆ ದಂಡ!
ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲ,
ಕೂಡಲಸಂಗಮದೇವ ಭೂ ಭಾರಕರ!

ಇಂದು ಕಾಯಕದ ಬೆಲೆಯನ್ನು ಅರಿಯದೆ ಸುಲಭ ಜೀವನದ ಮೂಲಕ ಸೋಮಾರಿತನದ ಸೋಗಿಗೆ ಸಿಕ್ಕಿರುವುದು ಯಾರಿಗೆ ತಾನೇ ತಿಳಿಯದು? ಕಾಯಕವು ಐಹಿಕದ ಉನ್ನತಿಗಾಗಿ ಮಾತ್ರವಿರದೆ ಆಮುಷ್ಮಿಕ ಸಾಧನವಾಗಿದೆ ಎಂಬುದನ್ನು ಇವರು ವ್ಯಕ್ತಪಡಿಸಿದ್ದಾರೆ. ಇದರಿಂದ ವೀರಶೈವ ಸಮಾಜವು ಸ್ವಾವಲಂಬಿಯಾಗಿ ಸಾಗಲು ಸಲೀಸಾಯಿತು. ಕಾಯಕದಲ್ಲಿ ಮೇಲು ಕೀಳು ಇಲ್ಲ. ಜಾತಿನಿರ್ಣಯವನ್ನು ವೃತ್ತಿಯಿಂದ ನಿರ್ಧರಿಸಲಾಗದು. ತಮ್ಮ ಸಮೀಪಕ್ಕೆ ಬಂದವರನ್ನೆಲ್ಲರನ್ನೂ ಕಾಯಕ ಕೈಕೊಂಡಿರುವುದನ್ನು ಕುರಿತು ಪ್ರಶ್ನಿಸಿ, ಅದರ ಪರಿಹಾರವನ್ನು ಕೈಕೊಂಡು ಸರ್ವರೂ ಕಾಯಕ ಕೈವಲ್ಯ ಕಲ್ಪನೆಯನ್ನು ಕೈಕೊಂಡೇ ಬಾಳನ್ನು ಬೆಳಗಿಸುವಂತೆ ಮಾಡಿದರು. ತತ್ಫಲವಾಗಿ ವೀರಶೈವ ಸಮಾಜದಲ್ಲಿ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವವು ಏಕಕಾಲದಲ್ಲಿ ಉದ್ಭವಿಸಿ, ಒಗ್ಗಟ್ಟು ಒಡಮೂಡುವಂತಾಯಿತು. ಹೆಂಗಸರೆಂದರೆ ಇವರಿಗೆ ಮಹಾಮನ್ನಣೆಯ ಮತಿಯಿದ್ದಿತು. ಗಂಡಸರಷ್ಟೇ ಹೆಂಗಸರೂ ದೀಕ್ಷೆಗೆ ಯೋಗ್ಯರೆಂದೂ, ಅವರನ್ನು ಸಂಸಾರ ನಿರ್ವಹಣೆಯ ಸಾಧನವನ್ನಾಗಿ ಮಾತ್ರ ಅರಿಯುವುದು ತಕ್ಕುದಲ್ಲವೆಂದು ಬೋಧಿಸಿದರು. ತನ್ನ ಸದ್ಗತಿಯನ್ನೂ, ತನ್ನ ಗಂಡನ ಸದ್ಗತಿಯನ್ನೂ ಹೆಂಗಸು ಸಾಧಿಸಬಲ್ಲಳೆಂದು ಇವರ ಮತ. ಆದಕಾರಣ ಪತಿಯಾಗಲೀ, ಪತ್ನಿಯಾಗಲೀ ಯಾರಿಗೆ ಯಾರು ಹೆಚ್ಚಿಲ್ಲದೆ ಸರಿಸಮಾನರು. ವೇದಸ್ಮೃತಿಗಳು ಹಂಗಸಿನ ವಿಷಯದಲ್ಲಿ ಕೊಟ್ಟಿದ್ದ ಭಾವನೆಯ ಬಂಧನವನ್ನು ಬಿಡಿಸಿ, ಇವರು ಸ್ವತಂತ್ರ ಹಾದಿಯೊಂದನ್ನು ಹಾಕಿದರು. ಮುಂದೆ ಒಗೆಬಗೆಯ ಮಂದಿಯು ವೀರ

ಶೈವ ಮತವನ್ನು ಅವಲಂಬಿಸಿದಾಗ ತಮ್ಮ ಪೂರ್ವದ ಕುಲಾಚಾರಗಳನ್ನು ಅವರವರ ಮಟ್ಟಿಗೆ ಮುನ್ನಡೆಯಿಸುದುದರ ಕಾರಣವಾಗಿಯೇ ಇಲ್ಲಿ ಸ್ತ್ರೀಪ್ರಾಶಸ್ತ್ಯವು ಸಿಕ್ಕಿತು. ಹುಟ್ಟಿದ ಹೆಣ್ಣು ಮದುವೆಯಾಗಿಯೇ ತೀರಬೇಕೆಂಬ ಭದ್ರಭಾವನೆಯು ಬದಲಾಯಿಸಿತು. ಇವರ ತತ್ವಪ್ರಚಾರದಿಂದ ಪ್ರಾಚೀನ ಭಾರತೀಯರಲ್ಲಿ ರೂಢಿಯಲ್ಲಿದ್ದ ಪ್ರೌಢ ವಿವಾಹವು ಪುನಃ ಅನುಷ್ಠಾನಕ್ಕೆ ಬಂದಿತು. ಪ್ರೌಢ ವಿವಾಹವು ಪ್ರಾರಂಭವಾದ ಕಾರಣ ವಿಧವಾ ವಿವಾಹದ ಆವಶ್ಯಕತೆಯು ಅದೆಷ್ಟೋ ಕಡಿಮೆಯಾಯಿತು. ವರದಕ್ಷಿಣೆಯಂತಹ ನೀಚಪದ್ಧತಿಯನ್ನು ಇವರು ಒಪ್ಪದೆ, ಪ್ರೋತ್ಸಾಹಿಸದೆ ಇದ್ದ ಕಾರಣ ಸಮಾಜಕ್ಕೆ ಒಂದುಬಗೆಯ ಉಚ್ಚ ಸೇವೆಯನ್ನು ಸಲ್ಲಿಸುವಂತಾಯಿತು. ಅವಿಚಾರಪರವಾದ ಲಿಂಗಭೇದವನ್ನು ಕಲ್ಪಿಸಿ, ಹೆಣ್ಣು ಜನ್ಮದಿಂದ ಕೀಳೆಂಬ ಕೆಟ್ಟ ಭಾವನೆಯನ್ನು ತೋರಿಸುತ್ತಿದ್ದ ಸಮಾಜವನ್ನು ಪ್ರತಿಭಟಿಸಿ, ಸ್ತ್ರೀಯರ ಸ್ಥಾನಮಾನದ ನಿಜವನ್ನು ಗೊತ್ತುಪಡಿಸಿದರು.

ಸಾಂಸಾರಿಕ ಮೋಹನೇ ಹೆಚ್ಚಾಗಿ ಮಾಯೆಯು ಕವಿದುಕೊಂಡ ಆತ್ಮಘಾತದ ನಿರೂಪಣೆ.

ತುಪ್ಪದ ಸವಿಗೆ ಅಲಗನೆಕ್ಕುವ ಸೊಣಗನಂತೆನ್ನ ಬಾಳುವೆ !
ಸಂಸಾರ ಸಂಗವ ಬಿಡದು ನೋಡೆನ್ನ ಮನವು
ಈ ನಾಯಿತನವ ಮಾಣಿಸು
ಕೂಡಲಸಂಗಮದೇವಾ ಇದು ನಿಮ್ಮ ಧರ್ಮ !

ಸಂಸಾರ ಮೋಹಕ್ಕೆ ಮರುಳಾಗಿ ಮಾರುಹೋದುದಕ್ಕೆ ಹಲುಬಿ ಹಂಬಲಿಸಿ ಹರಿದಾಡಿ ಮೊರೆಹಾಕಿ ದೈನ್ಯದಿಂದ ಪ್ರಾರ್ಥನೆಯು ಸಾಗುವುದು. ಜೀವಕೋಟಿಯ ಉದ್ಧಾರಕ್ಕೆ ಗತಿಮತಿಯು ಭಗವಂತನ ದಯಾರಸದಿಂದಲ್ಲದೆ ಮತ್ತೆಲ್ಲಿರುವದು ? ಮನುಜನ ಮನವು ಮರದ ಮೇಲಿನ ಮರ್ಕಟವು ಅಲ್ಲಿಂದ ಇಲ್ಲಿಗೆ, ಇಲ್ಲಿಂದ ಅಲ್ಲಿಗೆ ಮನವು ಅಡ್ಡಾಡುತ್ತಿರುವುದು. ಈ ಚಂಚಲತೆಯಿಂದ ಪರಮಾತ್ಮನು ದುರ್ಲಭನೇ ಸರಿಯು. ಈ ಚಪಲತೆಯನ್ನು ಚಚ್ಚಿ, ದೃಢಭಕ್ತಿಯನ್ನು ದಳಿತಗೊಳಿಸಿದರೆ ಮಾತ್ರ ಸಾಧ್ಯವು. ಬಹು ಬಗೆಯಾಗಿ ಮನಸ್ಸನ್ನು ಶಿಕ್ಷಿಸಿ ಹತೋಟಿಯಲ್ಲಿಟ್ಟುಕೊಳ್ಳಬೇಕೆಂಬ ಬಯಕೆ ಬಾಳು ಇವರದು. ಅಂತೆಯೇ ಆಚರಿಸಿದ ಜೀವನವು ಇವರದು. ಮರಮರಳಿ ಮಾಯೆಯು ಮುಸುಕುವದು. ಮನದ ಆ ಬಗೆಯು ಡೊಂಕು ಕೊಂಕು

ಸಾಮಾನ್ಯ ಸಾಧನೆಗೆ ಸರಿನೇರವಾಗದು. ಅಂತರಂಗದ ಪರಿಶುದ್ಧಿಯಿಲ್ಲದವನ ಭಕ್ತಿಯು ಬರಿಯ ಬಾಹ್ಯಾಚರಣೆಮಾತ್ರವು. ಕೇವಲ ಸೋಗೇ ಸರಿಯು. ದೇಹವೇನೋ ದೋಷವಲ್ಲವು. ಅದು ಸರ್ವಸಾಧನೆಯ ಫಲಭೂಮಿಯೂ ಆಗಿದೆ. ಆದರೂ ಲೋಕ ರೂಢಿಯಂತೆ ಅನುಸರಿಸಿಕೊಳ್ಳುವ ಮಾಯೆಯೇ ಎಲ್ಲದಕ್ಕೂ ಅಡ್ಡಿ ಆಡಚಣಿಯಾಗಿರುವುದು. ಇಷ್ಟಿದ್ದರೂ ಅವಗುಣವೆಂಬ ಕಸವನ್ನು ಕಿತ್ತು ಹುಲುಸಾದ ಬೆಳೆಗೆ ಸಹಾಯಕನಾಗಿ ಸಲಹುವರಾರು? ನಿಶ್ಚಲತೆಯತ್ತ ಧಾವಿಸಲಾರದ ಕುಂಟುಸರಿಯ ಜೀವನವು ಅಗ್ನಿಯುಲ್ಲಿ ಬೀಳಾಗಿ ಬೀಳುವುದು. ವಿಷಯಾದಿಗಳ ಭಾರದ ಹೊರೆಯು ಹೋಗುವ ರೀತಿಯು ಪುರುಷಾರ್ಥದ ಸಿದ್ಧಿಯ ಸೀಮೆಯನ್ನು ಮುಟ್ಟಲಾರದು. ಈ ಪ್ರಪಂಚವು ಒಳ್ಳೆಯದು ಕೆಟ್ಟದೆಂಬ ಸರಕು ಸಾಮಗ್ರಿಗಳನ್ನು ಒಳಗೊಂಡಿರುವ ಒಂದು ಅಂಗಡಿಯು. ಅವುಗಳನ್ನು ಅಲ್ಲಲ್ಲಿ ಸರಿಯಾಗಿ ಜೋಡಿಸಿ ಮಾರುವ ವರ್ತಕನು ಪರಮಾತ್ಮನು. ಈ ಸರಕು ಸುಲಭವಾಗಿ ಸಿಗಬೇಕಾದರೆ 'ಪರಸ್ಪರಂಭಾವ ಯಂತಃ ಶ್ರೇಯಃ ಪರಮ ವಾಪ್ಸ್ಯಥ' ಎಂಬ ಉಕ್ತಿಗನುಗುಣವಾಗಿ ಸರ್ವರೂ ತಮ್ಮ ಚಿತ್ತ ಭೂಮಿಯುಲ್ಲಿ ತ್ಯಾಗ, ಆತ್ಮವಿಶ್ವಾಸ, ಸಮತೆಯ ಬೀಜದ ಮೊಳಕೆಯನ್ನು ಮಾಡಿಕೊಂಡು ವೃದ್ಧಿಗೊಳಿಸಿಕೊಳ್ಳಬೇಕು.

ಕುಲಮದನಳಿಯದನ್ನಕ್ಕ ಶರಣನಾಗಲೇಕೆ?
ವಿಧಿವಶ ಬಿಡದನ್ನಕ್ಕ ಭಕ್ತನಾಗಲೇಕೆ?
ಹಮ್ಮಿನ ಸೊಮ್ಮಿನ ಸಂಬಂಧ ಬಿಟ್ಟು
ಕಿಂಕಿಲ ಕಿಂಕಿಲನಾಗಿರಬೇಕು!
ಹೆಪ್ಪನೆರೆದು ಹಾಲುಕೆಟ್ಟು ತುಪ್ಪವಪ್ಪಂತೆ
ಇಪ್ಪರು ಕೂಡಲಸಂಗಮದೇವಾ ನಿಮ್ಮ ಶರಣರು.

# ಮರೆದು ಮಾನವನಾದ---ಅರಿದು ಶರಣನಾದ

(ಲೇಖಕರು:- ಶ್ರೀ ಮ|| ನಿ|| ಪ್ರ|| ಶ್ರೀಸಂಗಮನಾಥ ದೇಶಿಕೇಂದ್ರ ಸ್ವಾಮಿಗಳು
ಬಿಲ್ಲಳ್ಳಿ ವಿರಕ್ತಮಠ ಚನ್ನಗಿರಿ ತಾಲೂಕ.)



ತನ್ನಿಂದಧಿಕವಾದ ವಸ್ತು ಒಂದಿಲ್ಲವಾಗಿ ತಾನೆ ಸಚ್ಚಿದಾನಂದ ನಿತ್ಯಪರಿಪೂರ್ಣಮಯನಾದ ಪರಶಿವತತ್ವ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

ನಿಮ್ಮಲ್ಲಿ ನೀವು ತಿಳಿದು ನೋಡಿರೇ. ಅನ್ಯವಿಲ್ಲ ಕಾಣಿರಣ್ಣಾ ಅರಿವು ನಿಮ್ಮಲ್ಲಿ ತದ್ಗತವಾಗದೆ ಅನ್ಯಭಾವವ ನೆನೆಯದೆ ತನ್ನೊಳಗೆ ತಾನೇ ಎಚ್ಚತ್ತಿರಯಲು ಬಲ್ಲರೆ ತನ್ನಲ್ಲಿ ತನ್ಮಯ ಗುಹೇಶ್ವರ ಎಂದು ಶ್ರೀ ಪ್ರಭು ದೇವರು ಶಿವಶರಣರುಗಳ ಅಮೃತವಾಣಿಗಳುಂಟು.

ತನ್ನತಾನರಿದಡೆ ತಾನೆ ಪರಮಾತ್ಮ. ತನ್ನ ತಾ ಮರೆದರೆ ತಾನೇ ಭವಬಂಧದಲ್ಲಿ ಸಿಕ್ಕ ಜೀವಿ. ಈ ಜೀವ ಭಾವವೇ ಹುಟ್ಟು ಸಾವುಗಳ ಬೀಜ. ಈ ಬೀಜವು ನಾಶವಾಗಬೇಕಾದರೆ ಶಿವಶರಣರ ವಚನಾಮೃತವನ್ನು ಶ್ರವಣ ಮನನ. ನಿಧಿ ದ್ಯಾಸಗಳಲ್ಲಿ ಜಾಗ್ರ ಸ್ವಪ್ನ, ಸುಷುಪ್ತಾವಸ್ತೆಗಳಲ್ಲಿಯೂ ಸಹ ಎಡೆ ಬಿಡದೆ ಕೇಳಬೇಕು. ಕೇಳುವಾಗ ಓದುವಾಗ ಮನನ ಮಾಡು ವಾಗ ತನು, ಮನ, ಜೀವ ಭಾವಗಳನ್ನು ಹಿಂದು ಮಾಡಿ ಕೇಳಬೇಕೆಂದು ಶರಣರ ತತ್ವ ಉಂಟು.

ಪರಮನರಿದ ಸತ್‌ಪುರುಷರ ಸಂಗದಿಂದ ಶಿವಯೋಗದ ವಚನಾಮೃತ ವನ್ನು ಸದ್‌ಭಕ್ತಿಯುಳ್ಳ ಮಹೇಶ್ವರನು ತನ್ನ ಶ್ರೋತ್ರದ ಮುಖದಲ್ಲಿ ಕೇಳಿ ಮನೋ ಮುಖದಲ್ಲಿ ಹಾರೈಸಿ ತೃಪ್ತಿ ಮುಖದಲ್ಲಿ ಸಂತೋಷವನೈದ ಬಲ್ಲಡೆ ಆ ಸುಖ ಪರಿಣಾಮವನೊಡಗೊಡುವದು. ಹೀಗಲ್ಲದೆ ಸಂಸಾರ ವಿಷಯ ರಸವ ತನ್ನ ಹೃದಯಕೂಪದಲ್ಲಿ ತುಂಬಿಕೊಂಡಿಪ್ಪ ಜೀವರಗಳ ಕಾಯದಲ್ಲಿ ವಚನಾಮೃತವ ತುಂಬಿದಡೆ ಬಿನ್ನಘಟದಲ್ಲಿ ಉದಕವ ಹೊಯ್ದಂತೆ ಕಾಣ ಗುಹೇಶ್ವರ ಎಂದು ಶ್ರೀ ಪ್ರಭುದೇವರ ವಚನವಿದೆ. ನರಕದಲ್ಲಿ ಬೀಳುವ ಕರ್ಮಿಗಳಿಗೆ ಶರಣರನುಭಾವ ನೆಲೆಗೊಳ್ಳದು, ಎಂದು ಜಗದಣ್ಣನಾದ ಶ್ರೀ ಬಸವಣ್ಣನ ಅಮೃತ ವಾಣಿಗಳವೆ. ವಚನಸಾಹಿತ್ಯ ವನ್ನು ಓದಿ ಅದರ ಸಾರ ಸರ್ವಸ್ವವನ್ನು ಅನುಭವಿಸಬೇಕಾದರೆ ಭಾವ

ಬತ್ತಲೆಯಾಗಿರಬೇಕು. ಸುತ್ತಿ ಸುಳಿವ ಮನದ ಮರ್ಕಟತನವಳಿದು ಪಾರ ಮಾರ್ಥವನ್ನು ತಿಳಿಯಬೇಕೆಂಬ ಹಂಬಲ ಬಲವಾಗಿರಬೇಕು. ತನುವು ತನ್ನ ಅವ ಗುಣವನ್ನುತಳಿದು ಸತ್ಯತತ್ವವನ್ನು ತನ್ನಲ್ಲಿ ಶಾಶ್ವತವಾಗಿ ನೆಲೆ ಗೊಳ್ಳಬೇಕೆಂಬ ತವಕದಲ್ಲಿರಬೇಕು. ಶರಣರ ಕಣ್ಣು ಕಂಡಂತೆ ವಚನ ಸಾಹಿತ್ಯ ಸತ್ಯ ಜ್ಞಾನದ ಸಾಗರ. ನಿತ್ಯಾನಂದದ ನೆಲೆ. ಮೋಕ್ಷದಬೀಡು ಪ್ರಜ್ವಲಿಸುವ ಲಿಂಗದ ನಾಡು. ಅಂತೆಯೇ ಭಾವದಲ್ಲಿ ಭ್ರಮೆ ತುಂಬಿ ಮನದಲ್ಲಿ ವಿಷಯ ತುಂಬಿ ತನುವಿನಲ್ಲಿ ಹುಸಿ ತುಂಬಿದ ಕತ್ತಲೆ ಕಣ್ಣಿಗೆ ಸತ್ಯದ ತಿಳಿಬೆಳಕು ಕಾಣುವದು ಅಸಾಧ್ಯವೆಂದೇ ಹೇಳಬೇಕು. ಅಂತೆಯೇ ವಚನಕಾರರು ಮೇಲಿಂದ ಮೇಲೆ ಹೇಳುವದು, ಮರೆದು ಮಾನವನಾದ ಅರಿದು ಶರಣನಾದ. ಈ ಮರವೆಯು ಮಾಯು ಸಕೀಲವನ್ನು ಬಿಚ್ಚುವ ರಾರು. ನೀವಿಕ್ಕಿದ ತೊಡಕ ಬಿಡಿಸಬಾರದು. ನೀವು ಬಿಡಿಸಿದ ತೊಡಕ ನಿಕ್ಕಬಾರದು. ಕಪಿಲಸಿದ್ಧ ಮಲ್ಲಿನಾಥಯ್ಯ ನೀವೆನ್ನ ಕಾಯದ ಜೀವದ ಹೊಲಿಗೆಯ ಬಿಡಿಸಾ ನಿಮ್ಮ ಧರ್ಮ. ಎಂದು ಸಿದ್ಧರಾಮ ಶಿವಯೋಗಿ ಗಳ ವಚನವಿದೆ. ಈ ಪ್ರಶ್ನೆಗೆ ಶರಣರು ಏಕಕಂಠದಿಂದ ಹೇಳುವ ಉತ್ತರ ಒಂದೇ. ತೆರಣಿಹುಳು ತನ್ನ ದೇಹದಲ್ಲಿ ಮನೆಯ ಮಾಡಿ ತನ್ನ ಸುತ್ತಿ ಸಾವ ತೆರನಂತೆ ಮರವೆಗೂ ಮಾನವನಿಗೂ ಬಿದ್ದ ಗಂಟು ತನ್ನ ನೇಹದ ಗಂಟೇ. ಈ ಗಂಟನ್ನು ಬಿಚ್ಚಬೇಕಾದರೆ ತಾನೇ ಬಿಚ್ಚಿಕೊಳ್ಳಬೇಲ್ಲಕದೆ ಗತಿಯಿಲ್ಲ. ನೀನೇ ತಪ್ಪಿದ ನಿನ್ನ ನಿಜವನು ನೀನೆ ಸಾಧಿಸಿ ಕಂಡೆಯಾದೊಡೆ! ನೀನೆ ಸದ್ಯೋ ನ್ಮುಕ್ತನೈ ರಾಮಯ್ಯ ಕೇಳೆಂದ, ಎಂದು ಅಲ್ಲಮಪ್ರಭುಗಳ ಉಪದೇಶ ವಿದೆ. ಬೆಳಗಿನ ಕೈಯ್ಯಲ್ಲಿ ಕತ್ತಲೆಯು ತಾನಾಗೇ ಬಿಚ್ಚುವಂತೆ ಅರಿವಿನ ಕೈಯಲ್ಲಿ ಮರವೆ ತಾನಾಗಿ ಮಾಯವಾಗುವದು. ಮರವೆ ಮಾಯವಾಗಿ ಅರಿವು ತಾನಾಗಿ ಬೆಳಗಿದರೆ ಆ ಆತ್ಮಜ್ಯೋತಿಯ ಬೆಳಗಿನ ಆ ಸುಜ್ಞಾನ ಪ್ರಜ್ವಲಿಸುವ ಪ್ರಭೆಯಲ್ಲಿ ಭಾವ ಬೆಳಗಿ ನಿರ್ಭಾವ ವಾಗುತ್ತದೆ. ಮನ ವನಿಂಬುಗೊಂಡು ಉನ್ಮನವಾಗುತ್ತದೆ. ಅಂಗ ವಿಕಾರವೆಲ್ಲ ಸುಟ್ಟು ನಿರಂಗ ವಾಗುತ್ತದೆ. ಇಂತಹ ಶರಣರ ಅಂಗ ಲಿಂಗ ಮನ ಲಿಂಗಭಾವ ಲಿಂಗ ಅಂತರಂಗ ಬಹಿರಂಗವೆಲ್ಲ ಲಿಂಗ ಜ್ಯೋತಿರ್ಮಯ ಲಿಂಗವೆಂದರೆ ಬೆಳ ಗಿನೊಳಗಣ ಬೆಳಗು ಮಹಾ ಬೆಳಗು. ಇಂತಹ ಲಿಂಗ ಪ್ರಭೆಯಿಂದ ಪ್ರಜ್ವಲಿಸುವ ಶರಣರ ದೃಷ್ಟಿಗೆ ವಿಶ್ವಬ್ರಹ್ಮಾಂಡದ ನಿಜ ಸ್ವರೂಪದ ಸಾಕ್ಷಾ ತ್ಕಾರ ತಾನಾಗಿಯೇ ಆಗುತ್ತದೆ. ಅಂತೆಯೇ ವಚನಕಾರರು ಒತ್ತಿ ಹೇಳು ವರು. ನಿನ್ನ ನೀತಿಳಿ ಎಂದು ತನ್ನ ನಿಜವಿಶ್ವ ನಿಜ ಒಂದೆಂದ ಮೇಲೆ

ತನ್ನ ಆಳದಲ್ಲಿ ವಿಶ್ವದ ಆಳ ತಿಳಿಯದಿರಲೆಂತು? ಘನಗಂಭೀರ ಮಹಾವಾರುಧಿಯಲ್ಲಿ ವಿಶ್ವವನರಿದು ನೋಡಲು ಚಿನ್ಮೂಲಿಗೆಯ ಚನ್ನರಾಮನೆಂಬ ಲಿಂಗ ಬೇರಿಲ್ಲ, ಎಂದು ಈ ದಿವ್ಯಜ್ಞಾನದ ಅರುವನ್ನು ಹೇಳುವ ಶರಣರು ನಮ್ಮ ಕಣ್ಣಿಗೆ ಯಾವ ರೀತಿ ಕಾಣಬಹುದು?

ಕಾಣಬಹುದೇ ಪರುಷದ ಗಿರಿಯಂಧಕಂಗೆ? ಅರಿಯಬಹುದೇ ರಸದ ಬಾವಿ ನಿರ್ಭಾಗ್ಯಂಗೆ? ತೆಗೆಯ ಬಹುದೆ ಕಡವ ರವದರಿದ್ರಂಗೆ? ಕರೆಯ ಬಹುದೇ ಕಾಮಧೇನುವಶುದ್ಧಂಗೆ? ಹೊನ್ನೆಯ ಹುಳುವ ಕಂಡು ನರಿ ತನ್ನ ಬಾಲವ ಹುಣ್ಣು ಮಾಕೊಂಡರೆ ಹೋಲಬಹುದೇ? ಎನ್ನೊಡೆಯ ಕೂಡಲ ಸಂಗನ ಶರಣರ ಪುಣ್ಯವಿಲ್ಲದೆ ಕಾಣಬಹುದೇ ಎಂದು ಮಹಾನುಭಾವರಾದ ಶ್ರೀ ಬಸವಣ್ಣನವರ ಅಮೃತವಾಣಿ ಇದೆ. ಸರ್ವಾಂಗ ಲಿಂಗವಾದ ನಿಜ ಶರಣರ ನಿಲವು ಅಂಗದಲ್ಲಿದ್ದೂ ಜೀವಿಸುವ ಅಂಗ ಜೀವಿಗಳಿಗೆಂತು ನಿಲುಕುವುದು? ಗೂಗೆಯ ಕಣ್ಣಿಗೆ ಸೂರ್ಯನ ದರ್ಶನದ ಪುಣ್ಯ ಉಂಟೆ? ನೆಲಮನೆಯಲ್ಲಿ ಕುಳಿತು ಮುಗಿಲ ಹರಹನೆಲ್ಲ ನೋಡಲುಂಟೆ? ಕಾಯದ ಕಣ್ಣಿಗೆ ತೆರಹಿಲ್ಲದ ಬಯಲಾದ ಮಹಾಘನ ಶರಣರು ಕಾಂಬುದೆಂತು? ಶಬ್ದದ ತುಂಡು ತುಂಡನ್ನು ತಿನ್ನ ಬಲ್ಲ ಕಿವಿಗೆ ವಿಶ್ವಬ್ರಹ್ಮಾಂಡವನೆಲ್ಲ ವ್ಯಾಪಿಸಿದ ಪ್ರಣವ ಸ್ವರೂಪಿಗಳಾದ ಶರಣರ ನಿಶ್ಶಬ್ದದ ನುಡಿ ಎಂತು ಕೇಳುವುದು? ಖಂಡಿತವಿಚಾರಗಳನ್ನು ಕಂಡು ಸಂದೇಹ ಸಾಗರದಲ್ಲಿ ಆಳುತ್ತ ಏಳುತ್ತಿರುವ ಮಾನಸನ ಮನವು ಭಾವದ ಭ್ರಮೆಯಲ್ಲಿ ಸಂಚರಿಸುವ ಜೀವಿಗೆ ಭಾವವೆಲ್ಲ ಬತ್ತಲೆಯಾಗಿ ಸಯಂ, ಭಾವದಲ್ಲಿ ನಿಂದು ಸುಳಿದಾಡುವ ಮಹಾಮಹಿಮರ ನೆಲೆ ಹತ್ತಬಹುವೇ ಅಂತೆಯೇ ಬಸವಣ್ಣನವರು ಹೇಳುವ ಮಾತು ಕಂಡು ನೋಡಿದ ಸತ್ಯದ ಅನುಭವ. ಶರಣರೆಂದರೆ ಅಜ್ಞಾನಾಂಧರು ನೋಡಬಾರದ ಪರುಷದ ಪರ್ವತ ಶಿವಾನುಗ್ರಹವಿಲ್ಲದ ನಿರ್ಭಾಗ್ಯರು ಸಾಧಿಸಬಾರದ ಸಿದ್ಧರಸದಬಾವಿ. ನಿಜ ಶರಣರು ನೆಲದ ಮರೆಯ ಧಾನದಂತೆ. ಮೇಘದ ಮರೆಮಿಂಚಿನಂತೆ ಇರುವ ಪರತತ್ವ ಸ್ವರೂಪರಾದ ಶರಣರ ನಿಜದ ನಿಲವನ್ನು ಕಾಯುಗೊಂಡ ಮೂಢರೆಲ್ಲ ಕಾಣಬಾರದು. ಆದರೆ ಹಾವಿನ ಹೆಜ್ಜೆ ಹಾವು ಬಲ್ಲದು. ಬಂಜೆಗೆ ಬೇನೆ ತೋರಿದ್ದರೂ ಹಡೆದ ತಾಯಿ ಹೆರುವ ಬೇನೆ ಬಲ್ಲಳು. ಹಾಗೆಯೆ ಶರಣರ ಪರಮ ಮಂಗಲ ದರ್ಶನ ಅಂಗ ಶರಣರಿಗುಂಟು. ಲಿಂಗ ಭಕ್ತರಿಗುಂಟು. ಶರಣರ ನೆಲೆಯನ್ನು ಅವರ ನಿಲವನ್ನು ಶರಣರು

ಬಲ್ಲರು. ನಿಜದಲ್ಲಿ ನಿಂದು ನಿಷ್ಪತ್ತಿಯಾದ ನಿಜ ಶರಣರನ್ನು ಕಾಯಗೊಂಡು ಕಂಡಿಹೆನೆಂದರೆ ಕಾಣಬಹುದೆ ಎಂದು ಹೇಳುವ ಬಸವಣ್ಣನವರು, ಶರಣರಿಗೆ ತನು. ಮನ. ನಯನಕ್ಕೆಲ್ಲ ಮೀಸಲು ಹಾಕಿ ಶರಣರ ಕಂಡು ಅವರ ಸಂಗಸುಖವನ್ನು ಅನುಭವಿಸಿದರು. ನಿತ್ಯ ನಿರಂಜನ ಶರಣರ ರೂಪ ಸಂಪದವನ್ನು ಅವರ ನಿವಾಸದ ನೆಲೆಯ ಬೆಡಗು ಬಿನ್ನಾಣವನ್ನು ಕಣ್ಣಿಂದಲೆ ಕಂಡು ಅವರ ಶ್ರೀಪಾದದಲ್ಲಿ ಸೈಗೆಡೆದ ಹಡಪದಪ್ಪಣ್ಣನವರು ತಮ್ಮ ಆನಂದಾನುಭಾವವನ್ನು ಇಂದು ಹಾಡಿದ್ದಾರೆ. ಆಕಾಶವ ಮುಟ್ಟಿದು. ಎಡೆಯುಲ್ಲೊಂದು ರೂಪಿಲ್ಲ. ಭಾವವೆಂಬ ಜ್ಞಾನವೇ ನಿವಾಸ. ನಿಲವೇ ಭಕ್ತಿ ನಿರಹಂಕಾರವೇ ಶಿಖರ ಮುಹತ್ತೇ ಶೃಂಗಾರದ ಕಳಸ. ಸಹಸ್ರ ಪತ್ರದ ನವಕಮಲವೇ ಸಿಂಹಾಸನ, ನಿತ್ಯವೇ ಮಲಗು. ನಿಜವೆಂಬ ವಿಸ್ತಾರದಲ್ಲಿ ನಿತ್ಯ ನಿರಾಳವೆಂಬ ಮಹಾಘನವು ಬಂದು ಮೂರ್ತಿಗೊಳಲು ಕಾಯದ ಕಣ್ಣು ಕಾಣಬಾರದು. ಮನದ ಮುಂದು ಅಳವಡದು. ಭಾವದ ಬಗೆಗೆ ನೈದೋರದು. ಬಸವ ಪ್ರಿಯ ಕೂಡಲ ಚನ್ನಸಂಗಯ್ಯನಲ್ಲಿ ಪ್ರಭುದೇವರ ಪಾದಕ್ಕೆ ನಮೋನಮೋ ಎಂಬೆನು. ನಿರ್ವಯಲಾದ ಶರಣನ್ನು ಕಾಣಬೇಕಾಗಿದ್ದರೆ ಮೆಯ್ಯಲ್ಲ ಕಣ್ಣಾಗಿರಬೇಕು ಶರಣರ ನುಡಿ ಗಡಣ ಕೇಳುವದಿದ್ದರೆ ನಿಃಶಬ್ದ ನಾದಕ್ಕೆ ಮರೆಯಾದ ಕಿವಿ ಮುಚ್ಚಿ ಅಂತರಂಗ ಬಹಿರಂಗವೆಂಬುಭಯವಳಿದು ಮೈಯಲ್ಲಾ ಕಿವಿಯಾಗಿ ಬಾಯ್ದೆರೆದು ಕೇಳಬೇಕು. ನೆನಹಿಗೆ ಬಾರದ ಘನವಸ್ತು ಸ್ವರೂಪರಾದ ಸಚ್ಚಿದಾನಂದ ಘನ ಶರಣರ ಮಹಿಮೆಯನ್ನು ತಿಳಿದು ನೋಡಲು ತರಹರಗೊಂಡರೆ ಒಳಗೆ ಮರೆದು ಸಾಸಿರ ಮುಖದ ಸೂಸುವ ಮನದ ಮರವೆಯ ತೆರೆ ಮರೆಯನ್ನು ಸೆಳೆದು ಮನವನು ಮಹಾಘನಕಿಂಬು ಮಾಡಿಕೊಡಬೇಕು. ಸಾಗರವನು ಸೇರಿ ಅದರಲ್ಲಿ ಲೀಯವಾಗಿ ಅದರಲ್ಲಿ ಹರಿದಾಡುವ ನದಿಗೆ ಸಾಗರದಿಚ್ಛೆಯಲ್ಲಿ ಹರಿದಾಟವಲ್ಲದೆ ಬೇರೆ ಗತಿಯುಂಟೇ? ಬೇರೊಂದು ಪಥವುಂಟೇ? ಅಂತೆಯೇ ಮಹಾಲಿಂಗವನಾಲಿಂಗಿಸಿದ ಶರಣರ ಜೀವನ ಚರಿತ ಅವರ ಚರಿತ ಲಿಂಗದ ಚರಿತ ಜೀವನದ ಪ್ರಯಾಣವನ್ನು ಪೂರ್ತಿಮಾಡಿ ತಮ್ಮ ಗೊತ್ತುಮುಟ್ಟಿದ ಶರಣರಿಗೆ ನಡಿವೆನೆಂದರೆ ಮತ್ತೆ ಹಾದಿಯಿಲ್ಲ. ಮುಟ್ಟಬೇಕೆಂಬ ಗುರಿ ಬೇರೆಯಿಲ್ಲ. ಪರಮಧ್ಯೇಯವನ್ನು ಕರ ತಲಾಮಲಕವಾಗಿ ಹಿಡಿದಿರುವರೇ ಶರಣರ ಜೀವನದಲ್ಲಿ ವಿಷಮ ಸಂಸಾರದ ಮಾತೇಕೆ? ಸೂರ್ಯನ ಹಾದಿಗೆ ಕೈದೀವಿಗೆ ಹಂಗೇಕೆ? ಬಯಲಿಗೆ ಬೆಂಕಿಯ ಭಯ

ವೇಕೆ? ಅಮೃತಕ್ಕೆ ಹಸಿದೆನೆಂಬ ಚಿಂತೆ ಏಕೆ? ಅಂತೆಯೇ ಶರಣರ ಜೀವನ ನಿಃಶ್ಚಿಂತ ನಿರಾಳ ಜೀವನ ಅಮೃತ ಸಾಗರದೊಳಗಿರ್ದು ಆಕಳ ಚಿಂತೆ ಏಕೆ? ಮೇರು ಮಂದಿರನೊಳಗಿರ್ದು ಜಲದ ಚಿಂತೆ ಏಕೆ? ಶ್ರೀಮತ್ ಪ್ರಸಾದದೊಳಗಿರ್ದು ಮುಕ್ತಿಯ ಚಿಂತೆ ಏಕೆ? ಕರಸ್ಥಲದೊಳಗೆ ಲಿಂಗವಿರ್ದು ಬಳಿಕ ಮತ್ತಾವ ಚಿಂತೆ ಏಕೆ? ಗುಹೇಶ್ವರ ಗುಹೇಶ್ವರ ಎಂದು ತಮ್ಮ ನಿತ್ಯ ತೃಪ್ತದ ಅಮೃತವಾಣಿಯನ್ನು ಹಾಡಿದ್ದಾರೆ. ಆದ್ದರಿಂದ ನಿತ್ಯ ತೃಪ್ತ ವಾಗಿ ಪರಮಾನಂದದಲ್ಲಿ ಪರಿಣಮಿಸುತ್ತಿರುವ ಶರಣರ ಜೀವನ ಚರಿತೆಗೂ ಕತ್ತಲೆಯಲ್ಲಿ ಸಿಕ್ಕು ಗೊತ್ತು ಗುರಿಯ ನರಿಯವೆ ಕಾಯದ ಕಾವಳ, ಪ್ರಾಣದ ಸಂಚಲ, ಮನದಲ್ಲಿ ಹದ್ದಾರಿಯಾಗಿ ಹರಿಯುತ್ತಿರುವ ಆಶೆ ಇವು ಒಯ್ದತ್ತ ಸಾಗಿದ ಮಾನವನ ಜೀವನ ಚರಿತ್ರೆಗೂ ಭೂಮಿ ಆಕಾಶದಷ್ಟು ಅಂತರ. ಈತನ ಜೀವನ ಚರಿತ್ರೆ ನಮಗೆ ಚನ್ನಾಗಿ ತಿಳಿಯುತ್ತದೆ. ಏಕೆಂದರೆ ನಾವು ಕತ್ತಲೆಯಲ್ಲಿ ಸಿಕ್ಕವರು. ನಮಗೂ ಗೊತ್ತುಗುರಿಎಂಬುದಿಲ್ಲ. ದುಡ್ಡಿಗಾಗಿ ದುಡಿದುಡಿದು ಸಾಯುತ್ತೇವೆ. ಅದಕ್ಕಾಗಿ ಅನ್ಯರನ್ನು ಕೊಲ್ಲುತ್ತೇವೆ. ಹೆಣ್ಣಿನ ಬಣ್ಣವನ್ನು ನೋಡುತ್ತೇವೆ. ಕಾಮ ವಾಸನೆಯಲ್ಲಿ ಸಿಕ್ಕು ಸಾಯುತ್ತೇವೆ. ಇಳೆ ನಿಮ್ಮ ದಾನವೆಂಬುದ ನರಿಯದೆ, ಮಣ್ಣಿಗಾಗಿ ಹೋರಾಡಿ ಮಣ್ಣು ಪಾಲಾಗುತ್ತೇವೆ. ಕೀರ್ತಿವಾರ್ತೆ ಪದವಿಗಾಗಿ ರಾಜಕೀಯವನ್ನು ನೆನೆಯುತ್ತೇವೆ. ಅಧಿಕಾರಕ್ಕಾಗಿ ತನ್ನ ಬಲಿಕೊಟ್ಟು ನಿಧಾನವನ್ನು ಸಾಧಿಸುವ ಮರುಳನಂತೆ ನಮ್ಮನ್ನೇ ಬಲಿಕೊಟ್ಟು ದೊಡ್ಡವ ನಿಸಿಕೊಂಡು ಬಾಳಬೇಕೆಂದಿದ್ದೇವೆ. "ಸುರೆಯ ಸೇವಿಸುವವನ ಸುರಿಗೆಯನು ಹಿಡಿದವನ, ದೊರೆಯೊಲುಮೆಗಾಗಿ ಹೆಣಗುವನ ಕಾಯುವದು ಸ್ವರ್ಗಿ ಸಾಯುವದು ಸರ್ವಜ್ಞ" ಎಂಬ ಈ ಮಹನೀಯನ ನುಡಿಯನ್ನು ಮರೆತುಬಿಟ್ಟಿಹೆವು. ಆನೆ, ಕುದುರೆ ಬಂಡಿ ಭಾಂಡಾರವಿದ್ದಡೇನೋ ತಾನುಂಬುದು ಪಡಿಯಕ್ಕಿ ಒಂದಾವಿನ ಹಾಲು ಮಲಗುವರ್ಧ ಮಂಚ, ಈ ಹುರುಳಿಲ್ಲದ ಸಿರಿಯ ನೆಚ್ಚಿ ಕೆಡಬೇಡ ಮನುಜ. ಒಡಲು ಭೂಮಿಯ ಸಂಗ, ಒಡವೆ ತಾನೇನಪ್ಪುದೋ. ಕೈವಿಡಿದ ಮಡದಿ ಪರರ ಸಂಗ. ಪ್ರಾಣ ವಾಯುವಿನ ಸಂಗ. ಸಾವಿನ ಸಂಗಡ ಯಾರೂ ಇಲ್ಲ ಕಾಣಾ ನಿಃಕಳಂಕ ಮಲ್ಲಿಕಾರ್ಜುನ ಈ ಮಾತನ್ನು ಘನ ಮಹಿಮರೂ ಮಹಾ ತ್ಯಾಗಿಗಳೂ ಶಿವಶರಣಾಗ್ರಗಣ್ಯರೂ ಮಹಾ ಶಿವಶರಣರೂ ಆದ ಮೋಳಿಗೆಯ ಮಾರಯ್ಯನವರು ಅಪ್ಪಣೆಕೊಡಿಸಿರುತ್ತಾರೆ. ಅಂತೆಯೇ ಈಗಿನ ಶಿವಶರಣರು ವಚನಶಾಸ್ತ್ರ ಪಿತಾಮಹನೀಯರು ವೀರಶೈವ

ಧರ್ಮ ಸಿದ್ಧಾಂತ ಪ್ರಚಾರಕರು, ಸಾಹಿತ್ಯಭಾಂಡಾರಿಗಳು, ಶಿವಾನುಭಾವ ಶ್ರೇಷ್ಠರು, ಜ್ಞಾನವೃದ್ಧರು, ಬಿ. ಎ. ಎಲ್. ಎಲ್. ಬಿ. ಪದವೀಧರರು, ನಮ್ಮೆಲ್ಲರ ಮಾರ್ಗದರ್ಶಕರು ಆದ ರಾ॥ ಬ॥ ಫ.ಗು. ಹಳಕಟ್ಟಿ, ವಿಜಾಪುರ ಈ ಮಹನೀಯರು ಈಗ ಮೂವತ್ತೊರುಷದ ಹಿಂದಿನಿಂದಲೂ ತಮ್ಮ ಸ್ವಕಾರ್ಯವನ್ನು ಬಿಟ್ಟು ಸ್ವಾಮಿಕಾರ್ಯವನ್ನು ನಡಿಸುತ್ತಾ ಬಂದಿರುವರು. ಹಾಗು ನಡಿಸುತ್ತಲೂ ಇರುವರು. ದೇಶಸೇವೆ ಈಶಸೇವೆಯೆಂದರೆ ಇವರಿಗೆ ಸಲ್ಲಿದ್ದು. ತಿಳಿಯುವದೇ ಶರಣರ ಮಹಿಮೆಯು. ಪರಿಪರಿ ಪಾಪದ ನರ ಮನುಜರಿಗೆ ತಿಳಿಯುವದೇ ಶಿವಶರಣರ ಮಹಿಮೆಯು ಎಂಬಂತೆ. ಸಾಮಾನ್ಯ ಜನಗಳಿಗೆ ಇವರ ಸೇವೆ ತಿಳಿಯದು. ಇವರ ಸೇವೆಗೆ ಸಹಾಯಕರಾಗದೆ ಇರುವದು ವೀರಶೈವರಾದ ನಮ್ಮಗಳ ದುರಾದೃಷ್ಟವಲ್ಲದೆ ಮತ್ತೇನು? ಇವರು ವೀರಶೈವ ಸಮಾಜಕ್ಕೆ ಸಲ್ಲಿಸಿರುವ ಘನತರವಾದ ಸೇವೆಯ ಅಂತರಾಳವನ್ನು ತಿಳಿಯಬೇಕಾದರೆ ೨೫ ವರ್ಷಗಳ ವರದಿಯು ಸಂಪುಟ ೨೫ರ ಸಂಚಿಕೆ ೧೨ ಈ ಪುಸ್ತಕವನ್ನು ಸಮಾಜವು ತರಿಸಿ ಓದಲೆಂದು ನನ್ನ ಹಾರೈಕೆ. ಶರಣರ ಮಹತ್ವವು ಶರಣರಾದವರಿಗೆ ಗೊತ್ತುಂಟೆಂದು ಹಿಂದೆ ಅವರ ವಚನದಲ್ಲೇ ತಿಳಿಸಿರುತ್ತಾರೆ. "ಮಹನೀಯರ ಖಣಶೇಷವನ್ನು ನಾವೆಂತು ತಿಳಿಯಬಲ್ಲೆವು, ಮರೆದು ಮಾನವನಾಗದೆ, ಅರಿದು ಶರಣನಾಗು ಮನವೇ. ಏಸವಕ್ಷರಿಯದ ಮೂಢನ ಮಾನಪಮಾನ ಪರಿಚಯವು ನಿನ್ನದು ಗುರುವೆ. ನಾನಡಿಗಣ ಪ್ರಾಣವರಿಯೆ ನೀ ನುಡಿಸಿದಂತೆ ನುಡಿವೆನು ಬಸವ ಪ್ರಭುವೆ."

ಚಂದಾಗಣ ನೇಮವನು ಒಂದನರಿಯದೆ ಮನವು ಬಂದಂತೆ ನಿಮ್ಮ ಪಾಡಿದಾ ನಂದಿಗೆ ಇಂದುಧರ ಸಿದ್ಧ ದಯವಾಗು. ಸ್ವಾನುಭಾವದ ನೆಲೆಯ ನಾನೇನು ಬಲ್ಲೆನೈ ನೀನೆ ಒಳವೊಕ್ಕು ಏನ ನುಡಿಸಿದೊಡನೆ ನಾ ನುಡಿವೆ. ಗುರುವೆ ಕೃಪೆಯ ಹೇಳಲರಿಯೆನು ನಾನು. ಹೇಳಿಸಲು ಹೇಳಿದೆನು. ಬಾಳಲೋಚನನ ಶರಣರ ಆಳಾಗಿ ಹೇಳಿದೆನು ನೋಡಾ ಸರ್ವಜ್ಞ ಎಂದು ಎನ್ನೊಡೆಯರಾದ ಶಿವಶರಣರು ಅಪ್ಪಣೆಕೊಡಿಸಿರುವರು. ಇವರಿಗೆ ನಾನೆಷ್ಟರವನು? ಪರುಷಕ್ಕೆ ಪಾಷಾಣ ಸರಿಯಾಗಲರಿವುದೆ? ಹರಶರಣರಡಿಯಾ ಕೆರಹಿಂಗೆ ನಾ ಸರಿಯೆ? ಚರಲಿಂಗ ಸಿದ್ಧ ದಯವಾಗು ಎಂಬ ಶ್ರೀ ಗುರುಗಳವರ ಉಪದೇಶ ವಾಣಿ ಇರುವದರಿಂದ ನಾನಂತೂ ಶಿವಶರಣರ ಕೆರವ ಹಿಡಿಯುವದಕ್ಕೂ ಯೋಗ್ಯನಲ್ಲ. ಮರವೆಯನು ತೊಲಗಿಸಿ, ಅರಿವೆಯನು ಕರುಣಿಸು ಗುರುವೆ.

———

# ಅಖಿಲ ಭಾರತ ವೀರಶೈವ ಮಹಾಸಭಾ ಸದಸ್ಯರಲ್ಲಿ ವಿಜ್ಞಾಪನೆ

(ಲೇಖಕ: ಶ್ರೀ ರೇವಣಸಿದ್ದಪ್ಪ ಶೀಲವಂತ ಮು-ಹುನಗುಂದ)

....O....

ಇಂದು ಈ ಪವಿತ್ರ ಸ್ಥಳ ಮತ್ತು ಪ್ರಖ್ಯಾತ ಸ್ಥಳವಾದ ಶ್ರೀ ಬಸವ ಕಲ್ಯಾಣದಲ್ಲಿ ೧೬ನೇ ವೀರಶೈವ ಮಹಾ ಸಭೆಯು ಶ್ರೀ ಬಂಥನಾಳ ಶಿವ ಯೋಗಿಗಳ ಅಧ್ಯಕ್ಷತೆಯಲ್ಲಿಯೂ ಮತ್ತು ಮೈಸೂರಿನ ಶ್ರೀಮನ್ ಮಹಾ ರಾಜರವರ ಉದ್ಘಾಟನೆಯಲ್ಲಿಯೂ ನಡೆಯುವದು ನೋಡಿ ಒಳ್ಳೇ ಅತ್ಯಾನಂದ ವಾಯಿತು. ಇಂಥ ಮಹಾ ಸಭೆಗೆ ಆಗಮಿಸಿದ ಮಹನೀಯರೆಲ್ಲರೂ ಧನ್ಯರು, ಪುನೀತರು. ಎಲ್ಲರಿಗೂ ಪ್ರಮಥಗಣಾಧೀಶ್ವರರ ಕೃಪಾಶೀರ್ವಾದ ದೊರೆಯಲೆಂದು ಪರಮೇಶ್ವರನಲ್ಲಿ ನನ್ನ ಅನನ್ಯ ಪ್ರಾರ್ಥನೆ.

ಇಂದು ಕೂಡಿದ ಈ ಮಹಾ ಸಭೆಯು ಕೇವಲ ಜಾತ್ರೆಯಂತೆ ನೆರೆದು ಮನೆಗೆ ಹೋಗುವ ಹಾಗೆ ಆಗದೆ, ಮಹತ್ವದ ಶರಣರ ವಿಷಯಗಳನ್ನು ಚರ್ಚಿಸಿ ಅದರಂತೆ ನಡೆಯಲಿಕ್ಕೆ ನಿಯಮ, ನಿರ್ಬಂಧನೆಗಳನ್ನು ಮಾಡಿ ಕೊಂಡು ನಡೆಯುವದರಿಂದ ಈ ಮಹಾಸಭೆಯು ಕೇವಲ ವೀರಶೈವರಿಗಷ್ಟೇ ಅಲ್ಲದೇ ಭಾರತ ಮತ್ತು ಜಗತ್ತಿನ ಎಲ್ಲ ರಾಷ್ಟ್ರಗಳಿಗೆ ಮಾರ್ಗದರ್ಶನ ಮಾಡಿದಂತಾಗುತ್ತದೆ. ವೀರಶೈವ ಧರ್ಮವೆಂದರೆ ವ್ಯಕ್ತಿ ಮತ್ತು ಸಮಾಜ ಗಳಿಗೆ ಸಂಬಂಧಪಟ್ಟ ಧರ್ಮವಲ್ಲ. ವೀರಶೈವ ಧರ್ಮವೇ ವಿಶ್ವಧರ್ಮ. ಧರ್ಮವೆಂದರೆ ಯಾರಾದರೂ ಪಂಗಡ ಅಥವಾ ಗುಂಪುಗಳಿಗೆ ಧರ್ಮ ವೆಂದು ತಿಳಿದಿದ್ದರೆ ಅದು ಶುದ್ಧ ತಪ್ಪು. ಸತ್ಯ, ನ್ಯಾಯ, ನೀತಿ ಮತ್ತು ಆಚರಣೆಯಿಂದ ನಡೆಯುವದೇ ಧರ್ಮ. ಇದನ್ನು ನಾವೆಲ್ಲರೂ ತಿಳಿದು ನಡೆಯುವದೇ ನಮ್ಮೆಲ್ಲರ ಮುಖ್ಯ ಕರ್ತವ್ಯವು. ಇನ್ನು ಮಾತಿಗಿಂತ ಕೃತಿ ಗಳು ಹೆಚ್ಚಾಗಿ ಜರುಗಬೇಕು. ಅಂದರೆ ಇಚ್ಛಿಸಿದ ತತ್ವ ವಿಚಾರಗಳು ಸಿದ್ಧಿಸುವವು.

೧. (ಅ) ಆಧ್ಯಾತ್ಮಿಕ ಪಾರ್ಲಿಮೆಂಟ ಅರ್ಥಾತ್ ಕೇಂದ್ರ ಶಿವಾ ನುಭವ ಮಂಟಪ ಮತ್ತು ಕೆಲವು ಅದರ ಶಾಖೆಗಳನ್ನು ಅಲ್ಲಲ್ಲಿ ನಿರ್ಮಿಸಿ ಶರಣರ ತತ್ವಗಳನ್ನು ಮತ್ತು ಆಧುನಿಕ ವಿಷಯಗಳ ಬಗ್ಗೆ ಆಳವಾಗಿ

ಚರ್ಚಿಸಿ, ಆದರಿಂದ ಬರುವ ವಿಶಿಷ್ಟವಾದ ಜ್ಞಾನವನ್ನು ಸರಕಾರಕ್ಕೂ, ಮತ್ತು ಜನತೆಗೂ ತಿಳಿಯಪಡಿಸುವಂತಾಗಬೇಕು. ಹೀಗೆ ನಡೆಯುವದರಿಂದ ಜನತೆಯು ಆತ್ಮ ಪರಿಶುದ್ಧಗೊಂಡು ವ್ಯಕ್ತಿಯ ವಿಕಾಸವಾಗಲಿಕ್ಕೆ ಹತ್ತುತ್ತದೆ. ವ್ಯಕ್ತಿಯ ವಿಕಾಸವೇ ಸಮಾಜ, ದೇಶ ಮತ್ತು ಜಗತ್ತಿನ ಉನ್ನತಿ ಎಂದರೆ ತಪ್ಪಾಗಲಿಕ್ಕಿಲ್ಲ.

(ಬ) ಪ್ರತಿಯೊಂದು ಊರಲ್ಲಿ ವೀರಶೈವ ಸಮಾಜದ ಬಗ್ಗೆ ಶಿವಾನುಭವ ವಿಷಯಗಳನ್ನು ವಾರಕ್ಕೊಮ್ಮೆಯಾದರೂ ನಡೆದು ಎಲ್ಲ ಸ್ತ್ರೀ-ಪುರುಷರಿಗೆ ತಿಳಿಯುವಂತಾಗಬೇಕು.

(ಕ) ಮಹಾತ್ಮಾ ಶ್ರೀ ಬಸವಣ್ಣನವರ ತತ್ವದ ಪ್ರಕಾರವಾಗಿಯೂ ಮತ್ತು ವೀರಶೈವರ ಸ್ಥಲ ಸಿದ್ಧಾಂತದ ಆಧಾರದ ಮೇರೆಗೂ ಆತ್ಮ ಪವಿತ್ರತೆಗೊಂಡ ಯಾವದೇ ಸಮಾಜದ ಸ್ತ್ರೀ-ಪುರುಷರೆಲ್ಲರಿಗೆ ಶಿವಾನುಭವ ಮಂಟಪದಲ್ಲಿ ಪ್ರವೇಶಿಸಲಿಕ್ಕೂ ಮತ್ತು ಸಮಾಜದಲ್ಲಿ ಸೇರಿಕೊಳ್ಳಲಿಕ್ಕೂ ಮುಕ್ತ ದ್ವಾರವಿರುವಂತೆ ವ್ಯವಸ್ಥೆ ಮಾಡಬೇಕು.

(ಡ) ಕೇಂದ್ರ ಶಿವಾನುಭವ ಮಂಟಪವಲ್ಲದೆ ಇದರ ಕೆಳಗೆ ಕೆಲವು ಮುಖ್ಯ ಶಿವಾನುಭವ ಮಂಟಪಗಳನ್ನು ಮಾಡಿಕೊಂಡು ಆಯಾ ಸ್ಥಾನಗಳಲ್ಲಿ ತಮ್ಮದೇ ಆದ ಪ್ರಿಂಟಿಂಗ ಪ್ರೆಸ್ ಮಾಡಿಕೊಂಡು, ಅದರ ಮೂಲಕ ತತ್ವ, ಸಾಹಿತ್ಯ, ನ್ಯಾಯ, ನೀತಿ, ಸತ್ಯತೆ, ಸಹಕಾರ, ರಾಷ್ಟ್ರಭಕ್ತಿ, ಸಹನಶೀಲತೆ, ಬಂಧುಪ್ರೇಮ ಮತ್ತು ವಿಶ್ವಬಂಧುತ್ವ ಮುಂತಾದ ಅನೇಕ ಹೃದಯಪರಿವರ್ತನೆಯಾಗುವಂಥ ಸದ್ವಿಷಯಗಳಿಂದೊಡಗೂಡಿದ ಲೇಖನಗಳನ್ನು ಮೊದಲು ವಾರಪತ್ರಿಕೆಯ ಮುಖಾಂತರ ಪ್ರಕಟಪಡಿಸುತ್ತಾ ಮುಂದೆ ಬರಬರುತ್ತಾ ದಿನಪತ್ರಿಕೆಯಾಗಿ ಪ್ರಕಟವಾಗುವಂತೆ ವ್ಯವಸ್ಥೆ ಮಾಡಬೇಕು. ಮತ್ತು ಈ ಪತ್ರಿಕೆಗಳನ್ನು ಇಂಗ್ಲೀಷ ಮತ್ತು ಹಿಂದುಸ್ಥಾನದ ಎಲ್ಲ ಭಾಷೆಗಳಲ್ಲಿ ಪ್ರಕಟವಾಗುವಂತೆ ವ್ಯವಸ್ಥೆ ಮಾಡಬೇಕು. ಹೀಗೆ ಮಾಡುವದರಿಂದ ವಿಶ್ವಶಾಂತಿಗೆ ಒಳ್ಳೇ ಸಹಾಯ, ಸಹಕಾರ ಮಾಡಿದಂತಾಗುವದು.

(ಈ) ಈ ಬಸವಕಲ್ಯಾಣ ಪಟ್ಟಣವು ಎಲ್ಲ ವೀರಶೈವರಿಗೆ ಒಳ್ಳೇ ಪುಣ್ಯ ಸ್ಥಳ ಮತ್ತು ಒಳ್ಳೇ ಆದರ್ಶ ಸ್ಥಳವಾದ್ದರಿಂದ ಇದನ್ನು ಒಳ್ಳೇ ಸುಂದರ ಪಟ್ಟಣವನ್ನಾಗಿ ಪುನರ್ರಚಿಸುವಂತೆ ವ್ಯವಸ್ಥೆ ಮಾಡಬೇಕು. ಶಿವಾನುಭವ ಮಂಟಪದ ಮುಖ್ಯ ಸ್ಥಾನಗಳಲ್ಲಿ ಈ ಪಟ್ಟಣಕ್ಕೆ ಒಂದು ಸ್ಥಾನ ದೊರೆಯಬೇಕು. ಮತ್ತು ಅಲ್ಲಿ ಮಹಾ ಶರಣರ ಶ್ರೀ ರೇವಣಸಿದ್ಧೇ

ಶ್ವರ, ಪ್ರಭುದೇವರ, ಮರುಳಶಂಕರದೇವ, ಬಸವಂಣ, ಚನ್ನಬಸವಂಣ, ಸಿದ್ಧರಾಮ, ರುದ್ರಮುನಿ, ಅಕ್ಕ ಮಹಾದೇವಿ, ಅಕ್ಕ ನಾಗಮ್ಮ ಮುಂತಾದ ಅನೇಕರ ಮೂರ್ತಿಗಳನ್ನು ಶಿವಾನುಭವ ಮಂಟಪದ ಮುಂದಿನ ಮೈದಾನದಲ್ಲಿ ಅಮೃತಶಿಲೆಯಿಂದ ಸಂಸ್ಥಾಪಿಸುವದು ಯಥಾ ಯೋಗ್ಯವಿದೆ. ಅವಶ್ಯ ಮಾಡಬೇಕು. ಮತ್ತು ಪ್ರತಿವರ್ಷಕ್ಕೊಮ್ಮೆ ಶ್ರೀ ಪ್ರಭುದೇವರ, ಮತ್ತು ಶ್ರೀ ಬಸವಣ್ಣನವರ ರಥೋತ್ಸವವು ಕೂಡಿಯೇ ಒಂದೇ ವೇಳೆಗೆ ಜರುಗಬೇಕು. ಅಂದರೆ ಇದರಿಂದ ಗುರು ಶಿಷ್ಯರ ಸಾಮರಸ್ಯವನ್ನು ಜಗತ್ತಿಗ ಎತ್ತಿ ತೋರಿಸಿಕೊಟ್ಟಂತಾಗುತ್ತದೆ. ಮತ್ತು ಶರಣ - ಶರಣಿಯರ ವಿಜಯದ ದಿನ ಅಂದರೆ ಕಲ್ಯಾಣರಾಜ್ಯದಲ್ಲಿ ಭವಿಯ ಆಳಿಕೆ ಮುಕ್ತಾಯವಾಗಿ ಶ್ರೀ ಚನ್ನಬಸವಣ್ಣನವರು ಶಿವಾನುಭವ ಮಂಟಪದ ಶೂನ್ಯ ಸಿಂಹಾಸನಕ್ಕೂ ಮತ್ತು ಕಲ್ಯಾಣ ಸಾಮ್ರಾಜ್ಯದ ರಾಜ್ಯ ಪಟ್ಟಾಭಿಷೇಕವನ್ನು ಸ್ವೀಕರಿಸಿದ್ದನ್ನು ಈ ರಥೋತ್ಸವವು ತೋರಿಸುವಂತೆ ಜರಗುವ ವ್ಯವಸ್ಥೆ ಮಾಡಬೇಕು.

---

## ಕನ್ನಡಿಗರ ಹಾಗೂ ವೀರಶೈವರ ಆದ್ಯ ಕರ್ತವ್ಯವು ಶಿವಾನುಭವ ಸಂಘಟನೆ

(ಲೇಖಕ: ಶ್ರೀ ಶಿವಾನಂದಸ್ವಾಮಿ ಮು. ತೆಗ್ಗೀಹಳ್ಳಿ)

ಇದರ ಬಗ್ಗೆ ಸಂಪಾದಕರು ಆಗಸ್ಟ ತಿಂಗಳ ಸಂಚಿಕೆಯಲ್ಲಿ ಒಂದು ಲೇಖವನ್ನು ಪ್ರಕಟಿಸಿದ್ದರು. ಅದಕ್ಕೆ ನಾವು ಸಹೃದಯದಿಂದ ಅನುಮೋದಿಸುವ ಲೇಖವನ್ನೊಂದು ಅಕ್ಟೋಬರ ಶಿವಾನುಭವ ಸಂಚಿಕೆಯಲ್ಲಿ ಪ್ರಕಟಿಸಿದ್ದೆವು. ಈಗ ಅದಕ್ಕೂ ಹೆಚ್ಚಿನ ಕರ್ತವ್ಯವನ್ನು ಕನ್ನಡಿಗರ ಅದರಲ್ಲಿ ವೀರಶೈವರ ಮೇಲೆ ಹಾಕಬೇಕಾಗಿದೆ. ಏನೋ ಸುದೈವದಿಂದ ಮೊನ್ನೆ ನಡೆದ ಶಿವಾನುಭವ ದೊಡ್ಡ ಸಮ್ಮೇಲನದಲ್ಲಿ ಪೂಜ್ಯ ಬಂಥನಾಳ ಶಿವಯೋಗಿಗಳವರು ಶಿವಾನುಭವ ಸಂಘಟನೆಗೆ ಅರ್ಥಾತ್ ಶರಣರ ಸಾಹಿತ್ಯ ಪ್ರಚಾರ ಹಾಗೂ ಶಿವಾನುಭವ ಪ್ರಚಾರ ಇವುಗಳಿಗೆ ೫೦೦೦ ರೂಪಾಯಿಗಳ ವಾಗ್ದಾನ

ಮಾಡಿ ನಾಂದಿಯನ್ನು ಹಾಕಿದರು. ಇವರ ಈ ಮಹಾದಾನವನ್ನು ಎಷ್ಟು ಹೊಗಳಿದರೂ ತೀರದು. ಕಾಲೇಜದ ಕೆಲಸವೊಂದಿಗೆ ಇದನ್ನು ಒಳ್ಳೇ ಕಳಕಳಿಯಿಂದ ಮಾಡಿದರೆ ಕನ್ನಡಿಗರ ಅದರಲ್ಲಿ ವೀರಶೈವರ ಮಹಾ ಕಲ್ಯಾಣ ಮಾಡಿದ ಪುಣ್ಯವು ಲಭಿಸುವದರಲ್ಲಿ ಸಂದೇಹವಿಲ್ಲ. ಈಗ ಕಾಲೇಜವು ಎಲ್ಲ ಸಮಾಜಕ್ಕೂ ಅವಶ್ಯ ಬೇಕು. ಅದರ ಬಗ್ಗೆ ತಿಳುವಳಿಕೆ ಇದ್ದವರು ಅನೇಕರುಂಟು. ಅಲ್ಲದೆ ಅದರ ಕಾರ್ಯವನ್ನು ನಿರ್ವಹಣ ಮಾಡುವವರೂ ಅನೇಕರು ಸಿಗುವರು. ಕಾಲೇಜಕ್ಕಿಂತ ಈ ಶಿವಾನುಭವ ಸಂಘಟನೆಯ ಕಾರ್ಯವು ಸ್ವಾಮಿಗಳಿಗೆ ಮಹತ್ವದ್ದಾಗಬೇಕು. ಈ ಕಾರ್ಯವನ್ನು ಮಾಡುವವರು ಸಿಗುವದು ಬಹಳ ವಿರಳ. ಇದನ್ನು ಮಾಡುವವರು ಯಾರೂ ಇಲ್ಲೆಂದರೂ ಅಡ್ಡಿ ಇಲ್ಲ. ಅಂಥದರಲ್ಲಿ ನಮ್ಮ ಸ್ವಾಮಿಗಳು ೫೦೦೦ ರೂಪಾಯಿಗಳ ವಾಗ್ದಾನ ಮಾಡಿದ್ದು ನಮ್ಮೆಲ್ಲರ ಸುದೈವ. ಈ ಕಾರ್ಯವು ಇಷ್ಟಕ್ಕೆ ನಿಲ್ಲದೆ ಯಾವತ್ತೂ ಜನತೆಯ ಕಡೆಯಿಂದ ದೊಡ್ಡ ನಿಧಿಯನ್ನು ಸಂಗ್ರಹಿಸಿ ಒಂದು ಹಿತೈಷಿಗಳ ಕಮಿಟಿಯನ್ನು ಸ್ಥಾಪಿಸಿ ಈ ಕಾರ್ಯದ ಗೊತ್ತುಗುರಿಗಳನ್ನು ಪದ್ಧತಿಯ ಪ್ರಕಾರ ಮಾಡಿಸಿ ಶರಣರ ವಚನ, ತತ್ವಗಳು ಕನ್ನಡಿಗರ ಅದೇಕೆ ಜಗತ್ತಿನ ಉಸಿರಾಗುವಂತೆ ಮಾಡಬೇಕು. ಈ ಕಾರ್ಯವನ್ನು ಮಾಡುವವರೇ ನಿಜವಾದ ಈಗಿನ ಕಾಲದ ಶರಣರೆಂದು ಶ್ರೀ ಗಜೇಂದ್ರಗಡ ಶಾಮರಾಯರು ಹುಬ್ಬಳ್ಳಿ ಬಿ. ಎ. ಬಿ. ಟಿ. ಇವರು ಉದಯ ಪತ್ರಿಕೆಯ ವಿಶೇಷ ಸಂಚಿಕೆಯಲ್ಲಿ ರಾವಬಹಾದ್ದೂರ ಫ. ಗು. ಹಳಕಟ್ಟಿಯವರ ಬಗ್ಗೆ ಒಂದು ಲೇಖನವನ್ನು ಬರೆದು ಒಳ್ಳೇ ಮಹತ್ವದ ಸೂಚನೆಯನ್ನು ನಮಗೆ ಮಾಡಿದ್ದಾರೆ. ಯಾವತ್ತರೂ ಅದನ್ನು ಅವಲೋಕಿಸಬೇಕು.

ಶ್ರೀ ಹಳಕಟ್ಟಿಯವರು ನಿಜವಾಗಿ ನಮ್ಮ ಸಮಾಜದ ಸಲುವಾಗಿ ತಮ್ಮ ನೌಕರಿ, ವಕೀಲವೃತ್ತಿಗಳನ್ನು ತ್ಯಾಗ ಮಾಡಿ ವೀರಶೈವರಿಗಷ್ಟೇ ಏಕೆ? ಕನ್ನಡ ನಾಡಿನ ಸೇವೆ ಮಾಡಿದ್ದಾರೆ. ವಚನ ವಾಙ್ಮಯಕ್ಕೆ ಪುನರ್ಜನ್ಮ ಕೊಟ್ಟು ಉಳಿಸಿದ ಯಾವತ್ತೂ ಕೀರ್ತಿ ಅವರಿಗೇನೇ ಸಲ್ಲತಕ್ಕದ್ದು. ಅದೇಕೆ? ಯಾವತ್ತೂ ನಮ್ಮ ಶರಣ ಶರಣೆಯರಿಗೇನೇ ಪುನರ್ಜನ್ಮಕೊಟ್ಟು ಅವರು ಬದುಕಿಸಿದರೆಂದು ಹೇಳಿದರೂ ತಪ್ಪಲ್ಲ. ವೀರಶೈವವೆಂದರೇನು? ಯಾರಿಗೂ ಗೊತ್ತಿರಲಿಲ್ಲ. ಅವರ ಧರ್ಮಗ್ರಂಥಗಳು ಯಾವವೆಂದು ಯಾರಿಗೂ ಗೊತ್ತಿರಲಿಲ್ಲ. ನಾಡಿನಲ್ಲಿ ವೀರಶೈವರಿಗೆ ಸ್ಥಾನವೇ ಇರಲಿಲ್ಲ. ಅದೇಕೆ?

ಕನ್ನಡಕ್ಕೆ ಕನ್ನಡನಾಡಿಗೆ ಸಹ ಸ್ಥಾನವಿರಲಿಲ್ಲ. ಇದನ್ನೆಲ್ಲವನ್ನು ನಿಜವಾಗಿ ತಂದು ಕೊಟ್ಟವರು ಶ್ರೀ ಹಳಕಟ್ಟಿಯವರೇ ಸರಿ. ಯಾಕಂದರೆ ವಚನ ವಾಙ್ಮಯವನ್ನು ಪ್ರಕಟಿಸಿದ್ದರಿಂದ ಮೇಲೆ ಹೇಳಿದವುಗಳಿಗೆಲ್ಲ ಈಗ ಸ್ಥಾನ ಕೊಟ್ಟಂತೆ ಆಗಿದೆ. ಉಳಿದ ಜನರಂತೆ ಇವರೊಬ್ಬರು ತಮ್ಮ ಗಳಿಕೆಯಲ್ಲಿ ಸುಖದಲ್ಲಿ ಅಧಿಕಾರದಲ್ಲಿ ಮುಳುಗಿದ್ದರೆ ಇದೆಲ್ಲಿ ಸಾಧಿಸುತ್ತಿತ್ತು ? ಆದರೆ ಇದಕ್ಕೆಲ್ಲ ತಿಲಾಂಜಲಿಯನ್ನಿತ್ತು ವಚನವಾಙ್ಮಯದ ಸೇವೆ ಮಾಡಿದರು. ಆದರಿಂದ ಅವರೇನು ಸಿರಿ ಗಳಿಸಲಿಲ್ಲ. ಅವರಿಗೆ ಇನ್ನೂ ಬಾಡಿಗೆಯ ಮನೆ ತಪ್ಪಲಿಲ್ಲ. ಈಗಿನ ೧೦–೧೫ ವರ್ಷಗಳಲ್ಲಿ ವ್ಯಾಪಾರದಿಂದ, ಬ್ಲ್ಯಾಕ ಮಾರ್ಕೇಟದಿಂದ ಮೆಂಬರರಾಗಿರುವದರಿಂದ, ನೌಕರಿ ಮಾಡುವದರಿಂದ, ವಕೀಲಿ ಮಾಡುವದರಿಂದ ಅನೇಕರು ದುಡ್ಡನ್ನು ಗಳಿಸಿದರು. ಇವರೂ ಇದರಂತೇ ಮಾಡಿದ್ದರೆ ಬೇಕಾದಷ್ಟು ಗಳಿಸಬಹುದಾಗಿತ್ತು. ಇದಕ್ಕೆಲ್ಲ ಆಶೆ ಮಾಡದೆ ತಮ್ಮ ತನು ಮನ ಧನಗಳನ್ನೆಲ್ಲ ಶರಣರ ಸಾಹಿತ್ಯ ಸೇವೆಯಲ್ಲಿ ಸವೆಸಿ ಬಡವರಾದರು. ಮುಪ್ಪು ಆದರು. ಅಲ್ಲದೆ ಬೇಕಾದಷ್ಟು ಗಳಿಸುವ ಸಾಮರ್ಥ್ಯವುಳ್ಳಂಥ ಹಿರೇಮಗನೊಬ್ಬನು ಪ್ರಾಯದಲ್ಲೇ ಮೃತನಾದನು. ಒಬ್ಬ ಮಗನ ಮೆದಳು ವಿಭ್ರಮೆಯಾಗಿಹೋಗಿದೆ. ಇದೆಲ್ಲವನ್ನು ಅವರು ಬಹು ಸಮದೃಷ್ಟಿಯಿಂದಲೇ ನೋಡಿ ಸದಾ ಶಾಂತಿಯಲ್ಲೇ ಈ ಸೇವೆಯನ್ನು ಮಾಡುತ್ತಿರುವರು. ಯಾವ ಜಯಜಯಕಾರಕ್ಕೆ ಯಾವ ಸ್ತುತಿ ನಿಂದೆಗಳಿಗೆ ಯಾವ ಲಾಭ ಹಾನಿಗಳಿಗೆ ಯಾವ ದುರ್ಘಟನೆಗೂ ಒಳಗಾಗದೆ ನಿಷ್ಕಾಮವಾಗಿಯೇ ಶರಣರ ಸೇವೆಯನ್ನೂ ವೀರಶೈವರ ಸೇವೆಯನ್ನೂ ಕನ್ನಡಿಗರ ಸೇವೆಯನ್ನೂ ಸದಾ ಮಾಡುತ್ತಿರುವರು. ಇವರೇ ಶರಣರು. ಏನೋ ಪರಮಾತ್ಮನು ನಮ್ಮವರ ಉದ್ಧಾರಕ್ಕೆ ಇವರನ್ನು ಕೊಟ್ಟಂತೆ ಇದೆ. ೭೪ ವರ್ಷದ ಇವರ ಆಯುಷ್ಯದಲ್ಲಿ ಯಾರನ್ನೂ ನೋಯಿಸಿದ್ದ ಕಂಡುಬರುವದಿಲ್ಲ. ಆದರೂ ಯಾವ ಕನ್ನಡಿಗನೂ ಯಾವ ವೀರಶೈವನೂ ಯಾವ ಗುರುವರ್ಗದವರೂ ಯಾವ ಮೆಂಬರರೂ ಇವರ ಸೇವಾ ಕಾರ್ಯದ ಮಹತ್ವವನ್ನೇ ಅರಿತಂತೆ ತೋರುವದಿಲ್ಲ. ಇದನ್ನು ಅರಿತಿದ್ದರೆ ಅವರಿಗೆ ಸರ್ವರೂ ತಮ್ಮ ತನು ಮನ ಧನದಿಂದ ನೆರವನ್ನು ನೀಡುತ್ತಿದ್ದರು. ಇವರ ತ್ಯಾಗ ಸೇವೆಗೆ ಯಾರಾದರೂ ಕರುಣೆಯನ್ನು ತೋರಿದರೆ ಒಳಿತಲ್ಲವೆ ? ಅಂದರೆ ನಾವೇನು ಇವರನ್ನು ಜಯಜಯಕಾರ ಮಾಡಿ ಪಾಲಕಿಯಲ್ಲಿ

ಕೊಡ್ರಿಸಿ ಮೆರಿಸೆಂದು ಹೇಳುವವಿಲ್ಲ. ಇಂಥವುಗಳನ್ನು ಅವರು ಬಯಸುವ ದಿಲ್ಲ. ಅವರಿಗೆ ಅವು ಬೇಕಾಗಿಲ್ಲ. ಆದರೆ ಅವರಿಗೆ ಬೇಕಾದುದು ಶಿವಾನುಭವ ಸಂಘಟನೆ, ಶರಣರ ವಚನ ತತ್ವಗಳ ಪ್ರಸಾರ, ಶಿವಾನುಭವ ಪ್ರಚಾರ ಇವುಗಳ ಮುಖಾಂತರ ನಾಡ ನುಡಿಗಳ ಮುಖಾಂತರ ನಾಡನುಡಿಗಳ ಸೇವೆ ಹೊರತು ಬೇರೆ ಏನೂ ಅವರಿಗೆ ಬೇಕಾಗಿಲ್ಲ.

ಇಂಥ ಕೆಲಸಕ್ಕೆ ಎಲ್ಲರೂ ಮುಕ್ತ ಹಸ್ತದಿಂದ ನೆರವು ನೀಡಬೇಕು. ಪೂಜ್ಯ ಬಂಥನಾಳ ಶಿವಯೋಗಿಗಳು ಈ ಕೆಲಸಕ್ಕೆ ದೊಡ್ಡ ದೇಣಿಗೆಯ ವಾಗ್ದಾನ ಮಾಡಿ ನಾಂದಿ ಹಾಕಿದ್ದಾರೆ. ನಿಪ್ಪಾಣಿಯ ಶ್ರೀ ಆರ್. ಎಸ್. ಕೋತೆವಾಲ ಇವರು ೫೦೦ ರೂ. ಗಳ ವಾಗ್ದಾನ ಮಾಡಿದ್ದಾರೆ. ಇನ್ನೊಬ್ಬರು ೧೦೦ ರೂ. ವಾಗ್ದಾನ ಮಾಡಿದ್ದಾರೆ. ಇವರೆಲ್ಲರನ್ನು ಅಭಿನಂದಿಸದೆ ಇರಲಾರೆವು. ಈ ಕಾರ್ಯವು ಇಷ್ಟಕ್ಕೆ ನಿಲ್ಲದೆ ಭರದಿಂದ ಬೆಳೆದು ನಾಡು ಪರನಾಡುಗಳಲ್ಲಿ ಹಬ್ಬಬೇಕೆಂದು ಆಸೆಯಿದೆ. ಕಾಲೇಜದ ಕಾರ್ಯದ ಕೂಡ ಮಹಾಸ್ವಾಮಿಗಳು ಶಿವಾನುಭವ ಪ್ರಚಾರ ಕಾರ್ಯವನ್ನು ಕೈಕೊಳ್ಳಬೇಕೆಂದು ನಾವು ವಿನಂತಿಸುವೆವು. ಈಗ ಇವರು ಸರ್ವತೋಮುಖದಿಂದ ಕೀರ್ತಿ ಯಶಗಳನ್ನು ಗಳಿಸಿದ್ದು ಒಳ್ಳೇ ಸ್ತುತ್ಯವಿದೆ. ಆದರೂ ಈ ಶಿವಾನುಭವ, ಶರಣ ಸಾಹಿತ್ಯ ಪ್ರಚಾರದಿಂದ ದೂರ ಉಳಿದಿದ್ದರು. ಈಗ ಅದನ್ನೂ ಕೂಡ ಕೈಯ್ಯಲ್ಲಿ ತಕ್ಕೊಂಡು ಒಳ್ಳೇ ಸ್ತುತ್ಯ ಕಾರ್ಯವನ್ನೇ ಮಾಡಿದರೆಂದು ಧಾರಾಳವಾಗಿ ಹೇಳಬಹುದು. ಇವರ ಹಿರಿತನದಲ್ಲಿ ಯಾವ ಕಾರ್ಯವಾದರೂ ಭರದಿಂದ ಬೆಳೆಯುವವೆಂಬುದರಲ್ಲಿ ಸಂದೇಹವಿಲ್ಲ.

ಶಿವಾನುಭವ ಮಾಸಿಕವನ್ನು ಓದುವವರಿಗೊಂದು ವಿನಂತಿಮಾಡಲಾರದೆ ಇರಲಾರೆ. ಶಿವಾನುಭವವನ್ನು ತಾವು ಓದಬೇಕು. ನಿಮ್ಮ ಗೆಳೆಯರಿಗೂ ಶಿಷ್ಯರಿಗೂ ಭಕ್ತರಿಗೂ ಓದಲಿಕ್ಕೆ ತಿಳಿಸಬೇಕು. ಇದಲ್ಲದೆ ತಾವು ಶ್ರೀ ಹಳಕಟ್ಟಿಯವರ ಪರಿಸ್ಥಿತಿಯನ್ನು ನೋಡಿ ತಮ್ಮ ಕ್ಷೆಯ ಶಿರಿವಂತರಿಗೂ ಶಿಕ್ಷಕರಿಗೂ ಅಧಿಕಾರಿಗಳಿಗೂ ವಾಚನಾಲಯ ರುಚಿಯುಳ್ಳವರಿಗೂ ಶಿವಾನುಭವ ಮಾಸಪತ್ರಿಕಗಳನ್ನು ತರಿಸಲು ದಯಮಾಡಿ ವಿನಂತಿಸಬೇಕು. ಅಂದರೆ ನೀವೂ ಒಂದು ರೀತಿಯಿಂದ ನಾಡ ನುಡಿಗಳ ಸೇವೆ ಮಾಡಿದಂತೆ ಆಗುವದು. ಇದರಿಂದ ನಿಜವಾಗಿಯೂ ನೀವು ಧರ್ಮಾತ್ಮರಾಗುವಿರಿ. ಶಿವಾನುಭವ ಮಾಸಪತ್ರಿಕೆ ನಮಗೆ ತಿಳಿಯುತ್ತಿದ್ದಿಲ್ಲ. ಕ್ಲಿಷ್ಟವಾಗಿರುವದು, ಗೂಢ

ವಾಗಿ ಗಂಭೀರವಾಗಿ ಬರೆದ ಲೇಖಗಳಿರುವದರಿಂದ ತಿಳಿಯುವದಿಲ್ಲ, ಅದಕ್ಕೆ ಇದನ್ನು ಈಗೀಗ ತರಿಸುವದನ್ನು ಬಿಟ್ಟೆವೆಂದು ಕೆಲವರು ಕುಂಟುನೆವವನ್ನು ಹೇಳುತ್ತಿರಬಹುದು. ಓದುತ್ತ ಹೋದರೆ ಎಲ್ಲವೂ ತಾನೇ ತಿಳಿಯುತ್ತ ಹೋಗುವದು. ಈಗ ನಾವು ಶಿವಾನುಭವಕ್ಕೆ ೭-೮ ತಿಂಗಳಿಂದ ಲೇಖಗಳನ್ನು ಸರಳ ಶೈಲಿಯಲ್ಲಿ ಬರೆಯುತ್ತಿರುವೆವು. ಅವುಗಳಾದರೂ ವಚನಗಳ ಸಹಾಯದಿಂದ. ಅಷ್ಟಾವರಣ, ಷಟ್‌ಸ್ಥಲ, ಪಂಚಾಚಾರ, ಭಕ್ತಿ, ಜ್ಞಾನ, ಕರ್ಮ, ತ್ಯಾಗ, ವೈರಾಗ್ಯ, ಸೇವೆ ಮೊದಲಾದವುಗಳ ಬಗ್ಗೆ ಬರೆಯುವೆವು. ಈಗ ನೀವು (ತರಿಸುವವರು) ಪ್ರಚಾರ ಮಾಡಿ ನಮ್ಮ ಸಂಪಾದಕರಿಗೆ ಸಹಾಯ ಮಾಡಿರಿ. ಅದನ್ನಾದರೂ ಕೂಡ ಧರ್ಮಕ್ಕೆ ಕೊಟ್ಟಂತೆ ಆಗುವದು. ಅವರು ಅದರಿಂದ ಮುಂದಿನ ಕಾರ್ಯವನ್ನು ಮಾಡುವರು ಹೊರತು ಬೇರೆ ಇಲ್ಲ.

ಗುರುವರ್ಗದವರು ತಮ್ಮ ಶಿಷ್ಯರಲ್ಲಿ ಇದನ್ನು ಹೆಚ್ಚಾಗಿ ಪ್ರಚಾರ ಮಾಡಬೇಕು. ಶಿಷ್ಯರ ಮನೆಗೆ ಹೋದಾಗ ಇಂತಿಷ್ಟು ಹಣ ಕೊಟ್ಟರೆ ಊಟ ಮಾಡುವೆನೆಂದು ಕರಾರು ಹಾಕುವದಕ್ಕಿಂತ ಶಿವಾನುಭವ, ಶರಣರ ವಚನಗಳನ್ನು ತರಿಸಿದರೆ ಊಟ ಮಾಡುವೆನು. ಇಲ್ಲವಾದರೆ ಇಲ್ಲೆಂದು ಹೇಳಿದರೆ ಆ ಪರಶಿವನು ನಿಜವಾಗಿಯೂ ಬಹು ಆನಂದಬಟ್ಟು ನಿಮ್ಮನ್ನು ಹರಿಸುವನು. ಎಲ್ಲ ಪಟ್ಟದ ದೇವರೂ ಎಲ್ಲ ವಿರಕ್ತರೂ ಎಲ್ಲ ಮಠದವರೂ ಈ ಕಾರ್ಯವನ್ನು ಕೈಕೊಂಡರೆ ವಚನವಾಙ್ಮಯವು ಬಹು ವೇಗವಾಗಿ ನಾಡಿನ ಮೂಲೆ ಮೂಲೆಗಳಲ್ಲಿ ಪಸರಿಸುವದು. ಆಗ ಇದು ಕನ್ನಡಿಗರ ಆದರಲ್ಲಿ ವೀರಶೈವರ ಉಸುರಾಗಿ ಉಳಿಯುವದು. ಆಗ ಇದನ್ನು ನೋಡಿ ನಮ್ಮ ಹಿಂದಿನ ಶರಣರು ಆದ್ಯರು ಸಂತೋಷಬಟ್ಟು ನಮ್ಮ ನಾಡಿಗೆ ನಿಜವಾಗಿ ಹರಿಸುವದರಲ್ಲಿ ಸಂದೇಹವಿಲ್ಲ.

ಏ. ಡಿ. ಆಯ್. ಶಾಲೆಯ ಸಾಹೇಬರು ಸದಾ ಊರೂರು ಪ್ರವಾಸ ಮಾಡುತ್ತಲೇ ಇರುವರು. ಅವರು ಶಿವಾನುಭವ ಮಾಸಿಕಕ್ಕೆ ಚಂದಾದಾರರಾದ ಶಿಕ್ಷಕರಿಗೆ ಯಾವ ರೀತಿಯಿಂದ ಪ್ರೋತ್ಸಾಹ ಕೊಡಬೇಕು ಅದನ್ನು ಬೇರೆ ಹೇಳಬೇಕಾಗಿಲ್ಲ. ಅಂದರೆ ಸ್ವಾರ್ಥದ ಕೂಡ ಪಾರಮಾರ್ಥವನ್ನು ಸಾಧಿಸಿದಂತೆ ಆಗುವದು. ಅದರಂತೆ ಕಾಲೇಜ ಪ್ರೊಫೆಸರರೂ ಯತ್ನಿಸ್ಬೇಕು. ಅವರಿಗಂತೂ ಸದಾ ಬಿಡುವು ಸಿಗುವದು. ಉಚ್ಚ ತರಗತಿಯ

ವಿದ್ಯಾರ್ಥಿಗಳು ಅವರ ಕೈಯೊಳಗಿರುವರು. ಬರೇ ಕಾದಂಬರಿ ನಾಟಕಗಳನ್ನು ಓದಿ ಇವರು ಕೆಡುತ್ತಿರುವರು. ಅಂಥವರಿಗೆ ಶಿವಾನುಭವದ ರುಚಿಯನ್ನು ಹಚ್ಚಿದರೆ ಒಳಿತಾಗುವದು. ಎಲ್ಲರೂ ಸುಧಾರಿಸುವದರಲ್ಲಿ ಸಂದೇಹವಿಲ್ಲ.

ಅಂತೂ ನಿಧಿಯನ್ನು ಕೊಟ್ಟು ಶಿವಾನುಭವಕ್ಕೆ ಚಂದಾದಾರರಾಗುವಂತೆ ಮಾಡಿ ಧರ್ಮವನ್ನೂ ನಾಡನುಡಿಯನ್ನೂ ಉದ್ಧರಿಸಬೇಕೆಂದು ಎಲ್ಲ ಬಾಂಧವರಿಗೆ ಪುನಃ ವಿನಂತಿಸದೆ ಇರಲಾರೆವು. ಈ ಕಾರ್ಯದ ಮಹತ್ವವನ್ನರಿತವರು ಅನ್ಯರಿಗೂ ಅದರಂತೆ ತಿಳಿಸಿ ಪ್ರಚಾರ ಮಾಡಿದರೆ ಕಾರ್ಯವು ಅನಾಯಾಸ ಆಗುವದರಲ್ಲಿ ಸಂದೇಹವಿಲ್ಲ. ಈಗಿನ ಕಾಲದ ರಾ॥ ಬ॥ ಫ. ಗು. ಹಳಕಟ್ಟಿಯವರ ಕಾರ್ಯಭಾರವನ್ನು ಹೀಗೆ ಮಾಡಿದರೆ ಸ್ವಲ್ಪ ಇಳಿಸಿದಂತೆ, ಅವರ ಹೆಗಲಿಗೆ ಕೈಹಚ್ಚಿದಂತೆ ಆಗುವದು. ಈ ಪುಣ್ಯಕಾರ್ಯದಲ್ಲಿ ಎಲ್ಲರೂ ಭಾಗಿಗಳಾಗಿರಿ.



# ಬಸವನ ಬಾಗೇವಾಡಿ ಹೋಗಿ ರಾಜಾ ಬಾಗೇವಾಡಿ ಏಕೆ?

(೨)

ವಿಜಾಪೂರದಿಂದ ೩೦ ಮೈಲಿನ ಮೇಲೆ ಇರುವ ತೆಲಗಿ ಸ್ಟೇಶನದಲ್ಲಿ ಹೊಸದಾಗಿ "ರಾಜಾ ಬಾಗೇವಾಡಿ ರೋಡು" ಎಂದು ಬಸವನ ಬಾಗೇ ವಾಡಿಗೆ ಹೆಸರು ಬರೆದು ಬೋರ್ಡನ್ನು ತೂಗಹಾಕಿದ್ದು ವಿಜಾಪೂರ ಜಿಲ್ಹೆಯವರು ನೋಡಿದಂತೆ ತೋರುವದಿಲ್ಲ. ಒಂದು ವೇಳೆ ನೋಡಿದರೂ ಯಾವ ಹೆಸರನ್ನೇಕೆ ಬರೆಯಲೊಲ್ಲರು? ನಮಗೇಕೆ ಇದರ ಗೊಂದಲ ಬೇಕೆಂದು ಸುಮ್ಮನಿರುವದು ಈ ಜಿಲ್ಹೆಯವರ ಸಹಜ ಪ್ರವೃತ್ತಿ ಅದಕ್ಕೆ ತಕ್ಕಂತೆ ಯಾರೂ ಏನೂ ಚಕಾರ ಶಬ್ದವನ್ನು ಎತ್ತಲಿಲ್ಲೆಂದು ಅನಿಸುವದು. ವೀರಶೈವರ ಧರ್ಮಪ್ರವರ್ತಕನು, ಅವತಾರಿಕನು, ಸಮತಾವಾದಿಯು, ಧರ್ಮವೇತ್ತನು, ಜಗದಣ್ಣ ಬಸವಣ್ಣನು ಜನ್ಮವೆತ್ತಿದ ಪವಿತ್ರ ಊರು, ವೀರಶೈವರ ಸಂಸ್ಕೃತಿಕೇಂದ್ರ, ಅದೇಕೆ ಸರ್ವ ಕನ್ನಡಿಗರೂ ಅಭಿಮಾನದಿಂದ ಬಣ್ಣಿಸುವ ಬಸವನ ಪವಿತ್ರ ಜನ್ಮಭೂಮಿ ಪ್ರತಿವರ್ಷ ಲಕ್ಷಗಟ್ಟಲೇ ಬಸವನಿಗಾಗಿ ಬಾಗೇವಾಡಿಗೆ ಯಾತ್ರಿಕರು ಹೋಗಿ ಬರುವ ಸ್ಥಳ. ಇದಕ್ಕೆ ರಾಜಾ ಬಾಗೇವಾಡಿ ರೋಡ ಎಂದು ಸ್ಟೇಶನಕ್ಕೆ ಬೋರ್ಡಹಚ್ಚಿ ಬಸವನ ಪವಿತ್ರ ಜನ್ಮ ಭೂಮಿಯು ಮಹತ್ವವನ್ನು ಕಡಿಮೆ ಮಾಡಲೋಸುಗ ಇದೆಲ್ಲ ಕಾರಸ್ಥಾನವೋ ಏನೊ? ಇದಕ್ಕೆ ಯಾರೂ ಇಲ್ಲಿಯ ಜನರು ಲಕ್ಷವನ್ನೇ ಹಾಕಿಲ್ಲ. ಇದು ನಮ್ಮವರಿಗೆ ವಿಹಿತವಲ್ಲ.

ಅದರೆ ೩೦೦ ಮೈಲು ದೂರವಿರುವ ಬಳ್ಳಾರಿಯ ನವಸಂದೇಶ ವಾರ ಪತ್ರಿಕೆಯ ಸಂಪಾದಕರಾದ ಮಾನ್ಯ ಟಿ. ಎಚ್. ಎಂ. ಹೊಳೆಬಸವ ಶಾಸ್ತ್ರಿಗಳವರು ಈ ಸ್ಟೇಶನದಲ್ಲಿ ಬಂದಾಗ ಸಹಜನೋಡಿ ಹೋದವರೇ ಅದರ ಬಗ್ಗೆ ಒಂದು ಕ್ರಾಂತಿಯನ್ನು ಮಾಡಿದ್ದಾರೆ. ಅವರು ಅದರ ಮಹತ್ವ ವರಿತು ರಾಜಾ ಬಾಗೇವಾಡಿ ಎಂಬ ಬೋರ್ಡನ್ನು ಕತ್ತರಿಸಿ ಬಸವನ ಬಾಗೇವಾಡಿ ಎಂಬ ಬೋರ್ಡನ್ನು ಹಚ್ಚಲಿಕ್ಕೆ ತಮ್ಮ ಪತ್ರಿಕೆಯಲ್ಲಿ ಸದಾ ಬರೆದು ಅಂದೋಲನ ಮಾಡಿದರು. ಹೋದಲ್ಲಿ ಬಂದಲ್ಲಿ ಚರ್ಚೆ ವ್ಯಾಖ್ಯಾನ ಮಾಡಿದರು. ಅಲ್ಲದೆ ರೇಲ್ವೆ ಬೋರ್ಡಿಗೆ ತಿಳಿಸಿದರು. ಇಷ್ಟೆಲ್ಲ ಸಾಹಸ

ಮಾಡಿಸಲೂ ಇಲ್ಲಿ ಯಾರಿಗೂ ಏನೂ ಗೊತ್ತೇ ಇಲ್ಲ. ಇಲ್ಲಿ ಪತ್ರಿಕೆಗಳಾಗಲಿ ಪ್ರಮುಖರಾಗಲಿ, ಎಂ. ಎಲ್. ಎ. ಗಳಾಗಲಿ, ಎಂ. ಪಿ. ಗಳಾಗಲಿ ಏನೂ ಮಾಡಿಲ್ಲೆಂದು ಅವರ ನವಸಂದೇಶ ಪತ್ರಿಕೆಯಿಂದ ನಾವು ಅರಿತು ಕೊಂಡೆವು. ಅವರು ಬಹು ಸಾಹಸಮಾಡಿ ಪ್ರಯತ್ನಿಸಿದ್ದಕ್ಕಾಗಿ ೬—೧೨—೫೪ ರಲ್ಲಿ ಹುಬ್ಬಳ್ಳಿಯಲ್ಲಿ ಕೂಡಿದ ದಕ್ಷಿಣ ರೇಲ್ವೆಯ ಪ್ರಾದೇಶಿಕ ಸಲಹಾ ಮಂಡಲದ ಅಧಿವೇಶನದಲ್ಲಿ ಬಳ್ಳಾರಿಯ ರಾ. ಬ. ವೈ. ಮಹಾಬಲೇಶ್ವರಪ್ಪನವರು ಅದರ ಬಗ್ಗೆ ಒಂದು ಠರಾವನ್ನು ಚರ್ಚೆಗೆ ತಂದರು. ಆಗ ಚರ್ಚೆ ನಡೆದು ವಿಜಾಪೂರ ಕಲೆಕ್ಟರವರು ರಾಜಾ ಬಾಗೇವಾಡಿ ಎಂದು ಸೂಚಿಸಿದ್ದರಿಂದ ಆ ಹೆಸರನ್ನು ಇಟ್ಟಿರುವುದೆಂದು ಅವರು ಹೇಳಿದರು. ಪುನಃ ಈಗ ವಿಜಾಪೂರದಲ್ಲಿ ಒಂದು ದೊಡ್ಡ ಧಾರ್ಮಿಕ ಸಮಾರಂಭ ಒಂದು ಕೂಡಲಿರುವದೆಂದೂ ರಾಜಾ ಬಾಗೇವಾಡಿಯ ಹಲಿಗೆಯನ್ನು ಇರಗೊಟ್ಟರೆ ಏನಾದರೂ ಅನಾಹುತ ಜರಗಿದರೆ ಅದಕ್ಕೆ ರೇಲ್ವೆ ಅಧಿಕಾರಿಗಳೇ ಕಾರಣರೆಂತಲೂ ರಾ. ಬ. ವೈ. ಮಹಾಬಲೇಶ್ವರಪ್ಪನವರು ಅಧಿವೇಶನಕ್ಕೆ ಕೇಳಿಕೊಳ್ಳಲು ಆಗಿಂದಾಗಲೇ ಅದನ್ನು ತೆಗೆದು ಹಾಕಲು ತಲಿಗಿಗೆ ಆಜ್ಞೆಯನ್ನು ಕಳುಹಿಸಿ ಆ ಬೋರ್ಡನ್ನು ತೆಗೆಯಿಸಿದರಂತೆ. ಇದರಲ್ಲಿ ಬೆಳಗಾವದ ಶ್ರೀ ಪಂಡಿತಪ್ಪ ಚಿಕ್ಕೋಡಿಯವರೂ ಅನೇಕ ರೀತಿಯಿಂದಲೂ ಸಾಹಸಮಾಡಿದ್ದಾರೆಂದು ತಿಳಿದು ಬಂದಿದೆ. ಕಾರಣ ಮೊದಲು ಬಳ್ಳಾರಿಯ ನವಸಂದೇಶದ ಸಂಪಾದಕರಿಗೆ ರಾ. ಬ. ವೈ ಮಹಾಬಲೇಶ್ವರಪ್ಪ ಬಳ್ಳಾರಿಯವರಿಗೂ ಬೆಳಗಾವಿ ಪಂಡಿತಪ್ಪ ಚಿಕ್ಕೋಡಿಯವರಿಗೆ ಶಿವಾನುಭವದ ವತಿಯಿಂದ ಆಭಾರಮನ್ನಿಸದೆ ಇರಲಾರೆವು. ಧರ್ಮದ ಕುರುಹುಗಳನ್ನೆಲ್ಲ ಉಳಿಸಲಿಕ್ಕೆ ತನುಮನಧನದಿಂದ ಯತ್ನಮಾಡುವರೆಲ್ಲರೂ ಧರ್ಮಾತ್ಮರೇ ಸರಿ ಮತ್ತು ನವಸಂದೇಶದ ಸಂಪಾದಕರ ಧರ್ಮನಿಷ್ಠೆ ಸತ್ಯಶಿ ನಿರ್ಭಿಡೆ ಧೈರ್ಯ ಕೆಚ್ಚಿದೆಯ ಅವರ ಲೇಖಣಿಗೆ ಅವರನ್ನು ಪುನಃ ಪುನಃ ಅಭಿನಂದಿಸುವೆವು.

ನವಸಂದೇಶದ ೧೫—೧೨—೫೪ ನೇ ಸಂಚಿಕೆಯಲ್ಲಿ ಅವರು ಹೀಗೆ ಬರೆದಿರುವರು. ಈ ಬಗ್ಗೆ ವಿಜಾಪೂರ ಕಲೆಕ್ಟರರು ಬಸವನ ಬಾಗೇವಾಡಿ ಎಂಬುವ ಹೆಸರನ್ನು ಏಕೆ ಸೂಚಿಸಿದರೋ ಗೊತ್ತಾಗಲಿಲ್ಲ. ಅದನ್ನು ತಿಳಿದು ಕೊಳ್ಳಲು ಅಲ್ಲಿಯ ಎಂ. ಎಲ್. ಎ. ಗಳಿಗೆ ಬಿಟ್ಟು ಕೊಡುತ್ತೇವೆ.

ಆದರೆ ಅಲ್ಲಿಯ ಎಂ. ಎಲ್. ಎ. ಎಂ. ಎಲ್. ಸಿ. ಗಳಿಗೆ ಕಲೇಕ್ವರವರ ಹತ್ತರ ಹೋಗಿ ಈ ವಿಷಯುದ ಬಗ್ಗೆ ಸಮಜಾಯಿಸಿ ಕೇಳುವಷ್ಟು ಎದೆಗಾರಿಕೆ ಇದೆಯೋ ಇಲ್ಲವೋ ಸಂಶಯ. ವಿಜಾಪೂರ ಜಿಲ್ಲೆಯ ಪತ್ರಿಕೆಗಳಾವವು ಈ ವಿಷಯುದ ಬಗೆಗೆ ಇದುವರೆಗೂ ಮೂಕ ಭಾವನೆ ವಹಿಸಿದುದು ಗಮನಾರ್ಹ. ಸ್ವಯಂ ಪ್ರಕಾಶಕ್ಕಾಗಿ ಇತರರ ಬಾಲ ಬಡೆಯುವದರಿಂದ ಯಾವ ಕಾರ್ಯವೂ ಜರಗುವದಿಲ್ಲವೆಂಬುವ ಅಂಶವನ್ನು ಜನತೆಯು ಜ್ಞಾಪ್ತಿಯಲ್ಲಿಟ್ಟುಕೊಳ್ಳಬೇಕು.” ಈ ಪ್ರಕಾರ ಅವರು ಬರೆದುದಕ್ಕೆ ಇವರು ಅವರಿಗೆ ಸಮಾಧಾನವಾಗುವಂತೆ ಏನು ಉತ್ತರ ಕೊಡುವರೋ ನೋಡಬೇಕು. ಪರಜಿಲ್ಹೆಯವರು ಧರ್ಮಾಭಿಮಾನದಿಂದ ದೂರಿದ್ದರೂ ನಮ್ಮ ಜಿಲ್ಹೆಯಲ್ಲಿಯ ಕೆಲಸವನ್ನು ಮಾಡುತ್ತಿರುವ ಕಾಲಕ್ಕೆ ನಮ್ಮವರು ಏನು ಮಾಡುವರು ತಿಳಿಯದಾಗಿದೆ. ಅವರನ್ನು ನೋಡಿ ನಾವು ನಾಚುವಂತೆ ಇದೆ. ಇದಕ್ಕಾಗಿಯೇ ಕರ್ನಾಟಕ ಏಕೀಕರಣವು ಹಿಂದೆಬೀಳಲಿಕ್ಕೆ ಹತ್ತಿದೆ. ಕರ್ನಾಟಕ ಏಕೀಕರಣವಾಗದಿದ್ದರೆ ನಮ್ಮ ಹಿಂದಿನ ಶರಣರೂ ಅವರ ವಚನಗಳೂ ಅವರ ಅನುಕೂಲಗಳೂ ಒಂದುಗೂಡುವ ಶಕ್ಯವಿಲ್ಲ. ಹೀಗಾಗಿ ನಮ್ಮ ಧರ್ಮಕ್ಕೆ ಬಹು ಅಳಿಗಾಲ ಬಂದಿದೆ. ಅಂತು ಕರ್ನಾಟಕ ಏಕೀಕರಣವು ಇಂಥವರಿದ್ದರೆ ಮೃಗಜಲದಂತೆ ಅದು ಮುಂದೆ ಮುಂದೆ ಓಡುವದರಲ್ಲಿ ಸಂದೇಹವಿಲ್ಲ. ಕರ್ನಾಟಕ ಏಕೀಕರಣಕ್ಕೂ ನಮ್ಮ ಧರ್ಮ ಹಾಗು ವಚನವಾಙ್ಮಯಕ್ಕೂ ನಾಡಿನ ಏಳಿಗೆಗೂ ನಿಕಟ ಸಂಬಂಧವಿದೆ ಎಂದು ಬೇರೆ ಹೇಳಬೇಕಾಗಿಲ್ಲ.

---

# ವೀರಶೈವರಲ್ಲಿ ಧಾರ್ಮಿಕ ಮೂಢ ನಂಬಿಗೆ.

## ಲೇಖಾಂಕ ೩.

(ಲೇ:- ಶ್ರೀ ಸ್ವಾಮಿ ಶಿವಾನಂದರು ಗವಿಮಠ, ತೆಗ್ಗಿಹಳ್ಳಿ.)

—)○(—

ಹಿಂದೆ ಎರಡು ಲೇಖಗಳಲ್ಲಿ ಅಯ್ಯಗಳ ಬೇಡಿಕೊಳ್ಳುವ ಸ್ಥಿತಿಗತಿ ರೀತಿಗಳನ್ನು ಬಣ್ಣಿಸಲಾಗಿದೆ. ಈ ಮೂರನೇ ಲೇಖದಲ್ಲಿ ಬೇಡಿಕೊಳ್ಳುವದರಿಂದ ಸೂಕ್ಷ್ಮ ದೋಷವಿದೆ ಎಂದು ವಿವರಿಸುವೆನು.

ಇನ್ನೂ ಈ ಅಯ್ಯಗಳು ಬೇಡಿಕೊಳ್ಳುವ ಪದ್ಧತಿಗಳು ಬಹು ಅಸಹ್ಯವಾಗಿವೆ. ಊರೂರು ತಿರುಗುತ್ತ ಚಹದ ಅಂಗಡಿಗೆ ಹೋಗಿ ಸಿಂಗಲ್ ಚಹಾ ಈ ಜಂಗಮನಿಗೆ ಕೊಡಿಸಿರಿ ನಿಮಗೆ ಕಲ್ಯಾಣವಾಗುವದು. ನಿಮ್ಮ ಅಂಗಡಿಗೆ ಗಿರಾಕಿಗಳು ಹೆಚ್ಚಾಗುವವೆಂದು ಆಶೀರ್ವದಿಸಿ ಬೇಡಿಕೊಳ್ಳುವರು. ಚಹಾದ ಅಂಗಡಿಯವರು ನೂರಾರು ಅಂದು, ಸಿಂಗಲ್ ಕೊಡುವರು. ಕಾಯಿಪಲ್ಲೆಯ ಬಜಾರದಲ್ಲಿ ಹೋಗಿ ಈ ಬಡಜಂಗಮನಿಗೆ ಒಂದು ಬದನೇಕಾಯಿ ಒಂದು ಉಳ್ಳಾಗಡ್ಡಿಯನ್ನು ತಿನ್ನಲಿಕ್ಕೆ ದಾನ ಮಾಡಿರಿ. ನಿಮ್ಮ ತೋಟ ಬೆಳೆಯುವದೆಂದು ಆಶೀರ್ವಾದ ಕೊಟ್ಟು ಬೇಡುವರು. ಅಂಗಡಿಗಳಿಗೆ ಹೋಗಿ ಬೆಲ್ಲ ವಗೈರೆ ಬೇಡುವರು. ಎಲ್ಲ ಜಾತಿಯವರಲ್ಲಿ ಬೇಡುವರು. ಊಟದ ಹೊತ್ತಿಗೆ ರೊಟ್ಟಿಯನ್ನು ಬೇಡಿ ತರುವರು. ಮುಸಲ್ಮಾನರ ಕುತುಬಿ, ರಮಝಾನ ಹಬ್ಬಗಳಲ್ಲಿ ಅವರ ನಮಾಜಗಟ್ಟಿಗೆ ಹೋಗಿ ಕೂತು ಬಿಡುವರು. ಅವರು ಕಾರ್ಯಕ್ರಮಗಳನ್ನೆಲ್ಲ ಮುಗಿಸಿಕೊಂಡ ಬಳಿಕ ಇವರಿಗೆ ದುಡ್ಡು ಆಣೆಗಳನ್ನು ದಾನ ಮಾಡುವರು. ಅವರ ನಮಾಜದಲ್ಲಿ ಭಾಗಿಯಾದಂತೆ ಸಹ ಆಗುವದು. ಈ ಬೇಡಿಕೊಳ್ಳುವ ಜನರಲ್ಲಿ ದೀನತನ ಹೀನತನಗಳು ಬಹಳೇ ಇರುವವು. ದಾನಮಾಡುವವರಿಗೆ ಬಹು ಅಂಜಿ ನಮ್ರದಿಂದ ನಡಕೊಳ್ಳಬೇಕಾಗುವದು. ಸತ್ಯ. ನ್ಯಾಯಪ್ರಿಯರು, ನಿರ್ಭಿಡೆಯಾದ ಇರುವಿಕೆ ಭಿಕ್ಷುಕನಿಗೆ ಏನೂ ಸಾಧಿಸಲಾರದು. ಬೇಡಿಕೊಳ್ಳುವವರು ನೀಡುವವರನ್ನು ವರ್ಣಿಸಬೇಕು. ಅವರ ಹೆಂಡತಿ, ಮಕ್ಕಳು, ಅಂಗಡಿ, ನಾಯಿ. ಅವರ ರೂಪ, ಉಡಿಗೆ ತೊಡಿಗೆ, ವ್ಯಾಪಾರ, ಸಿರಿತನ ಮೊದಲಾದವುಗಳನ್ನು ಬಣ್ಣಿಸಬೇಕು. ಅಂದರೆ ಸ್ವಲ್ಪ ನೀಡುವರು. ಇಂಥ ದೀನತನದಿಂದ ಬಾಳ್ವೆ ಸಾಗಿಸಿಕೊಂಡರೆ ಮಾನವನು ಸ್ವಾಭಿಮಾನ ಶೂನ್ಯ

ನಾಗುತ್ತಾನೆ. ಇವರ ಬೆಲೆಯನ್ನು ಯಾರೂ ಮಾಡರು. ಹೀಗಾಗಿ ಇಂಥ ಅಯ್ಯಗಳನ್ನು ಯಾರೂ ದಾದ ಮಾಡುವದೇ ಇಲ್ಲ. ಇಷ್ಟಾದರೂ ಗುರು ವರ್ಗದವರೆಂದೂ ಬೇಡಿಕೊಳ್ಳುವದೇ ತಮ್ಮ ಧರ್ಮವೆಂದೂ ಜಂಬುಕೊಚ್ಚಿ ಕೊಳ್ಳುವರು. ಇಂಥವರಿಗೆ ಭಕ್ತರು ಗುರುಗಳೆಂದು ಹೇಗೆ ಅನ್ನಬೇಕು? ಅವರಿಗೆ ಸಿಗತಕ್ಕ ಮಾನ ಮನ್ನಣೆಗಳನ್ನು ಹೇಗೆ ಕೊಡಬೇಕು? ಇದನ್ನೆಲ್ಲ ಜಗದಣ್ಣ ಬಸವಣ್ಣನವರು ವಿಚಾರಿಯೇ ಗುರುವಾಗಲಿ, ಜಂಗಮನಾಗಲಿ, ಮಹೇಶನಾಗಲಿ, ಯಾರೇ ಆಗಲಿ ಬೇಡಿಕೊಳ್ಳಬಾರದೆಂದು ವಿಧಿಸಿದ್ದಾನೆ. ಅಲ್ಲದೆ ಎಲ್ಲರೂ ಸರಿಯಾದ ಕಾಯಕ ಮಾಡಿಯೇ ಹೊಟ್ಟೆತುಂಬಿಕೊಳ್ಳ ಬೇಕೆಂದು ವಿಧಿಸಿದ್ದು ಬಹು ವಿಹಿತವಾಗಿದೆ. ಇನ್ನೂ ಬೇಡಿಕೊಳ್ಳುವ ಸ್ಥಿತಿ ರೀತಿಗಳನ್ನು ವಾಚಕರೇ ಊಹಿಸಿರಿ. ಸತ್ತಲ್ಲಿ ಮುದ್ದಾಂ ಅರಿವೆ, ಸೀರೆ, ಕುಪ್ಪಸ, ರೊಕ್ಕ, ಸತ್ತವನ ಗಾದಿ, ಹಾಸಿಗೆ, ಹೊದಿಕೆ, ಬಿಂಡಿಗೆ, ಲಿಂಗದಕಾಯಿ ಮೊದಲಾದವುಗಳು ಸಿಗುವವೆಂದು ಎಲ್ಲಿದ್ದರೂ ಈ ಸುದ್ದಿ ಕೇಳಿ ಹೋಗಿ ನಿಲ್ಲುವರು. ಅಲ್ಲಿ ಹೋಗಿ ನನಗೆ ನಿನಗೆ ಅದು ಬೇಕು, ಇದು ಬೇಕು, ಇಷ್ಟು ಬೇಕು, ಅಷ್ಟು ಬೇಕು, ನಾನು ಗುರು, ತಲೆಯ ಮೇಲೆ ಪಾದ ಇಡುವವನು, ಹೆಣದ ಮುಂದೆ ಗಂಟೆ ಬಾರಿಸುವವನು, ನನಗೆ ಇಷ್ಟೇ ಆದರೆ ಹೆಣಕ್ಕೆ ಹರಿಸುವದಿಲ್ಲ. ಅದನ್ನು ಕೊಡು, ಆಕಳ ಕೊಡು ಎಂದು ಹಟಮಾಡಿ ಜಗಳ ತೆಗೆದು ಬೇಡಿಕೊಳ್ಳುವರು. ರೊಕ್ಕ ಸಿಗುತ್ತದೆಂದು ಬೇಕಾದವರ ಮನೆಗೆ ಹೋಗುತ್ತಾರೆ ಬೇಕಾದಲ್ಲಿ ಹೋಗು ತ್ತಾರೆ. ಕೀಳ ಜಾತಿಯವರ ಮನೆಗೆ ಅಯ್ಯಗಳು ಹೋದರೆ ಅವರು ಹೆಚ್ಚು ಮನ್ನಿಸುವರೆಂದು ತಿಳಿದು ಅವರ ಮನೆಗೂ ಸಹ ನಾಚದೆ ಹೋಗಿ ಬೇಡಿ ಕೊಳ್ಳುವರು. ಇದನ್ನೆಲ್ಲ ಬಣ್ಣಿಸಲಾರೆ. ಈ ಪ್ರಕಾರ ಬೇಡಿಕೊಳ್ಳುವದು ಎಂದೂ ಭೂಷಣವಲ್ಲ. ಬೇಡಿಕೊಳ್ಳಬಾರದೆಂಬುವದಕ್ಕೆ ಸೂಕ್ಷ್ಮ ಕಾರಣ ಗಳೂ ಹಲವು ಇರುವವು. ಇದನ್ನು ತಿಳಿದೇ ನಮ್ಮ ಶರಣರು ಬೇಡಿ ಕೊಳ್ಳಬಾರದೆಂದು ಎಲ್ಲ ವೀರಶೈವರಿಗೆ ವಿಧಿಸಿದ್ದಾರೆ.

ತುಡುಗು ಮಾಡುವವನ ಮನೆಯಿಂದ ನಾವು ಬೇಡಿಕೊಂಡು ತಂದು ತಿಂದರೆ ನಾವೂ ತುಡುಗುಮಾಡುವೆವು. ತುಡುಗುಮಾಡಿ ಹೊಟ್ಟೆತುಂಬಿ ಕೊಳ್ಳುವವನು ಆ ಪದಾರ್ಥಗಳಲ್ಲಿಯೂ ಕೂಡ ತುಡುಗಿನ ಭಾವನೆಯನ್ನೇ ತುಂಬುವನು. ಅದನ್ನು ಬೇಡಿಕೊಂಡು ತಿಂದ ಐಯ್ಯನೂ ಕೂಡ ತುಡುಗ ಮಾಡಿಯೇ ಬಿಡುವನು. ಕಾಯುಕ ಮನುಷ್ಯನು ಗಳಿಸಿದ ಒಡವೆಗಳೆಲ್ಲ

ಕಾಮವಾಸನೆಯಿಂದ ತುಂಬಿಕೊಳ್ಳುವವು. ಅವನು ನೀಡಿದ ಆಹಾರಧಾನ್ಯ ಅರಿವೆ ರೊಕ್ಕ ಮೊದಲಾದವುಗಳೆಲ್ಲ ಕಾಮವಾಸನೆಯವೇ ಆಗಿರುವವು. ಅವುಗಳನ್ನು ತಿಂದ ಅಯ್ಯಗಳು ಕಾಮುಕರೇ ಆಗುವವರು. ಅದರಂತೆ ಕ್ರೋಧಿಯು ನೀಡಿದ ಆಹಾರದಿಂದ ಲೋಭ, ಅಹಂಕಾರ, ಮಮಕಾರದ ವರು ನೀಡಿದ ಆಹಾರದಿಂದ ಲೋಭಿ, ಅಹಂಕಾರಿ, ಮಮಕಾರಿಗಳೇ ಆಗು ವರು. ಚಾಡ, ಚುಗುಲಿ, ನಿಂದೆ ಮಾಡುವವರು ನೀಡಿದ ಆಹಾರದಿಂದ ಚಾಡಿ ಚುಗಲ ನಿಂದೆಗಳು ಅದನ್ನು ತಿಂದವರಲ್ಲಿ ಬಂದು ಸೇರುವವು. ಈ ಪ್ರಕಾರ ವೇದಾಂತದಲ್ಲಿ ವಿಚಾರಗಳಿರುವವು ಕೊಲೆಗಡಕರ ಕಡೆಯಿಂದ ತಕ್ಕೊಂಡು ತಿಂದ ಆಹಾರದಿಂದ ಕೊಲೆಗಡಕರೂ ಆಗುವರು. ಸದ್ಭಕ್ತರೂ ಒಳ್ಳೇ ಜ್ಞಾನಿಗಳೂ ನೀಡಿದ ಆಹಾರದಿಂದ ಮಾನವನು ಒಳ್ಳೇ ಭಕ್ತನೂ, ಜ್ಞಾನಿಯೂ ಆಗುವನು. ಮಹಾತ್ಮರ ಪ್ರಸಾದವನ್ನು ಸೇವಿಸಬೇಕೆಂದು ಯಾಕೆ ಹೇಳುವರು ವಿಚಾರಿಸಿರಿ. ಒಳ್ಳೇಯವರ ಕಡೆಯಿಂದ ಸೇವಿಸಿದ ಆಹಾರದಿಂದ ಒಳ್ಳೇ ಗುಣಗಳೂ, ಕೆಟ್ಟವರ ದುರ್ಗುಣಿಗಳ ಕಡೆಯಿಂದ ತಕ್ಕೊಂಡು ಸೇವಿಸಿದ ಆಹಾರದಿಂದ ದುರ್ಗುಣಿಗಳೂ ಕೆಟ್ಟವರೂ ಆಗುವ ದರಲ್ಲಿ ಸಂದೇಹವಿಲ್ಲ. ರೊಕ್ಕ ಕೊಟ್ಟು ಕೊಂಡುಕೊಂಡು ತಿಂದರೂ ಕೂಡ ಅವರಲ್ಲಿಯ ಗುಣಗಳು ಸಹ ಬರುವವು. ಇನ್ನು ಹಾಗೇ ಪುಕ್ಕಟೆ ಬೇಡಿ ಕೊಂಡು ತಿಂದರೆ ಇವರ ಗತಿ ಏನಾಗುವದೆಂದು ವಿಚಾರಿಸಿರಿ.

ಕೈಕೂಲಿಯನ್ನಾದರೂ ಒಳ್ಳೇಯವರ, ಸಂಭಾವಿತರ, ಸದ್ಭಕ್ತರ, ಜ್ಞಾನಿಗಳ ಮಹಾತ್ಮರ ಮನೆ ಮಠಗಳಲ್ಲಿ ಮಾಡಬೇಕೆಂದು ಶರಣರು ಹೇಳಿದ್ದಾರೆ. "ಹೊಲೆಯ ಹೊಲಬಿಗನಾದಡೆ ಅವನ ಹೊರೆಯಲ್ಲಿಪ್ಪುದು ಲೇಸು ಕಂಡಯ್ಯ" "ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರ ಲೇಸಯ್ಯ" "ಅರೆಭಕ್ತರಾದವರ ನೆರೆ ಬೇಡ ಹೊರೆ ಬೇಡ , ದಾರಿಸಂಗಡ ಬೇಡ ದೂರ ನುಡಿಯಲು ಬೇಡ, ಕೂಡಲ ಸಂಗನ ಶರಣರಲ್ಲಿ ಅಚ್ಚ ಲಿಂಗೈಕ್ಯಂಗೆ ತೊತ್ತಾಗಿಪ್ಪುದು ಕರ ಲೇಸಯ್ಯ" "ಆವನಾದೊಡೇನು ? ಶ್ರೀ ಮಹಾದೇವನ ನೆನೆವವನ ಬಾಯ ತಂಬುಲವ ಮೆಲುವೆ, ಬೀಳುಡಿಗೆಯ ಹೊದೆವೆ ಪಾದರಕ್ಷೆಯ ಕಾಯ್ದು ಬದುಕುವೆ, ಕೂಡಲಸಂಗಮದೇವರ ಮಾಣದೆ ನೆನೆವವನ." "ಲಿಂಗ ಜಂಗಮಕ್ಕೆ ಮಾಡಿ ನೀಡುವ ಅಚ್ಚ ಶರಣರ ಮನೆಯಲು ಭೃತ್ಯನಾಗಿಪ್ಪೆನಯ್ಯ" "ಬ್ರಹ್ಮಪದವಿ

ಯನೊಲ್ಲೆ, ವಿಷ್ಣು ಪದವಿಯನೊಲ್ಲೆ, ರುದ್ರ ಪದವಿಯನೊಲ್ಲೆ ನಾನು ಮತ್ತಾವ ಪದವಿಯನೊಲ್ಲೆನಯ್ಯ ಕೂಡಲಸಂಗಮದೇವಾ. ನಿಮ್ಮ ಸದ್ಭಕ್ತರ ಪಾದವ ನರಿದಿಪ್ಪ ಮಹಾ ಪದವಿಯ ಕರುಣಿಸಯ್ಯ." "ಸದ್ಭಕ್ತರ ಸಂಗದಕ್ಕರದವರ ತೋರಿದಿರಯ್ಯ ಕೂಡಲಸಂಗವ ದೇವಾ ನಿಂಗೊಡ್ಡಿ ಬೇಡುವೆನು" ಅಂಗ ವಿಲ್ಲದ ಸಂಗವು ಅೞಲಿಲ್ಲದ ಹುಯ್ಯಲಂತೆ. ಇದಕಾರಣ ಕೂಡಲಸಂಗಮ ದೇವಾ, ನಿಮ್ಮ ಶರಣರಿಗಲ್ಲದೆ ಬಾಯ್ದೆರೆಯೆನು. ಶರಣ ಸಂಬಂಧವರಿತು ಬಳಿಕ ಭವಿಯ ಬೆರಸಲಾಗದು. ಬ್ರಹ್ಮಹತ್ಯ, ಭ್ರೂಣಹತ್ಯ, ವೈತರಣಿ, ದುರ್ಗತಿ, ಪಂಚ ಮಹಾ ಪಾತಕದಿಂದಧಿಕ ನೋಡಾ. ಅಳುಪಿ ಭವಿಯೊಡ ನುಂಡರೆ ಭಕ್ತನಲ್ಲ ಕೂಡಲಸಂಗಮದೇವ" "ಶರಣರ ಸಂಗವಿಲ್ಲದವರ ಕಂಡರೆ ನಾಚುವೆ. ಅವರ ನುಡಿಯನಗೆ ಸಮನಿಸದಯ್ಯ ಕೂಡಲಸಂಗವ ದೇವ. ನೀನು ಇಲ್ಲಿ ಇಲ್ಲದ ಕಾರಣ." "ಅಂತರಂಗ ಶುದ್ಧವಿಲ್ಲದವರ ಸಂಗ ಸಿಂಗಿ ಕಾಳಕೂಟದ ವಿಷವು ಕೂಡಲಸಂಗಮದೇವಾ" ಒಂದು ನಿಮಿಷವಾ ದರೂ ನಿಮ್ಮ ಶರಣರ ಸಂಗದಕ್ಕರಿಸಯ್ಯ. ಬೇರೆ ಮತ್ತೆ ಅನ್ಯವ ತೋರದಿ ರಯ್ಯ ಲಿಂಗಸಂಗಿಗಳನಗಲಿ ಆನೆಂತು ಬದುಕುವೆನು ಕೂಡಲಸಂಗಮ ದೇವಾ?" "ತನು ಮನ ಧನವನೊಪ್ಪಿಸಿ ಜಂಗಮವೆನ್ನವರೆನ್ನವರೆಂಬವರ ಕೆರಹ ಹೊತ್ತಿರಿಸೆನ್ನ ಕೂಡಲಸಂಗಮದೇವಾ. ಕೂಡಲಸಂಗಮದೇವ ನಿಮ್ಮ ಶರಣರ ಮನೆಯ ತೊತ್ತಿನ ಮರಿದೊತ್ತಿನ ಮಗ ನಾನಯ್ಯ. ದೂಷಕ ನೊಂದು ದೇಶವ ಕೊಟ್ಟರೆ ಅವನ ಹೊರೆಯಲ್ಲಿಪ್ಪ ಲೇಸಲ್ಲ ಕಂಡ್ಯಾ.

ಮೇಲಿನ ಈ ವಚನಗಳನ್ನೆಲ್ಲ ಒಳ್ಳೇ ಸೂಕ್ಷ್ಮವಾಗಿ ವಿಚಾರಿಸಿದರೆ ಮೇಲೆ ವಿವರಿಸಿದ ತತ್ವವೇ ಹೊಳೆಯುವದು. ಸದಾಚಾರ ಸಂಪನ್ನನಾದ ಹೊಲೆಯರ ಮನೆಯಲ್ಲಿ ಆಳಾಗುವದು ಒಳಿತು. ದುರಾತ್ಮನು ದೇಶವನ್ನು ಕೊಟ್ಟರೂ ಅವನ ಸೇವೆ ಮಾಡಬೇಡವೆಂದು ಹೇಳಿದ್ದಾರೆ. ಅರಸರ ಮನೆ ಯಲ್ಲಿ ರಾಣಿಯಾಗಿರುವದಕ್ಕಿಂತ ಭಕ್ತರ ಮನೆಯಲ್ಲಿ ತೊತ್ತಾಗಿರುವದು ಹೆಚ್ಚಿನದೆಂದಮೇಲೆ ಇದನ್ನು ವಿಚಾರಿಸಿರಿ. ಎಲ್ಲ ಪದವಿ ಕಿತಾಬುಗಳಿಗಿಂತ ಸದ್ಭಕ್ತರ ಮನೆಯಲ್ಲಿ ಅವರ ಪಾದರಕ್ಷೆಗಳನ್ನು ಕಾಯ್ದುಕೊಂಡಿರುವಂತೆ ಮಾಡೆಂದು ಬೇಡಿದ್ದಾರೆ. ಸತ್ಯಶರಣರ ಹೊರತು ಅನ್ಯರಿಗೆ ಬಾಯಿದೆರೆದು ಬೇಡಬಾರದೆಂದು ಹೇಳಿದ್ದಾರೆ. ಪಂಚ ಮಹಾಪಾತಕರಿಗಿಂತ ದುರುಳರ ಸಂಗಸೇವೆ ನೆರೆ ಮಾತುಕಥೆ ಎಲ್ಲವೂ ಬಹು ಹೀನವಾದವುಗಳೆಂದು ಸ್ಪಷ್ಟ

ಅಭಿಪ್ರಾಯ. ದುರ್ಜನರ ಸಹವಾಸ ಕಾಳಕೂಟ ವಿಷಕ್ಕಿಂತ ಬಹು ಕೆಡಕ ವಾದದ್ದೆಂದು ಧಾರಾಳವಾಗಿ ಹೇಳಿದ್ದಾರೆ. ಒಂದು ನಿಮಿಷವಾದರೂ ಒಳ್ಳೇ ಭಕ್ತರ ಶರಣ ಸಜ್ಜನರ ಮಹಾತ್ಮರ ಸಂಗವು ಸೇವೆಯು ಹೆಚ್ಚಿನದೆಂದು ಅನ್ನುವ ಮಾತಿನಲ್ಲಿ ಬಹು ಮಹತ್ವವಿದೆ. ಅವರ ಕೆರವನ್ನು ಹೊತ್ತುಕೊಂಡು ನಿಲ್ಲುವದು ಬಹು ಒಳ್ಳೆಯದೆಂದು ಹೇಳಿದ್ದಾರೆ.

ಇದರ ಮೇಲಿಂದ ನೋಡಲಾಗಿ ದುರುಳರಲ್ಲಿ ಬೇಡಿಕೊಂಡು ತಿನ ಬಾರದು ದುರುಳರಲ್ಲಿ ಕೂಲಿಕುಂಬಳಿಸಹ ಮಾಡಬಾರದು ಸಾಮಾನು ಸಡಿಗಳನ್ನು ಕೊಳ್ಳಬಾರದು. ಅವರದು ಏನನ್ನೂ ಉಪಯೋಗಿಸಬಾರದೆಂದೇ ಶರಣರ ಅಭಿಪ್ರಾಯ. ಯಾಕಂದರೆ ಅವರಲ್ಲಿಯ ದುರ್ಗುಣಗಳೇ ಬಂದು ಸೇರುವವು. ದುರುಳರು ಸೇವಿಸಿದ ಹವೆಯನ್ನು ಸೇವಿಸಿದವರೂ ದುರುಳ ರಾಗುವದರಲ್ಲಿ ಸಂದೇಹವಿಲ್ಲ. ರೋಗಿಗಳು ಉಸುರಾಡಿಸಿದ ಹವೆಯನ್ನು ನಿರೋಗಿಗಳು ಉಸುರಾಡಿಸಿದರೆ ರೋಗವು ಬರುವಂತೆ ರೋಗಿಗಳ ಬಾಂಡೆ ಕೊಂಡೆ, ಅರಿವೆಅಂಚಡಿ, ವಸ್ತುವಡವೆ, ಆಹಾರ ನೀರುಗಳನ್ನು ಉಪಯೋ ಗಿಸಿದ ನಿರೋಗಿಗಳೂ ಅದೇ ರೋಗಬರುವದಿಲ್ಲವೆ? ಅದರಂತೆ ಕಳ್ಳ ಸುಳ್ಳ ಕೊಲೆ ಹಾದರ ಫಟಿಂಗ ಕಾಮುಕ ಮೊದಲಾದ ಗುಣವುಳ್ಳವರ ಸಹ ವಾಸ ಮಾಡಿದರೆ ಅವರ ವಸ್ತ್ರ ವಡವೆ ಧನಸಧಾನ್ಯ, ಅರವಿಅಂಚಡಿ, ಧನಕನಕ ಮೊದಲಾದವುಗಳನ್ನು ಬೇಡಿತಿಂದವರಿಗೂ ಕೂಡ ಅವರ ಗುಣ ಗಳೇ ಬರುವವು ರೊಕ್ಕಕೊಟ್ಟು ಅಥವಾ ದುಡಿದು ತಿಂದರೆ ಅವುಗಳ ಸೊಂಕವು ಕಡಿಮೆಯಾಗುವದು. ಆದರೆ ಸಜ್ಜನ ಸತ್ಪುರುಷ ಭಕ್ತರ ಮನೆ ಯಲ್ಲಿ ದುಡಿದು ಕೂಲಿಮಾಡಿ ತಕ್ಕೊಳ್ಳುವದು ಎಲ್ಲಕ್ಕೂ ಮೇಲು.

ಹೀಗಿದ್ದ ಬಳಿಕ ನಮ್ಮ ಬಂಧುಗಳಾದ ಐಯ್ಯಗಳು ಸದ ಎಲ್ಲರ ಮನೆಯಲ್ಲಿ ಎಲ್ಲ ಜಾತಿಯವರಲ್ಲಿ ಎಲ್ಲ ಚಟದವರಲ್ಲಿ ಎಲ್ಲತರದ ಗುಣ ದವರಲ್ಲಿ ಎಲ್ಲರೀತಿಯಿಂದ ಬೇಡಿಕೊಂಡು ತಿನ್ನುತ್ತಿರುವರು. ಇದರಿಂದ ಅವರ ಗುಣಗಳು ಹೇಗೆ ಆಗುತ್ತಿರುವವು ಆಗಿವೆ ಎಂಬುದನ್ನು ವಿಚಾರಿ ಸಿರಿ ಊರಲ್ಲಿ ಖಟ್ಲೆ ಖೋಕಲೆಗಳಿಗೆ ಮೂಲ ಕಾರಣರು. ನಮ್ಮ ಬೇಡಿಕೊ ಳ್ಳುವ ಐಯ್ಯಗಳೇ ಕಾರಣರೆಂದು ಬಹು ಜನರು ಹೇಳುವದು ಸರಿ ಎನಿ ಸುವದಲ್ಲವೆ ಇವರಲ್ಲಿ ಎಲ್ಲ ದುಶ್ಚಟಗಳಿರುವದುಂಟು. ಎಲ್ಲ ದುರ್ಗುಣ ಗಳು ಬರುವದು ಸ್ವಾಭಾವಿಕವಿದೆ. ಇದಕ್ಕೆಲ್ಲ ಅವರ ತಪ್ಪಲ್ಲ. ತತ್ವ ತಿಳ

ಯಲಾರದಕ್ಕಾಗಿ ಹೊಟ್ಟೆ ತುಂಬಿಕೊಳ್ಳುವ ಆಶೆಯಿಂದ ಗೊತ್ತಾಗಲಾರದೆ ಅನ್ಯರಲ್ಲಿಯ ದುರ್ಗುಣ ದುಶ್ಚಟಗಳನ್ನು ತಕ್ಕೊಂಡು ಬಹು ಗೋಳಾ ಡುತ್ತಿರುವರು. ನೀವು ವಿಚಾರಮಾಡಿ ಬೇಡಿಕೊಳ್ಳುವದನ್ನು ಬಿಟ್ಟು ಪುಕ್ಕಟೆ ಪರರ ಕೂಳನ್ನು ತಿನ್ನುವದನ್ನು ಬಿಟ್ಟು, ಸರಿಯಾಗಿ ಶಿಕ್ಷಣ ಪಡೆದು ಸರಿಯಾಗಿ ಉದ್ಯೋಗ ದಂಧೆಮಾಡಿ ದುಡಿದು ಕೈಕೂಲಿ ಮಾಡಿ ಹೊಟ್ಟೆ ತುಂಬಿಕೊಂಡರೆ ಇವರಲ್ಲಿಯ ಚಟಗಳು ದುರ್ಗುಣಗಳು ತಾವಾಗಿಯೇ ಕಡಿಮೆಯಾಗುತ್ತ ಹೋಗುವದರಲ್ಲಿ ಸಂದೇಹವಿಲ್ಲ ಈ ಸೂಕ್ಷ್ಮ ತತ್ವವನ್ನು ಅವಲೋಕಿಸಿ ಯಾರಾದರೂ ಬೇಡಿಕೊಳ್ಳುವದನ್ನು ಬಿಡುವದು ಒಳ್ಳೇವಿಹಿತ. ನೀವೇಕುಳಿತು ನಿಮ್ಮನ್ನು ನಿಮ್ಮ ಮನೆಯನ್ನು ಹಾಳು ಮಾಡಿಕೊಂಡಂತೆ ಆಗುವದಲ್ಲವೆ ಅವರ ಕಡೆಯಿಂದ ಅನ್ನ ವಸ್ತ್ರ ರೊಕ್ಕಮೊದಲಾದವುಗಳನ್ನು ಬೇಡಿಕೊಳ್ಳುವದರ ಜೊತೆಗೆ ಅವರಲ್ಲಿಯ ಪಾಪಗಳನ್ನೂ ಚಟಗಳನ್ನೂ ದುರ್ಗುಣಗಳನ್ನೂ ಬೇಡಿಕೊಂಡು ನಿಮ್ಮಲ್ಲಿ ಸಂಗ್ರಹಿಸಿಕೊಂಡು ಬಿಡುವ ದರಿಂದ ನೀವೂ ದುರಾತ್ಮರಾಗುವದರಲ್ಲಿ ಸಂದೇಹವಿಲ್ಲ. ಯಾವ ದೃಷ್ಟಿ ಯಿಂದ ವಿಚಾರಿಸಿದರೂ ಬೇಡಿಕೊಳ್ಳಬಾರದೆಂದೇ ಹೊಳೆಯುವದು

ಆರ್ಥಿಕ ದೃಷ್ಟಿಯಿಂದ ಬೇಡಿಕೊಳ್ಳಬಾರದು. ಇದರಿಂದ ಬಡತನ ಬರುವದು. ದೇಶದಲ್ಲಿ ನಿರುದ್ಯೋಗಿತನ ಹೆಚ್ಚಾಗುವದು. ಒಬ್ಬನು ದುಡಿಯು ವವನು ನಾಲ್ಕುಜನ ಕುಳಿತು ಊಟಮಾಡುವರು ಆಗವರು ದುಡಿಯು ಲಾರದವರಂಗೆ ಅನೇಕ ದುಶ್ಚಟ ದುರ್ಗುಣಗಳು ಸ್ವಾಭಾವಿಕವಾಗಿ ಬಂದು ಸೇರುವವು. Idle mind is devils work shop. ಎಂಬ ಗಾದೆ ಯಂತೆ ನಿರುದ್ಯೋಗಿಗಳ ಮನಸ್ಸು ಭೂತಗಳ ಕಾರಖಾನೆಯಾಗಿ ಪರಿಣ ಮಿಸುವದು ಇದರಿಂದ ದೇಶಕ್ಕೂ ಸಮಾಜಕ್ಕೂ ಬಹುಹಾನಿ ಕೆಡಕುಗಳು ಸಂಭವಿಸುವವು. ಹೀಗಾಗಿ ದೇಶದಲ್ಲಿ ಬಡತನ ಬೆಳೆಯುವದರಲ್ಲಿ ಸಂದೇ ಹವಿಲ್ಲ. ಇದಕ್ಕಾಗಿಯೇ ನಮ್ಮ ದೇಶದ ಸರಾಸರಿ ಉತ್ಪನ್ನ ಆರುಬಿಲ್ಲಿ ಯಷ್ಟು ಇರುವದು. ನಮ್ಮ ದೇಶವು ಬರೇ ಒಕ್ಕಲಿಗರ ನಾಡು. ವೀರಶೈವ ರಲ್ಲಿ ಹೆಚ್ಚಾಗಿ ಒಕ್ಕಲಿಗರೇ ಇರುವರು ಇದರಿಂದ ದೇಶಕ್ಕೆ ಒಕ್ಕಲಿಗರಿಗೆ ವೀರಶೈವರಿಗೆ ಬಡತನ. ಬಡವನಾದರೆ ಹರಳು ಇಲ್ಲದ ಗೆಜ್ಜೆಯಂತೆ ನಿರುಪ ಯೋಗಿಯಾಗಿ ಬಿಡುವರು. ಉಳಿದವರು ನಮ್ಮನ್ನು ಯಾರೂ ಕೇಳುವದಿಲ್ಲ ಮಾತ್ರ ಹೊಟ್ಟೆಬಟ್ಟೆಯ ಚಿಂತೆ ಇರದಿದ್ದರೆ ದೇವರು ಧರ್ಮ ತತ್ವ ಮೊದ

ಲಾದ ಪಾರಮಾರ್ಥದ ಕಡೆಗೆ ಮನವು ಸಹಜ ಒಲಿಯುವದು. ಇದರಿಂದ ಸದ್ಭಕ್ತರು ಹೆಚ್ಚಾಗಿ ದೇಶವು ಸುಖದಲ್ಲಿ ಇರುವದು. ಮೊದಲು ನಮ್ಮ ಸದಾಚಿ ಸದ್ಭಕ್ತರು ಹೆಚ್ಚಾಗಿ ಇರಲಿಕ್ಕೆ ಇದೇ ಕಾರಣ ಹೊರತು ಬೇರೆ ಇಲ್ಲ. ದರಿದ್ರತನ ಬಂದಂದಿನದಿಂದ ನಮ್ಮಲ್ಲಿ ಸದ್ಭಕ್ತರು ಇಲ್ಲವಾಗುತ್ತ ನಡೆದಿದ್ದಾರೆ. ಹೊಟ್ಟೆಯಪಾಡಿಗಾಗಿ ಸಿಕ್ಕದ್ದನ್ನು ಮಾಡಬೇಕಾಗುವದು. ಇದರಲ್ಲಿ ದೇವರ ನೆನೆಪುಕೂಡ ಆಗುವದಿಲ್ಲ. "ಪಹಿಲೆ ಪೋಟೊಬಾನಂತರ ವಿಠೋಬಾ" ಎಂದು ಮರಾಠಿಯಲ್ಲಿ ಗಾದೆ ಇರುವದು. ಇದು ನಿಜವೆನಿಸುವದು.

ಧಾರ್ಮಿಕ ದೃಷ್ಟಿಯಿಂದ ಬೇಡಿಕೊಳ್ಳುವದು ಮಹಾಪಾಪ, ಅಪರಾಧ ಅನ್ಯರಲ್ಲಿಯು ದುರ್ಗುಣ ದುರ್ನಡತೆ ದುರ್ಚಟಿಗಳು ಬೇಡಿಕೊಂಡು ತಿನ್ನುವವರಲ್ಲಿ ಸೇರುವದರಿಂದ ದುರ್ಜನರೇ ಹೆಚ್ಚಾಗುವರು ಇದರಿಂದ ಧರ್ಮಕ್ಕೆ ಬಹು ಹಾನಿ ಸಂಬಂಧಿಸುವದರಲ್ಲಿ ಸಂದೇಹವಿಲ್ಲ. ಧರ್ಮಕೆಟ್ಟಬಳಿಕ ಇಲ್ಲಿ ಅಸ್ತಿತ್ವವೇ ಇಲ್ಲ. ಧರ್ಮರಕ್ಷಣೆಗೆ ಐಯ್ಯಗಳು ಬೇಡಿಕೊಳ್ಳಬಾರದು.

ನೈತಿಕ ದೃಷ್ಟಿಯಿಂದ ಮಾನವನು ಬೇಡಿಕೊಳ್ಳುವದರಿಂದ ತನ್ನ ಮಾನವತ್ವನ್ನೇ ಕಳೆದು ಕೊಳ್ಳುವನು. ನೀತಿ ಬಾಹಿರನಾಗುವನು ಸ್ವಾಭಿಮಾನ ಶೂನ್ಯನಾಗುವನು. ದೀನ ಹೀನವಿಾಗುವನು ಅನ್ಯರ ಭಟ್ಟಂಗಿಯಾಗಬೇಕಾಗುವದು. ಎಲ್ಲ ರೀತಿಯಿಂದ ಮಾನವನು ಬಹು ಅಯೋಗ್ಯ ಅಥವು ಪುಟ್ಟಕ್ಕೆ ಇಳಿಯುವದರಲ್ಲಿ ಸಂದೇಹವಿಲ್ಲ ಆದ್ಯರ ಶರಣರ ವಚನದಂತೆ ಯಾರೂ ಯಾವತರದಿಂದಲೂ ಪರರಮೇಲೆ ಭಾರಹಾಕಬಾರದು ಪರಾವಲಂಬಿ ಯಾಗಬಾರದು. ಇದರಿಂದ ಮಾನವ ವಿನಾಶವಾಗುವದರಲ್ಲಿ ಸಂಶಯವಿಲ್ಲ.

ಸಮಾಜದ ದೃಷ್ಟಿಯಿಂದ ವಿಚಾರಿಸಿದರೆ ಬೇಡಿಕೊಳ್ಳುವವನು ಎಂಥ ಉಚ್ಚ ಜಾತಿಯವನಿದ್ದರೂ ಕೀಳನೆಂದೆನಿಸುತ್ತಾನೆ. ಅವನಿಗೆ ಮಹತ್ವವನ್ನು ಸಮಾಜವು ಕೊಡುವದಿಲ್ಲ. ಸ್ವಾರ್ಥಕ್ಕಾಗಿ ಎಂದೂ ಬೇಡಲೇಬಾರದು ಪರಹಿತಕ್ಕಾಗಿ ಪರರ ಸೇವೆಗಾಗಿ ಪರರ ಕಲ್ಯಾಣಕ್ಕಾಗಿ ಬೇಡಿಕೊಳ್ಳಬಹುದು. ನಮ್ಮ ಐಯ್ಯಗಳ ನೀತಿ, ಮನಸ್ಸು, ಬುದ್ಧಿ, ಶರೀರ ಮನೆ ಹೊಲ ಉತ್ಪನ್ನ ಎಲ್ಲ ಸುಧಾರಿಸಲಿಕ್ಕೆ ; ಬೇಡಿಕೊಳ್ಳುವದನ್ನು ಬಿಟ್ಟು ಚನ್ನಾಗಿ

ಶಿಕ್ಷಣವನ್ನು ಪಡೆದು ಒಳ್ಳೇತರದ ಕಾಯಕಗಳನ್ನು ಮಾಡಿ ಒಳ್ಳೇ ಭಕ್ತರಾಗಿ ಒಳ್ಳೇಮಹೇಶರಾಗಿ ಒಳ್ಳೇ ಶರಣರಾಗಿ ಒಳ್ಳೇ ಜಂಗಮರಾಗಿ ಒಳ್ಳೇ ಗುರುಗಳಾದರೆ ಮಾತ್ರ ಗುರುತ್ವ ಇಲ್ಲವಾದರೆ ಬೇಡಿಕೊಂಡು ಐಯ್ಯೋ ಎಂದು ಗೋಳಾಡುವ ಐಯ್ಯಗೋಳು ಎಂದು ಕೆಟ್ಟ ಹೆಸರು ನಿಮಗೆ ನಿರಂತರ ಉಳಿಯುವದರಲ್ಲಿ ಸಂದೇಹವಿಲ್ಲ.

---

# ಆತ್ಮ ನಿವೇದನೆ

(ಸಂಪಾದಕ)

ಶಿವಾನುಭವ ಪತ್ರಿಕೆಯ ಈಗಿನ ಸಂಚಿಕೆಗೆ ೨೪ ವರ್ಷಗಳು ಮುಗಿದು ಅದಕ್ಕೆ ೨೫ನೇ ವರ್ಷವು ಪ್ರಾರಂಭವಾಗುತ್ತದೆ. ಇಷ್ಟು ವರ್ಷಗಳ ವರೆಗೆ ಅದು ಅವ್ಯಾಹತವಾಗಿ ಕಾರ್ಯ ಮಾಡುತ್ತ ಬಂದಿರುವದು ನಮ್ಮ ವಾಚಕರಿಗೆ ಗೊತ್ತೇ ಇದೆ. ಅದಕ್ಕೆ ೨೫ ವರ್ಷಗಳು ತುಂಬಿದ ಕೂಡಲೆ ಅದು ಆ ವರೆಗೆ ಮಾಡುತ್ತ ಬಂದ ವಾಙ್ಮಯ ಸಂಶೋಧನೆ, ಗ್ರಂಥ ಪ್ರಕಟನೆ ಇವುಗಳನ್ನು ನಾವು ಪುಸ್ತಕ ರೂಪದಲ್ಲಿ ಸವಿಸ್ತಾರವಾಗಿ ನಿರೂಪಿಸಿದ್ದೇವೆ. ಅದನ್ನು ನಮ್ಮ ವಾಚಕರು ಅವಶ್ಯವಾಗಿ ಅವಲೋಕಿಸಬೇಕು. ಅದರ ಪ್ರತಿಗಳು ಉಪಲಬ್ಧವಿರುತ್ತವೆ. ನಾವು ಪ್ರಕಟಿಸಿರುವ ಗ್ರಂಥಗಳಿಂದ ಕೇವಲ ಧಾರ್ಮಿಕವಷ್ಟೇ ಅಲ್ಲ, ವೀರಶೈವರ ರಾಜಕೀಯ ಮತ್ತು ಸಾಮಾಜಿಕ ಇತಿಹಾಸದ ಮೇಲೆ ಪ್ರಕಾಶವು ಬೀಳದೆ ಇರದು. ಈ ಬಗೆಯ ಕಾರ್ಯಗಳನ್ನು ನಾವು ೨೫ ವರ್ಷಗಳ ತರುವಾಯ ಸಹ ಮಾಡುತ್ತ ಬಂದಿದ್ದೇವೆ. ಈ ಅವಧಿಯಲ್ಲಿ ಸಕಲಾಗಮ ಶಿಖಾಮಣಿ ಎಂಬ ಹೊಸ ಗ್ರಂಥವನ್ನು ಪ್ರಾರಂಭಿಸಿದ್ದೇವೆ. ಇದಲ್ಲದೆ ವಚನಶಾಸ್ತ್ರದಲ್ಲಿ ಉದ್ಗ್ರಂಥವಾಗಿರುವ ಶೂನ್ಯ ಸಂಪಾದನೆಯ ರಹಸ್ಯಗಳನ್ನು ವಿವರಿಸಲು ಪ್ರಾರಂಭಿಸಿದ್ದೇವೆ. ಈಗ ನಾವು ಇದರ ಮೂರು ಸಂಪಾದನೆಗಳನ್ನು ಮುಗಿಸಿರುತ್ತೇವೆ. ಅವುಗಳಿಗೆ ಸುಲಭ ಭಾಷೆಯಲ್ಲಿ ಭಾವಾರ್ಥವನ್ನು ಬರೆದಿದ್ದೇವೆ. ಆದರೆ ಈ ಅವಧಿಯಲ್ಲಿ ಕೆಲವು ಗ್ರಂಥಗಳು ಪೂರ್ಣವಾಗಿ ಮುಗಿಯದೆ ಹಾಗೇ ಉಳಿದಿರುತ್ತವೆ. ಅವು ಸಟೀಕ ಬಸವೇಶ್ವರ

ವಚನಗಳು, ಅಂಬಿಗರ ಚೌಡಯ್ಯನ ವಚನಗಳು, ವೀರಶೈವ ರಾಜಕೀಯ ಪುನಶ್ಚೇತನಗಳು, ಶಿವಶರಣರ ಚರಿತ್ರೆಗಳು ನಾಲ್ಕನೇ ಭಾಗ ಇವು ಇರುತ್ತವೆ. ಇನ್ನು ಮುಂದೆ ನಾವು ಅವುಗಳನ್ನು ಪೂರ್ಣ ಮಾಡುತ್ತೇವೆ.

ಈ ಕಾಲಕ್ಕೆ ಜನರಲ್ಲಿ ವೀರಶೈವ ಮತತತ್ವಗಳನ್ನು ನಿರೂಪಿಸುವ ಚಿಕ್ಕ ಗ್ರಂಥಗಳನ್ನು ಓದುವ ಅಭಿಲಾಷೆಯು ಹೆಚ್ಚುತ್ತದೆ. ಇದು ಸುಚಿಹ್ನವು. ಈ ವರೆಗೆ ನಾವು ಶಿವಶರಣರ ಮೂಲ ಗ್ರಂಥಗಳನ್ನು ಪ್ರಕಟಿಸಿದೆವು. ಅವುಗಳನ್ನು ನಾವು ಆಧಾರವಾಗಿಟ್ಟುಕೊಂಡು ಚಿಕ್ಕ ಚಿಕ್ಕ ಗ್ರಂಥಗಳನ್ನು ಇನ್ನುಮೇಲೆ ಪ್ರಕಟಿಸುತ್ತ ಹೋಗುವೆವು. ಈಗ ಇಂಥ ಗ್ರಂಥಗಳ ಮೂಲ ಪ್ರತಿಗಳು ನಮ್ಮಲ್ಲಿ ಸಿದ್ಧವಾಗಿರುತ್ತವೆ. ಅವುಗಳನ್ನು ನಾವು ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸಲು ಪ್ರಾರಂಭಿಸುವೆವು. ಇದು ಹೊಸ ಉಪಕ್ರಮವಾಗಿರುತ್ತದೆ. ಹಿಂದಿನ ಕಾಲದಲ್ಲಿ ವೀರಶೈವ ಗ್ರಂಥಕಾರರು ಷಟ್‌ಸ್ಥಲ ತತ್ವಗಳ ಬಗ್ಗೆ ಚಿಕ್ಕ ಚಿಕ್ಕ ಪದ್ಯಗಳನ್ನು ರಚಿಸಿದ್ದಾರೆ. ಇವು ಸಹ ಒಂದು ಹೊಸತರದ ವಾಙ್ಮಯವಾಗಿವೆ. ಅವುಗಳನ್ನು ನಾವು ಪತ್ರಿಕೆಯಲ್ಲಿ ಪ್ರಕಟಮಾಡುತ್ತ ಹೋಗುವೆವು. ಈ ವಾಙ್ಮಯವಾದರೂ ಉಚ್ಚ ತರದ್ದಿರುತ್ತದೆ. ಇದರ ಪರಿಚಯವು ನಮ್ಮ ಸಮಾಜದಲ್ಲಿ ಏನೂ ಇರುವದಿಲ್ಲ. ಇವಲ್ಲದೆ ವೀರಶೈವರಲ್ಲಿ ರಗಳೆಗಳೂ, ತ್ರಿಪದಿಗಳೂ, ಸಾಂಗತ್ಯಗಳೂ, ಅಸಂಖ್ಯಾತವಾಗಿರುತ್ತವೆ. ಅವುಗಳ ಪ್ರಕಟನೆಯ ಕಾರ್ಯವನ್ನು ನಾವು ಇನ್ನು ಮುಂದೆ ಕೈಕೊಳ್ಳುವೆವು.

ನಾವು ಈ ಪ್ರಕಾರ ೨೯ ವರ್ಷಗಳ ವರೆಗೆ ಎಡಬಿಡದೆ ಪ್ರಯತ್ನ ಮಾಡಿದ್ದರ ಪರಿಣಾಮವು ಈಚೆಗೆ ದೃಗ್ಗೋಚರವಾಗಹತ್ತಿದೆ. ಈ ವರೆಗೆ ನಮ್ಮ ಸಮಾಜದಲ್ಲಿರುವ ವಿದ್ಯಾವಂತರೂ ಸ್ವಾಮಿಗಳೂ ವ್ಯಾಪಾರಸ್ಥರೂ ಕೆಲವು ಅಪವಾದಗಳನ್ನು ಬಿಟ್ಟು ನಮಗೆ ಎಷ್ಟು ಮಾತ್ರವೂ ಸಹಾನುಭೂತಿಯನ್ನು ತೋರಿಸಿರುವದಿಲ್ಲ. ಆದರೂ ನಮ್ಮ ನಾಡಿನಲ್ಲಿ ಅನೇಕ ವಾಙ್ಮಯ ಪ್ರೇಮಿಗಳು ಇದ್ದುದು ಕಂಡು ಬರುತ್ತದೆ. ಅವರು ಮಾತ್ರ ನಮಗೆ ಸಹಾನುಭೂತಿಯುಳ್ಳವರಾಗಿ ನಮ್ಮ ಪತ್ರಿಕೆಯ ಚಂದಾದಾರರಾಗಿ ಸಹಾಯ ಮಾಡುತ್ತ ಬಂದಿದ್ದಾರೆ. ಅವರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ. ಸೊಲ್ಲಾಪೂರ, ಕಲಬುರ್ಗಿ, ವಿಜಾಪೂರ, ದಾವಣಗೇರಿ, ಬಳ್ಳಾರಿ ಹೊಸಪೇಟೆ, ಮೈಸೂರು ಧಾರವಾಡ ಮೊದಲಾದ ಪಟ್ಟಣಗಳ

ಲ್ಲಿಯವರು ನಮಗೆ ಎಷ್ಟುಮಾತ್ರವೂ ಸಹಾಯ ಮಾಡಿರುವದಿಲ್ಲ. ಆದರೆ ಬೆಳಗಾವ, ಬೈಲಹೊಂಗಲ, ಬಾಗಲಕೋಟೆ, ಹುನಗುಂದ, ಬಕವಿ. ಬನಹಟ್ಟಿ ಈ ಭಾಗದವರು ಮಾತ್ರ ನಮಗೆ ಸಹಾಯ ಮಾಡುತ್ತ ಬಂದಿದ್ದಾರೆ. ಅವರಿಗೆ ನಾವು ಬಹಳ ಋಣಿಯಾಗಿದ್ದೇವೆ.

ಇನ್ನು ಮುಂದೆ ಶಿವಾನುಭವ ಪತ್ರಿಕೆಯ ಪುರಸ್ಕರ್ತರು ತಮ್ಮ ತಮ್ಮ ಗ್ರಾಮಗಳಲ್ಲಿ ಸಂಘಟನೆಯನ್ನು ಮಾಡುವ ಕಾರ್ಯವನ್ನು ಕೈಕೊಳ್ಳಬೇಕಾಗುತ್ತದೆ. ಈ ವಿಷಯವಾಗಿಯೂ ನಾವು ಕಾಲಕಾಲಕ್ಕೆ ನಮ್ಮ ಸೂಚನೆಗಳನ್ನು ಕೊಡುತ್ತ ಹೋಗುವೆವು. ಅವುಗಳಿಗೋಸ್ಕರ ನಮ್ಮ ವಾಚಕರು ನಮಗೆ ಸಹಾಯಮಾಡುತ್ತ ಹೋಗಬೇಕೆಂದು ನಮ್ಮ ವಿನಂತಿ ಇದೆ.

# ಶಿವಶರಣರ ಚರಿತ್ರೆಗಳು.

(ಲೇಖಕರು:— ರಾ. ಬ. ಫ. ಗು. ಹಳಕಟ್ಟಿ, ವಿಜಾಪುರ.)

**ಗೋರಕ್ಷ:—** ಗೋರಕ್ಷನು ಬದಾಮಿಹತ್ತರಿರುವ ಪಟ್ಟಿದಕಲ್ಲಿನವನು. ಅವನು ಪಟ್ಟಿದಕಲ್ಲಿನ ರಾಜನ ಗೋವುಗಳನ್ನು ಕಾಯುತ್ತ ಇದ್ದನು. ಅವನು ಮುಂದೆ ಸಿದ್ಧಿಗಳನ್ನು ಸಂಪಾದಿಸಬೇಕೆಂದು ಕೊಲ್ಹಾಪುರಕ್ಕೆ ಬಂದನು. ಅವನು ಅಲ್ಲಿಗೆ ಬಂದಾಗ ರೇವಣಸಿದ್ಧನು ಸಹ ಅಗ್ಗೆಯೇ ಬಂದು ಅವನನ್ನು ಕಂಡನು. ಗೋರಕ್ಷನು ಅವನಿಗೆ ಉಕ್ಕಿನ ಕಠಾರಿಯನ್ನು ಜೋಳಿಗೆಯಲ್ಲಿ ನೀಡಿಸಿದನು. ರೇವಣಸಿದ್ಧೇಶ್ವರನು ತನ್ನ ನೊಸಲಗಣ್ಣನ್ನು ತೆರೆಯಲು ಆ ಕಠಾರಿಯು ಕರಗಿ ನೀರಾಯಿತು. ಆಗ ಆ ಕಠಾರಿಯು ಗೋರಕ್ಷನ ಎದೆಯಲ್ಲಿ ಮೂಡಿ ಅವನಿಗೆ ಅತ್ಯಂತ ವೇದನೆಯನ್ನು ಮಾಡಹತ್ತಿತು. ಆಗ ಮಹಾ ಲಕ್ಷ್ಮಿಗೆ ಗೋರಕ್ಷನು ಮೊರೆಹೊಗಲು ಅವಳು ರೇವಣಸಿದ್ಧನಿದ್ದಲ್ಲಿಗೆ ಬಂದು ಗೋರಕ್ಷನನ್ನು ಕ್ಷಮಿಸೆಂದು ಬೇಡಿಕೊಂಡಳು. ಆಗ ಅವನು ಅವಳನ್ನು ಮನ್ನಿಸಿ ಗೋರಕ್ಷನು ಕಠಾರಿಯನ್ನು ಉಗುಳುವಂತೆ ಮಾಡಿದನು. ಹೀಗೆ ಗೋರಕ್ಷನು ರೇವಣಸಿದ್ಧೇಶ್ವರನಿಂದ ಗರ್ವಭಂಗಿತನಾಗಲು ಇವನು ತಾನು ವಜ್ರಕಾಯನಾಗಬೇಕೆಂದು ಬಯಸಿ ಶ್ರೀಶೈಲ ಪರ್ವತಕ್ಕೆ ಬಂದನು. ಅಲ್ಲಿ ತಪಸ್ಸನ್ನು ಆಚರಿಸಿ ವಜ್ರಕಾಯವನ್ನು ಪಡೆದನು. ಮುಂದೆ ಅಲ್ಲಮಪ್ರಭುವು ಶ್ರೀಶೈಲಕ್ಕೆ ಬಂದಾಗ ಅವನು ಗೋರಕ್ಷನನ್ನು ಕುರಿತು— ನೀನು ಮಾಡುವ ಇಂಥ ಸಿದ್ಧಿಗಳು ನಿಷ್ಫಲವಾದವುಗಳು. ಷಟ್‌ಸ್ಥಲಾಚರಣೆಯಂತೆ ನೀನು ಆಚರಿಸುತ್ತ ತ್ರಿಲಿಂಗಗಳ ರೀತಿಯನ್ನು ತಿಳಿದುಕೊ, ನೀನು ಲಿಂಗಧಾರಣವನ್ನು ಹೊಂದು, ಎಂದು ಹೇಳಿದನು. ಗೋರಕ್ಷನು ಇದಕ್ಕೆ ಒಪ್ಪಿ ಅಲ್ಲಮಪ್ರಭುವಿನಿಂದ ವೀರಶೈವ ದೀಕ್ಷೆಯನ್ನು ಪಡೆದನು. ಮುಂದೆ ಅವನು ವಚನಕಾರನೂ ಆದನು. ಅವನು ತನ್ನ ವಚನಗಳಲ್ಲಿ ವೀರಶೈವ ಮತವನ್ನು ಚನ್ನಾಗಿ ಬೋಧಿಸಿದ್ದಾನೆ. ಅವನ ಮುದ್ರಿಕೆಯು 'ಗೋರಕ್ಷಪಾಲಕಸಿದ್ಧಸೋಮನಾಥ' ಎಂದಿದೆ. ಗೋರಕ್ಷನು ಶ್ರೀಶೈಲದಲ್ಲಿಯೇ ಸಮಾಧಿಸ್ಥನಾದನು.

**ಚಂದಿಮರಸು:—** ಚಂದಿಮರಸನು ವೀರಶೈವಾಚಾರವುಳ್ಳವನಾಗಿ ಕೃಷ್ಣಾನದಿಯ ತೀರದಲ್ಲಿರುವ ಚಿಮ್ಮಲಿಗಿ ಎಂಬ ಗ್ರಾಮದಲ್ಲಿ ವಾಸ

ಮಾಡುತ್ತಿದ್ದನು. ಈ ಗ್ರಾಮವು ಬಾಗೇವಾಡಿ ತಾಲೂಕಿನಲ್ಲಿದೆ. ಚಂದಿಮ ರಸನು ನಿಜಗುಣನೆಂಬ ಶಿವಶರಣನಿಂದ ವೀರಶೈವ ದೀಕ್ಷೆಯನ್ನು ಹೊಂದಿದನು. ಚಂದಿಮರಸನು ಮಹಾತ್ಮಿಕನೆಂದು ಅವನನ್ನು ಘನಲಿಂಗನು ತನ್ನ ವಚನಗಳಲ್ಲಿ ಬಹಳ ಹೊಗಳಿದ್ದಾನೆ. ಚಂದಿಮರಸನ ಸಮಾಧಿಯು ಚಿಮ್ಮಲಗಿ ಹತ್ತಿರ ಕೃಷ್ಣಾನದೀ ತೀರದಲ್ಲಿ ಇರುತ್ತದೆ.

**ಢಕ್ಕೆಯ ಮಾರಯ್ಯ:**— ಢಕ್ಕೆಯ ಮಾರಯ್ಯನು ಡೊಳ್ಳು ಬಾರಿಸುವವನಾಗಿ ಮಾರಿಯ ಮೂರ್ತಿಯೊಂದನ್ನು ಮುಡಿದಿಟ್ಟುಕೊಂಡು ಅದನ್ನು ಕುಣಿಸುತ್ತ ತಿರುಗುವನು. ಒಂದು ದಿವಸ ಮಾರಯ್ಯನು ತನ್ನ ಢಕ್ಕೆಯನ್ನು ಬಾರಿಸುತ್ತ ಶಂಕರದಾಸಿಮಯ್ಯನ ಮನೆಗೆ ಹೋಗಿ ಮಾರಿಯನ್ನು ಪ್ರದರ್ಶಿಸುತ್ತ ನಿಂತನು. ಶಂಕರದಾಸಿಮಯ್ಯನು ತನ್ನ ನೊಸಲುಗಣ್ಣನ್ನು ತೆರೆದು ಕ್ಷುದ್ರದೇವರೆಂದು ಅವನು ತಿಳಿದಿದ್ದ ಆ ಮಾರಿಯ ಮೇಲೆ ಬಿಟ್ಟನು. ಆದರೆ ಆ ಮಾರಿಯು ಸುಟ್ಟುಹೋಗಲಿಲ್ಲ. ಇದಕ್ಕೆ ಶಂಕರದಾಸಿಮಯ್ಯನು ಆಶ್ಚರ್ಯಚಕಿತರಾಗಿ ಹೀಗೇಕಾಯಿತೆಂದು ಆಶ್ಚರ್ಯಯುತನಾಗಿ ಹೀಗೇಕಾಯಿತೆಂದು ಢಕ್ಕಯ್ಯನನ್ನು ಕೇಳಲು—ನನ್ನ ಮಾರಿಕವ್ವೆ ಹೊಟ್ಟೆ ಹೊರೆದುಕೊಳ್ಳುವ ದೇವತೆಯಲ್ಲ. ಇದು ನನ್ನ ಜ್ಞಾನಶಕ್ತಿಯು. ಅದು ನನ್ನ ಇಷ್ಟಲಿಂಗವು ಎಂದು ಹೇಳಿ ಆ ಮಾರಿಯನ್ನು ತನ್ನ ಇಷ್ಟಲಿಂಗದಲ್ಲಿ ಅಡಗಿಸಿಬಿಟ್ಟನು. ಆಗ ಆ ಇಷ್ಟಲಿಂಗವು ಕುಣಿಯ ಹತ್ತಿತು! ಆಗ ಶಂಕರದಾಸಿಮಯ್ಯನು ಪರದೈವತವೆಂಬುದು ಈಗ ನನಗೆ ಚನ್ನಾಗಿ ತಿಳಿಯಿತು. ಇಷ್ಟಲಿಂಗದ ಅರಿವು ನನಗುಂಟಾಯಿತು ಎಂದು ಹೇಳಿದನು. ಢಕ್ಕೆಯ ಮಾರಯ್ಯನು ವಚನಕಾರನಿದ್ದಾನೆ. ಕಾಲಾಂತಕ ಭೀಮೇಶ್ವರಲಿಂಗವೆಂಬುದು ಅವನ ಮುದ್ರಿಕೆಯು.

**ಕಾಳವ್ವೆ:**— ಕಾಳವ್ವೆಯು ಉರಿಲಿಂಗಪೆದ್ದಿಯ ಹೆಂಡತಿಯು. ಅವಳು ವಚನಕಾರಳಾಗಿದ್ದಾಳೆ. ಆಕೆಯ ಮುದ್ರಿಕೆಯು 'ಉರಿಲಿಂಗಪೆದ್ದಿಗಳರಸ' ಎಂದಿದೆ. ಅವಳು ತನ್ನ ಗಂಡನಂತೆ ಸಂಸ್ಕೃತವನ್ನು ಚನ್ನಾಗಿ ಬಲ್ಲವಳಾಗಿದ್ದಳು.

**ಕೊಟ್ಟಣದ ಸೋಮವ್ವೆ:**— ಕೊಟ್ಟಣದ ಸೋಮವ್ವೆಯು ಬತ್ತವನ್ನು ಕುಟ್ಟಿ ಅಕ್ಕಿ ಮಾಡುವ ಕಾಯಕ ಮಾಡುತ್ತಿದ್ದಳು. ಅವಳು

ವಚನಕಾರಳಿದ್ದಾಳೆ. ನಿರ್ಲಜ್ಜಶಾಂತಯ್ಯನ ಭಕ್ತಳಾಗಿ 'ನಿರ್ಲಜ್ಜೇಶ್ವರಾ' ಎಂಬುದನ್ನು ತನ್ನ ಮುದ್ರಿಕೆಯನ್ನಾಗಿ ಇಟ್ಟುಕೊಂಡಿದ್ದಾಳೆ.

**ಕದಿರೆ ರೆಮ್ಮವ್ವೆ:**—ಇವಳು ಕಲ್ಯಾಣಪಟ್ಟಣದಲ್ಲಿದ್ದು ರಾಟೆಯಿಂದ ನೂಲನ್ನು ತೆಗೆಯುವ ಕಾಯಕವನ್ನು ಮಾಡಿಕೊಂಡಿದ್ದಳು. ಅವಳು ವಚನಕಾರಳಿದ್ದಾಳೆ. ಆಕೆಯ ಮುದ್ರಿಕೆಯು 'ಕದಿರರೆಮ್ಮಿಯೊಡೆಯ ಗುಮ್ಮೇಶ್ವರಾ' ಎಂದಿರುತ್ತದೆ.

**ಚಾಂಗುಬಲ್ಲಯ್ಯ:**— ಅವನು ಬಸವೇಶ್ವರನ ಕಾಲದಲ್ಲಿ ಇದ್ದನು. ಅವನು ದಿನಾಲು ಮುಂಜಾವಿನಲ್ಲಿ ಭಕ್ತರ ಮನೆಗೆ ಹೋಗಿ ಅವರನ್ನು ಎಬ್ಬಿಸುವ ಕಾರ್ಯ ಮಾಡುವನು. ಎಬ್ಬಿಸುವಾಗ 'ಚಾಂಗುಭಲಾ' ಎಂಬ ಧ್ವನಿಯನ್ನು ಮಾಡುವನು. ಈ ಶಬ್ದ ಕೇಳಿದಕೂಡಲೇ ಭಕ್ತರು ಎಚ್ಚರಾಗಿ ತಮ್ಮ ಬೆಳಗಿನ ಲಿಂಗಾರ್ಚನಾದಿ ಕಾರ್ಯಗಳಲ್ಲಿ ತೊಡಗುವರು.

**ಶಿವಭಕ್ತ ಮಲ್ಲಯ್ಯ:**— ಅವನು ದಿನಾಲು ಶಿವಭಕ್ತರ ಗೃಹಗಳಿಗೆ ಹೋಗಿ 'ಶಿವಶರಣು' ಎಂದು ಧ್ವನಿ ಮಾಡುವನು. ಆಗ ಅವರು ಮುಂಜಾವಿನಲ್ಲಿ ಎದ್ದು ಅವನ ಈ ಸೇವೆಗೋಸ್ಕರ ಕಾಯಕ ಕೊಡುವರು. ಒಂದು ದಿನ ಅವನಿಗೆ ಭಕ್ತರ ಗೃಹವು ಎಲ್ಲಿಯೂ ದೊರೆಯಲಿಲ್ಲ. ಆಮೇಲೆ ಅವನು ಬೇರೊಂದೂರಿಗೆ ಹೋದನು. ಅಲ್ಲಿಯೂ ಅವನಿಗೆ ಭಕ್ತರು ಕಾಣಲಿಲ್ಲ. ಹೀಗೆ ಅವನು ಕಷ್ಟಪಡುತ್ತಿರುವದನ್ನು ನೋಡಿ ಶಿವನು ಮೆಚ್ಚಿ ಅವನನ್ನು ಕೈಲಾಸಕ್ಕೊಯ್ದನು.

**ಲೆಂಕಬೊಮ್ಮಯ್ಯ:**— ಭಕ್ತರ ಸೇವೆ ಮಾಡುವದೇ ಅವನ ಕಾಯಕವಾಗಿತ್ತು. ಭಕ್ತರು ಹೇಳಿದ ಕಾರ್ಯಗಳನ್ನು ಮಾಡಿ ಅವರು ಕೊಟ್ಟದ್ದನ್ನು ಸ್ವೀಕರಿಸಿ ಅದರಲ್ಲಿಯೇ ತೃಪ್ತನಾಗುತ್ತಿದ್ದನು. ಒಂದು ದಿನ ಅವನಿಗೆ ಒಬ್ಬ ಭಕ್ತನು ನಿನಗೆ ಸಂಬಳಕೊಡುತ್ತೇನೆ, ನನ್ನಲ್ಲಿರು, ಎಂದು ನುಡಿಯಲು ಅದಕ್ಕೆ ಬೊಮ್ಮಯ್ಯನು 'ಶಿವಶಿವಾ' ನನಗೆ ಸಂಬಳವೆಂಬುದುಂಟೇ ? ಇದನ್ನು ಕೇಳಬಾರದು ಎಂದೆನ್ನುತ್ತಿರಲು ಈ ಶಬ್ದಗಳು ಅವನಿಗೆ ಮಸೆದ ಆಯುಧದಂತೆ ತಾಗಿ ಅವನು ಮರಣೋನ್ಮುಖನಾಗಲು ಶಿವನು ಅದಕ್ಕೆ ಮೆಚ್ಚಿ ಅವನಿಗೆ ಸಾಮರಸ್ಯ ಪದವನ್ನು ಕೊಟ್ಟನು.

**ಶಿವಕಿಂಕರಯ್ಯ:**— ಇವನು ಅತ್ಯಂತ ಬಡವನು.! ಆದ್ದರಿಂದ ಅವನು ಭಕ್ತರ ಮನೆಗಳಿಗೆ ಹೋಗಿ ಮನೆಗುಡಿಸುವ ಕಾಯಕವನ್ನು ಕೈಕೊಂಡನು. ಭಕ್ತರು ಕೊಟ್ಟದ್ದರಲ್ಲಿ ತಾನು ಜೀವಿಸುತ್ತ ಉಳಿದರೆ ಶಿವಶರಣರಿಗೆ ಕೊಟ್ಟುಬಿಡುವನು. ಮುಂದೆ ಜನರು— ನಮ್ಮಲ್ಲಿ ಹೀಗೆ ಕಸಗೂಡಿಸಬೇಡ. ಹಾಗೆಯೇ ನಾವು ನಿನಗೆ ದಾನ ಕೊಡುತ್ತೇವೆ. ಅದನ್ನು ನೀನು ತೆಗೆದುಕೊಂಡು ಉಪಜೀವಿಸು ಎಂದು ಹೇಳಹತ್ತಿದರು. ಅದಕ್ಕೆ ಅವನು— ನಾನು ಕಸಗೂಡಿಸದಲ್ಲದೆ ನೀವು ಕೊಟ್ಟದ್ದನ್ನು ನಾನು ತೆಗೆದುಕೊಳ್ಳುವದಿಲ್ಲ, ಎಂದೆನ್ನಲು ಅವರು ಇದರಿಂದ ನಮಗೆ ಪಾಪ ಬಂದೀತು. ನಮ್ಮಲ್ಲಿ ಗುಡಿಸಬೇಡ ಎಂದು ಹೇಳಹತ್ತಿದರು. ಇದರಿಂದ ಅವನಿಗೆ ಏನೂ ಹಣ ದೊರೆಯದೆ ಹೋಯಿತು. ಉಪವಾಸವಿರಹತ್ತಿದನು. ಇದರಿಂದ ತನ್ನ ದೇಹವನ್ನು ಅಳಿಯುವ ಪ್ರಸಂಗವು ಉಂಟಾಯಿತು. ಆಗ ಶಿವನು ಅವನಿಗೆ ಮೆಚ್ಚಿ ಸಾಮರಸ್ಯಪದವನ್ನು ಕೊಟ್ಟನು. ಸೇವಾಬುದ್ಧಿಯಿಂದ ಕಾರ್ಯ ಮಾಡುವದೇ ಶಿವಶರಣರ ಮಾರ್ಗವಾಗಿದೆ.

**ಸಪ್ಪೆಯಲ್ಲಮದೇವ:**— ಸಿದ್ಧನಕೆರೆ ಎಂಬ ಗ್ರಾಮದಲ್ಲಿ ಅಲ್ಲಮದೇವನೆಂಬೊಬ್ಬ ಶಿವಶರಣನು ವಾಸ ಮಾಡಿದ್ದನು. ಅವನು ಬಸವಾದಿ ಪ್ರಮಥರ ಖ್ಯಾತಿಯನ್ನು ಕೇಳಿ ಅವರ ಸನ್ನಿಧಿಯಲ್ಲಿ ಇರಬೇಕೆಂದು ಬಯಸಿ ಕಲ್ಯಾಣಪಟ್ಟಣದಲ್ಲಿ ಬಂದಿರಲಿಕ್ಕೆಹತ್ತಿದನು. ಆದರೆ ಅವನು ಬೇರೆ ಭಕ್ತರಂತೆ ಭಿಕ್ಷಾರ್ಥಿಯಾಗಿರಲಿಲ್ಲ. ಬಿರಣೆಯನ್ನು ಮಾರಿ ಹಣ ತಂದು ತನ್ನ ನಿರ್ವಾಹ ಸಾಗಿಸುವನು. ಮುಂದೆ ಅವನು ಲಿಂಗಜಂಗಮಕ್ಕೆ ವೀಳ್ಯವನ್ನು ನೀಡಬೇಕೆಂಬ ಬೇರೊಂದು ನಿಯಮವನ್ನು ಮಾಡಿಕೊಂಡು ಅದನ್ನು ನಡಿಸುವವನಾದನು. ಪರಮಾತ್ಮನು ಅವನನ್ನು ಪರಿಕ್ಷಿಸಿ ನೋಡಬೇಕೆಂದು ವೀಳ್ಯವು ಎಲ್ಲಿಯೂ ಸಿಗದಂತೆ ಮಾಡಿದನು. ಆಗ ಅವನು ಬಹಳ ಕಷ್ಟಪಡಹತ್ತಿದನು. ಬಸವೇಶ್ವರನು ತನ್ನ ಲಿಂಗದಲ್ಲಿ ಇದನ್ನು ತಿಳಿದವನಾಗಿ ಅವನನ್ನು ತನ್ನಲ್ಲಿಗೆ ಬರಮಾಡಿಕೊಂಡು ತನ್ನ ದನಕರುಗಳನ್ನು ತರುವ ಮಂದಿರವನ್ನು ಅವನಿಗೆ ತೋರಿಸಿ ಇನ್ನುಮೇಲೆ ನೀನು ಇಲ್ಲಿ ದೊರೆಯುವ ಸಗಣಿಯಿಂದ ಕುರುಳಗಳನ್ನು ಮಾಡುತ್ತ ನಿನ್ನ ಕಾಯಕವನ್ನು ನಡಿಸು ಎಂದು ಹೇಳಿದನು. ಅಲ್ಲಮನು ಹಾಗೆಯೇ ತನ್ನ ಕಾಯಕವನ್ನು ನಡಿಸುತ್ತ ಬಂದನು.

**ಅಲ್ಲಯ್ಯ:—** ಇವನು ಸಂಗೀತವನ್ನು ಬಲ್ಲವನಾಗಿ ಲಿಂಗಕ್ಕೆ ಗಾನವನ್ನು ಕೇಳಿಸುವ ಕಾಯಕವನ್ನು ಕೈಕೊಂಡಿದ್ದನು. ಅವನು ಯಾವಾಗಲೂ ಭಕ್ತಿಭಾವ ಪೂರಿತವಾದ ಹಾಡುಗಳನ್ನೇ ಹಾಡುವನು. ಈ ಪ್ರಕಾರ ಅಲ್ಲಯ್ಯನು ಬಹುಕಾಲ ಆಚರಿಸುತ್ತ ಬರಲಾಗಿ ಪರಮಾತ್ಮನು ಅವನಿಗೆ ಪ್ರೀತನಾಗಿ ಸಾಮರಸ್ಯ ಪದವನ್ನು ಕೊಟ್ಟನು.

**ಭದ್ರಯ್ಯ:—** ಶೈವರು ವರ್ಷದಲ್ಲಿ ಶಿವರಾತ್ರಿಯ ಒಂದು ದಿನ ಮಾತ್ರ ವಿಶೇಷವಾಗಿ ಭಜಿಸುತ್ತಾರೆ. ಈರೀತಿಯು ಸಲ್ಲದ್ದು. ಭಕ್ತರು ನಿಚ್ಚ ಶಿವರಾತ್ರಿಮಾಡಬೇಕು. ಹೀಗೆ ಮಾಡುವದೇ ಶಿವಾನುಭವದ ನಡೆಯು, ಎಂದು ತಿಳಿದು ಅದರಂತೆ ಆಚರಿಸುವವನಾದನು. ಪರಮಾತ್ಮನು ಈ ನಡೆಯನ್ನು ನೋಡಿ ಪ್ರೀತಿಸುವವನಾಗಿ ಅಂತ್ಯದಲ್ಲಿ ಅವನು ಲಿಂಗದಲ್ಲಿಯೇ ಬಯಲಾಗುವಂತೆ ಕರುಣಿಸಿದನು.

**ಚಿಕ್ಕ ಮಾದಣ್ಣ, ಮಹಾದೇವಿ, ಬಾಲ ಲಿಂಗಣ್ಣ:—** ಕಲ್ಯಾಣ ಪಟ್ಟಣದಲ್ಲಿ ಚಿಕ್ಕ ಮಾದಣ್ಣನೆಂಬ ಶಿವಶರಣನು ತನ್ನ ಹೆಂಡತಿ ಮಹಾದೇವಿ ಮತ್ತು ಒಂದು ಚಿಕ್ಕ ಮಗು ಬಾಲ ಲಿಂಗಣ್ಣ ಇವರೊಡನೆ ವಾಸ ಮಾಡುತ್ತಿದ್ದನು. ಚಿಕ್ಕ ಮಾದಣ್ಣನು ಭಕ್ತರಿಗೆ ಹೂವು ಪತ್ರಿ ತಂದುಕೊಡುವ ಕಾಯಕ ಮಾಡುತ್ತಿದ್ದನು. ಅವನು ತನ್ನ ಕ್ರಿಯೆಗಳನ್ನು ಶಿವಾರ್ಪಣ ಬುದ್ಧಿಯಿಂದ ನಡಿಸುತ್ತಾ ಇದ್ದನು. ಹೀಗಿರಲು ಅವನಿಗೆ ಅವಸಾನ ಕಾಲವು ಪ್ರಾಪ್ತವಾಯಿತು. ಆಗ ರಾತ್ರಿಯಾಗಿತ್ತು. ಸಾಧ್ವಿಯಾದ ಅವನ ಹೆಂಡತಿ ಮಹಾದೇವಿಯು ಶರಣರ ಆಚರಣೆಯಂತೆ ಅವನ ದೇಹವನ್ನು ತೊಳೆದು ಅವನ ಸಮಾಧಿ ಮಾಡಬೇಕೆಂದು ನೆಲವನ್ನು ಅಗಿಯಹತ್ತಿದಳು. ಆಕೆಯು ಕಣ್ಣಿನಿಂದ ಏನೂ ನೀರು ಬೀಳಗೊಡಿಸಲಿಲ್ಲ. ಆಗ ಗುದ್ದಲಿಯ ಸಪ್ಪಳ ಕೇಳಿ ಆಕೆಯ ಚಿಕ್ಕ ಮಗುವು ನೀನು ಏನು ಮಾಡುತ್ತೀ ಎಂದು ಕೇಳಲಾಗಿ ಅವನ ತಾಯಿಯು ಅವನಿಗೆ ಏನೂ ಹೇಳದೆ ಸಮಾಧಿಯನ್ನು ಅಗಿಯುವದರಲ್ಲಿ ತೊಡಗಿದಳು. ಬಾಲಕನು ಕಂಭಕ್ಕೆ ಒರಗಿ ಕುಳ್ಳಿರಿಸಿದ್ದ ತನ್ನ ತಂದೆಯನ್ನು ಮಾತಾಡಿಸಿದರೂ ಅವನು ಮಾತಾಡಲಿಲ್ಲ. ಆಗ ಬಾಲಕನಿಗೆ ಸಮಾಧಾನವಾಗದೆ ತನ್ನ ಗುರುವಾದ ಸಕಲೇಶ ಮಾದರಸನ ಮಠಕ್ಕೆ ಹೋಗಿ ಅವನನ್ನು ಕರೆದುಕೊಂಡು ಬಂದನು. ಅವನು ಮನೆಗೆ ಬರಲು ನಿಜಸ್ಥಿತಿಯನ್ನು ತಿಳಿದವನಾದನು.

ಸಕಲೇಶ ಮಾದರಸನು ಶಿವಶರಣರಲ್ಲಿ ಉಚ್ಚ ಸ್ಥಿತಿಗೆ ಹೋದವನು. ಅವನು ತನ್ನ ಎದಿರಿಗೆ ನಿಂತ ಮಹಾದೇವಿ, ಬಾಲಲಿಂಗಣ್ಣ, ಚಿಕ್ಕ ಮಾದಣ್ಣ ಇವರು ತಮ್ಮ ಕ್ರಿಯೆಗಳನ್ನು ಶಿವಾರ್ಪಣ ಬುದ್ಧಿಯಿಂದ ಮಾಡುವವರು. ಮಾದರಸನು ಈ ಕಾಲದಲ್ಲಿ ಮಗುವಿನ ಪಿತೃ ಭಕ್ತಿ, ಮಹಾದೇವಿಯ ಶಿವಾನುಭವದ ನಡೆ ಚಿಕ್ಕಮಾದಣ್ಣನ ಶರಣರಿಗೆ ಒಪ್ಪುವ ಕಾಯಕ ಇವುಗಳ ಪರಿಣಾಮವಾಗಿ ಒಂದು ಅದ್ಭುತವು ಉಂಟಾಯಿತು. ಸಕಲೇಶ ಮಾದರಸನು ಮೃತದೇಹಕ್ಕೆ-ನಿನ್ನ ಬಾಲಕನು ನನ್ನನ್ನು ಕರೆದು ಕೊಂಡು ಇಲ್ಲಿಗೆ ಬಂದಿದ್ದಾನೆ. ಇವನನ್ನು ಸಮಾಧಾನಗೊಳಿಸು, ಎಂದು ನುಡಿಯಲು ಚಿಕ್ಕ ಮಾದಣ್ಣನಿಗೆ ಜೀವ ಕಳೆಯು ತುಂಬಿ ಎಚ್ಚರಾದನು. ಶಿವಾನುಭವದ ನಡೆಯಂತೆ ನಡೆದರೆ ಶಿವಾನುಭವಿಗಳು ಮರಣವನ್ನು ಗೆಲ್ಲುವ ಪರಿಸ್ಥಿತಿಯು ಅವರಿಗೆ ಉಂಟಾಗುತ್ತದೆಂಬುದು ಈ ಚರಿತ್ರೆಯಿಂದ ತಿಳಿದು ಬರುವದು.

**ಕೋಲಂಬೆ:—** ಜಾತಿಗೊಳಪುರ ಎಂಬ ಹೆಸರಿನ ಪಟ್ಟಣವು ನಾಂದೇಡ ಜಿಲ್ಲೆಯಲ್ಲಿದೆ. ಅಲ್ಲಿ ಒಬ್ಬ ಶಿವಭಕ್ತನಿರುತ್ತಿದ್ದನು. ಅವನಿಗೆ ಕೋಲಂಬೆ ಎಂಬ ಹೆಸರಿನ ಮಗಳಿದ್ದಳು. ಅವಳು ತನ್ನ ತಾಯಿತಂದೆಗಳು ಶಿವಾಲಯಕ್ಕೆ ಹೋಗಿ ಶಿವಪೂಜೆ ಮಾಡುವದನ್ನು ನೋಡಿ ತಾನೂ ಒಂದು ಗುಡಿಸಲನ್ನು ಕಟ್ಟಿ ಅಲ್ಲಿ ದೇವರೆಂದು ಒಂದು ಶಿಲೆಯನ್ನು ಪ್ರತಿಷ್ಠಿಸಿ ಭಕ್ತಿಯಿಂದ ಪೂಜಿಸಹತ್ತಿದಳು. ಹೀಗಿರಲು ಕೆಲವು ವಿಷ್ಣು ಪೂಜಕರು ಆ ಗುಡಿಸಲ ಮುಂದೆ ಹಾಯ್ದು ಹೋಗುತ್ತಿರುವಾಗ ಈ ಹುಡುಗರಿಗೇಕೆ ಶಿವಪೂಜೆಯೆಂದು ಆ ಗುಡಿಸಲಿಗೆ ಬೆಂಕಿ ಹಚ್ಚಿದರು. ಅದರಲ್ಲಿದ್ದ ಕೋಲಂಬೆಯ ಗೆಳತಿಯರು ಓಡಿ ಹೋದರು. ಆದರೆ ಕೋಲಂಬೆಯು ಶಿವನಿಗೆ ಬೆಂಕಿ ಹತ್ತೀತ, ಅವನನ್ನು ಕಾಯಬೇಕು ಎಂಬಭಾವನೆಯುಳ್ಳವಳಾಗಿ ಗುಡಿಸಲನ್ನು ಬಿಟ್ಟುಹೋಗಲಿಲ್ಲ. ಪರಮಾತ್ಮನೆದುರಿಗೆ ಕೈಮುಗಿದುಕೊಂಡು ನಿಂತು ಬಿಟ್ಟಳು. ಆ ಕಿಚ್ಚು ನಂದಿಹೋಯಿತು. ಆದರೆ ತಕ್ಷಣವೇ ಆ ಗುಡಿಸಲು ಕಲ್ಲುಗುಡಿಯಾಯಿತು. ಅವಳು ಪೂಜಿಸುತ್ತಿದ್ದ ಶಿಲೆಯು ಲಿಂಗಾಕೃತಿಯಾಯಿತು. ಮುಂದೆ ಕೋಲಂಬೆಯು ಶಿವನಿಗೆ ಆರತಿಯನ್ನು ಬೆಳಗುತ್ತ ಶಿವನನ್ನು ಪಾಡುತ್ತ ಕೈಲಾಸಕ್ಕೆ ಹೋದಳು. ಅಂದಿನಿಂದ ಇದ್ದ ಜಾತಿಗೊಳಪುರಕ್ಕೆ ಕೋಲಂಬೆ ಎಂಬ ಹೆಸರು ಬಂದಿತು.

ಆ ಹೆಸರು ಈಗಲೂ ಇದೆ. ಊರ ಜನರ ಕೋಲಂಬೆಯು ನೆನಪಿಗಾಗಿ ವರ್ಷಕ್ಕೊಂದು ವೇಳೆ ಕೋಲಂಬೆಯ ಹಬ್ಬವನ್ನು ಆಚರಿಸುತ್ತ ಇದ್ದಾರೆ.

**ಶಂಕಿತೊಂಡಿ:—** ಈತನು ದನಗಳನ್ನು ಕಾಯುವ ಕಾಯಕವನ್ನು ಮಾಡುತ್ತಿದ್ದನು. ಅವನು ತನ್ನ ಗೆಳೆಯರನ್ನು ಕೂಡಿಕೊಂಡು ಶಂಕರ ಲಿಂಗನ ಆಟವನ್ನು ಆಡಬೇಕೆಂದು ಅಲ್ಲಲ್ಲಿ ಬಿದ್ದಿದ್ದ ಕಾಡುಗಲ್ಲುಗಳಿಂದ ಒಂದು ಚಿಕ್ಕ ಗುಡಿಯುನ್ನು ಕಟ್ಟಿದರು: ಹುಡುಗರೆಲ್ಲರು ಕೂಡಿ ತಮಗೆ ತಿಳಿದಹಾಗೆ ತಾವು ಪ್ರತಿಷ್ಠಿಸಿದ ದೇವರನ್ನು ಪೂಜಿಸುವರು. ಅಷ್ಟರಲ್ಲಿ ಅವರು ಕಾಯುವ ದನಗಳು ಎಲ್ಲಿಯೋ ಹೋಗಿಬಿಟ್ಟಿದ್ದವು. ಎಷ್ಟು ಹುಡು ಕಿದರೂ ಅವು ಸಿಕ್ಕಲಿಲ್ಲ. ಆಗ ಅವರು ಕಳ್ಳರು ಒಯ್ದಿರಬೇಕೆಂದು ಆಲೋ ಚಿಸಿ ತಮ್ಮನ್ನು ಕಾಯಬೇಕೆಂದು ದೇವರಿಗೆ ಮೊರೆಹೋಗಬೇಕೆಂದು ಗೊತ್ತುಪಡಿಸಿಕೊಂಡರು. ಅವರು ಶಂಕರಲಿಂಗನ ಮುಂದೆ ನಿಂತು ದೇವರೇ ಪಶುಗಳು ನಮಗೆ ದೊರೆತರೆ ಹಾಲು ಮೊಸರು ನಿನಗೆ ಅರ್ಪಿಸುವೆವೆಂದು ಬೇಡಿಕೊಂಡರು. ಆಗ ಶಂಕಿತೊಂಡಿಯು ನಾನು ಬಡವನು. ನಾನು ನಿನ್ನ ಗುಡಿಯ ಸಲುವಾಗಿ ದಿನಾಲು ಮೂರು ಕಲ್ಲುಗಳನ್ನು ತಂದು ನಿನಗೆ ಅರ್ಪಿಸುವೆನೆಂದು ಹೇಳಿದನು. ಮರುದಿನ ಕಳೆದುಹೋದ ಪಶುಗಳೆಲ್ಲವು ತಮ್ಮ ತಮ್ಮ ಮನೆಗೆ ಬಂದವು. ಬಾಲಕರೆಲ್ಲರು ತುಪ್ಪ, ಬೆಣ್ಣೆ ದೇವ ರಿಗೆ ಅರ್ಪಿಸಿ ನೈವೇದ್ಯ ಮಾಡಿದರು. ಶಂಕಿತೊಂಡಿಗೆ ಚಳಿಜ್ವರ ಬಂದದ್ದ ರಿಂದ ಎರಡು ತಿಂಗಳು ಮನೆಯಲ್ಲಿ ಮಲಗಿಬಿಟ್ಟನು. ಅವನು ಗುಣವಾದ ಬಳಿಕ ಬಂದು ತಾನು ಕೊಡಬೇಕಾದ ನೂರಾ ಎಂಭತ್ತು ಕಲ್ಲುಗಳನ್ನು ಕೂಡಿಸಿ ನಿನಗೆ ಅರ್ಪಿಸುವೆನೆಂದು ಅವುಗಳನ್ನು ಒಂದು ಬಂಡಿಯಲ್ಲಿ ಹೇರಿ ಕೊಂಡು ಬಂದನು. ಅವುಗಳನ್ನು ಎಣಿಸಲಾಗಿ ಒಂದು ಕಲ್ಲು ಕಡಿಮೆ ಯಾಗಿತ್ತು. ಆಗ ಅವನು ದೇವರ ವ್ರತವು ತಪ್ಪಿತಲ್ಲ ಎಂದು ತನ್ನ ಶಿರಸ್ಸನ್ನೇ ಕತ್ತರಿಸಿಕೊಳ್ಳುವಷ್ಟರಲ್ಲಿ ಪರಮಾತ್ಮನು ಅವನ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾದನು. ಪರಮಾತ್ಮನು- ನಿನ್ನ ಕಲ್ಲು ದಾರಿಯಲ್ಲಿ ಬಿದ್ದಿದೆ, ನಿನ್ನ ಭಕ್ತಿಗೆ ಮೆಚ್ಚಿದೆನು, ಎಂದು ಹೇಳುವಷ್ಟರಲ್ಲಿ ಶಂಕಿತೊಂಡಿಯು ತನ್ನ ಇದಿ ರಿಗೆ ನಿಂತ ಪರಮಾತ್ಮನಲ್ಲಿಯೇ ಲಯವಾದನು.

**ಬಾಹೂರು ಬ್ರಹ್ಮಯ್ಯ:—** ಬಾಹೂರು ಬ್ರಹ್ಮಯ್ಯನು ವಿಜಾಪುರ ಜಿಲ್ಹೆಯಲ್ಲಿರುವ ಮುದ್ದೇಬಿಹಾಳ ತಾಲೂಕಿನಲ್ಲಿರುವ ಬಾಹೂರು ಎಂಬ

ಗ್ರಾಮದವನು. ತೋಟ ಮಾಡುವದೇ ಅವನ ಕಾಯಕವಾಗಿತ್ತು. ಆವನು ದೇವರ ಮೇಲೆ ಅತ್ಯಂತ ಭಕ್ತಿಯುಳ್ಳವನು. ಅವನು ಕಲ್ಯಾಣ ಪಟ್ಟಣದಲ್ಲಿ ಜೋಳವನ್ನು ಕೊಂಡುಕೊಳ್ಳಲಿಕ್ಕೆ ಹೋದಾಗ್ಗೆ ಅಲ್ಲಿಯ ಒಬ್ಬ ಜೈನ ವರ್ತಕನು ಜೋಳದ ಗುಂಪಿಯನ್ನು ತನ್ನ ಮುಂದಿಟ್ಟುಕೊಂಡು ಅದನ್ನು ಉದ್ದೇಶಿಸಿ ಈ ಗುಂಪಿನಲ್ಲಿ ಶಂಕರಲಿಂಗನಿದ್ದಾನೆ. ಕೊಂಡುಕೊಳ್ಳಿರಿ. ಎಂದು ಚೇಷ್ಟೆಮಾಡಿ ಗಟ್ಟಿಯಾಗಿ ಒದರಿ ಹೇಳುತ್ತಿದ್ದನು. ಬ್ರಹ್ಮಯ್ಯನು ಅದೇ ದಾರಿಯಿಂದ ಬರುತ್ತಿದ್ದನು. ಅವನು ಜೈನ ವರ್ತಕನು ನುಡಿಯುತ್ತಿದ್ದುದನ್ನು ಕೇಳಿ-ಎಲೈ ಜೈನನೆ ಶಿವನು ಚೈತನ್ಯ ರೂಪಾಗಿರುವನಲ್ಲದೆ ಮಾರಿಕೊಳ್ಳಬಲ್ಲನೇ, ಎಂದು ಅನ್ನಲು ಆದಕ್ಕೆ ಆ ಜೈನನು ಈ ಜೋಳದಲ್ಲಿ ಶಿವನ ಚೈತನ್ಯವು ಇದ್ದರೆ ಆದರಲ್ಲಿ ಶಿವನನ್ನು ನುಡಿಸು ಎಂದು ಆಹ್ವಾನ ಮಾಡಿದನು. ಆಗ ಬ್ರಹ್ಮಯ್ಯನು ಜೋಳದ ರಾಶಿಯ ಸುತ್ತಲು ಪರಮಾತ್ಮನನ್ನು ಧ್ಯಾನಿಸುತ್ತ ಪ್ರದಕ್ಷಿಣೆ ಹಾಕುತ್ತ ಶಂಕರಾ ಎಂದು ಕರೆದನು, ಆಗ ಶಿವನು ಗಟ್ಟಿಯಾಗಿ ಓ ಎಂದೆನ್ನಲು ಅಲ್ಲಿದ್ದ ಜನರು ಬ್ರಹ್ಮಯ್ಯನ ಈ ಅದ್ಭುತವಾದ ಭಕ್ತಿಯನ್ನು ಕಂಡು ಅವನನ್ನು ಸ್ತುತಿಸುತ್ತಹೋದರು. ಈ ಪ್ರಕಾರ ಬ್ರಹ್ಮಯ್ಯನು ಅನೇಕ ಪವಾಡಗಳನ್ನು ಮಾಡಿದ್ದಾನೆ.

**ಮಾದರ ಧೂಳಯ್ಯ**— ಮಾದರ ಧೂಳಯ್ಯನು ಮಾದರ ಕುಲದಲ್ಲಿ ಹುಟ್ಟಿ ಕಲ್ಯಾಣಪಟ್ಟಣದಲ್ಲಿ ಮುಚ್ಚಿ ಹೊಲಿಯುವ ಕಾಯಕ ಮಾಡುತ್ತಿದ್ದನು. ಅವನು ಕಾಯಕವನ್ನು ಮಾಡುತ್ತಿರಲು ಪರಮಾತ್ಮನು ಧೂಳಯ್ಯನ ಕಾಯಕದ ಮಹತ್ವವನ್ನು ಜನರೆಲ್ಲರಿಗೆ ತಿಳಿಯಬೇಕೆಂದು ಯೋಚಿಸಿ, ಧೂಳಯ್ಯನ ಉಳಿಯ ಮೊನೆಯಲ್ಲಿಯೇ ಪರಮಾತ್ಮನು ರೂಪುದೋರಿದನು. ಮತ್ತು ಆ ರೂಪಿನಲ್ಲಿಯೇ ಧೂಳಯ್ಯನು ಅಡಗಿ ಹೋದನು ಧೂಳಯ್ಯನು ವಚನಕಾರನಿದ್ದು ಅವನ ಮುದ್ರಿಕೆಯು 'ಕಾಮ ಧೂಮ ಧೂಳೇಶ್ವರ' ಎಂಬಿರುತ್ತದೆ.

---

ಆಕೆಯೇ ನಿರ್ಮಿಸಿದಳು. ಮುಂಜು ಗುಡುಗು ಮಿಂಚು ಸಿಡಿಲು ಎಲ್ಲವನ್ನೂ ಆಕೆಯೇ ಕಲ್ಪಿಸಿದಳು. ಇಹವೂ ಆಕೆ. ಪರವೂ ಆಕೆ. ಸೂರ್ಯಚಂದ್ರ ನಕ್ಷತ್ರ ಗ್ರಹ ಅಗ್ನಿ ಪ್ರಕಾಶ ಬೆಳಕು ಹೊಳಪುಗಳೆಲ್ಲ ಆಕೆಯ ಒಂದು ಅಂಶದಿಂದ ಬೆಳಗುವವು. ದನ, ಕರು, ಆಕಳು ಎತ್ತು, ಎಮ್ಮೆ, ಕುರಿ, ಕೋಣ ಮೊದಲಾದ ಪಶುಗಳನ್ನೂ ಕಾಗೆ, ಕೋಳಿ, ಹದ್ದು ಗಿಳಿ, ಕೋಗಿಲೆ, ನವಿಲು ಮೊದಲಾದ ಪಕ್ಷಿಗಳನ್ನೂ ಹಾವು, ಚೇಳು, ಹುಳ ಹುಪ್ಪಡಿ ಮೊದಲಾದ ಕ್ರಿಮಿಕೀಟಕಗಳನ್ನೂ ಆಕೆಯೇ ಆಗಿ ನಿಂತಿರುವಳು. ಅರಣ್ಯ, ಪರ್ವತ, ಧರೆ, ಕಂದರ, ಗಿಡ, ಹೊಳೆ, ಹಳ್ಳ, ಕೆರೆ, ಬಾವಿ, ಸಮುದ್ರ, ತರತಂದ ವನಸ್ಪತಿ ಮೊದಲಾದವುಗಳನ್ನೆಲ್ಲ ಮಹಾತಾಯಿಯೇ ಸೃಜಿಸಿದಳು. ಕಾಳುಕಡಿ ಧಾನ್ಯಧವಸ ಅರಿವೆ ಅಂಚಡಿ ಗಡಿಗೆ ಮಡಿಕೆಗಳನ್ನೆಲ್ಲ ಆಕೆಯೇ ಕಲ್ಪಿಸಿದಳು. ಸತಿ, ಪತಿ, ಸುತ ಬಂಧು ಬಳಗ, ಆಪ್ತ, ಇಷ್ಟ, ಗಂಡು, ಹೆಣ್ಣು, ಹುಡುಗ, ಹುಡಿಗೆ, ಅರಸ, ತಿರುಕ, ಶ್ರೇಷ್ಠ, ಕನಿಷ್ಠ, ಉಚ್ಚ, ನೀಚ, ಬ್ರಾಹ್ಮಣ, ಹೊಲೆಯ, ಗುರು ಜಂಗಮ, ಶಿಷ್ಯ, ಭಕ್ತ ಎಲ್ಲವೂ ಆಕೆಯೇ ಇದ್ದಾಳೆ. ಕರ್ಮ ಅಕರ್ಮ, ವಿಕರ್ಮ, ಕುಕರ್ಮ ದುಷ್ಕರ್ಮಗಳೆಲ್ಲ ಆಕೆಯ ಸಂಕಲ್ಪಗಳು. ಅಷ್ಟೈಶ್ವರ್ಯಗಳೆಲ್ಲ ಆಕೆಯವು. ಅಷ್ಟದಾರಿದ್ರ್ಯಗಳೂ ಕೂಡ ಆಕೆಯಿಂದಲೇ ಆಗಿವೆ.

ಮದುವೆ, ಮುಂಜುವೆ, ಉತ್ಸವ, ಆಟ ನೋಟಗಳೆಲ್ಲ ಆಕೆಯವೇ ಸರಿ. ಅತಿಮೂರ್ಖ, ಅತಿಜ್ಞಾನಿ ಕೂಡ ಆಕೆ. ಹೊಡೆಯುವವ ಆಕೆ. ಸಾಕ್ಷಿಯೂ ಆಕೆ ವಕೀಲನೂ ಆಕೆ ಹಿಡಿಯುವವನೂ ಆಕೆ. ಖಟ್ಲೆ ನಡಿಸುವವನೂ ಆಕೆ. ವಾದಿಯೂ ಆಕೆ. ಪ್ರತಿವದಿಯೂ ಆಕೆ. ಎಲ್ಲ ನಾಮಗಳೂ ಆಕೆಯವು. ಎಲ್ಲ ರೂಪಗಳೂ ಆಕೆಯುವು. ತ್ರಿಪುಟಿಗಳೆಲ್ಲ ಆಕೆ ಜನನ, ಮರಣ, ಸುಖ, ದುಃಖ, ಹಿತ, ಅಹಿತಗಳೆಲ್ಲವೂ ಆಕೆಯೇ ಸರಿ. ಸರ್ಪ, ಕ್ರಿಮಿ, ಕೀಟಕು, ಪಶು, ಪಕ್ಷಿ, ಅಂಡಜ ೨೧ ಲಕ್ಷ ಪಿಂಡಜ, ೨೧ ಲಕ್ಷ ಅಂತು ೮೪ ಲಕ್ಷ ಜೀವರಾಶಿಗಳೆಲ್ಲ ಆಕೆಯೇ ಆಗಿದ್ದಾಳೆ. ರೂಪ ತಾಳಿದಾಕೆಯೂ ಆಕೆ. ಅದರಲ್ಲಿಯ ಚೈತನ್ಯ ಶಕ್ತಿಯೂ ಕೂಡ ಆಕೆ. ಜನ್ಮ ಸ್ಥಿತಿ ಲಯುಗಳಿಗೂ ಆಕೆಯೇ ಕಾರಣಳು. ಜನನ ಕೌಮಾರ ಬೆಳವಣಿಗೆ ಪ್ರಾಯ ಇಳಿಗೆ ರೋಗ ಮರಣಗಳೆಲ್ಲ ಆಕೆಯಿಂದಲೇ ಉಂಟಾದವು. ವೇದ, ಉಪನಿಷತ್ತು, ಆಗಮ, ಸ್ಮೃತಿ, ಶ್ರುತಿ, ಪುರಾಣ, ಗೀತೆ,

# ಶಿವಾನುಭವ

ಸಂಪುಟ ೨೯ | ನವ್ಹೆಂಬರ ೧೯೫೫ | ಸಂಚಿಕೆ ೧೧

## ಆದಿಶಕ್ತಿ ಪಾರ್ವತಿಯ ಸಗುಣ ನಿರ್ಗುಣ ಸ್ವರೂಪಗಳು.

(ಲೇಖಕರು:- ಶ್ರೀ. ಶಿವಾನಂದಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ)

### (ಸಗುಣ ಸ್ವರೂಪ.)

ಮಹಾಮಾತೆ ಪಾರ್ವತಿಯು ಒಂದೇ ಒಂದು ತೇಜಸ್ಸಿನಿಂದ ಸರ್ವ ಜೀವಗಳು, ಸರ್ವಮನಸು, ಸರ್ವತತ್ವ, ಸರ್ವಗುಣಗಳು ಉಂಟಾದವು. ಚೇತನ ಅಚೇತನಗಳೂ ಆಕೆಯ ಅಂಶದಿಂದ ಆದವು. ಕಾಮ, ಕ್ರೋಧ, ಮದ, ಮತ್ಸರ, ಲೋಭ, ಅಹಂಕಾರ, ಸತ್ವ, ರಜ, ತಮಗಳೂ ಆಕೆಯಿಂದಲೇ ಉಂಟಾದವು. ಸತ್ಯ ಶಾಂತಿ ಶಮೆ ದಮೆ ಕ್ಷಮೆ ಮೊದಲಾದವುಗಳು ಈಕೆಯ ತೇಜಸ್ಸಿನಿಂದಲೇ ಜನಿಸಿದವು. ಸರ್ವ ಚೇಷ್ಟೆಗಳು ಸರ್ವಕ್ರಿಯೆಗಳು, ಸರ್ವಮತಗಳು, ಸರ್ವ ಜಾತಿಗಳು, ಸರ್ವಧರ್ಮಗಳು, ಎಲ್ಲವೂ ಮಹಾ ತಾಯಿಯಿಂದಲೇ ನಿರ್ಮಿಸಲ್ಪಟ್ಟವು. ಮೋಸ ಕಳವು ಪಾ:ದರ ಸುಳ್ಳು ಕೊಲೆ ಪಾತಕಗಳೆಲ್ಲ ಆಕೆಯ ತೇಜಸ್ಸಿನಿಂದಲೇ ಉಂಟಾದವು. ತ್ಯಾಗ, ಸೇವೆ, ಭಕ್ತಿ, ಭುಕ್ತಿ, ಮುಕ್ತಿ, ವೈರಾಗ್ಯ, ರಾಗ, ವಿರಾಗ, ಭೋಗ, ಯೋಗ, ಜ್ಞಾನ ಅಜ್ಞಾನಗಳೆಲ್ಲ ಮಹಾತಾಯಿಯಿಂದಲೇ ನಿರ್ಮಿಸಲ್ಪಟ್ಟವು. ಪಾಪ, ಪುಣ್ಯ, ಪೀಡೆ, ಕಾಟ, ಆಕೆಯಿಂದಲೇ ಬಂದವು.

ಪೃಥ್ವಿ ಅಪ್ ತೇಜ ವಾಯು ಆಕಾಶಗಳನ್ನು ಆಕೆಯೇ ಉಂಟುಮಾಡಿದಳು. ಋತುಗಳು ಗಾಳಿ, ಮಳೆ, ಛಳಿ ಬಿಸಿಲು ಬರಗಳೆಲ್ಲವನ್ನೂ

ವಚನ ಮೊದಲಾದವುಗಳಲ್ಲಿ ಆಕೆಯೇ ವ್ಯಾಪಿಸಿದ್ದಾಳೆ. ನಾದ, ಬಿಂದು, ಕಲೆಗಳುಳ್ಳಾಕೆ. ಸದ್ಬುದ್ಧಿ ದುರ್ಬುದ್ಧಿ ಕೂಡ ಆಕೆ. ಮಾಯೆ, ಭ್ರಾಂತಿ, ಭ್ರಮೆ, ಅವಿದ್ಯ, ಮರವೆ ಅಜ್ಞಾನಗಳೆಲ್ಲವೂ ಆಕೆಯಿಂದ ಒಂದವು. ಕಾಂತಿ, ಶಾಂತಿ, ದಾಂತಿ, ಮಾತೆ ಸುಮಂಗಳಗಳೆಲ್ಲ ಆಕೆಯ ತೇಜದಿಂದಾದವು. ಹಗಲು ರಾತ್ರಿಗಳೆಲ್ಲ ಆಕೆಯೇ ಇರುವಳು. ಸರ್ವ ದೇವಾದಿ ದೇವತೆಗಳೂ ನರರೂ, ಸುರರೂ, ಸಕಲ ಲೋಕಗಳೂ, ಕಿನ್ನರರೂ, ಕಿಂಪುರುಷರೂ, ಯಕ್ಷ, ರಾಕ್ಷಸರೂ ಗಂಧರ್ವರೂ ಸ್ವರ್ಗ ನರಕ ಮೃತ್ಯು ಪಾತಾಳ ವೈಕುಂಠ ಸೂರ್ಯಲೋಕ, ಚಂದ್ರಲೋಕ ಮೊದಲಾದವುಗಳೆಲ್ಲ ಆಕೆಯೇ ಇರುವಳು.

ಕಾಡಮೃಗಗಳೂ, ಆಕೆ ನಾಡುಪಶುಗಳೂ ಆಕೆ. ಅವುಗಳನ್ನು ಕೊಂದು ತಿನ್ನುವವಳೂ ಆಕೆ. ಮಾಂಸವೂ ಆಕೆ ಅದನ್ನು ಕಡಿದು ತಿನ್ನುವವಳೂ ಆಕೆ. ಜೀವಿಗಳೂ ಆಕೆ. ಅವುಗಳನ್ನು ಕೊಂದು ತಿನ್ನುವವಳೂ ಆಕೆ. ಚಂಡಾಲನೂ ಆಕೆ. ಕಟುಕನೂ ಆಕೆ. ಸಾದು, ಸನ್ಯಾಸಿ, ಸಿದ್ಧ, ತ್ಯಾಗಿ, ಯೋಗಿ, ಋಷಿ, ಅವತಾರಿಗಳೆಲ್ಲ ಆಕೆಯುವೇ ಸರಿ. ಭೂತ ಬೆಂತರ ಗಣಂಗಳು ಸತ್ಪುರುಷ ಮಹಾತ್ಮ, ಸರ್ವರೆಲ್ಲವೂ ಆಕೆಯೇ ಸರಿ. ವಿಟ ಸ್ತ್ರೀಯೂ ಆಕೆ ವಿಟಪುರುಷನೂ ಆಕೆಯೇ ಆಗಿದ್ದಾಳೆ. ಕುಲಿನಸ್ತ್ರೀ ಪತಿವ್ರತೆ ಶರಣೆ ಸಂತರೆಲ್ಲರೂ ಆಕೆಯೇ ಆಗಿದ್ದಾಳೆ.

ಅನೇಕ ಅವತಾರಗಳನ್ನು ಲೋಕಕಲ್ಯಾಣಕ್ಕಾಗಿ ತಾಳಿದವಳು ಆಕೆಯೇ ಸರಿ. ಅನೇಕ ಪುರುಷರೂಪದಿಂದ ಅವತಾರ ತಾಳಿದ್ದಾಳೆ. ಅನೇಕ ಸ್ತ್ರೀ ರೂಪದಿಂದಲೂ ಅವತಾರ ತಾಳಿರುವಳು. ಅನೇಕ ಪಶು ಪಕ್ಷಿ ರೂಪಗಳಿಂದಲೂ ಅವತಾರ ತಾಳಿ ಜಗತ್ತಿನ ಕಲ್ಯಾಣ ಮಾಡಿದ್ದಾಳೆ.

ರಾಮ, ಕೃಷ್ಣ, ಬಸವ, ಗಾಂಧಿ, ಚನ್ನಬಸವ, ಶ್ರೀರಾಮಕೃಷ್ಣ, ವಿವೇಕಾನಂದ, ಕ್ರಿಸ್ತ, ಮಹಮ್ಮದ ಮೊದಲಾದ ಸಾವಿರಾರು ಪುರುಷರ ಅವತಾರವನ್ನು ಆಕೆಯೇ ತಾಳಿರುವಳು. ತಾಳುತ್ತಲೂ ಇರುವಳು. ಅಕ್ಕ ಮಹಾದೇವಿ, ಸೀತೆ, ಸಾವಿತ್ರಿ, ಅಹಲ್ಯಾ, ದ್ರೌಪದಿ, ಸುಗ್ಗಲೆ, ಮಲ್ಲಮ್ಮ, ಜನಾಬಾಯಿ, ಮೀರಾಬಾಯಿ, ಶಾರದಾ, ರಾಧಾ ಮೊದಲಾದ ಸ್ತ್ರೀಯರ ಅವತಾರಗಳು ಆಕೆಯೇ ತಾಳಿರುವಳು. ಹನುಮಂತ, ಮತ್ಸ್ಯ, ಕೂರ್ಮ ವರಹ, ಐರಾವತ, ಗರುಡ ಮೊದಲಾದ ಪಶುಪಕ್ಷಿಗಳ ಅವತಾರ ತಾಳಿದಾ

ಕಿಯೆ ಆಕೆಯೇ ಆಗಿದ್ದಾಳೆ. ವಿದ್ಯಾರಣ್ಯ, ಶಂಕರಾಚಾರ್ಯ, ವಾಲ್ಮೀಕಿ, ವ್ಯಾಸ, ವಶಿಷ್ಠ, ಬುದ್ಧ, ಮಧ್ವಾಚಾರಿ, ರಾಮಾನುಜಾಚಾರಿ, ತುಕಾರಾಮ ರಾಮದಾಸ, ನಾಮದೇವ, ಅಲ್ಲಮಪ್ರಭು, ಸಿದ್ಧರಾಮ, ಮಾಚಯ್ಯ, ಹರಳಯ್ಯ, ದಾಸಿಮಯ್ಯ ಮೊದಲಾದ ಶರಣರ ಅವತಾರಗಳನ್ನೂ ತಾಳಿ ದಾಕೆ ಆಕೆಯೇ ಆಗಿದ್ದಾಳೆ. ಇನ್ನೂ ಅನೇಕಾನೇಕ ರೀತಿಯಿಂದ ಅವ ತಾರ ತಾಳಿ ದುಷ್ಟರ ವಧೆ, ಶಿಷ್ಟರ ಪರಿಪಾಲನ ಮಾಡಿದ್ದಾಳೆ. ದೇಶದಲ್ಲಿ ಭಕ್ತಿ, ಜ್ಞಾನ, ನೀತಿ, ಶಾಂತಿ, ಮೊದಲಾದವುಗಳನ್ನು ಪ್ರಚಾರ ಮಾಡಿ ದ್ದಾಳೆ. ಅಲ್ಲದೆ ಪ್ರಸಂಗಾನುಸಾರ ಪುನಃ ಪುನಃ ಅನೇಕ ರೀತಿಯಿಂದ ಅವತಾರತಾಳಿ ಅನೀತಿ ಅಧರ್ಮಗಳನ್ನು ಹೊಡೆದೋಡಿಸಿ ನೀತಿ ಧರ್ಮ ಗಳನ್ನು ನೆಲೆಗೊಳಿಸುವೆನೆಂದು ಅನೇಕಸಲ ವಚನಕೊಟ್ಟಿದ್ದಾಳೆ. ಈಕೆಯ ಮಹಿಮೆಗೆ ಅಂತಪಾರಗಳಿಲ್ಲ. ಅದನ್ನೆಲ್ಲ ವರ್ಣಿಸುವದು ಆದಿಶೇಷನಿಗೂ ಕೂಡ ನಿಲುಕದು ಮಾತು. ಆಕೆಯ ಅವತಾರ, ಆಕೆಯ ರೂಪ, ಆಕೆಯ ನಾಮ, ಆಕೆಯ ಕಾರ್ಯಗಳಿಗೆ ಲೆಕ್ಕಗಳೇ ಇಲ್ಲ.

ಮಾನವನಲ್ಲಿಯೂ ನವಚಕ್ರಗಳಲ್ಲಿಯೂ ಕೂಡ ಬೇರೆ ಬೇರೆ ದೇವತೆ ಗಳ ಹೆಸರಿನಿಂದ ಮಹಾತಾಯಿ ಪಾರ್ವತಿಯೇ ನೆಲಸಿದ್ದಾಳೆ. ಮೂಲಾ ಧಾರದ ಕೆಳಗೆ ಕುಂಡಲಿನಿ ಶಕ್ತಿ ಎನಿಸಿ ತ್ರಿಕೋಣಾಕಾರದಲ್ಲಿ ಕೆಳಮುಖ ಮಾಡಿ ಬಿದ್ದಿರುವಳು. ಆಧಾರ ಸ್ವಾಧಿಷ್ಠಾನ ಮಣಿಪೂರ ಅನಾಹತ ವಿಶುದ್ಧ ಆಜ್ಞೇಯಗಳಲ್ಲಿ ಗಣಪತಿ, ಬ್ರಹ್ಮ, ವಿಷ್ಣು, ರುದ್ರ ಮೊದಲಾದ ವರ ರೂಪದಿಂದ ಅಲ್ಲಿ ವಾಸಿಸುವಳು. ಇವೆಲ್ಲ ಬುದ್ಧಿ ಪಾಜ್ಞನ ಇಂದ್ರಿ ಯಗಳಿಗೆ ಗೋಚರವಾಗುವ ಆಕೆಯ ರೂಪ ಆಕಾರಗಳಾದವು. ಇದೆಲ್ಲ ಆಕೆಯ ಸಾಕಾರ ಸ್ವರೂಪದ ವರ್ಣನೆಯಾಯಿತು.

## ನಿರ್ಗುಣ ಸ್ವರೂಪಗಳು.

ಆದಿಶಕ್ತಿ ಪಾರ್ವತಿಯೂ ಕೂಡ ಪರಶಿವ ಪರಬ್ರಹ್ಮನಂತೆ ನಿರಾಕಾ ರಳೂ ನಾಮ ರೂಪಾತೀತಳೂ ಇರುವಳು. ಇವಳು ನಿರ್ಗುಣೆ ನಿರ್ವಿ ಕಲ್ಪೆ ಆಗಿರುವಳು. ಇವಳೂ ನಿತ್ಯಳೂ ಸತ್ಯಳೂ ಪರಿಪೂರ್ಣಳೂ ಇರು ವಳು. ನಿರಂಜನೆ, ನಿಷ್ಕ್ರಿಯೆ, ನಿರವಯವೆ, ನಿಗಮಾತೀತೆ, ನಿಸ್ಸಂಗೆ, ನಿಷ್ಪ್ರಾಣೆ, ನಿಶ್ಚಲೆ, ನಿಷ್ಕಲೆ, ನಿಷ್ಕಳಂಕೆ, ನಿರ್ವಿಕಾರೆ ನಿರ್ವೇದ್ಯ, ನಿರು ಪಮೆ, ನಿತ್ಯಮುಕ್ತೆ ಮೊದಲಾದ ನಿರಾಕಾರ ವರ್ಣನೆ ಉಳ್ಳವಳೂ ಇರು

ವಳು. ತಾಯಿಯು ನಾದಬಿಂದು ಕಲಾತೀತಳೂ ಇದ್ದಾಳೆ. ಸರ್ವಸಾಕ್ಷಿಯೂ ಆಗಿರುವಳು. ಇವಳು ಪ್ರತ್ಯಗಾತ್ಮಳು ಅವ್ಯಯಳು, ಅವ್ಯಕ್ತಳು ಅಕ್ಷರಳು ಪರಳು ಅಗಮ್ಯಳು ಆಗಿರುವಳು. ಅಲ್ಲದೆ ಮಹಾತಾಯಿಯು ಚಿನ್ಮಾತ್ರಳು ಚಿತ್ಸುಖಳು ಚಿತ್ಸ್ವರೂಪಳು ಚಿದಂಬರಳು, ಆಗಿರುವಳು. ಇವಳು ಗುಪ್ತಳು ಆದ್ಯಂತರಹಿತಳು. ಅನಾದಿ ಅನಂತಳು. ಶೂನ್ಯಳೂ ಆಗಿರುವಳು. ಇವಳು ಪರಂಜ್ಯೋತಿಮಯಳು ಸ್ವಪ್ರಕಾಶಳು ಪೂರ್ಣ ಸ್ವಾವಲಂಬಿ ಪೂರ್ಣ ಸ್ವಾತಂತ್ರಳೂ ಆಗಿರುವಳು. ಇವಳು ಪ್ರಪಂಚರಹಿತಳು ಪರಮೇಶ್ವರಿಯು ಹ್ರೀಂಕಾರಿ ಓಂಕಾರಿಯಾಗಿರುವಳು. ತ್ರಿಗುಣಾತೀತಳು ಜನನ ಮರಣ ರಹಿತಳು. ಮೃತ್ಯುಂಜಯಳು ಪರಬ್ರಹ್ಮದೇಶ ಕಾಲಾತೀತಳು ಆಗಿರುವಳು. ಪರಮಾನಂದೆ ಪರತರೆ ಪರಾತ್ಪರೆ ಪರಮಶಾಂತಿಮಯೆ ಜ್ಞಾನಪೂರ್ಣೆಯಾಗಿರುವಳು. ಅಖಂಡಳಾಗಿರುವಳು, ಅನುಪಮಳಾಗಿರುವಳು. ಅವೇದ್ಯಳಾಗಿರುವಳು. ಅಭೇದ್ಯಳಾಗಿರುವಳು. ಅಘಾಧಳಾಗಿರುವಳು. ಅನಘಗಳಾಗಿರುವಳು. ಅಚಿಂತ್ಯಳಾಗಿರುವಳು. ವಾಙ್ಮಯನಾತೀತಳಾಗಿರುವಳು. ಈ ಪ್ರಕಾರ ಮಹಾತಾಯಿ ಪಾರ್ವತಿಯು ಪರಶಿವನಂತೆ ನಿರ್ಗುಣ ಸ್ವರೂಪಳೂ ಹೌದು ಮತ್ತು ಪರಶಿವನಿಗಾಗಿ ಅನೇಕ ಸಾಕಾರ ರೂಪಗಳನ್ನು ತಾಳಿ ನಿಂತವಳೂ ಹೌದು. ಈಕೆಗೆ ಆದಕ್ಕಾಗಿ ಸಗುಣ ನಿರ್ಗುಣ ರೂಪಗಳುಳ್ಳವಳೆಂದು ಹೇಳುವದು ನಿಜವೆನಿಸುವದಿಲ್ಲವೇ ? ತಂದೆಗೆ ಒಂದೇ ರೂಪವಿದ್ದರೆ ತಾಯಿಗೆ ಎರಡು ರೂಪಗಳುಂಟು. ಆದರೂ ಇವರಿಬ್ಬರೂ ಒಂದೇ ಸರಿ. ಅವರಲ್ಲಿ ಭೇದವನ್ನು ಕಲ್ಪಿಸುವದು ಮಹಾ ಅಪರಾಧವೇ ಸರಿ. ಕಟ್ಟಕಡೆಯ ಸ್ಥಿತಿಯಲ್ಲಿ ಇವರಿಬ್ಬರೂ ಒಂದೇ ರೂಪಾಗಿ ಬಿಡುವರು.

---

# ಆದರ್ಶಜೀವಿ ದೇವರದಾಸಮಯ್ಯ

(ಲೇಖಕರು— ಶ್ರೀ. ಎಸ್ ಎಸ್. ಎಲಿಗಾರ, ಬಿ. ಎ.)

ದೇವರದಾಸಮಯ್ಯನ ಜೀವನವು ನಮಗೆಲ್ಲ ಒಂದು ಆದರ್ಶವಾಗಿದೆ. ಅವನು ಅತ್ತ ಆಚಾರ್ಯರಿಗೆ ಶಿಷ್ಯನಾಗಿದ್ದು ಶ್ರೀಶೈಲಪೀಠದ ಸೇವೆಯನ್ನು ಶ್ರದ್ಧೆಯಿಂದ ಸಲ್ಲಿಸಿದ್ದಾನೆ. ಇತ್ತ ಪ್ರಮಥಾಗ್ರಣಿಯಾಗಿ ವಚನಗಳನ್ನು ರಚಿಸಿ ಶರಣರಿಗೆ ಅಭಿವಂದ್ಯನಾಗಿದ್ದಾನೆ. ಅಗ್ರಗಣಿಯಾಗಿದ್ದಾನೆ. ಈ ಸಮನ್ವಯದ ಆತನ ಜೀವನ ನಮಗೆ ಆದರ್ಶವಲ್ಲವೇ?

ಅಲ್ಲಯ್ಯನಂತೆ ನಿಶ್ಚಿಂತನಾಗಿ ನಿಶ್ಚಿತ ಗುರಿಯುಳ್ಳವನಾಗಿ ನಾಡನು ಸುತ್ತಿ ಜನತೆಗೆ ಬೋಧಿಸಿ ಉದ್ಧರಿಸಿದ್ದಾನೆ. ಬಸವಣ್ಣನಂತೆ ಭಕ್ತಿ ಭರಿತನಾಗಿ ಕಾಯಕ ನಿರತನಾಗಿ ಒಂದಲ್ಲ, ಎರಡು ತತ್ತ್ವ ಕೇಂದ್ರಗಳನ್ನು ಸ್ಥಾಪಿಸಿ ಅನುಭವ ಪ್ರಚಾರ ಮಾಡಿದ್ದಾನೆ. ಅವರಿವರೆನ್ನದೆ ಎಲ್ಲರನ್ನು ಉದ್ಧರಿಸಿದ್ದಾನೆ. ಚನ್ನಬಸವಣ್ಣನಂತೆ ಸಮ್ಯಗ್‌ಜ್ಞಾನಿಯಾಗಿ ತನ್ನ ವಿಶಿಷ್ಟ ವಿಚಾರ ಧಾರೆಯನ್ನು ಪ್ರವಹಿಸಿದ್ದಾನೆ. ಭಕ್ತಿ, ಜ್ಞಾನ, ವೈರಾಗ್ಯಗಳಿಗೆ ಏಕೈಕಮೂರ್ತಿಯಾದ ಆ ದಾಸಮಯ್ಯನ ಜೀವನ ಎಲ್ಲರಿಗೂ ಆದರ್ಶವಲ್ಲದೇ ಮತ್ತೇನು?

ದಾಸಮಯ್ಯನು ಸತ್ಯಾಂಶಗಳನ್ನು ಬೋಧಿಸಿದ್ದಾನೆ. ಸ್ತ್ರೀಸ್ವಾತಂತ್ರ್ಯ, ಅಸ್ಪೃಶ್ಯೋದ್ಧಾರ ಕಾರ್ಯಗಳನ್ನು ಕೈಕೊಂಡಿದ್ದಾನೆ. ಅಧಿಕಾರಿಯಾಗಿ ಆಳುವ ಅವಕಾಶವಿದ್ದರೂ ಅದಕ್ಕೆ ಮನಸ್ಸು ಮಾಡದೆ ಕೊನೆಯವರೆಗೂ ನೈಗೆಯ ಕಾಯಕವನ್ನು ಬಿಡದೆ ನಡಿಸಿಕೊಂಡು ಬಂದಿದ್ದಾನೆ. ಆದರ್ಶವಾದ ದಾಂಪತ್ಯ ಜೀವನದ ಪ್ರದೀಪವನ್ನು ಬೆಳಗಿಸಿದ್ದಾನೆ. ಸತಿಪತಿಗಳ ಸ್ನೇಹದಿಂದ ಸಮರಸದಿಂದ ಬಾಳಿ ನಿಷ್ಕಂಟಕವಾಗಿ ನಿರ್ವ್ಯಾಜ ಪ್ರೇಮಿಗಳಾಗಿ ಬದುಕಲೇಬೇಕೆಂಬ ಭವ್ಯಸಂದೇಶವನ್ನು ಬಿತ್ತರಿಸಿದ್ದಾನೆ. ಕನ್ನಡ ವಚನ ಸಾಹಿತ್ಯದ ಅಭಿರುಚಿಯನ್ನೂ ಅಭಿಮಾನವನ್ನೂ ಸೂರೆಗೊಂಡಿದ್ದಾನೆ. ಅಲ್ಲದೆ ಸಂಸ್ಕೃತ ಸಾಹಿತ್ಯದ ಸೇವೆಯನ್ನು ಸಾಕಷ್ಟು ಮಾಡಿದ್ದಾನೆ. ಜ್ಞಾನ ವಿಜ್ಞಾನಗಳ ಖಣಿಯಾಗಿದ್ದಾನೆ. ಆಚಾರಾನುಭವಿಗಳ ಮಣಿಯಾಗಿದ್ದಾನೆ. ಬರೀ ಜ್ಞಾನ ವಿಜ್ಞಾನಗಳ ಖಣಿಯಾಗಿದ್ದಾನೆ. ಆಚಾರಾನುಭವಿಗಳ ಮಣಿ

ಯಾಗಿದ್ದಾನೆ. ಬರೀ ಜ್ಞಾನಿಗಳನ್ನೂ, ಅನುಭಾವಿಗಳನ್ನೂ, ಪಂಡಿತರನ್ನೂ, ಪ್ರಬುದ್ಧರನ್ನೂ ಉದ್ಧರಿಸದೆ ಸಾಮಾನ್ಯ ಜನರಲ್ಲಿಯೂ ಬೆರೆತು ಬಾಳಿ ಅವರನ್ನು ಉತ್ತಮ ಮಾರ್ಗಕ್ಕೆ ತಂದಿದ್ದಾನೆ. ದಾಸೋಹವನ್ನು ಅವಿಚ್ಛಿನ್ನವಾಗಿ ಜರುಗಿಸಿದ ದಯಾಮಯ ಮೂರ್ತಿಯಾಗಿದ್ದಾನೆ. ದಿವ್ಯಾಂಬರಗಳನ್ನು ದೀನದರಿದ್ರರಿಗೆಲ್ಲ ಕೊಟ್ಟು ದಾನಮೂರ್ತಿಯೆನಿಸಿದ್ದಾನೆ. ಧರೆಕೊಂಡಾಡುವ ಕೀರ್ತಿ ಗಳಿಸಿದ್ದಾನೆ. ಪರಶಿವನ ಪರಮಗುರುವಿನ ಪಂತರ ಲಿಂಗದ ಕಲೆಗಳನ್ನು ಚನ್ನಾಗಿ ಅರಿತಿದ್ದಾನೆ. ಅಷ್ಟಾವರಣ ನಿಷ್ಠನಾಗಿದ್ದಾನೆ. ಹಸಿವೆಂಬ ಹಾವು ಕಡಿದವರಿಗೆ ಅನ್ನವನ್ನು, ವಿಷಯ ಭ್ರಾಂತಿಹಿಡಿದವರಿಗೆ ವಿವೇಕಾಮೃತವನ್ನು ಕೊಟ್ಟು ತೃಪ್ತಿಗೊಳಿಸಿದ್ದಾನೆ. ಸಂಪತ್ತು ಸಂಸಾರ ಭೂತಚೇಷ್ಟೆಗಳನ್ನು ಬಿಡಿಸುತ್ತಿದ್ದಾನೆ. ಅಭಕ್ಷ್ಯ ಭಕ್ಷಣ, ಅಪೇಯಪಾನ, ಅನಿಷ್ಟ ಪರಸ್ತ್ರೀಗಮನ ಮುಂತಾದ ದುರಾಚಾರಗಳನ್ನು ಖಂಡಿಸಿ ಜನತೆಯನ್ನು ಅವುಗಳಿಂದ ದೂರವಿರಿಸಿದ್ದಾನೆ. ಕಪಟ, ಮೋಸ, ಅನ್ಯಾಯ ಅಹಂಕಾರಗಳನ್ನು, ಮದಮತ್ಸರಗಳನ್ನು, ಕಾಮ ಕ್ರೋಧಗಳನ್ನು ಅಪನಂಬುಗೆ ಅಪಪ್ರಚಾರಗಳನ್ನು ಅಲ್ಲಗಳೆದಿದ್ದಾನೆ. ಭಕ್ತಿ, ಸೌಜನ್ಯ, ಸರಳತೆ, ನ್ಯಾಯ, ವಿನಯ, ವಿಶ್ವಾಸ, ಪ್ರೇಮ, ಶಾಂತಿ, ನೀತಿ, ರೀತಿ, ನ್ಯಾಯ ಗುಣಗಳನ್ನು ಜನರ ಹೃದಯ ಕ್ಷೇತ್ರದಲ್ಲಿ ಬಿತ್ತಿ ಬೆಳೆದಿದ್ದಾನೆ. ಕಳವು ಮಾಡುವದನ್ನು ಸುಳ್ಳು ಹೇಳುವದನ್ನು ಖಂಡಿಸಿದ್ದಾನೆ. ಎದುರಿಸಿದವರ ಜಾತಿ ಕಲ್ಪನೆಯ ಸಂಕುಚಿತ ಮನೋಭಾವವನ್ನು ಎತ್ತಿ ತೋರಿಸಿದ್ದಾನೆ. ಯಾರಾದರೇನು, ನಡೆನುಡಿ ಒಂದಾಗಿರಬೇಕು ಎಂದು ಹೇಳಿದ್ದಾನೆ.

ನಿರಹಂಕಾರಿಗಳಾಗಿ, ನಿಷ್ಕಾಮಿಗಳಾಗಿ ದಾನಧರ್ಮ ಮಾಡಹಚ್ಚಿದ್ದಾನೆ. ಇಳೆ, ಬೆಳೆ, ಮಳೆ, ಗಾಳಿ, ಕಾಯ ಜೀವ ವಿತ್ತು ಬಿತ್ತು ಎಲ್ಲವೂ ಪರಶಿವನ ಅನುಗ್ರಹದಿಂದ ಬಂದವೆಂದು ಅರುಹಿದ್ದಾನೆ. 'ಕರ್ತೃ ಒಬ್ಬನೇ ಜಗಕೆಲ್ಲ ಮಾನವರೆಲ್ಲರೂ ಆತನ ಮಕ್ಕಳು' ಎಂಬ ಏಕನಿಷ್ಠೆಯನ್ನು ಐಕ್ಯಭಾವವನ್ನು ಎಲ್ಲರಲ್ಲಿ ಮೊಳಗಿಸಿದ್ದಾನೆ. ಎಡರು ತೊಡರು ಬಂದಾಗ ಮೃಡನನ್ನು ನೆನೆದು ತೊಡರು ಬಂದಾಗ ಮೃಡನನ್ನು ನೆನೆದು ತೊಡರು ತೊಲಗಿದಾಗ ಮೃಡನನ್ನು ಮರೆವುದು ಅನುಚಿತವೆಂದು, ಇಲ್ಲವೆ ಕೊನೆಯ ವರೆಗೂ ಕೊನೆಯ ದಿನಗಳಲ್ಲಿ ದುರ್ಮಾರ್ಗಿಯಾಗಿ ಬಾಳುವುದು ಅನ್ಯಾಯವೆಂದು ಎಚ್ಚರಿಸಿದ್ದಾನೆ. ಸ್ವಾರ್ಥಿಯಾಗಿ ಧನಧಾನ್ಯಗಳನ್ನು ಸಂಗ್ರಹಿ

ಸಿಡುವುದು ಉಚಿತವಲ್ಲ. ಪರರು ಪಾಪಿಗಳು ಸಂಕಟದಲ್ಲಿರುವುದನ್ನು ಸಹಿಸಲಾಗದು. ಅದು ಸಂಕುಚಿತ ವೃತ್ತಿ, ಅದು ತನ್ನ ಸಂಕೋಲೆಯ ಪ್ರವೃತ್ತಿ ಎಂದು ಘೋಷಿಸಿದ್ದಾನೆ. ಮನದಲ್ಲಿ ಧೃಡವಿಲ್ಲದೆ ಮಾತ್ರೋಚ್ಚರನ್ನು ಕಂಡು ಕನಿಕರದೋರದೆ, ಎಷ್ಟು ತೀರ್ಥ ಕ್ಷೇತ್ರಗಳನ್ನು ತಿರುಗಿ ಬಂದರೂ ಪುಣ್ಯವಿಲ್ಲ. ಪುರುಷಾರ್ಥವಿಲ್ಲ.

ಮಾರಿ ಮಸಣಿಗಳನ್ನು ಪೂಜಿಸುವದು ಕುರಿ ಕೋಣಗಳನ್ನು ಕೊಲ್ಲುವದು ಜೀವ ನಿಷ್ಠೆಗೆ ಜೀವಕಾರುಣ್ಯಕ್ಕೆ ಹೊರಗು. ಅಂಥವರು ಕರ್ಮ ಪಂಕದಲ್ಲಿ ಬೀಳುವರು ಕ್ರೂರ ಶಿಕ್ಷೆಗೆ ಗುರಿಯಾಗುವುರು. ಎಲ್ಲರ ಪ್ರಾಣಗಳೂ ಒಂದೇ. ಎಲ್ಲರಿಗೂ ಸುಖಸ್ವಾತಂತ್ರ್ಯಗಳು ಬೇಕು. ಪ್ರತಿಯೊಬ್ಬನು ಪಂಚೇಂದ್ರಿಯಗಳನ್ನು ಪವಿತ್ರಗೊಳಿಸಬೇಕು. ಮನಸ್ಸಿನಲ್ಲಿ ಸಂದೇಹ ಮಾಡಬಾರದು. ವಿಚಾರವಿಲ್ಲದೆ ಆಚಾರವಂತರಾಗಬಾರದು. ಪೂರ್ವ ವಾಸನೆ ತ್ಯಜಿಸದೆ ಉತ್ತರ ಮಾರ್ಗಕ್ಕೆ ಹೋಗಬಾರದು. ಜಾತಿ ಬಂಧುತ್ವಕ್ಕಿಂತ ಜಗದ್ಬಂಧುವಾಗಿ ಬಾಳು. ಪ್ರಾಣಹಂಗಿಗಿಂತ ಮಾನಹಂಗಿಗನಾಗು. ಜನನ ಮರಣಗಳ ಚಿಂತೆಯನ್ನು ಬಿಡು. ಮನಮುಟ್ಟಿ ದೇವರ ಸೇವೆ ಮಾಡು. ಭಾಗ್ಯವುಂಟೆಂದು ಅತಿ ಭೋಗಕ್ಕೆ ಒಳಗಾಗಬೇಡ. ಮಿತಭೋಗಿಯಾಗು ಅಹಿತತ್ಯಾಗಿಯಾಗು. ಕಣ್ಣುಂಟೆಂದು ಕಂಡವರ ಹೆಂಡಂದಿರನ್ನು ಕಾಣದಿರು. ಬರಿಯ ವೇಷಹಾಕಿಕೊಂಡು ಜಗವ ಮೋಸಗೊಳಿಸಬೇಡ. ಜೀವ ಭಾವವನ್ನು ಬಿಡು. ಹೇಯ ಭಾವವನ್ನು ತೊಡು ಎಂದು ಮುಂತಾದ ಸೂಳ್ನುಡಿಗಳನ್ನು ತಾನು ಮೊದಲು ಆಚರಿಸಿ ಆಮೇಲೆ ಇತರರಿಗೆ ಬೋಧಿಸಿದ್ದಾನೆ. ಇದಕ್ಕಿಂತಲೂ ಹೆಚ್ಚಿನ ಆದರ್ಶ ಜೀವನವು ಬೇಕೇ?

— ಸಾವಧಾನ ಪತ್ರಿಕೆಯಿಂದ.

---

# ಸ್ತ್ರೀಯರೂ ವಚನಕಾರರೂ.

(ಲೇಖಕರು:— ಮ. ಮಲ್ಲಪ್ಪ ಜ್ಞಾನಮಂದಿರ, ಹಲಗೂರು.)

ವಚನ ಧರ್ಮದಲ್ಲಿ ಸ್ತ್ರೀಯರಿಗೆ ಪುರುಷರಂತೆಯೇ ಸಂಸಮಾನವಾದ ಹಕ್ಕುಗಳೂ, ಗೌರವವೂ ಉಂಟು.........ಆ ಶಿವಶರಣೆಯರ ಜ್ಞಾನ, ಸಂಸ್ಕೃತಿ ಸೌಜನ್ಯ ಮೊದಲಾದುದನ್ನು ನೋಡಿದರೆ ನಮ್ಮ ಮನಸ್ಸು ವೇದೋಪನಿಷತ್ತುಗಳ ಕಾಲಕ್ಕೆ ಹೋಗುತ್ತದೆ. ಶಾಂಡಿಲಿ, ಮೈತ್ರೇಯಿ ದೊದಲಾದವರ ಜ್ಞಾಪಕ ಬರುತ್ತದೆ. — ಎಂ. ಆರ್. ಶ್ರೀನಿವಾಸಮೂರ್ತಿ

ಬಾಲ್ಯದಲ್ಲಿ ತಂದೆ ತಾಯಿಗಳೂ, ತಾರುಣ್ಯದಲ್ಲಿ ಪತಿಯೂ, ವಾರ್ಧಕ್ಯದಲ್ಲಿ ಮಕ್ಕಳೂ ಮಹಿಳೆಯರ ರಕ್ಷಕರಂತೆ ಮನುವಿನ ಅಭಿಪ್ರಾಯದಲ್ಲಿ; ಲತೆಯೂ, ಹೆಂಗಸೂ ಪರಾವಲಂಬಿಯಂತೆ ಆರ್ಯೋಕ್ತಿಯ ದೃಷ್ಟಿಯಲ್ಲಿ. ಹೆಂಗಸಿನ ಬುದ್ಧಿ ಮೊಣಕಾಲಿನಿಂದೀಚೆಗೆ ರೂಢಿಯ ಸಂತೆಯಲ್ಲಿ. ಈ ಬಗೆಯಾಗಿ ಬಹಳ ಕಾಲದಿಂದ ಅನೇಕಾವಸ್ಥೆಗಳಿಗೆ ಗುರಿಯಾಗಿ, ಹೆಂಗಸಿನ ಸ್ಥಾನವು ಅಡಿಗೆ ಮನೆಯಲ್ಲಿಯೇ ಪರ್ಯಾವಸಾನವಾಗಬೇಕೆಂಬ ಪ್ರಚಾರಪಾತಕರ ಬಂಧನಕ್ಕೆ ಮಹಿಳೆಯರು ಸಿಕ್ಕಿಬಿದ್ದಿದ್ದರು. ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ಎಂದು ಮನುಮಹಾರಾಜನು ಘಂಟಾಘೋಷವಾಗಿ ಸಾರಿಬಿಟ್ಟನು. ಈ ದಳ್ಳುರಿಗೆ ಸಿಕ್ಕಿ ನೊಂದ ಕಾರಣವೋ ಏನೋ ಎಂಬಂತೆ ಇಪ್ಪತ್ತನೆ ಶತಮಾನದಲ್ಲಿ ವಿಜಯಲಕ್ಷ್ಮಿ ಪಂಡಿತ, ಅಮೃತಕೌರ, ಸರೋಜಿನಿ ನಾಯ್ಡು ಇತ್ಯಾದಿ ಮಹಿಳೆಯರೂ, ಹತ್ತೊಂಬತ್ತನೆ ಶತಮಾನದಲ್ಲಿ ಪ್ರ್ಯಾಂಕ ಹಸ್ಟ್, ಅನಿಬಿಸೆಂಟ್, ಮಾರಿಸ್ಟೋಪ್ಸ್ ಮೊದಲಾದ ಮಾನಿನಿಯರೂ ಸ್ತ್ರೀಮುಕ್ತಿ ಚಳುವಳಿಯನ್ನು ಪಟುತರವಾಗಿ ನಡೆಸಿದರು. ಇದರಿಂದ ಸಮಾಜದಲ್ಲಿ ಅಷ್ಟಿಷ್ಟಾದರೂ ಯೋಗ್ಯ ಸ್ಥಾನವನ್ನು ಹೆಂಗಸರು ಪಡೆಯುವಂತಾಯಿತು. ಮೊಳೆಯಿಲ್ಲದೆ ಬೆಳೆಯು ಬರಲು ಸಾಧ್ಯವೇ ? ಎಂದೋ ಯಾರು ಮೊಳಕೆ ಹಾಕಿದ್ದರೋ ಏನೋ ? ಮೊಳಕೆಯ ಮಾನ ಅರಿವಾಯಿತೋ ಏನೋ ? ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿಯೂ ಎಚ್ಚರವಾದ ಶಿವಶರಣರು ಅರ್ಥಾತ್ ವಚನಕಾರರು ತಮ್ಮ ಜ್ಞಾನಪ್ರಯೋಗ ಮಂದಿರವಾದ ಅನುಭವ ಮಂಟಪದಲ್ಲಿಯೇ ಇದನ್ನು ಆಚರಣೆಗೆ ತಂದು ಕೀರ್ತಿ ಜ್ಯೋತಿಗಳಾಗಿದ್ದಾರೆ.

ವಚನಕಾರರ ಪೂರ್ವದಲ್ಲಿ ಹೆಂಗಸರಿಗೆ ಎಳ್ಳಷ್ಟಾದರೂ ಸ್ವಾತಂತ್ರ್ಯ ವಿರಲಿಲ್ಲ. ಶಾಸ್ತ್ರದ ಆಧಾರ, ರೂಡಿಯ ಬೆಂಬಲಕ್ಕೆ ಸಿಕ್ಕಿ ಸೀರುಂಡೆಯಾಗಿ ಹೋಗಿಬಿಟ್ಟಿದ್ದಳು. ಸ್ತ್ರೀಯು ಶೂದ್ರಳಾಗಿಯೇ ಉಳಿದು ಎಲ್ಲದಕ್ಕೂ ಹೊರಗಾಗಿ ನಿಂತಳು. ಇಷ್ಟೇ ಅಲ್ಲದೆ ಸ್ತ್ರೀಯು ಪುರುಷನ ಉಪಭೋಗ ವಸ್ತುವಾಗಿಯೇ ಉಳಿದಳು. ಇದೆಲ್ಲವೂ ವಚನಕಾರರಿಗೆ ತೀಯದೆ ಇರಲಿಲ್ಲ. ಸರಿಸಮಾನವಾದ, ಉನ್ನತವಾದ ಸ್ಥಾನವನ್ನು ವಚನಕಾರರು ಹೆಂಗಸರಿಗೆ ಕೊಟ್ಟಿರುವುದು ವಚನಶಾಸ್ತ್ರದಿಂದ ತಿಳಿಯ ಬರುತ್ತದೆ. ವಚನಕಾರ್ತಿಯರ ಅರಿವು, ಆಚಾರ, ವಿನಯ, ವಿವೇಕಾದಿ ಸದ್ಗುಣ ಸಂಸ್ಕೃತಿಯು ವೇದೋಪನಿಷದ್ದರ್ಶನಕಾರ್ತಿಯರನ್ನು ನೆನಪಿಗೆ ತರುತ್ತದೆ. ಋಜುವಾದ ಮಾನವೀ ಗುಣವನ್ನು ಎತ್ತಿ ಹಿಡಿದು ಹಿರಿದು ಕಿರಿದು, ದೊಡ್ಡದು ಚಿಕ್ಕದು, ಶ್ರೇಷ್ಠ ಗರಿಷ್ಠ ಎಂಬುದನ್ನು ತೊಟ್ಟಿ ತೊಡೆಯಲು ವಚನಕಾರರು ಕೈಹಾಕಿ ಕಾರ್ಯ ಶೀಲರಾದರು. ವಚನಕಾರರಿಂದ ಸ್ತ್ರೀಯರ ಬಂಧನವು ಹರಿಯಿತು. ಸ್ತ್ರೀಯು ಸ್ವಾತಂತ್ರ್ಯಕ್ಕೆ ಅಯೋಗ್ಯಳೆಂದೂ, ವಿಚಾರಹೀನಳೆಂದೂ, ಸತತವೂ ಯಾರಾದರೊಬ್ಬರ ಆಶ್ರಿತಳೆಂದೂ ಗಣಿಸಲ್ಪಟ್ಟಿದ್ದ ಹೆಂಗಸಿಗೆ ಸರಿಸಮಾನವಾದ ಸ್ಥಾನವನ್ನು ಮಾತ್ರವಲ್ಲ, ಅನುಭವ ಮಂಟಪದಲ್ಲಿ ಅಗ್ರ ಸ್ಥಾನವನ್ನು ಕೊಟ್ಟಿ ಸುವರ್ಣ ಸಂಗತಿಯು ವಚನಶಾಸ್ತ್ರದಿಂದ ತಿಳಿಯುಬರುತ್ತದೆ.

ಅಕ್ಕ ಮಹಾದೇವಿಯಕ್ಕನಂತಹ ಜೀವನ್ಮುಕ್ತೆಗೆ ಮಹತ್ವತರ ಮನ್ನಣೆ ಯಿದ್ದುದೇ ವಚನಕಾರರ ಜಗತ್ತಿನಲ್ಲಿ ಸ್ತ್ರೀಯರಿಗೆ ವಿಶಾಲ ವಿರಳ ಜಾಗ ವಿದ್ದುದು ತಿಳಿಯುಬರುತ್ತದೆ. ಈಕೆಯ ಜೀವನ ಚರಿತ್ರೆಯು ಸ್ತ್ರೀ ಹಕ್ಕು ಸಾಧನೆಯ ಹಾಗೂ ಸಿದ್ಧಿಯ ಘನ ಅಧ್ಯಾಯವೆಂದರೆ ತಪ್ಪೇನಾಗಲಾರದು. ಮಹಾ ಭಕ್ತೆ, ಹಿರಿಯ ಸಾಧನ ನಿರತೆ ಈಕೆಯು. ಕಲ್ಯಾಣವು ಶರಣ ಶರಣೆಯರಿಂದ ತುಂಬಿದ ಕೈಲಾಸದಂತೆ ಮೆರೆಯುತೊಡಗಿತು. ಅನುಭವ ಮಂಟಪಕ್ಕೆ ಅಕ್ಕನ ಪ್ರವೇಶ.

"ಭವಿಯ ಸೋಂಕದೆ ಅಂಗ ಸಂಗಮಂ ತೊರೆದು, ಲಿಂಗ ಸಂಗದೊಳು ಅವಿರಳ ಸಂಗಿಯಾಗಿ, ತನ್ನ ದಿವ್ಯ ರೂಪ ಲಾವಣ್ಯವನೆಡೆಗೊಂಡು, ಷೋಡಶ ಪ್ರಾಯದ ಯೌವನದ ಸುಖದ ಸುಗ್ಗಿ ಶಿವನೋಳ್ಪರವಶವನ್ನೈದಿ ಸರ್ವ ಕರಣಂಗಳ ಅರುವಿಂಗಾಹುತಿಯನಿಕ್ಕಿ ದಿಗಂಬರದುಡಿಗೆಯನುಟ್ಟು ತನ್ನ ಕೇಶ ವೆಂಬ ಅಂಬರವ ಮುಸುಕಿಟ್ಟು ಲೌಕಿಕ ಲಜ್ಜಾ ಭಾರವುಂ ತೊರೆದು ಚನ್ನ ಮಲ್ಲಿಕಾರ್ಜುನನ ವಿರಳಾವಸ್ಥೆಯೊಳ್ ತನ್ನ ಮರೆದು."

ಇಂತು ಬಂದಾಕೆಯನ್ನು ಬಗೆಬಗೆಯಿಂದ ಪರೀಕ್ಷಿಸಿದವರಿಗೆ ಸಮಂಜಸ ಉತ್ತರವನ್ನು ಅಕ್ಕ ಮಹಾದೇವಿಯು ಕೊಡುತ್ತಾಳೆ.

"ಭಾವ ಶುದ್ಧವಾದಲ್ಲಿ ಸೀರೆಯನಳಿದು ಕೂದಲ ಮರೆಮಾಡಲೇತಕ್ಕೆ?" ಈ ಪ್ರಶ್ನೆಗೆ ಉತ್ತರ ಇಂತು ಕೊಡುತ್ತಾಳೆ.

"ಫಲಪಕ್ವವಾದಲ್ಲದೆ ಹೊರಗಣ ಸಿಪ್ಪೆ ಕೆಡದು. ಕಾಮನ ಮುದ್ರೆಯಂ ಕಂಡು ನಿಮಗೆ ನೋವಾದಿತ್ತೆಂದಾ ಭಾವದಿಂದೆ ಮುಚ್ಚಿದೆ."

ಆಕೆಯ ಒಳ್ಳೆಯ ಆದರ್ಶವು ಜ್ಞಾನ ಭಕ್ತಿ ವೈರಾಗ್ಯಗಳ ಸ್ವರೂಪವನ್ನು ತಿಳಿಸುವದಕ್ಕಾಗಿ ಇದೆ. ಎಲ್ಲರಿಗಿಂತಲೂ ಹೆಚ್ಚಾಗಿ ಬಸವಣ್ಣನವರಿಗೆ ಆಕೆಯು ಮೆಚ್ಚಿಕೆಯಾದಳು. ಚೆನ್ನಮಲ್ಲಿಕಾರ್ಜುನನನ್ನು ಸಾಕಾರವಾಗಿ ಕಾಣಬೇಕೆಂದು ಆಕೆಯು ಹಂಬಲಿಸುತ್ತಿರುವುದನ್ನು ನೋಡಿ ಮನ ಕರಗಿದ ಬಸವಣ್ಣನವರು ಇಷ್ಟಲಿಂಗವನ್ನು ಕೊಟ್ಟು ಗುರುವಾಗಿದ್ದಾರೆ. ಅನುಭವ ಮಂಟಪದಲ್ಲಿ ಅನುವರಿತು ಆಚರಿಸಿ, ಲಿಂಗಾನಂದಿಯಾಗಿ ಚನ್ನಮಲ್ಲಿಕಾರ್ಜುನನಲ್ಲಿ ರತಿಸುಖವನು ಬಯಸಲು ಕಾತುರಳಾಗಿ ಕಾಲ ಕಳೆಯುತ್ತ ಶರಣ ಶರಣೆಯರ ಸಂದೇಹ ನಿವೃತ್ತಿ ಮಾಡುತ್ತಿದ್ದಾಳೆ ಸಂಸಾರತ್ಯಾಗಿಯಾಗಿ ವಿರಕ್ತಳಾಗಿ, ಜ್ಞಾನದಾಹಿಯಾಗಿ, ಭಕ್ತಿಮೂರ್ತಿಯಾಗಿ ಬೆಳೆದ ಅಕ್ಕನ ಹಿರಿಮೆಯನ್ನು ಪ್ರಭುದೇವರು ವರ್ಣಿಸಿದ್ದಾರೆ.

ತನುಗುಣನಾಸ್ತಿಯಾಗಿ ಲಿಂಗಸಂಗಿಯಾದಳು.
ಮನ ಗುಣ ನಾಸ್ತಿಯಾಗಿ ಅರಿವುಸಂಗಿಯಾದಳು.
ಭಾವ ಗುಣ ನಾಸ್ತಿಯಾಗಿ ಮಹಾ ಪ್ರಭೆ ತಾನಾದಳು.
ತಾನಿದಿರೆಂಬೆರಡಳಿದು ನಮ್ಮ ಗುಹೇಶ್ವರ ಲಿಂಗದಲ್ಲಿ
ಸ್ವಯಲಿಂಗವಾದ ಮಹಾದೇವಿಯಕ್ಕಂಗಳ ನಿಲುವಿಂಗೆ
ಶರಣೆನುತಿರ್ದೆನು.

ಎಲ್ಲರಲ್ಲಿಯೂ ಒಂದಾಗಿ, ಎಲ್ಲರಿಗೂ ಸೇರಿದವಳಾಗಿ, ಎಲ್ಲರಲ್ಲಿಯೂ ಒಂದೊಂದನ್ನು ಕಲಿತು ಅಕ್ಕನು ಅನುಭಾವಿಯಾದಳು. ಬರುಬರುತ್ತ ಚೆನ್ನಮಲ್ಲಿಕಾರ್ಜುನನ ಹುಚ್ಚು ನೆತ್ತಿಗೇರಲು, ಗುರುಬಸವಣ್ಣನ ಅಪ್ಪಣೆವಿಡಿದು ಕಲ್ಯಾಣವಂ ಬಿಟ್ಟು ಶ್ರೀಶೈಲವಂ ಸೇರಿ ಕದಳೀ ವನದಲ್ಲಿ ಬಯಲಾಗಿ ದಿವ್ಯಜ್ಯೋತಿಯಾಗಿ ಮೆರೆದಳು.

ವಚನಕಾರರ ಪೂರ್ವದಲ್ಲಿ ಹೆಂಗಸರಿಗೆ ಎಳ್ಳಷ್ಟಾದರೂ ಸ್ವಾತಂತ್ರ್ಯ ವಿರಲಿಲ್ಲ. ಶಾಸ್ತ್ರದ ಆಧಾರ, ರೂಢಿಯ ಬೆಂಬಲಕ್ಕೆ ಸಿಕ್ಕಿ ಸೀರುಂಡೆಯಾಗಿ ಹೋಗಿಬಿಟ್ಟಿದ್ದಳು. ಸ್ತ್ರೀಯು ಶೂದ್ರಳಾಗಿಯೇ ಉಳಿದು ಎಲ್ಲದಕ್ಕೂ ಹೊರಗಾಗಿ ನಿಂತಳು. ಇಷ್ಟೇ ಅಲ್ಲದೆ ಸ್ತ್ರೀಯು ಪುರುಷನ ಉಪಭೋಗ ವಸ್ತುವಾಗಿಯೇ ಉಳಿದಳು. ಇದೆಲ್ಲವೂ ವಚನಕಾರರಿಗೆ ತೀಯದೆ ಇರಲಿಲ್ಲ. ಸರಿಸಮಾನವಾದ ಉನ್ನತವಾದ ಸ್ಥಾನವನ್ನು ವಚನಕಾರರು ಹೆಂಗಸರಿಗೆ ಕೊಟ್ಟಿರುವುದು ವಚನಶಾಸ್ತ್ರದಿಂದ ತಿಳಿಯು ಬರುತ್ತದೆ. ವಚನಕಾರ್ತಿಯರ ಅರಿವು, ಆಚಾರ, ವಿನಯ, ವಿವೇಕಾದಿ ಸದ್ಗುಣ ಸಂಸ್ಕೃತಿಯು ವೇದೋಪನಿಷದ್ದರ್ಶನಕಾರ್ತಿಯರನ್ನು ನೆನಪಿಗೆ ತರುತ್ತದೆ. ಋಜುವಾದ ಮಾನವೀ ಗುಣವನ್ನು ಎತ್ತಿ ಹಿಡಿದು ಹಿರಿದು ಕಿರಿದು, ದೊಡ್ಡದು ಚಿಕ್ಕದು, ಶ್ರೇಷ್ಠ ಗರಿಷ್ಠ ಎಂಬುದನ್ನು ತೊಟ್ಟೆ ತೊಡೆಯಲು ವಚನಕಾರರು ಕೈಹಾಕಿ ಕಾರ್ಯಶೀಲರಾದರು. ವಚನಕಾರರಿಂದ ಸ್ತ್ರೀಯರ ಬಂಧನವು ಹರಿಯಿತು. ಸ್ತ್ರೀಯು ಸ್ವಾತಂತ್ರ್ಯಕ್ಕೆ ಅಯೋಗ್ಯಳೆಂದೂ, ವಿಚಾರಹೀನಳೆಂದೂ, ಸತತವೂ ಯಾರಾದರೊಬ್ಬರ ಆಶ್ರಿತಳೆಂದೂ ಗಣಿಸಲ್ಪಟ್ಟಿದ ಹೆಂಗಸಿಗೆ ಸರಿಸಮಾನವಾದ ಸ್ಥಾನವನ್ನು ಮಾತ್ರವಲ್ಲ, ಅನುಭವ ಮಂಟಪದಲ್ಲಿ ಅಗ್ರ ಸ್ಥಾನತನ್ನು ಕೊಟ್ಟ ಸುವರ್ಣ ಸಂಗತಿಯು ವಚನಶಾಸ್ತ್ರದಿಂದ ತಿಳಿಯುಬರುತ್ತದೆ.

ಅಕ್ಕ ಮಹಾದೇವಿಯಕ್ಕನಂತಹ ಜೀವನ್ಮುಕ್ತೆಗೆ ಮಹತ್ವತರ ಮನ್ನಣೆ ಯಿದ್ದುದೇ ವಚನಕಾರರ ಜಗತ್ತಿನಲ್ಲಿ ಸ್ತ್ರೀಯರಿಗೆ ವಿಶಾಲ ವಿರಳ ಜಾಗ ವಿದ್ದುದು ತಿಳಿಯುಬರುತ್ತದೆ. ಈಕೆಯ ಜೀವನ ಚರಿತ್ರೆಯು ಸ್ತ್ರೀ ಹಕ್ಕು ಸಾಧನೆಯು ಹಾಗೂ ಸಿದ್ಧಿಯ ಘನ ಅಧ್ಯಾಯವೆಂದರೆ ತಪ್ಪೇನಾಗಲಾರದು. ಮಹಾ ಭಕ್ತಿ, ಹಿರಿಯ ಸಾಧನ ನಿರತೆ ಈಕೆಯು. ಕಲ್ಯಾಣವು ಶರಣ ಶರಣೆಯರಿಂದ ತುಂಬಿದ ಕೈಲಾಸದಂತೆ ಮೆರೆಯುತೊಡಗಿತು. ಅನುಭವ ಮಂಟಪಕ್ಕೆ ಅಕ್ಕನ ಪ್ರವೇಶ.

"ಭವಿಯ ಸೋಂಕದೆ ಅಂಗ ಸಂಗಮಂ ತೊರೆದು, ಲಿಂಗ ಸಂಗದೊಳು ಅವಿರಳ ಸಂಗಿಯಾಗಿ, ತನ್ನ ದಿವ್ಯ ರೂಪ ಲಾವಣ್ಯವನೆಡೆಗೊಂಡು, ಷೋಡಶ ಪ್ರಾಯದ ಯೌವನದ ಸುಖದ ಸುಗ್ಗಿ ಶಿವನೋಳ್ಪರವಶವನ್ನೈದಿ ಸರ್ವ ಕರಣಂಗಳ ಅರುವಿಂಗಾಹುತಿಯನಿಕ್ಕಿ ದಿಗಂಬರದುಡಗೆಯನುಟ್ಟು ತನ್ನ ಕೇಶವೆಂಬ ಅಂಬರವ ಮುಸುಕಿಟ್ಟು ಲೌಕಿಕ ಲಜ್ಜಾಭಾರವುಂ ತೊರೆದು ಚನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯೊಳ್ ತನ್ನ ಮರೆದು."

ಇಂತು ಬಂದಾಕೆಯನ್ನು ಬಗೆಬಗೆಯಿಂದ ಪರೀಕ್ಷಿಸಿದವರಿಗೆ ಸಮಂಜಸ ಉತ್ತರವನ್ನು ಅಕ್ಕ ಮಹಾದೇವಿಯು ಕೊಡುತ್ತಾಳೆ.

"ಭಾವ ಶುದ್ಧವಾದಲ್ಲಿ ಸೀರೆಯನಳಿದು ಕೂದಲ ಮರೆಮಾಡಲೇತಕ್ಕೆ?" ಈ ಪ್ರಶ್ನೆಗೆ ಉತ್ತರ ಇಂತು ಕೊಡುತ್ತಾಳೆ.

"ಫಲಪಕ್ವವಾದಲ್ಲದೆ ಹೊರಗಣ ಸಿಪ್ಪೆ ಕೆಡದು. ಕಾಮನ ಮುದ್ರೆಯಂ ಕಂಡು ನಿಮಗೆ ನೋವಾದಿತ್ತೆಂದಾ ಭಾವದಿಂದೆ ಮುಚ್ಚಿದೆ."

ಆಕೆಯ ಒಳ್ಳೆಯ ಆದರ್ಶವು ಜ್ಞಾನ ಭಕ್ತಿ ವೈರಾಗ್ಯಗಳ ಸ್ವರೂಪವನ್ನು ತಿಳಿಸುವದಕ್ಕಾಗಿ ಇದೆ. ಎಲ್ಲರಿಗಿಂತಲೂ ಹೆಚ್ಚಾಗಿ ಬಸವಣ್ಣನವರಿಗೆ ಆಕೆಯು ಮೆಚ್ಚಿಕೆಯಾದಳು. ಚೆನ್ನಮಲ್ಲಿಕಾರ್ಜುನನನ್ನು ಸಾಕಾರವಾಗಿ ಕಾಣಬೇಕೆಂದು ಆಕೆಯು ಹಂಬಲಿಸುತ್ತಿರುವುದನ್ನು ನೋಡಿ ಮನ ಕರಗಿದ ಬಸವಣ್ಣನವರು ಇಷ್ಟಲಿಂಗವನ್ನು ಕೊಟ್ಟು ಗುರುವಾಗಿದ್ದಾರೆ. ಅನುಭವ ಮಂಟಪದಲ್ಲಿ ಅನುವರಿತು ಆಚರಿಸಿ, ಲಿಂಗಾನಂದಿಯಾಗಿ ಚನ್ನಮಲ್ಲಿಕಾರ್ಜುನನಲ್ಲಿ ರತಿಸುಖವನು ಬಯಸಲು ಕಾತುರಳಾಗಿ ಕಾಲ ಕಳೆಯುತ್ತ ಶರಣಶರಣೆಯರ ಸಂದೇಹ ನಿವೃತ್ತಿ ಮಾಡುತ್ತಿದ್ದಾಳೆ ಸಂಸಾರತ್ಯಾಗಿಯಾಗಿ ವಿರಕ್ತಳಾಗಿ, ಜ್ಞಾನದಾಹಿಯಾಗಿ, ಭಕ್ತಿಮೂರ್ತಿಯಾಗಿ ಬೆಳೆದ ಅಕ್ಕನ ಹಿರಿಮೆಯನ್ನು ಪ್ರಭುದೇವರು ವರ್ಣಿಸಿದ್ದಾರೆ.

ತನುಗುಣನಾಸ್ತಿಯಾಗಿ ಲಿಂಗಸಂಗಿಯಾದಳು.
ಮನ ಗುಣ ನಾಸ್ತಿಯಾಗಿ ಅರಿವುಸಂಗಿಯಾದಳು.
ಭಾವ ಗುಣ ನಾಸ್ತಿಯಾಗಿ ಮಹಾ ಪ್ರಭೆ ತಾನಾದಳು.
ತಾನಿದಿರೆಂಬೆರಡಳಿದು ನಮ್ಮ ಗುಹೇಶ್ವರ ಲಿಂಗದಲ್ಲಿ
ಸ್ವಯಲಿಂಗವಾದ ಮಹಾದೇವಿಯಕ್ಕಂಗಳ ನಿಲುವಿಂಗೆ
ಶರಣೆನುತಿರ್ದೆನು.

ಎಲ್ಲರಲ್ಲಿಯೂ ಒಂದಾಗಿ, ಎಲ್ಲರಿಗೂ ಸೇರಿದವಳಾಗಿ, ಎಲ್ಲರಲ್ಲಿಯೂ ಒಂದೊಂದನ್ನು ಕಲಿತು ಅಕ್ಕನು ಅನುಭಾವಿಯಾದಳು. ಬರುಬರುತ್ತ ಚೆನ್ನಮಲ್ಲಿಕಾರ್ಜುನನ ಹುಚ್ಚು ನೆತ್ತಿಗೇರಲು, ಗುರುಬಸವಣ್ಣನ ಅಪ್ಪಣೆಪಿಡಿದು ಕಲ್ಯಾಣವಂ ಬಿಟ್ಟು ಶ್ರೀಶೈಲವಂ ಸೇರಿ ಕದಳೀ ವನದಲ್ಲಿ ಬಯಲಾಗಿ ದಿವ್ಯಜ್ಯೋತಿಯಾಗಿ ಮೆರೆದಳು.

ವೀರವಿರಾಗಿಣಿ ಅಕ್ಕನಂತಹ ಶಿವಶರಣೆಯು ನಾಮ ಮಾತ್ರವಾದ ತನ್ನ ಲೈಂಗಿಕ ದೌರ್ಬಲ್ಯವನ್ನು ನೀಗಿ ತನ್ನ ವೈರಾಗ್ಯ 'ಗಂಡ ಸುತನ' ವನ್ನು ಸಾರಿದಳು ವಚನಕಾರರ ಕ್ರಾಂತಿಕಹಳಾನಾದವಂ ಕೇಳಿ ಅಸಂಖ್ಯಾತ ಶಿವಶರಣೆಯರು ಕರ್ನಾಟಕದಲ್ಲಿ ಉದಯಿಸಿ ವಚನದ ಹೊನಲನ್ನು ಹರಿ ಯಿಸಿದರು. ವ್ಯವಹಾರದಲ್ಲಿ ಮಾತ್ರವಲ್ಲದೆ ಅಧ್ಯಾತ್ಮಿಕ ಕಾರ್ಯದಲ್ಲಿಯೂ ಕೂಡ ಹೆಂಗಸು ಗಂಡಸಿನ ಅರ್ಧಾಂಗಿನಿ ಎಂಬುದನ್ನು ಪ್ರತ್ಯಕ್ಷವಾಗಿ ನಿದ ರ್ಶಿಸಿದರು.

ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ;
ಸತಿಪತಿಗಳೊಂದಾಗದ ಭಕ್ತಿ,
ಅಮೃತದೊಳು ವಿಷಬೆರೆಸಿದಂತೆ ಕಾಣಾ ರಾಮನಾಥಾ.

ಕಲ್ಯಾಣದ ಅನುಭವ ಮಂಟಪದ ವಿಷಯವನ್ನು ಕೇಳಿದ ದೊರೆಯು ತನ್ನ ಅರಸೊತ್ತಿಗೆಗೆ ತಿಲಾಂಜಲಿಯನ್ನೀಯಲು, ಪತಿಯ ಛಾಯೆ ಸತಿಯಾದ ರಾಣಿಯೂ ಕೂಡ ರಾಜನ ಜೊತೆಯಲ್ಲಿ ಕಲ್ಯಾಣದತ್ತ ಹೊರಟಳು. ಈ ರಾಜರಾಣಿಯರಿಬ್ಬರೂ ಮೋಳಿಗೆ ಮಾರಯ್ಯ ಮತ್ತು ಮಹದೇವಿ ಎಂಬ ಹೆಸರಿನ ದಂಪತಿಗಳಾಗಿ ರಕ್ತ ನೀಲವರ್ಣದ ಕುಸುಮದಂತೆ ಪ್ರಕಾಶಿಸು ತ್ತಿದ್ದರು. ವೀರಶೈವ ಮಹಿಳಾಮಣಿ ಮಾಲೆಯ ಚರಿತ್ರೆಯಲ್ಲಿ ಪರಸ್ಪರ ವಿರೋಧ ಸದ್ಗುಣಗಳಿಂದ ಕಂಗೊಳಿಸುತ್ತಿರುವ ಈ ರಾಣಿಯು ಒಕ್ಕಡೆ ಹೆಂಗಸರಲ್ಲಿ ವಿರಳವಾಗಿ ಕಾಣಬರುವ ನೈತಿಕ ನಿರ್ಭೀತಿಯಿಂದಲೂ, ಮತ್ತೊಂದು ಕಡೆ ಹೆಂಗಳೆಯರಿಗೆ ಒಪ್ಪುವ ಸೌಜನ್ಯದಿಂದಲೂ ಕೂಡಿದ್ದು ಶಿವಾನುಭವದ ವಿಷಯದಲ್ಲಿ ಗಂಡನಿಗೆ ಮಾರ್ಗದರ್ಶಿಯಾಗಿದ್ದಳು. ಶಿವಾ ನುಭವ ವಿಷಯದಲ್ಲಿ ಈಕೆಯು ತನ್ನ ಗಂಡನಲ್ಲಿ ಕಂಡುಬಂದ ಸೂಕ್ಷ್ಮ ತರ ಅಹಂಕಾರವನ್ನು ಸವಿನಯದಿಂದ ಖಂಡಿಸಿದಳು. ತಾನು ಲಿಂಗದಲ್ಲಿ ಐಕ್ಯನಾಗುವೆನೆಂದು ತನ್ನ ಹೆಂಡತಿಗೆ ಮಾರಯ್ಯನು ಹೇಳಲು, ಆಕೆಯು ಗಂಡನ ಅಜ್ಞಾನಕ್ಕೆ ವ್ಯಥೆಪಟ್ಟು, ತಾನು ಬೇರೆ ಲಿಂಗ ಬೇರೆ ಎಂಬ ಭಿನ್ನ ಭಾವದಿಂದ ವರ್ತಿಸುತ್ತಿರುವನಲ್ಲದೆ ತಾನೇ ಲಿಂಗವೆಂಬ ಏಕಾರ್ಥವು ಹುಟ್ಟ ಲಿಲ್ಲ ಎಂದು ಖೇದಗೊಂಡಳು. ಜ್ಞಾನಿಯಾದರೂ ಪಾತಿವ್ರತ್ಯಕ್ಕೆ ಅಲಂಕಾರ ವಾದ ಸೌಜನ್ಯಕ್ಕೆ ಪುಟವಿಡುವ ಉಭಯಾರ್ಥ ವಚನಗಳನ್ನು ಬಿನ್ನವಿಸಿ

ಕೊಂಡಳು. ತಿಳಿವಳಿಕೆಯನ್ನು ಕೊಡು, ನೀನು ಜ್ಞಾನಿಯಾದ ಕಾರಣ ಹೆಂಗಸೆಂದು ಉದಾಸೀನ ಮಾಡಬಾರದೆಂದ ಪತಿಗೆ ಸತಿಯು ಸವಿನಯ ಸದುತ್ತರವಿದು.

ಇಷ್ಟದಲ್ಲಿ ನೋಟ ಜ್ಞಾನದಲ್ಲಿ ಕೂಟ ಏಕಾರ್ಥವಾದಲ್ಲಿ ಕಾಯವೆಂಬ ಕದಳಿಯ ಬಿಟ್ಟುದು ಭಾವವೆಂಬ ಕುರುಹ ಮರೆದುದು. ಇಂತೀ ಉಭಯ ನಿರ್ಧಾರವಾದಲ್ಲಿ ಇಹಪರವೆಂಬ ಹೊಲಬುಗೆಟ್ಟಿತ್ತು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ಬಂದೆಂಬಲ್ಲಿ.

ದೇವರದಾಸಿಮಯ್ಯನೆಂಬ ಶರಣನೊಬ್ಬ, ಈತನಿಗೆ ದುಗ್ಗಳೆಯೆಂಬ ಹೆಂಡತಿಯು. ಒಮ್ಮೆ ಶಂಕರದಾಸಿಮಯ್ಯನು ಮುದನೂರಿಗೆ ಬಂದಾಗ ದೇವರ ದಾಸಿಮಯ್ಯನು ತಾನು ಅಹಂಕಾರದಿಂದ ಆತನ ಸಂಗಡ ವರ್ತಿಸಿ ಅಪ ರಾಧಿಯಾಗುತ್ತಾನೆ. ಇದನ್ನು ಕೇಳಿದ ಸತಿ ದುಗ್ಗಳೆಯು ಆ ಅಪರಾಧವು ಆರಿಹೋಗುವಂತೆ, ವರ್ತಿಸಿ, ಬಂದ ಶರಣನನ್ನು ಶಾಂತಿಪೂರಿತನಾಗುವ ವಂತೆ ಮಾಡುತ್ತಾಳೆ. ಬಸವೇಶ್ವರನೂ ಕೂಡ ಈಕೆಯ ವಿಚಾರದಲ್ಲಿ ಪೂಜ್ಯಭಾವವನ್ನು ತಾಳಿದ್ದಾನೆ.

ನೆರೆನಂಬೋ ನೆರೆನಂಬೋ ದಾಸದುಗ್ಗಳೆಯಂತೆ
ನೆರೆನಂಬೋ ನೆರೆನಂಬೋ ಸಿರಿಯಾಳ ಚಂಗಳೆಯಂತೆ
ನೆರೆನಂಬೋ ನೆರೆನಂಬೋ ಸಿಂಧುಬಲ್ಲಾಳನಂತೆ
ನಂಬಿದೆಯಾದರೆ ತನ್ನ ನೀವ ಕೂಡಲಸಂಗಮದೇವ.

ಬಸವಣ್ಣನವರು ಕೂಡಲಸಂಗಮಕ್ಷೇತ್ರಕ್ಕೆ ದುಃಖಭಾರದಿಂದ ಹೊರ ಟರು. ಮುದ್ದು ಮಡದಿ ನೀಲಾಂಬಿಕೆಯ ನೆನಪು ಬಂದಿತು. ತಾವು ಕೂಡಲ ಸಂಗಮನಲ್ಲಿ ಐಕ್ಯವಾಗುವುದರಿಂದ ಆಕೆಯೂ ಕೂಡ ಅಲ್ಲಿಗೆ ಬಂದು ಐಕ್ಯ ವಾಗಬೇಕೆಂದು ಮಡದಿಗೆ ಹೇಳಿ ಕಳುಹಿಸಿದರು. ಸುದ್ದಿಯನ್ನು ತಂದ ಅಪ್ಪಣ್ಣನ ಬಿನ್ನಪವನ್ನು ಕೇಳಿದ ನೀಲಾಂಬಿಕೆಯು ಇಂತು ನುಡಿದಳು.

ಅಲ್ಲಿಗೆ ಎನ್ನನು ಬರಹೇಳಿದರಂತೆ
ಇಲ್ಲಿ ತಾವಿಲ್ಲವೆ ಸಂಗಯ್ಯನು?

ಅಲ್ಲಿ ಇಲ್ಲಿ ಎಂಬ ಸಂದೇಹವು ಬಲ್ಲ ಮಹಾತ್ಮರಿಗಿದು ಗುಣವೇ? ನುಡಿದಳೋ ಇಲ್ಲವೋ ನಿಂತಲ್ಲಿಯೇ ಬಸವಣ್ಣನಿಗೆ ನೀಲಾಂಬಿಕೆಯು ಕರ

ವನ್ನು ಮುಗಿದು ತನ್ನ ಅಂಗೈಯುಲ್ಲಿಯು ಲಿಂಗದಲ್ಲಿಯೇ ಐಕ್ಯಳಾದಳು. ಮಹಾಪತಿವ್ರತೆಯೂ, ಹಿರಿಯಜ್ಞಾನಿಯೂ ಆದ ನೀಲಾಂಬಿಕೆಯು ಪತಿಗಿಂತಲೂ ಸ್ವಯಂಪ್ರಭಾಶಕ್ತಿಯಲ್ಲಿ ಒಂದು ಹೆಜ್ಜೆ ಮುಂದೆಹಾಕಿದ್ದಾಳೆ. ಮರುಳ ಹೆಂಗಸಿನ ಕೈಯ್ಯಲ್ಲಿ ಏನುಸಾಗುತ್ತದೆ ಎಂಬುವರು ಇತ್ತಕಡೆ ಗಮನ ಕೊಡಬೇಕಾಗಿದೆ.

ಹರಳಯ್ಯನೆಂಬಾತನು ಒಬ್ಬ ಶರಣನು. ತಾನು ಮಾಡಿದ ಅಪರಾಧ ಪರಿಹಾರಕ್ಕಾಗಿ ಈತನು ಬಸವಣ್ಣನಿಗೆ ತನ್ನ ತೊಡೆಯಲ್ಲಿ ಒಂದಷ್ಟು ಚರ್ಮವನ್ನು ಕೊಯ್ದು ಅದರಿಂದ ಪಾದರಕ್ಷೆ ಮಾಡಲು ಕೈಹಾಕಿದಾಗ ಈತನ ಹೆಂಡತಿಯೂ ಕೂಡ ಪತಿಯ ಕಾರ್ಯದಲ್ಲಿ ತಾನು ಭಾಗಿಯಾಗುವುದು ಮುಖ್ಯವಾದ ಕರ್ತವ್ಯವೆಂದು ಅರಿತು ತನ್ನ ತೊಡೆಯಲ್ಲಿಯೂ ಒಂದಷ್ಟು ಚರ್ಮವನ್ನು ಕೊಯ್ದು ಕೊಟ್ಟು ಸಾಹಸ ಕಾರ್ಯ ಮಾಡಿದಳು. ಇಂತು ಅನಂತಾನಂತವಾಗಿ ವಚನಕಾರರು ಹೆಂಗಸಿಗೆ ಸಮಸ್ಥಾನವನ್ನು ನೀಡಿದ್ದಾರೆ. ಅನೇಕ ಶರಣೆಯರು ಮಹಾಜ್ಞಾನಿಗಳಾಗಿ ಜಗತ್ತಿಗೆ ಧರ್ಮದ ಸಾರವನ್ನು ನೀಡಿರುವ ಪ್ರಸಂಗಗಳು ಹಲವಾರು ಇವೆ. ಹೆಂಗಸರಿಗೂ ದೀಕ್ಷೆ ಮತ್ತು ಷಟ್‌ಸ್ಥಲ ಮಾರ್ಗಗಳು ಉಂಟೆಂದು ಸಮಾನವಾದ ಅವಕಾಶವನ್ನು ಕಲ್ಪಿಸಿ ಕೊಟ್ಟಿದ್ದಾರೆ. ಶರಣನಿಗೆ ಏಕ ಜನ್ಮದಲ್ಲಿಯೇ ಮುಕ್ತಿಯು ಸಿಗಬೇಕಾದರೆ ದೀಕ್ಷೆ ಮತ್ತು ಷಟ್‌ಸ್ಥಲ ಸಾಧನೆಯೇ ರಾಜಮಾರ್ಗವಾಗಿದೆ. ಭವಿಯನ್ನು ಭಕ್ತನನ್ನಾಗಿ ಮಾಡಲು ಶರಣೆಯು ಯತ್ನಿಸಬೇಕು ಮತ್ತು ತನ್ನ ಅರ್ಚನೆ ಆರಾಧನೆ ಕಾರ್ಯಗಳಿಗೆ ಆತಂಕವಿಲ್ಲದಂತೆ ನೋಡಿಕೊಳ್ಳಬೇಕು. ಒಂದು ವೇಳೆ ಅದು ಸಾಧ್ಯವಾಗದಿದ್ದರೆ ಗಂಡನನ್ನು ತ್ಯಜಿಸಿ ಆತ್ಮಸಾರ್ಥಕವನ್ನು ಸಾಧಿಸಿಕೊಳ್ಳಬೇಕು, ಲಿಂಗದೇವನೇ ಗಂಡನು ಎಂದು ನಂಬಿ ವ್ರತಶೀಲಳಾಗಿರಬೇಕು. ಇಚ್ಛೆಪಟ್ಟರೆ ಮದುವೆಯಾಗದೆಯೇ ಶರಣಸತಿ ಲಿಂಗಪತಿ ಭಾವದಿಂದಲೇ ಇಡೀ ಜೀವನವನ್ನೇ ಕಳೆಯಲು ವೀರಶೈವ ಹೆಂಗಸಿಗೆ ಅಧಿಕಾರವುಂಟು. ಹೆಂಗಸಾಗಿ ಜನಿಸಿದ ಮಾತ್ರಕ್ಕೆ ಎಂತಹ ಗಂಡಸನ್ನಾದರೂ ಮದುವೆಯಾಗಲೇಬೇಕೆಂಬ ಬಲವಂತವೇನೂ ಇಲ್ಲವು. ಇಂದು ಹಬ್ಬಿರುವ ಸ್ತ್ರೀ ಸ್ವಾತಂತ್ರ್ಯದ ನಾಗರೀಕತೆಯು ಕ್ರಿ. ಶ. ೧೨ನೆ ಶತಮಾನದಲ್ಲಿಯೇ ಶಿವಶರಣರಿಂದ ಪ್ರಸಾರವಾಗಿತ್ತೆಂಬುದು ತಿಳಿದರೆ ವಚನಕಾರರ ಸಮತಾವಾದವು ಅರಿವ ಗುತ್ತದೆ.

ಪರಮಾರ್ಥದ ಸ್ವರೂಪವು ದಂಪತಿಗಳ ಅನ್ಯೋನ್ಯತೆಗೆ ಅಗತ್ಯವಾಗಿದೆಯಂತೆ. ಉಭಯ ದೃಷ್ಟಿಯಿಂದ ದೃಷ್ಟವ ಕಾಂಬಂತೆ. ದಂಪತಿ ಏಕಭಾವವಾಗಿ ನಿಂದಲ್ಲಿ ಗುಹೇಶ್ವರಲಿಂಗಸ್ಪರ್ಶತವು.

ಆಯ್ದಕ್ಕಿ ಮಾರಯ್ಯನೆಂಬ ಶಿವಶರಣನ ಕಾಯಕವು ತಂಡುಲವನ್ನು ಆರಿಸುವದಾಗಿತ್ತು. ದಿವಸವೊಂದರಲ್ಲಿ ಆತನು ಎಂದಿನಂತೆ ತರುವ ಪ್ರಮಾಣಕ್ಕಿಂತ ಇಮ್ಮಡಿಯಾಗಿ ಆರಿಸಿ ತರಲು, ಆತನ ಹೆಂಡತಿ ಲಕ್ಕಮ್ಮ ಈ ದುರಾಸೆಯನ್ನು ನೋಡಿ ಸಹಿಸದೆ ಶಾಂತ ರೀತಿಯಿಂದ ತಿಳಿವಳಿಕೆಯನ್ನು ನೀಡಿದಳು. ಹೆಚ್ಚಾಗಿ ತಂದುದನ್ನು ಅಲ್ಲಿಯೇ ಹೋಗಿ ಸುರಿದುಬರುವುದಲ್ಲದೆ ಪ್ರಭುದೇವ, ಬಸವಣ್ಣಾದಿ ಅಸಂಖ್ಯಾತ ಗಣಂಗಳಿಗೆ ಆರೋಗಣೆಗೆ ಬಿನ್ನಪವ ಮಾಡಿ ಬನ್ನಿರಿ ಎಂದು ಸತಿಯು ಪತಿಗೆ ಹೇಳಿದಳು. ಈ ನಿರ್ಗತಿಕನಲ್ಲಿ ಶರಣರಿಗೆ ಎಲ್ಲಿ ಸಾಲದೆ ಹೋದೀತೋ ಎಂದು ಶಂಕಿಸುತ್ತಿದ್ದ ಗಂಡನ ಕೈ ಹಿಡಿದು ಆತನಿಗೆ ಪರಮಾತ್ಮನ ಭಕ್ತಿಯ ವಿಷಯಲ್ಲಿ ಸಂದೇಹವಿರುವುದಕ್ಕೆ ಚಿಂತಿಸಿ ಧೈರ್ಯ ಹೇಳಿ ಕಳುಹಿಸಿಕೊಟ್ಟಳು. ಪತಿಗಿಂತ ಸತಿಗೆ ಆತ್ಮಜ್ಞಾನವಿರುವುದು ಇಲ್ಲಿ ಚನ್ನಾಗಿ ಕಾಣಬರುತ್ತದೆ.

ಹೆಂಗಸರು ಬೋಧಿಸುವ ಕಾರ್ಯವನ್ನೂ ಸಹ ಕೈಗೊಂಡಿದ್ದರು. ವರದಾನಿ ಗುಡ್ಡಮ್ಮಯು ಆದವಾನಿ ಆಲಂಪುರದಲ್ಲಿ ಪರವಾದಿಗಳನ್ನು ಜಯಿಸಿ ಅನೇಕ ಕಡೆ ಬಹುಮಂದಿಗೆ ವೀರಶೈವ ದೀಕ್ಷೆಯನ್ನು ಕೊಟ್ಟಿದ್ದಾಳೆ. ವೈಜವ್ವೆ ತಿಲಕವ್ವೆಯರು ಜೈನ ಧರ್ಮೀಯರಾದ ತಮ್ಮ ಪತಿಗಳಿಂದ ಮೊದಮೊದಲು ಯಾತನೆಗಳನ್ನು ಅನುಭವಿಸಿದರೂ ಕೊನೆಗೆ ಆ ಪತಿಯು ವೀರಶೈವರಾಗುವಂತೆ ಮಾಡಿದಳು. ಚಾರಮರಾಯನಿಗೆ ಗೊಗ್ಗವ್ವೆಯು ಲಿಂಗತತ್ತ್ವವನ್ನು ಬೋಧಿಸಿದ್ದಾಳೆ. ಶಿವಾನುಭವಿಯಾದ ವಿಮಳಾದೇವಿಯು ಹೆಂಗಸರಿಗೆ ಉಪದೇಶಿಸಿ ವೀರಶೈವ ದೀಕ್ಷೆಯನ್ನು ಕೊಡುವುದನ್ನೇ ತನ್ನ ಕಾಯಕವನ್ನಾಗಿ ಕೈಕೊಂಡಿದ್ದಳು. ಆತ್ಮವಿಶ್ವಾಸಿಯಾದ ಮುಕ್ತಾಯಕ್ಕ ಬಲು ದಿಟ್ಟತನದ ಸಾಧಕಳು. ಅಜಗಣ್ಣನು ಲಿಂಗೈಕ್ಯನಾದುದನ್ನು ಕುರಿತು ಮುಕ್ತಾಯಕ್ಕ ಪ್ರಲಾಪಿಸುತ್ತಿರಲು ಅಲ್ಲಮಪ್ರಭುವು ಆಕೆಗೆ ಉಪದೇಶ ಮಾಡುತ್ತಾನೆ. ಈತನ ಉಪದೇಶ ಪ್ರಭಾವದಿಂದ ಆಕೆಯು ನಿರ್ವಯಲ ಸಮಾಧಿಯನ್ನು ಹೊಂದಿ ಅದ್ವೈತವನ್ನು ಸಾಧಿಸಿದಳು. ಸಾಮಾನ್ಯವಾಗಿ ಗುರುವಿನಿಂದ ಶಿಷ್ಯರ ಪರೀಕ್ಷೆಯಾದರೆ ಇಲ್ಲಿ ಮಾತ್ರ ಶಿಷ್ಯಳಿಂದ ಗುರುವಿನ ಪರೀಕ್ಷೆಯಾಗುತ್ತದೆ. ಆ ಪರೀಕ್ಷೆಯಲ್ಲಿ ಗುರುವು ಜಯವನ್ನು ಪಡೆದ ಕಾರಣವೇ ಈ ಶಿಷ್ಯೆಯು

ಉಪದೇಶವನ್ನು ಸ್ವೀಕರಿಸುತ್ತಾಳೆ. ಯಾಜ್ಞವಲ್ಕರಿಗೆ ಗಾರ್ಗಿಯು ಪ್ರಶ್ನೆಗಳನ್ನು ಹಾಕಿ ಉತ್ತರವನ್ನು ಹೊಂದಿದಮೇಲೆ 'ಯಾರೂ ಈತನನ್ನು ಗೆಲ್ಲಲಾರರು. ಈತನು ಅಜೇಯನು' ಎಂದು ಪ್ರಶಸ್ತಿ ಪದವಿಯನ್ನು ಕೊಟ್ಟಂತೆಯೇ ಇಲ್ಲಿ ಪ್ರಭುವು ಅಜೇಯನೆಂದು ಮುಕ್ತಾಯಕ್ಕ ತೋರಿಸಿಕೊಟ್ಟಿದ್ದಾಳೆ.

ಗಂಡು ಹೆಚ್ಚು, ಹೆಣ್ಣು ಕಡಿಮೆಯೆಂಬುದು ಬರೀ ಭ್ರಾಂತಿಯೇ ಸರಿಯು. ಶರೀರೋಪಾಧಿಯಿಂದ ಗಂಡು ಹೆಣ್ಣುಗಳ ಭೇದವೇ ಹೊರತು ಆತ್ಮನು ಗಂಡೂ ಅಲ್ಲ, ಹೆಣ್ಣೂ ಅಲ್ಲ ಎಂಬ ಅಂಶವು ವಚನಕಾರರಿಗೆ ಮನದಟ್ಟಾಗಿರುತ್ತದೆ. ಸತ್ಯಕ್ಕ, ರೆಮ್ಮವ್ವೆ, ಗುಡ್ಡವ್ವೆ, ವೀರಮ್ಮ, ಲಿಂಗಮ್ಮ, ಕಾಯಮ್ಮ, ಗಂಗಮ್ಮ, ಲಕ್ಷ್ಮಮ್ಮ, ಮಸಣಮ್ಮ, ಕಾಳವ್ವೆ ಇತ್ಯಾದಿ ಶಿವಶರಣೆಯರಿಗೆ ಅನುಭವ ಮಂಟಪದಲ್ಲಿ ಜಾಗವನ್ನು ನೀಡಿದ್ದುದೇ ಸಾಕಾಗಿವೆ. ಅಸ್ಪೃಶ್ಯರಿಗಿದ್ದ ಸ್ಥಾನವೇ ವಚನಕಾರರ ಪೂರ್ವ ಸಮಾಜದ ಸ್ತ್ರೀಯರಿಗೆ ಇದ್ದಿತು. 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿಗರೀಯಸೀ' ಎಂಬ ಶೃತಿಯು ಇನ್ನೂ ಆಚರಣೆಗೆ ಬಂದಿರಲಿಲ್ಲ. ಪ್ರಪಂಚದ ಸಕಲ ಜ್ಯೋತಿಗಳನ್ನು ತನ್ನ ಉದರದಲ್ಲಿಯೇ ಧರಿಸಿ ಹೊತ್ತು ಪಾಲಿಸಿ ಅವರನ್ನು ಪ್ರಪಂಚದ ಉನ್ನತಿಗಾಗಿಯೇ ಧರಿಸಿರುವ ಮಾತೆಯನ್ನು ಹೀನ ಜಂತುವಾಗಿ ಮಾಡಿದ್ದುದು ವಚನಕಾರರ ಮನಸ್ಸನ್ನು ತೊರೆಯದೆ ಇರಲಿಲ್ಲ. ಹೆಣ್ಣಿಗೆ ಸಮಾಜ ರಚನೆಯಲ್ಲಿ ಸರಿಸಮಾನ ಸ್ಥಾನವನ್ನು ಕೊಟ್ಟ ಹೊರತು ಸಮಾಜವು ಮುಂದೆ ಸಾಗಲಾರದು. ಸಾನುರಾಗದ ಜೀವನ ಬತ್ತಿದ ಊಟೆಯಾಗದಿರದು ಎಂಬ ಅಂಶವನ್ನು ಮನಗಂಡು ಆ ಕ್ರಿಯಾ ತತ್ವವನ್ನು ಅಂಜಿ ಅಳುಕದೆ ಎದೆಗಾರಿಕೆ ತನದಿಂದ ಅನುಷ್ಠಾನದಲ್ಲಿ ತಂದೇ ತಂದುಕೊಟ್ಟರು ಫಲವು ಪರಿಪಕ್ವವಾಗದೆ ಇರದು ಎಂದು ನಿರ್ಧರಿಸಿದರು. ಜೀವನದ ಸರ್ವತೋಮುಖದಲ್ಲಿಯೂ ಶಕ್ತಿಯ ಪ್ರತಿಸ್ವರೂಪಾದ ಹೆಂಗಸಿಗೆ ಅವಕಾಶವನ್ನು ಕಲ್ಪಿಸಿಕೊಟ್ಟರು ತಾಯಿಯು ದೇವರೆಂಬ ವೇದ ಶೃತಿಯನ್ನು ಕೊಂಚ ಮಾರ್ಪಡಿಸಿ, ಹೆಣ್ಣೇ ದೇವರೆಂದು ಸಾರಿ ಅದನ್ನು ವಚನಕಾರರು ಕ್ರಿಯೆಯಲಿ ಕಂಡರು.

ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು.
ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು.

ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯನೇರಿತ್ತು.
ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು.
ಅದು ಕಾರಣ ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ;
ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನಾ.

---

# ಭಾವಲಿಂಗ

(ಲೇಖಕ — ಶ್ರೀ ಸಿ. ನಾ. ಮಹಾಂತಣ್ಣವರ ಮು. ಹೊನ್ನೂರ)

ವಿಶ್ವವನ್ನು ವಿಶಾಲ ದೃಷ್ಟಿಯಿಂದ ನಿರೀಕ್ಷಿಸಿದರೆ, ಈಶನಿರ್ಮಿತವಾದ ಸೃಷ್ಟಪದಾರ್ಥಗಳ ಮೂಲತತ್ವಗಳೂ, ಅವುಗಳ ರಚನೆ, ಕಲೆ, ಪ್ರಕಾಶಗಳೂ ಒಡೆದು ಕಾಣುತ್ತವೆ. ಈ ಸೃಷ್ಟಪದಾರ್ಥಗಳ ಉಪಯೋಗವನ್ನು ಮಾನವನು ತನ್ನ ಕ್ರಿಯಾಜ್ಞಾನಶಕ್ತಿಗಳಿಂದಲೂ ಬುದ್ಧಿಬಲದಿಂದಲೂ ಶೋಧಕದೃಷ್ಟಿಯಿಂದಲೂ ಅನೇಕ ವಸ್ತುಗಳನ್ನು ನಿರ್ಮಿಸಿ. ಪ್ರಾಣಿವರ್ಗಕ್ಕೂ ಉದ್ಭಿಜವರ್ಗಕ್ಕೂ, ಅದರಲ್ಲಿ ವಿಶೇಷವಾಗಿ ಮಾನವಕೋಟಿಗೂ ಉಪಯುಕ್ತವಾಗುವಂತೆ ಮಾಡಿದ್ದಾನೆ, ಇನ್ನೂ ಮಾಡುತಲಿದ್ದಾನೆಂಬದು ಹೊಳೆಯದಿರದು ಇವೆಲ್ಲವೂ ಮಾನವನಿಂದ ರಚಿಸಲ್ಪಟ್ಟ ನಾಮರೂಪ ಕ್ರಿಯಾತ್ಮಕವಾಗಿ ಕಂಗೊಳಿಸುತ್ತ ಈಶ ಸೃಷ್ಟಿಯೊಳಗೆ ಮಾನೀಶನ ಸೃಷ್ಟಿಯು ಬೆರೆತು, ಈ ವಿಶ್ವದ ಸದ್ಯದ ನೋಟವು ಪ್ರಕಾಶಮಯವಾಗಿ ಮೋಹಕವಾಗಿ ಕಾಡು ಜನರನ್ನು ಅರ್ಥಾತ್ ಅಜ್ಞಜನರನ್ನು ಬೆರಗುಗೊಳಿಸುತ್ತಲಿದೆ, ಪ್ರಕೃತಿಯು ಕ್ಷಣ ಕ್ಷಣಕ್ಕೆ ಬದಲಾಗುವಂತೆ ಮಾನವನ ಸತ್ಕ್ರಿಯಾ ಶಕ್ತಿಗಳೂ ಸಹ ದೇಶಕಾಲ ವಸ್ತುಸ್ಥಿತಿಗಳಿಗನುಸರಿಸಿ ಬದಲಾಗುವದನ್ನು ನೋಡುತ್ತಲಿರುವೆವು. ಈ ಎಲ್ಲ ನೈಸರ್ಗಿಕ ಬದಲಾವಣೆಯಂತೆ ಮಾನವನ ಕೃತಿಗಳಿಗೆ ಯಾವ ಮೂಲ ಕಾರಣವಿರಬಹುದು? ಆ ಕೃತಿಗಳೂ ಆ ಕಲೆಗಳೂ ಆ ಸದಸದ್ವಿವೇಕ ಬುದ್ಧಿಯೂ ವಿಚಾರವೂ ಆ ಜ್ಞಾನದ ಪ್ರಕಾಶವೂ ಎಲ್ಲಿಂದ ಉಗಮವಾಗುತ್ತಿರಬಹುದು? ಸದ್ಯಕ್ಕೆ ನಮ್ಮ ಐಷ ಆರಾಮಕ್ಕೂ ಜೀವನಕ್ಕೂ

ಬೇಕಾಗುವ ತರತರದ ಸುಗಂಧ ದ್ರವ್ಯಗಳೂ ಸುರುಚಿಯುಳ್ಳ ಭೋಜ್ಯ ಪಾನ್ಯಗಳೂ, ಪ್ರಕಾಶಮಯವಾದ ಮಂದಿರಗಳೂ, ಉಡುತೊಡಿಗೆಗಳೂ ವಾಹನಗಳೂ ಬಂಗಾರ ಬೆಳ್ಳಿ ತಾಮ್ರ ಹಿತ್ತಾಳಿ ಕಬ್ಬಿಣ ಕಲ್ಲು ಮಣ್ಣಿನ ಸಾಮಾನುಗಳೂ, ಮಾನವನ ಭಾವಪ್ರಧಾನವಾದವುಗಳೆಂದು ಸಹಜ ಅವ ಗಾಹನಕ್ಕೆ ಬಾರದಿರದು. ಇದನ್ನೇ ಸ್ಪಷ್ಟಗೊಳಿಸಿದ ಶ್ರೀಪ್ರಭುದೇವರ ಕಂದವು-

ಭಾವ ಮನೋದೃಕ್ಕರತಳ !
ಪಾವನಗುರುದತ್ತ ಸರ್ವಕಾರಣಮನುಸಂ ||
ಜೀವನ ಷಡ್ಬ್ರಹ್ಮೇಶ್ವರ ।
ಕೈವಲ್ಯ ಕಲಾಲಂಾಜಲಿಂಗಪ್ರಭುವೇ ||೧||

ಶಿಷ್ಯನ ಅಂತರಂಗದಲ್ಲಿರ್ದ ಚಿತ್ಕಲಾಲಿಂಗವೇ ಗುರುಮುಖದಿಂ ಬಹಿಷ್ಕರಿಸಿ ಬಂದು, ಭಾವ ಮನ ದೃಕ್ಕರತಳನೊಳಕೊಂಡು, ಬ್ರಹ್ಮ ವಿಷ್ಣು, ರುದ್ರ, ಈಶ್ವರ, ಸದಾಶಿವ, ಮಹಾ ಶ್ರೀ ಗುರುವೆಂಬ ಷಣ್ಮೂರ್ತಿಗಳಿಗೆ ಒಡೆಯನಾದಂಥ ಷಡ್ಬ್ರಹ್ಮ ಪರ್ಯಾಯವಾದ ಲಿಂಗವು, ಷಡಿಂದ್ರಿಯಗಳಲ್ಲಿ ಷಡ್ಲಿಂಗವಾಗಿ ಬೆಳಗುವದೆಂಬದು ತಾತ್ಪರ್ಯಾರ್ಥವು. ಇದನ್ನನುಸರಿಸಿಯೇ "ಯಥಾಕಲಾತಥಾಭಾವೋ ಯಥಾ ಭಾವಸ್ತಥಾಮನಃ|| ಯಥಾಮನಸ್ತಥಾ ಸ್ಥಲಂ|| ಈ ಶ್ಲೋಕವು ಸ್ಪಷ್ಟೀಕರಿಸುತ್ತದೆ.

ಕಂಬಾರ, ಕುಂಬಾರ, ಪತ್ತಾರ, ಚಿತ್ರಗಾರ, ನೆಯ್ಯಕಾರ, ಬಡಿಗ, ತೋಟಿಗ, ಸಿಂಪಿಗ, ಹಾಡಿಗ, ಹೂವಡಿಗ, ಕವನಿಗ, ವೈದಿಕ, ಪುರಾಣಿಕ, ಲೇಖಕ, ವ್ಯಾಖ್ಯಾನಿಕ ಶಿಲ್ಪಿಗರ ಕೃತಿಮತಿಗಳೆಲ್ಲ ಭಾವದಲ್ಲಿ ಒಡಮೂಡಿ ಮನಸ್ಥಳಕ್ಕೂ ಮುಖಸ್ಥಳಕ್ಕೂ ಕರಸ್ಥಳಕ್ಕೂ ಬಂದು ಆಯಾ ವಿಷಯಗಳಲ್ಲಿ ಪ್ರವೀಣತೆಯನ್ನು ಕೌಶಲ್ಯವನ್ನೂ ಬುದ್ಧಿ ಕ್ರಿಯಾಶಕ್ತಿಜ್ಞಾನಶಕ್ತಿಗಳನ್ನೂ ವ್ಯಕ್ತ ಪಡಿಸುತ್ತವೆ. ಯಾವ ಪ್ರಕಾರ ಅಂಬುಧಿಯ ನೀರು, ಸೂರ್ಯನ ಉಷ್ಣತೆಯಿಂದ ಕಾಯ್ದು ಉಗಿಯಾಗಿ ಮೋಡಮಿಂಚು ಗುಡುಗುಗಳೊಡನೆ ಮಳೆ ಆಣೆ ಕಲ್ಲುಗಳ ರೂಪದಿಂದ ಭೂಮಿಯೊಳು ಬಿದ್ದು, ಜಿರಾಯತ ಬಾಗಾಯತ ಮುಂತಾದ ಕೆಲಸಕ್ಕೆ ಉಪಯೋಗವಾಗುತ್ತ ಹೊಳೆ ಹಳ್ಳಗಳಾಗಿ ಪುನಃ ಅಂಬುಧಿಯ ಕೂಡುತ್ತ ಚಕ್ರಾಕಾರವಾಗಿ ತಿರುಗುತ್ತದೋ ಅದರಂತೆ ಭಾವದಿಂದುದ್ಭವವಾದ ವಿಚಾರಗಳೂ ಸಂಕಲ್ಪ ವಿಕಲ್ಪಗಳೂ ಆಗಾಗ್ಗೆ ಹುಟ್ಟುತ್ತ ಕೆಲವು ವೇಳೆ ನಿಲ್ಲುತ್ತ, ನಿಂತಾಗ ಮನುಷ್ಯನ ಸತ್ಕಾರ್ಯಕ್ಕೂ ದುಷ್ಕಾ

ರ್ಯಕ್ಕೂ ಉಪಯೋಗವಾಗುತ್ತ, ಉಪಯೋಗಿಸದಿದ್ದರೆ ಮೋಡಗಳು ಹುಟ್ಟಿ ಹುಟ್ಟಿ ಕರಗುವಂತೆ, ಭಾವೋದ್ಭವ ಕಲ್ಪನಾವಿಚಾರಗಳೆಲ್ಲ ಕರಗಿ ಹೋಗುವವು. ಸದ್ಭಾವಿಗಳು ಆ ಭಾವದ ಬಲದಿಂದ ಭವಾಂಬುಧಿಯನ್ನು ದಾಂಟಿ ಸದಾನಂದಿಗಳಾಗುವರು. ದುರ್ಭಾವಿಗಳು ದುಷ್ಕೃತಿಗಳಲ್ಲಿ ವಿನಿಯೋಗಿಸಿ ಕಷ್ಟಕ್ಕೆ ಗುರಿಯಾಗುವರು. ಇದನ್ನರಿತ ಶ್ರೀ ಪ್ರಭುದೇವರು “ಉದಯಾಸ್ತಮಾನಗಳೆಂಬೆರಡಳಿದ ಶಿವಯೋಗಿ! ಸದಮಲ ಜ್ಞಾನದ ಬೆಳಗಿನೊಳಗೆ ಪದಫಲವನೊದೆದು ನಿಜದಲ್ಲಿ ನಿರ್ಮಯಲಾದ ಶಿವಯೋಗಿ ಚಿದ್ರೂಪು ಚಿನ್ಮಯ ಚಿತ್ಪ್ರಕಾಶ ॥೧॥ ಎಂಬದಾಗಿ ಹಾಡಿಕೊಂಡಿದ್ದಾರೆ.

ವಿಜಾಪುರ ತಾಲೂಕಿನ ಒಂದು ಸಣ್ಣಹಳ್ಳಿ. ಆ ಹಳ್ಳಿಯ ಸಮೀಪಕ್ಕೆ ಒಂದೆರಡು ಮೈಲಿನ ಅಂತರದಲ್ಲಿ ದಿನ್ನೆಮರಡಿಗಳ ಪ್ರದೇಶ. ಆ ಪ್ರದೇಶಲ್ಲಿ ಅದಕ್ಕೂ ಹೆಚ್ಚು ಎತ್ತರ ಪ್ರದೇಶದಿಂದ ಬರುವ ದೊಡ್ಡ ಹಳ್ಳ. ಆ ಹಳ್ಳವನ್ನು ಮರಡಿಯಲ್ಲಿ ಕಟ್ಟಲ್ಪಟ್ಟ ಕೆರೆ. ಆ ಕೆರೆಯ ತಳದಿಂದ ನೀರು ಇಂಗುತ್ತ ಅನೇಕ ಸೆಲೆಗಳಾಗಿ ಊರ ಕಡೆಗೆ ಭೂಮಿಯೊಳಗಿಂದಲೇ ಹರಿಯುವ ಪ್ರವಾಹಗಳು. ಇದನ್ನರಿತ ಬುದ್ಧಿ ಜೀವಿಗಳು ಆ ಹಳ್ಳಿಯ ಸುತ್ತಲೂ ಅನೇಕ ಭಾವಿಗಳನ್ನು ಅಗಿಸಲಾಗಿ ಪ್ರತಿಯೊಂದು ಭಾವಿಯಲ್ಲಿ ನೀರು, ಸಂತೃಪ್ತಿಯಾಗುವಂತೆ ತುಂಬಿ, ಸುತ್ತಲು ತೋಟಗಳು ಹೆಚ್ಚಾಗಿ ಎಲೆದೋಟ, ಬಾಳೆ, ಕಬ್ಬು, ಹಣ್ಣು ಕಾಯಿಪಲ್ಲೆಗಳು ಸಮೃದ್ಧವಾಗಿ, ಆ ಹಳ್ಳಿಯ ಸಂಪತ್ತು ಬೆಳೆಯುತ್ತ ನಡೆಯಿತು. ಹೀಗಿರಲು, ಒಂದು ವರ್ಷ ಮಳೆಯು ಚನ್ನಾಗಿ ಆಗದ್ದರಿಂದ ಕೆರೆಯು ಬತ್ತಿ ಬಿಟ್ಟಿತು. ಭಾವಿಗಳಲ್ಲಿ ನೀರಿನ ಅಭಾವವಾದ್ದರಿಂದ ತೋಟದ ಎಲೆಬಾಳೆ ಕಬ್ಬು ಕಾಯಿಪಲ್ಲೆಗಳೆಲ್ಲ ಒಣಗಿ ಬಿಟ್ಟವು. ಮಾಡುವದೇನು? ದುರ್ಭಿಕ್ಷೆಯ ದುಂದುಭಿಯು ಮೊಳಗಹತ್ತಿತು.

ಸದ್ಭಾವಿಗಳು ಸದ್ವರ್ತನದಿಂದ ಭಾವಿಕರಾಗಿ ಶುದ್ಧ ಹೃದಯಿಗಳಾದರೆ ಮಾತ್ರ, ಅವರು ಇಹಪರಗಳಲ್ಲಿ ಸೌಖ್ಯವನ್ನು ಅನುಭವಿಸುವರು. ಅವರೇ ದುರ್ಭಾವಿಗಳಾದರೆ, ಸಮಾಜದಲ್ಲಿ ಕೊಲೆ ಸುಲಿಗೆ ಪುಂಡತನ ಅನ್ಯಾಯ ಅನೀತಿಗಳು ಹೆಚ್ಚಾಗಿ ಜೀವನದ ಮಟ್ಟು ಕೆಟ್ಟು ಹೋಗುವದು. ಇದನ್ನರಿತ ಮಹಾನುಭಾವಿಗಳು “ಪೂಜಾ ಸ್ತೋತ್ರದ ಜಪದಾ।ನೈಜಧ್ಯಾನದ ಸಮಾಧಿಯ ಗಣಿತಫನದಾ॥ರಾಜತ್ಪರಮ ಚಿದಂಕರ।ಶ್ರೀಜಗದನು ಭಾವದಿಷ್ಟ

ಲಿಂಗ ನಿರಂಗಾ||೧||'' ಎಂಬ ಲಿಂಗವಿಡಿದು ಆರಾಧಿಸಲು ವಿಶ್ವಧರ್ಮವೆಂಬ ವೀರ ಶೈವ ಮತವನ್ನು ಪ್ರಚುರಗೊಳಿಸಿ, ಇಹ ಪರಗಳಲ್ಲಿ ಸುಖಸಂಪದಭಿವೃದ್ಧಿ ಯನ್ನು ಮಾಡಿರುವರೆಂಬುದು ಶರಣಾನುವರ್ತಿಗಳಿಗೆ ಮನದಟ್ಟಾಗದೆ ಇರದು.

ಗ್ರಾಮೋದ್ಧಾರ ಸಂಘಟನೆಯಲ್ಲಿ ಶಿಕ್ಷಣ ಹೊಂದಿ, ಹಳ್ಳಿಯ ಸುಧಾರಣೆ ಯನ್ನು ಸರ್ವತೋಮುಖವಾಗಿ ಮಾಡಬೇಕೆಂಬ ಮಹತ್ವಾಕಾಂಕ್ಷಿಯೊಬ್ಬನು, ಕೈನೂಲಿನ ಕಾಯಕವನ್ನು ಕೈಕೊಂಡು ವಿಶ್ವಧರ್ಮದಿಂದ ವಿರಾಜಿತನಾಗಿ, ಗಾಂಧಿ ಟೊಪ್ಪಿಗೆ ನೇಹರು ಪೈರಣ ಕೈನೂಲಿನ ಛಡ್ಡಿಗಳಿಂದ ಸುಶೋಭಿತ ನಾಗಿ ತನ್ನ ಗ್ರಾಮದ ಸುತ್ತ ನಾಲ್ಕು ಹರದಾರಿಯೊಳಗಿನ ಹಳ್ಳಿಗಳಲ್ಲಿ ಸಂಚರಿಸಿ ಮುಖ್ಯವಾಗಿ ಸುಶಿಕ್ಷಣ, ಸತ್ಕಾಯಕ, ಸದಾಚಾರ, ಸನ್ನೀತಿ, ಶಿವಶರಣರ ಚರಿತ್ರ ವಚನಾನುಭವಗಳನ್ನು ಮಾಡುತ್ತ, ಶಿವಾನುಭವ ಸಂಘಗಳನ್ನು ಸ್ಥಾಪಿಸುತ್ತ, ಗ್ರಾಮ ಸುಧಾರಣೆಯ ಕಾರ್ಯಗಳನ್ನು ಕೈ ಕೊಂಡಿರಲು ಇದನ್ನೆಲ್ಲ ನೋಡಿದ ಒಬ್ಬ ಸಾಲೆಯ ಸುಶೀಲ ವಿದ್ಯಾರ್ಥಿಯ ಭಾವದಲ್ಲಿ ಆ ಸುಧಾರಕನ ಉಡಿಗೆ ತೊಡಿಗೆಗಳು ಬಿಂಬಿಸಿ, ತನ್ನ ಮೊದಲಿನ ಮೊದಲಿನ ಉಡಿಗೆ ತೊಡಿಗೆಗಳು ಹರಿಯಲು ತನ್ನ ಸಮೀಪದ ಪಟ್ಟಣಕ್ಕೆ ಗಮನಿಸಿ, ಅಲ್ಲಿ ಸ್ವದೇಶೀ ಅಂಗಡಿಗೆ ಹೋಗಿ, ತನಗೆ ಬೇಕಾದ ಅಂದರೆ ಸದ್ಭಾವದಲ್ಲಿ ಪ್ರಕಾಶಗೊಂಡ ಗಾಂಧಿ ಟೊಪ್ಪಿಗೆ, ನೆಹರೂ ಪೈರಣ, ಛಡ್ಡಿಗಳನ್ನು ಹೊಲಿಸಲು ಪ್ರವರ್ತನನಾಗಿ ಅರಿವೆ ಖರೀದಿ ಮಾಡಿ ಅಂದೇ ಕೂತು ಹೊಲಿಸಿಕೊಂಡು, ಆ ಉಡಿಗೆ ತೊಡಿಗೆಗಳಲ್ಲಿಯೇ ಮೋಹನ ಭಾವವನ್ನಿಟ್ಟು, ಅವುಗಳನ್ನು ಶುದ್ಧ ಮನಸ್ಸಿನಿಂದಲೂ ಬದ್ಧ ಮಹತ್ವಾಕಾಂಕ್ಷೆಯಿಂದಲೂ ಸ್ವದೇಶ ಭಕ್ತಿ, ಸ್ವದೇಶಾಭಿ ಮಾನದಿಂದಲೂ ಧರಿಸುತ್ತ ವಿಶ್ವಧರ್ಮಾಚಾರದಂತೆ ನಡೆಯುತ್ತ ಸದ್ಭಾವಿ ಯಾಗಿ “ಸಜ್ಜನ ಸದ್ಭಾವಿಗಳ ಸಂಗದಿಂದ ಮಹಾನುಭಾವಿಗಳ ಕಾಣುತ್ತ, ಮಹಾನುಭಾವಿಗಳ ಸಂಗದಿಂದ ಗುರುವಿನ ಕಾಣುತ್ತ, ಗುರುವಿನ ಸಂಗ ದಿಂದ ಲಿಂಗವ ಕಾಣುತ್ತ, ಲಿಂಗ ಸಂಗದಿಂದ ಜಂಗಮವ ಕಾಣುತ್ತ, ಜಂಗಮ ಸಂಗದಿಂದ ತೀರ್ಥ ಪ್ರಸಾದಗಳ ಕಾಣುತ್ತ, ಪ್ರಸಾದಗಳ ಪರಿಣಾಮ ದಿಂದ ತನ್ನ ತಾನರಿಯುತ್ತ ಕೂಡಲಸಂಗನಲ್ಲಿ ಬೆರೆಯುತ್ತ ಬೇರೆಯಾಗ ದಿರ್ದನು.

ವೈಶಾಖಮಾಸ, ಬೇಸಿಗೆಯ ಕಾಲ, ಮಾವಿನ ಹಣ್ಣಿನ ಸುಗ್ಗಿ. ಮನೆ ತನವು ಕ್ರಿಯಾಚಾರಗಳ ಆಗರವು. ಊರಲ್ಲಿ ಮಾವಿನ ಹಣ್ಣುಗಳ ಅಭಾವ.

ತಂದೆಯದು ಗಣಾರಾಧನೆ ಮಾಡಬೇಕೆಂಬ ಭಾವ ಪ್ರಕಾಶ (ಲವಲವಿಕೆ), ಮಗನೊಡನೆ ತಂದೆಯು ಹತ್ತಿರಿದ್ದ ಪಟ್ಟಣದ ಉತ್ತಮ ಮಾವಿನ ಹಣ್ಣು ತರಬೇಕೆಂಬ ಪ್ರಯಾಸ. ಮಾವಿನ ಹಣ್ಣು ಮಾರುವ ಬಝಾರಕ್ಕೆ ಅವರಿಬ್ಬರ ಆಗಮನ. ಅಲ್ಲಿ ತರತರದ ಬಣ್ಣದ ತರತರದ ವಾಸನೆಯ ಹಣ್ಣುಗಳ ಮಾರಾಟ. ಇದನ್ನೆಲ್ಲ ನೋಡಿದ ತಂದೆ ಮಕ್ಕಳು ಗಣಾರಾಧನೆಗೆ ಉತ್ತಮ ಹಣ್ಣುಗಳು ಹೇಗೆ ಸಿಕ್ಕ್ಯಾವೆಂಬ ವಿಚಾರ. ಎಲ್ಲ ವ್ಯಾಪಾರಿಗರಲ್ಲಿ ಪ್ರಾಮಾಣಿಕ ವ್ಯಾಪಾರಿಯು ಅವರನ್ನು ಮುಂದಕ್ಕೆ ಕರೆದು ತನ್ನ ಎಲ್ಲ ಹಣ್ಣುಗಳ ವಾಸನೆ, ರುಚಿ, ಪಕ್ವತೆ, ಶುದ್ಧ ತಿಳಿಲು ರಸವುಳ್ಳ ಮಾವುಗಳನ್ನು ಯೋಗ್ಯ ದರದಿಂದ ಕೊಟ್ಟನು. ಆಗ್ಗ ತಂದೆಯು ಮಹಾನುಭಾವಿಯೂ ಸದ್ಭಕ್ತನೂ ಆದ್ದರಿಂದ ಹಣ್ಣುಗಳ ರೂಪನ್ನು ಶಿವಲಿಂಗಕ್ಕೂ ಗಂಧವನ್ನು ಆಚಾರ ಲಿಂಗಕ್ಕೂ ತನ್ನ ನೆರೆಮನೆಯ ಗೃಹಸ್ಥನು ರುಚಿಸಿದ್ದನ್ನು ಕಂಡು ಗುರು ಲಿಂಗಕ್ಕೂ ಕೈಯಿಂದ ಹಿಚುಕುವಾಗ ಜಂಗಮಲಿಂಗಕ್ಕೂ ಹಣ್ಣನ್ನು ಹಿಂಡಿ ನೋಡುವಾಗ ಪುಳಕ್ಕೆಂದು ಬೀಜ ಸಿಡಿಯಲು ಆದ ಶಬ್ದವನ್ನೂ ಮಾರಾಟಗನು ಆಡಿದ ಪ್ರಾಮಾಣಿಕತನದ ಮಾತುಗಳನ್ನೂ ಪ್ರಸಾದ ಲಿಂಗಕ್ಕೂ ವೇಳೆಗೆ ಸರಿಯಾಗಿ ಯೋಗ್ಯ ಹಣ್ಣು ಸಿಕ್ಕದ್ದರಿಂದಾದ ತೃಪ್ತಿಯನ್ನು ಮಹಾ ಲಿಂಗಕ್ಕೂ ಅರ್ಪಣ ಭಾವವನ್ನು ಬಿಂಬಿಸುವವನಾಗಿದ್ದರಿಂದ ಸರ್ವಾಚಾರ ಸಂಪತ್ತಿನಾಚಾರ ಸ್ಥಲವು ತಾನಾಗಿ ಸಾಗಿತು. ತಕ್ಕೊಂಡ ಯಾವತ್ತು ಹಣ್ಣುಗಳನ್ನೂ ಇನ್ನಿತರ ಸಾಮಾನುಗಳನ್ನೂ ತೆಗೆದುಕೊಂಡು ಊರಿಗೆ ಬಂದು ಮರುದಿವಸ ಗಣಾರಾಧನೆಗೆ ಯೋಗ್ಯ ಜಂಗಮ ಮೂರ್ತಿಯನ್ನೂ ಇನ್ನಿತರ ಗಣಾಧೀಶರನ್ನೂ ಬರಮಾಡಿಕೊಂಡು, ಅಷ್ಟಾವರಣ ಕ್ರಿಯೆಯೂ ಪಂಚಾಚಾರವೂ ನಡೆದು "ಅರಿಷಡ್ವರ್ಗದ ಉರವಣಿಗೆಗೆ ಒಳಗಾಗನಾಗಿ ಭಕ್ತಕಾಯನಾದ. ಪಂಚೇಂದ್ರಿಯಂಗಳ ಬಳಸನಾಗಿ ಗುರುಭಕ್ತನಾದ. ಸಪ್ತಧಾತುವಿನ ಗುಣವಿಡಿಯದನಾಗಿ ಸಮಯಾಚಾರಿಯಾದ. ಅಪ್ಪನಾದಗಜದ ಬಟ್ಟೆಯ ಮೆಟ್ಟನಾಗಿ ಆಚಾರವಂತನಾದ. ಕರ್ಮಕಾಂಡದಲ್ಲಿ ಬಳಸಲಿಲ್ಲನಾಗಿ ಸತ್ಯ ನಿತ್ಯ ನಿರ್ಮಳನಾದ. ಜ್ಞಾನಕಾಂಡದಲ್ಲಿ ಹೊಣುಹೊಕ್ಕನಾಗಿ ಭಕ್ತಿಯೆಂಬಚಿಪ್ಪದ ಉರಿಲಿಂಗಪೆದ್ದಪ್ರಿಯ ವಿಶ್ವೇಶ್ವರಯ್ಯನು." ಈ ವಚನಾನುಸಾರವಾಗಿ ಗಣತೃಪ್ತಿಯಿಂದ ಶೇಷ ಪ್ರಸಾದ ಪಡೆದು ನಿತ್ಯಾನಂದ ಸುಖದ ಸುಗ್ಗಿಯೊಳಿರಲಾಯಿತು. ದಶವಿಧ ಪಾದೋದಕ, ಏಕಾದಶ ಪ್ರಸಾದಗಳಿಂದ ಆ ಮನೆಯವರೆಲ್ಲರೂ ತೃಪ್ತಿಹೊಂದಿದರು. ಬಳಿಕ ಅದೇ ದಿವಸ ಸಂಜೆಯ

೬ ಗಂಟೆಗೆ ಗ್ರಾಮೋದ್ಧಾರ ಸುಧಾರಕನ 'ಲಿಂಗ' ಈ ವಿಷಯದ ಬಗ್ಗೆ ಪ್ರವಚನವಿರುವದೆಂಬದಾಗಿ ಝಾಂಗಟೆಯು ಸಪ್ಪಳವು ಕೇಳಬಂತು.

ಜಾಹೀರ ಮಾಡಿದ ಪ್ರಕಾರ ಸಂಜೆಯು ೬ ಗಂಟೆಗೆ ಸರಿಯಾಗಿ ಶ್ರೀ ಮಲ್ಲಿಕಾರ್ಜುನ ದೇವಾಲಯದ ಪಟಾಂಗಣದಲ್ಲಿ ಅಣ್ಣನ ಬಳಗವೂ ಅಕ್ಕನ ಬಳಗವೂ ಇನ್ನಿತರ ಸಮಾಜವು ಸಹ ಕಿಕ್ಕಿರಿದು ಕೂಡಿಬಿಟ್ಟಿತು. ಶಿಷ್ಟಾಚಾರದ ಪ್ರಕಾರ ಅಧ್ಯಕ್ಷರ ಆಯ್ಕೆ ಆದಕೂಡಲೆ ಗ್ರಾಮೋದ್ಧಾರ ಸುಧಾರಕರು ಎದ್ದು ನಿಂತು, ಅಕ್ಕತಂಗಿಯರೇ ಅಣ್ಣತಮ್ಮಂದಿರರೇ; ಲಿಂಗಾಂಗಿಗಳಾದ ನಾವೆಲ್ಲರೂ ಶರೀರದಲ್ಲಿ ಲಿಂಗಧಾರಣ ಮಾಡಿಕೊಂಡಿರುವೆವಷ್ಟೇ. ಆ ಲಿಂಗದ ಆದಿ, ಮಧ್ಯ ಅವಸಾನಗಳನ್ನರಿಯುವದೂ ಆ ಲಿಂಗದ ಸ್ಥಳಕುಳಗಳನ್ನು ತಿಳಿಯುವದೂ, ಆ ಲಿಂಗದ ವ್ಯಾಪಕ ಸ್ಥಾಪಕತ್ವಗಳನ್ನು ಗೊತ್ತು ಮಾಡಿಕೊಂಡು ಲಿಂಗಾಚಾರ ಮೊದಲಾದ ದ್ವಾದಶಾಚಾರಗಳಂತೆ ವರ್ತಿಸುವದೂ, ಲಿಂಗಾಂಗಗಳ ಸಂಬಂಧವನ್ನೂ ಅವುಗಳ ಕ್ರಿಯೆಗಳನ್ನರಿತು ಕ್ರಿಯಾಚಾರ ಜ್ಞಾನಾಚಾರ ಭಾವಾಚಾರಗಳಿಂದ ಭಕ್ತ್ಯಾಚಾರ ಮುಂದುಗೊಂಡು ಲಿಂಗವನ್ನು ಅಂಗದೊಳು ಅಳವಡಿಸಿಕೊಂಡು ಅಂಗದ ಷಟ್‌ಸ್ಥಳಗಳಲ್ಲಿ ಲಿಂಗ ಷಟ್ಕಗಳನ್ನು ಸಂಬಂಧಿಸಿ ಅಂಗ ಲಿಂಗ ಸಕೀಲಗಳನ್ನರಿತು ಆಚರಿಸುತ್ತ ಅಂಗ ಲಿಂಗೈಕ್ಯಗಳ ಅನುಸಂಧಾನದ ಸಾಧನಗಳಾದ ಲಿಂಗ (ಶಿವ) ಪೂಜೆಯನ್ನು ತನು ಮನ ಭಾವ ಶುದ್ಧವಾಗಿ ಮಾಡುತ್ತ, ಮನದಲ್ಲಿ ನೆನೆಯುತ್ತ ಭಾವದಲ್ಲಿ ಏಕೀಕರಿಸುತ್ತ ತ್ರಿಕಾಲ ದ್ವಿಕಾಲ ಏಕಕಾಲಂಗಳಲ್ಲಿಯಾದರೂ ಲಿಂಗ ಪೂಜೆ, ಲಿಂಗಾರ್ಚನೆ, ಷೋಡಶೋಪಚಾರ, ಲಿಂಗಾರ್ಪಿತಗಳಿಂದ ತೃಪ್ತಿಹೊಂದುತ್ತ ಆಳಂದ ತುಂದಿಲಿರಾಗಿ ಆಚರಿಸುದದೇ ಭಕ್ತಾತ್ಮನ ಕರ್ತವ್ಯವಾಗಿದೆ. ಈ ಪರಿಯನ್ನೇ ಮಂತ್ರಗೋಪ್ಯವು "ತ್ರಿವಿಧ ಮುಖ ತ್ರಿವಿಧ ತಾಣ ತ್ರಿವಿಧ ಕೋಣೆಗಳೊಳಗೆ। ತ್ರಿವಿಧ ಲಿಂಗಾರ್ಚನೆಗೆ ತ್ರಿವಿಧ ಪೂಜೆ॥ ತ್ರಿವಿಧ ಲಿಂಗಾರ್ಪಣಕೆ ತ್ರಿವಿಧ ಪ್ರಸಾದಕ್ಕೆ। ತ್ರಿವಿಧ ಪರಿಣಾಮಿ ತಾನಾದ ಶರಣ ॥೧॥" ರಹಸ್ಯವಾಗಿ ತನು ಮನ ಭಾವಂಗಳಿಗೆ ಬೋಧಿಸುತ್ತದೆ.

ಮಣ್ಣೆತ್ತಿನ ಅಮಾವಾಸ್ಯೆಯ ಮುಂದೆ ಕುಂಬಾರನು ಮಣ್ಣೆತ್ತುಗಳನ್ನು ಮಾಡಿ ಮಾರಿ, ತನ್ನ ಕಾಯಕವನ್ನು ವ್ಯಕ್ತಪಡಿಸುತ್ತಿರುವನಷ್ಟೇ. ಎತ್ತುಗಳನ್ನು ಎಲ್ಲರೂ ನೋಡುತ್ತಿದ್ದರೂ ಆ ಎತ್ತಿನ ಸ್ವರೂಪಾಕೃತಿಗಳನ್ನು ಒಮ್ಮೆಲೇ ಮಾಡ ಹೋದರೆ ಸಾಧಿಸುವದಿಲ್ಲ. ಆದರೆ ಕುಂಬಾರನು ತನ್ನ ತಂದೆಯ

ನೇತೃತ್ವದೊಳಗೆ ಮೊದಲು ಶಿಕ್ಷಣ ಹೊಂದಿ ಎತ್ತಿನಾಕೃತಿಯ ಅಂಗ ಪ್ರತ್ಯಂಗ ಗಳನ್ನು ಕಣ್ಣಿನಿಂದ ನೋಡುತ್ತ, ಮನದಲ್ಲಿ ಮೂಡಿಸುತ್ತ, ಭಾವದಲ್ಲಿ ಬಿಂಬಿಸುತ್ತ ಕೈಗಳಿಂದ ಮಾಡುತ್ತ ಸಾಧನೆಯುಳ್ಳವನಾದರೆ ಮಾತ್ರ ಸಾಧ್ಯವಾಗುವದು. ಆದರೂ ಎತ್ತಿನ ಕಳೆಯು ಪೂರ್ಣವಾಗಿ ಕಂಡುಬರಬೇಕಾದರೆ, ಆತನು ತನ್ನ ಕ್ರಿಯಾಶಕ್ತಿಯನ್ನೂ ದೃಷ್ಟಿಶಕ್ತಿಯನ್ನೂ ಮನಜ್ಞಾನ ಶಕ್ತಿಯನ್ನೂ ಭಾವದ ಬಲುಮೆಯನ್ನೂ ಚಿಚ್ಛಕ್ತಿಯನ್ನು ಸರಿಯಾಗಿ ಉಪಯೋಗಿಸಲೇ ಬೇಕಾಗುತ್ತದೆ. ಗುರುವು ಲಿಂಗದ ಕಲೆಯನ್ನು ಶಿಷ್ಯನ ಹಸ್ತಮಸ್ತಕ ಸಂಯೋಗದಿಂದ ಭಾವಕ್ಕೂ ಭಾವದಿಂದ ಮನಕ್ಕೂ ಮನದಿಂದ ದೃಷ್ಟಿಗೂ ದೃಷ್ಟಿಯಿಂದ ಕರಕ್ಕೂ ದಯಪಾಲಿಸಿ ಲಿಂಗದಲ್ಲಿ ಪೀಠ, ಕಟಿ, ವೃತ್ತ, ಗೋಮುಖ, ನಾಳ, ಗೋಳಕಗಳೆಂಬ ಭಾಗಗಳನ್ನು ಈಶ ಸೃಷ್ಟಿಸಿದ ಮಾನೀಶನ ಶರೀರದೊಳಿದ್ದ ಆಯಾ ಆರು ಸ್ಥಾನಗಳ ಲಕ್ಷಣಗಳನ್ನೇ ಆ ಇಷ್ಟಲಿಂಗದಲ್ಲಿ ಪ್ರತಿದೋರಿಸುತ್ತ ಆ ಲಿಂಗಪ್ರಾಣ ಪ್ರತಿಷ್ಠೆಯನ್ನು ದೀಕ್ಷಾ ತ್ರಯಗಳಿಂದ ಶುದ್ಧಿಸಿ, ಆ ಲಿಂಗಾಕೃತಿಗೂ ಶಿಷ್ಯನೊಳಿದ್ದ ತಾರಕಾಕೃತಿ ದಂಡಕಾಕೃತಿ ಕುಂಡಲಾಕೃತಿ, ಅರ್ಧಚಂದ್ರಾಕೃತಿ, ದರ್ಪಣಾಕೃತಿ, ಜ್ಯೋತಿ ರಾಕೃತಿಗಳನ್ನು ಕಾಣಿಸಿಕೊಡುತ್ತಾನೆ. ಇಷ್ಟೇ ಅಲ್ಲ. ಶಿವಪೂಜಾ ಕಾಲಕ್ಕೆ ಇಷ್ಟ ಪ್ರಾಣ ಭಾವಲಿಂಗಗಳ ಪೂಜೆಗಳೊಳು ಪೂಜಕನ ದೃಷ್ಟಿ ಮನ ಭಾವಗಳು ಕ್ರಮದಿಂದ ತನು (ಕ್ರಿಯೆ), ಮನ (ಜ್ಞಾನ), ಭಾವ (ಮಹಾಜ್ಞಾನ) ಗಳ ಯೋಗಾನು ಸಂಧಾನವು ಬೆಳೆಯುವಂತೆ ಶಿಷ್ಯನಿಗೆ ಶಿವಯೋಗಾನುಭವವನ್ನು ಬೋಧಿಸುತ್ತಾನೆ. ಷಟ್‌ಸ್ಥಾನಗಳಲ್ಲಿ ಅಂಗ, ಲಿಂಗ ಶಕ್ತಿ, ಭಕ್ತಿ, ಹಸ್ತ, ಮುಖ, ಪದಾರ್ಥ, ಪ್ರಸಾದಗಳ ಅಷ್ಟ ಸಕೀಲಗ ಳನ್ನು ಸಾಂಗಗೊಳಿಸುತ್ತಾನೆ. ಪೀಠಾದಿ ಗೋಳಕಾಂತ್ಯದ ವರೆಗೆ ಪರಾ ಗೂಢಾದಿ ಸಂಜ್ಞೆಗಳ ಸವಿಸ್ತಾರವನ್ನೂ, ಸಚ್ಚಿದಾನಂದ ನಿತ್ಯಪರಿಪೂರ್ಣ ಅಖಂಡಗಳ ಲಕ್ಷಣಗಳನ್ನೂ, ನಕಾರಾದಿ ಷಟ್ ಪ್ರಣವಗಳನ್ನೂ, ಸಾದಾ ಖ್ಯಕಲೆ, ಅಧಿದೇವತೆ, ಪೂಜಾರಿ ಮೊದಲಾದ ೧೦೮, ೨೧೬ ಸಕೀಲಗಳ ಗೊತ್ತುಗುರಿಗಳನ್ನೂ ಮಾಡಿಕೊಡುತ್ತಾನೆ. ಒಟ್ಟಿನಲ್ಲಿ ಇಷ್ಟಪ್ರಾಣ ಭಾವ ಲಿಂಗಗಳ ಏಕತ್ವವನ್ನು ತನುಮನೋ ಭಾವದಲ್ಲಿ ತುಂಬಿ ಚಿಜ್ಜ್ಯೋತಿಯು ಪ್ರಕಟಿಸಿ, ಚಿಜ್ಜ್ಯೋತಿಯೇ ಆಗುವ ನೀತಿ ರೀತಿ ಭಾತಿಗಳ. ಆಚಾರ ಆರುಹುಗಳ ಬಳಿಕೆಯು ಸದಾ ಕಾಲದಲ್ಲಿ ಸಂವರ್ಧಿಸಿ ಸ್ವಸ್ವರೂಪಿಯಾಗಿ

ಜೀವನ ಗುಣದಿಂದ ಮುಕ್ತನಾಗುವ ಸುಲಭ ಮಾರ್ಗವ ಬೆಸಸಿ, ಬೇರಾಗದಂತೆ ಮಾಡಿಬಿಡುತ್ತಾನೆ.

ಮಹನೀಯರೇ? ಈ ಮೊದಲು ವಿವರಿಸಿದ ಕುಂಬಾರನ ಮಣ್ಣಿತ್ತಿನ ಮಾದರಿಯಲ್ಲಿ ತಂದೆಯ ಚಿತ್ಕಲಾಭಾವ ಮನ ದೃಷ್ಟಿಕರದಲ್ಲಿ ಪೃಥಃಕರಣವಾಗಿ ಕಾಣಿಸಿದ ಕೃತಿಗಳನ್ನೇ ಮಗನು, ಏಕೀಕರಣ ಪದ್ಧತಿಯಿಂದ ಮತ್ತು ತನ್ನ ದುಡಿಮೆಯ ಬಲದಿಂದ ಕ್ರಿಯೆ, ದೃಷ್ಟಿ, ಮನ, ಭಾವ ಚಿತ್ಕಲೆಗಳಲ್ಲಿ ಮಣ್ಣಿತ್ತಿನ ಪ್ರತಿಮೆಯನ್ನು ಸರ್ವೋಪರಿ ಪೂರ್ಣಗೊಳಿಸಿದಂತೆ ನಮ್ಮ ವೀರಶೈವ ಮತದಲ್ಲಿ ಕ್ರಿಯಾರೂಪವಾದ ಭಕ್ತಮಾಹೇಶ್ವರಸ್ಥಲ, ಜ್ಞಾನರೂಪವಾದ ಪ್ರಸಾದಿ ಪ್ರಾಣಲಿಂಗಿಸ್ಥಲ, ಭಾವರೂಪವಾದ ಶರಣ ಐಕ್ಯಸ್ಥಲಗಳು ಆಚಾರಸ್ಥರಿಗೆ ಒಳ್ಳೇ ಅನುಕೂಲವಾಗಿವೆ. ಇನ್ನು ಲಿಂಗತ್ರಯಗಳ ಬಗ್ಗೆ ಶಿವಶರಣಾನುಭಾವಗಳನ್ನು ಪರಿಪೂರ್ಣ ದೃಷ್ಟಿಯಿಂದ ಪರಿಶೀಲಿಸುವಾ.

ಶ್ರೀಗುರುಸ್ವಾಮಿ ಕರುಣಿಸಿಕೊಟ್ಟ ಪ್ರಾಣಲಿಂಗವು ಪಂಚಬ್ರಹ್ಮಮುಖವುಳ್ಳ ವಸ್ತುವೆಂದರಿವುದು. ಆ ಪಂಚಬ್ರಹ್ಮಮುಖ ಸಂಜ್ಞೆಯ ಭೇದವೆಂತೆಂದೊಡೆ, ಆವುದಾನೊಂದು ಶಿವಸಂಬಂಧವಾದ ಪರಮತೇಜೋಲಿಂಗವು ತನ್ನ ಭೋಗಾದಿಕಾರಣ ಮೂರ್ತಿಗಳಿಂದುದಯವಾದ ಬ್ರಹ್ಮಾದಿ ತೃಣಾಂತವಾದ ದೇಹಿಗಳಿಂದಲು, ವ್ಯೋಮಾದಿ ಭೂತಗಳಿಂದಲು ಇತ್ಯಾದಿ ಸಮಸ್ತ ತತ್ವಂಗಳಿಂದಲು ಮೇಲಣ ತತ್ವವಪ್ಪುದೇ ಕಾರಣವಾಗಿ ಪರವೆಂಬ ಸಂಜ್ಞೆಯುಳ್ಳದ್ದಾಗಿಹುದು. ಅನಂತ ಕೋಟಿ ಬ್ರಹ್ಮಾಂಡಗಳ ತನ್ನೊಳಡಗಿಸಿಕೊಂಡು ಸಮಸ್ತ ಜಗಜ್ಜನನಕ್ಕೆ ತಾನೇ ಕಾರಣವಾಗಿ ಅವ್ಯಕ್ತ ಲಕ್ಷಿತವಾದ ನಿಮಿತ್ತ. ಗೂಢವೆಂಬ ಸಂಜ್ಞೆಯುಳ್ಳದ್ದಾಗಿಹುದು. ತಾನು ಶೂನ್ಯ ಶಿವತತ್ವ ಭೇದವಾಗಿ ಆಯಸ್ಕಾಂತ ಸನ್ನಿಧಿಯಿಂದ ಲೋಹವೇ ಹೇಗೆ ಭ್ರಮಿಸುವದೋ ಹಾಗೆ ಬ್ರಹ್ಮಾದಿಗಳ ಹೃತ್ಕಮಲದಲ್ಲಿದ್ದು, ತನ್ನ ಚಿಚ್ಛಕ್ತಿಯ ಸನ್ನಿಧಿಯ ಮಾತ್ರದಿಂದ ಅಹಮಾದಿಗಳಿಂ ವ್ಯೋಮಾದಿ ಭೂತಗಳಿಂ ಸೃಷ್ಟಿಸುವದಕ್ಕೆ ತಾನೇ ಕಾರಣ ವಪ್ಪುದರಿಂ ಶರೀರಸ್ಥವೆಂಬ ಸಂಜ್ಞೆಯುಳ್ಳದ್ದಾಗಿರುವದು. ಮೊದಲು ಲಿಂಗಕ್ಷೇತ್ರ ಹೇಳಿ ನಂತರ ಅನಾದಿವತ್ ಸಂಜ್ಞೆ ಹೇಳತಕ್ಕದ್ದು. ತನ್ನ ಸೃಷ್ಟಿ ಶಕ್ತಿಯಿಂದುದಯವಾದ ಸಮಸ್ತ ಸಂಸಾರಾದಿ ಪ್ರಪಂಚವು, ತನ್ನಿಂದಲೇ ಕಾರಣವಪ್ಪುವದರಿಂ ಅನಾದಿವತ್ತೆಂಬ ಸಂಜ್ಞೆಯುಳ್ಳದ್ದಾಗಿರುವದು. ತನ್ನ ಮಾಯಾಶಕ್ತಿಯಿಂದುದಯ

ವಾದ ಪುಲ್ಲಿಂಗ, ಸ್ತ್ರೀಲಿಂಗ ನಪುಂಸಕವೆಂಬ ತ್ರಿಲಕ್ಷಿತವಾದ ಸಮಸ್ತ ಪ್ರಪಂಚವು ವರ್ತಿಸುವದಕ್ಕೆ ತಾನೇ ಕ್ಷೇತ್ರವಾದ ಕಾರಣ ಲಿಂಗಕ್ಷೇತ್ರವೆಂಬ ಸಂಜ್ಞೆಯುಳ್ಳದ್ದಾಗಿಹುದು. ಈಪ್ರಕಾರ ಪರಬ್ರಹ್ಮಲಿಂಗವು ಪಂಚಮುಖ ಸಂಜ್ಞೆಯುಳ್ಳದ್ದಾಗಿರುವದೆಂದುವದು. ಅದೆಂತೆಂದೊಡೆ, ಅದಕ್ಕೆ ವಾತುಳಾಗಮದಲ್ಲಿ "ಅಖಿಳಾರ್ಣವಲಾಯಾನಾಂ ಲಿಂಗತತ್ವಂ ಪರಂ ತತಃ ||ಶ್ಲೋ|| ಪರಂಗೂಢಂ ಶರೀರಸ್ಥಂ ಲಿಂಗಕ್ಷೇತ್ರಮನಾದಿವತ್ | ಯಥಾದಿವ್ಯೈಶ್ವರಂ ತೇಜಸ್ತಲ್ಲಿಂಗಂ ಪಂಚಸಂಜ್ಞಿಕಂ || ಎಂದೆನಿಸುವ ಲಿಂಗವು. ಮತ್ತಂ ವಾಸಿಷ್ಠದಲ್ಲಿ ||ಶ್ಲೋ|| ಪಿಂಡಬ್ರಹ್ಮಾಂಡಯೋರೈಕ್ಯಂ ಲಿಂಗಸೂತ್ರಾತ್ಮನೋರಪಿ । ಸ್ವಬಾಹ್ಯಕ್ಷತಯೋರೈಕ್ಯಂ ಕ್ಷೇತ್ರಜ್ಞ ಪರಮಾತ್ಮನೇಃ || ಎಂದೆನಿಸುವ ಲಿಂಗವು. ಮತ್ತಂ ಬ್ರಹ್ಮಾಂಡ ಪುರಾಣದಲ್ಲಿ ||ಶ್ಲೋ|| ಅಧಿಷ್ಠಾನಾಂ ಸಮಸ್ತಸ್ಯ ಸ್ಥಾವರಸ್ಯ ಚರಸ್ಯಚ । ಜಗತೋಯದ್ಭವೇತ್ತತ್ವಂ ತದ್ದಿವ್ಯಸ್ಥಲಮುಚ್ಯತೇ || ಎಂದೆನಿಸುವ ಲಿಂಗವು. ಮತ್ತಂ ಶಿವರಹಸ್ಯೇ ||ಶ್ಲೋ|| ಮಹಾಲಿಂಗಮಿದಂ ದೇವೀ ಮನೋತೀತಮಗೋಚರಂ | ನಿರ್ನಾಮಂ ನಿರ್ಗುಣಂ ನಿತ್ಯಂ ನಿರಂಜನಂ ನಿರಾಮಯಂ || ಎಂದೆನಿಸುವ ಲಿಂಗವು. ಮತ್ತಂ ಉತ್ತರ ವಾತುಳದಲ್ಲಿ ||ಶ್ಲೋ|| ಆದ್ಯಂತ ಶೂನ್ಯಮತುಲಂ ಪರಿಪೂರ್ಣಮೇಕಂ ಸೂಕ್ಷ್ಮಂ ಪರಾತ್ಪರ ಮನಾಮಯಮಪ್ರಮೇಯಂ । ಭಾವೈಕಗಮ್ಯಮಜಡಂ ಶಿವತತ್ವಮಾಹುಶ್ಚಿಚ್ಛಕ್ತಿ ಸಂಸ್ಫುರಣರೂಢ ಮಹಾತ್ಮಲಿಂಗಂ || ಎಂದೆನಿಸುವ ಲಿಂಗವು. ಮತ್ತಂ ಅಥರ್ವಣವೇದದಲ್ಲಿ ||ಶ್ಲೋ|| ಶಿವಾತ್ಪರಾತ್ಪರಂ ಸೂಕ್ಷ್ಮಂ ನಿತ್ಯಂ ಸರ್ವಗತಾವ್ಯಯಂ। ಅನಿಂದಿತ ಮನೌಪಮ್ಯಮಪ್ರಮಾಣಮನಾಮಯಂ || ಶುದ್ಧತ್ವಾಚ್ಛಿವ ಮುದ್ದಿಷ್ಟಂ ಪರಾರೂಢ್ವರ್ಗಂ ಪರಾತ್ಪರಂ || ಎಂದೆನಿಸುವ ಲಿಂಗವು. ಮತ್ತಂ ಸಾಮವೇದದಲ್ಲಿ ||ಶ್ಲೋ|| ಅನಂತಮವ್ಯಕ್ತಮಚಿಂತ್ಯಮೇಕಂ ಹರಂತಮಾಶಾಂಬರಮಂಬರಾಗಂ । ಲೋಕೈಕನಾಥಂ ಭುಜಗೇಂದ್ರಹಾರಂ । ಅಜಂಪುರಾಣಂ ಪ್ರಣಮಾಮಿ ನಿತ್ಯಂ || "ಅಣೋರಣೀಯಾನ್" ಎಂದೆನಿಸುವ ಲಿಂಗವು. ಮತ್ತಂ ಶಿವಧರ್ಮ ಪುರಾಣದಲ್ಲಿ ||ಶ್ಲೋ|| ಆಕಾಶಂ ಲಿಂಗಮಿತ್ಯಾಹುಃ ಪೃಥ್ವೀತಸ್ಯಾದಿ ಪೀಠಿಕಾ ! ಆಲಯಸ್ಸರ್ವ ಭೂತಾನಾಂ ಲಯನಾಲ್ಲಿಂಗಮುಚ್ಯತೇ || ಎಂದೆನಿಸುವ ಲಿಂಗವು. ಮತ್ತಂ ಗಾರುಡ ಪುರಾಣದಲ್ಲಿ ||ಶ್ಲೋ|| ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ । ಲಿಂಗಬಾಹ್ಯಾತ್ಪರನ್ನಾಸ್ತಿ ತಸ್ಮೈ ಶ್ರೀಗುರವೇ ನಮಃ ಎಂದೆನಿಸುವ ಲಿಂಗವು.

ದುತ್ತಂ ಯಜುರ್ವೇದದಲ್ಲಿ ।ಶ್ಲೋ॥ ವಿಶ್ವತಶ್ಚಕ್ಷುರುತ ವಿಶ್ವತೋಮುಖ ವಿಶ್ವತೋ ಬಾಹುರುತ ವಿಶ್ವತೋಪಾತ್ ಸ ಬಾಹುಭ್ಯಾಂ ದಮತಿ ಸಂಪದ ಸ್ತ್ರೈರ್ದ್ಯಾವಾ ಭೂಮೀ ಜನಯನ್ನೇವ ಏಕ ಏವ ॥ ಎಂದೆನಿಸುವ ಲಿಂಗವು. ಮತ್ತಂ ಗಾಯತ್ರೀ ॥ ಓಂ ಭೂ: ಓಂ ಭುವಃ ಓಂ ಸುವಃ ಓಂ ಮಹಃ ಓಂ ಜನಃ ಓಂ ತಪಃ ಓಂ ಸತ್ಯಂ ಓಂಸವಿತುರ್ವರೇಣ್ಯಂ ಭರ್ಗೋದೇವಸ್ಯಧೀ ಮಹಿ ಧಿಯ್ಯೋ ಯೋನಃ ಪ್ರಚೋದಯಾತ್। ಎಂದೆನಿಸುವಲಿಂಗವು. ಮತ್ತಂ ಸ್ಕಂದಪುರಾಣದಲ್ಲಿ ॥ಶ್ಲೋಂ॥ ಲೀಯತೇ ಗಮ್ಯತೇಯತ್ರ ಏನಸರ್ವಚರಾಚರಂ ತದೇವ ಲಿಂಗಮಿತ್ಯುಕ್ತಂ ಲಿಂಗತತ್ವಪರಾಯಣೈಃ ಎಂದೆನಿಸುವ ಲಿಂಗವು. ಮತ್ತಂ ಜ್ಞಾನವೈಭವಖಂಡದಲ್ಲಿ ॥ಶ್ಲೋ॥ ಲೀಯತೇ ಲಯ ಸಂಪ್ರೋಕ್ತಂ ಗಕಾರಂ ಸೃಷ್ಟಿರುಚ್ಯತೇ। ಲಯನಾದ್ಗಮನಂಚೈವ ಲಿಂಗಶಬ್ದ ಮಿಹೋಚ್ಯತೇ॥ ಎಂದೆನಿಸುವ ಲಿಂಗವು. ಮತ್ತಂ ಮಹಿಮ್ನದಲ್ಲಿ ।ಶ್ಲೋ॥ ಚಕಿತಮಭಿಧತ್ತೆ ಶೃತಿರಪಿ॥ ಎಂದೆನಿಸುವ ಲಿಂಗವು. ಮತ್ತಂ ಶಿವಧರ್ಮೋತ್ತರದಲ್ಲಿ॥ ನಜಾನಂತಿ ಪರಂಭಾವಂಯಸ್ಯ ಬ್ರಹ್ಮಸುರಾದಯಃ ॥ ಎಂದೆನಿಸುವಲಿಂಗವು. ಮತ್ತಂ ಪುರುಷಸೂಕ್ತದಲ್ಲಿ॥ ಅತ್ಯತಿಷ್ಠದ್ದಶಾಂಗುಲಂ॥ ಎಂದೆನಿಸುವ ಲಿಂಗವು. ಮತ್ತಂ ಉಪನಿಷತ್ತಿನಲ್ಲಿ "ಯತೋವಾಚೋನಿವರ್ತಂತೇ ಅಪ್ರಾಪ್ಯಮನಸಾ ಸಹ" ಎಂದೆನಿಸುವ ಲಿಂಗವು. ಮತ್ತಂಕೂರ್ಮ ಪುರಾಣದಲ್ಲಿ॥ ವಾಚಾ ತೀತಂ ಮನೋತೀತಂ ನಿರಂಜನಂ। ಅವರ್ಣಮಕ್ಷರಂ ಬ್ರಹ್ಮನಿತ್ಯಂ ಧ್ಯಾ ಯಂತಿಯೋಗಿನಃ॥ ಎಂದೆನಿಸುವ ಲಿಂಗವು. ಮತ್ತಂ ಋಗ್ವೇದದಲ್ಲಿ॥ ಅಯಂ ಮೇಹಸ್ತೋ ಭಗವಾನ್ ಅಯಂಭಗವತ್ತರಃ। ಅಯಂಮೇ ವಿಶ್ವಭೇಷಜಃ ಅಯಂ ಶಿವಾಭಿಮರ್ಶನಂ। ಅಯಂಮಾತಾ ಅಯಂಪಿತಾ ಅಯಂ ಜೀವಾ ತುರಾಗಮತ್॥ ಎಂದೆನಿಸುವ ಲಿಂಗವು. ಮತ್ತಂ ಉತ್ತರವಾತುಳದಲ್ಲಿ ॥ ಸಬಾಹ್ಯಾಭ್ಯನತರಂ ಸಾಕ್ಷಾಲ್ಲಿಂಗಜ್ಯೋತಿಪರಂ ಸ್ವಕಂ ತಿಲೇ ತೈಲಮಿವ ಭಾತಿ ಮರಣ್ಯಾಮಿವಪಾವಕः। ಕ್ಷೀರೇ ಸರ್ಪಿರಿವಸ್ತೋತ್ರೇ ಶಂಭುಸ್ಸ್ಥಿರಮಾತ್ಮನಿ। ಏಕೋಯಂ ಪುರುಷೋ ವಿಶ್ವಸ್ತೈಜಸಃ ಪ್ರಾಜ್ಞರೂಪಕಃ ಸರ್ವೇಷ್ವಂಗೇಷು ಸಂಯುಕ್ತಮುಪಾಸಸ್ತೇ ಲಿಂಗಮುಸ್ವಯಂ॥ ಎಂದೆನಿಸುವ ಲಿಂಗವು. ಮತ್ತಂ ಶಿವರಹಸ್ಯದಲ್ಲಿ॥ ಹರರೂಪಂ ಕಾಯ ಸಂಬಂಧ ಗುರುರೂಪಂ ಪ್ರಾಣ ಸಂಯುತಂ। ಅಶರೀರಾತ್ಮ ಸಂಬಂಧ ಗುರುಶಿಷ್ಯ ಮನುಗ್ರಹಂ॥ ಎಂದೆನಿ ಸುವ ಲಿಂಗವು. ಮತ್ತಂ ಲೈಂಗ್ಯದಲ್ಲಿ॥ ಅನಯೋರ್ದೃಷ್ಟಿಸಂ ಯೋಗಾ ಜ್ಜಾಯತೇ ಜ್ಞಪ್ತಿರೂಪಿಣೀ। ತಯೈವ ವೇದದೀಕ್ಷಾಸ್ಯಾನ್ಮಂತ್ರ ರೂಪೇಣತಾಂ

ಶೃಣು॥ ಎಂದೆನಿಸುವ ಲಿಂಗವು. ಮತ್ತಂ ಕಾಳಿಕಾ ಖಂಡದಲ್ಲಿ॥ ಅಂಗಂಚ ಲಿಂಗಂಚ ಮುಖಂಚಹಸ್ತೇ ಶಕ್ತಿಶ್ಚಭಕ್ತಿಶ್ಚ ತಥಾರ್ಪಣಂಚ। ಆನಂದಮೇವ ಸ್ವಯಮರ್ಪಣಂಚ ಪ್ರಸಾದರೂಪೇಣ ಭವೇತ್ರಿತತ್ತ್ವಂ॥ ಎಂದೆನಿಸುವಲಿಂಗವು ಮತ್ತಂ ಶಂಕರಸಂಹಿತೆಯಲ್ಲಿ॥ ತದೇವ ಹಸ್ತಾಂಬುಜಪೀಠಂ ಮಧ್ಯೇನಿಧಾಯ ಲಿಂಗಂ ಪರಮಾತ್ಮಚಿಹ್ನಂ। ಸಮರ್ಚಯೇದೇಕಧಿಯೋಪಚಾರೈರ್ನರಶ್ಚ ಬಾಹ್ಯಾಂತರ ಭೇದಭಿನ್ನಂ॥ ಎಂದೆನಿಸುವಲಿಂಗವು. ಮತ್ತಂ ವೀರಾಗಮ ದಲ್ಲಿ॥ ಭಾವಸ್ಥಾನಾಂಗ ಲಿಂಗೇಷು ಪ್ರಾಣೇ ಲಿಂಗಾಂತರಧ್ವಯಂ ಸನ್ನಿ ಧಾತ್ಪರಂ ಲಿಂಗಂಸ್ಥಾಪ್ಯಂ ತತ್ರೈವ ಧೀಮತಾಂ॥ ಎಂದೆನಿಸುವಲಿಂಗವು. ಮತ್ತಂ ಶಿವರಹಸ್ಯದಲ್ಲಿ॥ ಕರ್ಣದ್ವಾರೇಯಥಾವಾಕ್ಯಂ ಗುರುಣಾ ಲಿಂಗಮೀ ರ್ಯತೇ। ಇಷ್ಟಪ್ರಾಣಸ್ತಥಾಭಾವ ಸ್ತ್ರೀಧಾಮ್ಯೆಕ್ಯಂ ವರಾನನೇ॥ ಎಂದೆ ನಿಸುವಲಿಂಗವು. ಮತ್ತಂಶಿವರಹಸ್ಯದಲ್ಲಿ॥ ಏಕಮೂರ್ತಿಸ್ತ್ರಯೋಭಾಗಂ ಗುರುಲಿಂಗಂತು ಜಂಗಮಂ। ಜಂಗಮಂಚ ಗುರುರ್ಲಿಂಗಂ ತ್ರಿವಿಧಂ ಲಿಂಗ ಮುಚ್ಯತೇ॥ ಎಂದೆನಿಸುವ ಲಿಂಗವು. ಗುರುಲಿಂಗಜಂಗಮ ರೂಪಾಗಿ ಎನ್ನ ಕರಸ್ಥಲಕ್ಕೆ ಬಿಜಯಂಗೈದು ಕರತಳಾಮಲಕವಾಗಿ ತೋರುತ್ತೈದಾನೆ. ಆಹಾ ಎನ್ನ ಪುಣ್ಯವೇ! ಆಹಾ ಎನ್ನ ಭಾಗ್ಯವೇ! ಆಹಾ ಎನ್ನ ಸತ್ಯವೇ! ಆಹಾ ಆಹಾ ಎನ್ನ ನಿತ್ಯವೇ! ಶಿವಶಿವ ಮಹಾದೇವ ಮಹಾದೇವ ಮಹಾದೇವ ನೀನೇ ಬಲ್ಲೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ ॥

ವೇದಾಗಮಶ್ರುತಿಸ್ಮೃತಿಪುರಾಣಾದಿಗಳಲ್ಲಿ ತಮ್ಮ ತಮ್ಮ ದಿವ್ಯದೃಷ್ಟಿಗೆ ಹೊಳೆದ ಲಿಂಗಾನುಭಾವಿಗಳು ಭಾವಿಸಿದ ಲಿಂಗತತ್ತ್ವ, ಲಿಂಗಮಹತ್ವಗಳನ್ನು ಅರುಹಿದ ಬಳಿಕ ಒಂದೇಲಿಂಗವು ಲಿಂಗತ್ರಯವಾಗಿ ಇಷ್ಟಪ್ರಾಣಭಾವಗಳೆಂದೆ ನಿಸಿ ಆಯಾಲಿಂಗದ ಅನುಭಾವವನ್ನು ಉಸುರಿದ್ದನ್ನಷ್ಟು ವಿವರಿಸುವಾ.

ವ॥ ಹೊರಸವಿ, ಒಳಸವಿ, ತೀರಾಸವಿ. ಹೊರಸವಿಯಿಂದ ಬ್ರಹ್ಮಸತ್ತ ಒಳಸವಿಯಿಂದ ವಿಷ್ಣು ಸತ್ತ. ತೀರಾಸವಿಯಿಂದ ರುದ್ರಸತ್ತ. ಷಡ್ರುಚಿ ಯಿಂದ ಬ್ರಹ್ಮಾಂಡದ ಜನರು ಸತ್ತರು. ಇಂತೀ ಸವಿಯ ಸೇವಿಸಿದಾತನೇ ನಿಜಲಿಂಗೈಕ್ಯ ನಿಃಕಳಂಕ ನಿರ್ವಾಣಯ ಪ್ರಭುವೆ ॥೧॥

ಅರ್ಥ:— ಉತ್ಪತ್ತಿಯ ಮೇಲೆ ಕಡಿದರೆ ಸವಿ ತಟ್ಟುತ್ತಿರ್ಪುದಲ್ಲವೆ, ಒಳಗೆ ಕಡಿದರೆ ಮಹಾ ಕಠಿಣವಾಗಿ ತೋರುವಹಾಗೆ, ಇಷ್ಟಲಿಂಗವನ್ನು ಇದಿರಿಟ್ಟು ಅಷ್ಟವಿಧಾರ್ಚನೆ ಷೋಡಶೋಪಚಾರವನು ಮಾಡಿದಡೆ ಭಿನ್ನ

ಭಾವದ ಜೀವಾತ್ಮರಿಗೆ ಮಹಾರಮ್ಯನಾಗಿ ತೋರುವದು. ಆ ಇಷ್ಟಲಿಂಗದ ಚಿತ್ಕಳೆಯನು ಅಂತರಂಗಕ್ಕೆ ವೇಧಿಸು ಎಂದರೆ, ಕರ್ಮಕಾಂಡಿಗೆ ಅಸಾಧ್ಯವಾಗಿ ತೋರುತ್ತಿಹುದೆಂಬುದೀಗ ಹೊರಸವಿ ಎಂಬ ಶಬ್ದಕ್ಕರ್ಥ. ತೆಂಗಿನ ಕಾಯಿಯ ಮೇಲೆ ಕಡಿದರೆ ಕಠಿಣವಾಗಿ ತೋರುವದು. ಒಡೆದು ಒಳಗೆ ನೋಡಿದರೆ, ರುಚಿಯಾಗಿ ತೋರುವದು, ಹಾಗೆ ದೇಹಭಾವವಳಿಯದೆ, ಪ್ರಾಣಲಿಂಗದಲ್ಲಿ ಸಮರಸ ಭಕ್ತಿ ಎಂಬುದು ಕರ್ಮಕಾಂಡದ ವೇದಾಂತಿ, ಯೋಗಮಾರ್ಗ,ಸಿದ್ಧಾಂತಿಗಳಿಗಸಾಧ್ಯ. ಆ ದೇಹಭಾವ ಸತ್ಕ್ರಿಯೆ ಲಿಂಗದಲ್ಲಿ ಅಳಿದು ಸುಜ್ಞಾನ ಸ್ವರೂಪವಾದ ಪ್ರಾಣಲಿಂಗದಲ್ಲಿ ಅವಿರಳ ಸಂಬಂಧಿಯಾದ ಜ್ಞಾನ ಕಲಾತ್ಮಂಗೆ ಶಿವಸುಖ ಮಹಾನಂದವಾಗಿ ತೋರುವದೆಂಬುದೀಗ ಒಳಸವಿ ಎಂಬ ಶಬ್ದಕ್ಕರ್ಥ. ಬೆಲ್ಲದ ಪೆಂಟೆಯು ಯಾವಕಡೆ ಕಡಿದರೆಯೂ ರುಚಿಯಾಗಿ ತೋರುವದಲ್ಲದೆ, ಕಹಿಯಾಗಿ ತೋರದು. ಹಾಗೆ ಇಷ್ಟ ಪ್ರಾಣವ ನೊಳಕೊಂಡ ಭಾವಲಿಂಗದಲ್ಲಿ ಸಮರಸವಾದ ಶಿವಜ್ಞಾನಿಗಳು ಇಂದ್ರಿಯಗಳನ್ನು ಶ್ರೀಗುರು ಆವಕಡೆಗೆ ಮುಟ್ಟಿ ನೋಡಿದರೆಯೂ ಅಮೃತ ಮಯವಾಗಿ ತೋರುವದಲ್ಲದೆ, ಸಂಸಾರಸಾರವಾಗಿ ತೋರಲಿಲ್ಲವೆಂಬುದೀಗ ತೀರಾ ಸವಿಯೆಂಬ ಶಬ್ದಕ್ಕರ್ಥ, ಚಿದಂಶಿಕನಾದ ಜ್ಞಾನಕಲಾತ್ಮನು ಇಷ್ಟ ಲಿಂಗವನು ಬ್ರಹ್ಮತತ್ವಾಂಶಿಕವಾದ ಸ್ಥೂಲ ತನುವಿನಲ್ಲಿ ಸ್ವಾಯತವಮಾಡಿ, ಆ ಸ್ಥೂಲ ತನುವಿನ ಪ್ರಕೃತಿಯನು ನಷ್ಟವಮಾಡಿದನೆಂಬುದೀಗ ಹೊರಸವಿ ಯಿಂದ ಬ್ರಹ್ಮಸತ್ತನೆಂಬ ಶಬ್ದಕ್ಕರ್ಥ. ಆ ಇಷ್ಟಲಿಂಗದ ಪ್ರಾಣಕಳಾ ಸ್ವರೂಪ ಚೈತನ್ಯವಾದ ಪ್ರಾಣಲಿಂಗವನು ವಿಷ್ಣು ತತ್ವಾಂಶಿಕ ಸೂಕ್ಷ್ಮತನುವಿನಲ್ಲಿ ಸ್ವಾಯತವಮಾಡಿ, ಆ ಸೂಕ್ಷ್ಮತನು ಪ್ರಕೃತಿಯ ನಷ್ಟವ ಮಾಡಿದನೆಂಬುದೀಗ ಒಳಸವಿಯಿಂದ ವಿಷ್ಣು ಸತ್ತನೆಂಬ ಶಬ್ದಕ್ಕರ್ಥ. ಪ್ರಾಣಲಿಂಗದ ಪರಮಾ ನಂದದ ಸ್ವರೂಪವಾದ ಭಾವಲಿಂಗವನು ರುದ್ರತತ್ವಾಂಶಿಕವಾದ ಕಾರಣ ತನುವಿನಲ್ಲಿ ಸ್ವಾಯತವಮಾಡಿ, ಆ ತನುವಿನ ಪ್ರಕೃತಿಯ ನಷ್ಟಮಾಡಿದ ನೆಂಬುದೀಗ ತೀರಾಸವಿಯಿಂದ ರುದ್ರಸತ್ತ ಎಂಬ ಶಬ್ದಕ್ಕರ್ಥ. ಆ ಇಷ್ಟಪ್ರಾಣ ಭಾವಲಿಂಗದ ಏಕಸ್ವರೂಪವಾದ ಘನ ಮಹಾ ಲಿಂಗವನು ಷಡ್ವಿಧಾಂಗದಲ್ಲಿ ಷಡ್ವಿಧಲಿಂಗವನ್ನು ಮಾಡಿ ಸಂಬಂಧಿಸಿ, ಆ ಷಡ್ವಿಧಾಂಗದಲ್ಲಿರುವ ಮನ ಮೊದಲಾಗಿ ೬೬ ಕೋಟಿ ಕರಣಗಳ ಪ್ರಕೃತಿಯ ನಷ್ಟವ ಮಾಡಿದನೆಂಬುದೀಗ ಷಡ್ರುಚಿಯಿಂದ ಬ್ರಹ್ಮಾಂಡದ ಜನರು ಸತ್ತರು ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗವನು ಸರ್ವಾಂಗದಲ್ಲಿ ಸಂಬಂಧವ ಮಾಡಿಕೊಂಡ ಶಿವಶರಣನು ಪ್ರಳಯ

ವಿರಹಿತವಾದ ಮಹಾಲಿಂಗೈಕ್ಯವೆಂಬುದೀಗ. ಇಂಥಾ ಸವಿಯ ಸೇವಿಸಿದಾತ ನಿಜಲಿಂಗೈಕ್ಯ ನಿಷ್ಕಳಂಕ ನಿರ್ವಾಣಯ ಪ್ರಭುವೇ ಎಂಬ ಶಬ್ದಕ್ಕರ್ಥ.

ಆತ್ಮಾನಂ ಬ್ರಹ್ಮ, ವಿಜ್ಞಾನಂ ಬ್ರಹ್ಮ, ಚೈತನ್ಯಂ ಬ್ರಹ್ಮ ಎಂಬ ಅನುಭಾವಿಗಳ ವಿಚಾರದಂತೆ ನಮ್ಮ ಶರೀರದಲ್ಲಿ ಕಂಡುಬರುವ ಷಟ್‌ಸ್ಥಲ ಗಳಿಗನುಸಾರವಾಗಿ ಪರಂ ಬ್ರಹ್ಮ, ವಿಜ್ಞಾನಂ ಬ್ರಹ್ಮ, ಕಲಾ ಬ್ರಹ್ಮ, ಪಿಂಡ ಬ್ರಹ್ಮ, ಮೂರ್ತಿ ಬ್ರಹ್ಮಗಳೆಂದು ಬ್ರಹ್ಮಷಟ್ಕಗಳ ಮಹಾಲಿಂಗಾದಿ ಆಚಾರಲಿಂಗಾಂತವಾದ ಷಡ್ಲಿಂಗಗಳಿರುತ್ತವೆ. ಅದರಂತೆ ಪೃಥ್ವಿ ಆದಿಯಿಂದ ಆತ್ಮಾಂಗದ ವರೆಗೆ ಷಡಂಗಗಳಿರುತ್ತವೆ. ಇದರಂತೆ ಭಕ್ತಾದಿ ಐಕ್ಯಾಂತ ಸ್ಥಲಗಳೂ ಆಧಾರಾದಿ ಆಜ್ಞೇಯಾಂತವಾದ ಷಟ್‌ಚಕ್ರಗಳೂ ಶಟ್ ಶಕ್ತಿ ಗಳೂ ಷಟ್‌ಭಕ್ತಿಗಳೂ ಷಡ್ರಸಗಳೂ ಷಣ್ಮುಖಗಳೂ ಷಟ್ಪದಾರ್ಥಗಳೂ ಷಟ್ಪ್ರಸಾದಗಳೂ ಇರುವವೆಂಬದಾಗಿ ಅಷ್ಟ ಸಕೀಲವನ್ನರಿತು ಆಚರಿಸಬೇ ಕಾಗುತ್ತದೆ. ಈ ಷಟ್‌ಸ್ಥಲಗಳನ್ನು ವಿಚಾರಿಸಿದಲ್ಲಿ ಅಂಗಸ್ಥಲ ಲಿಂಗಸ್ಥಲ ಗಳೆಂಬ ದ್ವಿವಿಧಗಳು. ಅಂಗಸ್ಥಲಗಳು ೪೪. ಲಿಂಗಸ್ಥಲಗಳು ೫೭. ಒಟ್ಟು ೧೦೧ ಸ್ಥಲಗಳು. ಈ ಸ್ಥಲಗಳಲ್ಲಿ ಮುಖ್ಯವಾಗಿ ತನು ಮನ ಭಾವ ಕ್ರಿಯೆ ಗಳು. ಅರ್ಥಾತ್ ಇಷ್ಟ ಪ್ರಾಣ ಭಾವ ಲಿಂಗಗಳ ಉಪಾಸನೆಯು. ಈ ಉಪಾಸನೆಯು ಷಟ್‌ಭಕ್ತಿ ಶಕ್ತಿಗಳಿಂದ ಮಾಡಲ್ಪಡುತ್ತ, ಷಟ್‌ಭಕ್ತಿಗಳಿಂದ ಜೀವನು ಷಟ್‌ಶಕ್ತಿಗಳಿಂದೊಡಗೂಡಿದ ಪರಮನನ್ನು ಬೆರೆಯುವದೇ ಷಟ್ ಸ್ಥಲಾಚರಣೆಯ ಗುರಿಯು.

ಭಕ್ತಸ್ಥಲಾಂಗದಲ್ಲಿ ಪಿಂಡ, ಪಿಂಡಜ್ಞಾನಸ್ಥಲಗಳನ್ನು ಅನುಭಾವಿಗಳಿಂದ ಕೇಳಿ ಶ್ರವಣ ಮನನ ನಿಧಿಧ್ಯಾಸನಾಗಲು ಸಂಸಾರ ಹೇಯಸ್ಥಲವು ತಾನಾಗಿ ಒದಗುವದು. ಇದರಿಂದ ಗುರುಕಾರುಣ್ಯವೂ ಲಿಂಗಸ್ಥಲ ವಿಭೂತಿಸ್ಥಲಗಳೂ ಅವಗತವಾಗಿ, ರುದ್ರಾಕ್ಷಿ ಮಂತ್ರಗಳ ಪಠಣದಿಂದ ಭಕ್ತನಾಗಿ, ಭಕ್ತಸ್ಥಲ ವಳವಡುವದು. ಭಕ್ತನಾದ ಬಳಿಕ ಆಚರಿಸುತ್ತ ಹೋದಂತೆ ಉಭಯ ಸ್ಥಲ, ತ್ರಿವಿಧ ಸಂಪತ್ಸ್ಥಲ, ಚತುರ್ವಿಧ ಸಾರಾಯ ಸ್ಥಲಗಳು ಇಂಬುಗೊಳ್ಳುವವು. ನಂತರ ಗುರು ಲಿಂಗ ಜಂಗಮ ಶರಣರ ಒಡನಾಟವೂ ಆಚಾರ ಕ್ರಿಯೆಗಳೂ ಅಂಗವನ್ನೊಳಕೊಳ್ಳುವವು. ದಾಸೋಹ ಭಾವವಿಡಿದು ಭಕ್ತ ಜಂಗಮರ ಬಂದ ಬರವನು, ನಿಂದ ನಿಲವನರಿತು ಆಚಾರ ಕ್ರಿಯೆಗಳನ್ನು ಭಕ್ತಿ ಮುಂದು ಗೊಂಡು ಸಾಗಿಸುತ್ತಿರಲು ಮೊದಲು ಉಪಾಧಿ ನಂತರ ನಿರುಪಾಧಿ ಅಲ್ಲಿಂದ

ಸಹಜ ಮಾಟಸ್ಥಳಗಳ ಕೂಟವು ನೀಟಾಗಿ ನಿಲ್ಲುವವು. ಇಷ್ಟಾಗಬೇಕಾದರೆ ಭಕ್ತನ ಲಿಂಗಸ್ಥಳದ ಗುರುತ್ರಯ ಲಿಂಗತ್ರಯ ಜಂಗಮತ್ರಯಗಳು ಅಂಗದೊಡನೆ ಅಭಿನ್ನವಾಗಿ ಏಕಾಕಾರವಾಗುವವು. ಅಂದರೆ ಭಕ್ತನ ಭಕ್ತ, ಭಕ್ತನ ಮಹೇಶ, ಭಕ್ತನ ಪ್ರಸಾದಿ, ಭಕ್ತನ ಪ್ರಾಣಲಿಂಗಿ, ಭಕ್ತನ ಶರಣ, ಭಕ್ತನ ಐಕ್ಯಸ್ಥಲಗಳು ವಿಕಸನ ಹೊಂದಿ ನಿಜಸುಖಾನಂದವು ನಿಂತುಬಿಡುವದು. ಇದರಂತೆ ಮುಂದಿನ ಸ್ಥಲಾನುಭಾವವನ್ನು ತಮ್ಮೆಲ್ಲರ ಭಾವದಲ್ಲಿ ಒಡಮೂಡಿಸಬಹುದು.

ಒಟ್ಟಿನಲ್ಲಿ ಕ್ರಿಯೆ, ಜ್ಞಾನ, ಭಾವಗಳ ತ್ರಿಪುಟಿಯೇ ಷಟ್‌ಸ್ಥಲಾಂತರ್ಗತವು. ಇಂದಿನ ಮುಖ್ಯವಾದ ವಿಷಯವಾದ ಲಿಂಗ, ಆ ಲಿಂಗವೇ ಮೂರಾದ ಇಷ್ಟ ಪ್ರಾಣ ಭಾವಲಿಂಗಗಳು. ಭಾವವೇ ಪ್ರಧಾನವಾದ ಪದವೊಂದನ್ನು ಕೆಳಗೆ ಪಠಿಸುತ್ತೇನೆ.

॥ಪದ॥ ರಾಗ ಮಧುವಂತಿ

ಎನ್ನಯ ಕರಸ್ಥಲಕ್ಕನುವಾದ ಧರ್ಮವು,
ಎನ್ನಯ ಹೃತ್ಕಮಲವ ಬೆಳಗುವ ಪರಂಜ್ಯೋತಿ ॥ಪಲ್ಲ॥

ಹರಿದು ಹತ್ತುವ ಸುಳಿದು ಸೂಸುವ ಪರಿಪರಿಯ ಬಣ್ಣಗಳ ತೋರಿಸಿ।
ಪರಮುಖನಾಗಿ ಕತ್ತಲೆಯೊಳಿರಿಸಿ ಎನ್ನ ನರಕ ಶರೀರಿಯ ಮಾಡದಿರಯ್ಯ

॥೧॥

ಸಾಕಾರದ ಸಂಗದ ಸುಖದಲ್ಲಿ ವ್ಯಾಕುಳನಂ ಮಾಡಿ ಎನ್ನವನಿರಿಸದೆ।
ಸೂಕ್ಷ್ಮ ಶುದ್ಧಾಂತಃಕರಣದ ಮೇಲೆ ಕಮಲಾನನದ ಲಿಂಗದ ಬೆಳಗಿನೊಳುದಿಸು

॥೨॥

ಬೇಕೆನ್ನದೆ ಬೇಡೆನ್ನದೆ ಪರಿಯನ್ನು, ಸಾಕೆನ್ನದ ಸವಿಯನ್ನದ ರುಚಿಯನ್ನು ॥
ಪಾಪ ಪುಣ್ಯಗಳೆಂಬ ಬಯಕೆಗಳ ಸೋಂಕಿಲ್ಲದೆ ನಿರ್ಲೇಪನಾಗಿರಿಸು

॥೩॥

ಅಮಲ ರೂಪಾದಿ ಕಮಲದಲ್ಲಿ ವಿಮಲ ಶುದ್ಧ ಸ್ಫಟಿಕ ಜ್ಯೋತಿಯದರಿ ॥
ಷಡುವರ್ಗವ ಕೊಂಡು ಕಮಳ ನಾಳಸದ ಬಿಂದುವಿನೊಳಗಾಗೆನ್ನುವನಿರಿಸು

॥೪॥

ಕರಣಾದಿಗಳರತವು ಭೂಮಿಯ ಮೇಲೆ ಸರವರದ ಕಮಲದ ಮೇಲೆ ॥
ಪರಿಣಾಮದಲಮೃತ ಬಿಂದು ಕರಗಿ ಎನ್ನಿರವು ಲಿಂಗದಲ್ಲಿ ಲೀಯ್ಯವಾಗಿ

॥೫॥

ಮಾರುತಂಗೂಡಿದ ಪರಿಮಳದಂತೆ ಉರಿಯುಂಡ ಕರ್ಪೂರ ಕರಿದೋರದಂತೆ ॥
ಸದವು ಬಂದು ಸುಸರವಾಗಿ ಎನ್ನಾರವು ಲಿಂಗದಲ್ಲಿ ಲಿಂಗೈಕ್ಯವಾಗಿ

॥೬॥

---

## ಶಿವಾನುಭವ ಪತ್ರಿಕೆ.

ನಿರಸವೆಂಬ ರಸದಲಿ ರಸದಲಿ ರಸವಾಗಿ ಬರುತಿದೆ.
ರವಿಜ್ಯೋತಿ ಚಿಗುರೊಡೆದು ತಣಿಯುತಿದೆ.
ವಿಷಯ ಮಮತೆಯುಲಳಿದ ಮನಕಿದು
ತನಿರಸವ ನೀಡಿ ಉಣಿಸುತಿಹುದು ||೧||

ವಿಚಾರವಾಹಿನಿಯೊಳಗಿಳಿದು
ಇದುವೆ ತನುಮನವ ತಣಿಸುತಿಹುದು.
ರೋಮ ರೋಮದಲಿ ಬೆರೆಯುತಿಹುದು
ಕೇಶವಾಹಿನಿಗಳ ಪಥದಿಂದಲಿಳಿದು. ||೨||

ಶಿವಾನುಭವವೆಂಬ ನುಡಿಯಲಿದು
ನಾಡೆಲ್ಲ ನೆರೆ ತೊಳಗಿ ಹೊಳೆಯುತಿಹುದು
ಜಗದಲಡಗಿರುವ ಐಕ್ಯತೆಯನಿದು
ಕಲೆಯಂತು ನನ್ನಿಯಲಿ ಮಿಲನವಾಗಿಸುತಲಿದು ||೩||

ಮತಿಯಿಂದ ಮುನುಗ್ಗಿಡ ನನ್ನಿಯೆ
ಕರ್ನಾಟಕದ ಕತ್ತಲೆಯು ನೀಗಿದೆಯಾ
ನಿನ್ನ ಮಾತೆಯು ನುಡಿಗೆ ಹೊನ್ನ ಶಿಖರಾದೆಯಾ
ಜ್ಞಾನದಾದೀಪವನು ಬೆಳಗಲಿದೆಯಾ ||೪||

ಶಿವ ನಿನ್ನ ಅನುಭವವು ಶುಭವಾಗಲಿ
ಜನರ ಅಜ್ಞಾನ ಅಡಗಿಹೋಗಲಿ
ಇನ್ನಷ್ಟು ನೆರೆ ತೊಳಗಿ ಬೆಳಗಲಿ
ಶಿವಾನುಭವವಿದು ಎಲ್ಲೆಡೆಯಲಿ ||೫||

ಈಶ್ವರ ಈ || ಕಳಕಣ್ಣವರ,

---

# ವೈರಾಗ್ಯ ನಿಧಿ ಅಕ್ಕ ಮಹಾದೇವಿ

(ಲೇಖಕ:- ಶ್ರೀ ನಿಗಡಿ ಸಂಗನಬಸವ.)

ಕನ್ನಡ ಸಾಹಿತ್ಯ ಇತಿಹಾಸದ ಸಂಪುಟಗಳನ್ನು ತಿರುವಿದರೆ ಹಿಂದಿರುಹುತ್ತಾ ಹೋದಂತೆ ಸುವರ್ಣಾಕ್ಷರಗಳಿಂದ ಶೋಭಿಸುವ ಒಂದು ಅಧ್ಯಾಯವು ಕೇಳಿಸುತ್ತದೆ. ಅದೇ ೧೨ನೇ ಶತಮಾನ! ಶರಣರ ತತ್ವಗಳನ್ನು ವಿಶ್ವಸಾಹಿತ್ಯ ಪ್ರಧಾನ ಮಾಡಿದ ಪವಿತ್ರ ಕಾಲ! ಭಕ್ತಿಮಾರ್ಗವನ್ನು ಮುಂದರಿಸಿದ ಕರ್ನಾಟಕವು ಅದರಲ್ಲಿಯೂ ಕಲ್ಯಾಣವು ಭೂಕೈಲಾಸವಾದ ಶ್ರೇಷ್ಠ ಕಾಲ! ಅನುಭವ ಮಂಟಪದಲ್ಲಿ ಶರಣರೂ ಶರಣೆಯರೂ ಕೂಡಿ ತಾತ್ವಿಕ ರೀತಿಯಿಂದ ಚರ್ಚಿಸಿ ಮೋಕ್ಷಕ್ಕೆ ತಾತ್ವಿಕ ಮಾರ್ಗವನ್ನು ತೋರಿಸುವುದರಲ್ಲಿ ವೈರಾಗ್ಯ ನಿಧಿ ಅಕ್ಕ ಮಹಾದೇವಿಯೂ ಒಬ್ಬಳು.

ಇಂಥ ಶ್ರೇಷ್ಠ ಜೀವಿಯು ೧೨ನೇ ಶತಮಾನದಲ್ಲಿ ಮೈಸೂರ ಸಂಸ್ಥಾನದ ಶಿವಮೊಗ್ಗ ಜಿಲ್ಹೆಯ ಶಿಕಾರಿಪುರ ತಾಲೂಕಿನ ಉಡುತಡಿ ಎಂಬ ಗ್ರಾಮದಲ್ಲಿ ಉದಯಿಸಿದಳು. ಇವಳ ತಂದೆ ತಾಯಿಗಳ ಹೆಸರು ನಿರ್ಮಲ ಸುಮತಿಯರು. ಮಹಾ ಶಿವಾನುಭವಿಗಳು. ಅವರ ಹೆಸರೇ ಅವರ ಹೃದಯವನ್ನು ಬಿಂಬಿಸುತ್ತದೆ. ಎಲ್ಲಿ ನೈರ್ಮಲ್ಯ ಸುಬುದ್ಧಿಗಳ ಸಂಗಮವಾಗುವದೋ ಅಲ್ಲಿಯೇ ಮಹಾದೇವಿ ಉದಯಿಸುತ್ತಾಳೆ. ತಂದೆ ತಾಯಿಗಳ ಸದ್ಭಕ್ತಿಯು ಮಗಳ ಹೃದಯದಲ್ಲಿ ಮೂಡಿತು. ಪರಶಿವನ ತಾವರಿಯಲು ಹಾತೊರಿಯಿತು.

ಚಿಕ್ಕಂದಿನಲ್ಲಿ ಅಕ್ಕನು ಆಡುವ ಆಟವೆಲ್ಲ ದೈವೀ ತತ್ವಮಯ. ತನ್ನೆಲ್ಲ ಕೆಳದಿಯರನ್ನೆಲ್ಲ ಕೂಡಿಕೊಂಡು ಅವರಿಗೆ ಲಿಂಗ, ರುದ್ರಾಕ್ಷಿ, ವಿಭೂತಿಯ ಮಹಿಮಾ ಕತೆಗಳನ್ನು ಹೇಳುವಳು. ಕೆಸರಿನದೊಂದು ಶಿವನ ಮೂರ್ತಿಯನ್ನು ಮಾಡಿ, ಅದನ್ನು ತನ್ನ ಗಂಡನೆಂದು ತಿಳಿದು ಅದರ ಕೊರಳಿಗೆ ಹೂಮಾಲೆಯನ್ನು ಹಾಕಿ ಆನಂದ ಪಡೆಯುವಳು. ಕೆಸರಿನಲ್ಲಿ ಒಂದು ವಿಶೇಷವಿದೆ. ಕೆಸರಿನಿಂದ ಶಿವನ ಮೂರ್ತಿಯಾಗುವದು. ಅದೇ ಕೆಸರಿನಿಂದ ವಿಷ್ಣುವಿನ ಪ್ರತಿಮೆಯಾಗುವದು. ಆದರೆ ಕೆಸರೆಲ್ಲ ಒಂದೆ! "ದೇವನೊಬ್ಬ ನಾಮ ಹಲವು" ಎಂಬುದನ್ನರಿಯದೇ ಶೈವರು, ವೈಷ್ಣವರು, ವಿವಿಧ ಮತೀ

ಯರೂ ಮತಾಭಿಮಾನದಿಂದ ವಾದಿಸಿ ಹಾದಿಕಾಣದೇ ಹೋಗುವರು. ತನ್ನ ಹೃದಯದಿಂದ ಹೊರಸೂಸುವ ಈಶವಾತ್ಸಲ್ಯ ಶ್ರೇಯನ್ನೇ ತನ್ನ ಕೆಳದಿಯರಿಗೆ ಹೇಳಿ ಅಕ್ಕನೆಂದೆನಿಸಿಕೊಳ್ಳಹತ್ತಿದಳು. "ಮರದ ಭವಿಷ್ಯ ಮೊಳಕೆಯಲ್ಲಿ" ಎಂಬಂತೆ ತನ್ನ ಭವಿಷ್ಯತ್ತಿನ ಪ್ರಭೆಯನ್ನು ಬಾಲ್ಯಾವಸ್ಥೆಯಲ್ಲಿಯೇ ಬೆಳಗಿಸಿದಳು.

ಹೀಗೆ ತಾರುಣ್ಯವೆಂಬ ವಸಂತ ಋತುವಿನಲ್ಲಿ ಹರ್ಷದಿಂದಾಡುತ್ತಿರುವ ಈ ಸುಂದರ ಸುಪ್ರಸನ್ನ ಹೃದಯದ ಜಿಂಕೆಯು ಕಾಮುಕನಾದ ಕೌಶಿಕನೆಂಬ ಕಿರಾತನ ದೃಷ್ಟಿಯಲ್ಲಿ ನಟ್ಟಿತು. ಸಾತ್ವಿಕತೆಯ ಈ ಸುವರ್ಣ ಜಿಂಕೆಯು ರಾಜಸ ತನದ ಹುಸಿ ಕೂರ್ಗಣೆಗಳಿಗೆ ಸಿಗದೆಂಬುದು ಅವನಿಗೇನು ಗೊತ್ತು? ಅವಳ ತಂದೆ ತಾಯಿಗಳನ್ನು ಪೀಡಿಸಿ ಬಲಾತ್ಕಾರದಿಂದ ತನ್ನರಮನೆಗೊಯ್ದ. ವೈರಾಗ್ಯಸಿಧಿಯಾದ ಅಕ್ಕನು ತೇಜೋನಿಧಿಯೂ ಧೈರ್ಯನಿಧಿಯೂ ಆಗಿದ್ದಳು. ಮೂರು ವಚನಗಳನ್ನು ಪಾಲಿಸಲು ಕೌಶಿಕನಿಗೆ ಕೇಳುವಳು. ಆ ಕಾಮಾಂಧನು ಮುಂದಿನ ಪರಿವೆಯಿಲ್ಲದೇ ಒಪ್ಪುವನು. ಅವುಗಳನ್ನು ಪಾಲಿಸಲಾಗದೇ ಜಂಗಮರನ್ನು ಜರೆಯುವನು. ಲಿಂಗವನ್ನು ಹೀಯಾಳಿಸುವನು. ಆಗ ಅಕ್ಕನು ಅವನ ತಪ್ಪನ್ನು ಅವನ ಕೊರಳಿಗೆ ಹಾಕಿ ಅರಮನೆಯನ್ನು ತ್ಯಜಿಸಿ ಧರ್ಮಶಾಲೆಯಲ್ಲಿ ತಂಗುವಳು. ಭಕ್ತರ ಕಷ್ಟಗಳನ್ನು ಕಂಡು ಭಕ್ತಕಿಂಕರನು ಸುಮ್ಮನೇ ಕೂಡ್ರಲಾದೀತೇ? ಬಂದು ಬಾಗಿಲ ತಟ್ಟಿದ. ಅಕ್ಕನು ಇದಿರ್ಗೊಂಡು "ನೀನಾರು?" ಎಂದು ಕೇಳುವಳು. ಆಗ ಪರಮಾತ್ಮನು "ಚನ್ನಮಲ್ಲಿಕಾರ್ಜುನ." ಚನ್ನ (ಚಲುವ) ಮಲ್ಲಿಕಾ (ಮಲ್ಲಿಗೆಯಂತಹ, ಸೂಕ್ಷ್ಮ, ಕೈಗೆ ನಿಲುಕದ.) ಅರ್ಜುನ (ಜಗತ್ಪತಿ, ಜಗದೀಶ) ಎಂಬ ನುಡಿಯನ್ನು ಕೇಳಿದಾಗಲೇ ಅವನನ್ನು ಅರಿಸುವದಕ್ಕಾಗಿ, ವರಿಸುವದಕ್ಕಾಗಿ ಮಧ್ಯರಾತ್ರಿಯಲ್ಲಿಯೇ "ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಕುಲವಿಲ್ಲದ, ಭಯವಿಲ್ಲದ, ಭವವಿಲ್ಲದ ಅಭವಂಗೆ ಆನೊಲಿದೆನವ್ವಾ. ಚನ್ನ ಮಲ್ಲಿಕಾರ್ಜುನನೆನ್ನ ಗಂಡನಾದ ಬಳಿಕ ಸಾವಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ಎಲೆ ಅವ್ವಾ" ಎಂದು ಕೈಲಾಸ ಸದೃಶವಾದ ಕಲ್ಯಾಣ ಪುರವನ್ನು ಸೇರುವಳು.

ಅನುಭವ ಮಂಟಪದ ಒಂದು ಮೂಲೆಯಲ್ಲಿ ಅಕ್ಕನು ನಗ್ನದೇಹಿಯಾಗಿ ನಿಂತಿದ್ದಾಳೆ. ಶರಣರ ಕಣ್ಣೆಲ್ಲ ಆ ಮಹಾತ್ಮಳತ್ತ ಹೊರಳಿವೆ. ಪ್ರಭುವು

ತನ್ನ ಅಂತರ್ನಯನದಿಂದ ಅವಳ ಹೊನ್ನ ಹೃದಯವನ್ನು ಕಂಡುಹಿಡಿದಿದ್ದ. ಆದರೆ ಅದನ್ನು ಒರೆಗೆ ಹಚ್ಚಿ ಶರಣರಿಗೆ ತೋರಿಸಬೇಕೆಂದು.

ಉದಮದದ ಯೌವನವನೊಳಗೊಂಡ ಸತಿ ಇತ್ತಲೇಕೆ ಬಂದೆ ಹೇಳವ್ವ? ಗುಹೇಶ್ವರ ಶರಣರಲ್ಲಿ ಲಿಂಗದ ಸಂಗಸುಖವ ಬಯಸುವದೆ? ನಿನ್ನ ಪತಿಯ ಕುರುಹು ಹೇಳೌ? ಇದರ ಬಾಹ್ಯಾರ್ಥವನ್ನೋದಿ ಅಲ್ಲಮ ನನ್ನು ಅಲ್ಲಗಳೆಯಬಹುದು. ಆದರೆ ಪ್ರಭು ಇಂಥ ಕೀಳ ಶಬ್ದಗಳನ್ನಲಾರ. ಇದಕ್ಕೆ ಅಂತರಾರ್ಥವಿದೆ. ಉದಮದದ ಯೌವನವನೊಳಕೊಂಡ ಸತಿ'' ಈ ಪದಕ್ಕೆ ಮುಧೋಳ ಮೃತ್ಯುಂಜಯರು ಈಶನತ್ತ ಹೊರಸೂಸುವ ಪ್ರೇಮಾಭಿಮಾನವನ್ನು ಪಡೆದ ಸ್ಥಿತಿಯುಳ್ಳವಳು. ಮತ್ತು ''ನಿನ್ನ ಪತಿಯ ಕುರುಹು ಹೇಳಿದರೆ ಕೂಡ್ರು'' ಎನ್ನುವಲ್ಲಿ ಈಶನತ್ತ ಚರ್ಚಿಸುವದಿದ್ದರೆ ಕೂಡ್ರು. ಪ್ರಾಪಂಚಿಕವಾಗಿ ಚರ್ಚಿಸುವದಿದ್ದರೆ ಬೇಡ'' ಎಂಬರ್ಥವನ್ನು ಮಾಡಿದ್ದು ನನ್ನ ಸ್ಮೃತಿಯಲ್ಲಿದೆ. ಇದಕ್ಕೆ ತಕ್ಕಂತೆ ಅಕ್ಕನು ನಿರ್ಭಯದಿಂದ ''ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚನ್ನ ಮಲ್ಲಿಕಾರ್ಜುನನ ಹೊರತು ಇನ್ನಾರ ಸಂಬಂಧವೆನಗಿಲ್ಲವಯ್ಯಾ'' ಎನ್ನುತ್ತಾಳೆ.

ಆಗ ಪ್ರಭುವು ''ದೇವನೊಲಿಯದೇ ನೀನೊಲಿದೆಯೆಂಬುದೇತಕ್ಕೆ? ಭಾವ ಶುದ್ಧವಾದಲ್ಲಿ ಸೀರೆಯ ಕಳಚಿ ಕೇಶವ ಮರೆಮಾಡಲೇತಕ್ಕೆ? ಅಂತರಂಗದ ನಾಚಿಕೆ ಬಹಿರಂಗದಲ್ಲಿ ಮೂಡಿತ್ತು ನೋಡಾ. ಇದು ಗುಹೇಶ್ವರ ಲಿಂಗಕ್ಕೆ ಸಲ್ಲದ ವೇಷ.''

''ಪರಮೇಶ್ವರನು ಒಲಿಯದೇ ನೀನೊಲಿದೆ ಎನ್ನುವಿಯಲ್ಲಾ ಅದು ಹೇಗೆ? ನಿನ್ನಂತರಂಗವು ಶುದ್ಧವಿದ್ದಲ್ಲಿ, ಅಂಬರವ ತ್ಯಜಿಸಿದಲ್ಲಿ, ಕೇಶಾಂಬರವನ್ನೇಕೆ ಮರೆಮಾಡಿದೆ? ನಿನಗೆ ಬಾಹ್ಯ ಪ್ರಪಂಚದಲ್ಲಿ ಲಜ್ಜೆಯಿದೆ'' ಎಂದು ತಿರಸ್ಕರಿಸುತ್ತಾನೆ.

ಆಗ ಅಕ್ಕನು—''ಫಲ ಪಕ್ವವಾದಲ್ಲದೇ ಹೊರಗಣ ಸಿಪ್ಪೆ ಒಪ್ಪಗೆಡದು· ಕಾಮನ ಮುದ್ರೆಯ ಕಂಡು ನಿಮಗೆ ನೋವಾಯಿತ್ತೆಂಬ ಭಾವದಿಂದ ಮುಚ್ಚಿದೆ' ಇದಕ್ಕೆ ನೀವೇಕೆ ಕಾಡುವಿರಣ್ಣಾ ಚನ್ನಮಲ್ಲಿಕಾರ್ಜುನದೇವರ ಒಳಗಾದವಳ.'

ಕಾಯಿ ಹಣ್ಣಾದ ಬಳಿಕ ಅದರ ಬಣ್ಣಕ್ಕೆ ಜಗದ ಕಣ್ಣು ಬೀಳುವದು ಸಹಜ. ಹಾಗೇ ಈ ಕಾಮದ ಮುದ್ರೆಗೆ ಈ ಜಗದ ಜನಜಂಗುಳಿಯು ಬೀಳಬಾರದೆಂದು ಕೇಶರಾಶಿಯನ್ನು ಮರೆಮಾಡಿದೆ.

ಪ್ರಭುವು ಇಷ್ಟಕ್ಕೂ ಸಮಾಧಾನ ಹೊಂದದೆ "ನೀನು ದೇವರ ಒಳಗೋ ದೇವರು ನಿನ್ನೊಳಗೋ ಎಂಬುದಾವರಿಯೆ. ಸಿಪ್ಪೆ ಒಪ್ಪಗೆಟ್ಟಾಗ ಅದರಲ್ಲಿ ರಸ ಕೊಳೆಯಾಯಿತ್ತು ನೋಡಾ! ಇದು ಗುಹೇಶ್ವರ ಲಿಂಗಕ್ಕೆ ಸಲ್ಲದವೇ ನೀನು ಕೊಟ್ಟ ಹಣ್ಣಿನ ಉಪಮೆಯು ಹುರಳಿಲ್ಲದ್ದು. ಅದರ ತೊಗಟೆ ಹುಳಿದಾಗ ಅದರ ಒಳಗಿನ ರಸವೂ ಹಣ್ಣಾಗಿ ಕೋಳಿತರಲೇಬೇಕು. ಕೊಳೆತ ಹಣ್ಣು ದೇವರಿಗೆ ಸಲ್ಲದು. ಸಾಕಾರ ಸ್ವರೂಪಳಾದ ನೀನು ನಿರಾಕಾರನಾದ ಪರಮಾತ್ಮನೊಡನೆ ಹೇಗೆ ಕೂಡುವಿ? ಪಂಚಭೌತಿಕಗಳಿಂದ ಮರ್ಯಾದಿತವಾದ ದೇಹದಲ್ಲಿದ್ದುಕೊಂಡು ಮುಕ್ತಿಯನ್ನು ಪಡೆಯುವದಾದರೂ ಹೇಗೆ?

ಆಗ ಅಕ್ಕನು " ಹಾವಿನ ಹಲ್ಲುಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯಾ. ಕಾಯದಸಂಗವ ವಿವರಿಸಬಲ್ಲಡೆ ಕಾಯದ ಸಂಗವೇ ಲೇಸುಕಂಡಯ್ಯಾ. ತಾಯಿ ರಕ್ಕಸಿಯಾದಂತೆ ಈ ಕಾಯವಿಕಾರವು ಚನ್ನಮಲ್ಲಿಕಾರ್ಜುನದೇವಯ್ಯಾ ನೀನೊಲಿದವರು ಕಾಯಗೊಂಡಿದ್ದರೆನಬೇಡ"

ಚನ್ನಮಲ್ಲಿಕಾರ್ಜುನಯ್ಯಾ ನೀನೊಲಿದವರು ಕಾಯಗೊಂಡಿದ್ದರೆನಬೇಡ ಎನ್ನುವ ಅಕ್ಕನು ಶರಣರಿಗೆ ಕಾಯವಿಲ್ಲ ಅವರು ಪವಾಡ ಪುರುಷ! ಜನ ಜಾಗ್ರತಿಗಾಗಿ ಉದಯಿಸಿದ ಭಾಸ್ಕರರು! ಎಂದು ಹೇಳುತ್ತಾಳೆ. ಇದನ್ನು ಕೇಳಿ ಪ್ರಭುವು ತಲೆದೂಗುತ್ತಾನೆ. ಶರಣರು ಆನಂದದಿಂದ ಕುಣಿನಾಡುತ್ತಾರೆ.

ಪ್ರಭು " ಲಿಂಗನೆ ಅಂಗನೆಯ ರೂಪವಲ್ಲದೆ ಮನವಸ್ತುಭಾವದಲ್ಲಿ ಬೆಚ್ಚಂತೆ ಇಪ್ಪದು ಬಂದಕಥನದಲ್ಲಿ ಬಂದುಹಿಂಗಿದೆಯಲ್ಲಾ ಅಕ್ಕಾ! ಗುಹೇಶ್ವರಲಿಂಗದಲ್ಲಿ ಮನವಳಿದೆ ಎನ್ನಕ್ಕಾ!

ಅಕ್ಕಾ ನೀನು ಹೆಣ್ಣಲ್ಲ! ಕಣ್ಣಿಗೆ ಹೆಣ್ಣಾದರೂ ಭಾವಿಸಲು ಗಂಡು ರೂಪು! ಅನುತ್ತೀರ್ಣವಾದ ಭವಾಂಬುಧಿಯನ್ನು ಹೊಕ್ಕು ದಂಡೆಯ ಮೇಲೆ ಶೋಭಿಸುವ ಮುಕುತಿಗೋಪುರದ ಮೇಲೆ ನಿಂತು ಜಯಭೇರಿಯನ್ನು ಹೊಡೆದಿಯಲ್ಲಾ ಅಕ್ಕಾ! ಎಂದು ಶರಣ್ಯಭಾವತಾಳಿ ಅವಳಿಗೆ ಅಕ್ಕನೆಯ ಹಿರಿ ಪದವಿಯನ್ನು ಕೊಡುತ್ತಾನೆ.

ಅಕ್ಕನು ಶಿವಾನುಭವ ಮಂಟಪದಲ್ಲಿ ಶಿವತತ್ವಗಳನ್ನು ಚರ್ಚಿಸುವಳು. ಅವಳನುಡಿಗೆ ಬೆಲೆಕೊಟ್ಟ ಶರಣರು ಅವಳಡಿಗೆ ಬೀಳುವರು. ಷಟ್‌ಸ್ಥಲ

ಜ್ಞಾನಚಕ್ರವರ್ತಿ ಚನ್ನಬಸವಣ್ಣನವರು" ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ. ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ,ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ. ಅಜಗಣ್ಣನ ಐದು ವಚನಕ್ಕೆ ಕೂಡಲ ಚೆನ್ನ ಸಂಗಯ್ಯನಲ್ಲಿ ಮಹಾದೇವಿ ಅಕ್ಕನ ಒಂದು ವಚನ ಕಾಣಾ ಸಿದ್ಧರಾಮಯ್ಯ ? ಎಂಬ ವಿಮರ್ಶೆಯನ್ನು ಮಾಡಿದ್ದಾರೆ.

ಮುಂದೆ ಅಂದರೆ ಬಿಜ್ಜಳನ ಕೊಲೆಯ ಮುನ್ನವೇ ಅಕ್ಕನು ಕಲ್ಯಾಣ ವನ್ನು ತ್ಯಜಿಸಿ ಶ್ರೀಶೈಲಕ್ಕೆ ಹೋಗುತ್ತಾಳೆ. ಶ್ರೀಶೈಲವನ್ನು ಪ್ರವೇಶಿಸು ವಾಗ ಅಕ್ಕನಿಗೆ ಆತ್ಮೀಯ ಭಾವನೆಯು ಒಡಮೂಡುತ್ತದೆ. ಯಾವಾಗಲೂ ಆತ್ಮೀಯತೆಯು ಶ್ರೇಷ್ಠವಲ್ಲವೇ? ತನ್ನ ಗಂಡನ ಕ್ಷೇತ್ರ ಭವನದಿಂದ ಅಲ್ಲಿರುವ ಚರಾಚರ ಜೀವಿಗಳಿಗೆ ಸ್ವರ್ಗರೂಪವನ್ನು ಕೊಡುತ್ತಾಳೆ. ಗಿಡ ವೆಲ್ಲ ಮರುಜೀವಣಿ ಶಿಲೆಗಳೆಲ್ಲ ಪರುಷ. ಮೃಗಗಳೆಲ್ಲ ಪರುಷಮೃಗ ಎನ್ನು ವಾಗ ಅಕ್ಕನಲ್ಲಿ ಕಾವ್ಯಕಿಡಿ ಜಾಗೃತವಾಗುತ್ತದೆ. ಅಲಂಕಾರಗಳನ್ನು ಅಲಂಕಾ ರಿಕ ರೀತಿಯಲ್ಲಿ ಉಪಯೋಗಿಸಿ ಕನ್ನಡ ಭಾಷೆಗೆ ಸಾಹಿತಿಶ್ರೇಣಿಯಲ್ಲಿ ಗಣ್ಯಳಾಗಿದ್ದಾಳೆ. ಹೀಗೆ ಭಾವ ಪರವಶಳಾಗಿ "ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೇ. ನೀವು ಕಾಣಿರೇ. ಸರವೆತ್ತಿ ಪಾಡುವ ಕೋ ಗಿಲೆಗಳಿರಾ ನೀವು ಕಾಣಿರೇ. ನೀವು ಕಾಣಿರೇ.ಕೊಳನ ತಡೆಯೊಳಾಡುವ ಹಂಸ ಗಳಿರಾ ನೀವು ಕಾಣಿರೇ. ನೀವು ಕಾಣಿರೇ. ಗಿಳಿಗಳಂತೆ ಅರ್ಥವನರಿಯದೇ ಆಚಾರಕ್ಕೆಳಸಿದೇ. ವೇದಶಾಸ್ತ್ರಗಳನ್ನು ಓದುವ ನಿಶಾಚರಿ ಗಿಳಿಗಳಿರಾ ನೀವೇನಾದರೂ ಪರಮೇಶ್ವರನನ್ನು ಕಂಡಿದ್ದಿರಾ? ಇದಕ್ಕೆ ಅವಳ ಅಂತರಾ ತ್ಮವು ಇಲ್ಲ ಇವರು ಕಂಡಿಲ್ಲವೆನ್ನುತ್ತದೆ. ವಂಚನೆಯನ್ನು ಆತ್ಮದಲ್ಲಿಟ್ಟು ಕೊಂಡು ಪರಮೇಶ್ವರನ ಚಿಂತನೆಗಾಗಿ ಕೋಗಿಲೆಯಂತೆ ಗಾಯಿತ್ರಿ ಮೊದ ಲಾದ ಮಂತ್ರಗಳನ್ನುಚ್ಚರಿಸುವ ನರಕೋಗಿಲೆಗಳಿರಾ ನೀವೇನಾದರೂ ಆ ದಿವ್ಯಶಕ್ತಿಯನ್ನು ಕಂಡಿದ್ದಿರಾ? ಇಲ್ಲ ನೀವೂ ಕಂಡಿಲ್ಲ. ಮೋಸ ಮಾಲಿನ್ಯ ಗಳೆಂಬ ಕೆಸರು ರೊಜ್ಜುಗಳನ್ನು ಮನಸ್ಸಿಗೆ ಲೇಪಿಸಿಕೊಂಡು, ತೋರಿಕೆಗೆ ಮೇಲೆ ಭಾಗಿರಥಿಯಲ್ಲಿ ಸ್ನಾನ ಮಾಡುವ ಮಾನವಂಚಿಗಳಿರಾ. ನೀವೇನಾ ದರೂ ಆ ಸಮಷ್ಟೀ ಪುರುಷನನ್ನು ಕಂಡಿದ್ದೀರಾ? ಇಲ್ಲ. ನೀವು ಕಂಡಿಲ್ಲ. ವೆಂಬ ಭಾವವು ವ್ಯಕ್ತವಾಗುತ್ತದೆ. ಹೀಗೆ ಪರಮೇಶ್ವರನನ್ನು ಹುಡುಕುತ್ತ ಕಡೆಗೆ ಕದಳಿ ಎಂಬ ಭವವನ್ನು ಗೆದ್ದು ಆ ದಿವ್ಯ ಭವ್ಯ ಶಕ್ತಿಯಲ್ಲಿ ಐಕ್ಯ ಳಾಗುತ್ತಾಳೆ.

ಅಕ್ಕನು ಮಹಾಭಕ್ತೆಯಿದ್ದಂತೆ ಸಾಹಿತ್ಯ, ತತ್ವಜ್ಞಾನ, ವಿಜ್ಞಾನಗಳ ಮುಪ್ಪುರಿಯಾಗಿ ಹೋಗಿದ್ದಾಳೆ. ದೇವರೊಂದು ಆದಿಶಕ್ತಿ. ಆ ಶಕ್ತಿಗೆ ರೂಪಿಲ್ಲ. ನಾಶವಿಲ್ಲ. ಅದು ನಿತ್ಯ. (Power is eternal, it has no Shape and descrilstion) ಎಂಬ ವೈಜ್ಞಾನಿಕ ತತ್ವವನ್ನು ಅಂದೇ ಸಿದ್ಧಗೊಳಿಸಿದ್ದಾಳೆ.

ಅಂತಹ ಮಾನ್ಯಳು ನಮ್ಮ ಕನ್ನಡ ನಾಡಿನಲ್ಲಿ ಆಗಿ ಹೋದಳು ಅವಳ ಅಂದಿನ ಆಚಾರಗಳನ್ನು ಇಂದಿನ ನಮ್ಮ ಅಕ್ಕಂದಿರು ಕೃತಿಗಿಳಿಸಿದರೆ ಕನ್ನಡದೇವಿ ಭಾಗ್ಯವಂತೆಯಾಗುವದಲ್ಲಿ ಸಂದೇಹವಿಲ್ಲ.

---

# ಭಕ್ತಿಭಾಂಡಾರಿ ಬಸವಣ್ಣನವರ ವಚನಗಳು.

(ಭಾವಾರ್ಥ ಸಹಿತ)

(ಗ್ರಂಥ ಸಂಪಾದಕರು:— "ಕರ್ನಾಟಕ ಕವಿಚಂದ್ರ" ಶ್ರೀಕಂಠ ಶಾಸ್ತ್ರಿಗಳು.)

[ವಿಮರ್ಶಕ:— ಶ್ರೀ. ಎಲ್. ಜಿ. ಜಂಬಿಗಿ.]

---

ಮಾನವ ಕುಲೋದ್ಧಾರಕರಾದ ಶ್ರೀ. ಬಸವಣ್ಣನವರ ವಚನಗಳಲ್ಲಿ ಮನುಷ್ಯರನ್ನು ಮುಕ್ತರನ್ನಾಗಿ ಮಾಡುವ ಜ್ಞಾನಾಮೃತವೂ ಅಲ್ಲದೆ ಜನರ ಕಿಳಿಗೇಡಿತನವನ್ನು, ಅಂಧಗೇಡಿತನವನ್ನು ತೊಡೆದುಹಾಕುವಂಥ ನೀತಿ ಬೋಧೆಯು ತುಂಬಿ ಸದಾ ಕಾಲ ತುಳುಕುತ್ತಲಿದೆ. ಅವರ ವಚನವಾಣಿ ಜಗತ್ತನ್ನೇ ಚಕಿತಗೊಳಿಸಿದೆನ್ನಲಡ್ಡಿಯಿಲ್ಲ; ಅವರ ಅಮೃತವಾಣಿ ಜಗತ್ತಿಗೆ ಸತತವಾಗಿ ನಿಜಾನಂದ ಸುಖದ ಸಾಧನವಾಗಿದೆ. ಬಸವಣ್ಣನವರು

ದುಃಖಮಯ ಸಂಸಾರ ಹೇಗಿರುತ್ತದೆಂಬುದನ್ನು ಅಲ್ಲದೆ ಇನ್ನಿತರ ವಿಷಯ ಗಳನ್ನು ಜಗತ್ತಿಗೆ ತಮ್ಮ ವಚನರೂಪದಿಂದ ತೋರಿಸಿಕೊಟ್ಟಿದ್ದಾರೆ. ಅವರ ಚಿತ್ತವು ಚಾಂಚಲ್ಯನಾದರೆ ಚಾಂಚಲ್ಯಪಡಿಸಬೇಡವೆಂದು ದೇವರಲ್ಲಿ ಮೊರೆ ಯಿಟ್ಟು ಕೇಳಿಕೊಳ್ಳುತ್ತಾರೆ.

(೧) ಅಯ್ಯಾ ಎಂವಡೆ ಸ್ವರ್ಗ; ಎಲವೋ ಎಂದಡೆ ನರಕ...." ಎಂದು ಪಾಪದ ವಿಷಯಕ್ಕೆ ಜನರಿಗೆ ತಿಳಿಸಿದ್ದಾರೆ.

(೨) ದಯವಿಲ್ಲದ ಧರ್ಮವಾವುದಯ್ಯಾ ಎಂಬ ವಚನದಲ್ಲಿ ಅವರ ಕಾರುಣ್ಯಕ್ಕೆ ಮೇರೆಯಿದೆಯೆ ?

(೩) ಕಳಬೇಡ ಕೊಲಬೇಡ; ಹುಸಿಯ ನುಡಿಯಲುಬೇಡ. ಈ ವಚನ ಧರ್ಮದ ಉಪದೇಶ ಎಂಥಹದಿದೆ.

(೪) ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆವೆಂಬ ವಚನದಲ್ಲಿ ಅವರ ಭಕ್ತಿ ನಮ್ರತೆ ಎಂಥಹದಿದೆ ಎಂಬುದನ್ನು ಜಗತ್ತಿಗೆ ತೋರಿಸಿದ್ದಾರೆ.

(೫) ಹರನೀವಕಾಲಕ್ಕೆ ಸಿರಿಯು ಬೆನ್ನಲಿ ಬಕ್ಕು ಎಂಬ ವಚನದಲ್ಲಿ ದೇವರ ಕೃಪೆಯಾದರೆ ಯಾವದು ಅಸಾಧ್ಯ! ಆದ್ದರಿಂದ ಯಾವಾಗಲೂ ದೇವರನ್ನು ನೆನೆಯಿರಿ ಎಂದು ತೋರಿಸಿಕೊಟ್ಟಿದ್ದಾರೆ.

(೬) ನನ್ನ ಕಾಯುವ ದಂಡಿಗೆಯ ಮಾಡಯ್ಯ ಎಂಬ ವಚನದಲ್ಲಿ ಬಸವಣ್ಣನವರು ಯಾವಾಗಲು ದೇವರ ಸಾನ್ನಿಧ್ಯದಲ್ಲಿ ಇರಲಿಚ್ಛಿಸುತ್ತಾರೆಂಬು ದನ್ನು ತೋರಿಸಿಕೊಟ್ಟಿದ್ದಾರೆ. ಇಂಥಹ ಎಷ್ಟೋ ಉತ್ತಮ ವಚನಗಳು ಇದರಲ್ಲಿಯ ವಚನಗಳು ಕತ್ತಲಿನಲ್ಲಿ ಬೆಳಕನ್ನು ತೋರಿಸುವ ದಾರಿ ದೀಪ ವಾಗಿವೆ.

ಬಸವಂಣನವರು ೧೨ನೇ ಶತಮಾನದಲ್ಲಿ ದೇವರಂತೆ ಜನಿಸಿ ಜಗ ತ್ತಿನ ಅಜ್ಞಾನವನ್ನು ಹೋಗಲಾಡಿಸುವದಕ್ಕಾಗಿ ಸಮನ್ವಯ ತತ್ವಗಳನ್ನು ತಿಳುಕನ್ನಡದಲ್ಲಿ ಬೋಧಿಸಿದ ಇವರನ್ನು ಎಷ್ಟು ಕೊಂಡಾಡಿದರೂ ಸಾಲದು. ಇವರು ಮಹಾ ವೇದಾಂತ ಪುರುಷರು. ಅನುಭಾವಿಗಳು, ಅಲ್ಲದೆ ನಂದೀಶ್ವರನ ಅವತಾರವೆಂದರೆ ತಪ್ಪಾಗಲಾರದು. ಇವರ ಎಷ್ಟೋ ವಚನಗಳನ್ನು ಈಗಾ

ಗಲೇ ಪ್ರಸಿದ್ಧಿಪಡಿಸಿದ ಸನ್ಮಾನ್ಯ ಶ್ರೀ. ರಾ॥ ಬ॥ ಪಿ. ಜಿ. ಹಳಕಟ್ಟಿ, ವಿಜಾಪುರ ಇವರಿಗೆ ಕನ್ನಡನಾಡು ಎಷ್ಟು ಉಪಕಾರ ಸ್ಮರಿಸಿದರೂ ಸಾಲದು.

ಬಸವಣ್ಣನವರು ಹುಟ್ಟಿ ೮೦೦ ವರ್ಷಗಳು ಗತಿಸಿ ಹೋದರೂ ಕೂಡ ಅವರ ನಡೆ, ನುಡಿ, ಆಚಾರ ಅಲ್ಲದೆ ಅವರ ವಚನಗಳು ಜಗತ್ತಿಗೆ ನಿತ್ಯ ನೂತನವಾಗಿವೆ. ಇಂತಹ ಮಹಾನುಭವಿಗಳ ವಚನಗಳನ್ನು ಓದಿಕೊಂಡು ಅರಿತು ಆಚರಿಸಿ ಜನ್ಮಸ್ವಾರ್ಥಕತೆಯನ್ನು ಪಡೆಯುವದು ಇಂದಿನ ಕನ್ನಡಿಗರ ಆದ್ಯಕರ್ತವ್ಯವಾಗಿದೆ. ಕನ್ನಡಿಗರಾದ ನಾವೆಲ್ಲರೂ ಇಂತಹ ವೀರಶೈವ ಸಾಹಿತ್ಯದ ಪುಸ್ತಕಗಳನ್ನು ಓದಿ ಸಂತುಷ್ಟರಾಗಬೇಕೆಂದು ಪ್ರಾರ್ಥಿಸುವೆ.

"ಕರ್ನಾಟಕ ಕವಿಚಂದ್ರ" ಶ್ರೀಕಂಠಶಾಸ್ತ್ರಿಗಳು ಇಂತಹ ಸಾಹಿತ್ಯದ ಕೃತಿಗಳನ್ನು ಇನ್ನೂ ಮುಂದಾದರೂ ಬರೆಯಲೆಂದು ಈ ಲೇಖಕನ ಆಶೆಯಿದೆ.

---

# ಅಗ್ರಕವಿ ಹರಿಹರ

( ಲೇಖಕರು:- ಶ್ರೀ ಜಿ. ಎಂ. ಕಟಗೇರಿ "ಕನ್ನಡಕಾವ" )

ಈ ನಮ್ಮ ಪವಿತ್ರ ಭೂಮಿಯಲ್ಲಿ ಅನೇಕ ಜನ ಕವಿಗಳು ಬಾಳಿ ಬೆಳಗಿದ್ದಾರೆ. ಅವರಲ್ಲಿ ಶ್ರೀಹರಿಹರ ಕವಿಯು ಅಗ್ರಗಣ್ಯನು.

ಈತನು ಪಂಪಾಕ್ಷೇತ್ರದವನು. ದ್ವಾರಸಮುದ್ರದ ಅರಸರಲ್ಲಿ ಕರಣಿಕನಾಗಿದ್ದು ಮನುಜರ ಸೇವೆ ಬೇಡವೆನಿಸಿದ್ದರಿಂದ ಹಂಪೆಯಲ್ಲಿ ಇದ್ದುಕೊಂಡು ವಿರುಪಾಕ್ಷನ ಕೃಪಾಶೀರ್ವಾದದಿಂದ ಕಾವ್ಯರಚಿಸಿದನು. ಈತನು ಹರಿಶ್ಚಂದ್ರ ಕಾವ್ಯಕರ್ತನಾದ ರಾಘವಾಂಕನ ಮಾವನು; ಶಿವಾಚಾರಿಯಾಗಿ (ಪಟ್ಟಾಧಿಕಾರಿಯಾಗಿ)ದ್ದನು. ಲಿಂಗವಂತ ಕವಿಗಳಲ್ಲಿ ಇವನಿಗೊಂದು ವಿಶಿಷ್ಟಸ್ಥಾನಉಂಟು. ಇವನ ಗ್ರಂಥಗಳಲ್ಲಿ ಭಕ್ತಿ, ವೈರಾಗ್ಯ, ಮತ್ತು ಶರಣ ಶರಣೆಯರ ಜ್ಞಾನ, ಜ್ಯೋತಿಯ ಬೆಳಕು ದೊರೆಯುತ್ತದೆ. ಈತನ ಸಾಹಿತ್ಯದಲ್ಲಿ ಪಾಂಡಿತ್ಯ ಪ್ರದರ್ಶನದ ಮೋಹವಾಗಲಿ, ತುಚ್ಛವಿಷಯ ಸುಖದ ದುರಾಶೆಯಾಗಲಿ ಕಾಣಲವಕಾಶವಿಲ್ಲ. ಹೊತ್ತು ಹೋಗದ ಕೆಲಜನ ಉಂಡಾಡಿಗಳಾದ ರಾಜ ಮಹಾರಾಜರ ಮನರಂಜನೆಗಾಗಿಯೋ, ಅಥವಾ ತಮ್ಮವಿದ್ವತ್ತೆಯನ್ನು ಜಗತ್ತಿನಲ್ಲಿ ಮೆರೆಸಬೇಕೆಂಬ ದುರ್ಮೋಹದಿಂದ ಲೋಹುಟ್ಟಿ; ಹಾಗೆ ಸಾವಿರಾರು ವರುಷ ಬೆಳೆದುಬಂದ ಕನ್ನಡಸಾಹಿತ್ಯವು ಹನ್ನೆರಡನೆಯ ಶತಮಾನದ ಹಾಗೂ ಹರಿಹರ ಮೊದಲಾದ ಲಿಂಗವಂತ ಕವಿಗಳಿಂದ ಸುಂಸಸ್ಕೃತವಾಗಿ ತನ್ನಪೂರ್ವಾಶ್ರಯವನ್ನೇ ಕಳೆದುಕೊಂಡು ಶುಣ್ಯತಮವೂ, ಅತ್ಯುಜ್ವಲವೂ ಆದ ಜೀವಂತ ಸಾಹಿತ್ಯವಾಯ್ತು.

## ಹರಿಹರನ ಮುದ್ರಿಕೆ

ವೀರಶೈವ ವಚನಕಾರರಂತೆ ವೀರಶೈವ ಕವಿಗಳೂ ತಮ್ಮಕಾವ್ಯಗಳಿಗೆ ತಮ್ಮ ತಮ್ಮ ಇಷ್ಟದೇವತೆಗಳ ಅಂಕಿತವನ್ನು ಇಡುವ ಪದ್ಧತಿಯನ್ನು ಪ್ರಾರಂಭಿಸಿದ್ದರು. ಅದನ್ನೇ ಈಗ್ಯೂ ಕವಿಗಳು ಅನುಸರಿಸುತ್ತಾ ಬಂದಿದ್ದಾರೆ. ಶ್ರೀ ನಿಜಗುಣರು ಶಂಭುಲಿಂಗನನ್ನೂ, ಶ್ರೀಸರ್ಪಭೂಷಣರು ಗುರುಸಿದ್ಧನನ್ನೂ, ಬಸವಣ್ಣನು ಕೂಡಲಸಂಗಮದೇವಾ ಎಂಬ ಅಂಕಿತವನ್ನು ಮಾಡಿಕೊಂಡ ಹಾಗೆ ಈತನು "ವಿರುಪಾಕ್ಷ"ಎಂದು ಅಂಕಿತಮಾಡಿಕೊಂಡದ್ದಾಗಿದೆ.

## ಹರಿಹರನ ಗ್ರಂಥಗಳು

ಈ ಕವಿಯು ಗಿರಿಜಾಕಲ್ಯಾಣ, ವಿರುಪಾಕ್ಷಶತಕ, ಪಂಪಾಶತಕ ಮತ್ತು ರಕ್ಷಾಶತಕ; ಮುಡಿಗೆಯಅಷ್ಟಕ, ಎಂಬ ಮಹತ್ ಪೂರ್ಣಗ್ರಂಥಗಳಲ್ಲದೆ ನೂರಿಪ್ಪತ್ತು ಶಿವಶರಣರ ರಗಳೆಗಳನ್ನು ಬರೆದಿದ್ದಾನೆ.

## ಹರಿಹರನ ಗಿರಿಜಾಕಲ್ಯಾಣ

ರಾಘವಾಂಕನ ಹರಿಶ್ಚಂದ್ರಕಾವ್ಯ, ಷಡಕ್ಷರ ಕವಿಯ ರಾಜಶೇಖರ ವಿಳಾಸ, ಮತ್ತು ಶಬರಶಂಕರ ವಿಳಾಸಗಳು ಸಾಹಿತ್ಯ ಪ್ರಧಾನವಾದಂತೆ ಹರೀಶ್ವರನ ಗಿರಿಜಾಕಲ್ಯಾಣವು ಸಾಹಿತ್ಯರೂಪವನ್ನು ಎತ್ತಿತೋರಿಸುತ್ತದೆ. ಗಿರಿಜಾಕಲ್ಯಾಣದ ಕಥಾವಸ್ತು ಮಾತ್ರಹಳೆಯದು. ಆದರೆ ಆ ಚಂಪೂ ಗ್ರಂಥದಲ್ಲಿ ಸರಳತೆ, ಸಹಜತೆ, ಹೊಸದೃಷ್ಟಿ, ಭಕ್ತಿರಸಪ್ರಧಾನತೆ ಇತ್ಯಾದಿ ವಿನೂತನತೆ ನಮಗೆ ಕಂಡು ಬರುತ್ತದೆ. ಕನ್ನಡಜಾಣ ಹರೀಶ್ವರನ ಕಲಾ ನೈಪುಣ್ಯವನ್ನು ನಾವಿದರಲ್ಲಿ ಕಾಣಬಹುದು.

## ಹರಿಹರನ ಶತಕಗಳು

ವೀರಶೈವ ವಾಙ್ಮಯದಲ್ಲಿ ಸೋಮಕವಿಯ ಸೋಮೇಶ್ವರ ಶತಕ, ಮೊಗ್ಗೆಯ ಮಾಯಿದೇವರ ಶತಕತ್ರಯ ಮೊದಲಾದವುಗಳು ಸ್ಮರಣಾರ್ಹವಾದಂತೆ ಹರಿಹರಕವಿಯ ರಕ್ಷಾಶತಕ ಪಂಪಾಶತಕ ಮತ್ತು ವಿರೂಪಾಕ್ಷಶತಕಗಳು ಕೂಡ ಸ್ಮರಣಾರ್ಹವಾಗಿವೆ.

## ಶತಕಗಳ ಪ್ರಭಾವ

ಭಕ್ತಕವಿ ಹರಿಹರನ ಈ ಶತಕಗಳು ನೀತಿಭರಿತಗಳಾಗಿವೆ. ಲೋಕಾನುಭವವನ್ನು ನಿರೂಪಿಸುತ್ತವೆ. ಜಾಣ್ಣುಡಿಗಳಿಂದ ಕಂಗೊಳಿಸುತ್ತವೆ. ಚಿಕ್ಕ ಮಾತಿನಲ್ಲಿ ದೊಡ್ಡಅರ್ಥವನ್ನು ಹೇಳುತ್ತವೆ. ಕಂಠಪಾಠಮಾಡಲು ಅರ್ಹವಾಗಿವೆ. ಈ ಶತಕಗಳು ಕನ್ನಡಸಾಹಿತ್ಯ ಸಂಸ್ಕೃತಿಗೆ ಮಹೋಪಕಾರ ಮಾಡಿವೆ. ಕನ್ನಡಿಗರ ಜೀವನಕ್ಕೆ ನವಚೈತನ್ಯವನ್ನುಂಟು ಮಾಡಿವೆ.

## ಹರಿಹರನ ರಗಳೆ

ಅಗ್ರಕವಿ ಹರಿಹರನು ಚಂಪೂಶೈಲಿಯನ್ನು ಬಿಟ್ಟುಕೊಟ್ಟು ವಿನೂತನ ರಗಳೆಯ ಶೈಲಿಯಲ್ಲಿ ನೂರಿಪ್ಪತ್ತು ಶಿವಶರಣರ ( ಮಹಾಪುರುಷರ ) ಬಗ್ಗೆ

ಬರೆದಿದ್ದಾನೆ. ರಳ, ಕುಳ, ಕ್ಷಳಗಳ ಗಡಿಬಿಡಿಯನ್ನು ತೊಲಗಿಸಿ ರಗಳೆ ಯನ್ನೇ ಒಕ್ಕಣಿಸಿದ್ದಾನೆ. ಅವರಲ್ಲಿ ಬಸವಣ್ಣ, ಪ್ರಭುದೇವ, ಅಕ್ಕಮಹಾ ದೇವಿ, ಬಿಜ್ಜಮಹಾದೇವಿ, ಕೋಳೂರ ಕೊಡಗೂಸು, ಹಾವಿನಹಾಳ ಕಲ್ಲಯ್ಯ, ರೇವಣಸಿದ್ಧೇಶ್ವರ ಮೊದಲಾದವರು ನಮ್ಮ ನಾಡಿನವರು. ಹಾಗೆಯೇ ಅರ ವತ್ತು ಮೂರು ಪುರಾತನರು, ತಮಿಳುನಾಡಿನ ಶರಣರು. ತೆಲಗು ಬೊಮ್ಮಯ್ಯ ಮೊದಲಾದ ಶರಣರು, ಆಂಧ್ರ ನಾಡಿನವರು ಹೀಗೆ ಆದಿ ಕವಿ ಹರಿಹರನು ನಾಡಿನ ಶಿವಶರಣರನ್ನು ( ಮಹಾಪುರುಷರನ್ನು ) ಕುರಿತು ಕಾವ್ಯಗಳನ್ನು ಕಟ್ಟುವ ಪರಿಪಾಠವನ್ನು ಮೊಟ್ಟಮೊದಲು ಹಾಕಿದನು.

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆಯುಕ್ಕಟಾ
ತನತನಗಿಂದ್ರ-ಚಂದ್ರ-ರವಿ-ಕರ್ಣ-ದಧೀಚಿ-ಬಲೀಂದ್ರನೆಂದು ಮೇಣ್
ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ ॥

ಈ ತೆರನಾಗಿ ಹರಿಹರಕವಿಯು ಹುಟ್ಟಿ ಸಾಯುವ ಮನುಜರ ಸ್ತುತಿಯು ಬೇಡವೆಂದೂ ಮತ್ತು ಶಿವಶರಣರ ಸ್ತುತಿಯೇ ನಿಜವಾದ ಸ್ತುತಿಯೆಂದೂ ಹೇಳಿ ಹೊಸ ಪಂಥವನ್ನು ಹಾಕಿಕೊಟ್ಟನು.

## ಹರಿಹರನ ಶ್ರೇಷ್ಠತೆ

ವೀರಶೈವ ಕವಿಗಳಿಗೆ ಶಿವಮಾಪುರುಷನೆನಿಸಿದ ಷಡಕ್ಷರದೇವನು ತನ್ನ ಕವಿಕರ್ಣ ರಸಾಯನಂ ಎಂಬ ಕಾವ್ಯದಲ್ಲಿ

ಶಿವಸ್ಯ ತದ್ಭಕ್ತ ತತೇರ್ವಿಧಾಯ ಕೃತೀರನೇಕಾಃ ಸುಕಪ್ರಣುತ್ಯಾಃ ।
ಶಿವಸ್ಯ ಸಾಯುಜ್ಯಮಿಹ ಪ್ರಪನ್ನೋ ಹರೀಶ್ವರ ಸ್ತೇನ ಸಮಃ ಕವಿಃ ಕಃ॥

ಎಂದು ಹರಿಹರನಿಗೆ ಸಮನಾದ ಕವಿಯು ಲೋಕದಲ್ಲಿ ಇಲ್ಲವೆಂದು ಬಹುವಾಗಿ ಶ್ಲಾಘಿಸಿರುವನು.

ಹರಿಹರ ಕವಿಯು ಸಾಹಿತ್ಯ ನಿರ್ಮಾಣ ಮಾಡಲು ಹೊರಟಿದ್ದು ಯಾವ ದಾದರೊಂದು ಲೌಕಿಕ ಸುಖಾಭಿಲಾಷೆಯಿಂದಲ್ಲ. ಜೀವನದ ಪರಿಪೂರ್ಣ ತೆಯೇ ಅವನ ಸಾಹಿತ್ಯದ ಹೆಗ್ಗುರಿ. ಆತನ ಸಾಹಿತ್ಯದಲ್ಲಿ ಅವನ ಅಂತ

ಜೀವನವೆಲ್ಲ ಪೂರ್ಣವಾಗಿ ಪ್ರತಿಬಿಂಬಿಸಿದೆ. ಅಲ್ಲಿ ಒಡೆದು ಕಾಣುವದು ಜೀವನು ದೇವನಿಗಾಗಿ ನಡೆಸಿದ ಹೋರಾಟ. ಕೊನೆಗೆ ಜೀವ ದೇವರ ಕೂಟದಿಂದುಂಟಾದ ಮಹದಾನಂದ.

ವೀರಶೈವ ಧರ್ಮದ ತಿರುಳನ್ನೂ ಉದಾತ್ತ ಸಾಹಿತ್ಯವನ್ನೂ ತಿಳಿಗನ್ನಡದಲ್ಲಿ ತಿಳಿಸಿ ಪತಿತರಾದ ಮಾನವರನ್ನು ಪುನೀತರನ್ನಾಗಿ ಮಾಡಿಹೋದ ಇಂಥ ಅಗ್ರ ಕವಿಯ ಸ್ಮರಣೆಯು ಬಾರದೆ ಇರದು.

---

## ನಿಧಿ ಸಮರ್ಪಣ ಸಮಿತಿ

(ಶ್ರೀ. ಹಳಕಟ್ಟಿ ಮತ್ತು ಶ್ರೀ. ಉತ್ತಂಗಿಯವರಿಗೆ ಉಡುಗೊರೆ)

# ವಿಜ್ಞಾಪನೆ

**ಮಾನ್ಯರೆ,**

ಕಳೆದ ಅರ್ಧ ಶತಮಾನದಿಂದಲೂ ಕನ್ನಡ ನಾಡು ನುಡಿಗಳ ಸರ್ವಾಂಗೀಣ ಉನ್ನತಿಗಾಗಿ ತಮ್ಮ ಸಾರ ಸರ್ವಸ್ವವನ್ನೇ ಸಮರ್ಪಿಸಿ ಸಾಹಿತ್ಯ ಕ್ಷೇತ್ರದಲ್ಲಿ ಸಂತತವಾಗಿ ಶ್ರಮಿಸುತ್ತ ಬಂದಿರುವ ಶ್ರೀ. ಹಳಕಟ್ಟಿಯವರ ಮತ್ತು ಶ್ರೀ. ಉತ್ತಂಗಿಯವರ ಹೆಸರುಗಳನ್ನು ಕೇಳದವರಾರು? ವಚನ ಸಾಹಿತ್ಯ ಪ್ರಕಾಶ ಪಿತಾಮಹರೆನಿಸಿದ ಶ್ರೀ ಹಳಕಟ್ಟಿಯವರು ಕನ್ನಡ ಸಾಹಿತ್ಯಕ್ಕೆ ಅಪೂರ್ವವಾದ, ಅಮೋಘವಾದ, ಅಜರಾಮರವಾದ ಕಾಣಿಕೆಯನ್ನಿತ್ತಿರುವುದು ಸರ್ವವಿದಿತ ಸಂಗತಿಯಾಗಿದೆ. ಅದರಂತೆಯೇ ಜನಪದ ಸಾಹಿತ್ಯ ಸಾಮ್ರಾಟನಾದ ಸರ್ವಜ್ಞನ ಬಹುಮುಖವಾದ ಕಾವ್ಯಗಂಗೆಯನ್ನು ತಮ್ಮ ಭಗೀರಥ ಪ್ರಯತ್ನದಿಂದ ಕನ್ನಡಿಗರ ಮನೆಮನೆಗೂ ಹರಿಯಿಸಿದ ಕೀರ್ತಿ ಶ್ರೀ ಉತ್ತಂಗಿ ಚೆನ್ನಪ್ಪನವರಿಗೆ ಸಲ್ಲುತ್ತದೆ. ಅಲ್ಲದೆ ಅನುಭವ ಮಂಟಪದ ದಿಶೆಯಲ್ಲಿ ಅವರು ಮಾಡಿದ ಸಂಶೋಧನೆಯು ಸಂಶೋಧನಾ ಕ್ಷೇತ್ರದಲ್ಲಿ ಒಂದು ಮೈಲಿಗಲ್ಲು.

ಕನ್ನಡನಾಡಿನ ಸಾಹಿತ್ಯ ಸಂಸ್ಕೃತಿಗಳ ಸಾಕಾರ ಮೂರ್ತಿಗಳಂತಿರುವ ಈ ಋಷಿದ್ವಯರಿಗೆ ಕನ್ನಡಿಗರು ಯಾವ ಸನ್ಮಾನವನ್ನು ಸಲ್ಲಿಸಿದ್ದಾರೆ?

ಅವರು ಸಲ್ಲಿಸಿದ ಸೇವೆ, ಮಾಡಿದ ತ್ಯಾಗಕ್ಕೆ ಪ್ರತಿಯಾಗಿ ಏನು ಸಮರ್ಪಿಸಿದರೂ ಸಾಲದು. ಆದರೂ ಕನ್ನಡಿಗರು ತಮ್ಮ ಅಳಿಲು ಕೊಡುಗೆಯನ್ನಾದರೂ ಸಮರ್ಪಿಸದೆ ಹೋದರೆ ಕರ್ತವ್ಯಚ್ಯುತಿಯಾಗುವುದು.

ಈ ಉಭಯ ಪಂಡಿತ ಪ್ರಕಾಂಡರಿಗೆ ತಕ್ಕ ಸನ್ಮಾನವನ್ನು ಮಾಡುವ ಸದುದ್ದೇಶದಿಂದ ಈ ಸಮಿತಿಯು ನಿಧಿ ಸಂಗ್ರಹ ಕಾರ್ಯವನ್ನು ಕೈಕೊಂಡಿದೆ.

ಕನ್ನಡನಾಡಿನ ಹಿರಿಕಿರಿಯರೆಲ್ಲರೂ ಈ ಸತ್ಕಾರ್ಯಕ್ಕಾಗಿ ಕೊಡುಗೈಯಿಂದ ಧನಸಹಾಯ ಸಲ್ಲಿಸಿ ನಾವು ಹೊಮ್ಮಿದ ಕಜ್ಜವು ಯಶಸ್ವಿಯಾಗಿ ಈಡೇರುವಂತೆ ಮಾಡುವಿರೆಂದು ನೆರೆನಂಬಿದ್ದೇವೆ.

ಅಧ್ಯಕ್ಷರು | ಉಪಾಧ್ಯಕ್ಷರು

ಡಾ. ಜಿ. ಎಸ್. ಮೇಲ್ಕೋಟೆ. | ಸರದಾರ ಶರಣಗೌಡಾ ಇನಾಂದಾರ, M.L.A.

ಗೌರವ ಕಾರ್ಯದರ್ಶಿಗಳು

ಕೆ. ಆರ್. ಹಿರೇಮಠ M.L.A.

ಪ್ರಭುರಾಜ ಪಾಟೀಲ B.A.

# ಸ್ಫುಟವಿಷಯಗಳು.

(ಲೇ:- ಶ್ರೀಯುತ ರಾ|| ಬ|| ಫ. ಗು. ಹಳಕಟ್ಟಿ, ಬಿ. ಎ. ಎಲ್. ಎಲ್. ಬಿ.)

---

**ಕರ್ನಾಟಕ ಏಕೀಕರಣ:—** ಈಗ ಕಾಂಗ್ರೆಸ್ಸು ಏಕೀಕೃತ ಹಿಂದುಸ್ತಾನವನ್ನು ಮಾಡಲು ಅಪೇಕ್ಷಿಸಿ, ಇದರಲ್ಲಿ ಅವರು ಪ್ರಾಂತಗಳ ರಚನೆಯ ಕಾರ್ಯವನ್ನು ಮೊದಲು ಕೈಕೊಂಡಿರುವರು. ಇದರಿಂದ ಅವರ ಉದ್ದೇಶವು ಬೇಗನೆ ಕೈಗೂಡುವದರಲ್ಲಿ ಏನೂ ಸಂದೇಹವಿರಲಾರದು. ಈ ವರೆಗೆ ಪ್ರಾಂತಗಳು ಸರಿಯಾಗಿ ಆಗದ್ದರಿಂದ ಎಲ್ಲ ಪ್ರಾಂತಗಳಲ್ಲಿ ಒಡಕುಗಳು ತುಂಬಿ ಹೋಗಿರುತ್ತವೆ. ಮೂಲದಲ್ಲಿ ಹೀಗೆ ಒಡಕುಗಳು ಇದ್ದ ಬಳಿಕ ಇಂಥ ಪ್ರಾಂತಗಳ ಮೇಲೆ ನಿಲ್ಲಿಸಿದ ಕಟ್ಟಡವು ಗಟ್ಟಿಯಾಗಿ ನಿಲ್ಲುವ ಹೇಗೆ? ಬೇಗನೆ ಕುಸಿದು ಬೀಳುವದರಲ್ಲಿ ಸಂದೇಹವಿರಲಾರದು. ಮುಂಬಯಿ ಇಲಾಖೆಯಲ್ಲಿ ಗುಜರಾಥ ಮಹಾರಾಷ್ಟ್ರಗಳ ಅಂತಸ್ಥ ಕಲಹಗಳು, ಮದ್ರಾಸ ಇಲಾಖೆಯಲ್ಲಿ ಆಂಧ್ರ ಕನ್ನಡಿಗರ ಹೋರಾಟ ಹಾಗೂ ಆಂಧ್ರ, ದ್ರಾವಿಡರ ಹೋರಾಟ, ಪಂಜಾಬದಲ್ಲಿ ಹಿಂದೂ, ಸೀಖ, ಮುಸಲ್ಮಾನರಲ್ಲಿ ಅಂತಸ್ಥ ಕಲಹಗಳು ಹೀಗೆ ಎಲ್ಲ ಪ್ರಾಂತಗಳಲ್ಲಿ ಬಹುದಿವಸಗಳಿಂದಲೂ ದ್ವೇಷಾಸೂಯೆಗಳು ಪಸರಿಸುತ್ತ ಬಂದಿವೆ. ಅವುಗಳಲ್ಲಿ ಅಲ್ಪ ಸಂಖ್ಯಾಕರು ದೇಶಗಳಲ್ಲಿ ಪ್ರಾಬಲ್ಯವನ್ನು ಹೊಂದಿ ಬಹುಸಂಖ್ಯಾಕರನ್ನು ಹಿಂದಕ್ಕೊತ್ತುವದರಲ್ಲಿ ತೊಡಗಿದರು. ಇದರಿಂದ ಯಾವ ನಾಡಿನಲ್ಲಿಯೂ ಐಕತ್ಯೆ ಇಲ್ಲ. ಈ ಸ್ಥಿತಿಯನ್ನು ಸರಿಪಡಿಸಲಿಕ್ಕೆ ಭಾಷಾನುಗುಣ ಪ್ರಾಂತ ರಚನೆಯೇ ಯೋಗ್ಯ ಮಾರ್ಗವಾಗಿದೆ. ಈ ಕಾರ್ಯವನ್ನು ಸರಕಾರವು ಕೈಕೊಂಡ ಕೂಡಲೆ ಈ ವರೆಗೆ ಅಧಿಕಾರದಲ್ಲಿದ್ದ ಸಮಾಜಗಳು ಈ ಕಾರ್ಯದ ವಿರುದ್ಧ ಚಳವಳಿಯನ್ನು ಹೂಡಿವೆ. ಮೈಸೂರು ಮೈಸೂರಿನವರಿಗಾಗಿ ಎಂತಲೂ ಲಿಂಗಾಯತ ಒಕ್ಕಲಿಗರೆಂತಲೂ ಈ ಮೊದಲಾದ ಭೇದಭಾವಗಳು ಉಂಟಾಗಿವೆ. ಸ್ವಾರ್ಥತೆಯೇ ಇದಕ್ಕೆ ಮೂಲವಾಗಿದೆ. ಆದರೆ ಇಂಥ ಭಾವನೆಗಳಿಗೆ ಕಾಂಗ್ರೆಸ್ಸಿನ ವರಿಷ್ಠರು ಒಳಗಾಗದೆ ಭಾಷಾನುಗುಣ ಪ್ರಾಂತ ರಚನೆಯಲ್ಲಿ ತೊಡಗಿದವರಾಗಿರಾಗಿರುತ್ತಾರೆ. ಇದು ಸಿದ್ಧಿಗೆ ಹೋದರೆ ಇದರ

ಶುಭ ಪರಿಣಾಮಗಳು ಬೇಗನೆ ಭಾರತದಲ್ಲೆಲ್ಲ ಆಗುವದರಲ್ಲಿ ಏನೂ ಸಂದೇಹವಿರಲಾರದು. ಆ ಕಾಲವು ಬೇಗನೆ ಪ್ರಾಪ್ತವಾಗಲೆಂದು ನಾವು ಹಾರೈಸುತ್ತೇವೆ.

**ಸಂಸ್ಕೃತಾಭ್ಯಾಸ:**– ಮುಂಬಯಿಭಾರತೀ ವಿದ್ಯಾಪೀಠದ ಆಶ್ರಯದಲ್ಲಿ ವಿಶ್ವಭಾರತೀ ಪರಿಷತ್ತು ತಿರುಪತಿಯಲ್ಲಿ ಇದೇತಿಂಗಳಿನಲ್ಲಿ ಶ್ರೀರಾಜೇಂದ್ರ ಪ್ರಸಾದ ಇವರ ಅಧ್ಯಕ್ಷತೆಯಲ್ಲಿ ಕೂಡಿತ್ತು. ಆಗ ಭಾರತೀಯ ಸಂಸ್ಕೃತ ಪ್ರೇಮಿಗಳು ಬಹ ಸಂಖ್ಯೆಯಿಂದ ಕೂಡಿದ್ದರು. ಅಧ್ಯಕ್ಷರು ಹಿಂದೂ ಸಂಸ್ಕೃತಿಗೆ ಸಂಸ್ಕೃತಜ್ಞಾನವು ಅತ್ಯಾವಶ್ಯಕವೆಂಬುದನ್ನು ಒತ್ತಿ ಹೇಳಿದರು. ಭಾರತದ ಸಾಂಸ್ಕೃತಿಕ ಪ್ರಗತಿಯು ಸಂಸ್ಕೃತಭಾಷಾಭ್ಯಾಸದ ಮೇಲೆಯೇ ಅವಲಂಬಿಸಿರುತ್ತದೆ. ನಮ್ಮ ದೇಶದ ಎಲ್ಲ ಭಾಷೆಗಳು ಸಂಸ್ಕೃತವಾಙ್ಮಯವನ್ನು ತನ್ನ ಮಾದರಿಯಾಗಿ ಇಟ್ಟುಕೊಂಡಿರುತ್ತವೆ. ಕನ್ನಡದಲ್ಲಿ ಆಗಿಹೋದ ಹಿಂದಿನ ಕಾಲದ ವಿದ್ವಜ್ಜನರು ಸಹ ತಾವು ಉಭಯಭಾಷಾ ಪಾಂಡಿತರೆಂದು ತಮ್ಮ ಗ್ರಂಥಗಳಲ್ಲಿ ಹೇಳಿಕೊಂಡಿರುವರು. ಆದರೆ ಆಂಗ್ಲ ಭಾಷೆಯು ಇಲ್ಲಿ ಪ್ರಚಲಿತವಾದಂದಿನಿಂದ ಸಂಸ್ಕೃತ ಅಭ್ಯಾಸವು ಹಿಮ್ಮೆಟ್ಟಿರುತ್ತದೆ. ಆದರೆ ಈಚೆಗೆ ಬಹು ಜನರು ಸಂಸ್ಕೃತಕ್ಕೆ ಮಹತ್ವಕೊಡಹತ್ತಿರುವದು ಶುಭಚಿನ್ಹವಾಗಿದೆ. ಆದರೆ ಹೈಸ್ಕೂಲುಗಳಲ್ಲಿ ವಿದ್ಯಾರ್ಥಿಗಳು ಸಂಸ್ಕೃತ ಅಭ್ಯಾಸವನ್ನು ಬಿಟ್ಟುಕೊಟ್ಟು ಮಾಗಧೀ ಅಭ್ಯಾಸವನ್ನು ಆರಂಭಿಸಹತ್ತಿರುವದು ಬಹು ಶೋಚನೀಯವಾಗಿದೆ ಮಾಗಧಿಯಿಂದ ಜೈನ ಸಂಸ್ಕೃತಿಯ ಅಭ್ಯಾಸಕ್ಕೆ ಅನುಕೂಲವಾಗಬಹುದು. ಆದರೆ ಭಾರತದಲ್ಲಿ ಜೈನಧರ್ಮೀಯರ ಸಂಖ್ಯೆಯು ಅತ್ಯಲ್ಪವಾದದ್ದು. ಮತ್ತು ಆದರೆ ಭಾರತದ ಧರ್ಮಗಳು ವೈದಿಕ ಧರ್ಮವನ್ನು ಅನುಸರಿಸುತ್ತ ಬಂದಿವೆ. ಈ ಸಂಗತಿಯನ್ನು ಭಾರತೀಯರು ಲಕ್ಷಿಸಿ ಸಂಸ್ಕೃತ ಅಭ್ಯಾಸವನ್ನು ಪ್ರೋತ್ಸಾಹಿಸುವದು ಅವರ ಕರ್ತವ್ಯವಾಗಿರುತ್ತದೆ.

**ಪ್ರಭುವಿನ ಪ್ರಭೆ:** – ಶ್ರೀಯುತ ಮನೋಹರ ದೇಶಪಾಂಡೆ ಹೆಡ್ ಮಾಸ್ತರ ಅಥಣಿ ಹೈಸ್ಕೂಲ್ ಇವರು ಅಲ್ಲಮಪ್ರಭುವಿನ ವಚನಗಳ ಮೇಲೆ ವಿಸ್ತೃತ ವಿವೇಚನೆಯನ್ನು ಇದರಲ್ಲಿ ಮಾಡಿದ್ದಾರೆ. ಈ ತೆರದ ಗ್ರಂಥವು ಈ ವರೆಗೂ ಆಗಿರಲಿಲ್ಲ. ಶಿವಶರಣರಲ್ಲಿ ಅಲ್ಲಮಪ್ರಭುವು ಉಚ್ಚ ಸ್ಥಾನವನ್ನು ಹೊಂದಿದವನಾಗಿದ್ದಾನೆ. ಅವನು ವಿರಕ್ತಾಶ್ರಮಿಗಳ ಅಗ್ರಣಿ ಎಂದೆನಿಸಿಕೊಂಡಿದ್ದಾನೆ. ಅವನ ವಚನಗಳಲ್ಲಿ ವೀರಶೈವ ಸಂಸ್ಕೃತಿಯ ಬಗ್ಗೆ ಆಳ

ವಾದ ವಿಚಾರಗಳಿವೆ. ಇವುಗಳನ್ನು ಗ್ರಂಥಕಾರರು ಸುಲಭ ಭಾಷೆಯಲ್ಲಿ ಈ ಗ್ರಂಥದಲ್ಲಿ ವಿವರಿಸಿದ್ದಾರೆ. ಈಚೆಗೆ ಬಸವೇಶ್ವರ, ದೇವರದಾಸಿಮಯ್ಯ, ಮಹಾದೇವಿಯಕ್ಕ ಮುಂತಾದವರ ವಚನಗಳ ವಿವೇಚನೆಗಳು ಆಗಿದ್ದರೂ ಅಲ್ಲಮಪ್ರಭುವಿನ ವಚನಗಳು ವಿವೇಚಿಸಲ್ಪಟ್ಟಿರುವದಿಲ್ಲ. ಈ ಮಹತ್ವದ ಕಾರ್ಯವನ್ನು ಶ್ರೀಯುತ ದೇಶಪಾಂಡೆಯವರು ಈ ಗ್ರಂಥದಲ್ಲಿ ಪೂರ್ಣ ಮಾಡಿರುತ್ತಾರೆ. ಇದಕ್ಕೋಸ್ಕರ ವೀರಶೈವ ಸಮಾಜವು ಅವರಿಗೆ ಋಣಿಯಾಗಿದೆ.

---

ಪದ ರಾಗ ವರಾಳಿ

ಉಪಮಿಸಬಾರದ ಲಿಂಗವು ಕರಸ್ಥಲದೊಳಗಳವಡಲು ಅತಿಶಯವನು ಬೇರರಸಲಿಲ್ಲ ಮತ್ತೆಲ್ಲಿ ಕಾಬುದು ನಿಜ ಸುಖವಾ ||ಪ||

ನಾದಬಿಂದು ಕಳೆಗಳಗತೀತವಾದ ಅನಾದಿ ಲಿಂಗವನ್ನು ಗುರು ಕರಸ್ಥಲಕ್ಕೆ । ತೋರಿಸಿ ಕೊಟ್ಟ ಬಳಿಕ ಬೇರೆ ಮತ್ತರಸಿಹೆನೆಂದು ನೆನೆಯಲಿಲ್ಲ. ||೧||

ಉನ್ಮನಿಯ ಲೌಕಿಕದನುಸಂಧಾನವ ಪರಿಹರಿಸಲಿಕೆ ಚಿನುಮಯ ಮೂರ್ತಿ ಲಿಂಗವು । ಹಸ್ತದೊಳಿರಲಲ್ಲಿಯೇ ಕಾಬುದು ನಿಜ ಸುಖವಾ ||೨||

ಅಂಗದೊಳಳವಟ್ಟ ಕ್ರೀಗಳಲ್ಲಿ ಮಂಗಳಮಯವಾಗಿ ತೋರುತ್ತಿರೆ ಕಂಗಳನು ತುಂಬಿ । ನೋಡಿ ಸುಖಿಯಹುದಲ್ಲದೆ ಬೇರೆ ಮತ್ತರಸಿಹೆನೆಂದು ನೆನೆಯಲಿಲ್ಲ. ||೩||

ಕೈಲಾಸ ಕರತಳದೊಳಗೆ ಕರತಲಾಮಳಕವಾಗಿರೆ ಬೇರೆ ಕೈಲಾಸಕ್ಕೆ ಹೋಗಿ । ಲಿಂಗವ ಕಂಡಿಹೆನೆಂಬಡೆ ತೆರಹುಂಟೆ ||೪||

ಆಯತವಾಗಿಹ ಲಿಂಗದೊಳಗೆ ನಿಜಸ್ವಾಯತ ಸಂಬಂಧವಿರುತ್ತಿರಲು ಆಯತವನು ಬೇರರಸಲಿಲ್ಲ ಕೂಡಲಚನ್ನಸಂಗ ನಿಮ್ಮನರಿದಂಗೆ ||೫||

---

## ೩೪. ಭಾವಲಿಂಗಸ್ಥಲ.

**ಸೂತ್ರ:**— ಇಂತು ಅಂಗದೊಳಳವಟ್ಟ ಸತ್ಕ್ರಿಯಾಲಿಂಗವು ಸದ್ಭಕ್ತನ ಹೃದಯಾಂಗದಲ್ಲಿ ಭಾವಭರಿತವಾಗಲು ಮುಂದೆ ಭಾವಲಿಂಗಸ್ಥಲವಾದುದು.

ಪದ— ರಾಗ ಮಧುಮಾಧವಿ

ಎನ್ನಯ ಕರಸ್ಥಲಕ್ಕನುವಾದ ಧರ್ಮವು ಎನ್ನಯ ಹೃತ್ಕಮಲವ ಬೆಳಗುವ ಪರಂಜ್ಯೋತಿ ||ಪ||

ಹರಿದು ಹತ್ತುವ ಸುಳಿದು ಸೂಸುವ ಪರಿಪರಿಯ ಬಣ್ಣಗಳ ತೋರಿಸಿ। ಪರಮುಖನಾಗಿ ಕತ್ತಲೆಯೊಳಿರಿಸಿ ಎನ್ನ ನರಕ ಶರೀರಿಯ ಮಾಡದಿರಯ್ಯ ||೧||

ಸಾಕಾರದ ಸಂಗದ ಸುಖದಲ್ಲಿ ವ್ಯಾಕುಳನಂ ಮಾಡಿ ಎನ್ನುವನಿರಿಸದೆ ॥ ಸೂಕ್ಷ್ಮಶುದ್ಧಾಂತಃಕರಣದ ಮೇಲೆ ಕಮಲಾನನದ ಲಿಂಗದ ಬೆಳಗಿನೊಳಗಿರಿಸು ॥೨॥

ಬೇಕೆನ್ನದೆ ಬೇಡೆನ್ನದೆ ಪರಿಯನ್ನು ಸಾಕೆನ್ನದ ಸವಿಯೆನ್ನದ ರುಚಿಯನ್ನು। ಪಾಪಪುಣ್ಯಗಳೆಂಬ ಬಯಕೆಗಳ ಸೋಂಕಿಲ್ಲದೆ ನಿರ್ಲೇಪನಾಗಿರಿಸು ॥೩॥

ಅಮಲ ರೂಪಾದಿ ಕಮಲದಲ್ಲಿ ವಿಮಲಶುದ್ಧ ಸ್ಫಟಿಕ ಜ್ಯೋತಿಯುದರಿ। ಷಡುವರ್ಗವ ಕೊಂಡು ಕಮಳನಾಳ ಸದ ಬಿಂದುವಿನೊಳಗಾಗೆನ್ನುವನಿರಿಸು ॥೪॥

ಕರಣಾದಿಗಳ ರತವು ಭೂಮಿಯ ಮೇಲೆ ಸರವರದ ಕಮಲದ ಮೇಲೆ। ಪರಿಣಾಮದಲಮೃತ ಬಿಂದು ಕರಗಿ ಎನ್ನಿರವು ಲಿಂಗದಲ್ಲಿ ಲೀಯ್ಯವಾಗಿ ॥೫॥

ಮರುತಂಗೂಡಿದ ಪರಿಮಳದಂತೆ ಯುರಿಯುಂಡ ಕರ್ಪೂರ ಕರಿದೋರದಂತೆ। ಸದವು ಬಿಂದು ಸುಸರವಾಗಿ ಎನ್ನಾರವು ಲಿಂಗದಲ್ಲಿ ಲಿಂಗೈಕ್ಯವಾಗಿ ॥೬॥

ಐದಿಂದ್ರಿಯನ್ನೈದೆ ನಾಳದಲ್ಲಿ ಕಟ್ಟಿ ಭೇದಿಸಿದೆನು ಕರಣಾದಿ ಗುಣಗಳ ॥ ವ್ಯೈದೆಗೆದೆನು ಕಾಮ ಕಣ್ಣಳವಡದೆ ಸಾಧಿಸಿದೆನು ಕೂಡಲಚನ್ನಸಂಗನ ಬೆಳಗಾ ॥೭॥

---

## ೩೫. ಜ್ಞಾನಲಿಂಗಸ್ಥಲ.

**ಸೂತ್ರ**:— ಇಂತು ಸದ್ಭಾವದಲ್ಲಿ ಭರಿತವಾಗಿ ಚಿದ್ಭಾವ ಸ್ವರೂಪವನೈದಿದ ಲಿಂಗವು ಸದ್ಭಕ್ತನಂಗದಲ್ಲಿ ನಿಂದು ಮಹಾಜ್ಞಾನ ಸ್ವರೂಪವಳವಡಲು, ಮುಂದೆ ಜ್ಞಾನ ಲಿಂಗಸ್ಥಲವಾದುದು.

**ಪದ ರಾಗ ಭೂಪಾಳಿ.**

ಉದಙ್ಮುಖನೊಬ್ಬ ಪುರುಷನು ಉದಯ ಮುಖನೊಬ್ಬ ಪುರುಷನು ವಿರಾಟಜನನನೊಬ್ಬ ಪುರುಷ ವಿರಾಜ ಪುರುಷನೊಬ್ಬನು ॥ಪ॥

ಸಹಸ್ರಶಿರಸನಾದಿ ಪುರುಷನು ವೇದ ಪುರುಷನೊಬ್ಬನು ॥ ಜ್ಯೋತಿ ಪುರುಷನೊಬ್ಬ ಪುರುಷ ತ್ರಿಪಾದದ ಊರ್ಧ್ವಪುರುಷನೊಬ್ಬನು ॥೧॥

ಆದಿ ಪುರುಷನೊಬ್ಬ ಪುರುಷನು ವಿಯತ್ಪುರುಷನೊಬ್ಬನು ತದ್ವಿಯತ್ಪುರುಷ ಪುರುಷ ಪುರುಷರಿಲ್ಲದ ಪ್ರಭೆಯ ನೋಡಿರೆ ॥೨॥

ಏಕಾತ್ಮೂರ್ತ್ಯ ಪರಬ್ರಹ್ಮಂ ವೇದ ತಸ್ಮೈ ನಮಸ್ತೇ । ವೇದನಾದಾತೀತ ತೂರ್ಯಂ ಪರಮಂ ನಿರವಯಂ ॥೩॥

ಚಿದ ಸಂವೇದ್ಯ ನಿರ್ವಿಕಲ್ಪಂ ನಿರಹಂ ನಿರಾಕಾರ । ಓಂಕಾರ ಗುಣಾತೀತಮವ್ಯಕ್ತಂ ॥೪॥

ಷಟ್ತ್ರಿಂಶತ್ಪ್ರಭಾಪಟಲದ ಪ್ರಭೆಯ ಬೆಳಗಿದೆ ನೋಡಿರೇ । ಬೆಳಗಿನೊಳಗಣ ಮಹಾಬೆಳಗಿನ ಬೆಳಗು ಕೂಡಲಸಂಗಯ್ಯ ॥೫॥

---

## ೩೬. ಸ್ವಯಜಂಗಮಸ್ಥಲ

**ಸೂತ್ರ**:— ಇಂತು ಕ್ರಿಯಾಲಿಂಗ ಭಾವಲಿಂಗ ಜ್ಞಾನಲಿಂಗವೆಂಬ ತ್ರಿವಿಧಸ್ಥಲವೇಕವಾದ ಲಿಂಗವು ಭಕ್ತನ ಸ್ವಯಂಭಾವ ಗುಣದಲ್ಲಿ ನಿಶ್ಚಲವಾಗಿರ್ದ ಭೇದಮೆಂತೆಂತಿರ್ದುದು ಎಂದಡೆ ಮುಂದೆ ಸ್ವಯಜಂಗಮಸ್ಥಲವಾದುದು.

ಪದ ರಾಗ ಕೇಗುಪ್ತಿ

ಗಿರಿಗಳ ಕಂದರವ ವಿವರಿಸಿ ಶಿವಸಂಸಾರಿಗಳು ॥ಪ॥

ಸಜ್ಜನ ಕೆಂಜಡೆಮುಡಿ ತ್ರಿಪುಂಡ್ರದರುಶನ ಪೊರೆ ನೋಟವು ಲಿಂಗ ಭಾವ ಆಚಾರವೆಂಬ ॥ ಓಲೆಯನಿಟ್ಟು ಜ್ಞಾನವೆಂಬ ವಸ್ತ್ರವನುಟ್ಟು ಶರಣಸತಿ ಲಿಂಗಪತಿಯಾದನು ॥೧॥

ಎಕ್ಕೆ ಗ್ರಹವಾಗಿ ಮರನೆ ಮಡಕೆಯಾಗಿ ಹಣ್ಣೆ ಓಗರವಾಗಿ ತಣ್ಣನಡಕಿಡಲು । ಸೀತಳವಾಗಿ ಉಣಲಿಕ್ಕೆ ಆಣಿಲೆ ದಂಬುಲಗೊಟ್ಟರೂ ॥೨॥

ಬೇಡನಾರಂಭವ ಮಾಡುವ ಪರಿಬೇರಿಂದ ಕಂದ ಮೂಲಾದಿಗಳ ಶಾಕವಿಲ್ಲದೆ। ಪಾಕವ ಮಾಡಿ ತಮ್ಮ ಗಂಡರಿಗಿಕ್ಕಿ ತಾವು ಮೆಲುವರಯ್ಯಾ ॥೩॥

ಎರಳೆ ಸಾರಂಗ ಪುಲಿ ಮೃಗ ಪಶುವಾನರ ನೆರೆಯಾಗಿರಲು ಕೂಗುವ। ಕೋಗಿಲೆ ಕಳಹಂಸ ಕುಣಿಕುಣಿದಾಡುವ ನವಿಲುಗಳೂ ||೪||

ಸತ್ತು ಸಂಯೋಗದಿಂ ಭಕ್ತಿಯು ರತಿ ಕೂಡಲು ಸಮತೆಯೆಂಬ ಬಸುರಾಗಲು । ಪರಿಣಾಮವೆಂಬ ಮಗ ಹುಟ್ಟಲು ರೇಕನಾಥಯ್ಯನೆಂದು ಹೆಸರಿಟ್ಟರು ||೫||

## ೩೭. ಚರಜಂಗಮಸ್ಥಲ.

ಸೂತ್ರ:— ಇಂತು ಸ್ವಯಂಭಾವ ಗುಣದಲ್ಲಿ ನಿಶ್ಚಲವಾದ ಲಿಂಗವು ಭಕ್ತನಲ್ಲಿ ನಿಂದು ಭಕ್ತಿಕಾರಣವಾಗಿ ಚರಿಸುವ ಭೇದವೆಂತಿರ್ದುದೆಂದಡೆ ಮುಂದೆ ಚರಜಂಗಮಸ್ಥಲವಾದುದು.

ಪದ-ರಾಗ ಲಲಿತ

ಬೇಡುವ ನವಯೋಗಿ, ಭಕುತಿ ಭಿಕ್ಷಾಂದೇಹಿ ಎಂದು, ಬೇಡುವ ನವಯೋಗಿ ||ಪಲ್ಲ||

ಸತ್ಯ ಶಿವಧಾರದರಿವೆ ಕಚ್ಚುಟ ಶಾಂತಿ ತ್ರಿಪುಂಡ್ರವ ಹೂಸಿ। ಹೃದಯ ಕಮಲದ ಸೆಜ್ಜೆಯ ಪ್ರಾಣಲಿಂಗ ಸಂಬಂಧಿಯಾಗಿಪ್ಪನವ್ವಾ ||೧||

ಸಮತೆ ಕಂಥೆ ಸುಮತಿ ಟೊಪ್ಪರ ನಿಸ್ಸಂದೇಹ ಹಾವುಗೆಯ ಮೆಟ್ಟಿ! ಕರುಣ ಖರ್ಪರ ಕರಣ ಗೋಲುಮುದ್ರೆವಿಡಿದಿಪ್ಪನವ್ವಾ ||೨||

ಕಾಮ ಕಳಿಯು ಕ್ರೋಧ ಕೊರಡು ಮೋಹ ಮುಳ್ಳು ಲೋಭ ಕೊಂಪೆ । ಮದದ ಚೇಳು ಮತ್ಸರದ ಹೊಳಹ ನರಿದು ಸುಳಿದನವ್ವ ||೩||

ಸಂಸಾರದಹಂಕಾರದ ಕತ್ತಲೆಯನರಿದು ಸುಳಿವನವ್ವಾ। ಪಂಚೇಂದ್ರಿಯಂಗಳೆಂಬ ನಾಯಿಗಳು ನೋಡುವವು ಗುರ್ರೆನ್ನದೆ ||೪||

ಪಂಚಭಿಕ್ಷವ ರೇಕನಾಥನ ಮಗ ಹುಟ್ಟಿನಲ್ಲಿಕ್ಕೆಲಿಂಗ । ಪಾಣಿಪಾತ್ರೆಯೆಂದು ಅಂಗೈಯಲಿಯಿಕ್ಕಿದ ಗುರುವೇ ||೫||

## ೩೮. ಪರಜಂಗಮಸ್ಥಲ.

**ಸೂತ್ರ**:— ಇಂತು ಭಕ್ತಿಕಾರಣವಾಗಿ ಚರಲಿಂಗವು ಭಕ್ತನ ಚಿದಾತ್ಮನಲ್ಲಿ ಶ್ರೀಮತ್ಪರಾಪರ ನಿರ್ಗಮನವೆಂತಿರ್ದುದೆಂದಡೆ ಮುಂದೆ ಪರಜಂಗಮಸ್ಥಲವಾದುದು.

ಪದ ರಾಗ ಮಾಳವಗೌಳ

ಬರಿದೆ ಭ್ರಾಂತಿಗೊಳಗಾಗಲು ಅರಿಕೆಗೆಡಲು ತಾನೆ ಬೇರೆ ತೋರಲಿಕಿಲ್ಲ ॥ಪಲ್ಲ॥

ಮಾತಿನ ಸೂತಕವಡಂ ನೇತಿಗಳೆದು ನಿಂದ ನಿಶ್ಚಯ ಅತುಮಜ್ಞಾನದ ಸುಖಸನ್ಮಾತ್ರ ಭರಿತಂಗೆ । ಜಾತನಲ್ಲ ಖ್ಯಾತನಲ್ಲ ನೀತಿಗೊಳ್ಳದನುಪಮಸುಖಿ ಸ್ವತಂತ್ರ ಸ್ವಯಂಪ್ರಕಾಶನಾತನೆ ಮುಕ್ತ ॥೧॥

ಕಮ್ಮುಗೆಟ್ಟು ಕರ್ಮವಳಿದು ನಿರ್ಮಳ ನಿಸ್ಪೃತಿ ನಿಜದಿಂ ಸುಮ್ಮಾನದ ಶಾಂತಿರಸದ ನಿತ್ಯತೃಪ್ತಂಗೆ । ಉಮ್ಮಳಿ ಮಮ್ಮಸುಲ್ಲದೊಮ್ಮೆ ಯಾನಂದ ಸಹಜ ಬೊಮ್ಮವಾಗಿ ನಿಂದ ನಿಲವನುಪಮಿಸಬಹುದೆ ॥೨॥

ಅರಿವುಗೆಟ್ಟು ಕುರುಹು ಮರದು ನಿರ್ಣಯ ನಿಸ್ಪೃತಿ ನಿಜವನರಸಿ ತೊಳಲಿ ಬಳಲಲೇಕೆ ಸ್ವಾನುಭಾವಕೆ । ಕರೆಯು ಮರೆಯು ಮಾಯಬಲೆಯು ಹರಿಯಲೊಡನೆ ಬಚ್ಚ ಬರಿಯಬೆರಗು ನಿರುಗೆಯಾಗಿ ನಿಂದೆನು ॥೩॥

ಅನುವೆನ್ನ ಧನ್ಯವೆನ್ನ ಧೇನುವೆನ್ನದತ್ಯಂತ ಶುದ್ಧ ಸ್ವಾನುಭಾವ ಸ್ವತಂತ್ರನಾದ ಮುಕ್ತನಾದ ನಿತ್ಯಗೆ । ಧ್ಯಾನ ಮೌನ ಮಂತ್ರ ತಂತ್ರ ಜ್ಞಾತೃ ಜ್ಞಾನಜ್ಞೇಯವಿಲ್ಲದೆ ತಾನೆ ತನ್ನನರಸಿಕಂಡ ನಿರುಪಮ ಮಹಿಮ ॥೪॥

ಭಾವರಹಿತ ಜೀವನ್ಮುಕ್ತ ಸಾವಯವಾಗಿರ್ದಡೇನು ಕೇವಲ ಜ್ಞಾನಸ್ವರೂಪನಾದ ನಿತ್ಯಗೆ ಅವ ಭಾವದ । ಬಾಧೆ ಇಲ್ಲ ದೇವಕಲ್ಲೇಶ್ವರನಲ್ಲಿ ಕೈವಲ್ಯಪದವನೊಡೆದೆ ಶ್ರೀಮಹಂತಂಗೆ ॥೫॥

---

## ೩೯. ಕ್ರಿಯಾಗಮಸ್ಥಲ.

**ಸೂತ್ರ**:— ಇಂತು ನವಸ್ಥಲಂಗಳೇ ತ್ರಿವಿಧ ತ್ರಿವಿಧ ಸ್ಥಲಂಗಳೇಕವಾದ ಆಚಾರಲಿಂಗವು ವೀರಮಾಹೇಶ್ವರನ ಗುರುಲಿಂಗವು ಸತ್ಕ್ರಿಯೆಯಲ್ಲಿ ಆಗಮ ಸ್ವರೂಪವನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಕ್ರಿಯಾಗಮಸ್ಥಲವಾದುದು.

**೫೮ ರಾಗ ಘೂರ್ಜರಿ**

ಭಕ್ತಿಯರಿದರಿದಾರಿಗು ಆಗದು ಶರಣ ಸಾರಾಯ ಸುಸಂಗ । ಅರಿವ ಗರಗಸದಂತಿರ್ದುದು ಅಹಿಪತಿಯಾಭರಣ ॥ಪ॥

ಶಿವಸಾರಾಯದಲ್ಲೊದಗಿದ ಬೀಜದ ಪರಿಯೆಂತೆಂದೆನೆ ಹೇಳುವೆ ಕೇಳಿರಿ । ಶಿವಭಕ್ತರ ಕ್ಷೇತ್ರದೊಳಗೆ ಹುಟ್ಟಿತೊಂದು ನಾರಿವಾಣದ ಸಸಿಯು ॥ ದಿವ ರಾತ್ರಿಗಳೆಂಬ ತಂಗಾಳಿ ಬೀಸಲು ಅವರಿಚ್ಛೆಗೆ ಅದು ಒಲಿಯದು ನೋಡ ಒಲಿವು ಸಜ್ಜನ ಶರಣರು ಸಾತ್ವಿಕ ಸದುಭಕ್ತರುಗಳಲಿ ॥೧॥

ಪರದ್ರವ್ಯಂಗಳ ಪರಸಮಯಂಗಳ ಪರಸ್ತ್ರೀಯರ ಪರದ್ರವ್ಯವ ಮುಟ್ಟರು । ಇರವಿಗೆ ಸೀಮೆಯ ಮಾಡಿಕೊಂಡಿಹಡೊಂದಾಚಾರದ ಕಾಹಾ ॥ ಕರ ಸೋಜಿಗ ಜೇನ್ತುಪ್ಪವನಾ ಹುಳ ಪರವಾದಿ ಯೆಂಜಲೆಂದರೆ ಮುಟ್ಟದು । ಶಿವಭಕ್ತನಾಗಿ ಇವ ಬಿಡದಿರ್ದಡೆ ಅವ ಕರಪಾತಕನೂ ೨॥

ಬ್ರಹ್ಮಹತಿಕಾರನು ಸುರೆಸೇವಕರನು ದುರ್ಮುಖ ಚೋರನು ಗುರು ತಲ್ಪಕರನು । ಒಮ್ಮೆಯು ಬೆರಸಿದಡೈದನೆಯ ಪಾತಕನೆಂದುದು ಗುರುವಚನಾ॥ ವರ್ಮವರಿದು ಮತ್ತವರಿರ ಬೆರಸುವ ಕರ್ಮಿಗಳಿಗೆ ಇನ್ನಾವುದು ಗತಿಯು । ಜನ್ಮಜನ್ಮದಿ ಹುಳುವಿನ ಕೊಂಡವೆ ನರಕವೆ ಪ್ರಾಪ್ತಿಗಳು ॥೩॥

ಭವಿಸಂಗಡದಲಿ ಬಟ್ಟೆಯ ಬಾರನು ಭವಿನುಡಿಗಡಣವನೆಂತು ಕೇಳನು। ಭವಿಯಾಸನದಲಿ ಕುಳ್ಳಿರನಾತನ ಸಹ ಪಂಕ್ತಿಯಲುಣ್ಣನು ॥ ಭವಿಶುಶ್ರೂಷೆಯನು ಭವಿಹೊಗಳತೆಯನು ಭವಿಶಯನಂಗಳ ಭವಿಪಾಕಂಗಳ । ಭವಿ ನೆರೆಮನೆಯೊಳಗಿರನಾ ಶರಣನು ಲಿಂಗದ ಶ್ರುತಿಗೇಳಿ ॥೪॥

ಲಿಂಗವಿಲ್ಲದ ನಡೆ ಲಿಂಗವಿಲ್ಲದ ನುಡಿ ಲಿಂಗವಿಲ್ಲದ ಸಂಭಾಷಣೆಯ ಸುಖ । ಲಿಂಗಭಕ್ತನು ಮಾಡಲಾಗಿ ಮತ್ತಲ್ಲಿಯೆ ಬರುತಿಹೆನು ॥ ಲಿಂಗಾರ್ಚನೆ ಲಿಂಗಾರ್ಪಣವಿಲ್ಲದೆ ಕೊಂಡರೆಕಿಲ್ಬಿಷ ನಾಯಕ ನರಕವು । ಲಿಂಗದ ಶ್ರುತಿ ಇಂತೆಂದುದಾಗಿ ಇವ ಕೇಳದಿರಲು ಬಹು ಪಾಪಾತ್ಮನು ॥೫॥

ಹುತ್ತದೊಳಯಿಕೆ ಸರ್ಪ ಹೊಗಲು ಮನೆಗಟ್ಟಿದೊರಲೆ ಬಿಟ್ಟೋಡುವತೆರದಿಂ । ಸತ್ಯರ ಸಾರ ಯತಿ ಅನುಭಾವದುಪದೇಶಂಬರಲು ॥ ಸುತ್ತಿದ ಪ್ರಪಂಚು ಭವಕರ್ಮಂಗಳು ಬಿಟ್ಟೋಡುವ ಶರಣರಾಜ್ಞೆಗೆ । ಭಕ್ತಿಯ ಸಂಗ ವಿಷದ ಸಂಗವರಿದನು ಬಸವಣ್ಣಾ ॥೬॥

ಭಾಷೆಯ ಸತ್ಯರ ಅನುಭಾವಂಗಳ ನಿಂಬುಗೊಂಡ ಮುಕಂತರ ಪಾದವ ನಂಬಿದ ತೇನರಿಯದೆ ಉದ್ಧರಿಸುವ ಲಿಂಗವ ತೋರುವರು ॥ ಇ ತೆಂದುದು ಕೂಡಲಚನ್ನಸಂಗನಲ್ಲಿ ತಂದೆ ಬಸವಣ್ಣ ತೋರಿದ ಪಥವಿದು ನಂಬಿದ ಭಕ್ತರಿಗಹುದಲ್ಲದೆ ಅಭ್ಯಾಸಿಗಳಿಗಳವಡದು ॥೭॥

---

## ೪೦. ಭಾವಾಗಮಸ್ಥಲ.

**ಸೂತ್ರ:—** ಇಂತು ಕ್ರಿಯಾಗಮ ಸ್ವರೂಪವನ್ನೈದಿದ ಲಿಂಗವು ವೀರಮಾಹೇಶ್ವರನ ಅಂಗದೊಳಗೆ ನಿಷ್ಠಾಸ್ವರೂಪವನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಭಾವಾಗಮಸ್ಥಲವಾದುದು.

ಪದ ರಾಗ ವರಾಳಿ

ಲಿಂಗವ ನೋಡಿ ಶಿವಸುಖರತಿಯೊಳಗೋಲಾಡಿ ಯಾಡಿ । ನೈವರಿವುತ್ತ ಪೂಜೆಯ ಮಾಡುತಿರ್ಪೆನಯ್ಯಾ ॥ಪ॥

ಹೊರಗೆ ಮಾಡುತಿರ್ಪ ಸತ್ಕ್ರಿಯು ಮಂಗಳಮಯವಾಗಿ ಒಳಗೆ ಕಣ್ದೆರೆದು । ಪರಮಾನಂದ ರಸದೊಳಗೆ ಓಕುಳಿಯನಾಡುತಿರ್ಪೆನಯ್ಯ ॥೧॥

ಮನದ ನೆನಹು ಭಾವದೊಳಗೆ ಅನುಪಮವಾಗಿರಲಳವಟ್ಟು ಘನ ಸುಖ । ಕರತಳಾಮಳಕವಾಗಿ ನಿಮ್ಮೊಳೆರಡರಿಯದೆ ನೋಡುತಿಪ್ಪೆನಯ್ಯಾ ॥೨॥

ನಿಮ್ಮ ನೋಟವೆನಗುಪಮಿಸಬಾರದ ಕೂಟ ನಿಮ್ಮ ನೋಟದ ತತಿ । ಯೊಳಗೆ ಆನೇನೆಂದರಿಯದೆ ನಿಜ ಸುಖಿಯಾಗಿರುತಿರ್ಪೆನಯ್ಯಾ ॥೩॥

ರೋಮಾಂಚನ ಗುಡಿಗಟ್ಟಿಯಾಮಿಷ ವಿಷಯಂಗಳ ಮರೆದು ಕಾಮಿಸಿ । ಬಂದ ಪದಾರ್ಥವ ನಿಮ್ಮ ನಾಮಾಮೃತ ರಸದೊಳಗಿತರವನರಿಯೆನಯ್ಯ ॥೪॥

ಕಂಗಳ ನೋಟವೆ ಕರುವಾಗಿ ಮನದ । ಕೂಟವು ಜ್ಞಾನದಲ್ಲಿ ಹಿಂಗದೆ ನಿಮ್ಮ ಸಂಗ ಸಮ ! ನಿಸಿ ಕೂಡಲಸಂಗಯ್ಯನ ಲಿಂಗಯ್ಯಾ ಎಂದುಯೆನುತಿರ್ಪೆನಯ್ಯಾ ॥೫॥

---

## ೪೧. ಜ್ಞಾನಾಗಮಸ್ಥಲ.

**ಸೂತ್ರ:–** ಇಂತು ನಿಷ್ಠೆ ನಿಬ್ಬೆರಗೆನಿಸಿದ ವೀರಮಾಹೇಶ್ವರನ ಭಾವ ಸದ್ಭಾವ ಸನ್ನಿಹಿತವಾದ ಲಿಂಗದ ಮಹಾಜ್ಞಾನ ಚಾರಿತ್ರವೆಂತಿರ್ದುದೆಂದಡೆ ಮುಂದೆ ಜ್ಞಾನಾಗಮಸ್ಥಲವಾದುದು.

**ಘನ ರಾಗ ಗೌಳ**

ಘನದ ಘನತೆ ಇನ್ನಾರಿಗೆ ವೇದ್ಯವಾಗದು। ಬ್ರಹ್ಮವ ಹೇಳುವಡೆ ನಿರ್ಮಾಲ್ಯವಾದುದು ॥ಪ॥

ಚತುರ್ಮುಖ ನಾಲ್ಕುವೇದ ಲಿಂಗ ತಮ್ಮ ಮಾತ್ರಲಿಲ್ಲೆಂದರಿಯರು। ತಮ್ಮದೊಂದುದ್ರೇಕದಿಂದ ತಮ್ಮ ತಾವು ಲಯವಾದರೂ ॥೧॥

ಅರಿದೆನೆಂಬವನರಿವೆಯ ಹೊದ್ದನು ಕುರುಹಿನ ಸಂಸಾರಿಯಾಗಿ। ಪಂಚೇಂದ್ರಿಯಂಗಳ ಸಂಚನೆಸಗಿಪರೆ ಕಾಲಕರ್ಮಕ್ಕೊಳಗಪ್ಪವರೂ ॥೨॥

ಅಂಡಜ ಉದ್ಭಿಜ ತಾರಾಮಂಡಲದೊಳಗೊಂದು ನಾದವ ಕಂಡೆನು। ಅಖಂಡಿತ ನಿರ್ಣಯವನರಿಯದ ಮರುಳು ಮಾನವರೆತ್ತಬಲ್ಲರೂ ॥೩॥

ಉದಯಾಸ್ತಮಾನದ ನಡುವೆ ಒಂದು ತ್ರಿಜಗವೆಂಬ ಹುಳವು ಹುಟ್ಟಿತಲ್ಲ। ಅದ ಕಡಿದು ಸುಡುವದೊಂದು ಕಾರಣದ ಜಡಜೀವಿಗಳೆತ್ತಬಲ್ಲರು ॥೪॥

ಸರ್ವ ಜೀವದಯಾಪರನೊಬ್ಬ ಗಣೇಶ್ವರನು। ಸರ್ವಜನ ಪ್ರಳಯಕರನವನೊಬ್ಬನು। ಇವರಿಬ್ಬರ ತಪ್ಪಿಸಿ ಪೂಜಿಸಬಲ್ಲಡೆ ಪೂಜೆಯ ಕೈಕೊಂಬ ಗುಹೇಶ್ವರಾ ॥೫॥

---

## ೪೨. ಸಕಾಯಸ್ಥಲ.

**ಸೂತ್ರ:–** ಇಂತು ಕ್ರಿಯಾಗಮ ಭಾವಾಗಮ ಜ್ಞಾನಾಗಮವೆಂಬೀ ತ್ರಿವಿಧಸ್ಥಲವೇಕವಾದ ಲಿಂಗವು ವೀರಮಾಹೇಶ್ವರನ ಸರ್ವಾಂಗ ಮಥನದಿಂ ಲಿಂಗಕಾಯ ಸಂಬಂಧ ಸ್ವರೂಪವನೈದಿದ ಭೇದವೆಂತಿರ್ದುದೆಂದಡೆ ಮುಂದೆ ಸಕಾಯ ಸ್ಥಲವಾದುದು.

೩೭೨. ಅವಸ್ಥೆಗಳೆಂಬ ನಾಲ್ಕನು ದರ್ಶನವ ಮಾಡಿದಾತ ಶಿವಮುಕ್ತನು. ಈ ಶಿವಮುಕ್ತನಿಗೆ ಪಂಚ ಮಲಂಗಳು ಪಂಚ ಶಕ್ತಿಗಳು ಬಿಟ್ಟ ಪ್ರಕಾರ ದರ್ಶನವದೆಂತೆಂದಡೆ, ಮುಂದೆ ತಿಂದ ಮಾಯಾ ಭೋಗದ ಇಚ್ಛೆ ಇಲ್ಲದಿದ್ದುದೇ ತಿರೋಧಾಯು ಮಲ ನಷ್ಟ. ಕರ್ಮಾದಿಗಳೈದು ಸುಖ ದುಃಖಂಗಳು ಸಮಾನವಾಗಿ, ಪಂಚಕೃತ್ಯಂಗಳು ಕೆಟ್ಟುದಾಗಿ ಮಹಾ ಮಾಯೆ ನಷ್ಟ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೭೩. ಅದನವಳು ಅದು ನಾನೆಂಬ ಜ್ಯೋತಿ ಅಡಗಿತ್ತಾಗಿ, ಕರ್ಮ ನಷ್ಟ ರೂಪು ಕೆಟ್ಟುದಾಗಿ, ಮಾಯೆ ನಷ್ಟವು. ಅರಿವು ತಲೆದೋರಿತ್ತಾಗಿ ಆಣವಮಲ ನಷ್ಟವು. ಶಿವಪ್ರಕಾಶವ ದ ಕಾಣ ತಿರೋಧಾನ ಶಕ್ತಿ ನಷ್ಟ. ಫಲಪದವಿಗಳ ಬಯಕೆ ಇಲ್ಲದ ಕಾರಣ ಇಚ್ಛಾಶಕ್ತಿ ನಷ್ಟ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೭೪. ಅದಿಂಥಾದಂಥಾದೆಂದು ನೋಡುವ ರೂಪು ನಿರೂಪವ ಬಿಟ್ಟು, ಆತ್ಮತ್ರವಾಗಿ ಸ್ವಾನುಭಾವ ಬಲಿಯಲಿಕ್ಕಾಗಿ, ಜ್ಞಾನಶಕ್ತಿ ನಷ್ಟವು. ಕೂಟ ಕೆಡಲಿಕ್ಕಾಗಿ ಕ್ರಿಯಾಶಕ್ತಿ ನಷ್ಟವು. ನಿರ್ವಿಕಾರವು ಕೆಟ್ಟು ಅನುಭವಿಸಲಿಕ್ಕಾಗಿ ಪರಾಶಕ್ತಿ ನಷ್ಟವು. ಹೀಗೆ ದರ್ಶನವ ಮಾಡುವುದು, ನಿತ್ಯ ನಿರಂಜನ ನಿರಾಮಯ ನಿರಾಳ ಶರಣಗಲ್ಲದೆ ಮಿಕ್ಕನ ವೇಷಧಾಂಗಳೆತ್ತ ಬಲ್ಲರು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೭೫. ಇನ್ನು ಜ್ಞಾನವಸ್ಥೆಯು ದರ್ಶನವೆಂತೆಂದಡೆ, ತನ್ನ ತಾನರಿದು ಪರಮ ಜ್ಞಾನವ ತಿಳಿದುದೇ ಜ್ಞಾನ ಜಾಗ್ರ. ಆ ಪರಮ ಜ್ಞಾನ ನಿವಾಸಿಯಾಗಿಹುದೇ ಜ್ಞಾನಸ್ವಪ್ನ. ಆ ಪರಮ ಜ್ಞಾನನಿವಾಸದಲ್ಲಿ ನಿಂದು ಲೀಯ್ಯವಾಗಿಹುದೇ, ಜ್ಞಾನ ಸುಷುಪ್ತಿ. ಆ ಜ್ಞಾನ ಸುಷುಪ್ತಿಯಲ್ಲಿ ತಲೆದೋರಿದ ಸುಜ್ಞಾನವೆ, ಜ್ಞಾನ ತೂರ್ಯ. ಆ ಸುಜ್ಞಾನವನೊಳಕೊಂಡ ನಿಃಶಬ್ದವೇ ಜ್ಞಾನವ್ಯೋಮ. ಆ ಜ್ಞಾನ ವ್ಯೋಮವನೊಳಕೊಂಡ ಮಹಾ ಜ್ಞಾನವೇ ಜ್ಞಾನ ವ್ಯೋಮಾತೀತವೆಂದು ಶ್ರುತಿಗಳು ಸಾರುತ್ತಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೭೬ ಇನ್ನು ಶಿವಾವಸ್ಥೆ ದರ್ಶನವೆಂತೆಂದಡೆ, ಆತ್ಮನು ತನ್ನ ತಾನರಿದು, ಶಿವನ ನರಿವಾಗ, ಶಿವಜಾಗ್ರವೆನಿಸಿತ್ತು. ಆತ್ಮನು ಶಿವನನರಿದು, ಬೆರಸುವ ತವಕವೆ ಶಿವಸ್ವಪ್ನವೆನಿಸಿತ್ತು. ಆತ್ಮನು ಶಿವನ ಬೆರಸಿ ನಿಂದುದೇ

ಶಿವಸುಷುಪ್ತಿ, ಆತ್ಮನು ತಾನಳಿದು ತಾನುಳಿದು, ನಿಂದುದೇ ಶಿವತೂರ್ಯ. ಆತ್ಮನು ತಾನಳಿದು ಶಿವನುಳಿದು, ನಿಂದುದೇ ಶಿವವ್ಯೋಮ. ಶಿವನೆಂಬ ನಾಮ ನಿರ್ಮೃಷ್ಟವಾಗಿಹುದೆ. ಶಿವವ್ಯೋಮಾತೀತವೆಂದು, ಶ್ರುತಿಗಳು ಸಾರು ತ್ತಿವೆ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೭೭. ಇನ್ನು ನಿರಾಳಾವಸ್ಥೆಯ ದರಶನವೆಂತೆಂದಡೆ, ನಿರಾಳಮಯ ವನರಿದು, ಆ ನಿರಾಳಮಯದೊಳು ಪೂರ್ವಭೋಗವಾಗಿ ನಿಂದುದೆ ನಿರಾಳ ಜಾಗ್ರ. ಮುಂದೆ ಹೇಳಿದ ಪೂರ್ಣ ಭೋಗದ ನಿರ್ವಿಕಾರ ಹುಟ್ಟುವ ಬಗೆ ಗೂ ಮೊದಲಾವುದುದೇ ನಿರಾಳ ಸ್ವಪ್ನ. ಮುಂದೆ ಹೇಳಿದ ನಿರಾಳ ಭೋಗ ದಲ್ಲಿ ಸಂತೋಷವಳಿದು ನಿಷ್ಪತ್ತಿಯಾಗಿ ನಿಂದುದೇ, ನಿರಾಳ ಸುಷುಪ್ತಿ. ಮುಂದೆ ಹೇಳಿದ ನಿರಾಳ ಭೋಗವ ಬಿಟ್ಟು ಮೇಲಾದ ನಿರಾಳಾನಂದಕ್ಕೆ ಮೊದಲು ನಿರಾಳ ತೂರ್ಯ, ಮುಂದೆ ಹೇಳಿದ ನಿರಾಳಾನಂದ ಸುಟ್ಟು ತಾವು ನಿರಾಳ ವ್ಯೋಮ ನಿರಾಳ ವ್ಯೋಮವ ಮೆಟ್ಟಿ ಮೇಲಾದುದೇ ನಿರಾಳ ವ್ಯೋಮಾ ತೀತವೆಂದು ಅಸಿಸದಾತೀತಾಗಮದಲ್ಲಿ ಹೇಳುತ್ತಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೭೮. ಇನ್ನು ನಿರಂಜನಾವಸ್ಥೆಯ ದರ್ಶನವದೆಂತೆಂದಡೆ ನಿರಂಜನ ವೆಂಬ ನಿತ್ಯಾನಂದ ಪೂರ್ಣ ನಿವಾಸವನರಿದು, ಅನಿತ್ಯಾನಂದ ಪೂರ್ಣ ನಿವಾಸದೊಳು ನಿಂದುದೆ, ನಿರಂಜನಜಾಗ್ರ ಆ ನಿತ್ಯಾನಂದ ಪೂರ್ಣ ನಿವಾ ಸದೊಳು ವಿಕಾರ ನಿರ್ವಿಕಾರವಿಲ್ಲದಿಹುದೇ, ನಿರಂಜನ ಸ್ವಪ್ನ, ಅನಿತ್ಯಾ ನಂದ ಪೂರ್ಣ ನಿವಾಸದೊಳು ಸಂತೋಷವಳಿದು, ನಿಷ್ಪತ್ತಿಯಾಗಿ ನಿಂದುದೆ ನಿರಂಜನ ಸುಷುಪ್ತಿ ಅನಿತ್ಯಾನಂದ ಪೂರ್ಣ ನಿವಾಸವ ಬಿಟ್ಟು ಮೇಲಾದ ನಿತ್ಯಾನಂದಾತೀತಕ್ಕೆ ಮೊದಲು, ನಿರಂಜನ ತೂರ್ಯ, ಆ ನಿತ್ಯಾನಂದಾ ತೀತವನು ಸುಟ್ಟು ತಾವು ನಿರಂಜನ ವ್ಯೋಮ. ಆ ನಿರಂಜನ ವ್ಯೋಮವ ಮೆಟ್ಟಿ ಮೇಲಾದುದೇ ನಿರಂಜನ ವ್ಯೋಮಾತೀತವೆಂದು ಚಕ್ರಾತೀತಾಗಮ ದಲ್ಲಿ ಪ್ರಸಿದ್ಧವಾಗಿ ಹೇಳುತ್ತಿಹುದು ನೋಡಾ ಅಪ್ರಮಾಣ ಕೂಡಲಸಂಗ ಮದೇವಾ.

೩೭೯. ಅವಸ್ಥೆಗಳ ದರ್ಶನದ ವಚನಸಮಾಪ್ತ. ಶ್ರೀ ಇನ್ನು ಷಡಚ ದುತ್ಪತ್ಯವೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣ ವದ ಜ್ಯೋತಿಸ್ವರೂಪದಲ್ಲಿ ಹೃದಯ ಮಂತ್ರ ಉತ್ಪತ್ಯ. ಆ ಪ್ರಣವದ ದರ್ಪ

ಣಾಕಾರದಲ್ಲಿ ಶಿರೋಮಂತ್ರ ಉತ್ಪತ್ತ್ಯ ಆ ಪ್ರಣವದ ಅರ್ಧಚಂದ್ರಕದಲ್ಲಿ ಶಿಖಾಮಂತ್ರ ಉತ್ಪತ್ತ್ಯ ಆ ಪ್ರಣವದ ಕುಂಡಲಾಕಾರದಲ್ಲಿ ಕವಚಮಂತ್ರ ಉತ್ಪತ್ತ್ಯ. ಆ ಪ್ರಣವದ ದಂಡಸ್ವರೂಪದಲ್ಲಿ ನೇತ್ರ ಮಂತ್ರ ಉತ್ಪತ್ತ್ಯ. ಆ ಪ್ರಣವದ ತಾರಕಾಸ್ವರೂಪದಲ್ಲಿ ಅಸ್ತ್ರಮಂತ್ರ ಉತ್ಪತ್ತ್ಯ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೮೦. ಮತ್ತಂ ॥ ಆ ಪ್ರಣವದ ದರ್ಪಣಾಕಾರದಲ್ಲಿ ಈಶಾನ್ಯಮುಖ ಉತ್ಪತ್ತ್ಯ. ಆ ಪ್ರಣವದ ಅರ್ಧಚಂದ್ರಕದಲ್ಲಿ ತತ್ಪುರುಷ ಮುಖ ಉತ್ಪತ್ತ್ಯ. ಆ ಪ್ರಣವದ ಕುಂಡಲಾಕಾರದಲ್ಲಿ ಅಘೋರ ಮುಖ ಉತ್ಪತ್ತ್ಯ. ಆ ಪ್ರಣವದ ದಂಡಸ್ವರೂಪದಲ್ಲಿ ವಾಮದೇವ ವಕ್ತ್ರ ಉತ್ಪತ್ತ್ಯ. ಆ ಪ್ರಣವದ ತಾರಕಾಸ್ವರೂಪದಲ್ಲಿ ಸದ್ಯೋಜಾತ ವಕ್ತ್ರ ಉತ್ಪತ್ತ್ಯ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೮೧. ಈಶಾನ್ಯ ವಕ್ತ್ರದಲ್ಲಿ ಈಶಾನ್ಯಮಂತ್ರ ಉತ್ಪತ್ತ್ಯ, ತತ್ಪುರುಷ ವಕ್ತ್ರದಲ್ಲಿ ತತ್ಪುರುಷ ಮಂತ್ರ ಉತ್ಪತ್ತ್ಯ, ಅಘೋರ ವಕ್ತ್ರದಲ್ಲಿ ಅಘೋರ ಮಂತ್ರ ಉತ್ಪತ್ತ್ಯ, ವಾಮದೇವ ವಕ್ತ್ರದಲ್ಲಿ ವಾಮದೇವ ಮಂತ್ರ ಉತ್ಪತ್ತ್ಯ. ಈ ಹನ್ನೊಂದು ಮಂತ್ರವು ಸಪ್ತ ಕೋಟಿ ಮಹಾ ಮಂತ್ರಂಗಳನು ಸಾರಿ ವಂಥದು ಇವು ಮಂತ್ರ ನೋಡಾ ಅಪ್ರಮಾಣ ಕೂಡಲಸಂಗಮದೇವ.

೩೮೨. ಇನ್ನು ತೊಂಬತ್ತು ನಾಲ್ಕು ವ್ಯೋಮ ವ್ಯಾಪ್ತಿ ಪದಂಗಳು ತ್ಪತ್ತ್ಯವದೆಂತೆಂದಡೆ ಅನೇಕ ಕೋಟಿ ಸೂರ್ಯ ಚಂದ್ರಾಗ್ನಿಮಯವಾಗಿಹ ಮಹಾ ಜ್ಯೋತಿರ್ಮಯ ಲಿಂಗದಲ್ಲಿ ತೊಂಭತ್ತುನಾಲ್ಕು ವ್ಯೋಮ ವ್ಯಾಪ್ತಿ ಪದಂಗಳುತ್ಪತ್ತ್ಯ. ಆ ತೊಂಭತ್ತು ನಾಲ್ಕು ವ್ಯೋಮ ವ್ಯಾಪ್ತಿ ಪದಂಗಳ ವಿವರವದೆಂತೆಂದಡೆ, "ವ್ಯೋಮ ವ್ಯಾಪಿನೆ ವ್ಯೋಮರೂಪಾಯ, ಸರ್ವವ್ಯಾಪಿನೆ ಶಿವಾಯ ಈಶಾನ ಮೂರ್ಧಾಯ ತತ್ಪುರುಷ ವಕ್ತ್ರಾಯ ಅಘೋರ ಹೃದಯಾಯ ವಾಮದೇವ ಗುಹ್ಯಾಯ ಸದ್ಯೋಜಾತ ಮೂರ್ತಯೆ. ನಮೋ ನಮಃ ಗುಹ್ಯಾತೀತ ಗುಹ್ಯಾಯ ಗೋಪ್ತ್ರ ಅಭಿಧಾನಾಯ, ಸರ್ವ ಯೋಗಾದಿ ವ್ರತಾಯ, ಜ್ಯೋತಿರೂಪಾಯ, ಪರಮೇಶ್ವರ ಪರಾಯ, ಚೇತನ ಅಚೇತನ ಅಪುನ್ವಾಪಿನ್ ಅರೂಪೇನ ರೂಪಿನ್, ಪ್ರಥಮ ಪ್ರಥಮ ತೇಜಸ್ತೇಜ ಜ್ಯೋತಿಜ್ಯೋತಿ ಅನುರೂಪ ಅನಿಲಿನ ಅಧೂಮ, ಅಭಸ್ಮ, ಅನಾದಿಧನಾದೆ ನಾ ನಾ ನಾ ಧೂ ಧೂ ಧೂ ಓಂ ಭೂಃ ಓಂ ಓಂ ಭುವಃ

ಭವ: ಓಂ ಸ್ವಾಹಾ, ಅನಿಧಂ ನ ನಿಧನಂ ನಿಧನೋದ್ಭವ, ಶಿವ, ಸರ್ವ, ಪರಮಾತ್ಮನ್ ಮಹೇಶ್ವರ ಮಹಾತೇಜ ಯೋಗಾಧಿಪತೆ, ಮುಂಚ ಮುಂಚ ಪ್ರಥಮ, ಪ್ರಥಮ, ಶರ್ವ ಶರ್ವ, ಭವ ಭವ, ಭೂದ್ಭವ ಸರ್ವ ಭೂತ ಸುಖಪ್ರದ, ಸರ್ವ ಸಾಂ ನಿತ್ಯಕರ, ಬ್ರಹ್ಮ ವಿಷ್ಣು, ರುದ್ರಪರ ಅರ್ಚಿತಾ ರ್ಚಿತ, ಅಸ್ತುತಸ್ತುತ, ಪೂರ್ವ ಸ್ಥಿತ, ಪೂರ್ವಸ್ಥಿತ, ಸಾಕ್ಷಿ, ತರು ತರು, ಪತಂಗ ಪತಂಗ, ಪಿಂಗ, ಪಿಂಗ, ಜ್ಞಾನ, ಜ್ಞಾನ, ಶಬ್ದ ಶಬ್ದ, ಸೂಕ್ಷ್ಮ ಸೂಕ್ಷ್ಮ, ಶಿವ, ಶರ್ವ, ಶರ್ವ, ಓಂನಮಃ ಶಿವಾಯ, ಓಂನಮಃ ಶಿವಾಯ ನಮೋ ನಮಃ ಓಂ ಅಂತು ತೊಂಭತ್ತು ನಾಲ್ಕು ವ್ಯೋಮ ವ್ಯಾಪ್ತಿಪದಂಗಳು ಇವು ಪದಾಧ್ವ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೭೩. ಇನ್ನು ಐವತ್ತೆರಡು ವರ್ಣ ಉತ್ಪತ್ಯವೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ, ಗೋಳಕಾಕಾರ ಪ್ರಣವದ ತಾರಕಾಕೃತಿಯಲ್ಲಿಹ ನಕಾರದಲ್ಲಿ ನಕಾರ ಉತ್ಪತ್ಯ, ಆ ಪ್ರಣವದ ದಂಡಕಾಕೃತಿಯಲ್ಲಿ ಮಕಾರ ದಲ್ಲಿ ಮಕಾರ ಉತ್ಪತ್ಯ, ಆ ಪ್ರಣವದ ಕುಂಡಲಾಕೃತಿಯಲ್ಲಿ ಶಿಕಾರದಲ್ಲಿ ಶಿಕಾರ ಉತ್ಪತ್ಯ, ಆ ಪ್ರಣವದ ಅರ್ಧಚಂದ್ರಕಾಕೃತಿಯಲ್ಲಿಹ ವಕಾರದಲ್ಲಿ ವಕಾರ ಉತ್ಪತ್ಯ, ಆ ಪ್ರಣವದ ದರ್ಪಣಾಕೃತಿಯ ಯಕಾರದಲ್ಲಿ ಯಕಾರ ಉತ್ಪತ್ಯ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೭೭. ||ರಹಸ್ಯ|| ನಕಾರೆ ನಕಾರ ಮುತ್ಪನ್ನಂ ಮಕಾರೆ ಮಕಾರ ಮುದ್ಭವಂ ಶಿಕಾರೆ ಶಿಕಾರ ಮುತ್ಪನ್ನಂ, ವಕಾರೆ ವಕಾರ ಮುದ್ಭವಂ, ಯಕಾರೆ ಯಕಾರ ಮುತ್ಪನ್ನಂ ಗುಹ್ಯಾದ್ಗುಹ್ಯಂ ಕಮಲಾನನೆ ಎಂದುದಾಗಿ, ಅಪ್ರಮಾಣ ಕೂಡಲಸಂಗಮದೇವಾ.

೩೭೫. ಆ ಪ್ರಣವದ ಜ್ಯೋತಿಸ್ತಂಭಾಕೃತಿಯಲ್ಲಿಹ ಜೀವಾತ್ಮ ಪರ ಮಾತ್ಮನಲ್ಲಿ ಹಂ, ಕ್ಷಂ, ಹಂ, ಳಂ ಎಂಬ ಚತುರಾಕ್ಷರಂಗಳುತ್ಪತ್ಯ, ಆಯ ಕಾರದಲ್ಲಿ ಉತ್ಪತ್ಯವಾದ ಯಕಾರ ಬೀಜದಲ್ಲಿ, ಅ ಆ. ಇ ಈ. ಉ ಊ. ಋ ೠ. ಌ ೡ ಎ ಐ. ಒ ಔ. ಅಂ ಅಃ. ಎಂಬ ಷೋಡಶಾಕ್ಷರ ಉ ತ್ಪತ್ಯ, ಆ ವಕಾರದಲ್ಲಿ ಉತ್ಪತ್ಯವಾದ, ವಕಾರ ಬೀಜದಲ್ಲಿ ಕ ಖ ಗ ಘ ಙ. ಚ ಛ ಜ ಝ ಞ. ಟ ಠ ಯೆಂಬ ದ್ವಾದಶಾಕ್ಷರ ಉತ್ಪತ್ಯ, ಆ ಶಿಕಾರ ಬೀಜದಲ್ಲಿ ಉತ್ಪತ್ಯವಾದ ಆ ಶಿಕಾರ ಬೀಜದಲ್ಲಿ ಡ ಢ ಣ, ತ ಥ ದ ಧ ನ ಪ ಫ ಯೆಂಬ ದಶಾಕ್ಷರ ಉತ್ಪತ್ಯ, ಆ ಮಕಾರದಲ್ಲಿ ಉತ್ಪತ್ಯವಾದ, ಆ

ಮಕಾರ ಬೀಜದಲ್ಲಿ ಬ ಭ ಮ ಯ ರ ಲ ಯೆಂಬ ಷಡಕ್ಷರ ಉತ್ಪತ್ಯ. ಆ ನಕಾರದಲ್ಲಿ ಉತ್ಪತ್ಯವಾದ ಆ ನಕಾರ ಬೀಜದಲ್ಲಿ ವ ಶ ಷ ಸ ಯೆಂಬ ನಾಲ್ಕು ಅಕ್ಷರ ವುತ್ಪತ್ಯ. ಐವತ್ತೆರಡು ಅಕ್ಷರಂವು ವರ್ಣಾರ್ಥ್ವ ನೋಡಾ! ಅಪ್ರಮಾಣ ಕೂಡಲಸಂಗಮದೇವಾ.

೩೮೬. ನಿರಾಮಯಾ ತೀತಾಗಮೆ ॥ ಸಾಕ್ಷಿ ॥ ಹಂ ಕ್ಷಂ ದ್ವಿವರ್ಣಕಂ ಚೈವ, ಪರಮಾತ್ಮಚ ಜಾಯತೆ ಹಂ ಳಂ ದ್ವಿವರ್ಣ ಕಂ ಚೇತಿ, ಜೀವಾತ್ಮೆ ಜಾಯತೆ, ಅ ಆ ಇ ಈ ಉ ಊ ವರ್ಣಂ ಚ ಋ ೠ ಌ ೡ ವರ್ಣಕಂ ಏ ಐ ಓ ಔ ಅಂ ಅಃ ವರ್ಣ, ಏತೆಚ ಜಾಯತೆ. ಕ ಖ ಗ ಘ ಙ ವರ್ಣಂ ಚ ಛ ಜ ಝ ಞ ವರ್ಣ ಕಂ ಟ ಠ ದ್ವಿವರ್ಣಕಂ ಚೈವ ವಕಾರೆ ಚ ಸ ಜಾಯತೆ, ಡ ಢ ಣ ತ ಥ ವರ್ಣಂಚ ದ ಧ ನ ಪ ಫ ವರ್ಣಕಂ ಏತೈತೆ ದಶ ವರ್ಣಾನಿ, ಶಿಕಾರೆ ಚ ಜಾಯತೆ, ಬ ಭ ಮ ಯ ರ ಲ ವರ್ಣಂಚ ಲಯೆಕೊ ವರ್ಣಕಂ ತಥಾ, ಇತಿ ಷಷ್ಠ ವರ್ಣಂಚೈವ ಮಂಕಾ ಜಹ ಜಾಯತೆ, ವಶಷಸಚತುರ್ವರ್ಣ ನಕಾರೆ ಜ ಜಾಯತೆ, ಇತಿ ವರ್ಣಸಮುತ್ಪನ್ನಂ ವರ್ಣಾದ್ವಂ ಚ ಪ್ರಕೀರ್ತಿತಾಃ ಎಂದುದಾಗಿ ಅಪ್ರಮಾಣ ಕೂಡಲಸಂಗಮದೇವಾ.

೩೮೭. ಇನ್ನು ತನ್ನೂರು ಇಪ್ಪತ್ತು ನಾಲ್ಕು ಭುವನ ಉತ್ಪತ್ಯವದೆಂತೆಂದಡೆ, ಅಖಂಡ ಜ್ಯೋತಿರ್ಮಯವಾಗಿಹ ಗೋಳಕಾಕಾರ ಪ್ರಣವದ ಜ್ಯೋತಿ ಸ್ವರೂಪದಲ್ಲಿಹ ಜೀವಾತ್ಮ ಪರಮಾತ್ಮನಲ್ಲಿ ಜೀವ ಹಂಸ ಪರಮಹಂಸನುತ್ಪತ್ಯವು. ಆ ಜೀವಹಂಸ ಪರಮಹಂಸನ ದೆಸೆಯಿಂದ ಇನ್ನೂರು ಇಪ್ಪತ್ತು ನಾಲ್ಕು ಭುವನವಾದವು. ಆ ಇನ್ನೂರು ಇಪ್ಪತ್ತುನಾಲ್ಕು ಭುವನಂಗಳ ವಿವರವೆಂತೆಂದಡೆ, ಅನಾಶ್ರಿತ, ಅನಾದಿ, ಅನಂತ, ವ್ಯೋಮರೂಪ ವ್ಯಾಪಿನಿ, ಊರ್ಧ್ವಗಾಮಿನಿ, ರೋಚಿಕ, ದೀಪಿಕ, ಶಾಂತ್ಯತೀತ, ವಿದ್ಯಾ ಪ್ರತಿಷ್ಠೆ, ನಿವೃತ್ತಿ, ಸದಾಶಿವ, ಅಚಿಂತ್ಯ, ಸೂಕ್ಷ್ಮ, ವಾಮದೇವ, ಸತ್ಯಾನಂದ ಏಕರುದ್ರ, ಸಿಜಾನಂದ, ತ್ರಿಮೂರ್ತಿ, ಶ್ರೀಕಂಠ, ಶಿಖಂಡಿ, ವಾಮ ಜ್ಯೇಷ್ಠ, ರೌದ್ರಕಂ, ವಿಕರಣಿ, ಬಲವಿಕರಣಿ, ಸರ್ವ ಭೂತದಮನಿ, ಬಲಪ್ರಮಥನಿ, ಮನೋನ್ಮನಿ, ಅಂಗುಷ್ಠ ಮಾತ್ರ ಭುವನಿ, ಮಹಾ ಭುವನ, ವಿಕಾಸನ, ಏಕಪಿಂಗೇಕ್ಷಣ, ಉದ್ಭವ, ಭವ, ವಾಮದೇವ, ಶಿಖದ, ಏಕವೀರ, ಪಂಚಾಂತಕ, ಸೂರ, ಸಂವರ್ತನ, ಜ್ಯೋತಿ, ಚಂಡ, ಕ್ರೋಧ, ಅನಂತ,

ಏಕ ನೇತ್ರಕ, ಭವ್ಯ, ಮಂಗಳ ಅಜ, ಉಮಾಪತಿ, ಏಕಧೀರ ಪ್ರಚಂಡ, ಈಶಾನ್ಯ ಉಗ್ರ, ಭೀಮ, ಕೌಮಾರಿ, ವೈಷ್ಣವಿ, ಬ್ರಹ್ಮಣ, ಭವ, ಕೃತ, ಅಕೃತ ಯಾಮ್ಯ ಪ್ರಜೇಶ, ಸೌಮ್ಯ ಇಂದ್ರ, ಗಂಧರ್ವ, ಯಕ್ಷ, ರಾಕ್ಷಸ, ಪೈಶಾಚಿಕ, ಸ್ಥಲೇಶ್ವರ, ಸ್ಥೂಲ ಸ್ವರ, ಶಂಖ, ಕರ್ಣ, ಕಾಳಾಂಜನ, ಮಂಡಲೇಶ್ವರ, ಮಾಕೋಟ, ದ್ವಿರದ, ಭಗ, ಚಂದ್ರ, ಸ್ಥಾಣಿ, ಸ್ವರ್ಣಾಕ್ಷ, ಭದ್ರಕರ್ಣ, ಮಹಾಲಯ, ಅವಿಮುಕ್ತ, ರುದ್ರ, ಕೋಟಿ ವಸ್ತ್ರವದ, ಭೀಮೇಶ್ವರ, ಮಹೇಂದ್ರ, ಅಟ್ಟಹಾಸ, ವಿಮಲೇಶ್ವರ, ನಖಿಲ, ನಾಖಿಲ, ಕುರುಕ್ಷೇತ್ರ, ಭೈರವ, ಕೇದಾರ, ಮಹಾಬಲ, ಮಧ್ಯಮೇಶ್ವರ, ಮಹೇಂದ್ರಕೇಶ್ವರ, ಜಲಭೇಶ್ವರ, ಶ್ರೀಶೈಲ, ಹರಿಶ್ಚಂದ್ರ, ಅಕಾಲಿಶ, ಗ್ರಸನ ಮುಂಡಿ, ಚಾರಭೂತಿ, ಆಷಾಢಿ, ಪುರಸ್ಕರ, ನೈಮಿಷ, ಪ್ರಭಾಸ, ಅಮರೇಶ್ವರ, ಭದ್ರಕಾಳ, ವೀರಭದ್ರ, ತ್ರಿಲೋಚನ, ವಿಶ್ವಭವ, ವಿವಾಹ, ತ್ರಿದಶೇಶ್ವರ, ತ್ರಿಯಕ್ಷ, ಗಣಾದ್ರಕ್ಷ, ವಿಭು, ಶಂಭು, ದೌಷ್ಟ್ರಿ, ವಜ್ರಿ, ಪಣಿಕ, ಉದುಂಬರೀಶ, ಗ್ರಸನ, ಮಾರುತಾಶನ, ಕೃತುವರ್ಧನ ಆನಂದ, ವಿಷಧರ, ಬಲಪ್ರಿಯ, ಭೂತಪಾತ್ರ, ಜ್ಯೇಷ್ಠ, ಸರ್ವ ಸುರೇಶಾನ, ವೇದಪಾರಗ, ಜ್ಞಾನ ಭೂತ, ಸರ್ವಜ್ಞ, ಈಶ ಸರ್ವಜ್ಞ, ಈಶ, ಸರ್ವ ವೇದ್ಯಾಧಿಪ, ಪ್ರಕಾಮದ, ಪ್ರಸಿದ್ಧದನ, ಲಕ್ಷ್ಮೀಧರ, ಜಟಾಧರ, ಸೌಮ್ಯದೇಹ, ಧನ್ಯರೂಪ, ನಿಧಿಶ, ಮೇಘ ವಾಹನ ಕಪರ್ದಿ, ಪಂಚ ಶಿಖಿ, ಪ್ರಪಂಚಾಂತಕ, ಕ್ಷಯಾಂತಕ, ತೀಕ್ಷ್ಣ, ಸುಸೂಕ್ಷ್ಮ, ವಾಯುವೇಗ ಲಘು, ಶೀಘ್ರ, ಸುನಾದ, ಮೇಘನಾದ, ಜ್ವಲಾಂತಕ, ದೀರ್ಘಬಾಹು, ಭಯಭದ್ರ, ಶ್ವೇತ, ಮಹಾಬಲ, ಪಾಶಹಸ್ತ, ಅತಿಬಲ, ಮಹಾಜಲ, ವಾರುಣಕ, ದೌಷ್ಟ್ರಿ, ವಲೋಹಿತ, ಧೂಮ್ರ, ವಿರೂಪಾಕ್ಷ, ಊರ್ಧ್ವಪಕ್ವ, ಉಭಯ ನಖಿ, ಕ್ಷೌರ ದೃಷ್ಟಿ, ಹಂತ, ಮಾರಣನಿರೂತಿ, ಧರ್ಮ, ಧರ್ಮ ಪರಿಣ, ನಿಯೋಕ್ರಕತ್ರ, ಹರ, ಮೃತ್ಯು, ಯಾಮ್ಯ, ಕ್ಷಯಾಂತಕ, ಭಸ್ಮಾಂತಕ, ಬಭ್ರು, ದಹನ, ಜ್ವಲನ, ಹರಿಹರ, ಬಾದಕ, ಪಿಂಗ, ಹುತಾಶನ, ಜಯರುದ್ರ, ತ್ರಿದಶಾಧಿಪ, ಪಿನಾಕಿ, ಶಾಸ್ತ್ರ, ಅವ್ಯಯ, ವಿಭೂತಿ ಪ್ರಮಥ, ವಜ್ರದೇಹ, ಬುಧ, ಅಜಕಪಾಲ, ಈಶ್ವರ, ರುದ್ರ, ವಿಷ್ಣು, ಬ್ರಹ್ಮ, ಹಾಟಕ, ಕಾಲಾಗ್ನಿ, ರುದ್ರ, ಅಂತು ಇನ್ನೂರ ಇಪ್ಪತ್ತು ನಾಲ್ಕು ಭುವನಾಧ್ವ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

ಹಿತವೇ ಸತ್ಯವು. ಶಿವಾಜಿಮಹಾರಾಜನು ಔರಂಗಜೇಬನ ಸೆರೆಯಿಂದ ಪಾರಾಗುವಾಗ ಅವನನ್ನು ಒಂದು ಬುಟ್ಟಿಯಲ್ಲಿ ಹೊತ್ತುಕೊಂಡು ಸೆರೆಯಿಂದ ಪಾರುಮಾಡುವಾಗ್ಗೆ ಅವನ ಸೇವಕರು ಬುಟ್ಟಿಯಲ್ಲಿ ಹಣ್ಣು ಗಳಿವೆಯೆಂದು ಹೇಳಿದರಂತೆ. ಇಂಥ ಪ್ರಸಂಗಗಳಲ್ಲಿ ಪರಿಣಾಮವನ್ನ ರಿತು ನಡೆಯಬೇಕಾಗುತ್ತದೆ.

ಎಷ್ಟೋ ಮಹಾತ್ಮರಿಗೆ ಸಂದಿಗ್ಧವಿಷಯಗಳಲ್ಲಿ ಸತ್ಯವಾವುದು? ಅಸತ್ಯವಾವುದು? ಎಂಬದನ್ನು ನಿರ್ಧರಿಸುವದೇ ಕಷ್ಟವಾಗುತ್ತದೆ. ಅಂಥ ಪ್ರಸಂಗದಲ್ಲಿ ಅವರ ಅಂತಃಕರಣಕ್ಕೆ ತೋಳಿದದ್ದೇ ಸತ್ಯವೆನ್ನಬೇಕು. ಈ ಬಗ್ಗೆ ಕಾಳಿದಾಸನು ಹೇಳುವದೇನಂದರೆ 'ಸತಾಂ ಹಿ ಸಂದೇಹ ಪದೇಷು ವಸ್ತುಷು ಪ್ರಮಾಣ ಮಂತಃ ಕರಣ ಪ್ರವೃತ್ತಯಃ' ದೇವರು ಇದ್ದಾನೋ ಇಲ್ಲವೋ, ಆತ್ಮವು ಅಮರವಾಗಿರುವದೋ ಇಲ್ಲವೋ ಎಂಬ ಪ್ರಶ್ನೆಯು ವಿಚಾರ ದೃಷ್ಟಿಯಿಂದ ಸಂದಿಗ್ಧವಾಗಿದ್ದು ಮಹಾತ್ಮರ ಅಂತ ರಂಗದಲ್ಲಿ 'ದೇವರಿದ್ದಾನೆ' 'ಆತ್ಮವು ಅಮರವಾಗಿದೆ' ಎಂಬ ನುಡಿಗಳು ಸ್ಫುರಣವಾಗುವದರಿಂದ ಅವು ಸತ್ಯವಾದ ನುಡಿಗಳೇ ಎಂದು ಭಾವಿ ಸಬೇಕು.

ಸತ್ಯವನ್ನಾಡುವವರಿಗೆ ಸ್ವರ್ಗವು ಸಿಗುತ್ತದೆ. ಸುಳ್ಳಾಡುವವರಿಗೆ ನರಕವು ಪ್ರಾಪ್ತಿಸುತ್ತದೆ. ಎಂದು ಕೆಲವರು ಹೇಳುವದುಂಟು. ಆದರೆ ಬಸವಣ್ಣನವರು ಹೇಳುವದೇನಂದರೆ "ಸ್ವರ್ಗಲೋಕ ಮರ್ತ್ಯಲೋಕ ಬೇರಿಲ್ಲ ಕಾಣಿರೋ. ಸತ್ಯವ ನುಡಿವುದೇ ಸ್ವರ್ಗ, ಮಿಥ್ಯವ ನುಡಿವುದೇ ನರಕ ಇದಕ್ಕೆ ನೀವೇ ಪ್ರಮಾಣ ಕೂಡಲಸಂಗಮದೇವಾ." ಕೆಲವರು ಮಡಿ ಹುಡಿ ಪೂಜೆ ಪುನಸ್ಕಾರಗಳೇ ನಿಜವಾಗಿ ಶೀಲಗಳೆಂದು ಅಸ ತ್ಯಾಚರಣೆಯುಳ್ಳವರಾಗಿರುತ್ತಾರೆ. ಆದರೆ ಒಬ್ಬ ಶರಣರು ಅಪ್ಪಣೆಕೊ ಡಿಸುವದೇನಂದರೆ "ಸತ್ಯದಲ್ಲಿ ನಡೆವುದು ಶೀಲ. ಸತ್ಯದಲ್ಲಿ ನುಡಿವುದು ಶೀಲ. ಸಜ್ಜನ ಸದಾಚಾರದಲ್ಲಿ ವರ್ತಿಸಿ ಸತ್ಯವನರಿವುದೇ ಶೀಲ ಕಾಣಿರೋ ಮಹಾಲಿಂಗ ಗುರುಶಿದ್ಧೇಶ್ವರ ಪ್ರಭುವೇ." ಸತ್ಯವೆಂಬುದೇ ಸುಶೀಲ ವೆಂದು ತೋಂಟದಾರ್ಯರು ಅಪ್ಪಣೆಕೊಡಿಸಿದ್ದಾರೆ.

ಸುಳ್ಳಾಡುವ ಜನಗಳಿಗೆ ಲೋಕವು ಮೆಚ್ಚದು. ದೇವರೂ ಮೆಚ್ಚನು. ಮನುಷ್ಯನು ಸುಖವಂತನಾಗಿ ಕೀರ್ತಿಶಾಲಿಯಾಗಿ ಬಾಳಬೇಕಾದರೆ ಸತ್ಯ

ವನ್ನು ನುಡಿಯಬೇಕು. ಸತ್ಯದಲ್ಲಿ ನಡೆಯಬೇಕು ಅದಕ್ಕೆ ತಪ್ಪಿದರೆ ಅವನು ಪತಿತನಾಗುತ್ತಾನೆ. ಅದಕ್ಕಾಗಿ 'ದಿಟವ ನುಡಿವುದು. ನುಡಿದಂತೆ ನಡೆವುದು, ಹುಸಿಯ ನುಡಿವ, ನುಡಿದು ತಪ್ಪುವ, ಪ್ರಪಂಚಿಯನೊಲ್ಲ ಕೂಡಲಸಂಗಮದೇವಾ' ಎಂದು ಬಸವಣ್ಣನವರು ಹೇಳಿರುವರು. ಸತ್ಯವಿಲ್ಲದವರೊಡನೆ ಯಾವ ತರಹದ ವ್ಯವಹಾರವೂ ತಕ್ಕುದಲ್ಲವೆಂದು ಪ್ರಭುದೇವರು ಅಪ್ಪಣೆ ಕೊಡಿಸಿದ್ದಾರೆ. "ಸತ್ಯವಿಲ್ಲದವರೊಡನೆ ಸಹಸ್ರ ಕ್ಕೊಮ್ಮೆ ನುಡಿಯಲಾಗದು. ಸುಡಲವರ ಒಡೆತನವ. ಸತ್ಯಶರಣರಲ್ಲದವರೊಡನೆ ಸರ್ವಥಾ ಬಾಯ್ದೆರೆಯಲಾಗದು ಗುಹೇಶ್ವರಾ"

ಸತ್ಯವನ್ನಾಡುವವರು ಕೀರ್ತಿಶಾಲಿಗಳಾಗುವರೆಂದು ಚನ್ನಬಸವಣ್ಣನವರು ಫಲಶ್ರುತಿಯನ್ನು ಹೇಳಿದ್ದಾರೆ. ಆದುದರಿಂದ ಕೀರ್ತಿಶಾಲಿಗಳಾಗಿ ಜೀವಿಸಬೇಕೆನ್ನುವವರು ಸುಳ್ಳನ್ನು ಕಾಲುಮೆಟ್ಟಿ ತುಳಿದು ಸತ್ಯವನ್ನು ಶಿರದಲ್ಲಿ ಸಿಂಗರಿಸಿಕೊಂಡು ಪ್ರಪಂಚ ಪಾರಮಾರ್ಥಗಳನ್ನು ಗೆಲ್ಲುವದೇ ಉದಾತ್ತ ಜೀವನದ ಗುರಿಯಾಗಿರುತ್ತದೆ.

---

## ರಾ. ಬ. ಸಿ. ಜಿ ಹಳಕಟ್ಟಿ ವಿಜಾಪುರ ಇವರ ೬೪ನೇ ವರ್ಷದ ವರ್ಧಂತ್ಯುತ್ಸವ.

ತಾ॥ ೨-೭-೪೩ ನೆಯ ದಿವಸ ಸಾಯಂಕಾಲ ೬॥ ಘಂಟೆಗೆ ಸರಿಯಾಗಿ ಶ್ರೀ ಸಿದ್ಧೇಶ್ವರ ಶಿಪರ್ಡಹಾಲಿನಲ್ಲಿ ಸರದಾರ ರಾ. ಬ. ಸಿ. ಜೆ. ದೇಶಮುಖ ಆಲಮೇಲ ಇವರ ಅಧ್ಯಕ್ಷತೆಯ ಕೆಳಗೆ ರಾ. ಬ. ಹಳಕಟ್ಟಿಯವರ ೬೪ನೆಯ ವರ್ಷದ ವರ್ಧಂತಿ ಉತ್ಸವವು ಒಳ್ಳೆ ಯಶಸ್ವಿಯಾಗಿ ಸಾಂಗವಾಯಿತು. ಮೊದಲು ಈಶಸ್ತವನ ಸ್ವಾಗತಪದಗಳು ಜ್ಯಾಬಲಿ ಕನ್ನಡ ಶಾಲೆಯ ಬಾಲಿಕೆಯರಿಂದ ಸುಶ್ರಾವ್ಯವಾಗಿ ಹಾಡಲ್ಪಟ್ಟವು. ಮಿ. ಪಿ ವ್ಹಿ. ಪಾಟೀಲ ಗಾಯನಮಾಸ್ತರರು ಶ್ರಮವಹಿಸಿ ಈ ಪದಗಳನ್ನು ಚೆನ್ನಾಗಿ ಕಲಿಸಿದ್ದರು. ಬಳಿಕ ವರ್ಧಂತ್ಯುತ್ಸವ ಮಂಡಳದ ಕಾರ್ಯದರ್ಶಿಗಳಾದ ಶ್ರೀ. ಬ್ಯಾಳಿ

ಯುವರು ಬಂದಂಥ ಜನಗಳನ್ನು ಸ್ವಾಗತಿಸಿ ಸರದಾರ ರಾ. ಬ. ದೇಶ ಮುಖರು ಅಧ್ಯಕ್ಷರಾಗಬೇಕೆಂದು ಸೂಚನೆ ತಂದರು. ಅದಕ್ಕೆ ಶ್ರೀ ಉತ್ತಮ ಚಂದ ಸೇಡಜಿ ಖಾ. ಬಾ. ಬೀದರಿಕರ ಇವರು ಅನುಮೋದಿಸಿದರು. ಅಧ್ಯಕ್ಷರು ಸ್ಥಾನವನ್ನು ಸ್ವೀಕರಿಸಿದ ಮೇಲೆ ಕಾರ್ಯದರ್ಶಿಗಳು ಶ್ರೀಬಂಥ ನಾಳ ಮಹಾಸ್ವಾಮಿಗಳಿಂದ, ಧಾರವಾಡ ಮುರಘಾರಾಜೇಂದ್ರ ಫ್ರೀ ಬೋರ್ಡಿಂಗ ಸಂಸ್ಥೆಯಿಂದ ಮತ್ತು ಬೇರೆ ಬೇರೆ ಕಡೆಯು ಸುಮಾರು ಇಪ್ಪತ್ತು ಸ್ಥಳಗಳಿಂದ ಬಂದ ಶುಭಸಂದೇಶಗಳನ್ನು ಸಭೆಯಲ್ಲಿ ಓದಿ ಹೇಳಿದರು ಮತ್ತು ರಾ. ಬ. ಹಳಕಟ್ಟಿಯವರ ಗೌರವಾರ್ಥವಾಗಿ ಕವಿತೆ, ಪದ, ಲೇಖಗಳನ್ನು ಕಳಿಸಿಕೊಟ್ಟವರ ನಾಮನಿರ್ದೇಶ ಮಾಡಿದರು. ಅನಂತರ ರಾ. ಬ. ಹಳಕಟ್ಟಿಯವರು ಕನ್ನಡನುಡಿಗೆ ಮತ್ತು ನಾಡಿಗೆ ಮಾಡಿದ ಅಮೌಲ್ಯ ಸೇವೆಯನ್ನು ಕುರಿತು ಶ್ರೀ ಸುಬುದ್ಧಿ ಹಿರೇಮಠ ಶ್ರೀ ಭರಮಣ್ಣಾ ಸನುಗಾರ, ಖಾ. ಬಾ. ಬೀದ್ರೀಕರ, ಶ್ರೀ ಬಿ. ಎಲ್. ನಿಕ್ಕಮ, ಶ್ರೀ ರಾಯಚೂರ ಶಿಖರ ಮಠದ ಬಸವಲಿಂಗ ಸ್ವಾಮಿಗಳು, ಶ್ರೀ ಹರ್ಡೀಕರ ಮಂಜಪ್ಪನವರು, ಶ್ರೀ ಗಜೇಂದ್ರಗಡಕರ, ಶ್ರೀ ಹುಚ್ಚೀ ಶ್ವರ, ಶ್ರೀ ಅಂಬಿಗೇರ ಮೊದಲಾದ ಮಹನೀಯರು ತಮ್ಮ ಕಳಕಳಿಯ ಅಭಿಪ್ರಾಯಗಳನ್ನು ವ್ಯಾಖ್ಯಾನರೂಪದಿಂದ ವ್ಯಕ್ತಪಡಿಸಿದರು.

ಆಮೇಲೆ ಕಾರ್ಯದರ್ಶಿಗಳು ವಿಜಯಪುರಸ್ಥರ ಪರವಾಗಿ ರಾ. ಬ. ಹಳಕಟ್ಟಿಯವರು ಮಾಡಿದ ಪವಿತ್ರವಾದ ನಾಡನುಡಿ ಸೇವೆಯ ಗೌರ ವಾರ್ಥವಾಗಿ ಮಾನಪತ್ರವನ್ನು ಓದಿ ಹೇಳಿದರು. ಅಧ್ಯಕ್ಷರು ಮಾನಪ ತ್ರವನ್ನೂ ನಿಧಿಯನ್ನೂ ಪೂಮಾಲೆಯೊಡನೆ ರಾ. ಬ. ಹಳಕಟ್ಟಿಯವರಿಗೆ ಸಮರ್ಪಿಸಿದರು.

ಆಬಳಿಕ ಶ್ರೀ ಸಿದ್ಧೇಶ್ವರ ಹಾಯಸ್ಕೂಲ ಶಿಕ್ಷಕರು, ಶ್ರೀ ಸಿದ್ಧೇ ಶ್ವರ ಹಾಯಸ್ಕೂಲ ಸಂಸ್ಥೆ, ವಿಜಾಪುರ ಜಿಲ್ಲಾ ವಿದ್ಯಾವರ್ಧಕ ಸಂಘ, ಶ್ರೀ ಸಿದ್ಧೇಶ್ವರ ಸಂಸ್ಥೆ, ಮರ್ಚಂಟ ಅಸೋಸಿಯೇಶನ್, ಮರಾಠಾ ಅಸೋಸಿಯೇಶನ್, ರಜಪೂತ ಅಸೋಸಿಯೇಶನ್, ಕಾಟನ್‌ಮಾರ್ಕೆಟ ಅಸೋಸಿಯೇಶನ್, ಇಸ್ಲಾಂ ಅಸೋಸಿಯೇಶನ್, ಹರಿಜನ ಅಸೋಸಿಯೇ ಶನ್, ವಿಜಾಪುರ ಜಿಲ್ಹಾ ಪಾಟೀಲ ಅಸೋಸಿಯೇಶನ್, ಕಿರಾಣಿ ಅಂಗಡಿ ಅಸೋಸಿಯೇಶನ್, ವಾರದವರ ಅಂಗಡಿ, ಮೋಟಗಿಯವರ ಅಂಗಡಿ, ಮಿಣಜಗಿ ಬ್ರದರ್ಸ, ರಾಯಚೂರ ಸ್ವಾಮಿಗಳು, ಎಂ. ಬಿ. ಸಿ. ಹಿರೇ

ವಾರ, ವಿಜಾಪುರ ಮುನಸಿಫಲ್ ಸ್ಕೂಲಬೋರ್ಡ, ಕನ್ನಡ ೫ನೇ ನಂಬರ ಶಾಳಾ ಮಾಸ್ತರರು ಮು. ವಿಜಾಪುರದ ಪ್ರಾಥಮಿಕ ಶಾಲೆಗಳು ಇವೇ ಮೊದಲಾದ ಸಂಸ್ಥೆಗಳ ಮತ್ತು ವ್ಯಕ್ತಿಗಳ ಪರವಾಗಿ ರಾ. ಬ. ಹಳಕಟ್ಟಿ ಯುವರಿಗೆ ಹಾರಗಳು ಸಮರ್ಪಿಸಲ್ಪಟ್ಟವು.

ನಂತರ ರಾ. ಬ. ಹಳಕಟ್ಟಿಯುವರು ತಮಗೆ ಗೌರವಾದರಗಳನ್ನು ತೋರಿಸಿದ ಎಲ್ಲ ಸಂಸ್ಥೆಯುವರಿಗೆ ತಮ್ಮ ಅಭಾರಗಳನ್ನು ವ್ಯಕ್ತಗೊಳಿಸಿ ತಮಗೆ ಸಲ್ಲಿಸಿದಂಥ ನಿಧಿಯನ್ನು ತಮ್ಮ ಸ್ವಂತಕ್ಕೆ ಉಪಯೋಗಿಸಿಕೊಳ್ಳದೆ ಸಮಾಜ ಮತ್ತು ಸಾಹಿತ್ಯ ಸೇವೆಗಾಗಿಯೇ ಸಲ್ಲಿಸುವೆವೆಂದು ವಿಶದ ಪಡಿಸಿದರು.

ಬಳಿಕ ಅಧ್ಯಕ್ಷರು ತಮ್ಮ ಹಾಗು ರಾ. ಬ. ಹಳಕಟ್ಟಿಯುವರ ನಡುವೆ ಇದ್ದ ೪೦ ವರ್ಷದ ಮಿತ್ರತ್ವವನ್ನು ಹೊಗಳಿ ರಾ. ಬ. ಹಳಕಟ್ಟಿಯುವರು ಮಾಡಿದ ಸಾಹಿತ್ಯ ಸೇವೆ ಸಾರ್ವಜನಿಕ ಸೇವೆಗಳನ್ನು ಕೊಂಡಾಡಿ ಪರಮಾತ್ಮನು ರಾ. ಬ. ಹಳಕಟ್ಟಿಯುರ ಆಯುರಾರೋಗ್ಯವನ್ನು ಹೆಚ್ಚಿಸಿ ಅವರಿಂದ ಇನ್ನೂ ಹೆಚ್ಚು ಸೇವೆಯಾಗುವಂತೆ ಮಾಡಲೆಂದು ಕೋರಿ ತಮ್ಮ ಭಾಷಣ ಸಮಾರೋಪಣ ಮಾಡಿದರು. ಮತ್ತು ರಾ. ಬ. ಹಳಕಟ್ಟಿ ಯುವರು ತಮ್ಮ ವರ್ಧಂತಿಯು ಶುಭದಿವಸದಲ್ಲಿ ಹೊರಡಿಸಿದ ಶಿವಾನುಭವ ಶಬ್ದಕೋಶ, ಗುರುಬಸವಕವಿಕೃತ ಅವಧೂತಗೀತೆ, ಕೆಳದಿ ಅರಸರ ವಂಶಾವಳಿ, ಕೊಡಗಿನ ರಾಜೇಂದ್ರನಾಮೆ, ಶಿವಶರಣರ ಪದಗಳು ಭಾಗ ೧ ಈ ೫ ಗ್ರಂಥಗಳನ್ನು ಅಧ್ಯಕ್ಷರು ಸಭೆಯಲ್ಲಿ ಪ್ರಕಟಗೊಳಿಸಿದರು.

ಕಾರ್ಯದರ್ಶಿಗಳು ಅಧ್ಯಕ್ಷರ ಹಾಗು ಸ್ವಸ್ಥಳ ಪರಸ್ಥಳಗಳಿಂದ ಬಂದಂಥ ಸಭಿಕರ, ನಿಧಿಗೆ ಸಹಾಯ ಮಾಡಿದ ಮಹಾಜನಗಳ ಅಭಾರ ಮನ್ನಿಸಿದರು. ಅನಂತರ ರಾಷ್ಟ್ರಗೀತೆಯಾದಬಳಿಕ ಸಭಾ ಕಾರ್ಯವು ಕೊನೆಗಂಡಿತು.

ಲಿಕ್ಕೆ ಪ್ಲೇಟೋನಂಥ ಶಿಷ್ಯನು ಕಾರಣನಾಗಿರಬಹುದು. ಸ್ವಾಮಿಪರಮಾನಂದರ ದಿವ್ಯಸಂದೇಶಗಳನ್ನು ಬೀರಲಿಕ್ಕೆ ಸ್ವಾಮಿವಿವೇಕಾನಂದರು ಟೊಂಕ ಕಟ್ಟಿರಬಹುದು. ಈ ಮೇರೆಗೆ ಒಬ್ಬಿಬ್ಬ ದಿವ್ಯ ಜ್ಯೋತಿಗಳನ್ನು ಅನುಸರಿಸುವ ಸಾಮಾನ್ಯರು ಬಹು ಜನರಿರಬಹುದು. ಆದರೆ ಎಲ್ಲರೂ ಸ್ವಯಂಜ್ಯೋತಿಗಳೂ ಸ್ವಯಂಧೀರರೂ ಆಗಿ ತತ್ವ ಪ್ರಸಾರ ಮಾಡಿದ ಶ್ರೇಯಸ್ಸು ಶಿವಾನುಭವಮಂಟಪದಿಂದ ಹೊರಟ ಶಿವಶರಣರಿಗಲ್ಲದೆ ಮತ್ತಾರಿಗುಂಟು? ಮುಂದಾಳು ಒಬ್ಬರಾಗಿದ್ದರೆ ಅವರನ್ನು ಹಿಂಬಾಲಿಸುವವರು ಅನೇಕರಿದ್ದುದು ಎಲ್ಲಿಡೆಯಲ್ಲಿಯೂ ಕಂಡುಬರುತ್ತಿದೆ. ಆದರೆ ಅಸಂಖ್ಯರು ಮುಂದಾಳುಗಳಾಗಿ ಜನತಾಜನಾರ್ದನ ಸೇವೆಯನ್ನು ಮಾಡಿದವರು ಶಿವಶರಣರಲ್ಲದೆ ಮತ್ತಾರು?

ಶಿವಾನುಭವ ಮಂಟಪದಲ್ಲಿ ಶಿವಶರಣರು ಅನುಸರಿಸಿ ನಡೆದ ಶಿಷ್ಟಾಚಾರವು ಒಳ್ಳೇ ಆದರಣೀಯವೂ ಅನುಕರಣೀಯವೂ ಆಗಿದೆ. ಶಿವಾನುಭವ ಗೋಷ್ಠಿಯಲ್ಲಿ ಭಾಗವಹಿಸುತ್ತಿದ್ದವರು ಅನೇಕರು ಜನಸಾಮಾನ್ಯರಾಗಿದ್ದರೂ ಅವರು ಪರಶಿವನ ಮಕ್ಕಪೆಗೆ ಪಾತ್ರರಾದಂಥವರು. ಶಿವಾನುಭವ ಮಂಟಪದಲ್ಲಿ ಕೀಳು ಮೇಲುಗಳಿಗೆ ಆಸ್ಪದವಿರಲಿಲ್ಲ. ತನ್ನ ಸದಸದ್ವಿವೇಕ ಬುದ್ಧಿಗೆ ತೋಚಿದ ಸತ್ಯವನ್ನು ನಿರ್ಭಯದಿಂದ ಮರೆಮಾಚದೆ ಪ್ರಸ್ತಾಪಿಸಲು ಪ್ರತಿಯೊಬ್ಬನಿಗೂ ಶಿವಾನುಭವ ಮಂಟಪದಲ್ಲಿ ಅಧಿಕಾರವಿದ್ದಿತು. ತಾನು ಹೇಳದ್ದೇ ನಿಜ ಉಳಿದವರು ಹೇಳಿದ್ದು ತಪ್ಪು ಎಂಬ ಕ್ಷುದ್ರ ಮದಾಂಧತೆಯು ಅವರಲ್ಲಿರಲಿಲ್ಲ. ಪರಸ್ಪರರು ವಿಷಯಗಳನ್ನು ಚರ್ಚಿಸುವಾಗ ಮನಸ್ಸಿಗೆ ಹತ್ತುವ ಕಠೋರ ಶಬ್ದಗಳಿಗೆ ಆ ಮಂಟಪದಲ್ಲಿ ಆಸ್ಪದವಿರಲಿಲ್ಲ. ಪರಸ್ಪರರು ಅಪ್ಪಾ, ಅಣ್ಣಾ, ತಂದೆ, ಗುರುವೇ ಎಂಬ ವಿನಯ ವಾಕ್ಯಗಳಿಂದಲೇ ಸಂಬೋಧಿಸುತ್ತಿದ್ದರೆಂಬ ಮಾತಿಗೆ 'ಶೂನ್ಯಸಂಪಾದನೆಯು' ಒಳ್ಳೇ ಸಾಕ್ಷಿಯಾಗಿದೆ. ತಮ್ಮ ಅಭಿಪ್ರಾಯವು ತಪ್ಪಾಗಿದ್ದರೆ ನಿರ್ವಂಚನೆಯಿಂದ ಶಿರಸಾವಮಾನ್ಯವಾಗಿ ಒಪ್ಪುತ್ತಿದ್ದರು. ವಾದದಲ್ಲಿ ಒಬ್ಬರ ಯೋಗ್ಯತೆಯನ್ನೊಬ್ಬರು ಹೆಚ್ಚಿಸುವರೇ ವಿನಾ ತಮ್ಮ ದರ್ಪವನ್ನು ಮಂಡಿಸುವ ಹವ್ಯಾಸ ಅವರಿಗಿರಲಿಲ್ಲ. ಆಗಮೋಪನಿಷತ್ತು ಮೊದಲಾದ ಶಾಸ್ತ್ರ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ಶಿವಶರಣರು ಅವುಗಳ ಬಗ್ಗೆ ವಾದ ವಿವಾದ ಮಾಡುತ್ತಿರಲಿಲ್ಲ. ತಮ್ಮ ಪವಿತ್ರಾಂತಃಕರಣಗಳಿಗೆ ಹೊಳೆದ

ನುಡಿಗಳನ್ನೇ ನಿರ್ಭೀತಿಯಿಂದ ಮಂಡಿಸುತ್ತಿದ್ದರು. ಸೂಕ್ಷ್ಮದಲ್ಲಿ ಸೂಕ್ಷ್ಮವನ್ನು ಹುಡುಕಿ ಸತ್ಯವನ್ನು ಶೋಧಿಸುವ ಮೂಲ ಬುದ್ಧಿಯು ಶರಣರದು. ಅವರದು ಕಲಿತ ಬುದ್ಧಿಯಲ್ಲ. ಎಂಜಲ ಮಾತಗಳನ್ನವರೆಂದಿಗೂ ಆಡರು. ಅವರ ಅಂತರಾಳದಿಂದ ಮೀಸಲು ನುಡಿಗಳೇ ಹೊರ ಹೊಮ್ಮುತ್ತಿದ್ದವು. ಶರಣನಿಗೆ ವಾದದಲ್ಲಿ ತಾನು ಗೆದ್ದೆನೆಂಬ ಅಹಂಕಾರವಿಲ್ಲ. ಸೋತೆನೆಂಬ ನಾಚಿಕೆಲ್ಲ

ಈ ಪ್ರಕಾರ ಕ್ರಮಬದ್ಧವಾದ ಸಂಘಟನೆಯನ್ನು ಮಾಡಿಕೊಂಡು ಶಿವಶರಣರು ಒಬ್ಬರೊಬ್ಬರ ಗುಣಗಳನ್ನು ಹೊಗಳುತ್ತ, ದೋಷಗಳನ್ನು ತೆಗಳುತ್ತ, ತಪ್ಪುಗಳನ್ನು ಒಪ್ಪುತ್ತ, ಒಪ್ಪುಗಳನ್ನ ಕೊಂಡಾಡುತ್ತ ಸುಗಮವಾದ ಮಾರ್ಗವಿಡಿದು ಸಾಗುತ್ತಿದ್ದರು. ಸದಾಚಾರ ಸದ್ಭಕ್ತಿಯುಳ್ಳಾತನೇ ಶಿವಾನುಭವಮಂಟಪದ ಸದಸ್ಯನು. ಯಾವನಲ್ಲಿ ನಿಜವಾದ ಯೋಗ್ಯತೆಯಿರುತ್ತಿತ್ತೋ ಅವರನ್ನು ಎಲ್ಲರೂ ಎತ್ತಿಹಿಡಿದು ಗೌರವಿಸುತ್ತಿದ್ದರು. ಅವನ ಶ್ರೀಪಾದಕ್ಕೆ ನಮೋ ನಮೋ ಎನ್ನುತ್ತಿದ್ದರು. ನಾನೇ ಜಗದ್ಗುರು ನಾನೇ ಜಗದಾಚಾರ್ಯನೆಂಬ ಹಮ್ಮುಬಿಮ್ಮುಗಳವರಲ್ಲಿರಲಿಲ್ಲ. 'ವಾದೇ ವಾದೇ ಜಾಯತೇ ತತ್ವಬೋಧಃ' ಎಂಬ ನಿಯಮವಾಕ್ಯನು ಸರಿಸಿ ಮಾತಿನ ಮಥನದಿಂದ ತತ್ವದ ನವನೀತವನ್ನು ತೆಗೆದು ಜನತೆಗೆ ಸಲ್ಲಿಸುತ್ತಿದ್ದರು.

ಶಿವಾನುಭವ ಮಂಟಪದಲ್ಲಿ ಪಾರಂಗತೆಯನ್ನು ಪಡೆದ ಜಂಗಮರು ಊರೂರಲ್ಲಿ ಸಂಚರಿಸಿ ಮಠಗಳನ್ನು ಸ್ಥಾಪಿಸಿ ಕ್ರಮಬದ್ಧವಾದ ಸಮಾಜ ಘಟನೆಯನ್ನೇರ್ಪಡಿಸಿ ಜನರಿಗೆ ಸದ್ಬೋಧ ಮಾಡುತ್ತಿದ್ದರು. ಅವರಲ್ಲಿ ಸದಾಚಾರ ಸದ್ಭಕ್ತಿಗಳು ನೆಲೆಗೊಳ್ಳುವಂತೆ ಹಗಲಿರುಳು ಪ್ರಯತ್ನಿಸುತ್ತಿದ್ದರು. ಅವರ ತತ್ವಬೋಧೆಗೆ ಮನಸೋತು ಅನೇಕ ಪರಮತೀಯರು ವೀರಶೈವ ಮತವನ್ನಂಗೀಕರಿಸಿದರು. ಅಸಂಖ್ಯ ಜೈನರೂ ವೈಷ್ಣವರೂ ಶೈವರೂ, ಪಾಶುಪತರೂ ಮೊದಲಾದ ಪರಮತೀಯರು ಶರಣರ ತತ್ವಬೋಧೆಗೆ ಮನಸೋತು ಲಿಂಗಾಂಗಿಗಳಾದರೆಂದು ಹಡಪದಪ್ಪಣ್ಣಗಳು ತಮ್ಮದೊಂದು ವಚನದಲ್ಲಿ ನುಡಿದಿದ್ದಾರೆ. ಶಿವಾನುಭವಮಂಟಪವೇ ಮಠಗಳ ಮಾಪಾರ್ಟಿಗೆ ಮೂಲಕಾರಣವೆಂದು ಹೇಳಬಹುದು. ಪರುಷ ಸೋಂಕಿದ ಕಬ್ಬಿಣವು ಸುವರ್ಣವಾಗುವಂತೆ ಶಿವಾನುಭವ ಮಂಟಪವನ್ನಾಶ್ರಯಿಸಿದ ಅನೇಕ ಕೀಳು ಕುಲದವರೂ ಸಹ ಗುರುಸ್ವರೂಪರಾ

ದರೆಂಬುದಕ್ಕೆ ಅನೇಕ ಉದಾಹರಣೆಗಳುಂಟು. ಉರಿಲಿಂಗಪೆದ್ದಿ ಮೊದಲಾದ ಅಸ್ಪೃಶ್ಯರು ಕೂಡ ತಮ್ಮ ಉಜ್ವಲವಾದ ಭಕ್ತಿಜ್ಞಾನಗಳ ಮೂಲಕ ಗುರುಪೀಠವನ್ನಲಂಕರಿಸಿದ್ದೂ ಉಂಟು. ಸದಾಚಾರ ಸದ್ಭಕ್ತಿಯುಳ್ಳಾತನೇ ಕುಲಜನು. ದುರ್ಗುಣ ದುರಾಚಾರಿಯೇ ಕುಲಹೀನನು. ಎಂಬೀ ತತ್ವವನ್ನು ಬಳಕೆಯಲ್ಲಿ ತಂದವರು ಶಿವಶರಣರೇ. ಅಂಥ ನೈತಿಕ ಧೈರ್ಯವು ಈ ವರೆಗೆ ಆರ್ಯಾವರ್ತದಲ್ಲಿ ಯಾರಿಗೂ ಉಂಟಾಗಿರಲಿಲ್ಲ.

ಶಿವಾನುಭವ ಮಂಟಪದಲ್ಲಿ ಹೊರಟ ಶರಣ ಸಂಕುಳವೆಲ್ಲ ಸ್ವಯಂಜ್ಯೋತಿಗಳು. ಅವರಿಗೆ ಮಹಾತೇಜೋಮಯವಾದ ಪರವಸ್ತುವಿನಿಂದಲೇ ನೇರವಾಗಿ ಪ್ರಕಾಶವು ಪ್ರಾಪ್ತವಾಯಿತಲ್ಲದೆ ಯಾವ ಗುರುವಿನಿಂದಾಗಲಿ ಸದ್ಗ್ರಂಥ ಬೋಧೆಯಿಂದಾಗಲಿ ದೊರೆಯಲಿಲ್ಲ. ಶಿವಶರಣರು ನಿರಧಿಕರಣ ದೀಕ್ಷಾ ಬದ್ಧರು. ಆದರೆ ಶಿವಶರಣರನಂತರ ಪ್ರಕಾಶಮಾನರಾಗಿ ಬೆಳಗಿದ ಹರಿಹರ, ರಾಘವಾಂಕ, ಪಾಲ್ಕುರಿಕೆ ಸೋಮ, ಭೀಮ, ವಿರೂಪಾಕ್ಷ, ಷಡಕ್ಷರಿ, ನಿಜಗುಣಯೋಗಿ, ಸರ್ವಜ್ಞ ಮೊದಲಾದ ಕವಿಪುಂಗವರು ವಿಶೇಷತಃ ಶರಣರ ಪ್ರಕಾಶದಿಂದಲೇ ಬೆಳಗಿದರು. ಈ ಕವಿಗಳ ಪ್ರಕಾಶವನ್ನು ಹೊಂದಿ ಮುಂದೆ ಅನೇಕ ಷಟ್ಪದಿಕಾರರು ದಾಸರ ಭಕ್ತಿಗ್ರಂಥಗಳು ಅನುಭವ ಪದಗಳೂ ಬೆಳಕಿಗೆ ಬಂದವು. ಇವೆಲ್ಲವುಗಳಿಗೆ ಕಾರಣೀಭೂತವಾದ ಮಹಾತೇಜದ ಆಗರವೆಂದರೆ ಶಿವಾನುಭವ ಮಂಟಪ.

ಶಿವಾನುಭವಮಂಟಪದಲ್ಲಿ ಶಿವಶರಣರು ಮೊದಲು ವ್ಯಕ್ತಿಗತವಾದ ಆತ್ಮೋನ್ನತಿಯನ್ನು ಮಾಡಿಕೊಂಡೇ ಸಮಾಜೋನ್ನತಿ ಪಾರಮಾರ್ಥಿಕ ತತ್ವ ಪ್ರಸಾರಗಳಿಗೆ ಕೈಹಾಕಿದರು. "ಲೋಕದ ಡೊಂಕವನ್ನು ನೀವೇಕೆ ತಿದ್ದುವಿರಿ? ಮೊದಲು ನಿಮ್ಮ ಮನದ ಕಾಳಿಕೆಯ ಕಳೆದುಕೊಳ್ಳಿರಣ್ಣಾ" ಎಂಬ ಬಸವಣ್ಣನವರ ವಚನವನ್ನು ವಿಚಾರಿಸಲು ಆತ್ಮೋನ್ನತಿಯಿಲ್ಲದ ಮನುಷ್ಯನು ಅನ್ಯರ ಉದ್ಧಾರ ಮಾಡಲು ಎಂದೂ ಸಮರ್ಥನಾಗಲಾರನೆಂಬುದು ಸಿದ್ಧವಾಗುತ್ತದೆ. ಶಿವಶರಣರು ಆತ್ಮವೀರರು ಆತ್ಮಬಲಶಾಲಿಗಳು, ಸ್ವಯಂಧೀರರು. ಅಂತೆಯೇ ಅವರ ವಾಣಿಯಲ್ಲಿ ಸತ್ಯವಿದೆ, ಪ್ರಸಾದವಿದೆ, ಓಜಸ್ಸಿದೆ, ತೇಜಸ್ಸಿದೆ, ಜನತೆಯನ್ನುದ್ಧಾರ ಮಾಡುವ ಸಾಮರ್ಥ್ಯವಿದೆ. ಅಂಥ ದಿವ್ಯವಚನಗಳ ಸಾಮರ್ಥ್ಯದಿಂದಲೇ ಶರಣರು ಸಮಾಜದಲ್ಲಿ ನೆಲೆಗೊಂಡ ಅಸ್ಪೃಶ್ಯತೆಯನ್ನು ಹೋಗಲಾಡಿಸಿದರು.

ಜಾತಿಭೇದಗಳ ಬೇರನ್ನು ಕಿತ್ತೊಗೆದರು. ಯಜ್ಞಯಾಗಾದಿಗಳನ್ನು ಹೂಳಿದರು ದುರ್ಗುಣದುರಾಚಾರಗಳನ್ನು ದೂರೀಕರಿಸಿದರು. ಡಾಂಭಿಕತನ, ಮೂಢಭಾವನೆ ಅಜ್ಞಾನಗಳಿಗೆ ತಡೆಹಾಕಿದರು. ಕಾಯಕದ ಮಹತ್ವವನ್ನು ತೋರಿಸಿ ಸಮಾಜದಲ್ಲಿ ಉದ್ಯೋಗ ಕಲಾಕೌಶಲ್ಯಗಳನ್ನು ಹೆಚ್ಚಿಸಿದರು. ಮ. ಗಾಂಧಿಯವರಾದರೂ ಸಮಾಜ ಸುಧಾರಣೆಯ ವಿಷಯದಲ್ಲಿ ಶಿವಶರಣರ ಕೀರ್ತಿಯನ್ನೇ ಹಾಡುತ್ತಿರುವರಲ್ಲವೇ? ಅಂದಬಳಿಕ ಶಿವಶರಣರು ಹುಡುಕಿತೆಗೆದ ಸಮಾಜ ಸುಧಾರಣಾ ತತ್ವಗಳು ತ್ರಿಕಾಲಾಬಾಧಿತವಾಗಿವೆಯಲ್ಲವೇ? ರಶಿಯಾ ದೇಶದ ಸಮಾಜವಾದವಾದರೂ ಶಿವಶರಣರ ತತ್ವಗಳನ್ನೇ ಅನುಸರಿಸಿಲ್ಲವೇ?

ಇದೇ ಮೇರೆಗೆ ಶಿವಶರಣರ ಷಟ್‌ಸ್ಥಲ ಮಾರ್ಗವು ಭಗವದ್ಗೀತೆಯ ಕರ್ಮಮಾರ್ಗ, ಜ್ಞಾನಮಾರ್ಗ, ಭಕ್ತಿಮಾರ್ಗ, ಯೋಗಮಾರ್ಗಗಳಿಗಿಂತ ಯಾವ ದೃಷ್ಟಿಯಲ್ಲಿ ಕಡಿಮೆಯಾಗಿದೆ? ಯಾವ ಆಗಮೋಪನಿಷತ್ತುಗಳು ಶರಣರ ತತ್ವಗಳನ್ನು ಮೀರಿಹೋಗಿವೆ? ಬಾಯಿಬಲ್ ಕುರಾನ, ಬೌದ್ಧಗ್ರಂಥಗಳಲ್ಲಿಯ ತತ್ವಗಳಾದರೂ ಶರಣರ ನುಡಿಗಳನ್ನು ಮೀರುವದುಂಟೇ? ಹೀಗೆ ಸರ್ವ ಧರ್ಮಗಳ ಸಾರವನ್ನೊಳಕೊಂಡ ಶಿವಶರಣರ ವಚನಗಳು ತ್ರಿಕಾಲದಲ್ಲಿ ಸತ್ಯವಾದವುಗಳೆನ್ನಲಿಕ್ಕೆ ಹೆದರಿಕೆಯೇಕೆ? ಇಂಥ ಉದಾತ್ತವಾದ ಮತ್ತು ದಿವ್ಯವಾದ ತತ್ವಗಳಿಗೆ ಶಕ್ತಿಯನ್ನಿತ್ತ ಸಂಸ್ಥೆ ಯಾವದು? ಶಿವಾನುಭವಮಂಟಪ.

ಅಂಥ ಶಿವಾನುಭವಮಂಟಪವು ಈಗ ನಾಮಾವಶೇಷವಾಗಿ ಹೋಗಿದ್ದರೂ ಆ ಶರಣರ ಕೆಲವು ವಚನಗಳು ಇನ್ನೂ ಜೀವಂತವಾಗಿ ಉಳಿದಿರುವದು ವೀರಶೈವರ ಸುದೈವವೆಂದೇ ತಿಳಿಯಬೇಕು. ಅಂಥ ವಚನಗಳನ್ನು ಬೆಳಕಿಗೆ ತಂದ ಶ್ರೀಮಾನ್ ಹಳಕಟ್ಟಿಯವರಿಗೆ ಎಷ್ಟು ಧನ್ಯವಾದಗಳನ್ನರ್ಪಿಸಿದರೂ ಕಡಿಮೆಯೇ. ಅಂಥ ವಚನಗಳನ್ನು ಪುನಃ ಸೃಷ್ಟಿಸುವ ಸಮರ್ಥರು ಈ ಮನ್ವಂತರದಲ್ಲಿ ಜನಿಸದಿದ್ದರೂ ಆ ವಚನಗಳ ಸುಧೆಯನ್ನುಂಡು ಆತ್ಮೋನ್ನತಿಯನ್ನು ಮಾಡಿಕೊಳ್ಳಲು ಎಲ್ಲರಿಗೂ ಆಸ್ಪದವಿದೆ. ಈಗ ಅಲ್ಲಲ್ಲಿ ಸ್ಥಾಪಿತವಾದ ಶಿವಾನುಭವಮಂಟಪಗಳಲ್ಲಿ ಹಿಂದಿನಂಥ ಮಹಾಶರಣರು ಹುಟ್ಟದಿದ್ದರೂ ಆ ಶರಣರ ವಚನಗಳ ಶ್ರವಣ-ಪಠಣದಿಂದ ಸನ್ಮಾರ್ಗಕ್ಕೆ ಹತ್ತುವ ವ್ಯಕ್ತಿಗಳಾದರೂ ಹುಟ್ಟಬಹುದು. ನಮ್ಮ ಸಮಾಜವು ಈಗ ಸ್ವಾರ್ಥ, ಅಧರ್ಮ, ಅನೀತಿ ಮುಂತಾದವುಗಳ ಹಾವಳಿಯಿಂದ ಬಳಲಿ ಬೆಂಡಾಗಿದೆ.

ಈಗ ನಮಗೆ ಶಾಂತಿಯು ನಿಜವಾಗಿ ವಚನಗಳಿಂದಲೇ ದೊರೆಯುವದೆಂದು ನಾನು ಎದೆತಟ್ಟಿ ಹೇಳುತ್ತೇನೆ. ಈ ಮಾತು ಸುಳ್ಳೆನ್ನುವವರು ಕೆಲದಿನಮಟ್ಟಿಗಾದರೂ ವಚನಗಳನ್ನು ಲಕ್ಷಪೂರ್ವಕವಾಗಿ ಅವಲೋಕಿಸಲಿ. ಅದರಿಂದ ಅವರಿಗೆ ಶಾಂತಿಯುಂಟಾಗುವದೋ ಇಲ್ಲವೋ ಅವರೇ ಕಂಡುಕೊಳ್ಳಲಿ. ಈಗ ಶಿವಾನುಭವಮಂಟಪಗಳು ಊರೂರಿಗೆ ಅದೇಕೆ ಮನೆಮನೆಗೂ ಬೇಕು. ಅರ್ಥಾತ್ ಶರಣರ ವಚನಗಳು ಪ್ರಸಾರವಾಗಬೇಕು. ಅವರ ನುಡಿಗಳು ಮೃತವಾಕ್ಯಗಳಲ್ಲ. ಅವುಗಳಲ್ಲಿ ಜೀವವಿದೆ, ಚೈತನ್ಯವಿದೆ. ಬಾಳಿನಲ್ಲಿ ಬೆಳಕನ್ನು ಕೊಡುವ ಸಾಮರ್ಥ್ಯವಿದೆ. ಆದುದರಿಂದಲೇ ನಾವು ಮನೆಗೊಂದು ಶಿವಾನುಭವಮಂಟಪವನ್ನು ಮಾಡಿಕೊಂಡು ಪ್ರತಿನಿತ್ಯ ೫ ವಚನಗಳನ್ನಾದರೂ ನಾವು ಸ್ವತಃ ಓದಿ ಮನೆಯವರಿಗೆ ಅದರ ಸ್ವಾದವನ್ನುಣಿಸಿದರೆ ಹಿಂದಿನ ಶಿವಾನುಭವ ಮಂಟಪದ ಒಂದು ಸಹಸ್ರಾಂಶ ಸೇವೆಯನ್ನಾದರೂ ನಾವು ಮಾಡಿದೆವೆಂಬ ಸಮಾಧಾನವುಂಟಾದೀತು. ಅಂಥ ಸುಸಂಧಿಯನ್ನು ಶಿವಶರಣರೇ ನಮ್ಮ ಸಮಾಜಕ್ಕೆ ಉಂಟುಮಾಡಲೆಂದು ನಾನು ಪರಶಿವನನ್ನು ಪ್ರಾರ್ಥಿಸುತ್ತೇನೆ.

---

## 'ವಿ ರಾ ಗಿ ಣಿ'

ಲೇ.— ವಿದ್ವಾನ್ ಕಾವ್ಯತೀರ್ಥ ಸಿದ್ಧವೀರಶಾಸ್ತ್ರಿ ಹಿರೇವಡವಟ್ಟಿ
ಎಸ್. ಎಸ್. ಕಾಲೇಜ ಯಾದಗಿರಿ.

---

ಹಸಿವಾದೊಡೆ ಭಿಕ್ಷಾನ್ನಗಳುಂಟು,
ತೃಷೆಯಾದೊಡೆ ಕೆರೆ, ಹಳ್ಳ, ಭಾವಿಗಳುಂಟು,
ಶಯನಕ್ಕೆ ಹಾಳು ದೇಗುಲಗಳುಂಟು,
ಚನ್ನಮಲ್ಲಿಕಾರ್ಜುನಾ ಆತ್ಮಸಂಘಾತಕ್ಕೆ ನೀನೆನಗುಂಟು.

ಎಂಬುವ ಗೀತೆಯ ಜ್ಞಾನವು ಅತ್ಯಧಿಕವಾದದ್ದು. ಈ ಅರಿವುಳ್ಳವರೇ ಶಿವಯೋಗಿಗಳು. ಅವರೇ ಲಿಂಗೈಕ್ಯರು.

ಅಕ್ಕ ಮಹಾದೇವಿಯು ಸುಮತಿ ನಿರ್ಮಲೆಯರ ಪ್ರೇಮದಿಂದ ಬೆಳೆದು ದೊಡ್ಡವಳಾದ ಹಾಗೆ ಆತ್ಮಜ್ಞಾನವು ಬೆಳೆಯುತೊಡಗಿದೆ. ಅವಳು ನಿತ್ಯದಲ್ಲಿ ಶಿವಪೂಜೆಯನ್ನು ಭಕ್ತಿಯಿಂದ ಮಾಡುತ್ತ, ಪಾಡುತ್ತ ಆನಂದದಿಂದ ಕಾಲ ಕಳೆಯುತ್ತಿರಲು, ಒಂದು ದಿನ ಪುರದೊರೆ ಕೌಶಿಕನು ನೂತನ ಯುವ್ವನ ಸಂಪನ್ನಳಾದ ಮಹಾದೇವಿಯನ್ನು ನೋಡಿ ಮೋಹಿತನಾಗಿ ಲಗ್ನವಾಗಲು ಕೇಳಲು ತನ್ನ ಮಂತ್ರಿಗಳನ್ನು ಕಳಿಸಿದನು. ಆಗ್ಗೆ ಸುಮತಿ ನಿರ್ಮಲೆಯರು ಭೀತಿಯಿಂದ ಮಗಳಿಗೆ ಕೇಳಿಕೊಂಡರು. ಆಗ್ಗೆ ಮಹಾದೇವಿಯು—

"ನಾಗಭೂಷಣನ ಭಕ್ತರಿಗೆ ಭವಿಯು ಸರಿಯಲ್ಲ
ಬೆಳಗಿಂಗೆ ಕತ್ತಲಿಂಗೆ ಕೂಟವುಂಟೇ ಮರುಳೇ ॥

ಎಂದು ಹೇಳಿದನ್ನು ಹರಿಹರನು ರಗಳೆಯಲ್ಲಿ ಹೇಳಿದ್ದಾನೆ. ಮತ್ತು

"ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವಂಗಾನೊಲಿದೆನವ್ವ।
ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ-
ಚಲುವಂಗಾನೊಲಿದೆ ಎಲೆ ಅವ್ವ ನೀನು ಕೇಳಾ ತಾಯಿ ॥
ಭವವಿಲ್ಲದ ಭಯವಿಲ್ಲದ, ನಿರ್ಭಯ ಚಲುವಂಗೊಲಿದೆ ನಾನು,
ಕುಲಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ,
ಇದು ಕಾರಣ ಚನ್ನಮಲ್ಲಿಕಾರ್ಜುನ ಚಲುವಗಂಡನೆನಗೆ,
ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು.

ಎಂದು ಸ್ಪಷ್ಟವಾಗಿ ಹೇಳಿದ್ದಾಳೆ. ಆಗ್ಗೆ ಪುನಃ ರಾಜನು ತಾಯಿತಂದೆಗಳಿಗೆ ಮರಣ ದಂಡನೆಯ ಶಿಕ್ಷೆಯನ್ನು ವಿಧಿಸುವೆನೆಂದು ಹೇಳಲು ತಂದೆ ತಾಯಿಗಳು ಅಕ್ಕನಿಗೆ—

"ಎಲಿಮಗಳೆ ಮಗಳೆ ನಿನ್ನಯದೂಸರಿಂದೆಮಗೆ
ನೆಲಸಿತ್ತು ದುರ್ಮರಣವೇನೆಂಬೆ ವೃದ್ಧರಿಗೆ
ಪೊಸತು ನಿನ್ನಯ ಭಕ್ತಿ ತಾನೆಮಗೆ ಸಂಕಟಂ
ವಸುಧೆಯೊಳು ಭವಿಯೊಳಗೆ ಬಾಳದೇನುತ್ಕಟಂ
ಕಾರಿಕಾಲಮ್ಮ ತಾಂ ಭವಿಯೊಳಗೆ ಬಾಳಳೇ
ಎಲೆಲೇ ವೈಜಕ್ಕವ್ವೆ ಭವಿಗೆ ಪುದುಪೋಗಳೇ
ಎಲೆಲೆ ಮಾಂಗಾಯಕ್ಕ ಪಾಂಡ್ಯನೊಡಗೂಡಳೇ

ಎಂದು ಅನೇಕ ಉದಾಹರಣೆಗಳನ್ನು ತೋರಿಸಲು ಮತಿಗಾಣದವಳಾಗಿ ಹೇಗಾದರೂ ಕೌಶಿಕನ ಭೀತಿಯಿಂದ ಕಾಯಬೇಕೆಂದು ಕೆಲವು ನಿಯಮಗಳಿಂದ ಕೌಶಿಕನೊಡನೆ ವಿವಾಹಕ್ಕೆ ಒಪ್ಪಿದಳು. ಮತ್ತು ಕೌಶಿಕನ ಮನೆಯಲ್ಲಿ ಕಾಲಿಟ್ಟಳು. ಎಲ್ಲರಂತೆ ಸಾಮಾನ್ಯ ಸ್ತ್ರೀಯಳಲ್ಲ. ಅಕ್ಕನ ವೈರಾಗ್ಯ ಬೀಜವು ಮೊದಲೇ ಅಂಕುರಿಸಿತ್ತು. ಈಗ ಅದಕ್ಕೆ ಮತ್ತಿಷ್ಟು ಕಳೆಯೇರಿತು.

ಅವಳು ಕೌಶಿಕನ ಮನೆಯಲ್ಲಿದ್ದು ಶಿವಪೂಜೆಯಲ್ಲಿ ನಿರತಳಾದದ್ದನ್ನು ಹರಿಹರನು ಬಹು ಚನ್ನಾಗಿ ವರ್ಣಿಸಿದ್ದಾನೆ. ಅವಳು ಪ್ರತಿನಿತ್ಯ ಪರಿಮಳೋದಕದಿಂದ ಸ್ನಾನ ಮಾಡಿ ಬಿಳಿಯ ಮಡಿಯನುಟ್ಟು ಸಂಪಿಗೆ, ಮಲ್ಲಿಗೆ, ಜಾಜಿ ಮೊದಲಾದ ಸುಗಂಧ ಪುಷ್ಪಗಳನ್ನು ಮುಡಿದು ನಾನಾವಿಧ ತಳಿರು ತೋರಣಗಳಿಂದಲೂ ಕುಂಕುಮ ಕೇಸರಿಗಳ ಸಾರಣೆಕಾರಣೆಗಳಿಂದಲೂ ಶೋಭಾಯಮಾನವಾದ ಶಿವಪೂಜಾಮಂದಿರವನ್ನು ಸುವರ್ಣದ ಪಾದುಕೆಗಳನ್ನು ಧರಿಸಿ ಪ್ರವೇಶಿಸುವಳು. ಅಲ್ಲಿ ಮೊದಲು ಮಾನಸ ಪೂಜೆಯಂ ಮಾಡಿ ಶಾಂತಚಿತ್ತಳಾಗಿ ನಾನಾವಿಧ ಪೂಜೆಯ ಸಾಹಿತ್ಯದಿಂದ ತನ್ನಿಷ್ಟದೇವನಾದ ಚನ್ನಮಲ್ಲಿಕಾರ್ಜುನನನ್ನು ಪೂಜಿಸುವಳು. ಇಷ್ಟದೇವತೆಯಲ್ಲಿ ಭಕ್ತಿಯಿಂದ ಅಕ್ಕನು ತನ್ನದೊಂದು ವಚನದಲ್ಲಿ ಹೀಗೆ ಹೇಳಿದ್ದಾಳೆ.—

"ಸಜ್ಜನಳಾಗಿ ಮಜ್ಜನಕ್ಕೆರೆಯುವೆ ।
ಶಾಂತಳಾಗಿ ಪೂಜೆಯ ಮಾಡುವೆ ।
ಸಮರತಿಯಿಂದ ನಿಮ್ಮ ಪಾಡುವೆ ।
ಚನ್ನಮಲ್ಲಿಕಾರ್ಜುನಾ ॥"

ಎಂಬುವಂತೆ ಪೂಜಿಸಿ ಅನೇಕ ರೀತಿಯಿಂದ ನಲಿದಾಡಿ ಆನಂದದಿಂದ ಪಾಡುವಳು.

"ಬಾರಗುರುವೆ ಬಾರಪರವೆ ಬಾರವರವೆ ಮಲ್ಲಿನಾಥ
ಬಾರಧನವೆ ಬಾರಸುಕೃತಸಾರ ಬಾರ ಮಲ್ಲಿನಾಥ
ಬಾರಸಿದ್ಧ ಭವವಿರುದ್ಧ ಸುಪ್ರಸಿದ್ಧ ಮಲ್ಲಿನಾಥ
ಬಾರ ಮುಡುಹು ಮುಂದಲೆಗಳ ಕುರುಳ ನೀವೆ ಮಲ್ಲಿನಾಥ
ಬಾರೆನುತ್ತ ಪೂವನಿತ್ತು ಮತ್ತೆ ಸೊಡಮುಡುತ್ತ ಕರೆಯೆ
ಬಾರ ನಿನ್ನ ತೊತ್ತು ಭೃತ್ಯಳಾನೆನುತ್ತ ಮತ್ತೆ ಕರೆಯೆ

ಈ ಪ್ರಕಾರವಾಗಿ ಅಕ್ಕನು ಭಕ್ತಿಪರವಶಳಾಗಿ ಸ್ತೋತ್ರವನ್ನು ಗೈಯ್ಯಲು ನಿಶ್ಯಾನ್ಯನಾದ ದೇವನು ಕಾಣಿಸಿಕೊಳ್ಳುತ್ತಿದ್ದನೆಂಬುವದು ಆಕೆಯ ಒಂದೆರಡು ವಚನಗಳಿಂದ ಗೋಚರವಾಗುವದು. ಆ ಕಾಲಕ್ಕೆ ಆನಂದ ಪರವಶಳಾಗಿ ತನ್ನ ಅಕ್ಕಪಕ್ಕದಲ್ಲಿದ್ದ ಸಖಿಯರನ್ನು ಕುರಿತು ಪರಮಾತ್ಮನ ಕುರುಹನ್ನು ಹೇಳುತ್ತಾಳೆ.

(೧) "ಅಕ್ಕ ಕೇಳವ್ವ ಅಕ್ಕಯ್ಯ ನಾನೊಂದ ಕನಸ ಕಂಡೆ
ಅಕ್ಕಿ ಅಡಕಿ ತೆಂಗಿನಕಾಯಿಯ ಕಂಡೆ
ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲಗೊರವನು ಭಿಕ್ಷ
ಕ್ಕೆ ಬಂದುದ ಕಂಡೆನವ್ವ ಮಿಕ್ಕುಮೀರಿ ಹೋಹನ
ಬೆಂಬತ್ತಿ ಕೈಹಿಡಿದೆನು"

(೨) ಇಂದೆನ್ನ ಮನೆಗೆ ಗಂಡ ಬಂದಿಹನೆಲಗವ್ವಾ
ನಿಮುಸಿಮುಗೆಲ್ಲ ಶೃಂಗಾರವ ಮಾಡಿಕೊಳ್ಳಿ
ಚನ್ನಮಲ್ಲಿಕಾರ್ಜುನನೀಗಳೆ ಬಂದಿಹನು
ಇದಿರುಗೊಳ್ಳಿ ಬನ್ನಿರೇ ಅವ್ವಗಳಿರಾ

ಎಂಬುದಾಗಿ ಆನಂದಭರದಲ್ಲಿ ಹೇಳುತ್ತಾಳೆ. ಅವನಿಗೆ ನಾನಾಪ್ರಕಾರದ ಮೃಷ್ಟಾನ್ನಗಳನ್ನು ನೈವೇದ್ಯ ಮಾಡಿ ತಾನು ಸುಖವಾಗಿರುವಾಗ, ಕೌಶಿಕನು ತನ್ನ ನಡೆಯನ್ನು ಮೆಚ್ಚದಿರಲು ತನ್ನ ವಿವಾಹವಾದ ಬಗ್ಗೆ ಬಹುಪರಿಯಾಗಿ ಕಷ್ಟದಿಂದ ನಿಂದಿಸಿಕೊಂಡಿದ್ದಾಳೆ.

ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ
ತನ್ನ ನೂಲು ತನ್ನ ಸುತ್ತಿ ಸಾವತೆರನಂತೆ
ಮನ ಬಂದುದ ಬಯಸಿ ಬೇವುತಿದ್ದೆನೇ ಅಯ್ಯ
ಎನ್ನ ಮನದ ನಿರಾಶ ನಿವಾರಿಸಿ ನಿಮ್ಮತ್ತ ತೋರಾ
ಚನ್ನಮಲ್ಲಿಕಾರ್ಜುನಾ.

ಇದೊಂದೆ ವಚನದಿಂದ ಆವಳಿಗೆ ಬಂದ ಕಷ್ಟವು ದ್ಯೋತಕವಾಗುತ್ತದೆ ಕೌಶಿಕನು ಹೇಗಾದರೂ ಅಕ್ಕನು ತನ್ನ ವಶಳಾಗಲು ಮಾಡುವಂತೆ ತನ್ನಂತಃಪುರದ ಸಖಿಯರಿಗೆ ಹೇಳಲು ಅವರಿಗೆ ಚನ್ನಾಗಿ ಮುಖಭಂಗವಾಗುವಂತೆ ಉತ್ತರವನ್ನಿತ್ತಿರುವಳು.

೧. ಗಿರಿಯುಲ್ಲದೆ ಹುಲ್ಲುಮೊರಡಿಗಳಲ್ಲಾಡುವದೇ ನವಿಲು
ಕೊಳನಲ್ಲದೆ ಕಿರುವಳ್ಳಕ್ಕೆಳಸುವದೇ ಹಂಸೆ
ಮಾಮರತಳಿತಲ್ಲದೆ ಸ್ವರಗೈವುದೆ ಕೋಗಿಲೆ
ಪರಿಮಳವಿಲ್ಲದ ಪುಷ್ಪಕ್ಕೆಳಸುವದೇ ಭ್ರಮರ
ಎನ್ನದೇವ ಚನ್ನಮಲ್ಲಿಕಾರ್ಜುನನಲ್ಲದೆ ಅನ್ಯಕ್ಕೆ
ಳಸುವದೇ ಎನ್ನಮನ ಕೇಳಿರೇ ಕೆಳದಿಯರೇ

೨. ಬಂಜೆ ಬೇನೆಯನರಿಯಳು, ಬಲತಾಯಿ
ಮುದ್ದುಬಲ್ಲಳೇ? ನೊಂದ ನೋವ ನೋಯದವರೆತ್ತ
ಬಲ್ಲರು? ಚನ್ನಮಲ್ಲಿಕಾರ್ಜುನ ನೀನಿರಿದಲಗು
ಒಡಲಲ್ಲಿ ಮುರಿದು ಹೊರಳುವಳ ನೀವೆತ್ತ
ಬಲ್ಲಿರೇ ಎಲೆ ತಾಯಿಗಳಿರಾ?

ಎಂದು ಹೇಳಿ ಅವರಿಗೆ ಅವಮಾನ ಮಾಡಿದ್ದಾಳೆ. ಕೌಶಿಕನ ಮೂ
ತಪ್ಪುಗಳನ್ನು ಒಪ್ಪಿಸಿ ನಂತರ ಆಕೆಯು ಅರಮನೆಯನ್ನು ಬಿಟ್ಟು ಹೊ
ಡುವಳು. ಆಗ್ಗೆ ಎನ್ನ ಗಂಡ ಚನ್ನಮಲ್ಲಿಕಾರ್ಜುನನೆಂಬುದನ
ವ್ಯಂಗ್ಯೋಕ್ತಿಗಳಿಂದ ಬಹು ಸರಸವಾಗಿ ಹೇಳಿದ್ದಾಳೆ.

"ಮಂಗಳವೇ ಮಜ್ಜನವೆನಗೆ ವಿಭೂತಿಯೇ
ಒಳಗುಂದದ ಅರಿಷಿಣವೆನಗೆ
ದಿಗಂಬರವೇ ದಿವ್ಯಾಂಬರವೆನ"ಗೆಂದು ಧಿಕ್ಕರಿಸಿ ಹೊರಟದ್ದಾ

ಆ ಮೇಲೆ ಆಕೆಯು ಹಸಿವೆ, ನೀರಡಿಕೆಗಳ, ಗಾಳಿ, ಮಳೆ, ಶೀ
ಉಷ್ಣ, ಮೊದಲಾದ ದ್ವಂದ್ವಗಳನ್ನು ಲಕ್ಷಿಸದೆ ಕಲ್ಯಾಣ ಪಟ್ಟಣ
ಬಂದಳು.

ಅಲ್ಲಿ ಬಸವ, ಚನ್ನಬಸವ, ಅಲ್ಲಮರೊಡನೆ ಅನೇಕ ರೀತಿಯಿಂ
ಶಿವಾನುಭವ ಮಂಟಪದಲ್ಲಿ ವಾದ ಮಾಡಿದ್ದಾಳೆ. ಅದನ್ನು ಒಂ
ರಡು ವಚನಗಳಿಂದ ತೋರಿಸುತ್ತೇನೆ. ಸರ್ವ ಪ್ರಮಥರು ಕುಳಿ
ಕಾಲಕ್ಕೆ ಕೇಶಾಂಬರಧಾರಿಯಾದ ಮಹಾದೇವಿಯು ಬರಲು ಈ ಪ್ರಕಾ
ಕೇಳುತ್ತಾನೆ.

ಸತಿ ಇತ್ತಲೇಕೆ ಬಂದಿಯವ್ವ? ಸತಿಯೆಂದರೆ ಮುನಿವರು ಎ
ಶರಣರು. ನಿನ್ನ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು. ಇ

ದಿದ್ದರೆ ತೊಲಗು ತಾಯಿ. ನಮ್ಮ ಗುಹೇಶ್ವರನ ಶರಣರಲ್ಲಿ ಸಂಗಸುಖ ಸನ್ನಿಹಿತವ ಬಯಸುವರೆ ನಿನ್ನ ಪತಿಯಾರೆಂಬುದ ಹೇಳಿ ಎಲೆ ಅವ್ವಾ.

ಅಕ್ಕ—ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತ ಕಾಲ ತಪಸಿದ್ದೆ ನೋಡಾ. ಹಸಿಯ ಮೇಲಣ ಮಾತು ಬೆಸಗೊಳ್ಳಲಟ್ಟಿದರೆ ಶಶಿಧರನ ಹತ್ತರ ಕಳುಹಿದರೆಮ್ಮವರು.

ಗುರುವೇ ತೆತ್ತಿಗನಾದ. ಲಿಂಗವೇ ಮದುವಳಿಗನಾದ. ನಾನೇ ಮದುವಳಿಗೆಯಾದೆನು. ಇದು ಕಾರಣ ಚನ್ನಮಲ್ಲಿಕಾರ್ಜುನ ಗಂಡ ನೆನಗೆ ಮಿಕ್ಕಿದ ಲೋಕದ ಗಂಡರ ಸಂಬಂಧವಿಲ್ಲವಯ್ಯಾ ಪ್ರಭುವೇ

ಎಂದು ಹೇಳಲು ಈಕೆಯ ದಿವ್ಯ ಜ್ಞಾನವನ್ನು ಕಂಡು ಪ್ರಭುವು ಆಶ್ಚರ್ಯಪಟ್ಟು—

ಅಲ್ಲಮ— ನಾ ಸತ್ತೆನೆಂದು ಹೆಣ ಕೂಗುವದುಂಟೆ? ಬಚ್ಚಿಟ್ಟ ಬಯಕೆಯು ಕರೆದುದುಂಟೆ? ಹೆಪ್ಪಿಟ್ಟ ಹಾಲು ಸಿಹಿಯಪ್ಪುದುಂಟೇ? ಈ ಮಾತು ಒಪ್ಪುವಪ್ಪುದೇ ಗುಹೇಶ್ವರಲಿಂಗಕ್ಕೆ?

ಅಕ್ಕ:-- ಸತ್ತ ಹೆಣ ಕೂಗುವದುಂಟು. ಬಚ್ಚಿಟ್ಟಬಯಕೆ ಕರೆದು ದುಂಟು. ಹೆಪ್ಪಿಟ್ಟಹಾಲು ಗಟ್ಟಿಗೊಂಡು ಸಿಹಿಯಾದುದುಂಟು. ಇದು ನಿಶ್ಚೈಸಿ ನೋಡಿ ಚನ್ನಮಲ್ಲಿಕಾರ್ಜುನಲಿಂಗದಲ್ಲಿ.

ಅಂದಕೂಡಲೇ ಪ್ರಭುವು ಇದನ್ನು ಸ್ಪಷ್ಟವಾಗಿ ಬಿಡಿಸೆಂದಾಕ್ಷಣವೇ ಅಕ್ಕನು.

ಮರೆದೊರಗಿ ಕನಸು ಕಂಡು ಹೇಳುವಲ್ಲಿ ಸತ್ತ ಹೆಣ ಎದ್ದಿತ್ತು. ಋಣನಿಧಾನ ಎದ್ದು ಕರೆಯಿತ್ತು. ಹೆಪ್ಪಿಟ್ಟ ಹಾಲು ಗಟ್ಟಿದುಪ್ಪವಾಗಿ ಸಿಹಿಯಾಗಿತ್ತು. ಇದಕ್ಕೆ ತಪ್ಪ ಸಾಧಿಸಲೇಕೆ ಚನ್ನಮಲ್ಲಿಕಾರ್ಜುನದೇವರ ದೇವನಣ್ಣಗಳಿರಾ?

ಈ ದಿವ್ಯಜ್ಞಾನವನ್ನು ನೋಡಿ ಸರ್ವರು ಆಶ್ಚರ್ಯಗೊಂಡರು. ಅಕ್ಕನ ವಚನವು ಸರ್ವರಿಗೂ ಶ್ರೇಷ್ಠತರಗಳಾದವು. ಆಕೆಯನ್ನು ಎಲ್ಲರೂ ಅನೇಕ ರೀತಿಯಲ್ಲಿ ಕೊಂಡಾಡಿದ್ದಾರೆ.

ಅಂಗನೆ ಅಂಗನೆ ರೂಪಲ್ಲದೆ, ಮನವಸ್ತು ಭಾವದಲ್ಲಿ
ಬೆಚ್ಚಂತೆ ಇಪ್ಪುದು. ಬಂದ ಕಥನದಲ್ಲಿ ಬಂದು

ಹಿಂಗಿದೆಯುಲ್ಲಾ. ಅಕ್ಕ ಗುಹೇಶ್ವರಲಿಂಗದಲ್ಲಿ, ಉಭ
ಯನಾಸ್ತಿ. ಮನವಳಿದೆ ಎನ್ನಕ್ಕ.

ಎಂದು ಪ್ರಭುದೇವರು.

ಹೆಂಗುಸಿನಂಗವ ನೋಡಿರಿ ಪುರಾತನರು. ಬಾಲಿತ
ನದಂಗವ ನೋಡಿರಿ ಪುರಾತನರು, ಬ್ರಹ್ಮವನಾಚರಿಸಿ
ಮರೆದಪ್ಪುದ ನೋಡಿರಿ ಲಿಂಗವಂತರು ತನ್ನಲ್ಲಿ ತಾನು
ನಿಶ್ಚಯುವಾಗಿ ಭಾಷೆಬೇಸರವೋಗದೆ ಇಪ್ಪ ಇರವು
ಕೂಡಲಸಂಗಮದೇವರಲ್ಲಿ ನಮ್ಮ ಮಹಾದೇವಿಯು
ಕ್ಕಂಗಾಯಿತ್ತು. ಎಂದು ಬಸವಣ್ಣನು.

ಅಜಕೋಟಿ ವರುಷದವರೆಲ್ಲರು ಹಿರಿಯರೇ? ಹುತ್ತೇ
ರಿ ಬೆತ್ತಬೆಳೆದ ತಪಸ್ವಿಗಳೆಲ್ಲರು ಹಿರಿಯರೇ? ನಡು
ಮುರಿದು ಗುಡಗೂರಿ ತಲೆಬಾಗಿ, ನೆರೆತೆರೆ ಹೆಚ್ಚಿ
ಮತಿಗೆಟ್ಟು ಒಂದ ನಾಡಹೋಗಿ ಒಂಭತ್ತನಾಡುವ
ಅಜ್ಞಾನಿಗಳೆಲ್ಲರು ಹಿರಿಯರೇ? ಅನುವರಿದು ಘನವ
ಮರೆದು ಹಿರಿದುಕಿರಿದೆಂಬ ಭೇದವ ಮರೆದು ಕೂಡ
ಲಚನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿ
ಯತನ ಮಹಾದೇವಿಯಕ್ಕಂಗಾಯಿತ್ತು ಎಂದು
ಚನ್ನಬಸವಣ್ಣನವರು ಕೊಂಡಾಡಿದ್ದಾರೆ.

ಮತ್ತು ಆಕೆಯ ವಚನಕ್ಕೆ ಎಲ್ಲ ಪುರಾತನರು ಒಳ್ಳೇ ಪ್ರಾಶಸ್ತ್ಯ ಕೊಟ್ಟಿದ್ದಾರೆ.

"ಆದ್ಯರ ಅರವತ್ತು ವಚನಕ್ಕೆ ದಂಡನಾಯಕನ
ಇಪ್ಪತ್ತು ವಚನ, ದಂಡನಾಯಕನ ಇಪ್ಪತ್ತು ವ
ಚನಕ್ಕೆ ಪ್ರಭುದೇವರ ಹತ್ತು ವಚನ,
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು
ವಚನ, ಅಜಗಣ್ಣನ ಐದು ವಚನಕ್ಕೆ ನಮ್ಮ
ಅಕ್ಕಮಹಾದೇವಿಯ ಒಂದು ವಚನ ಸರಿ ಕಾಣಾ
ಕೂಡಲಚನ್ನಸಂಗಮದೇವ.

ಅಂದಮೇಲೆ ಅಕ್ಕನ ಜ್ಞಾನ, ವೈರಾಗ್ಯ. ಮೊದಲಾದವು ಅತ್ಯಂತ ಶ್ರೇಷ್ಠವಾಗಿದ್ದವು. ಈಕೆಯು ಬಸವಣ್ಣನಿಂದ ಭಕ್ತಿಯನ್ನೂ ಪ್ರಭುವಿ

ನಿಂದ ವೈರಾಗ್ಯವನ್ನೂ ಚನ್ನಬಸವಣ್ಣನಿಂದ ಜ್ಞಾನವನ್ನೂ ಸಂಪಾದಿಸಿದ ಳೆಂದು ಆಕೆಯ ವಚನಗಳಿಂದ ತಿಳಿಯುತ್ತದೆ. ಬಸವಣ್ಣನನ್ನು ಅನೇಕ ರೀತಿಯಿಂದ ಹಾಡಿಹರಿಸಿದ್ದಾಳೆ.

ಎನ್ನಂಗದಲ್ಲಿ ಆಚಾರವ ತೋರಿದನಯ್ಯ ಬಸವಣ್ಣನು. ಆಚಾರವೇ ಲಿಂಗವೆಂದರುಹಿದನಯ್ಯ ಬಸವಣ್ಣನು. ಎನ್ನ ಪ್ರಾಣದಲ್ಲಿ ಅರಿವ ತೋರಿದನಯ್ಯ ಬಸವಣ್ಣನು. ಅರಿವೇ ಜಂಗಮವೆಂದು ಅರುಹಿದನಯ್ಯ ಬಸವಣ್ಣನು.

ಕಾಮನ ಗೆಲಿದೆನು ಬಸವಾ ನಿಮ್ಮ ದಯೆಯಿಂದ
ಸೋಮಧರನ ಹಿಡಿತಪ್ಪೆನು ಬಸವಾ ನಿಮ್ಮ ಕೃಪೆಯಿಂದ
ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು
ಭಾವಿಸಲು ಗಂಡುರೂಪು. ಬಸವಾ ನಿಮ್ಮ ದಯೆ
ಯಿಂದ ಅತಿಕಾಮಿ ಚನ್ನಮಲ್ಲಿಕಾರ್ಜುನಂಗೆ
ತೊಡರನಿಕ್ಕಿ ಎರಡು ಅರಿಯದೆ ಕೂಡಿದೆನು ಬಸವಾ
ನಿಮ್ಮ ಕೃಪೆಯಿಂದ.

ಎಂದು ಕೊಂಡಾಡಿದ್ದಾಳೆ. ಮತ್ತು ಅಕ್ಕನ ವಾಕ್ಯಗಳು ಅಷ್ಟು ಮಹತ್ವದವೇ ಆಗಿವೆ ಎಂಬುವದನ್ನು ಒಂದು ವಚನದಲ್ಲಿ ತಿಳಿಸುತ್ತೇನೆ.

"ಆಕಾರವಿಲ್ಲದ ನಿರಾಕಾರಲಿಂಗವ ಕೈಯಲ್ಲಿ ಹಿಡಿದು ಕೊರಳಲ್ಲಿ ಕಟ್ಟಿದೆವೆಂಬರು ನರಜೀವಿಗಳು. ಹರಿಬ್ರಹ್ಮರು ವೇದಶಾಸ್ತ್ರಂಗಳರಸಿ ಕಾಣದಲಿಂಗ. ಭಕ್ತಿಗೆ ಫಲಪದಂಗಳಲ್ಲದೆ ಲಿಂಗವಿಲ್ಲ. ಕರ್ಮಕ್ಕೆ ನರಕವಲ್ಲದೆ ಲಿಂಗವಿಲ್ಲ. ವೈರಾಗ್ಯಕ್ಕೆ ಮುಕ್ತಿಯಲ್ಲದೆ ಲಿಂಗವಿಲ್ಲ. ಜ್ಞಾನಕ್ಕೆ ಪರಿಭ್ರಮಣವಲ್ಲದೆ ಲಿಂಗವಿಲ್ಲ. ಇದು ಕಾರಣ ಅದ್ವೈತದಿಂದ ತನ್ನ ತಾನರಿದು ತಾನಾದರೆ ಚನ್ನಮಲ್ಲಿಕಾರ್ಜುನ ತಾನೇಬೇರಿಲ್ಲ."

ಇದರರ್ಥವು ಬಹು ಮನೋಹರವೂ, ಗೂಢವೂ ಇರುವದು. ಜ್ಞಾನೇಂದ್ರಿಯಗಳಿಗೆ ಗೋಚರವಾಗದ (ಪರಮಾತ್ಮ) ನಿರಾಕಾರ ವಸ್ತುವನ್ನು ಸಾಕಾರವಾಗಿ (ಇಷ್ಟಲಿಂಗವಾಗಿ) ಧರಿಸುವೆವೆನ್ನುವರು. ಈ ಲಿಂಗವು ಸಾಕಾರವಾಗಿದ್ದು ಹರಿಬ್ರಹ್ಮಾದಿಗಳಿಗೂ ಆದ್ಯಂತವನ್ನು ತಿಳಿ

ಯುಲಾಗಲಿಲ್ಲ. ಭಕ್ತಿಯುಳ್ಳವರಿಗೆ ಸ್ವರ್ಗ, ಕೈಲಾಸರೂಪವಾದ ಫಲಗಳು ದೊರಕುವವು. ಯಜ್ಞಯಾಗಾದಿ ಕರ್ಮಕಾಂಡಿಗಳಿಗೆ ತಕ್ಕ ಲಾಭವಲ್ಲದೆ ಲಿಂಗ ದೊರಕಲಾರದು. ವೈರಾಗ್ಯವುಳ್ಳವರಿಗೆ ಮೋಕ್ಷ ದೊರಕುವದು. 'ಅಹಂಬ್ರಹ್ಮಾಸ್ಮಿ' ಎಂಬುವ ಜ್ಞಾನವುಳ್ಳವರಿಗೆ ಅದಕ್ಕೆ ಸರಿಯಾಗಿ ಆಚರಿಸದಿದ್ದರೆ ನರಕವಲ್ಲದೆ, ಇದುಕಾರಣ ದ್ವೈತವಲ್ಲದೆ ದೇಹವೇ ಇಷ್ಟಲಿಂಗ, ಆತ್ಮವೇ ಪ್ರಾಣಲಿಂಗ, ಜೀವವೇ ಭಾವಲಿಂಗವೆಂದು ಯಾರು ವರ್ತಿಸುವರೋ ಅವರೇ ಲಿಂಗಸ್ವರೂಪರು. ತಾವೇ ಲಿಂಗವೆಂಬುವ ಜ್ಞಾನವುಳ್ಳವರು. ಅಂಥ ಅವಿರಳ ಪರಂಜ್ಯೋತಿ ಸ್ವರೂಪದ ಜ್ಞಾನವು ನಮ್ಮ ಅಕ್ಕನಿಗೆ ಇತ್ತು. ಅಂತೆಯೇ ಆಕೆಗೆ ಕಲ್ಯಾಣದಿಂದ ಹೊರಟು ಶ್ರೀಶೈಲಕ್ಕೆ ಹೋಗುವಾಗ ದಾರಿಯಲ್ಲಿ ಸಕಲ ವಸ್ತುಗಳು ಶಿವಮಯವಾಗಿ ಕಂಡಿರುತ್ತವೆಂಬುವದು ವಚನಗಳಿಂದ ತಿಳಿಯುವದು.

"ವನವೆಲ್ಲ ನೀನೇ ದೇವಾ. ವನದೊಳಗಿರುವ ತರುಗಳೆಲ್ಲ ನೀನೇ ದೇವಾ. ತರುಮರಾದಿಗಳಲ್ಲಾಡುವ ಮೃಗಗಳೆಲ್ಲ ನೀನೇ ದೇವಾ. ಚನ್ನಮಲ್ಲಿಕಾರ್ಜುನ ಸರ್ವತೋ ಮುಖವಾಗಿ ಮುಖದೋರಾ"

ಈ ಪ್ರಕಾರವಾಗಿ ಅಕ್ಕನು ಚನ್ನನನ್ನು ಸ್ಮರಿಸುತ್ತ ಅರಸುತ್ತ, ಹುಡುಕುತ್ತ ತನ್ನತಾನರಿದು, ಚನ್ನನನ್ನು ಕೂಡಿ ಬದುಕಿದಳು. ಚಿರಂಜೀವಿಯಾದಳು. ದೇವಪುತ್ರಿಯೆನ್ನಿಸಿಕೊಂಡಳು. ಚನ್ನನ ದಿವ್ಯಜ್ಯೋತಿಯಲ್ಲಿ ಅಕ್ಕನ ಆತ್ಮವು ಲೀನವಾಯಿತು. ಅಕ್ಕನು ವೈರಾಗ್ಯದ ಶಿರೋಮಣಿಗಳಲ್ಲಿ ಅಗ್ರೇಸರಳಾಗಿರುವಳು. ಅವಳೇ ನಿಜವಾದ ವಿರಾಗಿಣಿಯು. ಇವಳ (ಹಬ್ಬವನ್ನು) ಜಯಂತಿಯನ್ನು ಆಚರಿಸಿ ಆ ಮಹಾತ್ಮರ ದಿವ್ಯಜ್ಞಾನ ಜ್ಯೋತಿಯನ್ನು ಹೊಂದಲು ಪ್ರಯತ್ನಿಸಬೇಕು. ಅಕ್ಕನೆಂದರೆ ವೀರಶೈವರಿಗೆಲ್ಲಾ ಹಿರಿಯಕ್ಕ. ವೀರಶೈವ ಸಹೋದರಿಯರೆಲ್ಲಾ ಅಕ್ಕನ ವಚನಗಳನ್ನು ಪಠಿಸಿ ಅದರಂತೆ ಆಚರಿಸಲು ಯತ್ನಿಸಬೇಕೆಂದು ನನ್ನ ಸವಿನಯ ವಿನಂತಿಯು.

---

# ವೇದ ಮತ್ತು ವೀರಶೈವಮತ.

(ಮೈಸೂರಿನಲ್ಲಿರತಕ್ಕ ಡಿವೈನ್ ಲೈಫ್ ಸೊಸೈಟಿ ಪ್ರೆಸಿಡೆಂಟರಾದ
ಶ್ರೀ|| ಎಂ. ಎಲ್. ನಾಗಣ್ಣನವರಿಂದ)



ವೀರಶೈವ ಮತೀಯರಲ್ಲಿ ಪಂಡಿತರೆನಿಸಿಕೊಂಡಿರುವರಲ್ಲಿ ಕೆಲವರು ಪ್ರಪಂಚಸೃಷ್ಟಿಯ ಆದಿಯಲ್ಲಿ ಮನುಷ್ಯರು ಕಾಡುಮೃಗಗಳಂತೆ ಇದ್ದು ಬರಬರುತ್ತಾ ಅವರ ಜ್ಞಾನವು ವೃದ್ಧಿಯಾಗಿ ತತ್ವಜ್ಞಾನವನ್ನು ಹೊಂದಿ ತಮ್ಮ ಅನುಭವವನ್ನು ಇತರರಿಗೆ ಬೋಧಿಸಿದ್ದನ್ನೇ ಜನಗಳು ವೇದ, ಆಗಮ ಮತ್ತು ಉಪನಿಷತ್ತುಗಳೆಂದು ಕರೆಯಹತ್ತಿದರೆಂದೂ, ಮತ್ತು ಇವುಗಳ ಕಾಲವನ್ನು ತಿಳಿಯದೆ ಯಾವದೋ ಒಂದು ನಂಬಿಕೆಯಿಂದ ಇವು ಈಶನಿರ್ಮಿತಗಳೆಂದು ಪ್ರಚಾರಕ್ಕೆ ಬಂದಿರುತ್ತವೆಂದೂ, ಇನ್ನು ಕೆಲವರು ವೀರಶೈವರಿಗೆ ವೇದವು ಪ್ರಮಾಣವಲ್ಲವೆಂದೂ, ಶಿವಶರಣರ ಅನುಭವವೇ ಅಂದರೆ ಅವರ ವಚನಗಳೇ ಪ್ರಮಾಣವೆಂದೂ, ಇನ್ನು ಕೆಲವರು ವೀರಶೈವ ಮತವು ವೈದಿಕ ಮತ್ತು ತಾಂತ್ರಿಕ (ಅಂದರೆ ವೇದ ಮತ್ತು ಆಗಮ ಪ್ರಾಮಾಣ್ಯವುಳ್ಳ) ಮತವೆಂದೂ ಅಭಿಪ್ರಾಯವುಳ್ಳವರಾಗಿರುತ್ತಾರೆ. ಈ ರೀತಿಯಾಗಿ ಪಂಡಿತರಾಗಿರತಕ್ಕವರು ಭಿನ್ನಾಭಿಪ್ರಾಯವುಳ್ಳವರಾದುದರಿಂದ ವೀರಶೈವಮತೀಯರಲ್ಲಿ ಶಾಸ್ತ್ರಪರಿಚಯವಿಲ್ಲದೆ ಇರತಕ್ಕವರು ಯಾವ ಪಂಡಿತರು ಹೇಳುವದು ನಿಜ ಎಂಬುದನ್ನು ತಿಳಿಯದೆ ಸಂಶಯದಲ್ಲಿ ಮುಳುಗಿ ಹೋಗುವುದು ಸಹಜವಾಗಿದೆ.

ಮೇಲ್ಕಂಡ ವಿಷಯವನ್ನು ನಿರ್ಧರಿಸುವದಕ್ಕೆ ಮೊದಲು ಈಶ್ವರನೆಂಬವನೊಬ್ಬನಿರುವನೆಂಬುದನ್ನು ನಾವು ವಿಚಾರದಿಂದ ನಿರ್ಧರಿಸಬೇಕು. ನಾವು ನೋಡಿದ ಹಾಗೆ ಈ ಲೋಕದಲ್ಲಿ ಕೆಲವರು ಸುಖಿಗಳಾಗಿಯೂ, ಮತ್ತೆ ಕೆಲವರು ದುಃಖಿಗಳಾಗಿಯೂ ಇರುತ್ತಾರೆ. ಈ ವಿಧವಾದ ವ್ಯತ್ಯಾಸಕ್ಕೆ ಕಾರಣವೇನೆಂದು ವಿಚಾರಿಸಿದರೆ, ಈ ಜನ್ಮದಲ್ಲಿ ನಾವು ಅನುಭವಿಸತಕ್ಕ ಸುಖದುಃಖಗಳಿಗೆ ನಾವು ಹಿಂದೆ ಮಾಡಿದ ಪುಣ್ಯಪಾಪಗಳೇ ಕಾರಣವೆಂದು ಕಂಡುಬರುತ್ತವೆ. ಒಬ್ಬನು ಕಳ್ಳತನವನ್ನು ಮಾಡಿದರೆ ಅವನು ಶಿಕ್ಷೆಯನ್ನು ಹೊಂದುತ್ತಾನೆ. ಅವನು ಹೊಂದತಕ್ಕ ಶಿಕ್ಷೆಗೆ ಅವನ ಕಳ್ಳತನವೇ ಕಾರಣವಾದರೂ ಅವನ ಕಳ್ಳತನವು ಜಡ

ವಾದುದರಿಂದ ಅವನಿಗೆ ಶಿಕ್ಷೆಯನ್ನು ಕೊಡುವದಕ್ಕೆ ಒಬ್ಬ ಚೇತನನಾದ ಮೇಜಸ್ಟ್ರೇಟನ ಅವಶ್ಯಕತೆಯಿರುತ್ತದೆ. ಅದರಂತೆ ನಾವು ಅನುಭವಿಸತಕ್ಕ ಸುಖದುಃಖಗಳಿಗೆ ನಮ್ಮ ಹಿಂದಿನ ಪುಣ್ಯಪಾಪಗಳೇ ಕಾರಣವಾದರೂ ಪುಣ್ಯಪಾಪಗಳು ಜಡವಾದ್ದರಿಂದ ಅವುಗಳ ಫಲವಾದ ಸುಖದುಃಖಗಳನ್ನು ನಮಗೆ ಕೊಡುವದಕ್ಕೆ ಒಬ್ಬ ಚೇತನನ ಅವಶ್ಯಕತೆಯಿರುತ್ತದೆ. ಅವನೇ ಈಶ್ವರನು. ನಮಗೆ ಪ್ರಥಮ ಜನ್ಮವೇ ಇಲ್ಲ. ಅಂದರೆ ನಾವು ಹುಟ್ಟುವದು ಮತ್ತು ಸಾಯುವದು ಪ್ರವಾಹತಃ ಅನಾದಿಯಾಗಿದೆ. ಒಂದು ವೇಳೆ ನಾವು ಪ್ರಥಮ ಜನ್ಮವನ್ನು ಒಪ್ಪಿಕೊಳ್ಳುವದಾದರೆ ಆ ಪ್ರಥಮ ಜನ್ಮಕ್ಕೆ ಹಿಂದೆ ನಾವು ಇರಲಿಲ್ಲವೆಂದೂ ಮತ್ತು ಯಾವ ಕರ್ಮವನ್ನೂ ಮಾಡಲಿಲ್ಲವೆಂದೂ ಹೇಳಬೇಕಾಗುತ್ತದೆ. ಆದ್ದರಿಂದ ಕರ್ಮವೆಂಬ ಕಾರಣವಿಲ್ಲದೆ ಪ್ರಥಮ ಜನ್ಮವು ಬಂದಂತಾಗುತ್ತದೆ. ಲೋಕದಲ್ಲಿ ಕಾರಣವಿಲ್ಲದ ಕಾರ್ಯವನ್ನು ಯಾರೂ ನೋಡಿಲ್ಲವಾದುದರಿಂದ ಕರ್ಮವೆಂಬ ಕಾರಣವಿಲ್ಲದೆ ಇರುವ ಪ್ರಥಮ ಜನ್ಮವು ಅಸಂಭವನೀಯವು.

ಇದರಂತೆ ಪ್ರಪಂಚದ ಸೃಷ್ಟಿ ಮತ್ತು ಪ್ರಳಯಗಳು ಪ್ರವಾಹತಃ ಅನಾದಿಯಾಗಿವೆ. ಒಂದು ವೇಳೆ ಪ್ರಥಮ ಸೃಷ್ಟಿಯನ್ನು ನಾವು ಒಪ್ಪುವುದಾದರೆ ಹಿಂದೆ ಪ್ರಪಂಚವಿರಲಿಲ್ಲವೆಂದೂ, ಪ್ರಥಮ ಸೃಷ್ಟಿಯ ಆದಿಯಲ್ಲಿರತಕ್ಕ ಜೀವರು ಹಿಂದೆ ಯಾವ ಕರ್ಮಗಳನ್ನೂ ಮಾಡಿರಲಿಲ್ಲವೆಂದೂ ಹೇಳಬೇಕಾಗುತ್ತದೆ. ಪ್ರಪಂಚವು ಘಟದಂತೆ ಒಂದು ಕಾರ್ಯವಾದುದರಿಂದ ಘಟವನ್ನು ರಚಿಸಿದ ಕುಂಬಾರನು ಹೇಗೆ ಇರಬೇಕೋ ಹಾಗೆಯೇ ಪ್ರಪಂಚವನ್ನು ಸೃಷ್ಟಿ ಮಾಡುವುದಕ್ಕೆ ಒಬ್ಬ ಈಶ್ವರನು ಇರಲೇಬೇಕೆಂದು ಸಿದ್ಧವಾಗುತ್ತದೆ. ಈಶ್ವರನು ಪ್ರಪಂಚವನ್ನು ಸೃಷ್ಟಿ ಮಾಡುವಾಗ ಕೆಲವು ಜೀವರನ್ನು ಮನುಷ್ಯರನ್ನಾಗಿಯೂ, ಕೆಲವು ಜೀವರನ್ನು ಮೃಗಗಳನ್ನಾಗಿಯೂ, ಇನ್ನು ಕೆಲವು ಜೀವರನ್ನು ಕ್ರಿಮಿಕೀಟಕಗಳನ್ನಾಗಿಯೂ, ಇವರಲ್ಲಿ ಕೆಲವರನ್ನು ಸುಖಿಗಳನ್ನಾಗಿಯೂ ಕೆಲವರನ್ನು ದುಃಖಿಗಳನ್ನಾಗಿಯೂ ಮಾಡುತ್ತಾನೆ. ಪ್ರಥಮ ಸೃಷ್ಟಿಯಾದ್ದರಿಂದ ಹಿಂದೆ ಜೀವರು ಯಾವ ಕರ್ಮಗಳನ್ನೂ ಮಾಡದೇ ಇದ್ದರೂ ಅವರಿಗೆ ತನಗೆ ಇಷ್ಟಬಂದಂತೆ ಉತ್ತಮಾಧಮ ಜನ್ಮಗಳನ್ನೂ ಮತ್ತು ಸುಖ-ದುಃಖಗಳನ್ನೂ ಈಶ್ವರನು ಕೊಟ್ಟಂತೆ ಆಗುತ್ತದೆ. ಈ

ರೀತಿಯಾಗಿ ಈಶ್ವರನು ಅನ್ಯಾಯವನ್ನು ಮಾಡತಕ್ಕವನಲ್ಲ. ಪ್ರತಿಯೊಂದು ಸೃಷ್ಟಿಯು ಹಿಂದೆ ಇದ್ದ ಜೀವರ ಕರ್ಮಗಳನ್ನು ನಿಮಿತ್ತ ಮಾಡಿಕೊಂಡು ಈಶ್ವರನು ಪ್ರಪಂಚವನ್ನು ಸೃಷ್ಟಿಮಾಡಿ ಅವರವರ ಕರ್ಮಗಳಿಗನುಸಾರವಾಗಿ ಉತ್ತಮಾಧಮ ಜನ್ಮಗಳನ್ನು ಸುಖದುಃಖಗಳನ್ನು ಕೊಡುತ್ತಾನೆ. ಇದರಿಂದ ಪ್ರಪಂಚದ ಸೃಷ್ಟಿ ಮತ್ತು ಪ್ರಳಯಗಳು ಪ್ರವಾಹತಃ ಅನಾದಿಯಾಗಿವೆ ಎಂಬುದು ಸಿದ್ಧವಾಗುವುದು. ಪ್ರಪಂಚದ ಸೃಷ್ಟಿಯು ಮತ್ತು ಜೀವರ ಜನ್ಮವು ಅನಾದಿಯಾದುದರಿಂದ ಪ್ರಪಂಚವನ್ನು ಸೃಷ್ಟಿಸುವ ಮತ್ತು ಜೀವರಿಗೆ ಜನ್ಮಗಳನ್ನು ಕೊಡುವ ಈಶ್ವರನು ಒಬ್ಬನಿರುವನಲ್ಲದೆ ಆವನು ಅನಾದಿ ಎಂಬುದು ಸಿದ್ಧವಾಗುವದು.

ಒಂದು ದೇಶದಲ್ಲಿ ಹೊಸದಾಗಿ ಸರಕಾರವು ಸ್ಥಾಪಿಸಲ್ಪಡಬೇಕಾಗಿರುವ ಪಕ್ಷದಲ್ಲಿ ಅದು ಸ್ಥಾಪಿಸಲ್ಪಡುವಾಗಲೇ ಸರಕಾರವು ಯಾವ ರೀತಿಯಾಗಿ ಪ್ರಜೆಗಳನ್ನು ಸಂರಕ್ಷಿಸತಕ್ಕದ್ದು, ಪ್ರಜೆಗಳು ಸರಕಾರಕ್ಕೆ ಹೇಗೆ ವಿಧೇಯರಾಗಿರತಕ್ಕದ್ದು, ಪ್ರಜೆಗಳ ಪೈಕಿ ಯಾರ್ಯಾರಿಗೆ ಯಾವ ಯಾವ ಯೋಗ್ಯತೆ ಇದ್ದರೆ ಅವರಿಗೆ ಯಾವ ಯಾವ ಅಧಿಕಾರವನ್ನು ಕೊಡತಕ್ಕದ್ದು, ಪ್ರಜೆಗಳು ಯಾವ ರೀತಿ ನಡೆದರೆ ತಪ್ಪು, ಯಾವ ಯಾವ ತಪ್ಪಿಗೆ ಯಾವ ಯಾವ ಶಿಕ್ಷೆಯನ್ನು ಕೊಡತಕ್ಕದ್ದು ಇವೇ ಮುಂತಾದ ವಿಷಯಗಳನ್ನೊಳಗೊಂಡಿರತಕ್ಕ ಒಂದು ಕಾನೂನು ಏರ್ಪಡಿಸಲ್ಪಡುತ್ತದೆ. ಈ ಸಂದರ್ಭದಲ್ಲಿ ಈಶ್ವರನೇ ಸರಕಾರವು, ಪ್ರಪಂಚವೇ ಈಶ್ವರನು ಆಳುವ ದೇಶವು, ಜೀವರೇ ಪ್ರಜೆಗಳು, ಈ ಪ್ರಪಂಚವನ್ನು ಈಶ್ವರನು ಸೃಷ್ಟಿಸುವ ಕಾಲದಲ್ಲೇ ತನ್ನ ಸ್ವರೂಪವೇನು, ತಾನು ಹೇಗೆ ಪ್ರಪಂಚವನ್ನು ಸೃಷ್ಟಿಸಿದನು, ಜೀವರ ಸ್ವರೂಪವೇನು, ಅವರೆಲ್ಲಿಂದ ಬಂದರು, ಅವರಿಗೂ ತನಗೂ ಏನು ಸಂಬಂಧ, ತಾನು ಯಾವ ರೀತಿ ಜೀವರನ್ನು ಕಾಪಾಡುವುದು, ಜೀವರು ಏನನ್ನು ಮಾಡತಕ್ಕದ್ದು, ಏನನ್ನು ಮಾಡಕೂಡದು, ಜೀವರು ಏತರಿಂದ ದುಃಖವನ್ನು ಹೊಂದಿದ್ದಾರೆ, ಯಾವ ರೀತಿಯಿಂದ ಜೀವರು ದುಃಖದಿಂದ ಬಿಡುಗಡೆ ಹೊಂದಿ ಸುಖವನ್ನು ಹೊಂದುತ್ತಾರೆ, ಇವೇ ಮೊದಲಾದ ವಿಷಯಗಳನ್ನೊಳಕೊಂಡ ಒಂದು ಕಾನೂನನ್ನು ಮಾಡಿರಲೇಬೇಕು. ಈ ಕಾನೂನಿಗೇನೇ ವೇದವೆಂದು ಹೆಸರು. ಹಿಂದೆ ಹೇಳಿದಂತೆ ಈಶ್ವರನು ಮತ್ತು ಪ್ರಪಂಚದ

ಸೃಷ್ಟಿಯು ಅನಾದಿಯಾದುದರಿಂದ ವೇದಗಳು ಅನಾದಿಯಾಗಿವೆ ಎಂಬುದು ಸಿದ್ಧವಾಗುವುದು.

ಒಬ್ಬ ತಾಯಿಗೆ ಮೂರು ಜನ ಮಕ್ಕಳಿದ್ದು ಅವರಲ್ಲಿ ಒಬ್ಬನು ಆರೋಗ ದೃಢಕಾಯನಾಗಿಯೂ, ಇನ್ನೊಬ್ಬನು ರೋಗಿಯಾಗಿಯೂ, ಮತ್ತೊಬ್ಬನು ಎಳೆ ಮಗುವಾಗಿಯೂ ಇದ್ದರೆ ಈ ಮೂರು ಜನಗಳಲ್ಲಿಯೂ ಸಮವಾದ ಪ್ರೀತಿ ಇದ್ದರೂ ತಾಯಿಯು ಅವರವರ ದೇಹ ಪ್ರಕೃತಿಗನುಸಾರವಾಗಿ ಮೊದಲನೆಯವನಿಗೆ ರೊಟ್ಟಿ, ಬೇಳೆ, ಸಕ್ಕರೆ, ತುಪ್ಪ ಇವುಗಳನ್ನೂ, ಎರಡನೆಯವನಿಗೆ ಮೆಣಸಿನ ಸಾರು ಅನ್ನವನ್ನೂ ಮತ್ತು ಮೂರನೆಯವನಿಗೆ ಹಾಲನ್ನೂ ಕೊಡುತ್ತಾಳೆ. ಇದರಂತೆ ಜೀವರು ತಮ್ಮ ತಮ್ಮ ಅಧಿಕಾರಕ್ಕನುಸಾರವಾಗಿ ಫಲಗಳನ್ನು ಹೊಂದುವದಕ್ಕಾಗಿ ಈಶ್ವರನು ವೇದವನ್ನು ಕರ್ಮಕಾಂಡ, ಉಪಾಸನಾಕಾಂಡ, ಮತ್ತು ಜ್ಞಾನಕಾಂಡವೆಂಬುದಾಗಿ ಮೂರು ಭಾಗವನ್ನಾಗಿ ಮಾಡಿರುತ್ತಾರೆ. ಯಾರು ಸ್ವರ್ಗಲೋಕದ ಸುಖವನ್ನು ಅಪೇಕ್ಷಿಸುತ್ತಾರೋ ಅವರು ಕರ್ಮಕಾಂಡದಲ್ಲಿ ಹೇಳಿರುವಂತೆ ಕರ್ಮಗಳನ್ನು ಮಾಡತಕ್ಕದ್ದು; ಯಾರು ಬ್ರಹ್ಮಲೋಕವನ್ನು ಹೊಂದಿ ಸಾಲೋಕ್ಯ, ಸಾಮೀಪ್ಯ ಮತ್ತು ಸಾರೂಪ್ಯ ಎಂಬ ಪದವಿಗಳನ್ನು ಪಡೆಯಬೇಕೆಂದು ಇಚ್ಛಿಸುತ್ತಾರೋ ಅವರು ಉಪಾಸನಾಕಾಂಡದಲ್ಲಿ ಹೇಳಿರುವಂತೆ ಉಪಾಸನೆಯನ್ನು ಮಾಡತಕ್ಕದ್ದು; ಯಾರು ಸ್ವರ್ಗಲೋಕದ ಸುಖವನ್ನಾಗಲಿ ಅಥವಾ ಬ್ರಹ್ಮಲೋಕದಲ್ಲಿ ಪದವಿಯನ್ನಾಗಲಿ ಅಪೇಕ್ಷಿಸದೆ ಮೋಕ್ಷ ಅಥವಾ ಸಾಯುಜ್ಯ ಪದವಿಯನ್ನು ಅಂದರೆ ಈಶ್ವರನಲ್ಲಿ ಏಕತ್ವವನ್ನು ಹೊಂದಿ ನಿರತಿಶಯವಾದ ಆನಂದವನ್ನು ಪಡೆಯಲು ಇಚ್ಛೆಯುಳ್ಳವರಾಗುತ್ತಾರೋ ಅವರು ಜ್ಞಾನಕಾಂಡದಲ್ಲಿ ಹೇಳಿರುವಂತೆ ಜ್ಞಾನವನ್ನು ಸಂಪಾದಿಸತಕ್ಕದ್ದು. ವೇದದ ಕೊನೆಯ ಭಾಗವಾದ ಜ್ಞಾನಕಾಂಡವು ವೇದಾಂತವೆಂದೂ ಉಪನಿಷತ್ತು ಎಂದೂ ಕರೆಯಲ್ಪಡುತ್ತದೆ. ಜನಗಳು ತಮ್ಮ ಬುದ್ಧಿಶಕ್ತಿಯಿಂದ ಭೌತಿಕ ಪದಾರ್ಥಗಳನ್ನು ಶೋಧಿಸಿ ಹೊಸ ಹೊಸ ವಿಷಯಗಳನ್ನು ಕಂಡು ಹಿಡಿಯತಕ್ಕದ್ದು ನಿಜವಾದರೂ, ತತ್ವಜ್ಞಾನವನ್ನು ಅಂದರೆ ತಮ್ಮ ಸ್ವರೂಪದ ಜ್ಞಾನವನ್ನು ಶ್ರೋತ್ರಿಯ ಬ್ರಹ್ಮನಿಷ್ಠನಾದ (ಅಂದರೆ ವೇದದಲ್ಲಿ ಹೇಳಿರುವಂತೆ ತನ್ನ ಶಿವಸ್ವರೂಪದ ಜ್ಞಾನವನ್ನು ಪಡೆದು ಸದಾ ಆ ಸ್ಥಿತಿಯಲ್ಲಿರತಕ್ಕ) ಗುರುವಿನ ಬೋಧೆಯಿಲ್ಲದೆ ತಮ್ಮ

ಬುದ್ಧಿ ಶಕ್ತಿಯಿಂದಲೇ ಹೊಂದಿರತಕ್ಕವರು ಯಾರೂ ಇಲ್ಲ. ಆದ್ದರಿಂದಲೇ ಅಷ್ಟಾವರಣಗಳಲ್ಲಿ ಗುರುವು ಮೊದಲನೆಯವನಾಗಿದ್ದಾನೆ.

ಒಬ್ಬನು ತಾನು ಯಾರ ಹೊಟ್ಟೆಯಲ್ಲಿ ಹುಟ್ಟಿದವನು ಎಂಬ ವಿಷಯವನ್ನು ಇತರರಿಂದ ತಿಳಿಯಬೇಕಲ್ಲದೆ ತನ್ನ ಬುದ್ಧಿಶಕ್ತಿಯಿಂದ ತಿಳಿಯುವದು ಸಾಧ್ಯವಿಲ್ಲ. ಇದಕ್ಕೆ ಕರ್ಣನೇ ಸಾಕ್ಷಿ. ಏತಕ್ಕೆಂದರೆ ತಾನು ನಿಜವಾಗಿ ಕುಂತೀಪುತ್ರನಾಗಿದ್ದರೂ, ತಾನು ಕುಂತೀಪುತ್ರನೆಂಬುದಾಗಿ ತಿಳಿಯದೆ ತಾನು ಅಂಬಿಗರವಳ ಮಗನೆಂದು ತಿಳಿದು ಅನೇಕ ವರ್ಷಗಳು ದುಃಖದಿಂದ ಇದ್ದು ಕುಂತೀದೇವಿಯು ಮತ್ತು ಶ್ರೀಕೃಷ್ಣ ಪರಮಾತ್ಮನು ಅವನಿಗೆ ತಿಳಿಸಿದ ಮೇಲೆ ತಾನು ಕುಂತೀಪುತ್ರನೆಂದು ತಿಳಿದು ಆನಂದವನ್ನು ಹೊಂದಿದನು. ಇದಲ್ಲದೆ ಸಾಮಾನ್ಯವಾದ ಒಂದು ಲೌಕಿಕ ವಿದ್ಯೆಯನ್ನು ಕಲಿಯುವದಕ್ಕೂ ಒಬ್ಬ ಗುರುವು ಬೇಕು. ಹೀಗಿರುವಲ್ಲಿ ಬುದ್ಧಿಗೆ ಅತೀತವಾಗಿರುವ ತನ್ನ ಸ್ವರೂಪವನ್ನು ಮತ್ತು ಈಶ್ವರ ಸ್ವರೂಪವನ್ನು ವೇದದಿಂದಲೂ, ವೇದವನ್ನು ತಿಳಿದ ಗುರುವಿನಿಂದಲೂ ತಿಳಿಯಬೇಕು. ವೇದದಲ್ಲಿ ಹೇಳಿರುವಂತೆ ಈಶ್ವರನು ಮೊದಲು ಚತುರ್ಮುಖ ಬ್ರಹ್ಮನಿಗೆ ವೇದವನ್ನು ಉಪದೇಶಿಸಿದನು. ಚತುರ್ಮುಖ ಬ್ರಹ್ಮನು ತನ್ನ ಮಾನಸಪುತ್ರರಾದ ಸನಕಾದಿಗಳಿಗೆ ವೇದಗಳನ್ನು ಉಪದೇಶ ಮಾಡಿದನು. ಇದಲ್ಲದೆ ಕೆಲವು ಋಷಿಗಳು ತಮ್ಮ ಧ್ಯಾನ ಯೋಗಬಲದಿಂದ ವೇದದಲ್ಲಿ ಹೇಳಿರತಕ್ಕ ಆಧ್ಯಾತ್ಮಿಕ ವಿಷಯಗಳನ್ನು ಕಂಡು ಹಿಡಿದು ಮಾನವಕೋಟಿಯಲ್ಲಿ ಪ್ರಚಾರವನ್ನು ಮಾಡಿದರು. ಇವುಗಳಿಗೇನೇ ಉಪನಿಷತ್ತುಗಳೆಂದು ಹೆಸರಾಯಿತು. ಯಾವ ಯಾವ ಋಷಿಯಿಂದ ಯಾವ ಯಾವ ಉಪನಿಷತ್ತು ಪ್ರಚಾರ ಮಾಡಲ್ಪಟ್ಟಿತೋ ಅದಕ್ಕೆ ಆ ಋಷಿಯ ಹೆಸರು ಬಂದಿರುತ್ತದೆ. ಆದ್ದರಿಂದ ಕೆಲವರು ತಿಳಿದಿರುವಂತೆ ಋಷಿಗಳ ಅನುಭವಗಳು ಉಪನಿಷತ್ತುಗಳಾಗಲಿಲ್ಲ. ಋಷಿಗಳು ತಮ್ಮ ಧ್ಯಾನಯೋಗಬಲದಿಂದ ತಿಳಿದು ಪ್ರಚಾರಮಾಡಿದ ಅನಾದಿಯಲ್ಲೇ ಈಶ್ವರನಿಂದ ಹೇಳಲ್ಪಟ್ಟ ಆಧ್ಯಾತ್ಮಿಕ ವಿಷಯಗಳ ಸಮೂಹವೇ ಉಪನಿಷತ್ತುಗಳು.

ವೇದದ ಕರ್ಮಕಾಂಡದಲ್ಲಿ ಹೇಳಲ್ಪಟ್ಟಿರುವ ಯಜ್ಞಯಾಗಾದಿ ಕರ್ಮಗಳಲ್ಲಿ ಪಶುಹಿಂಸೆ ಮತ್ತು ಮಾಂಸಭಕ್ಷಣಾದಿಗಳಿರುವದರಿಂದಲೂ, ವೇದದಲ್ಲಿ ವರ್ಣಾಶ್ರಮಧರ್ಮಗಳನ್ನು ಪರಿಪಾಲನೆ ಮಾಡಬೇಕೆಂದೂ,

ಬ್ರಾಹ್ಮಣ ವರ್ಣವು ಶ್ರೇಷ್ಠವೆಂದೂ, ಪೂರ್ವ ಜನ್ಮಗಳ ಕರ್ಮಗಳ ನಿಮಿತ್ತ ಪುನರ್ಜನ್ಮವು ಬರುತ್ತದೆಂದೂ, ಮೂವತ್ತುಮೂರು ಕೋಟಿ ದೇವತೆಗಳಿರುತ್ತಾರೆಂದೂ, ಪಿತೃಗಳಿಗೋಸ್ಕರ ಶ್ರಾದ್ಧಾದಿ ಕರ್ಮಗಳನ್ನು ಮಾಡತಕ್ಕದ್ದೆಂದೂ ಹೇಳಿರುವದರಿಂದರಿಂದಲೂ ವೇದವು ವೀರಶೈವ ಮತೀಯರಿಗೆ ಪ್ರಮಾಣವಲ್ಲವೆಂದು ಕೆಲವರು ಹೇಳುತ್ತಾರೆ. ವೀರ ಶೈವಮತತತ್ವಾವಲಂಬಿಗಳು ನಿಷ್ಕಾಮಿಗಳಾಗಿ ಜ್ಞಾನೈಕಸಾಧಕಗಳಾದ ಇಷ್ಟಲಿಂಗಪೂಜಾದಿ ಕ್ರಿಯೆಗಳನ್ನು ಮಾಡುವದರಿಂದ ಸಕಾಮಿಗಳಿಗೆ ಹೇಳಿರುವ ಯಜ್ಞಯಾಗಾದಿ ಕರ್ಮಗಳು ವೀರಶೈವ ಮತೀಯರಿಗೆ ಅನ್ವಯಿಸುವದಿಲ್ಲ. ವೀರಶೈವಮತತತ್ವವನ್ನು ತಿಳಿದು ಶಿವಸ್ವರೂಪಸ್ಥಿತಿಯ ಲ್ಲಿರುವವರಿಗೆ ವರ್ಣಾಶ್ರಮಧರ್ಮಗಳು, ಪುನರ್ಜನ್ಮವು, ಶ್ರಾದ್ಧಾದಿ ಕರ್ಮ ಗಳೂ ಅನ್ವಯಿಸುವದಿಲ್ಲ.

ವೇದಗಳನ್ನು ಮಾನ್ಯ ಮಾಡುವ ಮತಗಳೆಲ್ಲವೂ ವೈದಿಕ ಮತಗಳನಿ ಸಿಕೊಳ್ಳುತ್ತವೆ. ವೀರಶೈವ ಮತವು ಈ ವಿಧವಾಗಿರುತ್ತದೆ. ಆದರೆ ಕೆಲವು ವಚನಕಾರರು ಕೆಳಗೆ ಕಾಣಿಸಿದಂಥ ವಚನಗಳನ್ನು ನುಡಿದಿ ದ್ದಾರೆ. ಆದರೆ ಅವು ವೇದಗಳನ್ನು ನಿಂದೆ ಮಾಡಿದಂಥವುಗಳಲ್ಲ. ಅವು ಯಾವವೆಂದರೆ:—

ವೇದವನೋದಿ ವೇದಾಧ್ಯಯನ ಮಾಡಿದರೇನು? ಬ್ರಾಹ್ಮಣ ನಾಗಬಲ್ಲನೇ? ಬ್ರಹ್ಮವೀರ್ತ್ಯಗಳ ಶುಕ್ಲಶೋಣಿತದಿಂದ ಜನಿಸಿದರೇನು? ಬ್ರಾಹ್ಮಣನಾಗಬಲ್ಲನೇ? ಯಜನಾದಿ ಷಟ್ಕರ್ಮಂಗಳ ಬಿಡದೆ ಮಾಡಿ ದರೇನು? ಬ್ರಾಹ್ಮಣನಾಗಬಲ್ಲನೇ? "ಬ್ರಹ್ಮಜಾನಾತಿ ಬ್ರಾಹ್ಮಣಃ" ಎಂಬ ವೇದವಾಕ್ಯವನರಿತು ಬ್ರಹ್ಮಭೂತನಾದಾತನೇ ಬ್ರಾಹ್ಮಣ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ ॥

ಇಬ್ಬರು ಮೂವರು ದೇವರೆಂದು ಉಬ್ಬಿ ಮಾತಾಡಬೇಡ, ದೇವ ನೊಬ್ಬನೇ ಕಾಣಿರೋ, ಇಬ್ಬರೆಂಬುದು ಹುಸಿನೋಡಾ, ಕೂಡಲಸಂಗಮ ದೇವನೊಬ್ಬನೇ ಅಲ್ಲದೆ, ಇಬ್ಬರಿಲ್ಲವೆಂದಿತ್ತುದಾ ವೇದವು ॥

ಇತ್ಯಾದಿ ಶಿವಶರಣರ ವಚನಗಳಲ್ಲಿ ಕಂಡಂತೆ ಅವರು ವೇದಕ್ಕೆ ಪ್ರಾಮಾಣ್ಯವನ್ನು ಕೊಟ್ಟು ತಮ್ಮ ತಮ್ಮ ಗುರುಗಳ ಮೂಲಕ ವೇದಾ ರ್ಥವಾದ "ಶಿವನೇ ನಾನು" ಎಂಬುದನ್ನು ತಿಳಿದುಕೊಂಡು ಶಿವಾನು

ಭವವನ್ನು ಪಡೆದರು. ಈಗಿನ ವೇದನಿಂದಕರಿಗೆ ಪರಮಪೂಜ್ಯರಾಗಿರುವವರೇ ತಮ್ಮ ವಚನಗಳಲ್ಲಿ ವೇದಗಳಿಗೆ ಪ್ರಾಮಾಣ್ಯವನ್ನು ಘಂಟಾಘೋಷವಾಗಿ ಸಾರಿರುವಾಗ ಅವರ ಅಭಿಪ್ರಾಯಕ್ಕೆ ವಿರುದ್ಧವಾಗಿ ಹೋಗುವುದು ಅತ್ಯಂತ ಅನ್ಯಾಯವಲ್ಲವೆ? ಕೆಲ ಜನ ವಚನಕಾರರು ವೇದ ಶಾಸ್ತ್ರಾಗಮ ಪುರಾಣಗಳ ಓದುವಿಕೆಯನ್ನು ಕೊಟ್ಟಣ ಕುಟ್ಟಿ ನುಚ್ಚು ತೌಡನ್ನು ಹೊಂದುವುದಕ್ಕೆ ಹೋಲಿಸಿರುವುದರಿಂದ ಅವರು ವೇದವನ್ನು ಖಂಡಿಸಿದ್ದಾರೆಂದು ಕೆಲವರು ತಿಳಿದಿರುವರು. ಹೀಗೆ ತಿಳಿದುಕೊಂಡಿರುವುದು ಸರಿಯಲ್ಲ. ಏಕೆಂದರೆ, ಸರ್ವಜ್ಞನು—

"ಓದಿನಾ ಓದೆಲ್ಲ ವೇದ ಕಬ್ಬಿನ ಸಿಪ್ಪೆ। ಓದಿನಾ ಒಡಲ ತಿಳಿದರೆ ಆ ಸಿಪ್ಪೆ ಸ್ವಾದುವಾದಂತೆ ಸರ್ವಜ್ಞ॥ ಎಂಬುದಾಗಿ ಹೇಳಿರುವುದರಿಂದ ಅವನು ವಿದ್ಯೆಯನ್ನು ಖಂಡಿಸಿದಂತೆ ತೋರುತ್ತದೆ. ಆದರೆ ಸರ್ವಜ್ಞನು ವಿದ್ಯೆಯನ್ನು ಖಂಡಿಸಿಲ್ಲ. ಆದರೆ ವಿದ್ಯಾಭ್ಯಾಸಮಾಡಿ ವಿದ್ಯೆಯ ಆಶಯವನ್ನು ತಿಳಿಯದೆ ಇರತಕ್ಕದ್ದನ್ನು ಖಂಡಿಸಿದ್ದಾನೆ.

ಅದರಂತೆ ಶರಣರು ವೇದಶಾಸ್ತ್ರಗಳನ್ನು ಖಂಡಿಸಿಲ್ಲ; ಆದರೆ ವೇದವನ್ನು ಓದಿಯೂ ವೇದಾರ್ಥವನ್ನು ಸರಿಯಾಗಿ ತಮ್ಮ ಅನುಭವಕ್ಕೆ ತಂದುಕೊಳ್ಳದೆ ಇರತಕ್ಕದ್ದನ್ನು ಖಂಡಿಸಿರುತ್ತಾರೆ. ವೇದಗಳನ್ನು ಖಂಡಿಸುವದು ಹಿಂದುಗಳಲ್ಲವೆಂಬುದು ಸುಪ್ರಸಿದ್ಧವಷ್ಟೆ! ಆದುದರಿಂದ ಹಿಂದುಗಳಿಗೆ ಮುಖ್ಯ ದೇವನಾಗಿರುವ ಶಿವನನ್ನು ಅಸಾಧಾರಣ ಭಕ್ತಿಯಿಂದ ಪೂಜಿಸಿ ಶ್ರೇಷ್ಠ ಹಿಂದುಗಳೆನಿಸಿರುವ ಶರಣರ ವಚನಗಳಿಗೆ ಅನಾದಿ ಸಂಸಿದ್ಧವಾದ ವೇದವೇ ಆಧಾರವಲ್ಲದೆ ೧೨ನೆಯ ಶತಮಾನದಿಂದೀಚೆಗೆ ಹುಟ್ಟಿರುವ ಕನ್ನಡ ವಚನಗಳು ವೇದಕ್ಕೆ ಆಧಾರವೆಂದು ನುಡಿಯುವುದು ಅತ್ಯಂತ ಹಾಸ್ಯಾಸ್ಪದವು. ಆದುದರಿಂದ ನಿಜವಾದ ವೀರಶೈವರು ವೇದನಿಂದಕರಾದ ಇಂತಹ ಅಲ್ಪಜ್ಞರ ಉಪದೇಶಕ್ಕೊಳಗಾಗದೆ, ಪರಮೇಶ್ವರನ ಕೃಪೆಗೆ ಪಾತ್ರರಾಗಿ ಪರಮಪುರುಷಾರ್ಥವನ್ನು ಪಡೆಯಬೇಕು.

---